ಶ್ರೀಜಯಚಾಮರಾಜೇಂದ್ರ ವೇದರತ್ನಮಾಲಾ

# RIG-VEDA SAMHITA

# ಋಗ್ವೇದಸಂಹಿತಾ

## ಭಾಗ—೨೧

ನಾಲ್ಕನೆಯ ಅಷ್ಟಕದಲ್ಲಿ ೭-೮ ನೇ ಅಧ್ಯಾಯಗಳು

ಐದನೆಯ ಅಷ್ಟಕದಲ್ಲಿ ೧, ೨ ನೇ ಅಧ್ಯಾಯಗಳು

ಅನುವಾದಕ

ಆಸ್ಥಾನ ಮಹಾವಿದ್ವಾನ್,

ಹೆಚ್. ಪಿ. ವೆಂಕಟರಾವ್.

ಶ್ರೀ ಶಾರದಾ ಪ್ರೆಸ್

ಮೈಸೂರು.


ಋಗ್ವೇದಸಂಹಿತಾ
ಭಾಗ ೨೧
ಚತುರ್ಥಾಷ್ಟಕದಲ್ಲಿ ೭, ೮ ನೇ ಅಧ್ಯಾಯಗಳು
ಪಂಚಮಾಷ್ಟಕದಲ್ಲಿ ೧, ೨ ನೇ ಅಧ್ಯಾಯಗಳು
ಆರನೆಯ ಮಂಡಲದ ಸೂಕ್ತಗಳು ೨೯–೭೫
ಏಳನೆಯ ಮಂಡಲದ ಸೂಕ್ತಗಳು ೧–೧೯

ಶ್ರೀ ಜಯಚಾಮರಾಜೇಂದ್ರ ವೇದರತ್ನಮಾಲಾ

ಸಂಖ್ಯೆ—೨೧

# RIG-VEDA

ಸಾಯಣಭಾಷ್ಯಸಮೇತಾ

# ಋಗ್ವೇದಸಂಹಿತಾ

(ಕರ್ಣಾಟಕ ಭಾಷಾರ್ಥಾನುವಾದವಿವರಣೆಗಳೊಡನೆ)

ಭಾಗ—೨೧

ಚತುರ್ಥಾಷ್ಟಕದಲ್ಲಿ ೭, ೮ ನೇ ಅಧ್ಯಾಯಗಳು

ಪಂಚಮಾಷ್ಟಕದಲ್ಲಿ ೧, ೨ ನೇ ಅಧ್ಯಾಯಗಳು

---

ಆರನೆಯ ಮಂಡಲದ ಸೂಕ್ತಗಳು, ೪೯—೭೫

ಏಳನೆಯ ಮಂಡಲದ ಸೂಕ್ತಗಳು, ೧—೧೯

---

*Translated with Exhaustive and Critical Notes and Explanations*

*by*

**Asthana Mahavidwan**

**H. P. VENKATA RAO,**

*Editor.*

*Printed at*

SREE SHARADA PRES,

MYSORE.

1953

Published by the gracious permission of

His Highness
Sri Jayachamarajendra Wadiyar Bahadur,
G.C.B., G.C.S.I., Maharaja of Mysore.



ಯದುವಂಶಪಯಃಪಾರಾವಾರಸುಧಾಕರರೂ ಸತ್ಸಂಪ್ರದಾಯವೈದಿಕವಿದ್ಯಾವರ್ಧಕರೂ
ಮೈಸೂರು ದೇಶವನ್ನಾಳುವ ಧರ್ಮಪ್ರಭುಗಳೂ ಆದ ಶ್ರೀಮನ್ಮಹಾರಾಜ
**ಶ್ರೀ ಜಯಚಾಮರಾಜೇಂದ್ರ ಒಡೆಯರ್ ಬಹದ್ದೂರ್,**
**ಜಿ. ಸಿ. ಬಿ., ಜಿ. ಸಿ. ಎಸ್. ಐ. ರವರು.**

ವೇದಪ್ರಕಟನಕಾರ್ಯಕ್ಕಾಗಿ ನಿಯಮಿತವಾಗಿರುವ

# ವೇದವಿಮರ್ಶನವಿದ್ವನ್ಮಂಡಲಿ

Translator & Editor:

**ಆಸ್ಥಾನ ಮಹಾವಿದ್ವಾನ್ H. P. ವೆಂಕಟರಾವ್**

**ಸಹಾಯಕ ವಿದ್ವನ್ಮಂಡಲಿ**

1. ಬ್ರ॥ ಶ್ರೀ॥ G. N. ಚಕ್ರವರ್ತಿ M.A.
   Professor of Sanskrit. St. Philomina's College, Mysore
2. ಬ್ರ॥ ಶ್ರೀ॥ ಜಿ. ವಿಷ್ಣುಮೂರ್ತಿಭಟ್ಟರು, ಸಾಹಿತ್ಯ ವ್ಯಾಕರಣವಿದ್ವಾನ್,
   ಶ್ರೀಮನ್ಮಹಾರಾಜರವರ ಸಂಸ್ಕೃತ ಮಹಾಪಾಠಶಾಲಾ, ಮೈಸೂರು.
3. ಆಸ್ಥಾನ ವಿದ್ವಾನ್ ಬ್ರ॥ ಶ್ರೀ॥ H. ಗಂಗಾಧರಶಾಸ್ತ್ರಿಗಳು, ಜ್ಯೌತಿಷ ವಿದ್ವಾನ್
   ಮತ್ತು ಕರ್ಣಾಟಕ ಭಾಷಾಪಂಡಿತರು.
4. ಬ್ರ॥ ಶ್ರೀ॥ ಶ್ರೀನಿವಾಸಶಾಸ್ತ್ರಿಗಳು, ಋಗ್ವೇದ ಘನಪಾಠಿಗಳು.
5. ಬ್ರ॥ ಶ್ರೀ॥ ಹಿಟ್ಟವಳ್ಳಿ ಬಿಳಿಗಿರಿರಂಗಾಜೋಯಿಸರು, ಶ್ರೌತವಿದ್ವಾನ್.
6. ಬ್ರ॥ ಶ್ರೀ॥ ಹಿಟ್ಟವಳ್ಳಿ ದೇವರಭಟ್ಟರು, ಮೀಮಾಂಸಾದರ್ಶನಪಂಡಿತರು.
7. ಬ್ರ॥ ಶ್ರೀ॥ ವೆಂಕಟರಮಣಾಚಾರ್, M.A., B.T., ಸಾಹಿತ್ಯವಿದ್ವಾನ್.
8. ಬ್ರ॥ ಶ್ರೀ॥ S. ರಂಗನಾಥನ್, ಸಾಹಿತ್ಯ ವಿದ್ವಾನ್, ಅರಮನೆ ಸರಸ್ವತೀ ಭಂಡಾರ.
9. ಬ್ರ॥ ಶ್ರೀ॥ ಪುತ್ತೂರು ಅನಂತಕೃಷ್ಣಮಾಚಾರ್, ಸಾಹಿತ್ಯವಿದ್ವಾನ್,
   Govt. Oriental Research Institute, Mysore.
10. ಬ್ರ॥ ಶ್ರೀ॥ S. ಸೀತಾರಾಮಶಾಸ್ತ್ರಿಗಳು, ರಿಟೈರ್ಡ್ ಪಂಡಿತರು.
    Govt. Oriental Research Institute, Mysore.

# ಪೀಠಿಕೆ.

ಋಗ್ವೇದಸಂಹಿತೆಯ ಈ ಭಾಗದಲ್ಲಿ ಆರನೆಯ ಮಂಡಲದ ಸೂಕ್ತಗಳು ಮುಗಿದು ಏಳನೆಯ ಮಂಡಲದಲ್ಲಿ ಹತ್ತೊಂಭತ್ತು ಸೂಕ್ತಗಳ ವಿವರಣೆ ಇದೆ. ಆರನೆಯ ಮಂಡಲಕ್ಕೆ ಭರದ್ವಾಜನೂ ಏಳನೆಯ ಮಂಡಲಕ್ಕೆ ವಸಿಷ್ಠನೂ ಋಷಿಗಳು. ಈ ಇಬ್ಬರು ಋಷಿಗಳಲ್ಲಿ ಭರದ್ವಾಜನು ವಸಿಷ್ಠ ಋಷಿಗಿಂತ ನೂರಾರು ವರ್ಷಗಳು ಹಿಂದಿನವನೆಂದೂ, ವಸಿಷ್ಠ ಮತ್ತು ವಿಶ್ವಾಮಿತ್ರರು ಸಮಕಾಲೀನರೆಂದೂ ಹೇಳುವುದಕ್ಕೆ ಅನೇಕ ಆಧಾರಗಳಿವೆ. ಭರದ್ವಾಜನು ದಿವೋದಾಸನೆಂಬ ರಾಜನಿಗೆ ಪುರೋಹಿತನಾಗಿದ್ದನೆಂದು ಪಂಚವಿಂಶಬ್ರಾಹ್ಮಣ ೧೫-೩-೭ ; ಋಗ್ವೇದಸಂಹಿತಾ ೧-೧೧೬-೧೮ ; ೬-೧೬-೫ ; ೬-೩೧-೪ ಇತ್ಯಾದಿ ಸ್ಥಳಗಳಲ್ಲಿ ಸೂಚಿತವಾಗಿರುವುದು. ಈ ದಿವೋದಾಸನ ಪುತ್ರನು ಪಿಜವನನೆಂಬುವನು. ಅವನ ಪುತ್ರನು ಅಥವಾ ವಂಶದವನಾದ ಸುದಾಸನೆಂಬುವನಿಗೆ ವಸಿಷ್ಠನು ಪುರೋಹಿತನಾಗಿದ್ದನು. ವಿಶ್ವಾಮಿತ್ರನೂ ಒಂದು ಸಮಯದಲ್ಲಿ ಈ ಸುದಾಸನಿಗೆ ಪುರೋಹಿತನಾಗಿದ್ದನು. ಆದ್ದರಿಂದ ಭರದ್ವಾಜನು ವಸಿಷ್ಠ ವಿಶ್ವಾಮಿತ್ರರಿಗಿಂತ ಬಹಳ ಹಿಂದಿನವನು ಎಂದು ನಿರ್ವಿವಾದವಾಗಿ ಹೇಳಬಹುದು.

ಆರನೆಯ ಮಂಡಲದ ಕೊನೆಯ ಸೂಕ್ತದಲ್ಲಿ ಯುದ್ಧದ ವರ್ಣನೆಯೂ ಯುದ್ಧದಲ್ಲಿ ಉಪಯೋಗಿಸುವ ಆಯುಧಾದಿಗಳ ವರ್ಣನೆಯೂ ಇದೆ. ಈ ಆಯುಧಗಳಲ್ಲಿ ಬಿಲ್ಲುಬಾಣಗಳೇ ಮುಖ್ಯವಾದವು. ಬಿಲ್ಲುಗಳು ಹೇಗಿದ್ದವು, ಬಾಣಗಳನ್ನು ಯಾವ ರೀತಿ ನಿರ್ಮಿಸುತ್ತಿದ್ದರು. ಅವುಗಳನ್ನು ಹೇಗೆ ಉಪಯೋಗಿಸುತ್ತಿದ್ದರು. ಇವುಗಳ ವರ್ಣನೆ ಇದೆ. ಬಾಣಗಳನ್ನು ಒಂದು ವಿಧವಾದ ಮೂಲಿಕೆಯ ರಸದಿಂದ ಸಿದ್ಧಪಡಿಸಿದ ವಿಷದಲ್ಲಿ ಅದ್ದಿ ಪ್ರಯೋಗಿಸುವ ರೂಢಿ ಇದ್ದಿತೆಂದು ಕೆಲವು ಮಂತ್ರಗಳಿಂದ ತಿಳಿದುಬರುತ್ತದೆ. ಆದರೆ ಆ ರೀತಿ ವಿಷಸಿಕ್ತ ಬಾಣಗಳನ್ನು ಆರ್ಯಜನರ ಶತ್ರುಗಳಾದ ದಸ್ಯುಗಳೆಂಬ ಈ ದೇಶದ ಪೂರ್ವನಿವಾಸಿಗಳಿಂದಲೇ ಉಪಯೋಗಿಸಲ್ಪಡುತ್ತಿದ್ದಂತೆ ಕಂಡುಬರುತ್ತದೆ. ಈಗಲೂ ಅನೇಕ ದೇಶಗಳಲ್ಲಿ ಅನಾಗರಿಕರಾದ ಕಾಡುಜನರು ಈ ಪದ್ಧತಿಯನ್ನೇ ಅನುಸರಿಸುತ್ತಿರುವುದು ಎಲ್ಲರಿಗೂ ತಿಳಿದ ವಿಷಯವಾಗಿದೆ. ಇಂತಹ ಬಾಣಗಳಿಂದ ರಕ್ಷಣೆಯನ್ನು ಪಡೆಯಲು ಲೋಹನಿರ್ಮಿತವಾದ ಕವಚಗಳನ್ನು (Armours) ಧರಿಸಿ ರಥಗಳಲ್ಲಿ ಕುಳಿತು ಯುದ್ಧಮಾಡುತ್ತಿದ್ದರೆಂಬ ಅನೇಕ ವರ್ಣನೆಗಳಿವೆ. ಮತ್ತು ಆ ಕಾಲದಲ್ಲಿ ದೇಶಕ್ಕೆ ಒಡೆಯನಾದ ರಾಜನೇ ಸ್ವತಃ ಸೈನ್ಯಸಮೇತನಾಗಿ ಯುದ್ಧರಂಗದಲ್ಲಿ ಶತ್ರುಗಳೊಡನೆ ಯುದ್ಧಮಾಡುತ್ತಿದ್ದುದರಿಂದ ಅವನ ಕಾವಲಿಗಾಗಿ ಅಂಗರಕ್ಷಕರಾದ ಸೈನಿಕರ ಒಂದು ಗುಂಪೇ ಯಾವಾಗಲೂ ರಾಜನ ಬಳಿ ಇರುತ್ತಿತ್ತು. ಇವರಿಗೆ ರಥಗೋಪರೆಂದು ಹೆಸರು. ಯುದ್ಧಗಳಲ್ಲಿ ಕುದರೆಗಳು, ರಥಗಳು, ಯುದ್ಧಭಟರು ಮೊದಲಾದವರ ಉಪಯೋಗವಿತ್ತೇ ಹೊರತು ಆನೆಗಳನ್ನೂ, ಕತ್ತಿಗಳನ್ನೂ ಉಪಯೋಗಿಸಿರುವುದನ್ನು ಎಲ್ಲಿಯೂ ಹೇಳಿಲ್ಲ.

ಏಳನೆಯ ಮಂಡಲದ ೧೮, ೩೩, ೮೩ ನೆಯ ಸೂಕ್ತಗಳಲ್ಲಿ ಸುದಾಸನೆಂಬ ಪ್ರಸಿದ್ಧರಾಜನಿಗೂ, ಸಿಮ್ಯು, ತುರ್ವಶ, ದ್ರುಹ್ಯು, ಕವಷ, ಪೂರು, ಅನು, ಭೇದ, ಶಂಬರ, ಯದು, ವೈಕರ್ಣರೆಂಬ ಹತ್ತುಮಂದಿ ರಾಜರಿಗೂ ಪರುಷ್ಣೀನದೀತೀರದಲ್ಲಿ ನಡೆದು ಒಂದು ದೊಡ್ಡ ಯುದ್ಧದ ವರ್ಣನೆ ಇದೆ. ಈ ಯುದ್ಧದಲ್ಲಿ ಸುದಾಸನ ಪುರೋಹಿತನಾದ ವಸಿಷ್ಠಋಷಿಯು ಇಂದ್ರನನ್ನು ಪ್ರಾರ್ಥಿಸಿದ ಫಲವಾಗಿ ಇಂದ್ರನು ಮಾಡಿದ ಸಹಾಯದಿಂದ ಸುದಾಸನು ಈ ಹತ್ತುಮಂದಿ ರಾಜರನ್ನೂ—ಇವರಲ್ಲಿ ಅನೇಕರು ಈ ದೇಶದ ದಸ್ಯುವೆಂಬ ಕಪ್ಪುಜನರ ಮುಖಂಡರು—ಸೋಲಿಸಿದ ವಿಷಯದ ವಿವರವಿದೆ.

ಸುದಾಸನಿಗೆ ವಸಿಷ್ಠಋಷಿಯು ಪುರೋಹಿತನಾಗಿ ಅನೇಕವಿಧವಾಗಿ ಸಹಾಯಮಾಡಿದ್ದರೂ ಕೆಲವುಕಾಲದ ಮೇಲೆ ಸುದಾಸನಿಗೂ ವಸಿಷ್ಠನಿಗೂ ಕಾರಣಾಂತರದಿಂದ ವಿರೋಧಪ್ರಾಪ್ತವಾಯಿತೆಂದು ತಿಳಿದುಬರುತ್ತದೆ. ಅಥವಾ

ಸುದಾಸನ ಕಾಲಾನಂತರ ಅವನ ಪುತ್ರರಿಗೂ ವಸಿಷ್ಠರಿಗೂ ವಿರೋಧವುಂಟಾಗಿರಬಹುದು. ಏಕೆಂದರೆ, ಸುದಾಸನ ಪುತ್ರರು ವಸಿಷ್ಠಋಷಿಯ ಮಕ್ಕಳನ್ನು ಕೊಂದರೆಂದೂ, ಅದಕ್ಕೆ ಪ್ರತೀಕಾರ ಮಾಡಬೇಕೆಂಬ ಇಚ್ಛೆಯಿಂದ ವಸಿಷ್ಠ ಋಷಿಯು ಸುದಾಸಪುತ್ರರನ್ನು ಜಯಿಸುವ ಶಕ್ತಿಯುಳ್ಳ ಪುತ್ರರಾಗಬೇಕೆಂದು ಬಯಸಿ ಆದಕ್ಕೆ ಅನುರೂಪವಾದ ಯಜ್ಞವನ್ನಾಚರಿಸಿ ಪುತ್ರರನ್ನು ಪಡೆದು ಸುದಾಸಪುತ್ರರನ್ನು ಜಯಿಸಿದನೆಂದು ಯಜುರ್ವೇದದ ತೈತ್ತಿರೀಯಸಂಹಿತೆಯಲ್ಲಿ—

> **ವಸಿಷ್ಠೋ ಹತಪುತ್ರೋಽಕಾಮಯತ ವಿಂದೇಯ ಪ್ರಜಾಮಭಿ ಸೌದಾಸಾನ್ಭವೇಯಮಿತಿ ಸ ಏತಮೇಕಸ್ಮಾನ್ನಪಂಚಾಶಮಪಶ್ಯತ್ತಮಾಹರತ್ತೇನಾಯಜತ ತತೋ ವೈ ಸೋಽವಿಂದತ ಪ್ರಜಾಮಭಿ ಸೌದಾಸಾನಭವತ್ ॥**
>
> (ತೈ. ಸಂ. ೭–೪–೭–೧)

ಹೇಳಿದೆ. ಎಂದರೆ, ತನ್ನ ಪುತ್ರರು ಸೌದಾಸರಿಂದ (ಸುದಾಸಪುತ್ರರಿಂದ) ಹತರಾದಾಗ ವಸಿಷ್ಠನು ಪುನಃ ತನಗೆ ಸಂತತಿಯುಂಟಾಗಿ ಆ ಪುತ್ರರ ಸಹಾಯದಿಂದ ಸೌದಾಸರನ್ನು ಜಯಿಸುವಂತಾಗಲಿ ಎಂದು ಆಶಿಸಿ ಏಕಸ್ಮಾನ್ನಪಂಚಾಶಂ ಎಂಬ ಮಂತ್ರವನ್ನು ಸಾಕ್ಷತ್ಕರಿಸಿ ಅದರ ಪ್ರಭಾವದಿಂದ ಯಜ್ಞವನ್ನಾಚರಿಸಿದನು. ಅದರ ಫಲವಾಗಿ ಅವನಿಗೆ ಪುತ್ರೋತ್ಪತ್ತಿಯುಂಟಾಗಿ ಆ ಪುತ್ರರ ಸಹಾಯದಿಂದ ಸುದಾಸ ಪುತ್ರರನ್ನು ಜಯಿಸಿದನು ಎಂದಿರುತ್ತದೆ.

ವಸಿಷ್ಠವಿಶ್ವಾಮಿತ್ರರ ವೈಮನಸ್ಯವು ವೈದಿಕ ಗ್ರಂಥಗಳಲ್ಲಿ ಒಂದು ವಿಧವಾಗಿಯೂ, ಪುರಾಣಾದಿಗಳಲ್ಲಿ ಮತ್ತೊಂದು ವಿಧವಾಗಿಯೂ ವರ್ಣಿತವಾಗಿರುತ್ತದೆ. ಈ ವಿಷಯದಲ್ಲಿ ನಾವು ವಿಸ್ತಾರವಾದ ವಿಮರ್ಶೆಯನ್ನು ಏಳನೆಯ ಮಂಡಲದ ಪೀಠಿಕೆಯಲ್ಲಿಯೂ ಋ. ಸಂ. ಭಾಗ ೧೬ರ ಪೀಠಿಕೆಯಲ್ಲಿಯೂ ವಿವರಿಸಿದೇವೆ.

ಅತಿಪ್ರಾಚೀನವೂ, ಅತಿಗಹನವೂ, ಅತಿವಿಸ್ತಾರವೂ, ಸರ್ವಶಾಸ್ತ್ರಗಳಿಗೂ, ಮೂಲಭೂತವೂ ಆದ ಇಂತಹ ಋಗ್ವೇದಸಂಹಿತೆಯನ್ನು ಸರಳವಾದ ಕನ್ನಡ ಭಾಷೆಯಲ್ಲಿ ವಿಮರ್ಶಾನುವಾದಸಹಿತವಾಗಿ ಪ್ರಕಾಶಪಡಿಸುವುದು ಸುಲಭವಾದ ಕೆಲಸವಲ್ಲ. ಆದರೂ ಇಂತಹ ಮಹತ್ಕಾರ್ಯದಿಂದ ಪಂಡಿತಪಾಮರಾದಿಯಾದ ಸಕಲ ಜನರೂ ಜ್ಞಾನಾಭಿವೃದ್ಧಿಯನ್ನು ಪಡೆದು ಈಶ್ವರಾನುಗ್ರಹಕ್ಕೆ ಪಾತ್ರರಾಗಲೆಂಬ ಘನವಾದ ಉದ್ದೇಶದಿಂದ ಕರ್ನಾಟಕ ಸಿಂಹಾಸನಾಧೀಶ್ವರರೂ, ವೇದವಿದ್ಯಾಭಿಮಾನಿಗಳೂ, ಸ್ವಯಂಪಂಡಿತರೂ, ಪ್ರಜಾನುರಾಗಿಗಳೂ, ದೈವಭಕ್ತಿತತ್ಪರರೂ ಆದ **ಶ್ರೀ ಜಯಚಾಮರಾಜೇಂದ್ರ ಒಡೆಯರ್ ಬಹದ್ದೂರ್ ಜಿ. ಸಿ. ಬಿ., ಜಿ. ಸಿ. ಎಸ್. ಐ.** ಮಹಾಪ್ರಭುವರ್ಯರೂ ಅವರ ಸರ್ಕಾರದವರೂ ಬಹುದ್ರವ್ಯಸಾಧ್ಯವಾದ ಈ ಗ್ರಂಥಪ್ರಕಟನೆಯನ್ನು ತಮ್ಮ ಉದಾರಾಶ್ರಯದಿಂದ ಪ್ರೋತ್ಸಾಹಮಾಡುತ್ತಿರುವುದು ಕರ್ನಾಟಕ ಜನಕೋಟಿಯ ಸುಕೃತವೆಂದೇ ಹೇಳಬೇಕು. ಇಂತಹ ಉದಾರಮತಿಗಳಾದ ನಮ್ಮ ಪ್ರಭುವರ್ಯರಿಗೂ, ಅವರ ಕುಟುಂಬಕ್ಕೂ, ರಾಜಕುಮಾರಿಯರಿಗೂ, **ಶ್ರೀಕಂಠದತ್ತನೃಸಿಂಹರಾಜ ಒಡೆಯರ್** ಎಂಬ ಶುಭ ಶುಭನಾಮಾಂಕಿತರಾದ ರಾಜಕುಮಾರರಿಗೂ, ಸಮಸ್ತ ಪ್ರಜಾಕೋಟಿಗೂ ಸಹ ವೇದಪುರುಷನಾದ ಸರ್ವೇಶ್ವರನು ಐಹಿಕ ಫಲಗಳಾದ ಆಯುರಾರೋಗ್ಯೈಶ್ವರ್ಯಾದಿ ಸಕಲ ಸಂಪತ್ತನ್ನೂ ಪಾರಮಾರ್ಥಿಕವಾದ ಅಧ್ಯಾತ್ಮಜ್ಞಾನವನ್ನೂ ಇತೋಽಪ್ಯತಿಶಯವಾಗಿ ಅನುಗ್ರಹಿಸಲೆಂದು ಪ್ರಾರ್ಥಿಸುತ್ತೇನೆ.

ಮೈಸೂರು<br>ವಿಜಯನಾಮ ಸಂ॥ ಶ್ರಾವಣಶುಕ್ಲ ತೃತೀಯಾ ಬುಧವಾರ<br>ತಾ॥ 12—8—1953

ಅನುವಾದಕ :<br>**ಹೆಚ್. ಪಿ. ವೆಂಕಟರಾವ್,**<br>ಆಸ್ಥಾನ ಮಹಾವಿದ್ವಾನ್.

॥ ಶ್ರೀಃ ॥

# ವಿಷಯಾನುಕ್ರಮಣಿಕೆ.

## ನಾಲ್ಕನೆಯ ಅಷ್ಟಕದಲ್ಲಿ ಏಳನೆಯ ಅಧ್ಯಾಯವು.

### ಆರನೆಯ ಮಂಡಲದ ಸೂಕ್ತಗಳು.


| | | |
|---|---|---|
| ೨೯ | **ಇಂದ್ರಂ ವೋ ನರಃ** ಎಂಬ: ಇಪ್ಪತ್ತೊಂಭತ್ತನೆಯ ಸೂಕ್ತವು— | 1 |
| | ಸೂಕ್ತದ ಪೀಠಿಕೆ—ಋಷಿದೇವತಾಛಂದಸ್ಸುಗಳು ವಿನಿಯೋಗ ಇತ್ಯಾದಿ— | 2 |
| ೩೦ | **ಭೂಯ ಇದ್ವಾವೃಧೇ** ಎಂಬ ಮೂವತ್ತನೆಯ ಸೂಕ್ತವು— | 11 |
| | **ನೂ ಚಿತ್** ಎಂಬ ನಿಪಾತಗಳ ನಿರ್ವಚನ ಇತ್ಯಾದಿ— | 15 |
| ೩೧ | **ಅಭೂರೇಕಃ** ಎಂಬ ಮೂವತ್ತೊಂದನೆಯ ಸೂಕ್ತವು— | 19 |
| ೩೨ | **ಅಪೂರ್ವ್ಯಾ ಪುರುತಮಾನಿ** ಎಂಬ ಮೂವತ್ತೆರಡನೆಯ ಸೂಕ್ತವು— | 25 |
| ೩೩ | **ಯ ಓಜಿಷ್ಠ ಇಂದ್ರ** ಎಂಬ ಮೂವತ್ತಮೂರನೆಯ ಸೂಕ್ತವು— | 31 |
| ೩೪ | **ಸಂ ಚ ತ್ವೇ ಜಗ್ಮುಃ** ಎಂಬ ಮೂವತ್ತನಾಲ್ಕನೆಯ ಸೂಕ್ತವು— | 38 |
| ೩೫ | **ಕದಾ ಭುವನ್** ಎಂಬ ಮೂವತ್ತೈದನೆಯ ಸೂಕ್ತವು— | 45 |
| ೩೬ | **ಸತ್ರಾ ಮದಾಸಃ** ಎಂಬ ಮೂವತ್ತಾರನೆಯ ಸೂಕ್ತವು— | 51 |
| ೩೭ | **ಅರ್ವಾಗ್ರಥಂ** ಎಂಬ ಮೂವತ್ತೇಳನೆಯ ಸೂಕ್ತವು— | 58 |
| ೩೮ | **ಅಪಾದಿತ ಉದು** ಎಂಬ ಮೂವತ್ತೆಂಟನೆಯ ಸೂಕ್ತವು— | 65 |
| ೩೯ | **ಮಂದ್ರಸ್ಯ ಕವೇಃ** ಎಂಬ ಮೂವತ್ತೊಂಭತ್ತನೆಯ ಸೂಕ್ತವು— | 72 |
| ೪೦ | **ಇಂದ್ರ ಪಿಬ ತುಭ್ಯಂ** ಎಂಬ ನಲವತ್ತನೆಯ ಸೂಕ್ತವು— | 78 |
| ೪೧ | **ಅಹೇಳಮಾನ ಉಪ ಯಾಹಿ** ಎಂಬ ನಲವತ್ತೊಂದನೆಯ ಸೂಕ್ತವು— | 86 |
| ೪೨ | **ಪ್ರತ್ಯಸ್ಮೈ ಪಿಪೀಷತೇ** ಎಂಬ ನಲವತ್ತೆರಡನೆಯ ಸೂಕ್ತವು— | 92 |
| ೪೩ | **ಯಸ್ಯ ತ್ಯಚ್ಛಂಬರಂ** ಎಂಬ ನಲವತ್ತಮೂರನೆಯ ಸೂಕ್ತವು— | 97 |
| ೪೪ | **ಯೋ ರಯಿವಃ** ಎಂಬ ನಲವತ್ತನಾಲ್ಕನೆಯ ಸೂಕ್ತವು— | 102 |
| ೪೫ | **ಯ ಆನಯತ್** ಎಂಬ ನಲವತ್ತೈದನೆಯ ಸೂಕ್ತವು— | 132 |
| ೪೬ | **ತ್ವಾಮಿದ್ಧಿ ಹವಾಮಹೇ** ಎಂಬ ನಲವತ್ತಾರನೆಯ ಸೂಕ್ತವು— | 163 |
| ೪೭ | **ಸ್ವಾದುಷ್ಕಿಲಾಯಂ** ಎಂಬ ನಲವತ್ತೇಳನೆಯ ಸೂಕ್ತವು— | 180 |

ದೇವತೆಗಳಿಗೆ ಹಸ್ತಾದ್ಯವಯವಗಳು, ಮನುಷ್ಯರಿಗಿರುವಂತೆ ಆಕಾರ ಮೊದಲಾದವು ಇರುವುದೇ ಎಂಬ ವಿಚಾರದಲ್ಲಿ ವಿಷಯವಿಮರ್ಶೆ ಮತ್ತು ಯಾಸ್ಕರ ನಿರ್ವಚನ ಮತ್ತು ಅಭಿಪ್ರಾಯಗಳು— 191
**ಚೋಷ್ಕೂಯತೇ** ಎಂಬ ಶಬ್ದಕ್ಕೆ ಯಾಸ್ಕರ ನಿರ್ವಚನ ಇತ್ಯಾದಿ— 206
ಇಂದ್ರನು ಅನೇಕ ರೂಪಗಳನ್ನು ಧರಿಸಬಲ್ಲನೆಂಬ ವಿಷಯದಲ್ಲಿ ವಿಷಯವಿಮರ್ಶೆ ಶ್ರುತ್ಯುದಾಹರಣೆ ಇತ್ಯಾದಿ— 209
**ವನಸ್ಪತೇ ವೀಡ್ವಂಗಃ** ಎಂಬ ಋಕ್ಕಿಗೆ ಯಾಸ್ಕರ ನಿರುಕ್ತವು— 219
**ದುಂದುಭಿ**ಶಬ್ದಾರ್ಥವಿವರಣೆ— 223

**ನಾಲ್ಕನೆಯ ಅಷ್ಟಕದಲ್ಲಿ ಏಳನೆಯ ಅಧ್ಯಾಯವು ಸಮಾಪ್ತವು**

## ಎಂಟನೆಯ ಅಧ್ಯಾಯವು

೪೮ **ಯಜ್ಞಾಯಜ್ಞಾ ವಃ** ಎಂಬ ನಲವತ್ತೆಂಟನೆಯ ಸೂಕ್ತವು— 227
ಸೂಕ್ತದ ವಿನಿಯೋಗ ಇತ್ಯಾದಿ— 228
**ಯಜ್ಞಾಯಜ್ಞಾ ವಃ** ಎಂಬ ಋಕ್ಕಿನ ವಿಷಯದಲ್ಲಿ ಐತರೇಯಬ್ರಾಹ್ಮಣದಲ್ಲಿರುವ ವಿವರಣೆಯು— 231
೪೯ **ಸ್ತುಷೇ ಜನಂ ಸುವ್ರತಂ** ಎಂಬ ನಲವತ್ತೊಂಭತ್ತನೆಯ ಸೂಕ್ತವು— 255
**ಪಾವೀರವೀ ಕನ್ಯಾ** ಎಂಬ ಋಕ್ಕಿನ ವಿಶೇಷವಿನಿಯೋಗ— 265
೫೦ **ಹುವೇ ವೋ ದೇವೀಂ** ಎಂಬ ಐವತ್ತನೆಯ ಸೂಕ್ತವು— 276
**ಮಿಮ್ಯಕ್ಷ ಯೇಷು ರೋದಸೀ** ಎಂಬ ಋಕ್ಕಿನ ನಿರುಕ್ತವು— 283
೫೧ **ಉದು ತ್ಯಚ್ಚಕ್ಷುಃ** ಎಂಬ ಐವತ್ತೊಂದನೆಯ ಸೂಕ್ತವು— 295
೫೨ **ನ ತದ್ದಿವಾ ನ ಪೃಥಿವ್ಯಾ** ಎಂಬ ಐವತ್ತೆರಡನೆಯ ಸೂಕ್ತವು— 315
೫೩ **ವಯಮು ತ್ವಾ ಪಥಸ್ಪತೇ** ಎಂಬ ಐವತ್ತಮೂರನೆಯ ಸೂಕ್ತವು— 335
೫೪ **ಸಂ ಪೂಷನ್ನಿದುಷಾ** ಎಂಬ ಐವತ್ತನಾಲ್ಕನೆಯ ಸೂಕ್ತವು— 344
೫೫ **ಏಹಿ ವಾಂ ವಿಮುಚಃ** ಎಂಬ ಐವತ್ತೈದನೆಯ ಸೂಕ್ತವು— 354
**ಆಘೃಣೇ** ಎಂಬ ಶಬ್ದದ ನಿರ್ವಚನವು— 356
೫೬ **ಯ ಏನಮಾದಿದೇಶತಿ** ಎಂಬ ಐವತ್ತಾರನೆಯ ಸೂಕ್ತವು— 360
೫೭ **ಇಂದ್ರಾ ನು ಪೂಷಣಾ** ಎಂಬ ಐವತ್ತೇಳನೆಯ ಸೂಕ್ತವು— 367
೫೮ **ಶುಕ್ರಂ ತೇ ಅನ್ಯತ್** ಎಂಬ ಐವತ್ತೆಂಟನೆಯ ಸೂಕ್ತ— 372
**ಶುಕ್ರಂ ತೇ** ಎಂಬ ಋಕ್ಕಿನ ನಿರ್ವಚನ— 375
೫೯ **ಪ್ರ ನು ವೋಚ** ಎಂಬ ಐವತ್ತೊಂಭತ್ತನೆಯ ಸೂಕ್ತವು— 379
**ಜೋಷವಾಕಂ** ಎಂಬ ಶಬ್ದದ ನಿರ್ವಚನ, ವಿವರಣೆ ಇತ್ಯಾದಿ— 383
೬೦ **ಶ್ನಥದ್ವೃತ್ರಂ** ಎಂಬ ಅರವತ್ತನೆಯ ಸೂಕ್ತವು— 391

೬೧ **ಇಯಮದದಾತ್** ಎಂಬ ಅರವತ್ತೊಂದನೆಯ ಸೂಕ್ತ— 498

**ಇಯಂ ಶುಷ್ಮೇಭಿಃ** ಎಂಬ ಋಕ್ಕಿನ ನಿರ್ವಚನವು— 411

**ನಾಲ್ಕನೆಯ ಅಷ್ಟಕದಲ್ಲಿ ಎಂಟನೆಯ ಅಧ್ಯಾಯವು ಸಮಾಪ್ತವು**

---

**ಐದನೆಯ ಅಷ್ಟಕದಲ್ಲಿ ಮೊದಲನೆಯ ಅಧ್ಯಾಯವು**

೬೨ **ಸ್ತುಷೇ ನರಾ ದಿವಃ** ಎಂಬ ಅರವತ್ತೆರಡನೆಯ ಸೂಕ್ತವು— 425

೬೩ **ಕ್ವ೧ ತ್ಯಾ ವಲ್ಗೂ** ಎಂಬ ಅರವತ್ತಮೂರನೆಯ ಸೂಕ್ತ— 440

೬೪ **ಉದು ಶ್ರಿಯ ಉಷಸಃ** ಎಂಬ ಅರವತ್ತನಾಲ್ಕನೆಯ ಸೂಕ್ತ— 453

೬೫ **ಏಷಾ ಸ್ಯಾ ನಃ** ಎಂಬ ಅರವತ್ತೈದನೆಯ ಸೂಕ್ತ— 460

೬೬ **ವಪುರ್ನು ತಚ್ಚಿಕಿತುಷೇ** ಎಂಬ ಅರವತ್ತಾರನೆಯ ಸೂಕ್ತ— 468

೬೭ **ವಿಶ್ವೇಷಾಂ ವಃ ಸತಾಂ** ಎಂಬ ಅರವತ್ತೇಳನೆಯ ಸೂಕ್ತ— 482

೬೮ **ಶ್ರುಷ್ಟೀ ವಾಂ ಯಜ್ಞಃ** ಎಂಬ ಅರವತ್ತೆಂಟನೆಯ ಸೂಕ್ತ— 497

೬೯ **ಸಂ ವಾಂ ಕರ್ಮಣಾ** ಎಂಬ ಅರವತ್ತೊಂಭತ್ತನೆಯ ಸೂಕ್ತವು— 511

೭೦ **ಘೃತವತೀ ಭುವನಾನಾಂ** ಎಂಬ ಎಪ್ಪತ್ತನೆಯ ಸೂಕ್ತವು— 521

೭೧ **ಉದು ಷ್ಯ ದೇವಃ** ಎಪ್ಪತ್ತೊಂದನೆಯ ಸೂಕ್ತವು— 530

೭೨ **ಇಂದ್ರಾಸೋಮಾ ಮಹಿ** ಎಂಬ ಎಪ್ಪತ್ತೆರಡನೆಯ ಸೂಕ್ತವು— 539

೭೩ **ಯೋ ಅದ್ರಿಭಿತ್** ಎಂಬ ಎಪ್ಪತ್ತಮೂರನೆಯ ಸೂಕ್ತವು— 545

೭೪ **ಸೋಮಾರುದ್ರಾ ಧಾರಯೇಥಾಂ** ಎಂಬ ಎಪ್ಪತ್ತನಾಲ್ಕನೆಯ ಸೂಕ್ತವು— 549

೭೫ **ಜೀಮೂತಸ್ಯೇವ ಭವತಿ** ಎಂಬ ಎಪ್ಪತ್ತೈದನೆಯ ಸೂಕ್ತವು— 555

**ಧನು**ಶ್ಶಬ್ದದ ನಿರ್ವಚನ ಇತ್ಯಾದಿ— 560

**ಕವಚ** ಮತ್ತು **ಜ್ಯಾ** (ಹೆದೆ) ಗಳ ವಿವರಣೆ ಇತ್ಯಾದಿ— 562

**ವಕ್ಷ್ಯಂತೀವೇದಾ** ಎಂಬ ಋಕ್ಕಿಗೆ ಯಾಸ್ಕರ ನಿರುಕ್ತವು— 563

**ತೇ ಆಚರಂತೀ** ಎಂಬ ಋಕ್ಕಿನ ನಿರ್ವಚನವು (ಆರ್ತ್ನೀ) 565

**ಇಷುಧಿ**ಶಬ್ದಾರ್ಥವಿವರಣೆ; **ಬಹ್ವೀನಾಂ ಪಿತಾ** ಎಂಬ ಋಕ್ಕಿನ ನಿರ್ವಚನವು— 568

**ಸಾರಥಿ** ಮತ್ತು **ಲಗಾಮು**ಗಳ ವಿವರಣೆ; **ರಥೇ ತಿಷ್ಠನ್** ಎಂಬ ಋಕ್ಕಿನ ನಿರ್ವಚನವು— 571

**ರಥಗೋಪ**ರವಿವರಣೆ; **ಸ್ವಾದುಷಂಸದಃ** ಎಂಬ ಋಕ್ಕಿನ ನಿರ್ವಚನವು— 576

**ಬಾಣ**ಸ್ತುತಿ; **ಸುಪರ್ಣಂ ವಸ್ತೇ** ಎಂಬ ಋಕ್ಕಿನ ನಿರ್ವಚನವು 580

**ಕಶಾ** ಅಥವಾ **ಅಶ್ವಾಜನಿ**ಯ ವಿವರಣೆ; **ಆ ಜಂಘಂತಿ** ಎಂಬ ಋಕ್ಕಿನ ನಿರ್ವಚನವು— 583

**ಹಸ್ತಘ್ನದ** ವಿವರಣೆ; **ಅಹಿರಿವ ಭೋಗೈಃ** ಎಂಬ ಋಕ್ಕಿನ ನಿರ್ವಚನವು— 586

**ಇಲ್ಲಿಗೆ ಆರನೆಯ ಮಂಡಲವು ಸಮಾಪ್ತವು.**

---

## ಏಳನೆಯ ಮಂಡಲವು

---

ಏಳನೆಯ ಮಂಡಲದ ಪೀಠಿಕೆ— 595

**ವಸಿಷ್ಠಋಷಿಯ** ಸೂಕ್ಷ್ಮಪರಿಚಯ— 596

ವಸಿಷ್ಠಋಷಿಯ ಉತ್ಪತ್ತಿ ಮತ್ತು ಅವನ ಮಾಹಾತ್ಮ್ಯ— 596

**ವಸಿಷ್ಠ** ಮತು **ಸುದಾಸ**— 606

**ವಸಿಷ್ಠ** ಮತ್ತು **ವಿಶ್ವಾಮಿತ್ರ**— 609

೧ **ಅಗ್ನಿಂ ನರೋ ದೀಧಿತಿಂ** ಎಂಬ ಮೊದಲನೆಯ ಸೂಕ್ತವು— 616

ಸೂಕ್ತದ ವಿನಿಯೋಗ ಮತ್ತು ಋಷಿದೇವತಾಛಂದಸ್ಸುಗಳು ಇತ್ಯಾದಿ— 617

**ಅಥರ್ಯುಂ** ಎಂಬ ಶಬ್ದದ ನಿರ್ವಚನ ಮತ್ತು ಅರ್ಥವಿವರಣೆ— 619

ಐದನೆಯ ಅಷ್ಟಕದಲ್ಲಿ ಮೊದಲನೆಯ ಅಧ್ಯಾಯವು ಸಮಾಪ್ತವು

---

## ಎರಡನೆಯ ಅಧ್ಯಾಯವು

ಆಪ್ರೀಸೂಕ್ತಗಳ ವಿಷಯದಲ್ಲಿ ಪೀಠಿಕೆ— 648

೨ **ಜುಷಸ್ವ ನಃ** ಎಂಬ ಎರಡನೆಯ ಸೂಕ್ತವು— 653

**ನರಾಶಂಸಸ್ಯ ಮಹಿಮಾನಂ** ಎಂಬ ಋಕ್ಕಿನ ನಿರ್ವಚನವು— 656

೩ **ಅಗ್ನಿಂವೋ ದೇವಂ** ಎಂಬ ಮೂರನೆಯ ಸೂಕ್ತವು— 667

೪ **ಪ್ರ ವಃ ಶುಕ್ರಾಯ** ಎಂಬ ನಾಲ್ಕನೆಯ ಸೂಕ್ತವು— 679

**ಅಪತ್ಯ**ಶಬ್ದಾರ್ಥವಿಚಾರ ಮತ್ತು ನಿರ್ವಚನ; **ಪರಿಷದ್ಯಂ** ಎಂಬ ಋಕ್ಕಿನ ನಿರ್ವಚನ ಇತ್ಯಾದಿ— 688

**ನಹಿ ಗ್ರಭಾಯ** ಎಂಬ ಋಕ್ಕಿನ ನಿರುಕ್ತವು— 692

೫ **ಪ್ರಾಗ್ನಯೇ ತವಸೇ** ಎಂಬ ಐದನೆಯ ಸೂಕ್ತವು— 695

೬ **ಪ್ರ ಸಮ್ರಾಜಃ** ಎಬ ಆರನೆಯ ಸೂಕ್ತವು— 705

೭ **ಪ್ರ ವೋ ದೇವಂ** ಎಂಬ ಏಳನೆಯ ಸೂಕ್ತವು— 714

೮ **ಇಂಧೇ ರಾಜಾ** ಎಂಬ ಎಂಟನೆಯ ಸೂಕ್ತ— 723

೯ **ಅಬೋಧಿ ಜಾರಃ** ಎಂಬ ಒಂಭತ್ತನೆಯ ಸೂಕ್ತ— 731

೧೦ **ಉಷೋ ನ ಜಾರಃ** ಎಂಬ ಹತ್ತನೆಯ ಸೂಕ್ತ— 739

೧೧ **ಮಹಾಁ ಅಸ್ಯಧ್ವರಸ್ಯ** ಎಂಬ ಹನ್ನೊಂದನೆಯ ಸೂಕ್ತವು— 746

೧೨ **ಅಗನ್ಮ ಮಹಾ ನಮಸಾ** ಎಂಬ ಹನ್ನೆರಡನೆಯ ಸೂಕ್ತವು— 752

೧೩ **ಪ್ರಾಗ್ನಯೇ ವಿಶ್ವಶುಚೇ** ಎಂಬ ಹದಿಮೂರನೆಯ ಸೂಕ್ತವು— 756

೧೪ **ಸಮಿಧಾ ಜಾತವೇದಸೇ**— ಎಂಬ ಹದಿನಾಲ್ಕನೆಯ ಸೂಕ್ತವು— 759

೧೫ **ಉಪಸದ್ಯಾಯ** ಎಂಬ ಹದಿನೈದನೆಯ ಸೂಕ್ತವು— 763

೧೬ ಏನಾ **ವೋ ಅಗ್ನಿಂ** ಎಂಬ ಹದಿನಾರನೆಯ ಸೂಕ್ತವು— 777

ಏನಾ ಶಬ್ದದ ಅರ್ಥ ಮತ್ತು ಪ್ರಯೋಗ 779

೧೭ **ಅಗ್ನೇ ಭವ ಸುಷಮಿಧಾ** ಎಂಬ ಹದಿನೇಳನೆಯ ಸೂಕ್ತವು— 791

೧೮ **ತ್ವೇ ಹ ಯತ್ಪಿತರಃ** ಎಂಬ ಹದಿನೆಂಟನೆಯ ಸೂಕ್ತವು— 797

೧೯ **ಯಸ್ತಿಗ್ಮಶೃಂಗಃ** ಎಂಬ ಹತ್ತೊಂಭತ್ತನೆಯ ಸೂಕ್ತವು— 828


---

ವಿಷಯಾನುಕ್ರಮಣಿಕೆ ಸಮಾಪ್ತವು

---

## ಸಂಕೇತಾಕ್ಷರಗಳ ವಿವರಣೆಯು



ಅಥ. ಸಂ.—ಅಥರ್ವವೇದಸಂಹಿತಾ
ಆಪ. ಸೂ.—ಆಪಸ್ತಂಬ ಶ್ರೌತಸೂತ್ರ
ಆಪ. ಧ. ಸೂ.—ಆಪಸ್ತಂಬ ಧರ್ಮಸೂತ್ರ
ಆಪ. ಪ. ಸೂ.—ಆಪಸ್ತಂಬ ಪರಿಭಾಷಾಸೂತ್ರ
ಆ. ಸೂ. ಅಥವಾ ಆ.—ಆಶ್ವಲಾಯನ ಶ್ರೌತಸೂತ್ರ
ಉ. ಸೂ. ಉಣಾದಿ ಸೂತ್ರ
ಋ. ಸಂ. ಋಗ್ವೇದಸಂಹಿತಾ
ಐ. ಆ.—ಐತರೇಯಾರಣ್ಯಕ
ಐ. ಉ.—ಐತರೇಯೋಪನಿಷತ್
ಐ. ಬ್ರಾ.—ಐತರೇಯಬ್ರಾಹ್ಮಣ
ಛಾ. ಉ.—ಛಾಂದೋಗ್ಯೋಪನಿಷತ್
ಜೈ. ಪೂ. ಸೂ.—ಜೈಮಿನೀಯ ಪೂರ್ವಮೀಮಾಂಸಾಸೂತ್ರ
ಜೈ. ನ್ಯಾ. ವಿ.—ಜೈಮಿನಿಯ ನ್ಯಾಯಮಾಲಾ ವಿಸ್ತರ
ತಾ. ಬ್ರಾ.—ತಾಂಡ್ಯಮಹಾ ಬ್ರಾಹ್ಮಣ
ತೈ. ಆ.—ತೈತ್ತಿರೀಯ ಆರಣ್ಯಕ
ತೈ. ಬ್ರಾ.—ತೈತ್ತಿರೀಯ ಬ್ರಾಹ್ಮಣ
ತೈ. ಸಂ.—ತೈತ್ತಿರೀಯ ಸಂಹಿತಾ
ನಿ.—ನಿರುಕ್ತ, ನಿಘಂಟು
ಪಾ. ಸೂ.—ಪಾಣಿನೀಯಸೂತ್ರ
ಪಾ. ಶಿ.—ಪಾಣಿನೀಯ ಶಿಕ್ಷಾ
ಫಿ. ಅಥವಾ ಫಿ. ಸೂ.—ಫಿಟ್ ಸೂತ್ರ
ಬ್ರ. ಸೂ.—ಬ್ರಹ್ಮ ಸೂತ್ರ
ಮ. ಭಾ.—ಮಹಾಭಾರತ
ಮ. ಸ್ಮೃ.—ಮನು ಸ್ಮೃತಿ
ಮೈ. ಸಂ.—ಮೈತ್ರಾಯಣೀಯಸಂಹಿತಾ
ಯಾ. ಸ್ಮೃ.—ಯಾಜ್ಞವಲ್ಕ್ಯಸ್ಮೃತಿ
ವಾ. ಸಂ.—ವಾಜಸನೇಯ ಸಂಹಿತಾ
ವಾ. ಪು.—ವಾಯುಪುರಾಣ
ವಿ. ಪು.—ವಿಷ್ಣು ಪುರಾಣ
ವೇ. ಸೂ.—ವೇದಾಂತಸೂತ್ರ
ಶ. ಬ್ರಾ.—ಶತಪಥಬ್ರಾಹ್ಮಣ
ಸಾ. ಸಂ.—ಸಾಮವೇದ ಸಂಹಿತಾ ಇತ್ಯಾದಿ
ಬೃ. ದೇ.—ಬೃಹದ್ದೇವತಾ





॥ ಶ್ರೀಃ ॥

॥ ಶ್ರೀ ಗಣಾಧಿಪತಯೇ ನಮಃ ॥

ವಾಗೀಶಾದ್ಯಾಃ ಸುಮನಸಃ ಸರ್ವಾರ್ಥಾನಾಮುಪಕ್ರಮೇ ।
ಯಂ ನತ್ವಾ ಕೃತಕೃತ್ಯಾಃ ಸ್ಯುಸ್ತಂ ನಮಾಮಿ ಗಜಾನನಂ ॥
ಯಸ್ಯ ನಿಃಶ್ವಸಿತಂ ವೇದಾ ಯೋ ವೇದೇಭ್ಯೋಽಖಿಲಂ ಜಗತ್ ।
ನಿರ್ಮಮೇ ತಮಹಂ ವಂದೇ ವಿದ್ಯಾತೀರ್ಥಮಹೇಶ್ವರಂ ॥
ವೇದಃ ಶಿವಃ ಶಿವೋ ವೇದೋ ವೇದಾಧ್ಯಾಯೀ ಸದಾಶಿವಃ ।
ತಸ್ಮಾತ್ಸರ್ವಪ್ರಯತ್ನೇನ ವೇದಮೇವ ಸದಾ ಜಪೇತ್ ॥

## ಸಾಯಣಭಾಷ್ಯಸಹಿತಾ

# ಋಗ್ವೇದಸಂಹಿತಾ

**(ಕರ್ನಾಟಕ ಭಾಷಾರ್ಥಾನುವಾದ ವಿವರಣೆ ಸಹಿತವಾಗಿ)**

## ಭಾಗ ೨೧

## ॥ ಚತುರ್ಥಾಷ್ಟಕೇ ಸಪ್ತಮೋಽಧ್ಯಾಯಃ ॥

**ನಾಲ್ಕನೆಯ ಅಷ್ಟಕದಲ್ಲಿ ಏಳನೆಯ ಅಧ್ಯಾಯವು**

## ಆರನೆಯ ಮಂಡಲದ ಇಪ್ಪತ್ತೊಂಭತ್ತನೆಯ ಸೂಕ್ತವು

### ಪೀಠಿಕೆ

ಋಗ್ವೇದಸಂಹಿತೆಯ ಈ ಭಾಗದಲ್ಲಿ ನಾಲ್ಕನೆಯ ಅಷ್ಟಕದ ೭-೮ ನೆಯ ಅಧ್ಯಾಯಗಳೂ ಐದನೆಯ ಅಷ್ಟಕದ ೧-೨ ಅಧ್ಯಾಯಗಳೂ ಒಟ್ಟು ನಾಲ್ಕು ಅಧ್ಯಾಯಗಳು ಅಡಕವಾಗಿವೆ. ಎಂದರೆ ಆರನೆಯ ಮಂಡಲದ ೨೯-೭೫ (೪೭) ಸೂಕ್ತಗಳೂ, ಏಳನೆಯ ಮಂಡಲದ ೧-೧೯ ಸೂಕ್ತಗಳೂ (ಒಟ್ಟು ೬೬ ಸೂಕ್ತಗಳು) ಸೇರಿವೆ. ಇವುಗಳಲ್ಲಿ ಮೊದಲು ಪ್ರಾರಂಭವಾಗುವ ನಾಲ್ಕನೆಯ ಅಷ್ಟಕದ ಏಳನೆಯ ಅಧ್ಯಾಯವೆಲ್ಲವೂ (೧೯ ಸೂಕ್ತಗಳು) ಇಂದ್ರದೇವತಾಪರವಾಗಿಯೇ ಇವೆ. ಇಂದ್ರನ ಸಂಬಂಧವಾದ ಸಮಸ್ತ ವಿಷಯವನ್ನೂ ನಾವು ಋಗ್ವೇದಸಂಹಿತೆಯ **೫ ನೇ ಭಾಗದ** 569-582 ನೇ ಪುಟಗಳಲ್ಲಿಯೂ, ೧೬ ನೇ ಭಾಗದ 631-683 ಪುಟಗಳಲ್ಲಿಯೂ ವಿಸ್ತಾರವಾಗಿ ವಿವರಿಸಿರುವುದಲ್ಲದೆ ಸಂದರ್ಭಾನುಸಾರವಾಗಿ ಇತರ ಭಾಗಗಳಲ್ಲಿಯೂ ಅಲ್ಲಲ್ಲಿ ಬರುವ ಇಂದ್ರಸಂಬಂಧವಾದ ಪ್ರಕರಣ

ಗಳನ್ನೂ ವಿಶದವಾಗಿಯೂ, ವಿಸ್ತಾರವಾಗಿಯೂ ವಿವರಿಸಿದೇವೆ. ಆದುದರಿಂದ ಈ ಅಧ್ಯಾಯದಲ್ಲಿ ಹಿಂದೆ ಹೇಳಿದ ವಿಷಯಗಳನ್ನು ಬಿಟ್ಟು ಹೊಸ ವಿಷಯಗಳನ್ನು ಮಾತ್ರ ವರ್ಣಿಸಲಾಗುವುದು. ಎಂದರೆ, ಋಕ್ಕುಗಳಿಗೆ ಪ್ರತಿಪದಾರ್ಥ ಭಾವಾರ್ಥಗಳನ್ನು ವಿವರಿಸಿ ಅವಶ್ಯಕವಾದ ಕಡೆಗಳಲ್ಲಿ ಮಾತ್ರ ವಿಶೇಷವಿಷಯಗಳನ್ನು ಸೇರಿಸಲಾಗುವುದು.

# ಇಪ್ಪತ್ತೊಂಭತ್ತನೆಯ ಸೂಕ್ತವು

॥ ಸಾಯಣಭಾಷ್ಯಂ ॥

**ಅಥ ಸಪ್ತಮೋಽಧ್ಯಾಯ ಆರಭ್ಯತೇ । ಷಷ್ಠಸ್ಯ ಮಂಡಲಸ್ಯ ತೃತೀಯೇಽನುವಾಕೇ ಪಂಚ ಸೂಕ್ತಾನಿ ವ್ಯಾಕೃತಾನಿ । ಇಂದ್ರಂ ವ ಇತಿ ಷಡೃಚಂ ಷಷ್ಠಂ ಸೂಕ್ತಂ ಭರದ್ವಾಜಸ್ಯಾರ್ಷಂ ತ್ರೈಷ್ಟುಭಮೈಂದ್ರಂ । ಅನುಕ್ರಮ್ಯತೇ ಚ । ಇಂದ್ರಂ ಷಡಿತಿ । ಗತೋ ವಿನಿಯೋಗಃ ॥**

ಅನುವಾದವು— ಈಗ ನಾಲ್ಕನೆಯ ಅಷ್ಟಕದ ಏಳನೆಯ ಅಧ್ಯಾಯದ ವ್ಯಾಖ್ಯಾನವು ಪ್ರಾರಂಭಿಸಲ್ಪಡುವುದು. ಆರನೆಯ ಮಂಡಲದ ಮೂರನೆಯ ಅನುವಾಕದಲ್ಲಿ ಇದುವರೆಗೆ (ಹಿಂದಿನ ಅಧ್ಯಾಯದಲ್ಲಿ) ಐದು ಸೂಕ್ತಗಳನ್ನು ವಿವರಿಸಿದ್ದಾಯಿತು. ಈಗ **ಇಂದ್ರಂ ವೋ ನರಃ** ಎಂಬ ಆರನೆಯ ಸೂಕ್ತವು ಪ್ರಾರಂಭಿಸಲ್ಪಡುವುದು. ಇದರಲ್ಲಿ ಆರು ಋಕ್ಕುಗಳಿರುವವು. ಈ ಸೂಕ್ತಕ್ಕೆ ಭರದ್ವಾಜನು ಋಷಿಯು; ಇಂದ್ರನು ದೇವತೆಯು; ತ್ರಿಷ್ಟುಪ್‌ಛಂದಸ್ಸು. ಅನುಕ್ರಮಣಿಕೆಯಲ್ಲಿ— **ಇಂದ್ರಂ ಷಟ್** ಎಂದು ಮೊದಲಾಗಿ ಹೇಳಿರುವುದು. ವಿನಿಯೋಗವನ್ನು ಹಿಂದೆಯೇ ತಿಳಿಸಲಾಗಿದೆ.

## ಸೂಕ್ತ—೨೯

ಮಂಡಲ—೬ ॥ ಅನುವಾಕ—೩ ॥ ಸೂಕ್ತ—೨೯ ॥
ಅಷ್ಟಕ—೪ ॥ ಅಧ್ಯಾಯ—೭ ॥ ವರ್ಗ—೧ ॥
॥ ಸೂಕ್ತದಲ್ಲಿರುವ ಋಕ್ಸಂಖ್ಯೆ—೬ ॥
॥ ಋಷಿಃ—ಭರದ್ವಾಜೋ ಬಾರ್ಹಸ್ಪತ್ಯಃ ॥
॥ ದೇವತಾ—ಇಂದ್ರಃ ॥
॥ ಛಂದಃ—ತ್ರಿಷ್ಟುಪ್ ॥

॥ ಸಂಹಿತಾಪಾಠಃ ॥

ಇಂದ್ರಂ ವೋ ನರಃ ಸಖ್ಯಾಯ ಸೇಪುರ್ಮಹೋ ಯಂತಃ ಸುಮತಯೇ ಚಕಾನಾಃ ।
ಮಹೋ ಹಿ ದಾತಾ ವಜ್ರಹಸ್ತೋ ಅಸ್ತಿ ಮಹಾಮು ರಣ್ವಮವಸೇ ಯಜಧ್ವಂ ॥ ೧ ॥

॥ ಪದಪಾಠಃ ॥

ಇಂದ್ರಂ । ವಃ । ನರಃ । ಸಖ್ಯಾಯ । ಸೇಪುಃ । ಮಹಃ । ಯಂತಃ । ಸುಽಮತಯೇ । ಚಕಾನಾಃ ।

ಮಹಃ । ಹಿ । ದಾತಾ । ವಜ್ರಽಹಸ್ತಃ । ಅಸ್ತಿ । ಮಹಾಂ । ಊಂ ಇತಿ । ರಣ್ವಂ । ಅವಸೇ । ಯಜಧ್ವಂ ॥೧॥

॥ ಸಾಯಣಭಾಷ್ಯಂ ॥

ಹೇ ಯಜಮಾನಾ ವೋ ಯುಷ್ಮಾಕಂ ಸಂಬಂಧಿನೋ ನರೋ ನೇತಾರ ಋತ್ವಿಜಃ ಸಖ್ಯಾಯ ಸಖಿಭಾವಾರ್ಥಮಿಂದ್ರಂ ಸೇಪುಃ । ಪರಿಚರಂತಿ । ಸ್ಪೃಶಂತಿ ವಾ । ಕಥಂಭೂತಾಃ । ಮಹೋ ಮಹಾಂತಿ ಸ್ತೋತ್ರಾಣಿ ಯಂತ ಉಪಯಂತಃ ಪ್ರಾಪ್ನುವಂತಃ । ಕುರ್ವಂತ ಇತ್ಯರ್ಥಃ । ತಥಾ ಸುಮತಯೇ । ಸುಮತಿಃ ಶೋಭನಾನುಗ್ರಹಾತ್ಮಿಕಾ ತದೀಯಾ ಬುದ್ಧಿಃ । ತಾಂ ಚಕಾನಾಃ ಕಾಮಯಮಾನಾಃ ॥ ಕ್ರಿಯಾಗ್ರಹಣಂ ಕರ್ತವ್ಯಮಿತಿ ಕರ್ಮಣಃ ಸಂಪ್ರದಾನಸಂಜ್ಞಾ । ಚಕಾನಾ ಇತಿ ಕಾಮಯತೇಶ್ಛಾಂದಸಂ ರೂಪಂ ॥ ಯದ್ವಾ । ಮಹೋ ಮಹತ್ಕರ್ಮ ಯಂತೋಽನುತಿಷ್ಠಂತಃ ಸುಮತಯೇ ಸುಮತಿಂ ಶೋಭನಾಂ ಸ್ತುತಿಂ ಚಕಾನಾಃ ಶಬ್ದಯಂತಃ ॥ ಕೈ ಗೈ ಶಬ್ದ ಇತ್ಯಸ್ಮಾಲ್ಲಿಟಃ ಕಾನಚಿ ರೂಪಂ ॥ ಹಿ ಯಸ್ಮಾದ್ವಜ್ರಹಸ್ತೋ ವಜ್ರಪಾಣಿರಿಂದ್ರೋ ಮಹೋ ಮಹತೋ ಧನಸ್ಯ ದಾತಾಸ್ತಿ ಭವತಿ ತಸ್ಮಾದ್ರಣ್ವಂ ರಮಣೀಯಂ ಮಹಾಮು ಮಹಾಂತಮೇನಾವಸೇ ರಕ್ಷಣಾಯ ಯಜಧ್ವಂ । ಹವಿರ್ಭಿಃ ಪೂಜಯತ ॥

॥ ಪ್ರತಿಪದಾರ್ಥ ॥

(ಎಲೈ ಯಜಮಾನರೇ) **ವಃ**—ನಿಮ್ಮ ಸಂಬಂಧಿಗಳಾದ । **ನರಃ**—ಋತ್ವಿಕ್ಕುಗಳು । **ಸಖ್ಯಾಯ**—ಸ್ನೇಹಸಂಪಾದನೆಗಾಗಿ । **ಮಹಃ**—ಮಹತ್‌ಸ್ತೋತ್ರಗಳನ್ನು । **ಯಂತಃ**—ಅರ್ಪಿಸುತ್ತಲೂ । **ಸುಮತಯೇ**—ಶ್ರೇಷ್ಠವಾದ ಬುದ್ಧಿಯನ್ನು । **ಚಕಾನಾಃ**—ಅಪೇಕ್ಷಿಸುವವರಾಗಿಯೂ । **ಇಂದ್ರಂ**— ಇಂದ್ರನನ್ನು । **ಸೇಪುಃ**—ಪೂಜಿಸುತ್ತಾರೆ । **ವಜ್ರಹಸ್ತಃ**—ವಜ್ರಧಾರಿಯಾದ ಇಂದ್ರನು । **ಮಹಃ**—ಪೂಜ್ಯವಾದ ಧನಕ್ಕೆ । **ದಾತಾ**—ದಾತೃವಾಗಿ । **ಅಸ್ತಿ**—ಆಗಿದ್ದಾನೆ । **ರಣ್ವಂ**—ರಮಣೀಯನೂ । **ಮಹಾಮು**—ಮಹಾತ್ಮನೂ ಆದ ಇಂದ್ರನನ್ನೇ । **ಅವಸೇ**—ರಕ್ಷಣಾರ್ಥವಾಗಿ । **ಯಜಧ್ವಂ**—ಪೂಜಿಸಿರಿ.

॥ ಭಾವಾರ್ಥ ॥

ಎಲೈ ಯಜಮಾನರೇ, ನಿಮ್ಮ ಸಂಬಂಧಿಗಳಾದ ಋತ್ವಿಕ್ಕುಗಳು ಇಂದ್ರನೊಡನೆ ಸ್ನೇಹಸಂಪಾದನೆಗಾಗಿ ಇಂದ್ರನಿಗೆ ಮಹತ್‌ಸ್ತೋತ್ರಗಳನ್ನರ್ಪಿಸುತ್ತಲೂ, ಶ್ರೇಷ್ಠವಾದ ಬುದ್ಧಿಯನ್ನು ಅಪೇಕ್ಷಿಸುವವರಾಗಿಯೂ ಇಂದ್ರನನ್ನು ಪೂಜಿಸುತ್ತಾರೆ. ವಜ್ರಧಾರಿಯಾದ ಇಂದ್ರನು ಪೂಜ್ಯವಾದ ಧನಕ್ಕೆ ದಾತೃವಾಗಿ ಇದ್ದಾನೆ. ರಮಣೀಯನೂ ಮಹಾತ್ಮನೂ ಆದ ಇಂದ್ರನನ್ನೇ ರಕ್ಷಣಾರ್ಥವಾಗಿ ಪೂಜಿಸಿರಿ.

## English Translation.

Your priests, (oh worshippers), propitiate Indra for his friendship, offering great (praise), and desirous of his favour; for the wielder of the

thunderbolt is the giver of vast (wealth); worship him. therefore, who is mighty and benevolent, (to obtain) his protection.

॥ ಸಂಹಿತಾಪಾಠಃ ॥

ಆ ಯಸ್ಮಿನ್ಹಸ್ತೇ ನರ್ಯಾ ಮಿಮಿಕ್ಷುರಾ ರಥೇ ಹಿರಣ್ಯಯೇ ರಥೇಷ್ಠಾಃ ।
ಆ ರಶ್ಮಯೋ ಗಭಸ್ತ್ಯೋಃ ಸ್ಥೂರಯೋರಾಧ್ವನ್ನಶ್ವಾಸೋ ವೃಷಣೋ ಯುಜಾನಾಃ ॥ ೨ ॥

॥ ಪದಪಾಠಃ ॥

ಆ । ಯಸ್ಮಿನ್ । ಹಸ್ತೇ । ನರ್ಯಾಃ । ಮಿಮಿಕ್ಷುಃ । ಆ । ರಥೇ । ಹಿರಣ್ಯಯೇ । ರಥೇऽಸ್ಥಾಃ ।
ಆ । ರಶ್ಮಯಃ । ಗಭಸ್ತ್ಯೋಃ । ಸ್ಥೂರಯೋಃ । ಆ । ಅಧ್ವನ್ । ಅಶ್ವಾಸಃ । ವೃಷಣಃ । ಯುಜಾನಾಃ ॥ ೨ ॥

। ಸಾಯಣಭಾಷ್ಯಂ ।

ಯಸ್ಮಿನ್ನಿಂದ್ರೇ ನರ್ಯಾ ನೃಭ್ಯೋ ಹಿತಾ ರಾಯ ಆ ಮಿಮಿಕ್ಷುಃ ಆಸಿಚ್ಯಂತೇ ಆಪೂರ್ಯಂತೇ॥ ವ್ಯತ್ಯಯೇನ ಕರ್ಮಣಿ ಕರ್ತೃಪ್ರತ್ಯಯಃ ॥ ಇಂದ್ರೇ ಕುತ್ರೇತಿ ಚೇತ್ । ಹಸ್ತೇ ತದೀಯೇ ಬಾಹೌ । ಯದ್ವಾ । ಏತತ್ಸಮಾನಾಧಿಕರಣಮಿಂದ್ರಸ್ಯ ವಿಶೇಷಣಂ । ಹಸ್ತೇ ಹಂತರ್ಯಸ್ಮಿನ್ನಿಂದ್ರ ಇತ್ಯರ್ಥಃ । ಉಕ್ತಂ ಯಾಸ್ಕೇನ । ಹಸ್ತೋ ಹಂತೇಃ ಪ್ರಾಶುರ್ಹನನೇ । ನಿ. ೧-೭ । ಇತಿ । ಯದ್ವಾ । ಈದೃಶೇ ಯಸ್ಮಿನ್ನಿಂದ್ರೇ ವರ್ತಮಾನಾ ರಾಯ ಆ ಮಿಮಿಕ್ಷುಃ ಆಸಿಂಚಂತಿ ಆಪೂರಯಂತಿ ಸ್ತೋತೄನ್ । ಯಶ್ಚೇಂದ್ರೋ ರಥೇಷ್ಠಾ ರಥೇ ಸ್ಥಾತಾ ತತ್ಸ್ವಭಾವಃ ಸನ್ ಹಿರಣ್ಯಯೇ ಸುವರ್ಣಮಯೇ ರಥ ಆ ತಿಷ್ಠತಿ । ಯದ್ವಾ । ರಥೇಷ್ಠಾ ರಥೇऽವಸ್ಥಿತಾ ರಾಯೋ ಧನಾನಿ ಹಿರಣ್ಮಯೇ ರಥೇ ತಿಷ್ಠನ್ ಯ ಇಂದ್ರ ಆ ಸಿಂಚತಿ ಅಭಿವರ್ಷತಿ । ಯಸ್ಯ ಚ ಸ್ಥೂರಯೋಃ ಸ್ಥೂಲಯೋರ್ವಿಸ್ತೃತಯೋರ್ಗಭಸ್ತ್ಯೋಃ । ಬಾಹುನಾಮೈತತ್ । ಬಾಹ್ವೋ ರಶ್ಮಯೋऽಭೀಶವ ಆ ಸಿಚ್ಯಂತೇ ಆಯಮ್ಯಂತೇ । ಯಸ್ಯ ಚಾಶ್ವಾಸೋऽಶ್ವಾ ವೃಷಣಃ ಸೇಕ್ತಾರೋ ಯುವಾನೋ ಯುಜಾನಾ ರಥೇ ಯುಜ್ಯಮಾನಾ ಅಧ್ವನ್ನಧ್ವನಿ ಮಾರ್ಗ ಆ ಮಿಮಿಕ್ಷುಃ ಆಸಿಂಚಂತಿ ಆಪೂರಯಂತಿ । ಆಗಚ್ಛಂತೀತ್ಯರ್ಥಃ । ತಮಿಂದ್ರಂ ಸ್ತುಮ ಇತಿ ಶೇಷಃ ॥

। ಪ್ರತಿಪದಾರ್ಥ ।

ಯಸ್ಮಿನ್ ಹಸ್ತೇ—ಯಾವ ಇಂದ್ರನ ಹಸ್ತದಲ್ಲಿ । ನರ್ಯಾಃ—ಮಾನವರಿಗೆ ಹಿತಕರಗಳಾದ ಧನಗಳು । ಆ ಮಿಮಿಕ್ಷುಃ — ತುಂಬಿವೆಯೋ । ರಥೇಷ್ಠಾಃ—ರಥಸ್ಥನಾಗಿರುವ ಸ್ವಭಾವವುಳ್ಳ ಯಾವ ಇಂದ್ರನು । ಹಿರಣ್ಯಯೇ—ಸುವರ್ಣನಿರ್ಮಿತವಾದ । ರಥೇ—ರಥದಲ್ಲಿ । ಆ (ತಿಷ್ಠಂತಿ)—ಕುಳಿತುಕೊಳ್ಳುವನೋ ।

**ಸ್ಥೂರಯೋಃ**—ವಿಸ್ತೃತಗಳಾದ | **ಗಭಸ್ತ್ಯೋಃ**--(ಯಾವನ) ಬಾಹುಗಳಲ್ಲಿ | **ರಶ್ಮಯಃ**—ಅಶ್ವಗಳ ಕಡಿವಾಣಗಳು | **ಆ (ಸಿಚ್ಯಂತೇ)**---ಹಿಡಿಯಲ್ಪಡುತ್ತವೆಯೋ | (ಮತ್ತು) **ಅಶ್ವಾಸಃ** — (ಯಾವನ) ಅಶ್ವಗಳು | **ವೃಷಣಃ**—ಶಕ್ತಿಯುತಗಳಾಗಿಯೂ | **ಯುಜಾನಃ**—ರಥಕ್ಕೆ ಸೇರಿಕೊಳ್ಳತಕ್ಕವಾಗಿಯೂ ಆಗಿ | **ಅಧ್ವನ್**—ಮಾರ್ಗದಲ್ಲಿ | **ಆ (ಮಿಮಿಕ್ಷುಃ)**—ಆಕ್ರಮಿಸುವುವೋ (ಆ ಇಂದ್ರನನ್ನೇ ಪೂಜಿಸಿರಿ).

॥ ಭಾವಾರ್ಥ ॥

ಯಾವ ಇಂದ್ರನ ಹಸ್ತದಲ್ಲಿ ಮಾನವರಿಗೆ ಹಿತಕರಗಳಾದ ಧನಗಳು ತುಂಬಿವೆಯೋ, ರಥಸ್ಥನಾಗಿರುವ ಸ್ವಭಾವವುಳ್ಳ ಯಾವ ಇಂದ್ರನು ಸುವರ್ಣನಿರ್ಮಿತವಾದ ರಥದಲ್ಲಿ ಕುಳಿತುಕೊಳ್ಳುವನೋ ವಿಸ್ತೃತವಾದ ಯಾವನ ಬಾಹುಗಳಲ್ಲಿ ಅಶ್ವಗಳ ಕಡಿವಾಣಗಳು ಹಿಡಿಯಲ್ಪಡುತ್ತವೆಯೋ ಮತ್ತು ಯಾವನ ಅಶ್ವಗಳು ಶಕ್ತಿಯುತಗಳಾಗಿಯೂ ರಥಕ್ಕೆ ಸ್ವಯಂ ಸೇರಿಕೊಳ್ಳತಕ್ಕವುಗಳಾಗಿಯೂ ಆಗಿ ಮಾರ್ಗವನ್ನೇ ಆಕ್ರಮಿಸುವುವೋ ಅಂತಹ ಇಂದ್ರನನ್ನೇ ಪೂಜಿಸಿರಿ.

## English Translation.

In whose hand (riches) good for man are accumulated, the chariot-mounted in a golden car; in whose arms the rays of light (are collected); whose vigorous horses, yoked (to his car, convey him) on the road (of the firmament).

॥ ಸಂಹಿತಾಪಾಠಃ ॥

ಶ್ರಿಯೇ ತೇ ಪಾದಾ ದುವ ಆ ಮಿಮಿಕ್ಷುರ್ಧೃಷ್ಣುರ್ವಜ್ರೀ ಶವಸಾ ದಕ್ಷಿಣಾವಾನ್ ।
ವಸಾನೋ ಅತ್ಕಂ ಸುರಭಿಂ ದೃಶೇ ಕಂ ಸ್ವ೧ರ್ಣ ನೃತವಿಷಿರೋ ಬಭೂಥ ॥

॥ ಪದಪಾಠಃ ॥

ಶ್ರಿಯೇ । ತೇ । ಪಾದಾ । ದುವಃ । ಆ । ಮಿಮಿಕ್ಷುಃ । ಧೃಷ್ಣುಃ । ವಜ್ರೀ । ಶವಸಾ । ದಕ್ಷಿಣಽವಾನ್ ।
ವಸಾನಃ । ಅತ್ಕಂ । ಸುರಭಿಂ । ದೃಶೇ । ಕಂ । ಸ್ವಃ । ನ । ನೃತೋ ಇತಿ । ಇಷಿರಃ । ಬಭೂಥ ॥ ೩ ॥

॥ ಸಾಯಣಭಾಷ್ಯಂ ॥

ಹೇ ಇಂದ್ರ ಶ್ರಿಯ ಐಶ್ವರ್ಯಾರ್ಥಂ ತೇ ತ್ವದೀಯಯೋಃ ಪಾದಾ ಪಾದಯೋರ್ದುವಃ ಪರಿಚರಣಮಾ ಮಿಮಿಕ್ಷುಃ । ಆಸಿಂಚಂತಿ । ಸಮರ್ಪಯಂತಿ । ಭರದ್ವಾಜಃ ಸಮರ್ಪಯತಿ ॥ ವ್ಯತ್ಯಯೇನ ಬಹುವಚನಂ ॥ ಯದ್ವಾ । ತೇ ತವ ಪಾದೌ ಶ್ರಿಯೇ ಶ್ರಯಿತುಂ ಸೇವಿತುಂ ದುವಃ ಪರಿಚರಣಮಾಸಿಂಚಂತಿ । ಅನುತಿಷ್ಠಂತಿ । ಯಸ್ತ್ವಂ ಶವಸಾ ಬಲೇನ ಧೃಷ್ಣುಃ ಶತ್ರೂಣಾಂ ಧರ್ಷಕೋ ವಜ್ರೀ ವಜ್ರವಾನ್

ದಕ್ಷಿಣಾವಾನ್ । ದಕ್ಷಿಣಾ ಸ್ತೋತೃಭ್ಯೋ ದಾತವ್ಯಂ ಧನಂ । ತದ್ವಾನ್ ಹೇ ನೃತೋ ನೇತರಿಂದ್ರ ಸ ತ್ವಂ ಸುರಭಿಂ ಪ್ರಶಸ್ತಮತ್ಕಂ ಸತತಗಮನಶೀಲಮಾತ್ಮೀಯಂ ರೂಪಂ ದೃಶೇ ಸರ್ವೇಷಾಂ ದರ್ಶನಾರ್ಥಂ ವಸಾನ ಆಚ್ಛಾದಯನ್ ಸ್ವರ್ಣ ಸೂರ್ಯ ಇವ ಇಷಿರೋ ಗಂತೈಷಣೀಯೋ ವಾ ಬಭೂಥ । ಭವಸಿ । ಕಮಿತಿ ಪೂರಕಃ ॥

॥ ಪ್ರತಿಪದಾರ್ಥ ॥

(ಎಲೈ ಇಂದ್ರನೇ) **ಶ್ರಿಯೇ**—ಐಶ್ವರ್ಯವನ್ನು ಪಡೆಯಲು । **ತೇ**—ನಿನ್ನ । **ಪಾದಾ**—ಪಾದಗಳಿಗೆ । **ದುವಃ**—ಪೂಜೆಯನ್ನು । **ಆ ಮಿಮಿಕ್ಷುಃ**—(ಭರದ್ವಾಜನು) ಅರ್ಪಿಸುತ್ತಾನೆ । **ನೃತೋ**—ಕರ್ಮಗಳಿಗೆ ನೇತೃವಾದ ಎಲೈ ಇಂದ್ರನೇ । **ಶವಸಾ**—ಶಕ್ತಿಯಿಂದ । **ಧೃಷ್ಣುಃ**—ಶತ್ರುಧರ್ಷಕನೂ । **ವಜ್ರೀ**—ವಜ್ರಧಾರಿಯೂ । **ದಕ್ಷಿಣಾವಾನ್**—ದಾತವ್ಯವಾದ ಧನವುಳ್ಳವನೂ ಆದ ನೀನು । **ಸುರಭಿಂ**—ಪ್ರಶಸ್ಯವಾದುದೂ । **ಅತ್ಕಂ**—ಸರ್ವದಾ ಸಂಚರಿಸುವುದೂ ಆದ ರೂಪವನ್ನು । **ದೃಶೇ**—ಎಲ್ಲರಿಗೂ ಕಾಣಿಸುವುದಕ್ಕಾಗಿ । **ವಸಾನಃ**—ಧರಿಸಿ ಕೊಂಡು । **ಸ್ವರ್ನ**—ಸೂರ್ಯನಂತೆ । **ಇಷಿರಃ**—ಭ್ರಮಣಾತ್ಮಕನಾಗಿ । **ಬಭೂಥ**—ಆಗಿದ್ದೀಯೆ.

॥ ಭಾವಾರ್ಥ ॥

ಎಲೈ ಇಂದ್ರನೇ, ಭರದ್ವಾಜನು ಐಶ್ವರ್ಯಲಾಭಾರ್ಥವಾಗಿ ನಿನ್ನ ಪಾದಗಳಿಗೆ ಪೂಜೆಯನ್ನು ಅರ್ಪಿಸುತ್ತಾನೆ. ಕರ್ಮಗಳಿಗೆ ನೇತೃವಾದ ಎಲೈ ಇಂದ್ರನೇ, ನಿನ್ನ ಶಕ್ತಿಯಿಂದ ಶತ್ರುಧರ್ಷಕನೂ, ವಜ್ರಧಾರಿಯೂ, ದಾತವ್ಯವಾದ ಧನವುಳ್ಳವನೂ ಆದ ನೀನು, ಪ್ರಶಸ್ಯವಾದುದೂ, ಸರ್ವದಾ ಸಂಚರಿಸುವುದೂ ಆದ ರೂಪವನ್ನು ಎಲ್ಲರಿಗೂ ಕಾಣಿಸುವುದಕ್ಕಾಗಿ ಧರಿಸಿಕೊಂಡು ಸೂರ್ಯನಂತೆ ಭ್ರಮಣಾತ್ಮಕನಾಗಿದ್ದೀಯೆ.

English Translation.

They offer adoration at your feet to acquire prosperity, for you are the overthrower of enemies by (your) strength. the wielder of the thunderbolt, the bestower of donations ; leader (of rites), you are like the rolling sun, wearing in the sight (of all) a graceful and ever-moving form.

॥ ಸಂಹಿತಾಪಾಠಃ ॥

ಸ ಸೋಮ ಆಮಿಶ್ಲತಮಃ ಸುತೋ ಭೂದ್ಯಸ್ಮಿನ್ಪಕ್ತಿಃ ಪಚ್ಯತೇ ಸಂತಿ ಧಾನಾಃ।
ಇಂದ್ರಂ ನರಃ ಸ್ತುವಂತೋ ಬ್ರಹ್ಮಕಾರಾ ಉಕ್ಥಾ ಶಂಸಂತೋ ದೇವವಾ-
ತತಮಾಃ ॥ ೪ ॥

॥ ಪದಪಾಠಃ ॥

**ಸಃ । ಸೋಮಃ । ಆಮಿಶ್ಲಽತಮಃ। ಸುತಃ । ಭೂತ್ । ಯಸ್ಮಿನ್ । ಪಕ್ತಿಃ । ಪಚ್ಯತೇ । ಸಂತಿ । ಧಾನಾಃ।**

**ಇಂದ್ರಂ । ನರಃ । ಸ್ತುವಂತಃ । ಬ್ರಹ್ಮಽಕಾರಾಃ । ಉಕ್ಥಾ । ಶಂಸಂತಃ । ದೇವವಾತಽತಮಾಃ ॥ ೪ ॥**

॥ ಸಾಯಣಭಾಷ್ಯಂ ॥

**ಯಃ ಸೋಮೋ ವಕ್ಷ್ಯತೇ ಸ ಸೋಮಃ ಸುತೋಽಭಿಷುತಃ ಸನ್ ಆಮಿಶ್ಲತಮ ಆಭಿಮುಖ್ಯೇನ ಮಿಶ್ರತಮೋ ಭೂತ್ । ಇಂದ್ರೇಣಾತ್ಯರ್ಥಂ ಸಂಗಚ್ಛತೇ । ಯಸ್ಮಿನ್ ಸೋಮೇಽಭಿಷುತೇ ಸತಿ ಪಕ್ತಿಃ ಪಕ್ತವ್ಯಃ ಪುರೋಡಾಶಾದಿಃ ಪಚ್ಯತೇ । ಭೃಷ್ಟಯವಾ ಧಾನಾಃ । ತಾಶ್ಚ ಸಂತಿ ಹವಿರರ್ಥಂ ಸಂಸ್ಕೃತಾ ಭವಂತಿ । ಯಸ್ಮಿಂಶ್ಚ ಸೋಮೇಽಭಿಷುತೇ ನರೋ ನೇತಾರೋ ಬ್ರಹ್ಮಕಾರಾ ಬ್ರಹ್ಮಣೋಽನ್ನಸ್ಯ ಹವಿರ್ಲಕ್ಷಣಸ್ಯ ಕರ್ತಾರ ಋತ್ವಿಜ ಇಂದ್ರಂ ಸ್ತೋತ್ರೈಃ ಸ್ತುವಂತ ಉಕ್ಥೋಕ್ಥಾನಿ ಶಸ್ತ್ರಾಣಿ ಚ ಶಂಸಂತ ಉಚ್ಚಾರಯಂತೋ ದೇವವಾತತಮಾ ದೇವಾನತಿಶಯೇನೋಪಗತಾ ಭವಂತಿ ಸ ಸೋಮ ಇಂದ್ರೇಣ ಸಂಮಿಶ್ರಿತೋಽಭೂದಿತ್ಯನ್ವಯಃ ॥**

॥ ಪ್ರತಿಪದಾರ್ಥ ॥

**ಯಸ್ಮಿನ್**—ಯಾವ ಸೋಮವು ಹಿಂಡಲ್ಪಟ್ಟಾಗ। **ಪಕ್ತಿಃ**—ಪುರೋಡಾಶವು। **ಪಚ್ಯತೇ**—ಪಕ್ವ ಮಾಡಲ್ಪಡುವುದೋ। **ಧಾನಾಃ**—ಯವಾದಿ ಧ್ಯಾನಗಳು। **ಸಂತಿ**—ಸಂಸ್ಕೃತಗಳಾಗುವುವೋ (ಮತ್ತು ಯಾವ ರಸವನ್ನು ಹಿಂಡಿದಾಗ)। **ನರಃ**—ನೇತೃಗಳೂ। **ಬ್ರಹ್ಮಕಾರಾಃ**—ಸ್ತುತಿಕರ್ತರೂ ಆದ ಋತ್ವಿಕ್ಕುಗಳು। **ಇಂದ್ರಂ**—ಇಂದ್ರನನ್ನು। **ಸ್ತುವಂತಃ**—ಸ್ತುತಿಸುವವರಾಗಿಯೂ। **ಉಕ್ಥಾ**—ಶಸ್ತ್ರಗಳನ್ನು। **ಶಂಸಂತಃ**—ಪಠಿಸುವವರಾಗಿಯೂ। **ದೇವವಾತತಮಾಃ**—ದೇವತೆಗಳ ಸಾನ್ನಿಧ್ಯವನ್ನು ಪಡೆಯುವವರಾಗಿಯೂ ಆಗುವರೋ। **ಸಃ ಸೋಮಃ**—ಅದೇ ಸೋಮರಸವು। **ಸುತಃ**—ಹಿಂಡಲ್ಪಟ್ಟು। **ಆಮಿಶ್ಲತಮಃ ಭೂತ್**—ಇಂದ್ರನನ್ನು ಸೇರಿಕೊಳ್ಳುವುದಾಗಿ ಆಗುತ್ತದೆ.

॥ ಭಾವಾರ್ಥ ॥

ಯಾವ ಸೋಮರಸವು ಹಿಂಡಲ್ಪಟ್ಟಾಗ ಆಹುತ್ಯರ್ಪಣೆಗಾಗಿ ಪುರೋಡಾಶವು ಪಕ್ವಮಾಡಲ್ಪಡುವುದೋ ಯವಾದಿ ಧಾನ್ಯಗಳು ಸಂಸ್ಕೃತಗಳಾಗುವುವೋ, ಮತ್ತು ಯಾವ ರಸವನ್ನು ಹಿಂಡಿದಾಗ ನೇತೃಗಳೂ ಸ್ತುತಿಕರ್ತರೂ ಆದ ಋತ್ವಿಕ್ಕುಗಳು ಇಂದ್ರನನ್ನು ಸ್ತುತಿಸುವವರಾಗಿಯೂ ಶಸ್ತ್ರಗಳನ್ನು ಪಠಿಸುವವರಾಗಿಯೂ ಮತ್ತು ದೇವತೆಗಳ ಸಾನ್ನಿಧ್ಯವನ್ನು ಪಡೆಯುವವರಾಗಿಯೂ ಆಗುವರೋ, ಅದೇ ಸೋಮರಸವು ಹಿಂಡಲ್ಪಟ್ಟು ಇಂದ್ರನನ್ನು ಸೇರಿಕೊಳ್ಳುತ್ತದೆ.

English Translation.

That libation is most perfectly mixed when, upon its being effused, the cakes are baked, and the barley is fried, and the priests, glorifying

Indra, offering the (sacrificial) food, and reciting holy prayers, are approaching most nigh to the gods.

॥ ಸಂಹಿತಾಪಾಠಃ ॥

ನ ತೇ ಅಂತಃ ಶವಸೋ ಧಾಯ್ಯಸ್ಯ ವಿ ತು ಬಾಬಧೇ ರೋದಸೀ ಮಹಿತ್ವಾ।
ಆ ತಾ ಸೂರಿಃ ಪೃಣತಿ ತೂತುಜಾನೋ ಯೂಥೇವಾಪ್ಸು ಸಮೀಜಮಾನ ಊತೀ ॥ ೫ ॥

॥ ಪದಪಾಠಃ ॥

ನ। ತೇ। ಅಂತಃ। ಶವಸಃ। ಧಾಯಿ। ಅಸ್ಯ। ವಿ। ತು। ಬಾಬಧೇ। ರೋದಸೀ ಇತಿ। ಮಹಿಽತ್ವಾ।
ಆ। ತಾ। ಸೂರಿಃ। ಪೃಣತಿ। ತೂತುಜಾನಃ। ಯೂಥಾಽಇವ। ಅಪ್ಽಸು। ಸಂಽಈಜಮಾನಃ।
ಊತೀ ॥ ೫ ॥

॥ ಸಾಯಣಭಾಷ್ಯಂ ॥

ಹೇ ಇಂದ್ರ ತೇ ತವಾಸ್ಯೋಕ್ತಗುಣಸ್ಯ ಶವಸೋ ಬಲಸ್ಯಾಂತೋಽವಸಾನಂ ನ ಧಾಯಿ। ಅತ್ರ ಕೇವಲೋಽಪಿ ದಧಾತಿರವಪೂರ್ವಾರ್ಥೋ ದ್ರಷ್ಟವ್ಯಃ। ನಾವಾಧಾಯಿ। ಅಸ್ಮಾಭಿರ್ನಾಜ್ಞಾಯೀತ್ಯರ್ಥಃ। ಯದ್ಬಲಂ ರೋದಸೀ ದ್ಯಾವಾಪೃಥಿವ್ಯೌ ಮಹಿತ್ವಾ ಮಹತ್ತ್ವೇನ ತು ಕ್ಷಿಪ್ರಂ ವಿ ಬಾಬಧೇ। ಯಸ್ಮಾದ್ಬಲಾದ್ದ್ಯಾವಾಪೃಥಿವ್ಯೌ ಬಿಭೀತ ಇತ್ಯರ್ಥಃ। ತಾ ತದ್ಬಲಂ ಸೂರಿಃ ಸ್ತೋತಾ ತೂತುಜಾನಸ್ತ್ವರಿತಃ ಸನ್ ಊತೀ ಊತ್ಯಾ ತರ್ಪಕೇಣ ಹವಿಷಾ ಸಮೀಜಮಾನಃ ಸಮ್ಯಗ್ಯಜನ್ ಆ ಪೃಣತಿ। ಆಪೂರಯತಿ। ತತ್ರ ದೃಷ್ಟಾಂತಃ। ಯೂಥೇವಾಪ್ಸೂದಕೇಷು ಗವಾಂ ಯೂಥಾನೀವ ಯಥಾ ಗೋಪಾಲೋಽಪಃ ಸಾಯುಯನ್ನದ್ಭಿಸ್ತರ್ಪಯತಿ ತದ್ವತ್ ॥

॥ ಪ್ರತಿಪದಾರ್ಥ ॥

(ಎಲೈ ಇಂದ್ರನೇ) **ತೇ**—ನಿನ್ನ। **ಅಸ್ಯ**—ಪ್ರಸಿದ್ಧವಾದ। **ಶವಸಃ**—ಶಕ್ತಿಯ। **ಅಂತಃ**—ಅವಧಿಯು। **ನ ಧಾಯಿ**—ನಿಷ್ಕರ್ಷಿಸಲ್ಪಟ್ಟಿಲ್ಲ। **ರೋದಸೀ**—ದ್ಯಾವಾಪೃಥಿವಿಗಳು। **ಮಹಿತ್ವಾ**—ನಿನ್ನ ಮಹಾತ್ಮ್ಯದಿಂದ। **ತು**—ಒಡನೆಯೇ। **ವಿ ಬಾಬಧೇ**—ಭೀತಿಗೊಳ್ಳುತ್ತವೆ। **ತಾ**—ನಿನ್ನ ಅದೇ ಶಕ್ತಿಯನ್ನು। **ಸೂರಿಃ**—ಸ್ತೋತೃವು **ತೂತುಜಾನಃ**—ಶ್ರದ್ಧೆಯಿಂದ ಕೂಡಿದವನಾಗಿ। **ಅಪ್ಸು**—ಉದಕಮಧ್ಯದಲ್ಲಿ। **ಯೂಥೇವ** — ಗೋವುಗಳ ಹಿಂಡುಗಳನ್ನು ಉದಕಗಳಿಂದ ತೃಪ್ತಿಪಡಿಸುವಂತೆ। **ಊತೀ**—ತೃಪ್ತಿಕರವಾದ ಹವಿಸ್ಸುಗಳಿಂದ। **ಸಮೀಜಮಾನಃ**—ಯಾಗಮಾಡುತ್ತಾ। **ಆ ಪೃಣಾತಿ**—ನಿನ್ನನ್ನು ತೃಪ್ತಿಗೊಳಿಸುತ್ತಾನೆ।

॥ ಭಾವಾರ್ಥ ॥

ಎಲೈ ಇಂದ್ರನೇ, ನಿನ್ನ ಪ್ರಸಿದ್ಧವಾದ ಶಕ್ತಿಯ ಅವಧಿಯನ್ನು ಯಾರೂ ಅರಿಯಲಾರರು. ದ್ಯಾವಾಪೃಥಿವಿಗಳೂ ಸಹ ನಿನ್ನ ಮಾಹಾತ್ಮ್ಯದಿಂದ ಭೀತಿಗೊಳ್ಳುತ್ತವೆ. ಗೋಪಾಲಕನು ಉದಕಮಧ್ಯದಲ್ಲಿ ಗೋವುಗಳ ಹಿಂಡುಗಳನ್ನು ಉದಕಗಳಿಂದ ತೃಪ್ತಿಪಡಿಸುವಂತೆ, ನಿನ್ನ ಸ್ತೋತೃವು ತೃಪ್ತಿಕಾರಕವಾದ ಹವಿಸ್ಸುಗಳಿಂದ ಯಾಗಮಾಡುತ್ತಾ ನಿನ್ನ ಶಕ್ತಿಗಳನ್ನು ತೃಪ್ತಿಪಡಿಸುತ್ತಾನೆ.

English Translation.

No limit of your strength has been assigned; heaven and earth are intimidated by its greatness: the pious worshipper, hastening (to sacrifice), and earnestly performing worship, gratifies you with the offering, as (the cowkeeper satisfies) the herds with water.

॥ ಸಂಹಿತಾಪಾಠಃ ॥

ಏವೇದಿಂದ್ರಃ ಸುಹವ ಋಷ್ವೋ ಅಸ್ತೂತೀ ಅನೂತೀ ಹಿರಿಶಿಪ್ರಃ ಸತ್ವಾ ॥
ಏವಾ ಹಿ ಜಾತೋ ಅಸಮಾತ್ಯೋಜಾಃ ಪುರೂ ಚ ವೃತ್ರಾ ಹನತಿ ನಿ ದಸ್ಯೂನ್ ॥ ೬ ॥

॥ ಪದಪಾಠಃ ॥

ಏವ । ಇತ್ । ಇಂದ್ರಃ । ಸುಽಹವಃ । ಋಷ್ವಃ । ಅಸ್ತು । ಊತೀ । ಅನೂತೀ । ಹರಿಽಶಿಪ್ರಃ । ಸತ್ವಾ ।
ಏವ । ಹಿ । ಜಾತಃ । ಅಸಮಾತಿಽಓಜಾಃ । ಪುರು । ಚ । ವೃತ್ರಾ । ಹನತಿ । ನಿ । ದಸ್ಯೂನ್ ॥ ೬ ॥

॥ ಸಾಯಣಭಾಷ್ಯಂ ॥

ಏಷ್ವೈವಮುಕ್ತೇನ ಪ್ರಕಾರೇಣ ಋಷ್ವೋ ಮಹಾನಿಂದ್ರಃ ಸುಹವೋಽಸ್ತು ಸುಖೇನಾಹ್ವಾತವ್ಯೋ ಭವತು । ಇದಿತಿ ಪೂರಣಃ । ಹಿರಿಶಿಪ್ರಃ । ಶಿಪ್ರೇ ಹನೂ ನಾಸಿಕೇ ವಾ । ಹರಿತವರ್ಣೇ ಶಿಪ್ರೇ ಯಸ್ಯ ತಾದೃಶ ಇಂದ್ರ ಊತೀ ಊತ್ಯಾಗಮನೇನಾನೂತೀ ಅನೂತ್ಯಾನಾಗಮನೇನ ವಾ :ಸತ್ವಾ ಗಮಯಿತಾ ಭವತಿ ಧನಾನಾಂ । ಸ್ವಯಮಾಗತೋಽನಾಗತೋಽಪಿ ಸ್ತೋತೃಭ್ಯೋ ಧನಂ ಪ್ರಯಚ್ಛತೀತ್ಯರ್ಥಃ। ಏವಾ ಹ್ಯೇವಂ ಹಿ ಜಾತಃ ಪ್ರಾದುರ್ಭೂತೋಽಯಮಿಂದ್ರೋಽಸಮಾತ್ಯೋಜಾ ಅಸಮಾತ್ಯಸಮಾನಮನುಪ-ಮಮುತ್ಕೃಷ್ಟತರಮೋಜೋ ಬಲಂ ಯಸ್ಯ ತಾದೃಶಃ ಸನ್ ಪುರು ಪುರೂಣಿ ಬಹೂನಿ ಚ ವೃತ್ರಾ ವೃತ್ರಾಣ್ಯಾವರಕಾಣಿ ರಕ್ಷಃಪ್ರಭೃತೀನಿ ಹನತಿ । ಹಿನಸ್ತು । ತಥಾ ದಸ್ಯೂನುಪಕ್ಷಪಯಿತ್ರ್ಯಾನ್ ಶತ್ರೂಂಶ್ಚ ನಿ ಹಂತು ॥

॥ ಪ್ರತಿಪದಾರ್ಥ ॥

**ಏವ**—ಈ ಪ್ರಕಾರವಾಗಿ । **ಋಷ್ವಃ**—ಮಹಾತ್ಮನಾದ । **ಇಂದ್ರಃ**—ಇಂದ್ರನು । **ಸುಹವಃ**—ನಮ್ಮ ಆಹ್ವಾನಕ್ಕೆ ಸುಮುಖನಾಗಿ । **ಅಸ್ತು**—ಆಗಿರಲಿ । **ಹರಿಶಿಪ್ರಃ**—ನೀಲವರ್ಣದ ಕೆನ್ನೆಯುಳ್ಳ ಇಂದ್ರನು । **ಊತೀ**—ತನ್ನ ಆಗಮನದಿಂದಾಗಲಿ । **ಅನೂತೀ**—ಆಗಮನವಿಲ್ಲದೆಯಾಗಲಿ । **ಸತ್ವಾ**—ಧನದಾತೃವಾಗಲಿ । **ಏವಾ ಹಿ**—ಇದೇ ರೀತಿಯಲ್ಲಿ । **ಜಾತಃ**—ಉತ್ಪನ್ನನಾದ ಇಂದ್ರನು । **ಅಸಮಾತ್ಯೋಜಾಃ**—ಅತ್ಯುತ್ಕೃಷ್ಟವಾದ ಬಲವುಳ್ಳವನಾಗಿ । **ಪುರು**—ಅತ್ಯಧಿಕವಾದ । **ವೃತ್ರಾ**—ಅಸುರರನ್ನು । **ಹನತಿ**—ನಾಶಪಡಿಸಲಿ । **ದಸ್ಯೂನ್**—ಹಿಂಸಕರನ್ನೂ । **ನಿ (ಹಂತು)**—ನಾಶಪಡಿಸಲಿ ।

॥ ಭಾವಾರ್ಥ ॥

ಮಹಾತ್ಮನಾದ ಇಂದ್ರನು ನಮ್ಮ ಆಹ್ವಾನಕ್ಕೆ ಸುಮುಖನಾಗಿ ಅದನ್ನು ಮನ್ನಿಸಲಿ. ನೀಲವರ್ಣದ ಕೆನ್ನೆಯುಳ್ಳ ಇಂದ್ರನು ತನ್ನ ಆಗಮನದಿಂದಾಗಲಿ ಅಥವಾ ಆಗಮನವಿಲ್ಲದೆಯಾಗಲಿ ನಮಗೆ ಧನದಾತೃವಾಗಲಿ. ಇದೇ ರೀತಿಯಲ್ಲಿ ಪ್ರಾದುರ್ಭೂತನಾದ ಇಂದ್ರನು ಅತ್ಯುತ್ಕೃಷ್ಟವಾದ ಬಲವುಳ್ಳವನಾಗಿ ಅತ್ಯಧಿಕಸಂಖ್ಯೆಯುಳ್ಳ ಅಸುರರನ್ನು ನಾಶಪಡಿಸಲಿ.

English Translation.

Thus may the mighty Indra be successfnlly invoked; he, the azure-chinned, the giver of wealth, whether by coming or not coming (to the sacrifice); and may he who is of unequalled strength destroy, as soon as manifested, many opposing (evil spirits) and (hostile) Dasyus.



# ಮೂವತ್ತನೆಯ ಸೂಕ್ತವು

॥ ಸಾಯಣಭಾಷ್ಯಂ ॥

**ಭೂಯ ಇದಿತಿ ಪಂಚರ್ಚಂ ಸಪ್ತಮಂ ಸೂಕ್ತಂ ಭರದ್ವಾಜಸ್ಯಾರ್ಷಂ ತ್ರೈಷ್ಟುಭಮೈಂದ್ರಂ । ಭೂಯಃ ಪಂಚೇತ್ಯನುಕ್ರಾಂತಂ ॥ ಅಗ್ನಿಷ್ಟೋಮೇ ಮಾಧ್ಯಂದಿನಸವನೇಽಚ್ಛಾವಾಕಶಸ್ತ್ರ ಏತತ್ಸೂಕ್ತಂ ಶಂಸನೀಯಂ । ಸೂತ್ರಿತಂ ಚ । ಉದಿನ್ನ್ವಸ್ಯ ರಿಚ್ಯತೇ ಭೂಯ ಇತ್ । ಆ. ೫-೧೬ । ಇತಿ ॥ ಮಹಾವ್ರತೇಽಪಿ ನಿಷ್ಕೇವಲ್ಯ ಏತತ್ಸೂಕ್ತಂ । ತಥೈವ ಪಂಚಮಾರಣ್ಯಕೇ ಸೂತ್ರಿತಂ । ಭೂಯ ಇದ್ವಾವೃಧೇ ವೀರ್ಯಾಯ ನೃಣಾಮು ತ್ವಾ । ಐ. ಆ. ೫-೧-೬ । ಇತಿ ॥**

ಅನುವಾದವು—**ಭೂಯ ಇತ್** ಎಂಬ ಈ ಸೂಕ್ತವು ಮೂರನೆಯ ಅನುವಾಕದಲ್ಲಿ ಏಳನೆಯ ಸೂಕ್ತವು. ಇದರಲ್ಲಿ ಐದು ಋಕ್ಕುಗಳಿರುವವು. ಈ ಸೂಕ್ತಕ್ಕೆ ಭರದ್ವಾಜನು ಋಷಿಯು; ಇಂದ್ರನು ದೇವತೆಯು; ತ್ರಿಷ್ಟುಪ್ ಛಂದಸ್ಸು. ಅನುಕ್ರಮಣಿಕೆಯಲ್ಲಿ – **ಭೂಯಃ ಪಂಚ** ಎಂದು ಹೇಳಿರುವುದು. ಅಗ್ನಿಷ್ಟೋಮಯಾಗದಲ್ಲಿ ಮಾಧ್ಯಂದಿನ

ಸವನಕಾಲದಲ್ಲಿ ಅಚ್ಛಾವಾಕನೆಂಬ ಋತ್ವಿಜನು ಪಠಿಸಬೇಕಾದ ಶಸ್ತ್ರಮಂತ್ರಗಳಿಗಾಗಿ ಈ ಸೂಕ್ತದ ವಿನಿಯೋಗ ವಿರುವುದೆಂದು ಆಶ್ವಲಾಯನಶ್ರೌತಸೂತ್ರದ—**ಉದಿನ್ನ್ವಸ್ಯ ರಿಚ್ಯತೇ ಭೂಯ ಇತ್** ಎಂಬ ಸೂತ್ರದಿಂದ (ಆ. ೫-೧೬) ವಿವೃತವಾಗಿರುವುದು. ಮಹಾವ್ರತವೆಂಬ ಇಷ್ಟಿಯಲ್ಲಿಯೂ ಸಹ ನಿಷ್ಕೇವಲ್ಯಶಸ್ತ್ರಮಂತ್ರಗಳಿಗಾಗಿ ಈ ಸೂಕ್ತದ ವಿನಿಯೋಗವಿರುವುದೆಂದು ಐತರೇಯಾರಣ್ಯಕದ ಪಂಚಮಾರಣ್ಯಕದಲ್ಲಿ—**ಭೂಯ ಇದ್ವಾವೃಧೇ ವೀರ್ಯಾಯ ನೃಣಾಮು ತ್ವಾ** ಎಂಬ ವಾಕ್ಯದಿಂದ (ಐ ಆ. ೫-೧-೬) ನಿರ್ದೇಶಿಸಲ್ಪಟ್ಟಿರುವುದು.

## ಸೂಕ್ತ—೩೦

ಮಂಡಲ—೬ ॥ ಅನುವಾಕ—೩ ॥ ಸೂಕ್ತ—೩೦ ॥
ಅಷ್ಟಕ—೪ ॥ ಅಧ್ಯಾಯ—೭ ॥ ವರ್ಗ—೨ ॥

॥ ಸೂಕ್ತದಲ್ಲಿರುವ ಋಕ್ಸಂಖ್ಯೆ—೫ ॥
॥ ಋಷಿಃ—ಭರದ್ವಾಜೋ ಬಾರ್ಹಸ್ಪತ್ಯಃ ॥
॥ ದೇವತಾ—ಇಂದ್ರಃ ॥
॥ ಛಂದಃ—ತ್ರಿಷ್ಟುಪ್ ॥

॥ ಸಂಹಿತಾಪಾಠಃ ॥

ಭೂಯ ಇದ್ವಾವೃಧೇ ವೀರ್ಯಾಯ ಏಕೋ ಅಜುರ್ಯೋ ದಯತೇ ವಸೂನಿ ।
ಪ್ರ ರಿರಿಚೇ ದಿವ ಇಂದ್ರಃ ಪೃಥಿವ್ಯಾ ಅರ್ಧಮಿದಸ್ಯ ಪ್ರತಿ ರೋದಸೀ ಉಭೇ ॥

॥ ಪದಪಾಠಃ ॥

ಭೂಯಃ । ಇತ್ । ವವೃಧೇ । ವೀರ್ಯಾಯ । ಏಕಃ । ಅಜುರ್ಯಃ । ದಯತೇ । ವಸೂನಿ ।
ಪ್ರ । ರಿರಿಚೇ । ದಿವಃ । ಇಂದ್ರಃ । ಪೃಥಿವ್ಯಾಃ । ಅರ್ಧಂ । ಇತ್ । ಅಸ್ಯ । ಪ್ರತಿ । ರೋದಸೀ ಇತಿ । ಉಭೇ ಇತಿ ॥ ೧ ॥

॥ ಸಾಯಣಭಾಷ್ಯಂ ॥

ಅಯಮಿಂದ್ರೋ ಭೂಯ ಇದ್ಬಹುತರಮೇವ ವಾವೃಧೇ । ಪ್ರವೃದ್ಧೋಽಭೂತ್ । ಕಿಮರ್ಥಂ । ವೀರ್ಯಾಯ ವೀರಕರ್ಮಾಣಿ ವೃತ್ರವಧಾದೀನಿ ಕರ್ತುಂ । ಏಕೋ ಮುಖ್ಯೋಽಜುರ್ಯೋ ಜರಯಿತುಮಶಕ್ಯಃ ಸ ಚೇಂದ್ರೋ ವಸೂನಿ ಧನಾನಿ ದಯತೇ । ಸ್ತೋತೃಭ್ಯೋ ದದಾತಿ । ತಥಾ ದಿವೋ ದ್ಯುಲೋಕಾತ್ ಪೃಥಿವ್ಯಾ ಭೂಮೇಶ್ಚಾಯಮಿಂದ್ರಃ ಪ್ರ ರಿರಿಚೇ । ಅತಿರಿಚ್ಯತೇ । ಕಿಂಚಾಸ್ಯೇಂದ್ರ-

ಸ್ಯೋಭೇ ರೋದಸೀ ದ್ಯಾವಾಪೃಥಿವ್ಯಾವರ್ಧಮಿದರ್ಧಮೇವ ಪ್ರತಿ । ಅಸ್ಯೇಂದ್ರಸ್ಯಾರ್ಧೋಽ ಭಾಗೋ ದ್ಯಾವಾಪೃಥಿವ್ಯೋಃ ಪ್ರತಿನಿಧಿರ್ಭವತೀತ್ಯರ್ಥಃ ॥

॥ ಪ್ರತಿಪದಾರ್ಥ ॥

**ಇಂದ್ರ**—ಇಂದ್ರನು । **ಭೂಯ ಇತ್**—ಪುನಃ ಪುನಃ । **ವೀರ್ಯಾಯ**—ತನ್ನ ವೀರ್ಯಕರ್ಮಗಳನ್ನು ನೆರವೇರಿಸಲು । **ವಾವೃಧೇ**—ವೃದ್ಧಿಯನ್ನು ಹೊಂದಿದ್ದಾನೆ । **ಏಕಃ**—ಮುಖ್ಯನೂ । **ಅಜುರ್ಯಃ**—ಜರಾರಹಿತನೂ ಆದ । **ಇಂದ್ರಃ**—ಇಂದ್ರನು । **ವಸೂನಿ**—ಧನಗಳನ್ನು । **ದಯತೇ**—ದಾನಮಾಡುತ್ತಾನೆ । **ದಿವಃ**—ದ್ಯುಲೋಕಕ್ಕಿಂತಲೂ । **ಪೃಥಿವ್ಯಾಃ**—ಭೂಮಿಗಿಂತಲೂ । **ಪ್ರ ರಿರಿಚೇ**—ಅತಿಕ್ರಮಿಸಿ ಬೆಳೆದಿದ್ದಾನೆ । **ಉಭೇ ರೋದಸೀ**—ದ್ಯಾವಾಪೃಥಿವಿಗಳೆರಡೂ । **ಅಸ್ಯ**—ಈ ಇಂದ್ರನಿಗೆ । **ಅರ್ಧಮಿತ್ ಪ್ರತಿ**—ಮಾಹಾತ್ಮ್ಯದಲ್ಲಿ ಅರ್ಧಭಾಗದಷ್ಟು ಮಾತ್ರವಿದೆ.

॥ ಭಾವಾರ್ಥ ॥

ಇಂದ್ರನು ಪುನಃ ಪುನಃ ತನ್ನ ವೀರ್ಯಕರ್ಮಗಳನ್ನು ನೆರವೇರಿಸಲು ವೃದ್ಧಿಯನ್ನು ಹೊಂದಿದ್ದಾನೆ. ಮುಖ್ಯನೂ ಜರಾರಹಿತನೂ ಆದ ಇಂದ್ರನು ಧನಗಳನ್ನು ದಾನಮಾಡುತ್ತಾನೆ. ಇವನು ದ್ಯುಲೋಕ ಮತ್ತು ಭೂಲೋಕಗಳನ್ನೂ ಮೀರಿ ಬೆಳೆದಿದ್ದಾನೆ. ದ್ಯಾವಾಪೃಥಿವಿಗಳೆರಡೂ ಈ ಇಂದ್ರನಿಗೆ ಮಹಿಮೆಯಲ್ಲಿ ಅರ್ಧಭಾಗದಷ್ಟು ಮಾತ್ರವಿದೆ.

## English Translation.

Again has Indra increased (in strength) for (the display of) heroism: he, the chief (of all), the undecayable, bestows riches (on his votaries); Indra surpasses heaven and earth: a mere portion of him is equal to both earth and heaven.

॥ ಸಂಹಿತಾಪಾಠಃ ॥

ಅಧಾ ಮನ್ಯೇ ಬೃಹದಸುರ್ಯಮಸ್ಯ ಯಾನಿ ದಾಧಾರ ನಕಿರಾ ಮಿನಾತಿ ।
ದಿವೇದಿವೇ ಸೂರ್ಯೋ ದರ್ಶತೋ ಭೂದ್ವಿ ಸದ್ಮಾನ್ಯುರ್ವಿಯಾ ಸುಕ್ರತು-
ರ್ಧಾತ್ ॥ ೨ ॥

॥ ಪದಪಾಠಃ ॥

ಅಧ । ಮನ್ಯೇ । ಬೃಹತ್ । ಅಸುರ್ಯಂ । ಅಸ್ಯ । ಯಾನಿ । ದಾಧಾರ । ನಕಿಃ । ಆ । ಮಿನಾತಿ ।
ದಿವೇऽದಿವೇ । ಸೂರ್ಯಃ । ದರ್ಶತಃ । ಭೂತ್ । ವಿ । ಸದ್ಮಾನಿ । ಉರ್ವಿಯಾ । ಸುಽಕ್ರತುಃ । ಧಾತ್ ॥೨॥

॥ ಸಾಯಣಭಾಷ್ಯಂ ॥

ಅಥಾಧುನಾಸ್ಯೇಂದ್ರಸ್ಯ ಬೃಹನ್ಮಹದಸುರ್ಯಮಸುರಹನನಕುಶಲಂ ಬಲಂ ಮನ್ಯೇ। ಸ್ತೌಮಿ॥ ಮನ್ಯತಿಃ ಸ್ತುತಿಕರ್ಮಾ॥ ಸ ಚೇಂದ್ರೋ ಯಾನಿ ಕರ್ಮಾಣಿ ದಾಧಾರ ಧಾರಯತಿ ತಾನಿ ನಕಿರಾ ಮಿನಾತಿ। ನ ಕಶ್ಚಿದಪಿ ಹಿನಸ್ತಿ। ಕಾನಿ ಪುನಸ್ತಾನಿ। ಉಚ್ಯತೇ। ದಿವೇ ದಿವೇ ಪ್ರತಿದಿನಂ ವೃತ್ರೇಣಾವೃತಃ ಸೂರ್ಯೋ ದರ್ಶತೋ ದರ್ಶನೀಯೋ ಭೂತ್। ಭವತಿ। ಆವರಕಸ್ಯಾಸುರಸ್ಯ ವಧೇನ ಸೂರ್ಯಂ ಪ್ರಕಾಶಿತವಾನಿತ್ಯೇಕಂ ಕರ್ಮ। ಸುಕ್ರತುಃ ಶೋಭನಕರ್ಮಾ ಸ ಇಂದ್ರಃ ಸದ್ಮಾನಿ ಭುವನಾನ್ಯುರ್ವಿಯೋರೂಣಿ ವಿಸ್ತೀರ್ಣಾನಿ ವಿ ಧಾತ್। ವ್ಯಧಾತ್। ಅಕಾರ್ಷೀತ್। ಇದಮಪರಂ ಕರ್ಮ। ಏತದಾದೀನಿ ಬಹೂನಿ ಕರ್ಮಾಣಿ ಕೃತವಾನಿತ್ಯರ್ಥಃ॥

॥ ಪ್ರತಿಪದಾರ್ಥ ॥

**ಅಥ**—ಈಗ । **ಅಸ್ಯ**—ಇಂದ್ರನ । **ಬೃಹತ್**— ಮಹತ್ತಾದ । **ಅಸುರ್ಯಂ**— ಶತ್ರುನಾಶಕವಾದ ಶಕ್ತಿಯನ್ನು । **ಮನ್ಯೇ**—ಸ್ತುತಿಸುತ್ತೇನೆ । (**ಇಂದ್ರಃ**—ಇಂದ್ರನು) । **ಯಾನಿ**—ಯಾವ ಕಾರ್ಯಗಳನ್ನು । **ದಾಧಾರ**—ಧರಿಸಿರುವನೋ (ಅವುಗಳನ್ನು) । **ನಕಿಃ**—ಯಾರೂ ಕೂಡ । **ಆ ಮಿನಾತಿ**—ಹಿಂಸಿಸಲಾರರು । **ದಿವೇದಿವೇ**—ಪ್ರತಿದಿನವೂ । **ಸೂರ್ಯಃ**—ಸೂರ್ಯನು । **ದರ್ಶತಃ ಭೂತ್**—(ಇಂದ್ರನ ಅನುಗ್ರಹದಿಂದಲೇ) ಎಲ್ಲರಿಗೂ ಗೋಚರನಾಗುತ್ತಾನೆ । **ಸುಕ್ರತುಃ**—ಶ್ರೇಷ್ಠವಾದ ಕರ್ಮಕರ್ತನಾದ ಇಂದ್ರನು । **ಸದ್ಮಾನಿ**—ಸಕಲ ಲೋಕಗಳನ್ನೂ । **ಉರ್ವಿಯಾ**—ವಿಸ್ತೃತವಾದವನ್ನಾಗಿ । **ವಿ ಧಾತ್**—ಮಾಡಿದ್ದಾನೆ.

॥ ಭಾವಾರ್ಥ ॥

ಇಂದ್ರನ ಮಹತ್ತಾದುದೂ, ಶತ್ರುನಾಶಕವೂ ಆದ ಶಕ್ತಿಯನ್ನು ಈಗ ಸ್ತುತಿಸುತ್ತೇನೆ. ಇಂದ್ರನ ಕರ್ಮಗಳನ್ನು ಯಾರೂ ಹಿಂಸಿಸಲಾರರು. ಈ ಇಂದ್ರನ ಅನುಗ್ರಹದಿಂದಲೇ ಪ್ರತಿದಿನವೂ ಸೂರ್ಯನು ಎಲ್ಲರಿಗೂ ಗೋಚರನಾಗುತ್ತಾನೆ. ಶ್ರೇಷ್ಠವಾದ ಕರ್ಮಕರ್ತನಾದ ಇಂದ್ರನು ಸಕಲ ಲೋಕಗಳನ್ನೂ ವಿಸ್ತೃತವಾದವನ್ನಾಗಿ ಮಾಡಿದ್ದಾನೆ.

English Translation.

I now glorify his vast and Asura-destroying (vigour): those exploits that he has determined (to achieve) no one can resist: (by him) the sun was made daily visible; and he, the doer of great deeds, spread out the spacious regions (of the universe).

॥ ಸಂಹಿತಾಪಾಠ ॥

ಅದ್ಯಾ ಚಿನ್ನೂ ಚಿತ್ತದಪೋ ನದೀನಾಂ ಯದಾಭ್ಯೋ ಅರದೋ ಗಾತು-
ಮಿಂದ್ರ ।
ನಿ ಪರ್ವತಾ ಅದ್ಮ ಸದೋ ನ ಸೇದುಸ್ತ್ವಯಾ ದೃಳ್ಹಾನಿ ಸುಕ್ರತೋ ರಜಾಂಸಿ॥

॥ ಪದಪಾಠಃ ॥

ಅದ್ಯ । ಚಿತ್ । ನು । ಚಿತ್ । ತತ್ । ಅಪಃ । ನದೀನಾಂ । ಯತ್ । ಆಭ್ಯಃ । ಅರದಃ । ಗಾತುಂ । ಇಂದ್ರ ।

ನಿ । ಪರ್ವತಾಃ । ಅದ್ಮಸದಃ । ನ । ಸೇದುಃ । ತ್ವಯಾ । ದೃಳ್ಹಾನಿ । ಸುಕ್ರತೋ ಇತಿ ಸುಕ್ರತೋ । ರಜಾಂಸಿ ॥ ೩ ॥

॥ ಸಾಯಣಭಾಷ್ಯಂ ॥

ಹೇ ಇಂದ್ರ ಅದ್ಯಾ ಚಿದದ್ಯಾಪಿ ನೂ ಚಿತ್ಪುರಾಪಿ ತವ ನದೀನಾಂ ಸಂಬಂಧಿಕಂ ತದಪಃ ಕರ್ಮ ವರ್ತತೇ । ಆಭ್ಯೋ ನದೀಭ್ಯೋ ಗಾತುಂ ಮಾರ್ಗಮರದಃ ಪ್ರವಹನಾರ್ಥಂ ವ್ಯಲಿಖ ಇತಿ ಯತ್ಕರ್ಮ ತತ್ಸರ್ವದಾನುಪಕ್ಷೀಣಂ ಸದ್ವರ್ತತ ಇತ್ಯರ್ಥಃ । ಅಪಿ ಚ ತ್ವದಾಜ್ಞಯಾ ಪರ್ವತಾ ಗಿರಯೋ ನಿ ಷೇದುಃ । ನಿಷಣ್ಣಾಃ । ಉತ್ಪತನಂ ಪರಿತ್ಯಜ್ಯ ಕ್ವಚಿದೇವ ಸ್ಥಾನೇ ನೈಶ್ಚಲ್ಯೇನೋಪವಿಷ್ಟಾ ಬಭೂವುಃ । ಅದ್ಮಸದೋ ನ । ಅದ್ಮಾದನೀಯಮನ್ನಂ । ತದರ್ಥಂ ಸೀದಂತಃ ಪುರುಷಾ ಇವ । ಯಥಾ ತೇ ಭೋಜನಾರ್ಥಂ ನೈಶ್ಚಲ್ಯೇನಾಸತೇ ತಥೇತ್ಯರ್ಥಃ । ಅತಃ ಕಾರಣಾತ್ ಹೇ ಸುಕ್ರತೋ ಶೋಭನಕರ್ಮನ್ನಿಂದ್ರ ತ್ವಯಾ ರಜಾಂಸಿ ಸರ್ವೇ ಲೋಕಾ ದೃಳ್ಹಾನಿ ದೃಂಹಿತಾನಿ ಸ್ಥಿರೀಕೃತಾ ಆಸನ್ ॥

॥ ಪ್ರತಿಪದಾರ್ಥ ॥

**ಇಂದ್ರ**—ಎಲೈ ಇಂದ್ರನೇ । **ಆಭ್ಯಃ**—ನದಿಗಳಿಗೆ । **ಗಾತುಂ**—ಪ್ರವಹಿಸಲು । **ಅರದಃ**—ಮಾರ್ಗವನ್ನು ಕಲ್ಪಿಸಿದೆಯೆಂಬ । **ಯತ್**—ಯಾವ ಕರ್ಮವುಂಟೋ ಅಂತಹ । **ನದೀನಾಂ**—ನದಿಗಳಿಗೆ ಸಂಬಂಧಿಸಿದ । **ತದಪಃ**—ಆ ನಿನ್ನ ಕರ್ಮಗಳು । **ಅದ್ಯಾ ಚಿತ್**—ಈಗಿರುವಂತೆಯೇ । **ನೂ ಚಿತ್**—ಹಿಂದೆಯೂ ಪ್ರಸಿದ್ಧವಾಗಿದ್ದಿತು । **ಅದ್ಮಸದೋ ನ**—ಅನ್ನವನ್ನು ಭುಜಿಸಲು ನಿಶ್ಚಲರಾಗಿ ಕುಳಿತಿರುವ ಮಾನವರಂತೆ । **ಪರ್ವತಾಃ**—ಪರ್ವತಗಳು । **ನಿ ಷೇದುಃ**—ಅಚಲವಾಗಿ ನಿಂತಿವೆ । **ಸುಕ್ರತೋ**—ಶ್ರೇಷ್ಠವಾದ ಕರ್ಮ ಕರ್ತನಾದ ಎಲೈ ಇಂದ್ರನೇ । **ತ್ವಯಾ**—ನಿನ್ನಿಂದಲೇ । **ರಜಾಂಸಿ**—ಲೋಕಗಳೆಲ್ಲವೂ । **ದೃಳ್ಹಾನಿ**—ಸ್ಥಿರವಾಗಿ ನಿಲ್ಲಿಸಲ್ಪಟ್ಟಿವೆ.

॥ ಭಾವಾರ್ಥ ॥

ಎಲೈ ಇಂದ್ರನೇ, ನದಿಗಳಿಗೆ ಪ್ರವಹಿಸಲು ಮಾರ್ಗವನ್ನು ಕಲ್ಪಿಸಿದೆಯೆಂಬ ಯಾವ ಕರ್ಮವುಂಟೋ ಅಂತಹ ನದಿಗಳಿಗೆ ಸಂಬಂಧಿಸಿದ ನಿನ್ನ ಆ ಕರ್ಮಗಳು ಈಗಿರುವಂತೆಯೇ ಹಿಂದೆಯೂ ಪ್ರಸಿದ್ಧವಾಗಿದ್ದಿತು. ಅನ್ನವನ್ನು ಭುಜಿಸಲು ನಿಶ್ಚಲರಾಗಿ ಕುಳಿತಿರುವ ಮಾನವರಂತೆ ಪರ್ವತಗಳು ಅಚಲವಾಗಿ ನಿಂತಿವೆ. ಶ್ರೇಷ್ಠವಾದ ಕರ್ಮಕರ್ತನಾದ ಎಲೈ ಇಂದ್ರನೇ, ನಿನ್ನಿಂದಲೇ ಲೋಕಗಳೆಲ್ಲವೂ ಸ್ಥಿರವಾಗಿ ನಿಲ್ಲಿಸಲ್ಪಟ್ಟಿವೆ.

## English Translation.

At present, verily as of old, that act, (the liberation) of the rivers, is effective; whereby you have directed them on their course : the mountains

have settled (at your command) like (men) seated at their meals: doer of great deeds, by you, have the worlds been rendered stationary.

|| ವಿಶೇಷವಿಷಯಗಳು ||

**ನೂ ಚಿತ್—** ನೂ ಚಿತ್ ಎಂಬ ನಿಪಾತವು ಹೊಸದು ಮತ್ತು ಹಿಂದಿನದು ಎಂಬ ವಿಷಯವನ್ನು ಸೂಚಿಸುವಾಗ ಉಪಯೋಗಿಸಲ್ಪಡುವುದು. ಯಾಸ್ಕರು ಈ ವಿಷಯದಲ್ಲಿ—

**ನೂಚಿದಿತಿ ನಿಪಾತಃ ಪುರಾಣನವಯೋರ್ನೂಚೇತಿ ಚ । ಅದ್ಯಾಚಿನ್ನೂಚಿತ್ತದಪೋ ನದೀನಾಂ । ಅದ್ಯ ಚ ಪುರಾ ಚ ತದೇವ ಕರ್ಮ ನದೀನಾಂ । ನೂ ಚ ಪುರಾ ಚ ಸದನಂ ರಯೀಣಾಂ ರಯಿರಿತಿ ಧನನಾಮ ರಾತೇರ್ದಾನಕರ್ಮಣಃ ॥**

(ನಿ. ೪–೧೭)

ಎಂದು ನಿರ್ವಚನವನ್ನು ಹೇಳಿದಾರೆ. ಎಂದರೆ—ನೂಚಿತ್ ಎಂಬ ನಿಪಾತಕ್ಕೆ ಹೊಸದು ಮತ್ತು ಹಳೆಯದು ಎಂಬರ್ಥದಲ್ಲಿ ಪ್ರಯೋಗವಿರುವುದೆಂದು ಹೇಳಿ ಪ್ರಕೃತ ಋಕ್ಕಿನಲ್ಲಿರುವ **ಅದ್ಯಾಚಿನ್ನುಚಿತ್ತದಪೋ ನದೀನಾಂ** (ಋ.ಸಂ. ೬–೩೦–೩) ಎಂಬ ವಾಕ್ಯವನ್ನೇ ಉದಾಹರಣೆಯಾಗಿ ಕೊಟ್ಟಿರುವರು. ನದಿಯ ಕರ್ಮವು ಎಂದರೆ, ಪ್ರವಹಿಸುವ ಕರ್ಮವು ಪೂರ್ವಕಾಲದಲ್ಲಿಯೂ ಈಗಲೂ ಒಂದೇವಿಧವಾಗಿರುವುದು. ಎಂದರೆ, ಪೂರ್ವಕಾಲದಲ್ಲಿ ನದಿಯು ಯಾವ ರೀತಿ ಪ್ರವಹಿಸುತ್ತಿದ್ದಿತೋ ಈಗಲೂ ಹಾಗೆಯೇ ಪ್ರವಹಿಸುತ್ತಿರುವುದು ಎಂದಭಿಪ್ರಾಯವು. ಮತ್ತು **ನೂ ಚ** ಎಂಬ ಶಬ್ದಗಳೂ ಸಹ ಇದೇ ಅರ್ಥದಲ್ಲಿ ಪ್ರಯುಕ್ತವಾಗಿರುವುದೆಂದು ಹೇಳಿ ಅದಕ್ಕಾಗಿ—

**ನೂ ಚ ಪುರಾ ಚ ಸದನಂ ರಯೀಣಾಂ ಜಾತಸ್ಯ ಚ ಜಾಯಮಾನಸ್ಯ ಚ ಕ್ಷಾಮಂ ।**
**ಸತಶ್ಚ ಗೋಪಾ ಭವತಶ್ಚ ಭೂರೇರ್ದೇವಾ ಅಗ್ನಿಂ ಧಾರಯನ್ ದ್ರವಿಣೋದಾಂ ॥**

(ಋ. ಸಂ. ೧–೯೬–೭)

ಈ ಋಕ್ಕಿನಲ್ಲಿ ಪ್ರಥಮ ಪಾದದಲ್ಲಿ **ನೂ ಚ** ಎಂಬ ಶಬ್ದಗಳ ಪ್ರಯೋಗವಿದೆ. ದ್ರವಿಣೋದನಾಮಕನಾದ ಎಲೈ ಅಗ್ನಿಯೇ, ನೀನು ಪೂರ್ವಕಾಲದಲ್ಲಿಯೂ(ಹಿಂದೆಯೂ) ಈಗಲೂ ಧನಕ್ಕೆ ಆಶ್ರಯಸ್ಥಾನನಾಗಿರುವೆ ಎಂದಭಿಪ್ರಾಯವು.

|| ಸಂಹಿತಾಪಾಠಃ ||

ಸತ್ಯಮಿತ್ತನ್ನ ತ್ವಾವಾँ ಅನ್ಯೋ ಅಸ್ತೀಂದ್ರ ದೇವೋ ನ ಮರ್ತ್ಯೋ ಜ್ಯಾಯಾನ್ ।
ಅಹನ್ನಹಿಂ ಪರಿಶಯಾನಮರ್ಣೋಽವಾಸೃಜೋ ಅಪೋ ಅಚ್ಛಾ ಸಮುದ್ರಂ ॥

|| ಪದಪಾಠಃ ||

ಸತ್ಯಂ । ಇತ್ । ತತ್ । ನ । ತ್ವಾऽವಾನ್ । ಅನ್ಯಃ । ಅಸ್ತಿ । ಇಂದ್ರ । ದೇವಃ । ನ । ಮರ್ತ್ಯಃ ।
ಜ್ಯಾಯಾನ್ ।
ಅಹನ್ । ಅಹಿಂ । ಪರಿऽಶಯಾನಂ । ಅರ್ಣಃ । ಅವ । ಅಸೃಜಃ । ಅಪಃ । ಅಚ್ಛ । ಸಮುದ್ರಂ || ೪ ||

॥ ಸಾಯಣಭಾಷ್ಯಂ ॥

ಹೇ ಇಂದ್ರ ವಕ್ಷ್ಯಮಾಣಂ ತತ್ಸತ್ಯಮಿತ್ಸತ್ಯಮೇವ ನಾನೃತಂ । ತ್ವಾವಾನ್ ತ್ವತ್ಸದೃಶೋऽನ್ಯೋ ದೇವೋ ನಾಸ್ತಿ । ತ್ವತ್ಸದೃಶೋऽನ್ಯೋ ಮರ್ತ್ಯೋ ಮನುಷ್ಯೋऽಪಿ ನೈವ ವಿದ್ಯತೇ । ಜ್ಯಾಯಾನಧಿಕೋऽಪಿ ದೇವೋ ಮನುಷ್ಯೋ ವಾ ನ ಖಲ್ವಸ್ತಿ । ಇತಿ ಯದ್ಗೀಯತೇ ತತ್ಸತ್ಯಮೇವೇತ್ಯರ್ಥಃ । ಅಪಿ ಚ ತ್ವಮರ್ಣ ಉದಕಂ ಪರಿಶಯಾನಂ ಪರಿವೃತ್ಯ ಶಯಾನಮಹಿಂ ಮೇಘಮಹನ್ । ಅವಧೀಃ । ಹತ್ವಾ ಚ ಸಮುದ್ರಮಂತರಿಕ್ಷಂ ಜಲಧಿಂ ವಾಚ್ಛಾಭಿಮುಖ್ಯೇನಾಪ ಉದಕಾನ್ಯವಾಸೃಜಃ । ಅವಾಙ್ಮುಖತಯಾ ವಿಸೃಷ್ಟವಾನಸೀತ್ಯರ್ಥಃ ॥

॥ ಪ್ರತಿಪದಾರ್ಥ ॥

**ಇಂದ್ರ**—ಎಲೈ ಇಂದ್ರನೇ । **ತ್ವಾವಾನ್**—ನಿನಗೆ ಸಮಾನನಾದ । **ಅನ್ಯಃ**—ಬೇರೆ । **ದೇವಃ**—ದೇವನು । **ನ ಅಸ್ತಿ**—ಇಲ್ಲವು । **ಮರ್ತ್ಯಃ**—ಮಾನವನೂ । **ನ**—ಇಲ್ಲವು । **ಜ್ಯಾಯಾನ್**—ನಿನಗೆ ಅಧಿಕನಾದ ದೇವನಾರೂ ಇಲ್ಲವು ಎಂಬ । **ತತ್**—ಪ್ರಸಿದ್ಧವಾದ ವ್ಯವಹಾರವು । **ಸತ್ಯಮಿತ್**—ಸತ್ಯವಾಗಿಯೇ ಇದೆ । **ಅರ್ಣಃ**—ಉದಕವನ್ನು । **ಪರಿಶಯಾನಂ**—ಸುತ್ತುವರೆದು ಬಿದ್ದಿದ್ದ । **ಅಹಿಂ**—ಅಸುರನನ್ನು । **ಅಹನ್**—ಕೊಂದಿರುವೆ । **ಸಮುದ್ರಂ**—ಅಂತರಿಕ್ಷಸ್ಥವಾದ । **ಅಪಃ**—ಉದಕಗಳನ್ನು । **ಅಚ್ಛ**—ಅತಿಶಯವಾಗಿ । **ಅವಾಸೃಜಃ**—ಪ್ರವಹಿಸುವಂತೆ ಮಾಡಿದೆ.

॥ ಭಾವಾರ್ಥ ॥

ಎಲೈ ದೇವನೇ, ನಿನಗೆ ಅಧಿಕನಾಗಲಿ ಅಥವಾ ಸಮಾನನಾಗಲಿ ಇರತಕ್ಕ ದೇವನೂ ಇಲ್ಲ ಮಾನವನೂ ಇಲ್ಲ, ಎಂಬ ವ್ಯವಹಾರವು ಸತ್ಯವಾಗಿಯೇ ಇರುತ್ತದೆ. ಉದಕವನ್ನು ಸುತ್ತುವರೆದು ಬಿದ್ದಿದ್ದ ವೃತ್ರನೆಂಬ ಅಸುರನನ್ನು ನೀನು ಕೊಂದಿರುವೆ, ಅಂತರಿಕ್ಷಸ್ಥವಾದ ಉದಕಗಳನ್ನು ಅತಿಶಯವಾಗಿ ಪ್ರವಹಿಸುವಂತೆ ಮಾಡಿದೆ.

## English Translation

Verily it is the truth, Indra, that there is no other such as you, no god nor mortal is (your) superior: you have slain Ahi obstructing the waters, you have set them free (to flow) to the ocean.

॥ ಸಂಹಿತಾಪಾಠಃ ॥

ತ್ವಮ॒ಪೋ ವಿ ದುರೋ॒ ವಿಷೂ॒ಚೀರಿಂದ್ರ॑ ದೃ॒ಳ್ಹಮ॑ರುಜಃ॒ ಪರ್ವ॑ತಸ್ಯ ।
ರಾಜಾ॑ಭವೋ॒ ಜಗ॑ತಶ್ಚರ್ಷಣೀ॒ನಾಂ ಸಾ॒ಕಂ ಸೂರ್ಯಂ॑ ಜ॒ನಯ॒ನ್ದ್ಯಾಮು॒ಷಾಸಂ॑ ॥ ೫ ॥

॥ ಪದಪಾಠಃ ॥

ತ್ವಂ । ಅ॒ಪಃ । ವಿ । ದುರಃ॑ । ವಿಷೂ॒ಚೀಃ । ಇಂದ್ರ॑ । ದೃ॒ಳ್ಹಂ । ಅ॒ರು॒ಜಃ॒ । ಪರ್ವ॑ತಸ್ಯ ।
ರಾಜಾ॑ । ಅ॒ಭ॒ವಃ॒ । ಜಗ॑ತಃ । ಚ॒ರ್ಷ॒ಣೀ॒ನಾಂ । ಸಾ॒ಕಂ । ಸೂರ್ಯಂ॑ । ಜ॒ನಯ॑ನ್ । ದ್ಯಾಂ । ಉ॒ಷಸಂ॑ ॥

॥ ಸಾಯಣಭಾಷ್ಯಂ ॥

ಹೇ ಇಂದ್ರ ತ್ವಂ ದುರೋ ವೃತ್ರೇಣಾವೃತಾ ಅಪೋ ವಿಷೂಚೀರ್ವಿವಿಧಮಂಚಂತ್ಯೋ ಯಥಾ ಸರ್ವತಃ ಪ್ರಸೃತಾ ಭವಂತಿ ತಥಾ ವ್ಯಸೃಜಃ । ಯತಸ್ತ್ವಂ ಪರ್ವತಸ್ಯ ಪರ್ವವತೋ ಮೇಘಸ್ಯ ದೃಳ್ಹಂ ದೃಢಮಪಾಂ ಬಂಧಕಪ್ರದೇಶಮರುಜಃ ಅಭಾಂಕ್ಷೀಃ । ಅಪಿ ಚ ತ್ವಂ ಜಗತಃ ಸಂಬಂಧಿನೀನಾಂ ಚರ್ಷಣೀನಾಂ ಪ್ರಜಾನಾಂ ರಾಜಾಭವಃ । ಅಧಿಪತಿರ್ಭವಸಿ । ಕಿಂ ಕುರ್ವನ್ । ಸೂರ್ಯಂ ದ್ಯಾಂ ದ್ಯುಲೋಕಮುಷಸಂ ಚ ತಮಸಾ ಪ್ರಾವೃತಮೇತತ್ತ್ರಿತಯಂ ಸಾಕಂ ಯುಗಪದೇವ ಜನಯನ್ ಪ್ರಾದುರ್ಭಾವಯನ್ । ಪ್ರಕಾಶಯನ್ನಿತ್ಯರ್ಥಃ ॥

॥ ಪ್ರತಿಪದಾರ್ಥ ॥

**ಇಂದ್ರ**—ಎಲೈ ಇಂದ್ರನೇ । **ತ್ವಂ**—ನೀನು । **ದುರಃ**—ವೃತ್ರನಿಂದ ಆವೃತವಾಗಿದ್ದ । **ಅಪಃ**—ಉದಕಗಳನ್ನು । **ವಿಷೂಚೀಃ**—ಸರ್ವತ್ರ ಪ್ರಸರಿಸಿ ಪ್ರವಹಿಸುವಂತೆ । **ವಿ (ಅಸೃಜಃ)**—ಬಿಡಿಸಿದೆ । **ಪರ್ವತಸ್ಯ**—ಮೇಘದ । **ದೃಳ್ಹಂ**—ದೃಢವಾದ ಬಂಧಕಪ್ರದೇಶಗಳನ್ನು । **ಅರುಜಃ**—ಸೀಳಿದೆ । **ಜಗತಃ**—ಜಗತ್ತಿನ । **ಚರ್ಷಣೀನಾಂ**—ಪ್ರಜೆಗಳಿಗೆ । **ರಾಜಾ**—ಪ್ರಭುವಾಗಿ । **ಅಭವಃ**—ಆಗಿದ್ದೀಯೆ । **ಸೂರ್ಯಂ**—ಸೂರ್ಯನನ್ನೂ । **ದ್ಯಾಂ**—ದ್ಯುಲೋಕವನ್ನೂ । **ಉಷಸಂ**—ಉಷಸ್ಸನ್ನೂ । **ಸಾಕಂ**—ಒಟ್ಟಿಗೆ । **ಜನಯನ್**—ಉತ್ಪನ್ನಮಾಡುತ್ತಾ (ಪ್ರಭುವಾಗಿದ್ದೀಯೆ).

॥ ಭಾವಾರ್ಥ ॥

ಎಲೈ ಇಂದ್ರನೇ, ನೀನು ವೃತ್ರನಿಂದ ಆವೃತವಾಗಿದ್ದ ಉದಕಗಳನ್ನು ಸರ್ವತ್ರ ಪ್ರಸರಿಸಿ ಪ್ರವಹಿಸುವಂತೆ ಬಿಡಿಸಿದೆ. ಮೇಘದ ದೃಢವಾದ ಬಂಧಕಪ್ರದೇಶಗಳನ್ನು ಸೀಳಿದೆ. ಸೂರ್ಯನನ್ನೂ ದ್ಯುಲೋಕವನ್ನೂ ಉಷಸ್ಸನ್ನೂ ಒಟ್ಟಿಗೆ ಉತ್ಪನ್ನಮಾಡುತ್ತಾ ನೀನು ಜಗತ್ಪ್ರಜೆಗಳಿಗೆಲ್ಲಾ ಪ್ರಭುವಾಗಿದ್ದೀಯೆ.

English Translation.

You have set the obstructed waters free to flow in all directions: you have fractured the solid (barrier) of the cloud; you are lord over the people of the world, making manifest together the sun, the sky, and the dawn.



# ಮೂವತ್ತೊಂದನೆಯ ಸೂಕ್ತವು

॥ ಸಾಯಣಭಾಷ್ಯಂ ॥

**ಅಭೂರೇಕ ಇತಿ ಪಂಚರ್ಚಮಷ್ಟಮಂ ಸೂಕ್ತಂ ಭರದ್ವಾಜಸ್ಯ ಸುಹೋತ್ರಸ್ಯಾರ್ಷಂ । ಉಪಾಂತ್ಯಾ ಶಕ್ವರೀ ಶಿಷ್ಟಾಸ್ತ್ರಿಷ್ಟುಭಃ । ಇಂದ್ರೋ ದೇವತಾ । ಅನುಕ್ರಮ್ಯತೇ ಚ । ಅಭೂರೇಕಃ ಸುಹೋತ್ರಸ್ತು ಚತುರ್ಥೀ ಶಕ್ವರೀತಿ ॥ ಮಹಾವ್ರತಸ್ಯ ನಿಷ್ಕೇವಲ್ಯ ಇದಮಾದೀನ್ಯಷ್ಟ ಸೂಕ್ತಾನಿ ಶಂಸನೀಯಾನಿ । ತಥಾ ಪಂಚಮಾರಣ್ಯಕಂ । ಅಭೂರೇಕೋ ರಯಿಪತೇ ರಯೀಣಾಮಿತ್ಯಷ್ಟೌ ಸೂಕ್ತಾನಿ । ಐ. ಆ. ೫-೨-೨ । ಇತಿ ॥ ಪೃಷ್ಠ್ಯಸ್ಯ ಷಷ್ಠೇಽಹನಿ ನಿಷ್ಕೇವಲ್ಯ ಇದಂ ಸೂಕ್ತಂ ನಿವಿದ್ಧಾನಂ। ಸೂತ್ರಿತಂ ಚ । ಐಂದ್ರ ಯಾಹ್ಯುಪ ನಃ ಪ್ರ ಘಾ ನ್ವಸ್ಯಾಭೂರೇಕ ಇತಿ ನಿಷ್ಕೇವಲ್ಯಂ । ಆ. ೮-೧ । ಇತಿ ॥ ವಿಶ್ವಜಿತಿ ಮಾಧ್ಯಂದಿನೇಽಚ್ಛಾವಾಕಶಸ್ತ್ರೇ ಸಾಮಸೂಕ್ತಾಖ್ಯಮೇತಚ್ಛಂಸನೀಯಂ । ಸೂತ್ರಿತಂ ಚ । ಅಭೂರೇಕೋ ರಯಿಪತೇ ರಯೀಣಾಮಿತಿ ಸಾಮಸೂಕ್ತಾನಿ । ಆ. ೮-೭ ॥**

ಅನುವಾದವು—**ಅಭೂರೇಕಃ** ಎಂಬ ಈ ಸೂಕ್ತವು ಮೂರನೆಯ ಅನುವಾಕದಲ್ಲಿ ಎಂಟನೆಯ ಸೂಕ್ತವು. ಇದರಲ್ಲಿ ಐದು ಋಕ್ಕುಗಳಿರುವುವು. ಈ ಸೂಕ್ತಕ್ಕೆ ಭರದ್ವಾಜಗೋತ್ರದ ಸುಹೋತ್ರನೆಂಬುವನು ಋಷಿಯು; ಇಂದ್ರನು ದೇವತೆಯು; ಕೊನೆಯ ಋಕ್ಕಿನ ಹಿಂದಿನ ಋಕ್ಕು ಎಂದರೆ ಈ ಸೂಕ್ತದ ನಾಲ್ಕನೆಯ ಋಕ್ಕು ಶಕ್ವರೀ ಛಂದಸ್ಕವು. ಉಳಿದ ನಾಲ್ಕು ಋಕ್ಕುಗಳೂ ತ್ರಿಷ್ಟುಪ್‌ಛಂದಸ್ಕವು. ಅನುಕ್ರಮಣಿಕೆಯಲ್ಲಿ—**ಅಭೂರೇಕಃ ಸುಹೋತ್ರಸ್ತು ಚತುರ್ಥೀ ಶಕ್ವರೀ** ಎಂದು ಹೇಳಿರುವುದು. ಮಹಾವ್ರತವೆಂಬ ಇಷ್ಟಿಯಲ್ಲಿ ನಿಷ್ಕೇವಲ್ಯಶಸ್ತ್ರ ಮಂತ್ರಗಳಿಗಾಗಿ ಈ ಸೂಕ್ತದಿಂದ ಮುಂದಿನ ಎಂಟು ಸೂಕ್ತಗಳ ವಿನಿಯೋಗವಿರುವುದೆಂದು ಐತರೇಯಾರಣ್ಯಕದ ಪಂಚಮಾರಣ್ಯಕದಲ್ಲಿ—**ಅಭೂರೇಕೋ ರಯಿಪತೇ ರಯೀಣಾಮಿತ್ಯಷ್ಟೌ ಸೂಕ್ತಾನಿ** ಎಂಬ ವಾಕ್ಯದಿಂದ (ಐ. ಆ. ೫-೨-೨) ನಿರ್ದಿಷ್ಟವಾಗಿರುವುದು. ಪೃಷ್ಠ್ಯಯಾಗದ ಆರನೆಯ ದಿವಸದಲ್ಲಿಯೂ ಸಹ ನಿಷ್ಕೇವಲ್ಯಶಸ್ತ್ರಮಂತ್ರಗಳ ಮಧ್ಯದಲ್ಲಿ ಈ ಸೂಕ್ತವನ್ನು ನಿವಿದ್ಧಾನೀಯವನ್ನಾಗಿ ಸೇರಿಸಿ ಪಠಿಸಬೇಕೆಂದು ಆಶ್ವಲಾಯನಶ್ರೌತಸೂತ್ರದ—**ಐಂದ್ರ ಯಾ ಹ್ಯುಪ ನಃ ಪ್ರ ಘಾನ್ವಸ್ಯಾಭೂರೇಕ ಇತಿ ನಿಷ್ಕೇವಲ್ಯಂ** ಎಂಬ ಸೂತ್ರದಿಂದ (ಆ. ೮-೧) ವಿವೃತವಾಗಿರುವುದು. ವಿಶ್ವಜಿದಿಷ್ಟಿಯಲ್ಲಿಯೂ ಸಹ ಮಾಧ್ಯಂದಿನಸವನಕಾಲದಲ್ಲಿ ಅಚ್ಛಾವಾಕನೆಂಬ ಋತ್ವಿಜನು ಪಠಿಸುವ ಶಸ್ತ್ರಮಂತ್ರಗಳಲ್ಲಿ ಈ ಸೂಕ್ತವನ್ನು ಸಾಮಸೂಕ್ತವನ್ನಾಗಿ ಪಠಿಸಬೇಕೆಂದು ಆಶ್ವಲಾಯನಶ್ರೌತಸೂತ್ರದ—**ಅಭೂರೇಕೋ ರಯಿಪತೇ ರಯೀಣಾಮಿತಿ ಸಾಮಸೂಕ್ತಾನಿ** ಎಂಬ ಸೂಕ್ತದಿಂದ (ಆ. ೮-೭) ವಿವೃತವಾಗಿರುವುದು.

## ಸೂಕ್ತ—೩೧

ಮಂಡಲ—೬ ॥ ಅನುವಾಕ—೩ ॥ ಸೂಕ್ತ—೩೧ ॥
ಅಷ್ಟಕ—೪ ॥ ಅಧ್ಯಾಯ—೭ ॥ ವರ್ಗ—೩ ॥
॥ ಸೂಕ್ತದಲ್ಲಿರುವ ಋಕ್ಸಂಖ್ಯೆ—೫ ॥
॥ ಋಷಿಃ—ಸುಹೋತ್ರಃ ॥
॥ ದೇವತಾ—ಇಂದ್ರಃ ॥
॥ ಛಂದಃ—೧, ೩, ೫. ತ್ರಿಷ್ಟುಪ್ । ೪. ಶಕ್ವರೀ ॥

॥ ಸಂಹಿತಾಪಾಠಃ ॥

ಅಭೂರೇಕೋ ರಯಿಪತೇ ರಯೀಣಾಮಾ ಹಸ್ತಯೋರಧಿಥಾ ಇಂದ್ರ ಕೃಷ್ಟೀಃ ।
ವಿ ತೋಕೇ ಅಪ್ಸು ತನಯೇ ಚ ಸೂರೇಽವೋಚಂತ ಚರ್ಷಣಯೋ ವಿವಾಚಃ ॥ ೧ ॥

॥ ಪದಪಾಠಃ ॥

ಅಭೂಃ । ಏಕಃ । ರಯಿಽಪತೇ । ರಯೀಣಾಂ । ಆ । ಹಸ್ತಯೋಃ । ಅಧಿಥಾಃ । ಇಂದ್ರ । ಕೃಷ್ಟೀಃ ।
ವಿ । ತೋಕೇ । ಅಪ್ಽಸು । ತನಯೇ । ಚ । ಸೂರೇ । ಅವೋಚಂತ । ಚರ್ಷಣಯಃ । ವಿಽವಾಚಃ ॥೧॥

॥ ಸಾಯಣಭಾಷ್ಯಂ ॥

ಹೇ ರಯಿಪತೇ ಧನಸ್ಯ ಪಾಲಕೇಂದ್ರ ಏಕಃ ಪ್ರಧಾನಭೂತಸ್ತ್ವಂ ರಯೀಣಾಂ ಧನಾನಾಂ ಸ್ವಾಮ್ಯಭೂಃ । ಭವಸಿ । ಯದ್ವಾ । ರಯೀಣಾಂ ರಯಿಪತ ಇತಿ ಸಂಬಂಧಃ । ಏಕೋ ರಯಿಶಬ್ದೋಽನುವಾದೋ ಯಥಾ ಗವಾಮಸಿ ಗೋಪತಿರೇಕ ಇಂದ್ರ । ಋಗ್ವೇ. ೭-೯೮-೬ । ಇತಿ । ತದಾನೀಮೇಕೋ ಮುಖ್ಯಸ್ತ್ವಂ ಭವಸೀತಿ ಯೋಜನೀಯಂ । ಅಪಿ ಚ ಹೇ ಇಂದ್ರ ತ್ವಂ ಹಸ್ತಯೋರಾತ್ಮೀಯಯೋರ್ಬಾಹ್ವೋಃ ಕೃಷ್ಟೀಃ ಪ್ರಜಾ ಆಧಿಥಾಃ । ಆಧತ್ಸೇ । ಸರ್ವಂ ಜಗತ್ತವಾಜ್ಞಾಯಾಂ ವರ್ತತ ಇತ್ಯರ್ಥಃ । ಕಿಂಚ ಚರ್ಷಣಯೋ ಮನುಷ್ಯಾಸ್ತೋಕೇ ಪುತ್ರೇಽಪ್ಸೂದಕೇಷು ಸೂರೇ ಶತ್ರೂಣಾಂ ಪ್ರೇರಕೇ ತನಯೇ ಪೌತ್ರೇಷು ಜೈತೇಷು ನಿಮಿತ್ತಭೂತೇಷು ಸತ್ಸು ವಿವಾಚೋ ವಿಶಿಷ್ಟಾಃ ಸ್ತುತೀರ್ವ್ಯವೋಚಂತ । ವಿವಿಧಂ ಬ್ರುವಂತಿ ॥

॥ ಪ್ರತಿಪದಾರ್ಥ ॥

**ರಯಿಪತೇ**—ಧನಗಳಿಗೆಲ್ಲಾ ಪತಿಯಾದ । **ಇಂದ್ರ**—ಎಲೈ ಇಂದ್ರನೇ । **ಏಕಃ**—ಮುಖ್ಯನಾದ ನೀನೊಬ್ಬನೇ । **ರಯೀಣಾಂ**—ಧನಗಳಿಗೆಲ್ಲಾ ಒಡೆಯನಾಗಿ । **ಅಭೂಃ**—ಆಗಿದ್ದೀಯೆ । **ಹಸ್ತಯೋಃ**—ನಿನ್ನ ಎರಡು ತೋಳು

ಗಳಿಂದ | **ಕೃಷ್ಟೀಃ**— ಪ್ರಜೆಗಳನ್ನೆಲ್ಲಾ | **ಆ ಅಧಿಥಾಃ**— ಎತ್ತಿ ಹಿಡಿದಿದ್ದೀಯೆ | **ಚರ್ಷಣಯಃ**— ಮಾನವರು | **ತೋಕೇ**— ಪುತ್ರಾರ್ಥವಾಗಿಯೂ | **ಅಪ್ಸು**— ಉದಕಾರ್ಥವಾಗಿಯೂ | **ಸೂರೇ**— ಪರಾಕ್ರಮಿಗಳಾದ | **ತನಯೇ**— ಪೌತ್ರಾರ್ಥವಾಗಿಯೂ | **ವಿವಾಚಃ**— ಅನೇಕ ವಿಧವಾದ ಸ್ತುತಿಗಳನ್ನು | **ವಿ ಅವೋಚಂತ**— ಪಠಿಸುತ್ತಾರೆ.

॥ ಭಾವಾರ್ಥ ॥

ಧನಪತಿಯಾದ ಎಲೈ ಇಂದ್ರನೇ, ದೇವತೆಗಳಲ್ಲೆಲ್ಲಾ ಮುಖ್ಯನಾದ ನೀನೊಬ್ಬನೇ ಧನಗಳಿಗೆಲ್ಲಾ ಒಡೆಯನಾಗಿದ್ದೀಯೆ. ನಿನ್ನ ಎರಡು ತೋಳುಗಳಿಂದ ಪ್ರಜೆಗಳನ್ನೆಲ್ಲಾ ಎತ್ತಿ ಹಿಡಿದಿದ್ದೀಯೆ. (ಸಂರಕ್ಷಿಸುತ್ತೀಯೆ) ಮಾನವರು ಪುತ್ರಾರ್ಥವಾಗಿಯೂ, ಉದಕಾರ್ಥವಾಗಿಯೂ ಪರಾಕ್ರಮಿಗಳಾದ ಪೌತ್ರಾರ್ಥವಾಗಿಯೂ ಸಹ ನಿನ್ನನ್ನುದ್ದೇಶಿಸಿ ಅನೇಕ ವಿಧವಾದ ಸ್ತುತಿಗಳನ್ನು ಪಠಿಸುತ್ತಾರೆ.

English Translation.

You, lord of riches are the chief (sovereign) over riches: you hold men in your two hands, and men glorify you with various praises for (the sake of obtaining) sons. and valiant grandsons, and rain.

॥ ಸಂಹಿತಾಪಾಠಃ ॥

ತ್ವದ್ಭಿಯೇಂದ್ರ ಪಾರ್ಥಿವಾನಿ ವಿಶ್ವಾಚ್ಯುತಾ ಚಿಚ್ಚ್ಯಾವಯಂತೇ ರಜಾಂಸಿ।
ದ್ಯಾವಾಕ್ಷಾಮಾ ಪರ್ವತಾಸೋ ವನಾನಿ ವಿಶ್ವಂ ದೃಳ್ಹಂ ಭಯತೇ ಅಜ್ಮನ್ನಾ
ತೇ ॥ ೨ ॥

॥ ಪದಪಾಠಃ ॥

ತ್ವತ್ । ಭಿಯಾ । ಇಂದ್ರ । ಪಾರ್ಥಿವಾನಿ । ವಿಶ್ವಾ । ಅಚ್ಯುತಾ । ಚಿತ್ । ಚ್ಯಾವಯಂತೇ । ರಜಾಂಸಿ । ದ್ಯಾವಾಕ್ಷಾಮಾ । ಪರ್ವತಾಸಃ । ವನಾನಿ । ವಿಶ್ವಂ । ದೃಳ್ಹಂ । ಭಯತೇ । ಅಜ್ಮನ್ । ಆ । ತೇ ॥ ೨ ॥

॥ ಸಾಯಣಭಾಷ್ಯಂ ॥

ಹೇ ಇಂದ್ರ ತ್ವತ್ತ್ವತ್ತೋ ಭಿಯಾ ಭಯೇನ ವಿಶ್ವಾ ವಿಶ್ವಾನಿ ವ್ಯಾಪಕಾನಿ ಪಾರ್ಥಿವಾನಿ । ಪೃಥಿವ್ಯಂತರಿಕ್ಷನಾಮ । ತತ್ರ ಭವಾನಿ ರಜಾಂಸ್ಯುದಕಾನ್ಯಚ್ಯುತಾ ಚಿತ್ ಚ್ಯಾವಯಿತುಮಶಕ್ಯಾನ್ಯಪಿ ಚ್ಯಾವಯಂತೇ । ಮೇಘಾಃ ಪ್ರಚ್ಯಾವಯಂತಿ । ವರ್ಷಂತೀತ್ಯರ್ಥಃ । ಅಪಿ ಚ ಹೇ ಇಂದ್ರ ತೇ ತವಾಜ್ಮನ್ನಾಗಮನೇ ಸತಿ ದ್ಯಾವಾಕ್ಷಾಮಾ ದ್ಯಾವಾಪೃಥಿವ್ಯೌ ಪರ್ವತಾಸೋ ಗಿರಯೋ ವನಾನಿ ವೃಕ್ಷಾಶ್ಚ ಭಯಂ ಪ್ರಾಪ್ನುವಂತಿ । ಕಿಂ ಬಹುನಾ ವಿಶ್ವಂ ಸರ್ವಂ ದೃಳ್ಹಂ ಸ್ಥಿರಂ ಪ್ರಾಣಿಜಾತಂ ಭಯತೇ ಬಿಭೇತಿ ॥

॥ ಪ್ರತಿಪದಾರ್ಥ ॥

**ಇಂದ್ರ**—ಎಲೈ ಇಂದ್ರನೇ । **ತ್ವತ್**—ನಿನ್ನ । **ಭಿಯಾ**—ಭಯದಿಂದ । **ವಿಶ್ವಾ**—ಸರ್ವ ವ್ಯಾಪಕಗಳಾದ । **ಪಾರ್ಥಿವಾನಿ**—ಪೃಥಿವ್ಯಾದಿ । **ರಜಾಂಸಿ**—ಮೂರು ಲೋಕಗಳೂ ಸಹ । **ಅಚ್ಯುತಾ ಚಿತ್**—ಚಲನ ರಹಿತವಾದರೂ ಸಹ । **ಚ್ಯಾವಯಂತೇ**—ಮೇಘಗಳನ್ನು ಅಲ್ಲಾಡಿಸಿ ಮಳೆಯನ್ನು ಸುರಿಸುತ್ತವೆ । **ತೇ**—ನಿನ್ನ । **ಆ ಅಜ್ಮನ್**—ಆಗಮನ ಕಾಲದಲ್ಲಿ । **ದ್ಯಾವಾಕ್ಷಾಮಾ**—ದ್ಯಾವಾಪೃಥಿವಿಗಳೂ । **ಪರ್ವತಾಸಃ**—ಪರ್ವತಗಳೂ । **ವನಾನಿ**—ವೃಕ್ಷಗಳೂ । **ವಿಶ್ವಂ**—ಸಮುಸ್ತವಾದ । **ದೃಳ್ಹಂ**—ಸ್ಥಿರವಸ್ತುಗಳೂ ಸಹ । **ಭಯತೇ**—ಭೀತಿಗೊಳ್ಳುತ್ತವೆ.

॥ ಭಾವಾರ್ಥ ॥

ಎಲೈ ಇಂದ್ರನೇ, ನಿನಗೆ ಭಯಗೊಂಡು ಸರ್ವ ವ್ಯಾಪಕಗಳಾದ ಪೃಥಿವ್ಯಾದಿ ಮೂರು ಲೋಕಗಳೂ ಸಹ ಚಲನರಹಿತವಾದ ಮೇಘಗಳನ್ನು ಅಲ್ಲಾಡಿಸಿ ಮಳೆಯನ್ನು ಸುರಿಸುತ್ತವೆ. ನಿನ್ನ ಆಗಮನ ಕಾಲವಲ್ಲಿ ದ್ಯಾವಾಪೃಥಿವಿಗಳೂ ಪರ್ವತಗಳೂ, ವೃಕ್ಷಗಳೂ ಸಕಲವಾದ ಸ್ಥಿರ ವಸ್ತುಗಳೂ ಭೀತಿಗೊಳ್ಳುತ್ತವೆ.

English Translation.

Through fear of you, Indra, all the regions of the firmament cause the unfallen (rain) to descend : the heavens, the earth, the mountains, the forests, all the solid (universe) is alarmed at your approach.

॥ ಸಂಹಿತಾಪಾಠಃ ॥

ತ್ವಂ ಕುತ್ಸೇನಾಭಿ ಶುಷ್ಣಮಿಂದ್ರಾಶುಷಂ ಯುಧ್ಯ ಕುಯವಂ ಗವಿಷ್ಟೌ ।
ದಶ ಪ್ರಪಿತ್ವೇ ಅಧ ಸೂರ್ಯಸ್ಯ ಮುಷಾಯಶ್ಚಕ್ರಮವಿವೇ ರಪಾಂಸಿ ॥ ೩ ॥

॥ ಪದಪಾಠಃ ॥

ತ್ವಂ । ಕುತ್ಸೇನ । ಅಭಿ । ಶುಷ್ಣಂ । ಇಂದ್ರ । ಅಶುಷಂ । ಯುಧ್ಯ । ಕುಯವಂ । ಗೋಽಇಷ್ಟೌ ।
ದಶ । ಪ್ರಽಪಿತ್ವೇ । ಅಧ । ಸೂರ್ಯಸ್ಯ । ಮುಷಾಯಃ । ಚಕ್ರಂ । ಅವಿವೇಃ । ರಪಾಂಸಿ ॥ ೩ ॥

॥ ಸಾಯಣಭಾಷ್ಯಂ ॥

ಹೇ ಇಂದ್ರ ತ್ವಂ ಕುತ್ಸೇನ ಸಹಾಶುಷಂ ಶೋಷಯಿತುಮಶಕ್ಯಂ ಪ್ರಬಲಂ ಶುಷ್ಣಂ ಸರ್ವಸ್ಯ ಶೋಷಕನೇತತ್ಸಂಜ್ಞಮಸುರಮಭಿ ಯುಧ್ಯ । ಅಭ್ಯಯುಧ್ಯಃ । ಕುತ್ಸಸ್ಯ ಸಾಹಾಯ್ಯಾರ್ಥಂ ತೇನಾಸುರೇಣ ಸಹ ಯುದ್ಧಂ ಕೃತವಾನಸೀತ್ಯರ್ಥಃ । ತಥಾ ಗವಿಷ್ಟೌ । ಗಾವೋ ಬಾಣಾ ಇಷ್ಯಂತಿ ಗಚ್ಛಂತೀತಿ

ಗವಿಷ್ಟಿಃ ಸಂಗ್ರಾಮಃ । ತಸ್ಮಿನ್ಕುಯವಮೇತತ್ಸಂಜ್ಞಮಸುರಂ ಚ ದಶ । ಅದಶಃ । ಹಿಂಸಿತವಾನಸಿ ॥ ದನ್ಶ ದಶನ ಇತ್ಯೇತಸ್ಮಾಚ್ಛಾಂದಸೇ ಲೋಟಿ ರೂಪಂ ॥ ಅಧಾಪಿ ಚ ಪ್ರಪಿತ್ವೇ ಪ್ರಪತನೇ ಯುದ್ಧೇ ಸೂರ್ಯಸ್ಯ ಚಕ್ರಂ ರಥಾವಯವಭೂತಂ ಮುಷಾಯಃ । ಅಮುಷ್ಣಾಃ । ತದಾಪ್ರಭೃತಿ ಸೂರ್ಯಸ್ಯ ರಥ ಏಕಚಕ್ರೋಽಭೂತ್ । ತಥಾ ಚಾಮ್ನಾತಂ । ಸಪ್ತ ಯುಂಜಂತಿ ರಥಮೇಕಚಕ್ರಂ । ಋಗ್ವೇ. ೧.೧೬೪-೨ । ಇತಿ । ಏತಶಾಖ್ಯಸ್ಯ ಋಷೇಃ ಸೂರ್ಯೇಣ ಸಹ ಯುದ್ಧೇ ತತ್ಸಾಹಾಯ್ಯಾರ್ಥಮಾಗತ ಇಂದ್ರಃ ಸೂರ್ಯಸ್ಯ ಚಕ್ರಮಪಹೃತವಾನಿತ್ಯಾಖ್ಯಾತಂ । ಸೂರಶ್ಚಕ್ರಂ ಪ್ರ ವೃಹಜ್ಜಾತ ಓಜಸಾ । ಋಗ್ವೇ. ೧-೧೩೦-೯ । ಇತಿ ಚ ನಿಗಮಾಂತರಂ । ಅಪಿ ಚ ರಪಾಂಸಿ ಪಾಪಕಾರೀಣಿ ರಕ್ಷಃಪ್ರಭೃತೀನ್ಯವಿವೇಃ । ಅಸ್ಮಾಲ್ಲೋಕಾದಗಮಯಃ । ಅವಧೀರಿತ್ಯರ್ಥಃ ॥

। ಪ್ರತಿಪದಾರ್ಥ ॥

**ಇಂದ್ರ**—ಎಲೈ ಇಂದ್ರನೇ । **ತ್ವಂ**—ನೀನು । **ಕುತ್ಸೇನ**—ಕುತ್ಸನೊಡನೆ ಸೇರಿ । **ಅಶುಷಂ**—ಪ್ರಬಲನಾದ । **ಶುಷ್ಣಂ**—ಶುಷ್ಣನೆಂಬ ಅಸುರನನ್ನು ಎದುರಿಸಿ । **ಅಭಿ ಯುಧ್ಯ**—ಯುದ್ಧ ಹೂಡಿರುವೆ । **ಗವಿಷ್ಟೌ**—ಗವಾರ್ಥವಾದ ಯುದ್ಧದಲ್ಲಿ । **ಕುಯವಂ**—ಕುಯವನೆಂಬ ಅಸುರನನ್ನು । **ದಶ**—ಹಿಂಸಿಸಿದ್ದೀಯೆ । **ಅಧ**—ಅನಂತರ । **ಪ್ರಪಿತ್ವೇ**--ಯುದ್ಧಕಾಲದಲ್ಲಿ । **ಸೂರ್ಯಸ್ಯ**-ಸೂರ್ಯನ । **ಚಕ್ರಂ**-ಚಕ್ರವನ್ನು । **ಮುಷಾಯಃ**—ಅಪಹರಿಸಿದ್ದೀಯೆ । **ರಪಾಂಸಿ**—ಪಾಪಿಷ್ಠರಾದ ರಾಕ್ಷಸರನ್ನು । **ಅವಿವೇಃ**---ದೂರಕ್ಕೆ ಓಡಿಸಿದ್ದೀಯೆ.

॥ ಭಾವಾರ್ಥ ॥

ಎಲೈ ಇಂದ್ರನೇ, ನೀನು ಕುತ್ಸನೊಡನೆ ಸೇರಿ ಪ್ರಬಲನಾದ ಶುಷ್ಣನೆಂಬ ಅಸುರನನ್ನು ಎದುರಿಸಿ ಯುದ್ಧ ಮಾಡಿರುವೆ. ಗವಾರ್ಥವಾದ ಯುದ್ಧದಲ್ಲಿ ಕುಯವನೆಂಬ ಅಸುರನನ್ನು ಹಿಂಸಿಸಿದ್ದೀಯೆ. ಯುದ್ಧಕಾಲದಲ್ಲಿ ಸೂರ್ಯನ ಚಕ್ರವನ್ನು ಅಪಹರಿಸಿದ್ದೀಯೆ ಪಾಪಿಷ್ಠರಾದ ರಾಕ್ಷಸರನ್ನು ದೂರಕ್ಕೆ ಓಡಿಸಿದ್ದೀಯೆ.

English Translation.

You, Indra, with Kutsa, have warred against the inexhaustible Sushna: you have ovhrthrown Kuyava in battle: in conflict you have carried off the wheel (of the chariot) of the sun: you have driven away the malignant (spirits).

। ಸಂಹಿತಾಪಾಠಃ ।

ತ್ವಂ ಶತಾನ್ಯವ ಶಂಬರಸ್ಯ ಪುರೋ ಜಘಂಥಾಪ್ರತೀನಿ ದಸ್ಯೋಃ ।
ಅಶಿಕ್ಷೋ ಯತ್ರ ಶಚ್ಯಾ ಶಚೀವೋ ದಿವೋದಾಸಾಯ ಸುನ್ವತೇ ಸುತಕ್ರೇ
ಭರದ್ವಾಜಾಯ ಗೃಣತೇ ವಸೂನಿ ॥ ೪ ॥

॥ ಪದಪಾಠಃ ॥

ತ್ವಂ । ಶತಾನಿ । ಅವ । ಶಂಬರಸ್ಯ । ಪುರಃ । ಜಘಂಥ । ಅಪ್ರತೀನಿ । ದಸ್ಯೋಃ ।

ಅಶಿಕ್ಷಃ । ಯತ್ರ । ಶಚ್ಯಾ । ಶಚೀಽವಃ । ದಿವಃಽದಾಸಾಯ । ಸುನ್ವತೇ । ಸುತಽಕ್ರೇ । ಭರತ್ಽವಾಜಾಯ ।

ಗೃಣತೇ । ವಸೂನಿ ॥ ೪ ॥

॥ ಸಾಯಣಭಾಷ್ಯಂ ॥

ಹೇ ಇಂದ್ರ ತ್ವಂ ಶತಾನಿ ಶತಸಂಖ್ಯಾನಿ ದಸ್ಯೋರುಪಕ್ಷಪಯಿತುರಸುರಸ್ಯ ಶಂಬರಸ್ಯೈತತ್ಸಂಜ್ಞಸ್ಯ ಪುರಃ ಪುರೀರಪ್ರತೀನಿ ॥ ಲಿಂಗವ್ಯತ್ಯಯಃ ॥ ಕೇನಾಪ್ಯಪ್ರತಿಗತಾ ಅವ ಜಘಂಥ । ಅವಾಹನ್ । ಹೇ ಶಚೀವಃ ಪ್ರಜ್ಞಾವನ್ ಹೇ ಸುತಕ್ರೇ ಅಭಿಷುತೇನ ಸೋಮೇನ ಕ್ರೀತೇಂದ್ರ ಯತ್ರ ಯಸ್ಮಿನ್ಕಾಲೇ ಸುನ್ವತೇ ಸೋಮಾಭಿಷವಂ ಕುರ್ವತೇ ದಿವೋದಾಸಾಯ ಶಚ್ಯಾ ಪ್ರಜ್ಞಯಾಶಿಕ್ಷೋ ಧನಾನಿ ಪ್ರಾದಾ ಗೃಣತೇ ಸ್ತುವತೇ ಭರದ್ವಾಜಾಯ ಚ ವಸೂನಿ ಪ್ರಾದಾಃ ತಸ್ಮಿನ್ಕಾಲೇ ಶಾಂಬರೀಃ ಪುರೋಽವ ಜಘಂಥೇತ್ಯನ್ವಯಃ ॥

॥ ಪ್ರತಿಪದಾರ್ಥ ॥

**ಶಚೀವಃ**—ಪ್ರಜ್ಞಾವಂತನೂ । **ಸುತಕ್ರೇ**—ಸೋಮದಿಂದ ಕ್ರೀತನಾದವನೂ ಆದ ಎಲೈಇಂದ್ರನೇ । **ಯತ್ರ**—ಯಾವ ಕಾಲದಲ್ಲಿ । **ಸುನ್ವತೇ**—ಸೋಮರಸವನ್ನು ಹಿಂಡುವ । **ದಿವೋದಾಸಾಯ**—ದಿವೋದಾಸನಿಗೆ । **ಶಚ್ಯಾ**—ಪ್ರಜ್ಞೆಯಿಂದ । **ಅಶಿಕ್ಷಃ**—ಧನವನ್ನು ಕೊಟ್ಟೆಯೋ । **ಗೃಣತೇ**—ನಿನ್ನನ್ನು ಸ್ತುತಿಸತಕ್ಕ । **ಭರದ್ವಾಜಾಯ**—ಭರದ್ವಾಜನಿಗೆ । **ವಸೂನಿ**—ಧನಗಳನ್ನು (ಕೊಟ್ಟೆಯೋ) ಆ ಕಾಲದಲ್ಲಿ । **ತ್ವಂ**—ನೀನು । **ದಸ್ಯೋಃ**—ಹಿಂಸಕನಾದ । **ಶಂಬರಸ್ಯ**—ಶಂಬರನ । **ಶತಾನಿ**—ಶತಸಂಖ್ಯಾಕವೂ । **ಅಪ್ರತೀನಿ**—ಅಪ್ರತಿಹತವಾದವೂ ಆದ । **ಪುರಃ**—ಪಟ್ಟಣಗಳನ್ನು । **ಅವ ಜಘಂಥ**—ಸೀಳಿ ಹಾಳುಮಾಡಿದೆ.

॥ ಭಾವಾರ್ಥ ॥

ಪ್ರಜ್ಞಾವಂತನೂ ಸೋಮದಿಂದ ಕ್ರೀತನಾದವನೂ ಆದ ಎಲೈಇಂದ್ರನೇ, ಯಾವ ಕಾಲದಲ್ಲಿ ಸೋಮರಸವನ್ನು ಹಿಂಡುವ ದಿವೋದಾಸನಿಗೆ ಪ್ರಜ್ಞೆಯಿಂದ ಧನವನ್ನು ಕೊಟ್ಟೆಯೋ, ನಿನ್ನನ್ನು ಸ್ತುತಿಸತಕ್ಕ ಭರದ್ವಾಜನಿಗೆ ಧನಗಳನ್ನು ಕೊಟ್ಟೆಯೋ ಆ ಕಾಲದಲ್ಲಿ ನೀನು ಹಿಂಸಕನಾದ ಶಂಬರನ ಶತಸಂಖ್ಯಾಕವೂ, ಅಪ್ರತಿಹತವಾದವೂ ಆದ ಪಟ್ಟಣಗಳನ್ನು ಸೀಳಿ ಹಾಳುಮಾಡಿದೆ.

English Translation.

You have destroyed the hundred impregnable cities of the Dasyu, Sambara, when, sagacious Indra, you, who are brought by the libation, have bestowed in your liberality riches upon Divodasa presenting to you libations, and upon Bharadwaja hymning your praise.

॥ ಸಂಹಿತಾಪಾಠಃ ॥

ಸ ಸತ್ಯಸತ್ವನ್ಮಹತೇ ರಣಾಯ ರಥಮಾ ತಿಷ್ಠ ತುವಿನೃಮ್ಣ ಭೀಮಂ ।
ಯಾಹಿ ಪ್ರಪಥಿನ್ನವಸೋಪ ಮದ್ರಿಕ್ಪ್ರ ಚ ಶ್ರುತ ಶ್ರಾವಯ ಚರ್ಷಣಿಭ್ಯಃ ॥

॥ ಪದಪಾಠಃ ॥

ಸಃ । ಸತ್ಯಽಸತ್ವನ್ । ಮಹತೇ । ರಣಾಯ । ರಥಂ । ಆ । ತಿಷ್ಠ । ತುವಿಽನೃಮ್ಣ । ಭೀಮಂ ।
ಯಾಹಿ । ಪ್ರಽಪಥಿನ್ । ಅವಸಾ । ಉಪ । ಮದ್ರಿಕ್ । ಪ್ರ । ಚ । ಶ್ರುತ । ಶ್ರಾವಯ । ಚರ್ಷಣಿಽಭ್ಯಃ ॥

॥ ಸಾಯಣಭಾಷ್ಯಂ ॥

ಹೇ ಸತ್ಯಸತ್ವನ್ । ಸತ್ಯಾಃ ಸತ್ವಾನೋ ಭಟಾ ಯಸ್ಯ ಸ ತಥೋಕ್ತಃ । ಹೇ ತುವಿನೃಮ್ಣ । ತುವಿ ಬಹುಲಂ ನೃಮ್ಣಂ ಧನಂ ಯಸ್ಯ ಸ ತಥೋಕ್ತಃ । ಹೇ ತಾದೃಶೇಂದ್ರ ಸ ತ್ವಂ ಮಹತೇ ರಣಾಯ ಸಂಗ್ರಾಮಾಯ ತದರ್ಥಂ ಭೀಮಂ ಭಯಂಕರಮಾತ್ಮೀಯಂ ರಥಮಾ ತಿಷ್ಠ । ಹೇ ಪ್ರಪಥಿನ್ ಪ್ರಕೃಷ್ಟ-ಮಾರ್ಗೇಂದ್ರ ಅವಸಾ ರಕ್ಷಣೇನ ಸಹ ತೇನ ಚ ರಥೇನೋಪ ಯಾಹಿ ಆಗಚ್ಛ ಮದ್ರಿಕ್ ಮದಭಿಮುಖಃ । ತಥಾ ಹೇ ಶ್ರುತ ವಿಶ್ರುತೇಂದ್ರ ಚರ್ಷಣಿಭ್ಯಃ ಪ್ರಜಾಭ್ಯಃ ಪ್ರ ಶ್ರಾವಯ ಚ । ಅಸ್ಮಾನ್ ಪ್ರಖ್ಯಾಪಯ ಚ । ಸರ್ವಾಸು ಪ್ರಜಾಸು ಮಧ್ಯೇಽಸ್ಮಾನ್ಪ್ರಖ್ಯಾತಾನ್ ಕುರ್ವಿತ್ಯರ್ಥಃ ॥

॥ ಪ್ರತಿಪದಾರ್ಥ ॥

**ಸತ್ಯಸತ್ವನ್**—ಸತ್ಯಾತ್ಮಕವಾದ ಶಕ್ತಿಯುಳ್ಳ ವೀರರುಳ್ಳವನೂ । **ತುವಿನೃಮ್ಣ**—ಪ್ರಭೂತವಾದ ಧನವುಳ್ಳವನೂ ಆದ ಎಲೈಇಂದ್ರನೇ । **ಸಃ**—ನೀನು । **ಮಹತೇ**—ಮಹತ್ತಾದ । **ರಣಾಯ**—ಸಂಗ್ರಾಮಕ್ಕಾಗಿ । **ಭೀಮಂ**—ಭಯಂಕರವಾದ । **ರಥಂ**—ರಥವನ್ನು । **ಆ ತಿಷ್ಠ**—ಹತ್ತಿ ಕುಳಿತುಕೋ । **ಪ್ರಪಥಿನ್**—ಉತ್ತಮವಾದ ಮಾರ್ಗವುಳ್ಳ ಎಲೈಇಂದ್ರನೇ । **ಅವಸಾ**—ನಿನ್ನ ರಕ್ಷಣೆಯೊಡನೆ । **ಮದ್ರಿಕ್**—ನನಗಭಿಮುಖವಾಗಿ । **ಉಪ ಯಾಹಿ**—ದಯಮಾಡು । **ಶ್ರುತ**—ಪ್ರಖ್ಯಾತನಾದ ಎಲೈಇಂದ್ರನೇ । **ಚರ್ಷಣಿಭ್ಯಃ**—ಇತರ ಪ್ರಜೆಗಳಮುಂದೆ । **ಪ್ರ ಶ್ರಾವಯ**—ನಮ್ಮನ್ನು ಪ್ರಸಿದ್ಧಪಡಿಸು.

॥ ಭಾವಾರ್ಥ ॥

ಸತ್ಯಶಕ್ತಿಯುಳ್ಳ ವೀರರುಳ್ಳವನೂ, ಪ್ರಭೂತನಾದ ಧನವುಳ್ಳವನೂ ಆದ ಎಲೈಇಂದ್ರನೇ, ನೀನು ಮಹತ್ತಾದ ಸಂಗ್ರಾಮಕ್ಕಾಗಿ ಭಯಂಕರವಾದ ರಥವನ್ನು ಹತ್ತಿ ಕುಳಿತುಕೊ. ಉತ್ತಮವಾದ ಮಾರ್ಗವುಳ್ಳ ಎಲೈಇಂದ್ರನೇ ನಿನ್ನ ರಕ್ಷಣೆಯೊಡಗೂಡಿ ನಮಗಭಿಮುಖವಾಗಿ ಬಾ. ಪ್ರಖ್ಯಾತನಾದ ಇಂದ್ರನೇ, ಇತರ ಪ್ರಜೆಗಳ ಮುಂದೆ ನಮ್ಮನ್ನು ಪ್ರಸಿದ್ಧಪಡಿಸು.

॥ ಸಂಹಿತಾಪಾಠಃ ॥

ಅರ್ವಾಗ್ರಥಂ ವಿಶ್ವವಾರಂ ತ ಉಗ್ರೇಂದ್ರ ಯುಕ್ತಾಸೋ ಹರಯೋ ವಹಂತು ।
ಕೀರಿಶ್ಚಿದ್ಧಿ ತ್ವಾ ಹವತೇ ಸ್ವರ್ವಾನೃಧೀಮಹಿ ಸಧಮಾದಸ್ತೇ ಅದ್ಯ ॥ ೧ ॥

॥ ಪದಪಾಠಃ ॥

ಅರ್ವಾಕ್ । ರಥಂ । ವಿಶ್ವऽವಾರಂ । ತೇ । ಉಗ್ರ । ಇಂದ್ರ । ಯುಕ್ತಾಸಃ । ಹರಯಃ । ವಹಂತು ।
ಕೀರಿಃ । ಚಿತ್ । ಹಿ । ತ್ವಾ । ಹವತೇ । ಸ್ವಃऽವಾನ್ । ಋಧೀಮಹಿ । ಸಧऽಮಾದಃ । ತೇ । ಅದ್ಯ ॥ ೧ ॥

॥ ಸಾಯಣಭಾಷ್ಯಂ ॥

**ಹೇ ಉಗ್ರೋದ್ಗೂರ್ಣಬಲೇಂದ್ರ ಯುಕ್ತಾಸೋ ರಥೇನ ಯುಕ್ತಾ ಹರಯೋಽಶ್ವಾಸ್ತೇ ತ್ವದೀಯಂ ವಿಶ್ವವಾರಂ ವಿಶ್ವೈರ್ವರಣೀಯಂ ರಥಮರ್ವಾಗಸ್ಮದಭಿಮುಖಂ ವಹಂತು । ಆನಯಂತು । ಹಿ ಯಸ್ಮಾತ್ ಸ್ವರ್ವಾನ್ । ಸ್ವಃ ಸುಷ್ಠ್ವರಣೀಯಂ ಗುಣಜಾತಂ । ತದ್ವಾನ್ ಕೀರಿಶ್ಚಿತ್ ಸ್ತೋತಾ ಭರದ್ವಾಜ ಋಷಿಸ್ತ್ವಾ ತ್ವಾಂ ಹವತೇ ಆಹ್ವಯತಿ ತಸ್ಮಾತ್ಕಾರಣಾತ್ತ್ವದೀಯಂ ರಥಮಭಿಮುಖಂ ವಹಂತ್ವಿತ್ಯರ್ಥಃ । ವಯಂ ಚಾದ್ಯೇದಾನೀಂ ತೇ ತ್ವಯಾ ಸಧಮಾದಃ ಸಹ ಮಾದ್ಯಂತ ಋಧೀಮಹಿ । ಸಮೃದ್ಧಾ ಭವೇಮ ॥**

॥ ಪ್ರತಿಪದಾರ್ಥ ॥

**ಉಗ್ರ**—ಭಯಂಕರವಾದ ಶಕ್ತಿಯುಳ್ಳ । **ಇಂದ್ರ**—ಎಲೈ ಇಂದ್ರನೇ । **ಯುಕ್ತಾಸಃ**—ನಿನ್ನ ರಥಕ್ಕೆ ಯೋಜಿಸಲ್ಪಟ್ಟ । **ಹರಯಃ**—ಅಶ್ವಗಳು । **ತೇ**—ನಿನ್ನ । **ವಿಶ್ವವಾರಂ**—ಎಲ್ಲರ ಆದರಣೆಗೂ ಪಾತ್ರವಾದ । **ರಥಂ**—ರಥವನ್ನು । **ಅರ್ವಾಕ್**—ನಮುಗಭಿಮುಖವಾಗಿ । **ವಹಂತು**—ವಹಿಸಿ ಕರೆತರಲಿ । **ಹಿ**—ಏತಕ್ಕೆಂದರೆ । **ಸ್ವರ್ವಾನ್**—ಭಕ್ತಿಯಿಂದ ಕೂಡಿದವನೂ । **ಕೀರಿಶ್ಚಿತ್**—ಸ್ತೋತೃವಾದವನೂ ಆದ ಭರದ್ವಾಜನು । **ತ್ವಾ**—ನಿನ್ನನ್ನು । **ಹವತೇ**—ಕರೆಯುತ್ತಾನೆ । **ಅದ್ಯ**—ಈಗ । (**ವಯಂ**--ನಾವೂ ಕೂಡ) । **ತೇ**—ನಿನ್ನೊಡನೆ । **ಸಧಮಾದಃ**—ಸಮಾನವಾದ ಸಂತೋಷವನ್ನನುಭವಿಸುತ್ತಾ । **ಋಧೀಮಹಿ**---ಸಮೃದ್ಧಿಯನ್ನು ಹೊಂದುವಂತಾಗಲಿ.

॥ ಭಾವಾರ್ಥ ॥

ಭಯಂಕರವಾದ ಶಕ್ತಿಯುಳ್ಳ ಎಲೈ ಇಂದ್ರನೇ, ನಿನ್ನ ರಥಕ್ಕೆ ಯೋಜಿಸಲ್ಪಟ್ಟ ಅಶ್ವಗಳು ಎಲ್ಲರ ಆದರಣೆಗೂ ಪಾತ್ರವಾದ ನಿನ್ನ ರಥವನ್ನು ನಮುಗಭಿಮುಖವಾಗಿ ಕರೆತರಲಿ. ಭಕ್ತಿಯಿಂದ ಕೂಡಿದವನೂ, ಸ್ತುತಿಕರ್ತನೂ ಆದ ಭರದ್ವಾಜನು ನಿನ್ನನ್ನು ಕರೆಯುತ್ತಾನೆ. ನಾವೂ ಸಹ ನಿನ್ನೊಡನೆ ಸಮಾನವಾದ ಸಂತೋಷವನ್ನನುಭವಿಸುತ್ತಾ ಸಮೃದ್ಧಿಯನ್ನು ಹೊಂದುವಂತೆ ಆಗಲಿ.

### English Translation.

Fierce Indra, let your harnessed steeds bring down your all-desired chariot: your devoted adorer verily invokes you: may we to-day, partaking of your exhilaration, increase to-day (in prosperity).

॥ ಸಂಹಿತಾಪಾಠಃ ॥

ಪ್ರೋ ದ್ರೋಣೇ ಹರಯಃ ಕರ್ಮಾಗ್ಮನ್ಪುನಾನಾಸ ಋಜ್ಯಂತೋ ಅಭೂವನ್।
ಇಂದ್ರೋ ನ ಅಸ್ಯ ಪೂರ್ವ್ಯಃ ಪಪೀಯಾದ್ದ್ಯುಕ್ಷೋ ಮದಸ್ಯ ಸೋಮ್ಯಸ್ಯ
ರಾಜಾ ॥ ೨ ॥

॥ ಪದಪಾಠಃ ॥

ಪ್ರೋ ಇತಿ । ದ್ರೋಣೇ । ಹರಯಃ । ಕರ್ಮ । ಅಗ್ಮನ್ । ಪುನಾನಾಸಃ । ಋಜ್ಯಂತಃ । ಅಭೂವನ್ ।
ಇಂದ್ರಃ । ನಃ । ಅಸ್ಯ । ಪೂರ್ವ್ಯಃ । ಪಪೀಯಾತ್ । ದ್ಯುಕ್ಷಃ । ಮದಸ್ಯ । ಸೋಮ್ಯಸ್ಯ । ರಾಜಾ ॥ ೨ ॥

॥ ಸಾಯಣಭಾಷ್ಯಂ ॥

ತೃತೀಯೇ ಪರ್ಯಾಯೇಽಚ್ಛಾವಾಕಸ್ಯ ಪ್ರೋ ದ್ರೋಣ ಇತ್ಯೇಷಾ ಶಸ್ತ್ರಯಾಜ್ಯಾ । ಸೂತ್ರಿತಂ ಚ । ಪ್ರೋ ದ್ರೋಣೇ ಹರಯಃ ಕರ್ಮಾಗ್ಮನ್ನಿತಿ ಯಾಜ್ಯಾ । ಆ-೬-೪ । ಇತಿ ॥

ಹರಯೋ ಹರಿತವರ್ಣಾಃ ಸೋಮಾ ನಃ ಕರ್ಮಾಸ್ಮದೀಯಂ ಯಜ್ಞಂ ಪ್ರೋ ಅಗ್ಮನ್। ಪ್ರಕರ್ಷೇಣ ಗಚ್ಛಂತಿ । ಪ್ರಾಪ್ನುವಂತಿ । ಪ್ರಾಪ್ಯ ಚ ಪುನಾನಾಸಃ ಪೂಯಮಾನಾ ದ್ರೋಣೇ ದ್ರೋಣಕಲಶ ಋಜ್ಯಂತ ಋಜು ಗಚ್ಛಂತೋಽಭೂವನ್ । ಭವಂತಿ । ಪೂರ್ವ್ಯಃ ಪುರಾತನೋ ದ್ಯುಕ್ಷೋ ದೀಪ್ತೇರ್ನಿವಾಸಭೂತೋ ದ್ಯುಸ್ಥಾನೋ ವಾ ಮದಸ್ಯ ಮದಕರಸ್ಯ ಸೋಮ್ಯಸ್ಯ ಸೋಮಸ್ಯ ರಾಜೇಶ್ವರ ಏವಂಭೂತ ಇಂದ್ರಶ್ಚಾಸ್ಯೇಮಂ ಸೋಮಂ ಪಪೀಯಾತ್ । ಪಿಬತು ॥

॥ ಪ್ರತಿಪದಾರ್ಥ ॥

**ಹರಯಃ**—ಹರಿತವರ್ಣವುಳ್ಳ ಸೋಮರಸಗಳು । **ನಃ**—ನಮ್ಮ । **ಕರ್ಮ**—ಯಜ್ಞವನ್ನು । **ಪ್ರೋ ಅಗ್ಮನ್**—ಅತಿಶಯವಾಗಿ ಬಂದು ಸೇರುತ್ತವೆ । **ಪುನಾನಾಸಃ**—ಇಲ್ಲಿ ಶುದ್ಧಿಗೊಂಡು । **ದ್ರೋಣೇ**—ದ್ರೋಣ ಕಲಶದಲ್ಲಿ । **ಋಜ್ಯಂತಃ**—ಸೇರಿಕೊಂಡವಾಗಿ । **ಅಭೂವನ್** ಆಗುತ್ತವೆ । **ಪೂರ್ವ್ಯಃ**—ಪುರಾತನನೂ । **ದ್ಯುಕ್ಷಃ**—ಪ್ರಕಾಶಮಾನವಾದ ದ್ಯುಲೋಕವಾಸಿಯೂ । **ಮದಸ್ಯ**—ಹರ್ಷಕಾರಕವಾದ । **ಸೋಮ್ಯಸ್ಯ**—ಸೋಮರಸಕ್ಕೆ । **ರಾಜಾ**—ಈಶ್ವರನೂ ಆದ । **ಇಂದ್ರಃ**—ಇಂದ್ರನು । **ಅಸ್ಯ**—ಈ ಸೋಮವನ್ನು । **ಪಪೀಯಾತ್**—ಪಾನಮಾಡಲಿ.

॥ ಭಾವಾರ್ಥ ॥

ಹರಿತವರ್ಣವುಳ್ಳ ಸೋಮರಸಗಳು ನಮ್ಮ ಯಜ್ಞವನ್ನು ಅತಿಶಯವಾಗಿ ಬಂದು ಸೇರುತ್ತವೆ. ನಂತರ ಶುದ್ಧಿಗೊಂಡು ದ್ರೋಣಕಲಶದಲ್ಲಿ ಸೇರಿಕೊಳ್ಳುತ್ತವೆ. ಪುರಾತನನೂ, ಪ್ರಕಾಶಮಾನವಾದ ದ್ಯುಲೋಕವಾಸಿಯೂ ಹರ್ಷಕಾರಕವಾದ ಸೋಮರಸಕ್ಕೆ ಈಶ್ವರನೂ ಆದ ಇಂದ್ರನು ಈ ಸೋಮವನ್ನು ಪಾನಮಾಡಲಿ.

## English Translation.

The green Soma juices flow at our sacrifice, and, purified, proceed direct into the pitcher: may the ancient, illustrious Indra, the sovereign of the exhilarating Soma libation, drink of this our offering.

॥ ವಿಶೇಷವಿಷಯಗಳು ॥

ತೃತೀಯಪರ್ಯಾಯದಲ್ಲಿ ಅಚ್ಛಾವಾಕನೆಂಬ ಋತ್ವಿಜನು **ಪ್ರೋ ದ್ರೋಣೇ** ಎಂಬ ಈ ಋಕ್ಕನ್ನು ಶಸ್ತ್ರಯಾಜ್ಯಾಮಂತ್ರವನ್ನಾಗಿ ಪಠಿಸಬೇಕೆಂದು ಆಶ್ವಲಾಯನಶ್ರೌತಸೂತ್ರದ—**ಪ್ರೋ ದ್ರೋಣೇ ಹರಯಃ ಕರ್ಮಾಗ್ಮನ್ನಿತಿ ಯಾಜ್ಯಾ** ಎಂಬ ಸೂತ್ರದಿಂದ (ಆ. ೬-೪) ವಿವೃತವಾಗಿರುವುದು.

॥ ಸಂಹಿತಾಪಾಠಃ ॥

ಆಸಸ್ರಾಣಾಸಃ ಶವಸಾನಮಚ್ಛೇಂದ್ರಂ ಸುಚಕ್ರೇ ರಥ್ಯಾಸೋ ಅಶ್ವಾಃ ।
ಅಭಿ ಶ್ರವ ಋಜ್ಯಂತೋ ವಹೇಯುರ್ನೂ ಚಿನ್ನು ವಾಯೋರಮೃತಂ ವಿ
ದಸ್ಯೇತ್ ॥ ೩ ॥

॥ ಪದಪಾಠಃ ॥

ಆಽಸಸ್ರಾಣಾಸಃ । ಶವಸಾನಂ । ಅಚ್ಛ । ಇಂದ್ರಂ । ಸುಽಚಕ್ರೇ । ರಥ್ಯಾಸಃ । ಅಶ್ವಾಃ ।
ಅಭಿ । ಶ್ರವಃ । ಋಜ್ಯಂತಃ । ವಹೇಯುಃ । ನು । ಚಿತ್ । ನು । ವಾಯೋಃ । ಅಮೃತಂ । ವಿ । ದಸ್ಯೇತ್ ॥

॥ ಸಾಯಣಭಾಷ್ಯಂ ॥

ಆಸಸ್ರಾಣಾಸಃ ಪರಿತೋ ಗಚ್ಛಂತೋ ರಥ್ಯಾಸೋ ರಥೇ ಯುಕ್ತಾ ಅಶ್ವಾ ಋಜ್ಯಂತ ಋಜುಗಮನಾಃ ಸಂತಃ ಸುಚಕ್ರೇ ಶೋಭನಚಕ್ರೇ ರಥೇಽವಸ್ಥಿತಂ ಶವಸಾನಂ ಬಲಮಿವಾಚರಂತಮಿಂದ್ರಂ ಶ್ರವಃ ಶ್ರವಣೀಯಮಸ್ಮದೀಯಂ ಹವಿರಚ್ಛಾಭಿಮುಖ್ಯೇನಾಭಿ ವಹೇಯುಃ । ಆವಹೇಯುಃ । ನೂ ಚಿದಿತಿ ನಿಪಾತೋ ನಿಷೇಧೇಽತ್ರ ವರ್ತತೇ । ಅಮೃತಮಮರಣಹೇತುಭೂತಂ ಸೋಮಲಕ್ಷಣಂ ಹವಿ-

ವಾರ್ಯೋರ್ಹೇತೋರ್ನುರ್ ಇದಾನೀಂ ನೂ ಚಿತ್ ನೈವ ವಿ ದಸ್ಯೇತ್ । ಕ್ಷಯಂ ನ ಪ್ರಾಪ್ನುಯಾತ್ । ಪಾತ್ರೇ ಗೃಹೀತಃ ಸೋಮೋ ವಾಯುನಾ ಶುಷ್ಯತಿ ತತಃ ಪುರೈವ ತತ್ಪಾನಾರ್ಥಮಶ್ವಾ ಇಂದ್ರಮಭಿವಹೇಯುರಿತ್ಯರ್ಥಃ ॥

॥ ಪ್ರತಿಪದಾರ್ಥ ॥

**ಅಸಸ್ರಾಣಾಸಃ**—ಸುತ್ತಲೂ ಸಂಚರಿಸುವುವೂ । **ರಥ್ಯಾಸಃ**—ರಥಕ್ಕೆ ಸೇರಿಕೊಂಡಿರುವುವೂ ಆದ । **ಅಶ್ವಾಃ**—ಅಶ್ವಗಳು । **ಋಜ್ಯಂತಃ**—ನೇರವಾದ ಗಮನವುಳ್ಳವಾಗಿ । **ಸುಚಕ್ರೇ**—ಉತ್ತಮವಾದ ಚಕ್ರವುಳ್ಳ ರಥದಲ್ಲಿ । **ಶವಸಾನಂ**—ಬಲಕ್ಕೆ ಪ್ರತಿನಿಧಿಯಾದ । **ಇಂದ್ರಂ**—ಇಂದ್ರನನ್ನು । **ಶ್ರವಃ ಅಚ್ಛ**—ಹವಿಸ್ಸಿಗೆ ಅಭಿಮುಖವಾಗಿ । **ಅಭಿ ವಹೇಯುಃ**—ಕರೆತರಲಿ । **ಅಮೃತಂ**—ಅಮೃತಕ್ಕೆ ಸಮಾನವಾದ ಸೋಮವು । **ವಾಯೋಃ**—ವಾಯುವಿನ ಶಕ್ತಿಯಿಂದ । **ನು**—ಈಗ । **ನೂ ಚಿತ್**—ಖಂಡಿತವಾಗಿ । **(ನ) ವಿದಸ್ಯೇತ್**—ಶೋಷ್ಯವಾಗದಿರಲಿ.

॥ ಭಾವಾರ್ಥ ॥

ಸರ್ವತ್ರ ಸಂಚರಿಸುವುವೂ, ರಥಕ್ಕೆ ಸೇರಿಕೊಂಡಿರುವುವೂ ಆದ ಅಶ್ವಗಳು ನೇರವಾದ ಗಮನವುಳ್ಳವಾಗಿ ಉತ್ತಮವಾದ ಚಕ್ರವುಳ್ಳ ರಥದಲ್ಲಿ ಬಲಕ್ಕೆ ಪ್ರತಿನಿಧಿಯಾದ ಇಂದ್ರನನ್ನು ಹವಿಸ್ಸಿಗೆ ಅಭಿಮುಖವಾಗಿ ಕರೆತರಲಿ. ಅಮೃತಕ್ಕೆ ಸಮಾನವಾದ ಸೋಮವು ವಾಯುವಿನ ಶಕ್ತಿಯಿಂದ ಶೋಷಿಸಲ್ಪಟ್ಟು ವ್ಯರ್ಥವಾಗದಿರಲಿ.

## English Translation.

May the everywhere-going, straight-proceeding, chariot-bearing steeds, bring the mighty Indra in his strong-wheeled car to our rite : let not the ambrosial Soma waste in the wind.

॥ ವಿಶೇಷವಿಷಯಗಳು ॥

ಈ ಋಕ್ಕಿನಲ್ಲಿ ಇಂದ್ರನಿಗೂ ವಾಯುವಿಗೂ ಇರುವ ಸಾಹಚರ್ಯವು ವರ್ಣಿತವಾಗಿದೆ. ಅನೇಕ ಸಂದರ್ಭಗಳಲ್ಲಿ ಇಂದ್ರನಿಗೂ ವಾಯುವಿಗೂ ಒಂದೇ ವಿಧವಾದ ವಿಶೇಷಣಗಳಿರುವವು. ಈ ವಿಷಯವನ್ನು ಸಮರ್ಥಿಸುವುದಕ್ಕಾಗಿ ಯಾಸ್ಕರು ಈ ಋಕ್ಕಿಗೆ ನಿರ್ವಚನವನ್ನು ಹೇಳಿದಾರೆ—

> **ಅಸಸ್ರುವಾಂಸೋಽಭಿಬಲಾಯಮಾನಮಿಂದ್ರಂ ಕಲ್ಯಾಣಚಕ್ರೇ ರಥೇ ಯೋಗಾಯ ರಥ್ಯಾ ಅಶ್ವಾ ರಥಸ್ಯ ವೋಢಾರ ಋಜ್ಯಂತ ಋಜುಗಾಮಿನೋಽನ್ನಮಭಿವಹೇಯುರ್ನವಂ ಚ ಪುರಾಣಂ ಚ । ಶ್ರವ ಇತ್ಯನ್ನನಾಮ ಶ್ರೂಯತ ಇತಿ ಸತಃ । ವಾಯೋಶ್ಚಾಸ್ಯ ಭಕ್ಷೋ ಯಥಾ ನ ವಿದಸ್ಯೇದಿತಿ । ಇಂದ್ರಪ್ರಧಾನೇತ್ಯೇಕೇ ನೈಘಂಟುಕಂ ವಾಯುಕರ್ಮೋಭಯಪ್ರಧಾನೇತ್ಯಪರಂ ॥**

(ನಿ. ೧೦–೩)

ಎಂದರೆ—ಇಂದ್ರನ ರಥವನ್ನು ಎಳೆಯುವ ಕುದುರೆಗಳು ಯಾವಾಗಲೂ ಸಂಚರಿಸುತ್ತಾ ಉತ್ತಮವಾದ ಚಕ್ರಗಳುಳ್ಳ ರಥದಲ್ಲಿ ಕುಳಿತಿರುವ ಬಹಳ ಬಲಶಾಲಿಯಾದ ಇಂದ್ರನನ್ನು ಹಳೆಯ ಮತ್ತು ಹೊಸದಾದ ಆಹಾರವನ್ನು (ಸೋಮವನ್ನು) ಸೇವಿಸುವುದಕ್ಕಾಗಿ ಕರೆತರುವವು. ಇಂದ್ರನ ಅಶ್ವಗಳು ನೇರವಾಗಿ ಎಂದರೆ ಅತ್ತಿತ್ತ ಹೋಗದೆ ಅಭಿಮುಖವಾಗಿಯೇ ಸಂಚರಿಸುವ ಸ್ವಭಾವವುಳ್ಳವು. ಇಂದ್ರನಿಗಾಗಿ ಸಿದ್ಧಪಡಿಸಲ್ಪಟ್ಟ ಸೋಮರಸವು ವಾಯುವಿನ ಶೋಷಿಸುವ ಶಕ್ತಿಯಿಂದ ಇಂಗಿಹೋಗಿ ವ್ಯರ್ಥವಾಗದಂತೆ ಇಂದ್ರನನ್ನು ಬೇಗನೆ ಅಶ್ವಗಳು ನೇರವಾಗಿ ಇಲ್ಲಿಗೆ ಕರೆತರಲಿ ಎಂದಭಿಪ್ರಾಯವು. **ಶ್ರವಃ** ಎಂಬ ಶಬ್ದವು ಅನ್ನನಾಮಗಳ ಪರ್ಯಾಯಪದವಾಗಿರುವುದು. ಅನ್ನವು ಪ್ರಸಿದ್ಧವಾಗಿರುವುದರಿಂದ ಅನ್ನಕ್ಕೆ **ಶ್ರವಃ** ಎಂದೂ ಹೆಸರು. ವಾಯುವಿನ ಶೋಷಣಶಕ್ತಿಯಿಂದ ಸೋಮವು ಇಂಗಿಹೋಗಿ ವ್ಯರ್ಥವಾಗದಿರಲಿ. ಈ ಋಕ್ಕಿನಲ್ಲಿ ಇಂದ್ರನ ವಿಷಯವು ಪ್ರಧಾನವಾಗಿ ಪ್ರತಿಪಾದಿಸಲ್ಪಟ್ಟಿರುವುದೆಂದು ಕೆಲವರ ಅಭಿಪ್ರಾಯವು. ವಾಯುವಿನ ಕರ್ಮವೇ ಪ್ರತಿಪಾದಿಸಲ್ಪಟ್ಟಿರುವುದೆಂದೂ, ಇಬ್ಬರನ್ನೂ ಸ್ತುತಿಸಿರುವುದೆಂದೂ ಇನ್ನು ಕೆಲವರ ಅಭಿಮತವು.

॥ ಸಂಹಿತಾಪಾಠಃ ॥

**ವರಿಷ್ಠೋ ಅಸ್ಯ ದಕ್ಷಿಣಾಮಿಯರ್ತೀಂದ್ರೋ ಮಘೋನಾಂ ತುವಿಕೂರ್ಮಿ-**
**ತಮಃ ।**
**ಯಯಾ ವಜ್ರಿವಃ ಪರಿಯಾಸ್ಯಂಹೋ ಮಘಾ ಚ ಧೃಷ್ಣೋ ದಯಸೇ ವಿ**
**ಸೂರೀನ್ ॥ ೪ ॥**

॥ ಪದಪಾಠಃ ॥

**ವರಿಷ್ಠಃ । ಅಸ್ಯ । ದಕ್ಷಿಣಾಂ । ಇಯರ್ತಿ । ಇಂದ್ರಃ । ಮಘೋನಾಂ । ತುವಿಕೂರ್ಮಿऽತಮಃ ।**
**ಯಯಾ । ವಜ್ರಿऽವಃ । ಪರಿऽಯಾಸಿ । ಅಂಹಃ । ಮಘಾ । ಚ । ಧೃಷ್ಣೋ ಇತಿ । ದಯಸೇ । ವಿ ।**
**ಸೂರೀನ್ ॥ ೪ ॥**

॥ ಸಾಯಣಭಾಷ್ಯಂ ॥

**ವರಿಷ್ಠ ಉರುತಮಸ್ತುವಿಕೂರ್ಮಿತಮೋऽತಿಶಯೇನ ಬಹುವಿಧಕರ್ಮೇಂದ್ರೋ ಮಘೋನಾಂ ಮಘವತಾಂ ಹವಿರ್ಲಕ್ಷಣಧನೋಪೇತಾನಾಂ ಮಧ್ಯೇऽಸ್ಯ ಯಜಮಾನಸ್ಯ ದಕ್ಷಿಣಾಂ ಯಜ್ಞೇ ದಾತವ್ಯಾಮಿಯರ್ತಿ । ಪ್ರೇರಯತಿ । ಯದ್ವಾ । ಮಘೋನಾಮಿತ್ಯಸ್ಯೇತ್ಯನೇನ ಸಮಾನಾಧಿಕರಣಂ ॥ ವಚನವ್ಯತ್ಯಯಃ ॥ ಮಘೋನೋ ಹವಿಷ್ಮತೋऽಸ್ಯ ಯಜಮಾನಸ್ಯೇತ್ಯರ್ಥಃ । ಶೇಷಃ ಪ್ರತ್ಯಕ್ಷಕೃತಃ । ಹೇ ವಜ್ರಿವೋ ವಜ್ರವನ್ನಿಂದ್ರ ಯಯಾ ದಕ್ಷಿಣಯಾ ದತ್ತಯಾಂಹಃ ಪಾಪಂ ಯಜ್ಞಸಂಬಂಧಿ ಪರಿಯಾಸಿ ವಿನಾಶಯಸಿ ಹೇ ಧೃಷ್ಣೋ ಧರ್ಷಕ ಮಘಾ ಮಘಾನಿ ಧನಾನಿ ಸೂರೀನ್ ಸ್ತೋತೄನ್ ಪುತ್ರಾಂಶ್ಚ ಯಯಾ ಚ ದಕ್ಷಿಣಯಾ ವಿ ದಯಸೇ ಪ್ರಯಚ್ಛಸಿ ತಾದೃಶೀಂ ದಕ್ಷಿಣಾಂ ಪ್ರೇರಯಸೀತ್ಯರ್ಥಃ ॥**

॥ ಪ್ರತಿಪದಾರ್ಥ ॥

**ವಜ್ರಿವಃ**—ವಜ್ರಾಯುಧಧಾರಿಯೂ! **ಧೃಷ್ಣೋ**—ಶತ್ರುದರ್ಷಕನೂ ಆದ ಎಲೈ ಇಂದ್ರನೇ! **ಯುಯೋ**—ಯಾವ ಧನದಿಂದ। **ಅಂಹಃ**—ಪಾಪವನ್ನು ! **ಪರಿಯಾಸಿ**—ನಾಶಪಡಿಸುವೆಯೋ (ಮತ್ತು)। **ಯುಯೋ**—ಯಾವ ದಾನಕರ್ಮದಿಂದ। **ಮಘಾ**—ಧನಗಳನ್ನೂ। **ಸೂರೀನ್**—ಸ್ತೋತೃಗಳಾದ ಪುತ್ರರನ್ನೂ। **ವಿದಯಸೇ**—ಅನುಗ್ರಹಿಸುವೆಯೋ ಅಂತಹ। **ದಕ್ಷಿಣಾಂ**—ದಾನಯೋಗ್ಯವಾದ ಸಂಪತ್ತನ್ನು। **ಮಘೋನಾಂ**—ಧನವಂತರ ನಡುವೆ। **ಅಸ್ಯ**—ಈ ಯಜಮಾನನಿಗೆ। **ವರಿಷ್ಠಃ**—ಅತ್ಯುತ್ತಮನೂ। **ತುವಿಕೂರ್ಮಿತಮಃ**—ನಾನಾವಿಧವಾದ ಕರ್ಮಕರ್ತನೂ। **ಇಂದ್ರಃ**—ಸರ್ವೇಶ್ವರನೂ ಆದ ನೀನು। **ಇಯರ್ತಿ**—ಒದಗಿಸುವೆ.

॥ ಭಾವಾರ್ಥ ॥

ವಜ್ರಾಯುಧಧಾರಿಯೂ ಶತ್ರುಧರ್ಷಕನೂ ಆದ ಎಲೈ ಇಂದ್ರನೇ, ಯಾವ ಧನದಾನದಿಂದ ಪಾಪವನ್ನು ನಾಶಪಡಿಸುವೆಯೋ ಮತ್ತು ಯಾವ ದಾನಕರ್ಮದಿಂದ ಧನಗಳನ್ನೂ ಮತ್ತು ಸ್ತೋತೃಗಳಾದ ಪುತ್ರರನ್ನೂ ಅನುಗ್ರಹಿಸುವೆಯೋ ಅಂತಹ ದಾನಯೋಗ್ಯರಾದ ಸಂಪತ್ತನ್ನು ಧನವಂತರ ನಡುವೆ ಈ ಯಜಮಾನನಿಗೆ ಅತ್ಯುತ್ತಮನೂ ನಾನಾವಿಧವಾದ ಕರ್ಮಕರ್ತನೂ ಸರ್ವೇಶ್ವರನೂ ಆದ ನೀನು ಒದಗಿಸುವೆ.

## English Translation.

The very strong Indra, the performer of many great deeds, instigates the donation of this (institutor of the ceremony) amongst the opulent, whereby, wielder of the thunderbolt, you remove sin, and, firm of purpose, bestow riches upon the worshippers.

॥ ಸಂಹಿತಾಪಾಠಃ ॥

ಇಂದ್ರೋ ವಾಜಸ್ಯ ಸ್ಥವಿರಸ್ಯ ದಾತೇಂದ್ರೋ ಗೀರ್ಭಿರ್ವರ್ಧತಾಂ ವೃದ್ಧಮಹಾಃ ।
ಇಂದ್ರೋ ವೃತ್ರಂ ಹನಿಷ್ಠೋ ಅಸ್ತು ಸತ್ವಾ ತಾ ಸೂರಿಃ ಪೃಣತಿ ತೂತುಜಾನಃ ॥ ೫ ॥

॥ ಪದಪಾಠಃ ॥

ಇಂದ್ರಃ । ವಾಜಸ್ಯ । ಸ್ಥವಿರಸ್ಯ । ದಾತಾ । ಇಂದ್ರಃ । ಗೀಃऽಭಿಃ । ವರ್ಧತಾಂ । ವೃದ್ಧऽಮಹಾಃ ।
ಇಂದ್ರಃ । ವೃತ್ರಂ । ಹನಿಷ್ಠಃ । ಅಸ್ತು । ಸತ್ವಾ । ಆ । ತಾ । ಸೂರಿಃ । ಪೃಣತಿ । ತೂತುಜಾನಃ ॥ ೫ ॥

॥ ಸಾಯಣಭಾಷ್ಯಂ ॥

**ಅಯಮಿಂದ್ರಃ ಸ್ಥವಿರಸ್ಯ ವಾಜಸ್ಯಾನ್ನಸ್ಯ ಬಲಸ್ಯ ವಾ ದಾತಾ ಭವತು । ಸ ಚೇಂದ್ರೋ ವೃದ್ಧಮಹಾಃ ಪ್ರವೃದ್ಧತೇಜಸ್ಕಃ ಸನ್ ಗೀರ್ಭಿರಸ್ಮದೀಯಾಭಿಃ ಸ್ತುತಿಭಿರ್ವರ್ಧತಾಂ । ಸತ್ರಾ ಶತ್ರೂಣಾಂ ಶಾತಯಿತಾ ಸ ಇಂದ್ರೋ ವೃತ್ರಮಾವರಕಂ ಶತ್ರುಂ ಹನಿಷ್ಠೋ ಹಂತೃತಮೋಽಸ್ತು । ಭವತು । ಅಪಿ ಚ ಸೂರಿಃ ಪ್ರೇರಕಃ ಸ ಇಂದ್ರಸ್ತೂತುಜಾನಸ್ತ್ವರಮಾಣಸ್ತಾ ತಾನಿ ಧನಾನ್ಯಾ ಪೃಣತಿ । ಅಸ್ಮಭ್ಯಂ ಪ್ರಯಚ್ಛತು ॥**

॥ ಪ್ರತಿಪದಾರ್ಥ ॥

**ಇಂದ್ರಃ**—ಇಂದ್ರನು । **ಸ್ಥವಿರಸ್ಯ**—ಸ್ಥಿರವಾದ । **ವಾಜಸ್ಯ**—ಅನ್ನಕ್ಕೆ । **ದಾತಾ**—ದಾತೃವಾಗಲಿ । **ಇಂದ್ರಃ**—ಇಂದ್ರನು । **ವೃದ್ಧಮಹಾಃ**—ಅತ್ಯಧಿಕವಾದ ತೇಜಸ್ಸುಳ್ಳವನಾಗಿ । **ಗೀರ್ಭಿಃ**—ನಮ್ಮ ಸ್ತುತಿಗಳಿಂದ । **ವರ್ಧತಾಂ**—ವೃದ್ಧಿಯನ್ನು ಹೊಂದಲಿ । **ಸತ್ರಾ**—ಶತ್ರುನಾಶಕನಾದ । **ಇಂದ್ರಃ**—ಇಂದ್ರನು । **ವೃತ್ರಂ**—ಶತ್ರುವನ್ನು । **ಹನಿಷ್ಠಃ**—ಶೀಘ್ರನಾಶಮಾಡುವನಾಗಿ । **ಅಸ್ತು**—ಆಗಿರಲಿ । **ಸೂರಿಃ**—ಪ್ರೇರಕನಾದ ಇಂದ್ರನು । **ತೂತುಜಾನಃ**—ತ್ವರಿತಗಮನವುಳ್ಳವನಾಗಿ । **ತಾ**—ಪ್ರಸಿದ್ಧವಾದ ಧನಗಳನ್ನು । **ಆ ಪೃಣತಿ**—ನಮಗೆ ಕೊಡಲಿ.

॥ ಭಾವಾರ್ಥ ॥

ಇಂದ್ರನು ಸ್ಥಿರವಾದ ಅನ್ನಕ್ಕೆ ದಾತೃವಾಗಲಿ. ಮತ್ತು ಅತ್ಯಧಿಕವಾದ ತೇಜಸ್ಸುಳ್ಳವನಾಗಿ ನಮ್ಮ ಸ್ತುತಿಗಳಿಂದ ವೃದ್ಧಿಯನ್ನು ಹೊಂದಲಿ. ಶತ್ರುನಾಶಕನಾದ ಇಂದ್ರನು ವೃತ್ರರೂಪವಾದ ಶತ್ರುವನ್ನು ನಾಶಪಡಿಸಲಿ. ಪ್ರೇರಕನಾದ ಇಂದ್ರನು ತ್ವರಿತಗಮನವುಳ್ಳವನಾಗಿ ಪ್ರಸಿದ್ಧವಾದ ಧನಗಳನ್ನು ನಮಗೆ ಕೊಡಲಿ.

English Translation.

Indra is the donor of substantial food: may the very illustrious Indra increase (in glory) through our praises: may Indra, the destroyer (of enemies), be the especial slayer of Vritra: may he, the animator, the quick-mover, grant us those (riches which we desire).

## ಮೂವತ್ತೆಂಟನೆಯ ಸೂಕ್ತವು

॥ ಸಾಯಣಭಾಷ್ಯಂ ॥

**ಅಪಾದಿತ ಇತಿ ಪಂಚರ್ಚಂ ಪಂಚದಶಂ ಸೂಕ್ತಂ ಭರದ್ವಾಜಸ್ಯಾರ್ಷಂ ತ್ರೈಷ್ಟುಭಮೈಂದ್ರಂ । ಅಪಾದಿತ್ಯನುಕ್ರಾಂತಂ ॥ ಮಹಾವ್ರತೇ ನಿಷ್ಕೇವಲ್ಯ ಉಕ್ತೋ ವಿನಿಯೋಗಃ ॥**

ಅನುವಾದವು—**ಅಪಾದಿತಃ** ಎಂಬ ಈ ಸೂಕ್ತವು ಮೂರನೆಯ ಅನುವಾಕದಲ್ಲಿ ಹದಿನೈದನೆಯ ಸೂಕ್ತವು. ಇದರಲ್ಲಿ ಐದು ಋಕ್ಕುಗಳಿರುವವು. ಈ ಸೂಕ್ತಕ್ಕೆ ಭರದ್ವಾಜನು ಋಷಿಯು; ಇಂದ್ರನು ದೇವತೆಯು; ತ್ರಿಷ್ಟುಪ್

ಛಂದಸ್ಸು. ಅನುಕ್ರಮಣಿಕೆಯಲ್ಲಿ—**ಅಪಾತ್** ಎಂದು ಮೊದಲಾಗಿ ಹೇಳಿರುವುದು. ಮಹಾವ್ರತೇಷ್ಟಿಯಲ್ಲಿ ನಿಷ್ಕೇವಲ್ಯಶಸ್ತ್ರಮಂತ್ರಗಳಿಗಾಗಿ ಈ ಸೂಕ್ತದ ವಿನಿಯೋಗವಿರುವುದೆಂದು ಹಿಂದೆಯೇ ಹೇಳಲಾಗಿದೆ.

## ಸೂಕ್ತ—೩೮

ಮಂಡಲ—೬ ॥ ಅನುವಾಕ—೩ ॥ ಸೂಕ್ತ—೩೮ ॥
ಅಷ್ಟಕ—೪ ॥ ಅಧ್ಯಾಯ—೭ ॥ ವರ್ಗ—೧೦ ॥
॥ ಸೂಕ್ತದಲ್ಲಿರುವ ಋಕ್ಸಂಖ್ಯೆ—೫ ॥
॥ ಋಷಿಃ—ಭಾರದ್ವಾಜೋ ಬಾರ್ಹಸ್ಪತ್ಯಃ ॥
॥ ದೇವತಾ—ಇಂದ್ರಃ ॥
॥ ಛಂದಃ—ತ್ರಿಷ್ಟುಪ್ ॥

॥ ಸಂಹಿತಾಪಾಠಃ ॥

ಅಪಾದಿತ ಉದು ನಶ್ಚಿತ್ರತಮೋ ಮಹೀಂ ಭರ್ಷದ್ದ್ಯುಮತೀಮಿಂದ್ರಹೂತಿಂ।
ಪನ್ಯಸೀಂ ಧೀತಿಂ ದೈವ್ಯಸ್ಯ ಯಾಮಂಜನಸ್ಯ ರಾತಿಂ ವನತೇ ಸುದಾನುಃ ॥೧॥

॥ ಪದಪಾಠಃ ॥

ಅಪಾತ್ । ಇತಃ । ಉತ್ । ಊಂ ಇತಿ । ನಃ । ಚಿತ್ರಽತಮಃ । ಮಹೀಂ । ಭರ್ಷತ್ । ದ್ಯುಽಮತೀಂ ।
ಇಂದ್ರಽಹೂತಿಂ ।
ಪನ್ಯಸೀಂ । ಧೀತಿಂ । ದೈವ್ಯಸ್ಯ । ಯಾಮನ್ । ಜನಸ್ಯ । ರಾತಿಂ । ವನತೇ । ಸುಽದಾನುಃ ॥ ೧ ॥

॥ ಸಾಯಣಭಾಷ್ಯಂ ॥

**ಚಿತ್ರತಮಶ್ಚಾಯನೀಯತಮ ಆಶ್ಚರ್ಯತಮೋ ವಾ ಸ ಇಂದ್ರೋ ನೋಽಸ್ಮದೀಯಾದಿತೋಽಸ್ಮಾದ್ಗ್ರಹಚಮಸಾದೇರಪಾತ್ । ಸೋಮಂ ಪಿಬತು । ಯದ್ವಾ । ಇತೋಽಸ್ಮಾಚ್ಛತ್ರೋರ್ನೋಽಸ್ಮಾನಪಾತ್ । ಪಾತು । ರಕ್ಷತು । ಉದು ಇತ್ಯೇತೌ ಪೂರಣೌ । ತಥಾ ಮಹೀಂ ಮಹತೀಂ ದ್ಯುಮತೀಂ ದೀಪ್ತಿಮತೀಮಿಂದ್ರಹೂತಿಮಿಂದ್ರಸ್ಯ ಸ್ತುತಿಂ ಭರ್ಷತ್ । ಸ ಇಂದ್ರೋ ಬಿಭರ್ತು । ಧಾರಯತು । ದೈವ್ಯಸ್ಯ ದೇವಸಂಬಂಧಿನೋ ಜನಸ್ಯ ಯಾಮನ್ ಯಾಮನಿ ಯಜ್ಞೇ ಕ್ರಿಯಮಾಣಾಂ ಪನ್ಯಸೀಂ ಸ್ತುತ್ಯತಮಾಂ ಧೀತಿಂ ಪರಿಚರಣರೂಪಾಂ ಕ್ರಿಯಾಂ ರಾತಿಂ ದಾತವ್ಯಂ ಹವಿಶ್ಚ ಸುದಾನುಃ ಶೋಭನದಾನ ಇಂದ್ರೋ ವನತೇ । ಸಂಭಜತು ॥**

॥ ಪ್ರತಿಪದಾರ್ಥ ॥

**ಚಿತ್ರತಮಃ**—ಅತ್ಯಂತ ಆಕರ್ಷಕನಾದ ಇಂದ್ರನು । **ನಃ**—ನಮ್ಮಿಂದ । **ಇತಃ**—ನಮ್ಮ ಚಮಸಾದಿ ಪಾತ್ರೆಗಳಿಂದ । **ಅಪಾತ್**—ಸೋಮವನ್ನು ಪಾನಮಾಡಲಿ । **ಮಹೀಂ**—ಮಹತ್ತಾದುದೂ । **ದ್ಯುಮತೀಂ**—

**ಕಾಂತಿಮತ್ತಾದುದೂ** ಆದ | **ಇಂದ್ರಹೂತಿಂ**—ಇಂದ್ರಪರವಾದ ಸ್ತುತಿಯನ್ನು | **ಭರ್ಷತ್**—ಭರಿಸಲಿ | **ಸುದಾನುಃ**—ಉತ್ತಮವಾದ ದಾತೃವಾದ ಇಂದ್ರನು | **ದೈವ್ಯಸ್ಯ**—ದೇವಸಂಬಂಧಿಯಾದ | **ಜನಸ್ಯ**—ಯಜಮಾನನ | **ಯೋಮನ್**—ಯಜ್ಞದಲ್ಲಿ | **ಪನ್ಯಸೀಂ**—ಪ್ರಶಸ್ಯವಾದ | **ಧೀತಿಂ**—ಪೂಜಾಕರ್ಮವನ್ನೂ | **ರಾತಿಂ**—ದಾನಾರ್ಹವಾದ ಹವಿಸ್ಸನ್ನೂ | **ವನತೇ**—ಭುಜಿಸುತ್ತಾನೆ.

॥ ಭಾವಾರ್ಥ ॥

ಅತ್ಯಂತ ಆಕರ್ಷಕನಾದ ಇಂದ್ರನು ನಮ್ಮಿಂದ ಅರ್ಪಿತವಾದ ಸೋಮವನ್ನು ನಮ್ಮ ಚಮಸಾದಿ ಪಾತ್ರೆಗಳಿಂದ ಪಾನಮಾಡಲಿ. ಮಹತ್ತಾದುದೂ, ಕಾಂತಿಮತ್ತಾದುದೂ ಆದ ಇಂದ್ರಪರವಾದ ಸ್ತುತಿಯನ್ನು ಭರಿಸಲಿ. ಉತ್ತಮವಾದ ದಾತೃವಾದ ಇಂದ್ರನು ದೇವಸಂಬಂಧಿಯಾದ ಯಜಮಾನನ ಯಜ್ಞದಲ್ಲಿ ಪ್ರಶಸ್ಯವಾದ ಪೂಜಾಕರ್ಮವನ್ನೂ ದಾನಾರ್ಹವಾದ ಹವಿಸ್ಸನ್ನೂ ಭುಜಿಸುತ್ತಾನೆ.

English Translation.

May the most marvellous Indra drink from this (our cup): may he acknowledge our earnest and brilliant invocation: may the munificent (Indra) accept the offering and the praiseworthy adoration at the sacrifice of the devout worshipper.

॥ ಸಂಹಿತಾಪಾಠಃ ॥

ದೂರಾಚ್ಚಿದಾ ವಸತೋ ಅಸ್ಯ ಕರ್ಣಾ ಘೋಷಾದಿಂದ್ರಸ್ಯ ತನ್ಯತಿ ಬ್ರುವಾಣಃ ।
ಏಯಮೇನಂ ದೇವಹೂತಿರ್ವವೃತ್ಯಾನ್ಮದ್ರ್ಯ೧ಗಿಂದ್ರಮಿಯಮೃಚ್ಯಮಾನಾ ॥ ೨ ॥

॥ ಪದಪಾಠಃ ॥

ದೂರಾತ್ । ಚಿತ್ । ಆ । ವಸತಃ । ಅಸ್ಯ । ಕರ್ಣಾ । ಘೋಷಾತ್ । ಇಂದ್ರಸ್ಯ । ತನ್ಯತಿ । ಬ್ರುವಾಣಃ । ಆ । ಇಯಂ । ಏನಂ । ದೇವಽಹೂತಿಃ । ವವೃತ್ಯಾತ್ । ಮದ್ರ್ಯಕ್ । ಇಂದ್ರಂ । ಇಯಂ । ಋಚ್ಯಮಾನಾ ॥

॥ ಸಾಯಣಭಾಷ್ಯಂ ॥

**ಅಸ್ಯೇಂದ್ರಸ್ಯ ಕರ್ಣಾ ಕರ್ಣೌ ದೂರಾಚ್ಚಿತ್ ದೂರದೇಶಾದಪ್ಯಾ ವಸತಃ । ಸ್ತೋತ್ರಶ್ರವಣಾರ್ಥಮಾಗಚ್ಛತಃ । ಇಂದ್ರಸ್ಯ ಘೋಷಾತ್ ಘೋಷಣೀಯಾತ್ ಸ್ತೋತ್ರಾದ್ಧೇತೋರ್ಬ್ರುವಾಣಃ ಸ್ತುವನ್ ಸ್ತೋತಾ ತನ್ಯತಿ । ಶಬ್ದಂ ಕರೋತಿ । ಯದ್ವಾ । ಸರ್ವತ್ರ ವಿಸ್ತಾರಯತಿ । ದೇವಹೂತಿರ್ದೇವಸ್ಯೇಂದ್ರ-**

ಸ್ಯಾಹ್ವಾನರೂಪೇಯಂ ಸ್ತುತಿಶ್ಚ ಋಚ್ಯಮಾನಾ ಸ್ವಯಂ ಪ್ರೇರ್ಯಮಾಣಾ ಸತ್ಯೇನಮಿಂದ್ರಂ ಮದ್ರ್ಯಕ್ ಮದಭಿಮುಖಮಾ ವವೃತ್ಯಾತ್ । ಆವರ್ತಯತು । ಪುನರಿಯಮಿತಿ ಪೂರಣಃ ॥

॥ ಪ್ರತಿಪದಾರ್ಥ ॥

**ದೂರಾಚ್ಚಿತ್**—ಅತ್ಯಂತ ದೂರದಿಂದಲೇ । **ಆ ವಸತಃ**—ವಾಸ ಮಾಡುತ್ತಿದ್ದರೂ । **ಅಸ್ಯ**–ಇಂದ್ರನ । **ಕರ್ಣಾ**--ಕಿವಿಗಳನ್ನು ಮುಟ್ಟಬೇಕೆಂದು । **ಇಂದ್ರಸ್ಯ**—ಇಂದ್ರನನ್ನುದ್ದೇಶಿಸಿದ । **ಘೋಷಾತ್**—ಸ್ತುತಿಯ ನಿಮಿತ್ತವಾಗಿ । **ಬ್ರುವಾಣಃ**—ಸ್ತುತಿಯನ್ನು ಪಠಿಸುತ್ತಾ ಸ್ತೋತೃವು । **ತನ್ಯತಿ**—ಶಬ್ದವನ್ನು ಮಾಡುತ್ತಾನೆ । **ದೇವಹೂತಿಃ**—ದೇವನಾದ ಇಂದ್ರನನ್ನು ಕರೆಯತಕ್ಕ । **ಇಯಂ**—ಈ ಸ್ತುತಿಯು । **ಋಚ್ಯಮಾನಾ**—ಸ್ವಯಂಪ್ರೇರಿತವಾಗಿ । **ಏನಂ ಇಂದ್ರಂ**—ಈ ಇಂದ್ರನನ್ನು । **ಮದ್ರ್ಯಕ್**--ನನಗಭಿಮುಖವಾಗಿ । **ಆ ವವೃತ್ಯಾತ್**—ತಿರುಗುವಂತೆ ಮಾಡಲಿ.

॥ ಭಾವಾರ್ಥ ॥

ಇಂದ್ರನು ಅತ್ಯಂತ ದೂರವಲ್ಲಿದ್ದರೂ ಸಹ ಇಂದ್ರನ ಕಿವಿಗಳನ್ನು ಮುಟ್ಟಬೇಕೆಂದು ಅವನನ್ನುದ್ದೇಶಿಸಿದ ಸ್ತುತಿಗಾಗಿ ಸ್ತುತಿಪಾಠಕನಾದ ಸ್ತೋತೃವು ಶಬ್ದವನ್ನು ಮಾಡುತ್ತಾನೆ. ದೇವನಾದ ಇಂದ್ರನನ್ನು ಕರೆಯತಕ್ಕ ಈ ಸ್ತುತಿಯು ಸ್ವಯಂಪ್ರೇರಿತವಾಗಿ ಈ ಇಂದ್ರನನ್ನು ನನಗಭಿಮುಖವಾಗಿ ತಿರುಗುವಂತೆ ಮಾಡಲಿ.

## English Translation.

Reciting (his praise, the worshipper) calls aloud, that by the sound he may reach the ears of Indra, although abiding afar off: may this invocation of the deity, inducing him (to come), bring Indra to my presence.

॥ ಸಂಹಿತಾಪಾಠಃ ॥

ತಂ ವೋ ಧಿಯಾ ಪರಮಯಾ ಪುರಾಜಾಮಜರಮಿಂದ್ರಮಭ್ಯನೂಷ್ಯರ್ಕೈಃ।
ಬ್ರಹ್ಮಾ ಚ ಗಿರೋ ದಧಿರೇ ಸಮಸ್ಮಿನ್ಮಹಾಂಶ್ಚ ಸ್ತೋಮೋ ಅಧಿ ವರ್ಧದಿಂದ್ರೇ ॥ ೩ ॥

॥ ಪದಪಾಠಃ ॥

ತಂ । ವಃ । ಧಿಯಾ । ಪರಮಯಾ । ಪುರಾಽಜಾಂ । ಅಜರಂ । ಇಂದ್ರಂ । ಅಭಿ । ಅನೂಷಿ । ಅರ್ಕೈಃ ।
ಬ್ರಹ್ಮ । ಚ । ಗಿರಃ । ದಧಿರೇ । ಸಂ । ಅಸ್ಮಿನ್ । ಮಹಾನ್ । ಚ । ಸ್ತೋಮಃ । ಅಧಿ । ವರ್ಧತ್ ।
ಇಂದ್ರೇ ॥ ೩ ॥

|| ಸಾಯಣಭಾಷ್ಯಂ ||

ಹೇ ಇಂದ್ರ ತಂ ತಾದೃಶಮಿಂದ್ರಂ ವಸ್ತ್ವಾಂ || ವ್ಯತ್ಯಯೇನ ಬಹುವಚನಂ || ಪರಮಯೋ-ತ್ಕೃಷ್ಟತಮಯಾ ಧಿಯಾ ಸ್ತುತ್ಯಾರ್ಕೈರರ್ಚನಸಾಧನೈರ್ಹವಿರ್ಭಿಃ ಸಾರ್ಧಮಭ್ಯನೂಷಿ । ಅಭಿಷ್ಟೌಮಿ । ಕೀದೃಶಂ । ಪುರಾಜಾಂ ಪೂರ್ವಸ್ಮಿನ್ ಕಾಲೇ ಜಾತಂ ಚಿರಂತನಮಜರಂ ಜರಾರಹಿತಂ ನಿತ್ಯಂ। ಅತಃ ಕಾರಣಾದಸ್ಮಿನ್ನಿಂದ್ರೇ ಬ್ರಹ್ಮ ಬ್ರಹ್ಮಾಣಿ ಹವಿರ್ಲಕ್ಷಣಾನ್ಯನ್ನಾನಿ ಗಿರಃ ಸ್ತುತಯಶ್ಚ ಸಂ ದಧಿರೇ । ಸಂಧೀಯಂತೇ । ಸಂಶ್ಲಿಷ್ಯಂತೇ । ಮಹಾನ್ ಪ್ರವೃದ್ಧಃ ಸ್ತೋಮಶ್ಚಾಧಿ ವರ್ಧತ್ । ಅಧಿಕಂ ವರ್ಧತೇ ||

॥ ಪ್ರತಿಪದಾರ್ಥ ॥

(ಎಲೈ ಇಂದ್ರನೇ) **ಪುರಾಜಾಂ**--ಪುರಾತನನೂ । **ಅಜರಂ**—ಜರಾರಹಿತನೂ । **ಇಂದ್ರಂ**—ಈಶ್ವರನೂ ಆದ । **ತಂ ವಃ**—ಅದೇ ನಿನ್ನನ್ನು । **ಪರಮಯಾ**—ಅತ್ಯುತ್ಕೃಷ್ಟವಾದ । **ಧಿಯಾ**—ಸ್ತುತಿಯಿಂದಲೂ । **ಅರ್ಕೈಃ**—ಪೂಜಾಸಾಧನವಾದ ಹವಿಸ್ಸುಗಳಿಂದಲೂ । **ಅಭ್ಯನೂಷಿ**—ಪೂಜಿಸುತ್ತೇನೆ । **ಅಸ್ಮಿನ್ ಇಂದ್ರೇ**—ಇದೇ ಇಂದ್ರನಲ್ಲಿ । **ಬ್ರಹ್ಮ**—ಹವಿಸ್ಸಿನ ರೂಪದ ಅನ್ನವೂ । **ಗಿರಃ**—ಸ್ತುತಿಗಳೂ । **ಸಂ ದಧಿರೇ**—ಒಟ್ಟಿಗೆ ಸೇರಿಕೊಂಡಿವೆ । **ಮಹಾನ್**—ಅತ್ಯಧಿಕವಾದ । **ಸ್ತೋಮಃ**—ಸ್ತುತಿಯೂ ಸಹ । **ಅಧಿ ವರ್ಧತ್**--ಅತ್ಯಧಿಕವಾಗಿ ವೃದ್ಧಿಯನ್ನು ಹೊಂದುತ್ತದೆ.

॥ ಭಾವಾರ್ಥ ॥

ಎಲೈ ಇಂದ್ರನೇ, ಪುರಾತನನೂ, ಜರಾರಹಿತನೂ ಈಶ್ವರನೂ ಆದ ಅದೇ ನಿನ್ನನ್ನು ಅತ್ಯುತ್ಕೃಷ್ಟವಾದ ಸ್ತುತಿಯಿಂದಲೂ ಪೂಜಾಸಾಧನವಾದ ಹವಿಸ್ಸುಗಳಿಂದಲೂ ಪೂಜಿಸುತ್ತೇನೆ. ಇದೇ ಇಂದ್ರನಲ್ಲಿ ಹವಿಸ್ಸಿನ ರೂಪದ ಅನ್ನವೂ ಸ್ತುತಿಗಳೂ ಒಟ್ಟಿಗೆ ಸೇರಿಕೊಂಡಿವೆ. ಅತ್ಯಧಿಕವಾದ ಸ್ತುತಿಯೂ ಸಹ ಅಧಿಕವಾಗಿ ವೃದ್ಧಿಯನ್ನು ಹೊಂದುತ್ತದೆ.

English Translation.

I glorify you with hymns and with pious worship, the ancient undecaying Indra, for in him are oblations and praises concentrated, and great adoration is enhanced (when addressed to him).

॥ ಸಂಹಿತಾಪಾಠಃ ॥

ವರ್ಧಾದ್ಯಂ ಯಜ್ಞ ಉತ ಸೋಮ ಇಂದ್ರಂ ವರ್ಧಾದ್ಬ್ರಹ್ಮ ಗಿರ

ಉಕ್ಥಾ ಚ ಮನ್ಮ ।

ವರ್ಧಾಹೈನಮುಷಸೋ ಯಾಮನ್ನಕ್ತೋರ್ವರ್ಧಾನ್ಮಾಸಾಃ ಶರದೋ ದ್ಯಾವ

ಇಂದ್ರಂ ॥ ೪ ॥

|| ಪದಪಾಠಃ ||

ವರ್ಧಾತ್ । ಯಂ । ಯಜ್ಞಃ । ಉತ । ಸೋಮಃ । ಇಂದ್ರಂ । ವರ್ಧಾತ್ । ಬ್ರಹ್ಮ । ಗಿರಃ । ಉಕ್ಥಾ । ಚ । ಮನ್ಮ ।

ವರ್ಧ । ಅಹ । ಏನಂ । ಉಷಸಃ । ಯಾಮನ್ । ಅಕ್ತೋಃ । ವರ್ಧಾನ್ । ಮಾಸಾಃ । ಶರದಃ । ದ್ಯಾವಃ । ಇಂದ್ರಂ ॥ ४ ॥

|| ಸಾಯಣಭಾಷ್ಯಂ ||

ಯಮಿಂದ್ರಂ ಯಜ್ಞೋ ಯಾಗೋ ವರ್ಧಾತ್ ವರ್ಧಯತಿ । ಉತಾಪಿ ಚ ತತ್ಸಾಧನಭೂತಃ ಸೋಮಶ್ಚ ಯಮಿಂದ್ರಂ ವರ್ಧಯತಿ । ತಥಾ ಬ್ರಹ್ಮ ಹವಿರ್ಲಕ್ಷಣಮನ್ನಂ ಚ ಪುರೋಡಾಶಾದಿಕಂ ಯಮಿಂದ್ರಂ ವರ್ಧಾತ್ ವರ್ಧಯತಿ । ಗಿರಃ ಸ್ತೋತ್ರಾಣಿ ಮನ್ಮ ಮನನೀಯಾನ್ಯುಕ್ಥೋಕ್ಥಶಸ್ತ್ರಾಣಿ ಚ ಯಂ ವರ್ಧಯಂತಿ ಏನಮಿಂದ್ರಮುಷಸಶ್ಚಾಕ್ತೋ ರಾತ್ರೇರ್ಯಾಮನ್ ಯಾಮನಿ ಗಮನೇ ಸತಿ ವರ್ಧ । ವರ್ಧಯಂತಿ । ಮಾಸಾಃ ಶರದಃ ಸಂವತ್ಸರಾಶ್ಚ ದ್ಯಾವೋ ದಿವಸಾಶ್ಚೈನಮಿಂದ್ರಂ ವರ್ಧಾನ್ । ವರ್ಧಯಂತಿ ॥

||ಪ್ರತಿಪದಾರ್ಥ ||

**ಯಂ ಇಂದ್ರಂ**—ಯಾವ ಇಂದ್ರನನ್ನು । **ಯಜ್ಞಂ**—ಯಾಗವು । **ವರ್ಧಾತ್**—ಪುಷ್ಟನಾಗುವಂತೆ ಮಾಡುವುದೋ । **ಉತ**—ಮತ್ತು । **ಸೋಮಃ**—ಸೋಮವೂ । **ಬ್ರಹ್ಮ**—ಹವಿಸ್ಸಿನ ರೂಪದ ಅನ್ನವೂ । **ವರ್ಧಾತ್**—ಪ್ರವೃದ್ಧನನ್ನಾಗಿ ಮಾಡುವುವೋ । **ಗಿರಃ**—ಸ್ತುತಿಗಳೂ । **ಮನ್ಮ**—ಧ್ಯಾನ ಸಾಧನಗಳಾದ । **ಉಕ್ಥಾ**—ಉಕ್ಥಮಂತ್ರಗಳೂ ಯಾವನನ್ನು ಪುಷ್ಟನನ್ನಾಗಿ ಮಾಡುವುವೋ । **ಏನಂ**-ಅದೇ ಇಂದ್ರನನ್ನು । **ಅಕ್ತೋಃ**—ರಾತ್ರಿಯ । **ಯಾಮನ್**—ಗಮನಕಾಲದಲ್ಲಿ । **ಉಷಸಃ**—ಉಷಸ್ಸುಗಳು । **ವರ್ಧ**—ಬೆಳೆಸುತ್ತವೆ । **ಮಾಸಾಃ**—ಮಾಸಗಳೂ । **ಶರದಃ**—ಸಂವತ್ಸರಗಳೂ । **ದ್ಯಾವಃ**—ದಿವಸಗಳೂ । **ಇಂದ್ರಂ**—ಇಂದ್ರನನ್ನು । **ವರ್ಧಾನ್**—ಬೆಳೆಸುತ್ತವೆ.

॥ ಭಾವಾರ್ಥ ॥

ಯಾವ ಇಂದ್ರನನ್ನು ಯಾಗವೂ ತತ್ಸಾಧನವಾದ ಸೋಮವೂ ಮತ್ತು ಹವಿಸ್ಸಿನ ರೂಪದ ಅನ್ನವೂ ಪ್ರವೃದ್ಧನನ್ನಾಗಿ ಮಾಡುವುವೋ ಮತ್ತು ಸ್ತುತಿಗಳೂ, ಧ್ಯಾನ ಸಾಧನಗಳಾದ ಉಕ್ಥಮಂತ್ರಗಳೂ ಯಾವನನ್ನು ಪುಷ್ಟನನ್ನಾಗಿ ಮಾಡುವುವೋ ಅದೇ ಇಂದ್ರನನ್ನು ರಾತ್ರಿಯ ಗಮನ ಕಾಲದಲ್ಲಿ ಉಷಸ್ಸುಗಳು ಬೆಳೆಸುತ್ತವೆ. ಮಾಸಗಳೂ ಸಂವತ್ಸರಗಳೂ ದಿವಸಗಳೂ ಇಂದ್ರನ ಪುಷ್ಟಿಗೆ ಕಾರಣವಾಗಿವೆ.

## English Translation.

Indra, whom the sacrifice, whom the libation exalts, whom the oblation, the praises, the prayers, the adoration exalt, whom the course of day and night exalts, whom months, and years, and days exalt.

|| ಸಂಹಿತಾಪಾಠಃ ||

ಏವಾ ಜಜ್ಞಾನಂ ಸಹಸೇ ಅಸಾಮಿ ವಾವೃಧಾನಂ ರಾಧಸೇ ಚ ಶ್ರುತಾಯ।
ಮಹಾಮುಗ್ರಮವಸೇ ವಿಪ್ರ ನೂನಮಾ ವಿವಾಸೇಮ ವೃತ್ರತೂರ್ಯೇಷು ॥

|| ಪದಪಾಠಃ ||

ಏವ । ಜಜ್ಞಾನಂ । ಸಹಸೇ । ಅಸಾಮಿ । ವವೃಧಾನಂ । ರಾಧಸೇ । ಚ । ಶ್ರುತಾಯ ।
ಮಹಾಂ । ಉಗ್ರಂ । ಅವಸೇ । ವಿಪ್ರ । ನೂನಂ । ಆ । ವಿವಾಸೇಮ । ವೃತ್ರಽತೂರ್ಯೇಷು ॥ ೫ ॥

|| ಸಾಯಣಭಾಷ್ಯಂ ||

ಹೇ ವಿಪ್ರ ಮೇಧಾವಿನ್ನಿಂದ್ರ ಏವ್ಯೆವಂ ಜಜ್ಞಾನಂ ಪ್ರಾದುರ್ಭವಂತಂ ಸಹಸೇ ಶತ್ರೂಣಾಮಭಿ-ಭವಾರ್ಥಮಸಾಮಿ ಬಹುಲಂ ವಾವೃಧಾನಂ ವರ್ಧಮಾನಂ ಮಹಾಂ ಮಹಾಂತಮುಗ್ರಮುದ್ಗೂರ್ಣಬಲಂ ತ್ವಾಂ ನೂನಮದ್ಯ ವೃತ್ರತೂರ್ಯೇಷು ಶ್ರುತಾಯ ವಿಶ್ರುತಾಯ ರಾಧಸೇ ಧನಾಯ ಚಾವಸೇ ರಕ್ಷಣಾಯ ಚಾ ವಿವಾಸೇಮ । ಪರಿಚರೇಮ ॥

|| ಪ್ರತಿಪದಾರ್ಥ ||

**ವಿಪ್ರ**—ಮೇಧಾವಿಯಾದ ಎಲೈ ಇಂದ್ರನೇ । **ಏವ**-ಈ ಪ್ರಕಾರವಾಗಿ । **ಜಜ್ಞಾನಂ**-ಉತ್ಪನ್ನನಾದವನೂ । **ಸಹಸೇ**—ಶತ್ರುಗಳನ್ನು ಸೋಲಿಸಲು । **ಅಸಾಮಿ**—ಅತ್ಯಧಿಕವಾಗಿ । **ವಾವೃಧಾನಂ**—ಬೆಳೆದವನೂ । **ಮಹಾಂ**—ಮಹಾತ್ಮನೂ । **ಉಗ್ರಂ**—ಭಯಂಕರವಾದ ಶಕ್ತಿಯುಳ್ಳವನೂ ಆದ ನಿನ್ನನ್ನು । **ನೂನಂ**—ಈಗ । **ವೃತ್ರತೂರ್ಯೇಷು**—ಸಂಗ್ರಾಮಗಳಲ್ಲಿ । **ಶ್ರುತಾಯ**—ಖ್ಯಾತಿಗಾಗಿಯೂ । **ರಾಧಸೇ**—ಧನಕ್ಕಾಗಿಯೂ । **ಅವಸೇ**—ರಕ್ಷಣೆಗಾಗಿಯೂ । **ಆ ವಿವಾಸೇಮ**—ಪೂಜಿಸುತ್ತೇವೆ.

|| ಭಾವಾರ್ಥ ||

ಮೇಧಾವಿಯಾದ ಎಲೈ ಇಂದ್ರನೇ, ಈ ವಿಧವಾಗಿ ಉತ್ಪನ್ನನಾದವನೂ ಶತ್ರುಗಳನ್ನು ಸೋಲಿಸಲು ಅಧಿಕವಾಗಿ ಬೆಳೆದವನೂ, ಮಹಾತ್ಮನೂ, ಭಯಂಕರವಾದ ಶಕ್ತಿಯುಳ್ಳವನೂ ಆದ ನಿನ್ನನ್ನು ಸಂಗ್ರಾಮಗಳಲ್ಲಿ ಖ್ಯಾತಿಗಾಗಿಯೂ, ಧನಕ್ಕಾಗಿಯೂ, ರಕ್ಷಣೆಗಾಗಿಯೂ ಪೂಜಿಸುತ್ತೇವೆ.

### English Translation.

So, wise Indra, may we to-day propitiate you who are manifested, to overcome (our foes), you who are greatly augmenting, mightly and free, for (the sake of) wealth, fame, and protection, and for the destruction of (our) enemies.



# ಮೂವತ್ತೊಂಭತ್ತನೆಯ ಸೂಕ್ತವು

॥ ಸಾಯಣಭಾಷ್ಯಂ ॥

**ಮಂದ್ರಸ್ಯ ಕವೇರಿತಿ ಪಂಚರ್ಚಂ ಷೋಡಶಂ ಸೂಕ್ತಂ ಭರದ್ವಾಜಸ್ಯಾರ್ಷಂ ತ್ರೈಷ್ಟುಭಮೈಂದ್ರಂ । ಮಂದ್ರಸ್ಯೇತ್ಯನುಕ್ರಾಂತ್ರಂ ॥ ಗತೋ ವಿನಿಯೋಗಃ ॥**

ಅನುವಾದವು— **ಮಂದ್ರಸ್ಯ ಕವೇಃ** ಎಂಬ ಈ ಸೂಕ್ತವು ಮೂರನೆಯ ಅನುವಾಕದಲ್ಲಿ ಹದಿನಾರನೆಯ ಸೂಕ್ತವು. ಇದರಲ್ಲಿ ಐದು ಋಕ್ಕುಗಳಿರುವವು. ಈ ಸೂಕ್ತಕ್ಕೆ ಭರದ್ವಾಜನು ಋಷಿಯು; ಇಂದ್ರನು ದೇವತೆಯು; ತ್ರಿಷ್ಟುಪ್‌ಛಂದಸ್ಸು. ಅನುಕ್ರಮಣಿಕೆಯಲ್ಲಿ - **ಮಂದ್ರಸ್ಯ** ಎಂದು ಹೇಳಿರುವುದು. ವಿನಿಯೋಗವನ್ನು ಹಿಂದೆಯೇ ಹೇಳಲಾಗಿದೆ.

## ಸೂಕ್ತ—೩೯

ಮಂಡಲ—೬ ॥ ಅನುವಾಕ—೩ ॥ ಸೂಕ್ತ—೩೯ ॥
ಅಷ್ಟಕ—೪ ॥ ಅಧ್ಯಾಯ—೭ ॥ ವರ್ಗ—೧೧ ॥
॥ ಸೂಕ್ತದಲ್ಲಿರುವ ಋಕ್ಸಂಖ್ಯೆ—೫ ॥
॥ ಋಷಿಃ—ಭರದ್ವಾಜೋ ಬಾರ್ಹಸ್ಪತ್ಯಃ ॥
॥ ದೇವತಾ—ಇಂದ್ರಃ ॥
॥ ಛಂದಃ—ತ್ರಿಷ್ಟುಪ್ ॥

॥ ಸಂಹಿತಾಪಾಠಃ ॥

ಮಂದ್ರಸ್ಯ ಕವೇರ್ದಿವ್ಯಸ್ಯ ವಹ್ನೇರ್ವಿಪ್ರಮನ್ಮನೋ ವಚನಸ್ಯ ಮಧ್ವಃ ।
ಅಪಾ ನಸ್ತಸ್ಯ ಸಚನಸ್ಯ ದೇವೇಷೋ ಯುವಸ್ವ ಗೃಣತೇ ಗೋಅಗ್ರಾಃ ॥ ೧ ॥

॥ ಪದಪಾಠಃ ॥

ಮಂದ್ರಸ್ಯ । ಕವೇಃ । ದಿವ್ಯಸ್ಯ । ವಹ್ನೇಃ । ವಿಪ್ರಽಮನ್ಮನಃ । ವಚನಸ್ಯ । ಮಧ್ವಃ ।
ಅಪಾಃ । ನಃ । ತಸ್ಯ । ಸಚನಸ್ಯ । ದೇವ । ಇಷಃ । ಯುವಸ್ವ । ಗೃಣತೇ । ಗೋಽಅಗ್ರಾಃ ॥ ೧ ॥

॥ ಸಾಯಣಭಾಷ್ಯಂ ।

ಮಂದ್ರಸ್ಯ ಮೋದನಸ್ಯ ಮದಕರಸ್ಯ ವಾ ಕವೇರ್ವಿಕ್ರಾಂತಸ್ಯ ದಿವ್ಯಸ್ಯ ದಿವಿ ಭವಸ್ಯ ವಹ್ನೇರ್ವೋಢುರ್ವಿಪ್ರಮನ್ಮನಃ। ವಿಪ್ರಾ ಮೇಧಾವಿನೋ ಮನ್ಮನಃ ಸ್ತೋತಾರೋ ಯಸ್ಯ ಸ ತಥೋಕ್ತಃ। ತಸ್ಯ ವಚನಸ್ಯ ವಚನೀಯಸ್ಯ ಸ್ತುತ್ಯಸ್ಯ ತಸ್ಯ ಸರ್ವತ್ರ ಪ್ರಸಿದ್ಧಸ್ಯ ಸಚನಸ್ಯ ಸೇವ್ಯಸ್ಯ ಏವಂಭೂತಸ್ಯ ಮಧ್ವೋ ಮಧುನಃ ಸೋಮಸ್ಯ ॥ ಕ್ರಿಯಾಗ್ರಹಣಂ ಕರ್ತವ್ಯಮಿತಿ ಕರ್ಮಣಃ ಸಂಪ್ರದಾನತ್ವಾಚ್ಚತುರ್ಥ್ಯರ್ಥೇ ಷಷ್ಠೀ ॥ ಏವಂಭೂತಂ ನೋಽಸ್ಮದೀಯಂ ಸೋಮಂ ಹೇ ಇಂದ್ರ ತ್ವಮಪಾಃ। ಪಿಬ। ಅಪಿ ಚ ಹೇ ದೇವ ದ್ಯೋತಮಾನೇಂದ್ರ ಗೃಣತೇ ಸ್ತುವತೇ ॥ ತೃತೀಯಾರ್ಥೇ ಚತುರ್ಥೀ ॥ ಸ್ತುವತಾ ಮಯಾ ಗೋಅಗ್ರಾಃ। ಗಾವೋಽಗ್ರೇ ಪ್ರಮುಖೇ ಯಾಸಾಂ ತಾದೃಶಾ ಇಷೋಽನ್ನಾನಿ ಯುವಸ್ವ। ಸಂಯೋಜಯ ॥

॥ ಪ್ರತಿಪದಾರ್ಥ ॥

(ಎಲೈ ಇಂದ್ರನೇ) **ನಃ**— ನಮ್ಮಿಂದ ಅರ್ಪಿತವೂ। **ಮಂದ್ರಸ್ಯ**- ಮದಕಾರಕವೂ। **ಕವೇಃ**— ಚೈತನ್ಯದಾಯಿಯೂ। **ದಿವ್ಯಸ್ಯ**— ದ್ಯುಲೋಕೋತ್ಪನ್ನವೂ। **ವಹ್ನೇಃ**— ಫಲವಾಹಕವೂ। **ವಿಪ್ರಮನ್ಮನಃ**— ಸ್ತೋತೃಗಳಿಂದ ಧ್ಯಾತವಾದುದೂ। **ವಚನಸ್ಯ**— ಪ್ರಶಸ್ಯವಾದುದೂ। **ತಸ್ಯ**— ಪ್ರಸಿದ್ಧವಾದುದೂ। **ಸಚನಸ್ಯ**— ಸೇವಿಸಲು ಅರ್ಹವಾದುದೂ ಆದ। **ಮಧ್ವಃ**— ಮಧುರವಾದ ಸೋಮರಸವನ್ನು। **ಅಪಾಃ**— ಪಾನಮಾಡು। **ದೇವ**— ಪ್ರಕಾಶಮಾನನಾದ ಎಲೈ ಇಂದ್ರನೇ। **ಗೃಣತೇ**— ಸ್ತುತಿಕರ್ತನಾದ ನನ್ನೊಂದಿಗೆ। **ಗೋ ಅಗ್ರಾಃ**— ಗೋವುಗಳೇ ಪ್ರಧಾನವಾಗಿ ಉಳ್ಳ। **ಇಷಃ**— ಅನ್ನಗಳನ್ನು। **ಯುವಸ್ವ**— ಯೋಜಿಸು.

॥ ಭಾವಾರ್ಥ ॥

ಎಲೈ ಇಂದ್ರನೇ, ನಮ್ಮಿಂದ ಅರ್ಪಿತವೂ, ಮದಕಾರಕವೂ, ಚೈತನ್ಯದಾಯಿಯೂ, ದ್ಯುಲೋಕೋತ್ಪನ್ನವೂ, ಫಲವಾಹಕವೂ, ಸ್ತೋತೃಗಳಿಂದ ಧ್ಯಾತವಾದುದೂ, ಪ್ರಶಸ್ಯವಾದುದೂ, ಪ್ರಸಿದ್ಧವಾದುದೂ ಸೇವಿಸಲು ಅರ್ಹವಾದುದೂ ಆದ ಮಧುರವಾದ ಸೋಮರಸವನ್ನು ಪಾನಮಾಡು. ಪ್ರಕಾಶಮಾನನಾದ ಎಲೈ ಇಂದ್ರನೇ, ಸ್ತುತಿಕರ್ತನಾದ ನನ್ನೊಂದಿಗೆ ಗೋವುಗಳೇ ಪ್ರಧಾನವಾದ ಅನ್ನಗಳನ್ನು ಯೋಜಿಸು. ಎಂದರೆ, ನನಗೆ ಅವನ್ನೆಲ್ಲಾ ತುಂಬಿಕೊಡು.

## English Translation.

Drink, Indra, of that our sweet, exhilarating, inspiring, celestial, fruit-yielding Soma, commended by the wise, and entitled to praise and preparation : bestow upon him who glorifies you, divine (Indra), food, the chiefest of which is cattle.

॥ ಸಂಹಿತಾಪಾಠಃ ॥

ಅಯಮುಶಾನಃ ಪರ್ಯದ್ರಿಮುಸ್ರಾ ಋತಧೀತಿಭಿರೃತಯುಗ್ಯುಜಾನಃ।

ರುಜದರುಗ್ಣಂ ವಿ ವಲಸ್ಯ ಸಾನುಂ ಪಣೀರ್ವಚೋಭಿರಭಿ ಯೋಧದಿಂದ್ರಃ ॥

॥ ಪದಪಾಠಃ ॥

ಅಯಂ । ಉಶಾನಃ । ಪರಿ । ಅದ್ರಿಂ । ಉಸ್ರಾಃ । ಋತಧೀತಿಽಭಿಃ । ಋತಽಯುಕ್ । ಯುಜಾನಃ ।
ರುಜತ್ । ಅರುಗ್ಣಂ । ವಿ । ವಲಸ್ಯ । ಸಾನುಂ । ಪಣೀನ್ । ವಚಃಽಭಿಃ । ಅಭಿ । ಯೋಧತ್ । ಇಂದ್ರಃ ॥

॥ ಸಾಯಣಭಾಷ್ಯಂ ॥

ಅಯಮಿಂದ್ರೋಽದ್ರಿಂ ವಲೇನ ಗೋಪಿಧಾನಾಯ ನಿರ್ಮಿತಂ ಶಿಲೋಚ್ಚಯಂ ಪರಿ ಪರಿತಃ ಪರ್ವತಸಮೀಪೇ ವಿದ್ಯಮಾನಾ ಉಸ್ರಾ ಗಾ ಉಶಾನಃ ಕಾಮಯಮಾನ ಋತಧೀತಿಭಿಃ ಸತ್ಯಕರ್ಮಭಿರಂಗಿರೋಭಿರ್ಯುಜಾನಃ ಸಂಗಚ್ಛಮಾನ ಋತಯುಕ್ ಋತೇನ ತತ್ಕೃತೇನ ಸ್ತೋತ್ರೇಣ ಯುಕ್ತಶ್ಚ ಭೂತ್ವಾ ವಲಸ್ಯಾಸುರಸ್ಯ ಸ್ವಭೂತಂ ಸಾನುಮುಚ್ಛ್ರಿತಂ ಪರ್ವತಮರುಗ್ಣಮನ್ಯೈರಭಗ್ನಂ ವಿ ರುಜತ್ । ವ್ಯಭಾಂಕ್ಷೀತ್ । ಕಿಂ ಚ ಪಣೀನ್ವಲಾನುಚರಾನೇತತ್ಸಂಜ್ಞಾನಸುರಾಂಶ್ಚ ವಚೋಭಿಃ ಸ್ತುತ್ಯೈರಾಯುಧೈಃ ಸಂತರ್ಜನರೂಪೈರ್ವಾಕ್ಯೈರೇವ ನಾಯಮಿಂದ್ರೋಽಭಿ ಯೋಧತ್ । ಅಭ್ಯಯುಧ್ಯತ್ ॥

॥ ಪ್ರತಿಪದಾರ್ಥ ॥

**ಅಯಂ ಇಂದ್ರಃ** ಈ ಇಂದ್ರನು । **ಅದ್ರಿಂ ಪರಿ**—ಪರ್ವತದ ಸುತ್ತಲೂ ಇರುವ । **ಉಸ್ರಾಃ**—ಗೋವುಗಳನ್ನು । **ಉಶಾನಃ**—ಪಡೆಯಲಪೇಕ್ಷಿಸಿ । **ಋತಧೀತಿಭಿಃ**—ಸತ್ಯಾತ್ಮಕವಾದ ಕರ್ಮಗಳುಳ್ಳ ಅಂಗಿರಸ್ಸುಗಳೊಂದಿಗೆ । **ಯುಜಾನಃ**—ಸೇರಿಕೊಂಡು । **ಋತಯುಕ್**—ಸ್ತೋತ್ರಯುಕ್ತನಾಗಿ । **ವಲಸ್ಯ**—ವಲಾಸುರನ । **ಅರುಗ್ಣಂ**—ಇತರರಿಂದ ಪ್ರವೇಶಿಸಲಾಗದ । **ಸಾನುಂ**—ಪರ್ವತದ ಉಚ್ಚಪ್ರದೇಶವನ್ನು । **ವಿ ರುಜತ್**—ಸೀಳಿಹಾಕಿದನು । **ಪಣೀನ್**—ವಲಾನುಯಾಯಿಗಳಾದ ಪಣಿಗಳನ್ನು । **ವಚೋಭಿಃ**—ಕಠಿಣವಾದ ವಾಕ್ಕುಗಳಿಂದಲೇ । **ಅಭಿ ಯೋಧತ್**—ಪ್ರತಿಭಟಿಸಿದನು.

॥ ಭಾವಾರ್ಥ ॥

ಇಂದ್ರನು ಗೋವುಗಳನ್ನು ಪ್ರತಿಬಂಧಿಸಲು ವಲನಿಂದ ನಿರ್ಮಿತವಾದ ಪರ್ವತದ ಸುತ್ತಲೂ ಇರತಕ್ಕ ಗೋವುಗಳನ್ನು ಪಡೆಯಲಪೇಕ್ಷಿಸಿ ಸತ್ಯಾತ್ಮಕವಾದ ಕರ್ಮಗಳುಳ್ಳ ಅಂಗಿರಸ್ಸುಗಳೊಂದಿಗೆ ಸೇರಿಕೊಂಡು ಸ್ತೋತ್ರಯುಕ್ತನಾಗಿ ಇತರರಿಂದ ಪ್ರವೇಶಿಸಲಾಗದ ವಲಾಸುರನ ಪರ್ವತದ ಉಚ್ಚಪ್ರದೇಶವನ್ನು ಸೀಳಿಹಾಕಿದನು. ವಲಾನುಯಾಯಿಗಳಾದ ಪಣಿಗಳನ್ನು ಕಠಿಣವಾದ ವಾಕ್ಕುಗಳಿಂದಲೇ ಪ್ರತಿಭಟಿಸಿದನು.

## English Translation.

Determined (to recover) the cattle hidden in the mountain, associated with the celebrators of pure rites, (the Angirasas), and animated by (their) veracious (praise), this (Indra) fractured the infrangible rock of Vala. and overwhelmed the Panis with reproaches.

॥ ಸಂಹಿತಾಪಾಠಃ ॥

ಅಯಂ ದ್ಯೋತಯದದ್ಯುತೋ ವ್ಯ೧ಕ್ತೂನ್ದೋಷಾ ವಸ್ತೋಃ ಶರದ ಇಂದುರಿಂದ್ರ ।

ಇಮಂ ಕೇತುಮದಧುರ್ನೂ ಚಿದಹ್ನಾಂ ಶುಚಿಜನ್ಮನ ಉಷಸಶ್ಚಕಾರ ॥ ೩ ॥

॥ ಪದಪಾಠಃ ॥

ಅಯಂ । ದ್ಯೋತಯತ್ । ಅದ್ಯುತಃ । ವಿ । ಅಕ್ತೂನ್ । ದೋಷಾ । ವಸ್ತೋಃ । ಶರದಃ । ಇಂದುಃ । ಇಂದ್ರ ।

ಇಮಂ । ಕೇತುಂ । ಅದಧುಃ । ನು । ಚಿತ್ । ಅಹ್ನಾಂ । ಶುಚಿಽಜನ್ಮನಃ । ಉಷಸಃ । ಚಕಾರ ॥ ೩ ॥

॥ ಸಾಯಣಭಾಷ್ಯಂ ॥

ಹೇ ಇಂದ್ರ ತ್ವಯ್ಯಾ ನಿಯಮ್ಯಮಾನಃ ಪೀಯಮಾನೋ ವಾಯಮಿಂದುಃ ಸೋಮೋಽದ್ಯುತೋಽದ್ಯೋತಮಾನಾನಕ್ತೂನ್ । ಅಕ್ತುರಿತಿ ರಾತ್ರಿನಾಮ । ಅತ್ರ ಚ ತತ್ಸಂಬಂಧಾತ್ಪಕ್ಷಮಾಸಾದಯೋ ಲಕ್ಷ್ಯಂತೇ । ಪಕ್ಷಮಾಸಾದೀನ್ ತಥಾ ದೋಷಾ ರಾತ್ರಿಂ ವಸ್ತೋರ್ದಿವಸಂ ಶರದಃ ಸಂವತ್ಸರಾಂಶ್ಚ ವಿ ದ್ಯೋತಯತ್ । ವ್ಯದೀಪಯತ್ । ಕುತ ಇತ್ಯತ ಆಹ । ನೂ ಚಿತ್ ಪುರಾ ದೇವಾ ಇಮಂ ಸೋಮಂ ಚಂದ್ರಾತ್ಮನಾ ನಭಸಿ ವರ್ತಮಾನಮಹ್ನಾಂ ದಿವಸಾನಾಂ ಕೇತುಂ ಪ್ರಜ್ಞಾಪಕಂ ಯಸ್ಮಾದದಧುಃ ವ್ಯದಧುಃ ಅಕುರ್ವನ್ ತಸ್ಮಾದನೇನ ಪಕ್ಷಮಾಸಾದಯಃ ಸರ್ವೇ ಪ್ರಕಾಶ್ಯಂತೇ । ಚಂದ್ರಗತ್ಯಧೀನತ್ವಾತ್ತಿಥಿವಿಭಾಗಾನಾಂ । ಅಪಿ ಚಾಯಂ ಸೋಮ ಉಷಸ ಉಷಃಕಾಲಾನ್ ಶುಚಿಜನ್ಮನ ಆತ್ಮೀಯೇನ ತೇಜಸಾ ಶುದ್ಧೋದಯಾನ್ ಚಕಾರ । ಕರೋತಿ ॥

॥ ಪ್ರತಿಪದಾರ್ಥ ॥

**ಇಂದ್ರ**—ಎಲೈ ಇಂದ್ರನೇ । **ನೂ ಚಿತ್**—ಪೂರ್ವದಲ್ಲಿ । **ಇಮಂ**—ಈ ಸೋಮನನ್ನು । **ಅಹ್ನಾಂ**—ದಿವಸಗಳಿಗೆ । **ಕೇತುಂ**—(ಚಂದ್ರರೂಪನಾದ) ಪ್ರಜ್ಞಾಪಕನನ್ನಾಗಿ । **ಅದಧುಃ**—(ದೇವತೆಗಳು) ಕಲ್ಪಿಸಿದರು । (ಆದುದರಿಂದಲೇ) । **ಅಯಂ ಇಂದುಃ**—ಈ ಸೋಮವು । **ಅದ್ಯುತಃ**—ಪ್ರಕಾಶರಹಿತವಾದ । **ಅಕ್ತೂನ್**—ಕೃಷ್ಣಪಕ್ಷಾದಿಗಳ । **ದೋಷಾ**—ರಾತ್ರಿಗಳನ್ನೂ । **ವಸ್ತೋಃ**—ದಿವಸಗಳನ್ನೂ । **ಶರದಃ**—ಸಂವತ್ಸರಗಳನ್ನೂ । **ವಿ ದ್ಯೋತಯತ್**—ಪ್ರಕಾಶಪಡಿಸಿದನು । **ಉಷಸಃ**—ಉಷಸ್ಸುಗಳನ್ನು । **ಶುಚಿಜನ್ಮನಃ**—ಪರಿಶುದ್ಧವಾದ ಜನ್ಮವುಳ್ಳವನ್ನಾಗಿ । **ಚಕಾರ**—ಮಾಡಿದನು.

॥ ಭಾವಾರ್ಥ ॥

ಎಲೈ ಇಂದ್ರನೇ, ದೇವತೆಗಳು ಪೂರ್ವದಲ್ಲಿ ಈ ಸೋಮನನ್ನು ದಿವಸಗಳಿಗೆ ಚಂದ್ರರೂಪನಾದ ಪ್ರಜ್ಞಾಪಕನನ್ನಾಗಿ ಕಲ್ಪಿಸಿದರು. ಆದುದರಿಂದಲೇ ಈ ಸೋಮವು ಪ್ರಕಾಶರಹಿತವಾದ ಕೃಷ್ಣಪಕ್ಷಾದಿಗಳ ರಾತ್ರಿಗಳನ್ನೂ ದಿವಸಗಳನ್ನೂ, ಸಂವತ್ಸರಗಳನ್ನೂ ಪ್ರಕಾಶಪಡಿಸಿದನು. ಉಷಸ್ಸುಗಳಿಗೆ ಪರಿಶುದ್ಧವಾದ ಜನ್ಮಗಳನ್ನುಂಟುಮಾಡಿದನು.

## English Translation

This Soma, Indra, (quaffed by you), has lighted up the unlustrous nights, and days and nights, and years : (the gods) of old have established it as the ensign of days, and it has made the dawns generated in light.

॥ ಸಂಹಿತಾಪಾಠಃ ॥

ಅಯಂ ರೋಚಯದರುಚೋ ರುಚಾನೋ೩ಯಂ ವಾಸಯದ್ವ್ಯೃ೧ತೇನ ಪೂರ್ವೀಃ ।

ಅಯಮೀಯತ ಋತಯುಗ್ಭಿರಶ್ವೈಃ ಸ್ವರ್ವಿದಾ ನಾಭಿನಾ ಚರ್ಷಣಿಪ್ರಾಃ ॥

॥ ಪದಪಾಠಃ ॥

ಅಯಂ । ರೋಚಯತ್ । ಅರುಚಃ । ರುಚಾನಃ । ಅಯಂ । ವಾಸಯತ್ । ವಿ । ಋತೇನ । ಪೂರ್ವೀಃ ।

ಅಯಂ । ಈಯತೇ । ಋತಯುಕ್ಽಭಿಃ । ಅಶ್ವೈಃ । ಸ್ವಃಽವಿದಾ । ನಾಭಿನಾ । ಚರ್ಷಣಿಽಪ್ರಾಃ ॥ ೪ ॥

॥ ಸಾಯಣಭಾಷ್ಯಂ ॥

ಅಯಮಿಂದ್ರೋ ರುಚಾನೋ ರೋಚಮಾನಃ ಸೂರ್ಯಾತ್ಮನಾ ದೀಪ್ಯಮಾನೋಽರುಚಃ ಪ್ರಕಾಶರಹಿತಾನ್ ತಮಸಾ ಮಲೀಮಸಾನ್ ಸರ್ವಾಂಲ್ಲೋಕಾನ್ರೋಚಯತ್ । ಪ್ರಕಾಶಯತಿ । ತಥಾ ಪೂರ್ವೀರ್ಬಹ್ವೀರುಷಸಶ್ಚಾಯಮಿಂದ್ರ ಋತೇನ ಸತ್ಯಭೂತೇನ ಸರ್ವತ್ರ ಗಮನಶೀಲೇನ ವಾ ತೇಜಸಾ ವಿ ವಾಸಯತ್ । ವ್ಯಾಪಯತಿ । ತತ್ರತ್ಯಾನಿ ತಮಾಂಸಿ ನಿವರ್ತಯತೀತ್ಯರ್ಥಃ । ತಥಾ ಋತಯುಗ್ಭಿ-ರ್ಋತೇನ ಸ್ತೋತ್ರೇಣ ಯುಜ್ಯಮಾನೈರಶ್ವೈರ್ನಾಭಿನಾ ಸಂನದ್ಧೇನ ಸ್ವರ್ವಿದಾ ಸುಷ್ಠ್ವರಣೀಯಸ್ಯ ಧನಸ್ಯ ಲಂಭಕೇನ ರಥೇನ ಚರ್ಷಣಿಪ್ರಾಶ್ಚರ್ಷಣೀನಾಂ ಮನುಷ್ಯಾಣಾಂ ಕಾಮೈಃ ಪೂರಯಿತಾ ಸನ್ ಅಯಮೇವೇಂದ್ರ ಈಯತೇ । ಗಚ್ಛತಿ ॥

॥ ಪ್ರತಿಪದಾರ್ಥ ॥

**ಅಯಂ**— ಈ ಇಂದ್ರನು । **ರುಚಾನಃ**—ಸೂರ್ಯರೂಪದಲ್ಲಿ ಪ್ರಕಾಶಿಸುತ್ತಾ । **ಅರುಚಃ**— ಪ್ರಕಾಶ ರಹಿತವಾದ ಲೋಕಗಳನ್ನೆಲ್ಲಾ । **ರೋಚಯತ್**— ಪ್ರಕಾಶಪಡಿಸುತ್ತಾನೆ । **ಪೂರ್ವೀಃ**-ಅನೇಕವಾದ ಉಷಸ್ಸುಗಳನ್ನು । **ಅಯಂ**—ಈ ಇಂದ್ರನು । **ಋತೇನ**-ತನ್ನ ಸತ್ಯಾತ್ಮಕವಾದ ತೇಜಸ್ಸಿನಿಂದ । **ವಿ ವಾಸಯತ್**— ವ್ಯಾಪಿಸಿದ್ದಾನೆ । **ಋತಯುಗ್ಭಿಃ**—ಸ್ತುತಿಯುಕ್ತವಾದ । **ಅಶ್ವೈಃ**—ಅಶ್ವಗಳಿಂದ । **ನಾಭಿನಾ**— ಕಟ್ಟಲ್ಪಟ್ಟುದೂ । **ಸ್ವರ್ವಿದಾ**—ಸಂಪದ್ಯುಕ್ತವಾದುದೂ ಆದ ರಥದೊಡನೆ । **ಚರ್ಷಣಿಪ್ರಾಃ**—ಮಾನವರಿಗೆಲ್ಲಾ ಕಾಮಪೂರಕನಾಗಿ । **ಅಯಂ**— ಈ ಇಂದ್ರನು । **ಈಯತೇ**— ಸಂಚರಿಸುತ್ತಾನೆ.

॥ ಭಾವಾರ್ಥ ॥

ಇದೇ ಇಂದ್ರನು ಸೂರ್ಯರೂಪದಲ್ಲಿ ಪ್ರಕಾಶಿಸುತ್ತಾ ಪ್ರಕಾಶರಹಿತವಾದ ಲೋಕಗಳನ್ನೆಲ್ಲಾ ಪ್ರಕಾಶ ಪಡಿಸುತ್ತಾನೆ. ಅನೇಕವಾದ ಉಷಸ್ಸುಗಳನ್ನು ಈ ಇಂದ್ರನು ತನ್ನ ಸತ್ಯಾತ್ಮಕವಾದ ತೇಜಸ್ಸಿನಿಂದ ವ್ಯಾಪಿಸಿದ್ದಾನೆ. ಸ್ತುತಿಯುಕ್ತವಾದ ಅಶ್ವಗಳಿಂದ ಕಟ್ಟಲ್ಪಟ್ಟುದೂ, ಸಂಪದ್ಯುಕ್ತವಾದುದೂ ಆದ ರಥದೊಡನೆ ಮಾನವರಿಗೆಲ್ಲಾ ಕಾಮಪೂರಕನಾಗಿ ಇಂದ್ರನು ಸಂಚರಿಸುತ್ತಾನೆ.

English Translation.

This radiant (Indra) has illumed the non-radiant (worlds): he has pervaded many dawns with true lustre: the benefactor of men moves in (a chariot) drawn by horses, harnessed by praise, laden with riches.

॥ ಸಂಹಿತಾಪಾಠಃ ॥

ನೂ ಗೃಣಾನೋ ಗೃಣತೇ ಪ್ರತ್ನ ರಾಜನ್ನಿಷಃ ಪಿನ್ವ ವಸುದೇಯಾಯ ಪೂರ್ವೀಃ ।
ಅಪ ಓಷಧೀರವಿಷಾ ವನಾನಿ ಗಾ ಅರ್ವತೋ ನೄನೃಚಸೇ ರಿರೀಹಿ ॥ ೫ ॥

॥ ಪದಪಾಠಃ ॥

ನು । ಗೃಣಾನಃ । ಗೃಣತೇ । ಪ್ರತ್ನ । ರಾಜನ್ । ಇಷಃ । ಪಿನ್ವ । ವಸುಽದೇಯಾಯ । ಪೂರ್ವೀಃ ।
ಅಪಃ । ಓಷಧೀಃ । ಅವಿಷಾ । ವನಾನಿ । ಗಾಃ । ಅರ್ವತಃ । ನೄನ್ । ಋಚಸೇ । ರಿರೀಹಿ ॥ ೫ ॥

॥ ಸಾಯಣಭಾಷ್ಯಂ ॥

ಹೇ ಪ್ರತ್ನ ಪುರಾತನ ರಾಜನ್ ರಾಜಮಾನೇಂದ್ರ ಗೃಣಾನಃ ಸ್ತೂಯಮಾನಸ್ತ್ವಂ ವಸುದೇಯಾಯ ವಸೂನಿ ಧನಾನಿ ತ್ವಯಾ ದೇಯಾನಿ ಯಸ್ಮೈ ತಾದೃಶಾಯ ಗೃಣತೇ ಸ್ತುವತೇ ಪೂರ್ವೀರ್ಬಹ್ವೀರಿಷೋಽನ್ನಾನಿ ನು ಕ್ಷಿಪ್ರಂ ಪಿನ್ವ। ಸಿಂಚ। ಪ್ರಯಚ್ಛೇತ್ಯರ್ಥಃ। ಕಿಂ ಚ ಋಚಸೇಽರ್ಚಯಿತ್ರೇ ಸ್ತೋತ್ರೇಽಪೋ ವೃಷ್ಟಿಲಕ್ಷಣಾನ್ಯುದಕಾನ್ಯೋಷಧೀರ್ವ್ರೀಹ್ಯಾದೀನ್ ಅವಿಷಾ ವಿಷರಹಿತಾನಿ ರಕ್ಷಕಾಣಿ ವಾ ವನಾನಿ ವೃಕ್ಷಜಾತಾನಿ ಚೂತಪನಸಾದೀನಿ ಗಾ ಅರ್ವತೋಽಶ್ವಾನ್ನೄನ್ಮನುಷ್ಯಾಂಶ್ಚ ಕರ್ಮಕರಾನ್ ರಿರೀಹಿ। ದೇಹಿ॥

॥ ಪ್ರತಿಪದಾರ್ಥ ॥

**ಪ್ರತ್ನ**—ಪುರಾತನನೂ। **ರಾಜನ್**—ಪ್ರಕಾಶಮಾನನೂ ಆದ ಎಲೈ ಇಂದ್ರನೇ। **ಗೃಣಾನಃ**—ಸ್ತುತಿಸಲ್ಪಡತಕ್ಕ ನೀನು। **ವಸುದೇಯಾಯ**—ಯಾರಿಗೆ ಧನವನ್ನು ಕೊಡಬೇಕೋ ಅಂತಹ। **ಗೃಣತೇ**—ಸ್ತುತಿಕರ್ತನಿಗೆ। **ಪೂರ್ವೀಃ**—ಅನೇಕ ವಿಧವಾದ। **ಇಷಃ**—ಅನ್ನಗಳನ್ನು। **ನು**—ಶೀಘ್ರವಾಗಿ। **ಪಿನ್ವ**—ಒದಗಿಸು। **ಋಚಸೇ**—ನಿನ್ನ ಪೂಜಕನಿಗೆ। **ಅಪಃ**—ವೃಷ್ಟ್ಯುದಕಗಳನ್ನೂ। **ಓಷಧೀಃ**—ವ್ರೀಹ್ಯಾದಿಗಳನ್ನೂ। **ಅವಿಷಾ**—ವಿಷರಹಿತವಾದ। **ವನಾನಿ**—ವೃಕ್ಷಗಳನ್ನೂ। **ಗಾಃ**—ಗೋವುಗಳನ್ನೂ। **ಅರ್ವತಃ**—ಅಶ್ವಗಳನ್ನೂ। **ನೄನ್**—ಪುತ್ರಭೃತ್ಯಾದಿಗಳನ್ನೂ। **ರಿರೀಹಿ**—ಒದಗಿಸು.

॥ ಭಾವಾರ್ಥ ॥

ಪುರಾತನನೂ, ಪ್ರಕಾಶಮಾನನೂ ಆದ ಎಲೈ ಇಂದ್ರನೇ, ಸ್ತುತಿಸಲ್ಪಡತಕ್ಕ ನೀನು ಯಾರಿಗೆ ಧನವನ್ನು ಕೊಡಬೇಕೋ ಅಂತಹ ಸ್ತುತಿಕರ್ತನಿಗೆ ಅನೇಕ ವಿಧವಾದ ಅನ್ನಗಳನ್ನು ಶೀಘ್ರವಾಗಿ ಒದಗಿಸು. ನಿನ್ನ ಪೂಜಕನಿಗೆ ವೃಷ್ಟ್ಯುದಕಗಳನ್ನೂ, ವ್ರೀಹ್ಯಾದಿಗಳನ್ನೂ, ವಿಷರಹಿತವಾದ ವೃಕ್ಷಗಳನ್ನೂ, ಗೋವುಗಳನ್ನೂ, ಅಶ್ವಗಳನ್ನೂ, ಪುತ್ರಭೃತ್ಯಾದಿಗಳನ್ನೂ ಒದಗಿಸು.

English Translation.

Sovereign of old, when glorified, you bestow upon him who praises you, and to whom affluence is due, abundant food: grant to the worshipper water, plants, innoxious woods, cattle, horses, and men.



## ನಲವತ್ತನೆಯ ಸೂಕ್ತವು

॥ ಸಾಯಣಭಾಷ್ಯಂ ॥

ಇಂದ್ರ ಪಿಬೇತಿ ಪಂಚರ್ಚಂ ಸಪ್ತದಶಂ ಸೂಕ್ತಂ ಭರದ್ವಾಜಸ್ಯಾರ್ಷಂ ತ್ರೈಷ್ಟುಭಮೈಂದ್ರಂ। ಇಂದ್ರ ಪಿಬೇತ್ಯನುಕ್ರಾಂತಂ॥ ಗತಃ ಸೂಕ್ತವಿನಿಯೋಗಃ॥ ಪ್ರಥಮೇ ರಾತ್ರಿಪರ್ಯಾಯೇಽಚ್ಛಾವಾಕಸ್ಯಾದ್ಯಾ ಶಸ್ತ್ರಯಾಜ್ಯಾ। ಸೂತ್ರಿತಂ ಚ। ಇಂದ್ರ ಪಿಬ ತುಭ್ಯಂ ಸುತೋ ಮದಾಯೇತಿ ಯಾಜ್ಯಾ ಆ. ೬-೪॥ ಇತಿ॥

ಅನುವಾದವು— **ಇಂದ್ರ ಪಿಬ** ಎಂಬ ಈ ಸೂಕ್ತವು ಮೂರನೆಯ ಅನುವಾಕದಲ್ಲಿ ಹದಿನೇಳನೆಯ ಸೂಕ್ತವು. ಇವರಲ್ಲಿ ಐದು ಋಕ್ಕುಗಳಿರುವವು. ಈ ಸೂಕ್ತಕ್ಕೆ ಭರದ್ವಾಜನು ಋಷಿಯು; ಇಂದ್ರನು ದೇವತೆಯು; ತ್ರಿಷ್ಟುಪ್ ಛಂದಸ್ಸು. ಅನುಕ್ರಮಣಿಕೆಯಲ್ಲಿ— **ಇಂದ್ರ ಪಿಬ** ಎಂದು ಹೇಳಿರುವುದು. ವಿನಿಯೋಗವನ್ನು ಹಿಂದೆಯೇ ಹೇಳಲಾಗಿದೆ. ಮತ್ತು ಪ್ರಥಮಛಂದೋಮಾಮಂತ್ರಗಳ ಪಠನಕಾಲದಲ್ಲಿ ರಾತ್ರಿಪರ್ಯಾಯದಲ್ಲಿ ಅಚ್ಛಾವಾಕನೆಂಬ ಋತ್ವಿಜನು ಈ ಸೂಕ್ತದ ಮೊದಲನೆಯ ಋಕ್ಕನ್ನು ಶಸ್ತ್ರಯಾಜ್ಯಾಮಂತ್ರವನ್ನಾಗಿ ಪಠಿಸಬೇಕೆಂದು ಆಶ್ವಲಾಯನ ಶ್ರೌತಸೂತ್ರದ— **ಇಂದ್ರ ಪಿಬ ತುಭ್ಯಂ ಸುತೋ ಮದಾಯೇತಿ ಯಾಜ್ಯಾ** ಎಂಬ ಸೂತ್ರದಿಂದ (ಆ. ೬-೪) ವಿವೃತವಾಗಿರುವುದು.

## ಸೂಕ್ತ—೪೦

ಮಂಡಲ—೬ ॥ ಅನುವಾಕ—೩ ॥ ಸೂಕ್ತ—೪೦ ॥
ಅಷ್ಟಕ—೪ ॥ ಅಧ್ಯಾಯ - ೭ ॥ ವರ್ಗ—೧೨ ॥
॥ ಸೂಕ್ತದಲ್ಲಿರುವ ಋಕ್ಸಂಖ್ಯೆ—೫ ॥
॥ ಋಷಿಃ—ಭರದ್ವಾಜೋ ಬಾರ್ಹಸ್ಪತ್ಯಃ ॥
॥ ದೇವತಾ—ಇಂದ್ರಃ ॥
॥ ಛಂದಃ—ತ್ರಿಷ್ಟುಪ್ ॥

॥ ಸಂಹಿತಾಪಾಠಃ ॥

**ಇಂದ್ರ ಪಿಬ ತುಭ್ಯಂ ಸುತೋ ಮದಾಯಾವ ಸ್ಯ ಹರೀ ವಿ ಮುಚಾ ಸಖಾಯಾ ।**
**ಉತ ಪ್ರ ಗಾಯ ಗಣ ಆ ನಿಷದ್ಯಾಥಾ ಯಜ್ಞಾಯ ಗೃಣತೇ ವಯೋ ಧಾಃ॥**

॥ ಪದಪಾಠಃ ॥

ಇಂದ್ರ । ಪಿಬ । ತುಭ್ಯಂ । ಸುತಃ । ಮದಾಯ । ಅವ । ಸ್ಯ । ಹರೀ ಇತಿ । ವಿ । ಮುಚ । ಸಖಾಯಾ ।
ಉತ । ಪ್ರ । ಗಾಯ । ಗಣೇ । ಆ । ನಿಽಸದ್ಯ । ಅಥ । ಯಜ್ಞಾಯ । ಗೃಣತೇ । ವಯಃ । ಧಾಃ ॥ ೧ ॥

॥ ಸಾಯಣಭಾಷ್ಯಂ ॥

ಹೇ ಇಂದ್ರ ತಂ ಸೋಮಂ ಪಿಬ ಯಃ ಸೋಮಸ್ತುಭ್ಯಂ ಮದಾಯ ಮದಾರ್ಥಂ ಸುತೋಽಭಿಷುತಃ । ಯತಸ್ತ್ವಯಾ ಸೋಮಃ ಪಾತವ್ಯೋಽತಃ ಕಾರಣಾತ್ಸಖಾಯಾ ಸಮಾನಖ್ಯಾನೌ ಮಿತ್ರಭೂತೌ ವಾ ಹರೀ ಅಶ್ವಾವವ ಸ್ಯ । ಅವಸ್ಥಾಪಯ । ತದನಂತರಂ ವಿ ಮುಚ । ರಥಾದ್ವಿಮುಂಚ ।

ಉತಾಪಿ ಚ ಗಣೇಽಸ್ಮತ್ಸ್ತೋತೃಸಂಘೇ ಆ ಆಭಿಮುಖ್ಯೇನ ನಿಷದ್ಯೋಪವಿಶ್ಯ ಪ್ರ ಗಾಯ । ಅಸ್ಮಾಭಿಃ ಕೃತಂ ಸ್ತೋತ್ರಮುಪಶ್ಲೋಕಯ । ಅಥಾನಂತರಂ ಯಜ್ಞಾಯ ಯಜಮಾನಾಯ ಗೃಣತೇ ಸ್ತುವತೇ ವಯೋಽನ್ನಂ ಧಾಃ । ದೇಹಿ ॥

॥ ಪ್ರತಿಪದಾರ್ಥ ॥

ಇಂದ್ರ—ಎಲೈ ಇಂದ್ರನೇ । ತುಭ್ಯಂ—ನಿನಗಾಗಿ । ಮದಾಯ—ನಿನಗೆ ಹರ್ಷವನ್ನುಂಟುಮಾಡಲು **ಸುತಃ**—ಯಾವ ಸೋಮರಸವು ಹಿಂಡಲ್ಪಟ್ಟಿದೆಯೋ ಅದನ್ನು । **ಪಿಬ**—ಪಾನಮಾಡು । **ಸಖಾಯಾ**—ನಿನಗೆ ಸಖಿಭೂತರಾದ । **ಹರೀ**—ಅಶ್ವಗಳನ್ನು । **ಅವ ಸ್ಯ**—ನಿಲ್ಲಿಸು । **ವಿ ಮುಚ**—(ನಂತರ) ಅವನ್ನು ಬಿಚ್ಚು । **ಉತ**-ಮತ್ತು । **ಗಣೇ**-ನಮ್ಮ ಸಮೂಹದಲ್ಲಿ । **ಆ ನಿಷದ್ಯ**-ನಮಗಭಿಮುಖವಾಗಿ ಕುಳಿತು । **ಪ್ರ ಗಾಯ**-ನಮ್ಮ ಸ್ತುತಿಯನ್ನು ಅಂಗೀಕರಿಸುವಂತೆ ಅನುಗ್ರಹಿಸು । **ಅಥ**—ಅನಂತರ । **ಯಜ್ಞಾಯ**-ಯಜಮಾನನಾದ । **ಗೃಣತೇ**—ಸ್ತುತಿಕರ್ತನಿಗೆ । **ವಯಃ**—ಅನ್ನವನ್ನು । **ಧಾಃ**—ಕೊಡು.

॥ ಭಾವಾರ್ಥ ॥

ಎಲೈ ಇಂದ್ರನೇ, ನಿನಗೆ ಹರ್ಷವನ್ನುಂಟುಮಾಡಲು ನಿನಗಾಗಿ ಹಿಂಡಲ್ಪಟ್ಟಿರುವ ಸೋಮವನ್ನು ಪಾನ ಮಾಡು. ನಿನಗೆ ಸಖಿಭೂತರಾದ ಅಶ್ವಗಳನ್ನು ನಿಲ್ಲಿಸು. ನಂತರ ಅವನ್ನು ಬಿಚ್ಚು, ಮತ್ತು ನಮ್ಮ ಸಮೂಹದಲ್ಲಿ ನಮಗಭಿಮುಖವಾಗಿ ಕುಳಿತು ನಮ್ಮ ಸ್ತುತಿಯನ್ನು ಅಂಗೀಕರಿಸುವಂತೆ ಅನುಗ್ರಹಿಸು. ಅನಂತರ ಯಜಮಾನನಾದ ಸ್ತುತಿಕರ್ತನಿಗೆ ಅನ್ನವನ್ನು ಕೊಡು.

English Translation.

Drink, Indra, (the Soma) that is effused for your exhilaration : stop your friendly steeds : let them loose : sitting in our society, respond to our hymns : give food to him who lauds and worships you.

॥ ಸಂಹಿತಾಪಾಠಃ ॥

ಅಸ್ಯ ಪಿಬ ಯಸ್ಯ ಜಜ್ಞಾನ ಇಂದ್ರ ಮದಾಯ ಕ್ರತ್ವೇ ಅಪಿಬೋ ವಿರಪ್ಶಿನ್ ।
ತಮು ತೇ ಗಾವೋ ನರ ಆಪೋ ಅದ್ರಿರಿಂದುಂ ಸಮಹ್ಯನ್ಪೀತಯೇ ಸಮಸ್ಮೈ ॥ ೨ ॥

॥ ಪದಪಾಠಃ ॥

**ಅಸ್ಯ । ಪಿಬ । ಯಸ್ಯ । ಜಜ್ಞಾನಃ । ಇಂದ್ರ । ಮದಾಯ । ಕ್ರತ್ವೇ । ಅಪಿಬಃ । ವಿऽರಪ್ಶಿನ್ ।**

**ತಂ । ಊಂ ಇತಿ । ತೇ । ಗಾವಃ । ನರಃ । ಆಪಃ । ಅದ್ರಿಃ । ಇಂದುಂ । ಸಂ । ಅಹ್ಯನ್ । ಪೀತಯೇ । ಸಂ । ಅಸ್ಮೈ ॥ ೨ ॥**

॥ ಸಾಯಣಭಾಷ್ಯಂ ॥

**ದ್ವಿತೀಯೇ ರಾತ್ರಿಪರ್ಯಾಯೇऽಚ್ಛಾವಾಕಸ್ಯಾಸ್ಯ ಪಿಬೇತಿ ಶಸ್ತ್ರಯಾಜ್ಯಾ । ಸೂತ್ರಿತಂ ಚ । ಅಸ್ಯ ಪಿಬೇತಿ ಯಾಜ್ಯಾ । ಆ. ೬-೪ । ಇತಿ.**

**ಹೇ ಇಂದ್ರ ಅಸ್ಯೇಮಂ ಸೋಮಂ ಪಿಬ । ಹೇ ವಿರಪ್ಶಿನ್ ಮಹನ್ ಜಜ್ಞಾನೋ ಜಾಯಮಾನ ಏವ ತ್ವಂ ಯಸ್ಯ ಯಂ ಸೋಮಮಪಿಬಃ ಪೂರ್ವಂ ಪೀತವಾನಸಿ । ಕಿಮರ್ಥಂ । ಮದಾಯ ಹರ್ಷಾಯ ಕ್ರತ್ವೇ ಕರ್ಮಣೇ ವೃತ್ರವಧಾದಿಲಕ್ಷಣಂ ವೀರ್ಯಕರ್ಮ ಕರ್ತುಂ ಚ । ತಮು ತಾದೃಶಮೇವೇಂದುಂ ಸೋಮಂ ಗಾವೋ ಗವಿ ಭವಾಃ ಶ್ರಪಣಸಾಧನಾಃ ಕ್ಷೀರಾದಯೋ ನರೋ ನೇತಾರೋऽಧ್ವರ್ಯವ ಆಪೋ ವಸತೀವರ್ಯಾಖ್ಯಾ ಅದ್ರಿರಭಿಷವಾರ್ಥೋ ಗ್ರಾವಾ ಏತೇ ಸರ್ವೇऽಸ್ಮಾ ಅಸ್ಯೇಂದ್ರಸ್ಯ ತೇ ತವ ಪೀತಯೇ ಪಾನಾರ್ಥಂ ಸಮಹ್ಯನ್ । ಸಮಗಮಯನ್ ॥ ಹಿ ಗತಾವಿತ್ಯಸ್ಯೈತದ್ರೂಪಂ । ಪುನಃ ಸಮಿತಿ ಪೂರಕಃ ॥**

। ಪ್ರತಿಪದಾರ್ಥ ॥

ವಿರಪ್ಶಿನ್—ಮಹಾತ್ಮನಾದ । **ಇಂದ್ರ**—ಎಲೈ ಇಂದ್ರನೇ । **ಜಜ್ಞಾನಃ**—ಉತ್ಪನ್ನನಾದೊಡನೆಯೇ **ಯಸ್ಯ**—ಯಾವ ಸೋಮವನ್ನು । **ಮದಾಯ**—ನಿನ್ನ ಹರ್ಷಕ್ಕಾಗಿಯೂ । **ಕ್ರತ್ವೇ**—ವೃತ್ರವಧಾದಿ ಕರ್ಮಕ್ಕಾಗಿಯೂ । **ಅಪಿಬಃ**—ಪಾನಮಾಡಿದೆಯೋ । **ಅಸ್ಯ**—ಅದೇ ಸೋಮವನ್ನು । **ಪಿಬ**—ಪಾನಮಾಡು । **ತಮು ಇಂದುಂ**—ಅದೇ ಸೋಮವನ್ನು । **ಗಾವಃ**—ಗೋವುಗಳಿಂದ ಉತ್ಪನ್ನಗಳಾದ ಕ್ಷೀರಾದಿಗಳೂ । **ನರಃ**—ಅಧ್ವರ್ಯುಗಳೂ । **ಆಪಃ**—ವಸತೀವರ್ಯಾದಿಗಳೂ । **ಅದ್ರಿಃ**—ಗ್ರಾವಗಳೂ । **ಅಸ್ಮೈ**—ಇಂದ್ರರೂಪನಾದ । **ತೇ**—ನಿನ್ನ । **ಪೀತಯೇ**—ಪಾನಾರ್ಥವಾಗಿ । **ಸಮಹ್ಯನ್**—ಒಟ್ಟುಗೂಡಿಸಿ ಹಿಂಡಿದವು.

। ಭಾವಾರ್ಥ ॥

ಮಹಾತ್ಮನಾದ ಎಲೈ ಇಂದ್ರನೇ, ಉತ್ಪನ್ನನಾದೊಡನೆಯೇ ಯಾವ ಸೋಮವನ್ನು ನಿನ್ನ ಹರ್ಷಕ್ಕಾಗಿಯೂ ವೃತ್ರವಧಾದಿ ಕರ್ಮಕ್ಕಾಗಿಯೂ ಪಾನಮಾಡಿದೆಯೋ ಅದೇ ಸೋಮವನ್ನು ಪಾನಮಾಡು. ಅದೇ ಸೋಮವನ್ನು ಗೋವುಗಳಿಂದ ಉತ್ಪನ್ನಗಳಾದ ಕ್ಷೀರಾದಿಗಳೂ ಅಧ್ವರ್ಯುಗಳೂ ವಸತೀವರ್ಯಾದಿಗಳೂ ಗ್ರಾವಗಳೂ ಇಂದ್ರರೂಪನಾದ ನಿನ್ನ ಪಾನಾರ್ಥವಾಗಿ ಒಟ್ಟುಗೂಡಿಸಿ ಹಿಂಡಿದವು.

### English Translation.

Drink, Indra, of this (libation), of which you, mighty one, have drunk as soon as born, for excitement to (great) deeds; that Soma juice which the cows, the priests, the waters, the stones, combine to prepare for your drinking.

|| ವಿಶೇಷವಿಷಯಗಳು ||

ಎರಡನೆಯ ರಾತ್ರಿಪರ್ಯಾಯದಲ್ಲಿ ಅಚ್ಛಾವಾಕನೆಂಬ ಋತ್ವಿಜನು **ಅಸ್ಯ ಪಿಬ** ಎಂಬ ಈ ಋಕ್ಕನ್ನು ಶಸ್ತ್ರಯಾಜ್ಯಾ ಮಂತ್ರವನ್ನಾಗಿ ಪಠಿಸಬೇಕೆಂದು ಆಶ್ವಲಾಯನ ಶ್ರೌತಸೂತ್ರದ—**ಅಸ್ಯ ಪಿಬೇತಿ ಯಾಜ್ಯಾ** ಎಂಬ ಸೂತ್ರದಿಂದ (ಆ. ೬-೪) ವಿವೃತವಾಗಿರುವುದು.

॥ ಸಂಹಿತಾಪಾಠಃ ॥

**ಸಮಿದ್ಧೇ ಅಗ್ನೌ ಸುತ ಇಂದ್ರ ಸೋಮ ಆ ತ್ವಾ ವಹಂತು ಹರಯೋ ವಹಿಷ್ಠಾಃ ।**
**ತ್ವಾಯತಾ ಮನಸಾ ಜೋಹವೀಮೀಂದ್ರಾ ಯಾಹಿ ಸುವಿತಾಯ ಮಹೇ ನಃ ॥ ೩ ॥**

॥ ಪದಪಾಠಃ ॥

**ಸಂऽಇದ್ಧೇ । ಅಗ್ನೌ । ಸುತೇ । ಇಂದ್ರ । ಸೋಮೇ । ಆ । ತ್ವಾ । ವಹಂತು । ಹರಯಃ । ವಹಿಷ್ಠಾಃ ।**
**ತ್ವಾऽಯತಾ । ಮನಸಾ । ಜೋಹವೀಮಿ । ಇಂದ್ರ । ಆ । ಯಾಹಿ । ಸುವಿತಾಯ । ಮಹೇ । ನಃ ॥ ೩ ॥**

॥ ಸಾಯಣಭಾಷ್ಯಂ ॥

**ಅಗ್ನೌ ಸಮಿದ್ಧೇ ದೀಪ್ತೇ ಸೋಮೇ ಸುತೇऽಭಿಷುತೇ ಸತಿ ಹೇ ಇಂದ್ರ ತ್ವಾ ತ್ವಾಂ ವಹಿಷ್ಠಾ ವೋಢೃತಮಾ ಹರಯೋऽಶ್ವಾ ಆ ವಹಂತು । ಇಮಂ ಯಜ್ಞಂ ಪ್ರತ್ಯಾನಯಂತು । ಅಹಂ ಚ ತ್ವಾಯತಾ ತ್ವಾಂ ಕಾಮಯಮಾನೇನ ಮನಸಾ ಜೋಹವೀಮಿ । ಪುನಃ ಪುನರಾಹ್ವಯಾಮಿ । ಹೇ ಇಂದ್ರ ತ್ವಂ ನೋऽಸ್ಮಾಕಂ ಮಹೇ ಮಹತೇ ಸುವಿತಾಯ ಕಲ್ಯಾಣಾಯಾ ಯಾಹಿ । ಆಗಚ್ಛ ॥**

॥ ಪ್ರತಿಪದಾರ್ಥ ॥

ಇಂದ್ರ—ಎಲೈ ಇಂದ್ರನೇ, । **ಅಗ್ನೌ**—ಅಗ್ನಿಯು । **ಸಮಿದ್ಧೇ**—ಪ್ರಜ್ವಲಿತವಾದಾಗ (ಮತ್ತು) । **ಸೋಮೇ**—ಸೋಮರಸವು । **ಸುತೇ**—ಹಿಂಡಲ್ಪಟ್ಟಾಗ । **ತ್ವಾ**—ನಿನ್ನನ್ನು । **ವಹಿಷ್ಠಾಃ**—ವಹಿಸತಕ್ಕ ।

**ಹರಯಃ**—ಅಶ್ವಗಳು । **ಆ ವಹಂತು**—ನಮ್ಮ ಯಜ್ಞಕ್ಕೆ ಕರೆತರಲಿ । **ತ್ವಾಯತಾ**—ನಿನ್ನ ಸಹಾಯವನ್ನೇ ಅಪೇಕ್ಷಿಸತಕ್ಕ । **ಮನಸಾ**—ಮನಸ್ಸಿನಿಂದ । **ಜೋಹವೀಮಿ**—ನಿನ್ನನ್ನು ಕರೆಯುತ್ತೇನೆ । **ಇಂದ್ರ**—ಎಲೈ ಇಂದ್ರನೇ । **ನಃ**—ನಮ್ಮ । **ಮಹೇ**—ಮಹತ್ತಾದ । **ಸುವಿತಾಯ**—ಕಲ್ಯಾಣಕ್ಕಾಗಿ । **ಆ ಯಾಹಿ**—ದಯಮಾಡು.

॥ ಭಾವಾರ್ಥ ॥

ಎಲೈ ಇಂದ್ರನೇ, ಅಗ್ನಿಯು ಪ್ರಜ್ವಲಿತನಾಗಿ ಸೋಮರಸವು ಹಿಂಡಲ್ಪಟ್ಟಾಗ ನಿನ್ನನ್ನು ವಹಿಸಕ್ಕ ತಅಶ್ವಗಳು ನಮ್ಮ ಯಜ್ಞಕ್ಕೆ ಕರೆತರಲಿ, ನಿನ್ನ ಸಹಾಯವನ್ನೇ ಅಪೇಕ್ಷಿಸತಕ್ಕ ಮನಸ್ಸಿನಿಂದ ನಿನ್ನನ್ನು ಪುನಃಪುನಃ ಕರೆಯುತ್ತೇನೆ. ಎಲೈ ಇಂದ್ರನೇ, ನಮ್ಮ ಮಹತ್ತಾದ ಕಲ್ಯಾಣಕ್ಕಾಗಿ ದಯಮಾಡು.

English Translation.

The fire is kindled ; the Soma, Indra, is effused : let your vigorous horses bring you hither : I invoke you, Indra, with a mind wholy devoted to you : come for our great prosperity.

॥ ಸಂಹಿತಾಪಾಠಃ ॥

ಆ ಯಾಹಿ ಶಶ್ವದುಶತಾ ಯಯಾಥೇಂದ್ರ ಮಹಾ ಮನಸಾ ಸೋಮಪೇಯಂ।
ಉಪ ಬ್ರಹ್ಮಾಣಿ ಶೃಣವ ಇಮಾ ನೋಽಥಾ ಯಜ್ಞಸ್ತನ್ವೇ೩ ವಯೋ ಧಾತ್ ॥ ೪ ॥

॥ ಪದಪಾಠಃ ॥

ಆ । ಯಾಹಿ । ಶಶ್ವತ್ । ಉಶತಾ । ಯಯಾಥ । ಇಂದ್ರ । ಮಹಾ । ಮನಸಾ । ಸೋಮಽಪೇಯಂ । ಉಪ । ಬ್ರಹ್ಮಾಣಿ । ಶೃಣವಃ । ಇಮಾ । ನಃ । ಅಥ । ತೇ । ಯಜ್ಞಃ । ತನ್ವೇ । ವಯಃ । ಧಾತ್ ॥ ೪ ॥

॥ ಸಾಯಣಭಾಷ್ಯಂ ॥

ಹೇ ಇಂದ್ರ ಪುರಾ ಶಶ್ವದ್ಬಹುಕೃತ್ವೋ ಯಯಾಥ । ಸೋಮಪಾನಾರ್ಥಂ ಯಜ್ಞಂ ಗತವಾನಸಿ । ಅತಃ ಕಾರಣಾದುಶತಾಸ್ಮಾನ್ಕಾಮಯಮಾನೇನ ಮಹಾ ಮಹತಾ ಮನಸಾ ಸಹ ಸೋಮಪೇಯಂ ಸೋಮಃ ಪೀಯತೇ ಯಸ್ಮಿನ್ ತಾದೃಶಮಸ್ಮದೀಯಂ ಯಜ್ಞಮಾ ಯಾಹಿ । ಅಭಿಗಚ್ಛ । ಆಗತ್ಯ ಚ ಬ್ರಹ್ಮಾಣಿ ಸ್ತೋತ್ರಾಣೀಮೇದಾನೀಂ ಪ್ರಯುಜ್ಯಮಾನಾನಿ ನೋಽಸ್ಮದೀಯಾನ್ಯುಪ ಶೃಣವಃ । ಉಪಶೃಣು । ಅಥಾನಂತರಂ ಯಜ್ಞೋ ಯಜಮಾನಸ್ತೇ ತವ ತನ್ವೇ ಶರೀರಾಯ ತ್ವಚ್ಛರೀರಪೋಷಾರ್ಥಂ ವಯೋಽನ್ನಂ ಸೋಮಾತ್ಮಕಂ ಧಾತ್ । ದದಾತು ॥

॥ ಪ್ರತಿಪದಾರ್ಥ ॥

**ಇಂದ್ರ**—ಎಲೈ ಇಂದ್ರನೇ । **ಶಶ್ವತ್**—ಹಿಂದೆ ಅನೇಕ ಸಲ । **ಯಯಾಥ**—ಇಂತಹ ಯಜ್ಞಗಳಿಗೆ ಹೋಗಿದ್ದೀಯೆ । **ಉಶತಾ**—ನಮ್ಮ ಸಂಘವನ್ನಿಚ್ಛಿಸುವುದೂ । **ಮಹಾ**–ಉದಾರವಾದುದೂ ಆದ । **ಮನಸಾ**–ಮನಸ್ಸಿನೊಡನೆ । **ಸೋಮಪೇಯಂ**—ಸೋಮ ಪಾನಕ್ಕೆ ಸಿದ್ಧವಾಗಿರುವ ನಮ್ಮ ಯಜ್ಞಕ್ಕೆ । **ಆ ಯಾಹಿ**—ದಯಮಾಡು । **ನಃ**—ನಮ್ಮಿಂದ ಪಠಿತವಾದ । **ಇಮಾ ಬ್ರಹ್ಮಾಣಿ**– ಈ ಸ್ತೋತ್ರಗಳನ್ನು । **ಉಪ ಶೃಣವಃ**–ಕೇಳು । **ಅಥ**—ಅನಂತರ । **ಯಜ್ಞಃ**—ಯಜಮಾನನು । **ತೇ**—ನಿನ್ನ । **ತನ್ವೇ**–ಶರೀರದ ಪೋಷಣಾರ್ಥವಾಗಿ । **ವಯಃ**—ಸೋಮರೂಪವಾದ ಅನ್ನವನ್ನು । **ಧಾತ್**—ಅರ್ಪಿಸಲಿ.

॥ ಭಾವಾರ್ಥ ॥

ಎಲೈ ಇಂದ್ರನೇ, ನೀನು ಹಿಂದೆಲ್ಲಾ ಅನೇಕ ಸಲ ಇಂತಹ ಯಜ್ಞಗಳಿಗೆ ಹೋಗಿದ್ದೀಯೆ. ನಮ್ಮ ಸಂಘವನ್ನಿಚ್ಛಿಸುವುದೂ, ಉದಾರವಾದುದೂ ಆದ ಮನಸ್ಸಿನೊಡನೆ ಸೋಮಪಾನಕ್ಕೆ ಸಿದ್ಧವಾಗಿರುವ ನಮ್ಮ ಯಜ್ಞಕ್ಕೆ ದಯಮಾಡು. ನಮ್ಮಿಂದ ಪಠಿತವಾದ ಈ ಸ್ತೋತ್ರಗಳನ್ನು ಕೇಳು. ಅನಂತರ ಯಜಮಾನನು ನಿನ್ನ ಶರೀರ ಪೋಷಣಾರ್ಥವಾಗಿ ಸೋಮರೂಪವಾದ ಅನ್ನವನ್ನರ್ಪಿಸಲಿ.

English Translation.

You have ever gone (to similar rites): come now with a great mind disposed to drink the Soma: hear these our praises: may the worshipper present to you (sacrificial) food for (the nourishment of) your person.

॥ ಸಂಹಿತಾಪಾಠಃ ॥

ಯದಿಂದ್ರ ದಿವಿ ಪಾರ್ಯೇ ಯದೃಧಗ್ಯದ್ವಾ ಸ್ವೇ ಸದನೇ ಯತ್ರ ವಾಸಿ ।
ಅತೋ ನೋ ಯಜ್ಞಮವಸೇ ನಿಯುತ್ವಾನ್ತ್ಸಜೋಷಾಃ ಪಾಹಿ ಗಿರ್ವಣೋ ಮರುದ್ಭಿಃ ॥ ೫ ॥

॥ ಪದಪಾಠಃ ॥

ಯತ್ । ಇಂದ್ರ । ದಿವಿ । ಪಾರ್ಯೇ । ಯತ್ । ಋಧಕ್ । ಯತ್ । ವಾ । ಸ್ವೇ । ಸದನೇ । ಯತ್ರ । ವಾ । ಅಸಿ ।

ಅತಃ । ನಃ । ಯಜ್ಞಂ । ಅವಸೇ । ನಿಯುತ್ವಾನ್ । ಸ್ವಜೋಷಾಃ । ಪಾಹಿ । ಗಿರ್ವಣಃ । ಮರುತ್ಽಭಿಃ ॥

॥ ಸಾಯಣಭಾಷ್ಯಂ ॥

ಹೇ ಇಂದ್ರ ಪಾರ್ಯೇ ಪಾರಗೇ ದೂರದೇಶೇ ದಿವಿ ದ್ಯುಲೋಕಾಖ್ಯೇ ಯದ್ಯದಿ ತ್ವಂ ವರ್ತಸೇ । ಯದಿ ವಾ ಋಧಕ್ । ಏತತ್ಪೃಥಕ್ಶಬ್ದೇನ ಸಮಾನಾರ್ಥಂ । ಪೃಥಗನ್ಯಸ್ಮಿನ್ದೇಶೇ ವರ್ತಸೇ । ಯದ್ವಾ ಸ್ವೇ ಸ್ವಕೀಯೇ ಸದನೇ ಗೃಹೇ । ಅಥವಾ ಕಿಮನೇನ ವಿಶೇಷಣೇನ ಯತ್ರ ಯಸ್ಮಿನ್ದೇಶೇಽಸಿ ಭವಸಿ ಅತೋಽಸ್ಮಾತ್ಸ್ಥಾನಾದಾಗತ್ಯ ಹೇ ಗಿರ್ವಣೋ ಗಿರಾಂ ಸಂಭಕ್ತರಿಂದ್ರ ನಿಯುತ್ವಾನ್ । ನಿಯುತೋಽಶ್ವಾಃ । ತದ್ವಾನ್ಮರುದ್ಭಿಃ ಸಜೋಷಾಃ ಸಹ ಪ್ರೀಯಮಾಣಸ್ತ್ವಂ ನೋಽಸ್ಮಾಕಮವಸೇ ರಕ್ಷಣಾಯ ಯಜ್ಞಮಸ್ಮದೀಯಂ ಯಾಗಂ ಪಾಹಿ । ರಕ್ಷ । ಯದ್ವಾ । ಯಜ್ಞಂ ಯಜನಸಾಧನಮಸ್ಮದೀಯಂ ಸೋಮಮವಸೇ ತರ್ಪಣಾಯ ಪಾಹಿ । ಪಿಬ ॥

॥ ಪ್ರತಿಪದಾರ್ಥ ॥

**ಗಿರ್ವಣಃ**—ಸ್ತುತಿಯನ್ನು ಸ್ವೀಕರಿಸತಕ್ಕ । **ಇಂದ್ರ**—ಎಲೈ ಇಂದ್ರನೇ । **ಯತ್**—ಒಂದು ವೇಳೆ (ನೀನು) । **ಪಾರ್ಯೇ**—ದೂರದೇಶದಲ್ಲಿರಲಿ । **ದಿವಿ**—ದ್ಯುಲೋಕದಲ್ಲಿರಲಿ । **ಯದ್ವಾ**—ಅಥವಾ । **ಸ್ವೇ ಸದನೇ**—ನಿನ್ನ ಸ್ವಂತಗೃಹದಲ್ಲಿರಲಿ । **ಯತ್ರ ವಾ ಅಸಿ**—ಯಾವ ಪ್ರದೇಶದಲ್ಲಿಯೇ ಇರಲಿ । **ಅತಃ**—ಆ ಪ್ರದೇಶದಿಂದ । **ನಿಯುತ್ವಾನ್**—ಅಶ್ವಯುಕ್ತನಾಗಿಯೂ । **ಮರುದ್ಭಿಃ**—ಮರುತ್ತುಗಳೊಡನೆ । **ಸಜೋಷಾಃ**—ಕೂಡಿದವನಾಗಿಯೂ । **ನಃ**—ನಮ್ಮ । **ಅವಸೇ**—ರಕ್ಷಣಾರ್ಥವಾಗಿ । **ಯಜ್ಞಂ**—ನಮ್ಮ ಯಜ್ಞವನ್ನು । **ಪಾಹಿ**—ರಕ್ಷಿಸು.

॥ ಭಾವಾರ್ಥ ॥

ಸ್ತುತಿಯನ್ನು ಸ್ವೀಕರಿಸತಕ್ಕ ಎಲೈ ಇಂದ್ರನೇ, ಒಂದು ವೇಳೆ ನೀನು ದೂರಪ್ರದೇಶದಲ್ಲಿರಲಿ, ದ್ಯುಲೋಕದಲ್ಲಿರಲಿ ಅಥವಾ ನಿನ್ನ ಸ್ವಂತಗೃಹದಲ್ಲಿರಲಿ, ನೀನು ಯಾವ ಪ್ರದೇಶದಲ್ಲಿರಲಿ ಆ ಪ್ರದೇಶದಿಂದ ಅಶ್ವಯುಕ್ತನಾಗಿಯೂ ಮರುತ್ತುಗಳೊಡನೆ ಕೂಡಿದವನಾಗಿಯೂ ನಮ್ಮ ರಕ್ಷಿಸುವ ಸಾಧನವಾದ ನಮ್ಮ ಯಜ್ಞವನ್ನು ರಕ್ಷಿಸು.

## English Translation.

Whether, Indra, you abide in the distant heaven, in any other place, or in your own abode, or wherever (you may be), from thence do you, who are propitiated by praise, putting to your steeds, protect, together with the Maruts, well pleased, our sacrifice, for our preservation.



# ನಲವತ್ತೊಂದನೆಯ ಸೂಕ್ತವು

॥ ಸಾಯಣಭಾಷ್ಯಂ ॥

**ಅಹೇಳಮಾನ ಇತಿ ಪಂಚರ್ಚಮಷ್ಟಾದಶಂ ಸೂಕ್ತಂ ಭರದ್ವಾಜಸ್ಯಾರ್ಷಂ ತ್ರೈಷ್ಟುಭಮೈಂದ್ರಂ। ಅನುಕ್ರಾಂತಂ ಚ। ಅಹೇಳಮಾನ ಇತಿ॥ ಗತೋ ವಿನಿಯೋಗಃ॥**

ಅನುವಾದವು—**ಅಹೇಳಮಾನಃ** ಎಂಬ ಈ ಸೂಕ್ತವು ಮೂರನೆಯ ಅನುವಾಕದಲ್ಲಿ ಹದಿನೆಂಟನೆಯ ಸೂಕ್ತವು. ಇದರಲ್ಲಿ ಐದು ಋಕ್ಕುಗಳಿರುವವು. ಈ ಸೂಕ್ತಕ್ಕೆ ಭರದ್ವಾಜನು ಋಷಿಯು; ಇಂದ್ರನು ದೇವತೆಯು; ತ್ರಿಷ್ಟುಪ್‌ಛಂದಸ್ಸು. ಅನುಕ್ರಮಣಿಕೆಯಲ್ಲಿ—**ಅಹೇಳಮಾನಃ** ಎಂದು ಹೇಳಿರುವುದು ವಿನಿಯೋಗವನ್ನು ಹಿಂದೆಯೇ ಹೇಳಲಾಗಿದೆ.

## ಸೂಕ್ತ—೪೧

ಮಂಡಲ—೬ ॥ ಅನುವಾಕ—೩ ॥ ಸೂಕ್ತ—೪೧ ॥
ಅಷ್ಟಕ—೪ ॥ ಅಧ್ಯಾಯ—೭ ॥ ವರ್ಗ—೧೩ ॥
॥ ಸೂಕ್ತದಲ್ಲಿರುವ ಋಕ್ಸಂಖ್ಯೆ—೫ ॥
॥ ಋಷಿಃ—ಭರದ್ವಾಜೋ ಬಾರ್ಹಸ್ಪತ್ಯಃ ॥
॥ ದೇವತಾ—ಇಂದ್ರಃ ॥
॥ ಛಂದಃ—ತ್ರಿಷ್ಟುಪ್ ॥

॥ ಸಂಹಿತಾಪಾಠಃ ॥

**ಅಹೇಳಮಾನ ಉಪ ಯಾಹಿ ಯಜ್ಞಂ ತುಭ್ಯಂ ಪವಂತ ಇಂದವಃ ಸುತಾಸಃ। ಗಾವೋ ನ ವಜ್ರಿನ್ತ್ಸ್ವಮೋಕೋ ಅಚ್ಛೇಂದ್ರಾ ಗಹಿ ಪ್ರಥಮೋ ಯಜ್ಞಿಯಾನಾಂ ॥ ೧ ॥**

॥ ಪದಪಾಠಃ ॥

ಅಹೇಳಮಾನಃ। ಉಪ। ಯಾಹಿ। ಯಜ್ಞಂ। ತುಭ್ಯಂ। ಪವಂತೇ। ಇಂದವಃ। ಸುತಾಸಃ।
ಗಾವಃ। ನ। ವಜ್ರಿನ್। ಸ್ವಂ। ಓಕಃ। ಅಚ್ಛ। ಇಂದ್ರ। ಆ। ಗಹಿ। ಪ್ರಥಮಃ। ಯಜ್ಞಿಯಾನಾಂ ॥೧॥

॥ ಸಾಯಣಭಾಷ್ಯಂ ॥

**ಹೇ ಇಂದ್ರ ಅಹೇಳಮಾನೋಽಕ್ರುಧ್ಯಂಸ್ತ್ವಂ ಯಜ್ಞಮಸ್ಮದೀಯಮುಪ ಯಾಹಿ। ಉಪಗಚ್ಛ। ಯತಃ ಕಾರಣಾತ್ತುಭ್ಯಂ ತ್ವದರ್ಥಂ ಸುತಾಸೋಽಭಿಷುತಾ ಇಂದವಃ ಸೋಮಾಃ ಪವಂತೇ ಪೂಯಂತೇ**

**ದಶಾಪವಿತ್ರೇಣ ಶೋಧ್ಯಂತೇ। ಹೇ ವಜ್ರಿನ್ ವಜ್ರವನ್ನಿಂದ್ರ ಗಾವೋ ನ ಗಾವಃ ಸ್ವಕೀಯಂ ಗೋಷ್ಠಮಿವ ಸ್ವಂ ಸ್ವಕೀಯಮೋಕಃ ಸ್ಥಾನಂ ದ್ರೋಣಕಲಶಾದಿಲಕ್ಷಣಮಚ್ಛಾಭಿಮುಖ್ಯೇನ। ಪ್ರಾಪ್ನುವಂತೀತಿ ಶೇಷಃ। ಅತಃ ಕಾರಣಾತ್ ಹೇ ಇಂದ್ರ ಯಜ್ಞಿಯಾನಾಂ ಯಜ್ಞಾರ್ಹಾಣಾಂ ದೇವಾನಾಂ ಮಧ್ಯೇ ಪ್ರಥಮೋ ಮುಖ್ಯಸ್ತ್ವಮಾ ಗಹಿ। ಆಗಚ್ಛ॥**

॥ ಪ್ರತಿಪದಾರ್ಥ ॥

**ಅಹೇಳಮಾನಃ**—ಕ್ರೋಧರಹಿತನಾದ ಎಲೈ ಇಂದ್ರನೇ। **ಯಜ್ಞಂ**—ನಮ್ಮ ಯಜ್ಞಕ್ಕೆ। **ಉಪ ಯಾಹಿ**—ದಯಮಾಡು। **ತುಭ್ಯಂ**—ನಿನ್ನನ್ನುದ್ದೇಶಿಸಿ। **ಸುತಾಸಃ**—ಹಿಂಡಲ್ಪಟ್ಟ। **ಇಂದವಃ**—ಸೋಮ ರಸಗಳು। **ಪವಂತೇ**—ಶುದ್ಧಿಗೊಳಿಸಲ್ಪಡುತ್ತವೆ। **ವಜ್ರಿನ್**—ವಜ್ರಧಾರಿಯಾದ ಎಲೈ ಇಂದ್ರನೇ। **ಗಾವೋ ನ**—ಗೋವುಗಳು ತಮ್ಮ ಕೊಟ್ಟಿಗೆಯನ್ನು ಆದರದಿಂದ ಸೇರುವಂತೆ। **ಸ್ವಂ**—ತಮ್ಮ। **ಓಕಃ**—ದ್ರೋಣಕಲಶರೂಪವಾದ ಸ್ಥಾನವನ್ನು। **ಅಚ್ಛ**—ಆದರದಿಂದ (ಈ ಸೋಮಗಳು) ಹೋಗಿ ಸೇರಿಕೊಳ್ಳುತ್ತವೆ। **ಇಂದ್ರ**—ಎಲೈ ಇಂದ್ರನೇ। **ಯಜ್ಞಿಯಾನಾಂ**—ಯಜ್ಞಾರ್ಹವಾದ ದೇವತೆಗಳ ನಡುವೆ। **ಪ್ರಥಮಃ**—ಮುಖ್ಯನಾದ ನೀನು। **ಆ ಗಹಿ**—ದಯಮಾಡು.

॥ ಭಾವಾರ್ಥ ॥

ಕ್ರೋಧರಹಿತನಾದ ಎಲೈ ಇಂದ್ರನೇ, ನಮ್ಮ ಯಜ್ಞಕ್ಕೆ ದಯಮಾಡು. ನಿನ್ನನ್ನುದ್ದೇಶಿಸಿ ಹಿಂಡಲ್ಪಟ್ಟ ಸೋಮರಸಗಳು ಶುದ್ಧಿಗೊಳಿಸಲ್ಪಡುತ್ತವೆ. ವಜ್ರಧಾರಿಯಾದ ಎಲೈ ಇಂದ್ರನೇ, ಗೋವುಗಳು ತಮ್ಮ ಕೊಟ್ಟಿಗೆಯನ್ನು ಆದರದಿಂದ ಹೋಗಿ ಸೇರುವಂತೆ ಸೋಮರಸಗಳು ತಮ್ಮ ದ್ರೋಣಕಲಶರೂಪವಾದ ಪಾತ್ರೆಯಲ್ಲಿ ಸೇರಿ ತುಂಬಿಕೊಳುತ್ತವೆ. ಎಲೈ ಇಂದ್ರನೇ, ಯಜ್ಞಾರ್ಹವಾದ ದೇವತೆಗಳ ನಡುವೆ ಮುಖ್ಯನಾದ ನೀನು ದಯಮಾಡು.

## English Translation.

Unirascible (Indra), come to the sacrifice: the effused juices are purified for you: they flow, thunderer, (into the pitchers), as cows go to their stalls: come, Indra, the first of those who are to be worshipped.

॥ ಸಂಹಿತಾಪಾಠಃ ॥

ಯಾ ತೇ ಕಾಕುತ್ಸುಕೃತಾ ಯಾ ವರಿಷ್ಠಾ ಯಯಾ ಶಶ್ವತ್ಪಿಬಸಿ ಮಧ್ವ ಊರ್ಮಿಂ।
ತಯಾ ಪಾಹಿ ಪ್ರ ತೇ ಅಧ್ವರ್ಯುರಸ್ಥಾತ್ಸಂ ತೇ ವಜ್ರೋ ವರ್ತತಾಮಿಂದ್ರ ಗವ್ಯುಃ ॥ ೨ ॥

॥ ಪದಪಾಠಃ ॥

ಯಾ । ತೇ । ಕಾಕುತ್ । ಸುऽಕೃತಾ । ಯಾ । ವರಿಷ್ಠಾ । ಯಯಾ । ಶಶ್ವತ್ । ಪಿಬಸಿ । ಮಧ್ವಃ । ಊರ್ಮಿಂ ।

ತಯಾ । ಪಾಹಿ । ಪ್ರ । ತೇ । ಅಧ್ವರ್ಯುಃ । ಅಸ್ಥಾತ್ । ಸಂ । ತೇ । ವಜ್ರಃ । ವರ್ತತಾಂ । ಇಂದ್ರ । ಗವ್ಯುಃ ॥ ೨ ॥

॥ ಸಾಯಣಭಾಷ್ಯಂ ॥

ಹೇ ಇಂದ್ರ ಯಾ ತೇ ತವ ಕಾಕುಜ್ಜಿಹ್ವಾ ಸುಕೃತಾ ಸುಷ್ಠು ಧಾತ್ರಾ ನಿರ್ಮಿತಾ । ಯಾ ಚ ವರಿಷ್ಠೋರುತಮಾ ವಿಸ್ತೀರ್ಣತಮಾ । ಯಯಾ ಚ ಮಧ್ವೋ ಮಧುನಃ ಸೋಮಸ್ಯೋರ್ಮಿಂ ರಸಂ ಶಶ್ವದ್ಬಹುಕೃತ್ವಃ ಪಿಬಸಿ ತಯಾ ಜಿಹ್ವಯಾಸ್ಮದೀಯಂ ಸೋಮಂ ಪಾಹಿ । ಪಿಬ । ತದರ್ಥಮಧ್ವರ್ಯುರ್-ರಧ್ವರಸ್ಯ ನೇತಾ ಋತ್ವಿಗ್ಗೃಹೀತಸೋಮಃ ಸನ್ ಪ್ರಾಸ್ಥಾತ್ । ಹವಿರ್ಧಾನಾದುತ್ತರವೇದಿದೇಶಂ ಪ್ರತ್ಯಗಮತ್ । ಅಪಿ ಚ ಹೇ ಇಂದ್ರ ಗವ್ಯುಃ ಶತ್ರುಸಂಬಂಧಿನೀರ್ಗಾ ಆತ್ಮನ ಇಚ್ಛನ್ ತೇ ತ್ವದೀಯೋ ವಜ್ರಃ ಸಂ ವರ್ತತಾಂ । ಶತ್ರುಭಿಃ ಸಂಗತೋ ಭವತು । ತಾನ್ ಹಂತ್ವಿತ್ಯರ್ಥಃ ॥

॥ ಪ್ರತಿಪದಾರ್ಥ ॥

(ಎಲೈ ಇಂದ್ರನೇ) **ತೇ**—ನಿನ್ನ । **ಯಾ**—ಯಾವ । **ಕಾಕುತ್**—ಜಿಹ್ವೆಯು । **ಸುಕೃತಾ**—ಅತ್ಯಂತ ಶ್ರೇಷ್ಠವಾಗಿ ನಿರ್ಮಿತವಾಗಿದೆಯೋ । **ಯಾ**—ಯಾವುದು । **ವರಿಷ್ಠಾ**—ಅತ್ಯಂತ ವಿಸ್ತೃತವಾಗಿಯೋ । **ಯಯಾ**—ಯಾವ ಜಿಹ್ವೆಯಿಂದ । **ಮಧ್ವಃ**—ಮಧುರವಾದ ಸೋಮದ । **ಊರ್ಮಿಂ**—ರಸವನ್ನು । **ಶಶ್ವತ್**—ಅನೇಕ ಸಲ । **ಪಿಬಸಿ**—ಪಾನಮಾಡುತ್ತೀಯೋ । **ತಯಾ**—ಅದೇ ಜಿಹ್ವೆಯಿಂದ । **ಪಾಹಿ**—ಈ ಸೋಮರಸವನ್ನು ಪಾನಮಾಡು । **ಅಧ್ವರ್ಯುಃ**—ಅಧ್ವರ್ಯುವು । **ತೇ ಪ್ರ ಅಸ್ಥಾತ್**—ನಿನಗರ್ಪಿಸಲು ಸಿದ್ಧವಾಗಿ ನಿಂತಿದ್ದಾನೆ । **ಇಂದ್ರ**—ಎಲೈ ಇಂದ್ರನೇ । **ಗವ್ಯುಃ**—ಗೋವುಗಳನ್ನು ಪಡೆಯುವ ಇಚ್ಛೆಯುಳ್ಳ । **ತೇ**—ನಿನ್ನ । **ವಜ್ರಃ**—ವಜ್ರಾಯುಧವು । **ಸಂ ವರ್ತತಾಂ**—ಶತ್ರುಗಳ ಮೇಲೆ ಪ್ರಯೋಗಿಸಲ್ಪಡಲಿ.

॥ ಭಾವಾರ್ಥ ॥

ಎಲೈ ಇಂದ್ರನೇ, ನಿನ್ನ ಯಾವ ಜಿಹ್ವೆಯು ಅತ್ಯಂತ ಶ್ರೇಷ್ಠವಾಗಿ ನಿರ್ಮಿತವಾಗಿದೆಯೋ, ಯಾವುದು ಅತ್ಯಂತ ವಿಸ್ತೃತವಾಗಿದೆಯೋ ಯಾವ ಜಿಹ್ವೆಯಿಂದ ಮಧುರವಾದ ಸೋಮರಸವನ್ನು ಅನೇಕಸಲ ಪಾನಮಾಡುತ್ತೀಯೋ ಅದೇ ಜಿಹ್ವೆಯಿಂದ ಈ ಸೋಮರಸವನ್ನು ಪಾನಮಾಡು. ಇದನ್ನು ನಿನಗರ್ಪಿಸಲು ಅಧ್ವರ್ಯುವು ನಿನ್ನೆದುರಿಗೆ ಸಿದ್ಧನಾಗಿನಿಂತಿದ್ದಾನೆ. ಎಲೈ ಇಂದ್ರನೇ, ಗೋವುಗಳನ್ನು ಪಡೆಯುವ ಇಚ್ಛೆಯುಳ್ಳ ನಿನ್ನ ವಜ್ರಾಯುಧವು ಶತ್ರುಗಳ ಮೇಲೆ ಪ್ರಯೋಗಿಸಲ್ಪಡಲಿ.

### English Translation.

Drink, Indra, with that well-formed and expanded tongue wherewith you ever quaff the juice of the sweet (Soma): before you stands the ministrant priest: let your bolt, Indra, designed (to recover) the cattle, be hurled (against your foes).

॥ ಸಂಹಿತಾಪಾಠಃ ॥

ಏಷ ದ್ರಪ್ಸೋ ವೃಷಭೋ ವಿಶ್ವರೂಪ ಇಂದ್ರಾಯ ವೃಷ್ಣೇ ಸಮಕಾರಿ ಸೋಮಃ ।
ಏತಂ ಪಿಬ ಹರಿವಃ ಸ್ಥಾತರುಗ್ರ ಯಸ್ಯೇಶಿಷೇ ಪ್ರದಿವಿ ಯಸ್ತೇ ಅನ್ನಂ ॥೨॥

॥ ಪದಪಾಠಃ ॥

ಏಷಃ । ದ್ರಪ್ಸಃ । ವೃಷಭಃ । ವಿಶ್ವಽರೂಪಃ । ಇಂದ್ರಾಯ । ವೃಷ್ಣೇ । ಸಂ । ಅಕಾರಿ । ಸೋಮಃ ।
ಏತಂ । ಪಿಬ । ಹರಿಽವಃ । ಸ್ಥಾತಃ । ಉಗ್ರ । ಯಸ್ಯ । ಈಶಿಷೇ । ಪ್ರಽದಿವಿ । ಯಃ । ತೇ । ಅನ್ನಂ ॥೨॥

॥ ಸಾಯಣಭಾಷ್ಯಂ ॥

ದ್ರಪ್ಸೋ ದ್ರವಣಶೀಲೋ ವೃಷಭಃ ಕಾಮಾನಾಂ ವರ್ಷಿತಾ ವಿಶ್ವರೂಪೋ ಬಹುವಿಧರೂಪೋಪೇತ ಈದೃಗ್ವಿಧ ಏಷ ಸೋಮೋ ವೃಷ್ಣೇ ಕಾಮಾನಾಂ ವರ್ಷಿತ್ರ ಇಂದ್ರಾಯೇಂದ್ರಸ್ಯ ಪಾನಾರ್ಥಂ ಸಮಕಾರಿ। ಅಭಿಷವಾದಿಭಿಃ ಸಂಸ್ಕೃತೋಽಭೂತ್ । ಹೇ ಹರಿವಃ । ಹರೀ ಅಶ್ವೌ । ತದ್ವನ್ ಹೇ ಸ್ಥಾತಃ ಸರ್ವೇಷಾಮಧಿಷ್ಠಾತರುಗ್ರೋದ್ಗೂರ್ಣಬಲೇಂದ್ರ ಏತಮೀದೃಶಂ ಸೋಮಂ ಪಿಬ । ಯಸ್ಯ ಸೋಮಸ್ಯ ಪ್ರದಿವಿ ॥ ಜಾತಾವೇಕವಚನಂ ॥ ಪ್ರಭೂತೇಷು ದಿವಸೇಷು ಪ್ರಗತೇಷ್ವಹಃಸು ವೇಶಿಷೇ ತ್ವಮೀಶ್ವರೋ ಭವಸಿ । ಯಶ್ಚ ಸ್ತೋಮಸ್ತೇ ತವಾನ್ನಮನ್ನತ್ವೇನ ಪರಿಕಲ್ಪಿತ ಏತಂ ಪಿಬೇತ್ಯನ್ವಯಃ ॥

॥ ಪ್ರತಿಪದಾರ್ಥ ॥

**ದ್ರಪ್ಸಃ**—ಸ್ರವಿಸುವ ಸ್ವಭಾವವುಳ್ಳದ್ದೂ । **ವೃಷಭಃ**—ಕಾಮವರ್ಷಕವೂ । **ವಿಶ್ವರೂಪಃ**—ಅನೇಕ ವಿಧವಾದ ರೂಪವುಳ್ಳದ್ದೂ ಆದ । **ಏಷಃ ಸೋಮಃ**—ಈ ಸೋಮರಸವು । **ವೃಷ್ಣೇ**—ಕಾಮವರ್ಷಕನಾದ । **ಇಂದ್ರಾಯ**—ಇಂದ್ರನ ಪಾನಾರ್ಥವಾಗಿ । **ಸಮಕಾರಿ**—ಸುಸಂಸ್ಕೃತವಾಗಿ ಸಿದ್ಧವಾಗಿದೆ । **ಹರಿವಃ**—ಅಶ್ವಯುಕ್ತನಾದವನೂ । **ಸ್ಥಾತಃ**—ಎಲ್ಲರಿಗೂ ಅಗ್ರನಾಗಿ ಸ್ಥಿರನಾಗಿರುವವನೂ । **ಉಗ್ರ**—ಭಯಂಕರವಾದ ಶಕ್ತಿಯುಳ್ಳವನೂ ಆದ ಎಲೈ ಇಂದ್ರನೇ । **ಯಸ್ಯ**-ಯಾವ ಸೋಮಕ್ಕೆ । **ಪ್ರದಿವಿ**-ಅನೇಕ ದಿವಸಗಳು । **ಈಶಿಷೇ**-

ಸ್ವಾಮಿಯಾಗಿದ್ದಿಯೋ । **ಯಃ**— ಯಾವ ಸೋಮವು । **ತೇ**— ನಿನಗೆ । **ಅನ್ನಂ**— ಅನ್ನಾತ್ಮಕವಾಗಿದೆಯೋ । **ಏತಂ** — ಅಂತಹ ಈ ಸೋಮವನ್ನು । **ಪಿಬ**— ಪಾನಮಾಡು.

॥ ಭಾವಾರ್ಥ ॥

ಪ್ರವಿಸುವ ಸ್ವಭಾವವುಳ್ಳದ್ದೂ, ಕಾಮವರ್ಷಕವೂ, ಅನೇಕ ವಿಧವಾದ ರೂಪವುಳ್ಳದ್ದೂ ಆದ ಈ ಸೋಮ ರಸವು ಇಂದ್ರಪಾನಾರ್ಥವಾಗಿ ಸುಸಂಸ್ಕೃತವಾಗಿ ಸಿದ್ಧವಾಗಿದೆ. ಅಶ್ವಯುಕ್ತನೂ, ಎಲ್ಲರಿಗೂ ಅಗ್ರಸ್ಥಿತನೂ ಆದ ಎಲೈ ಇಂದ್ರನೇ, ಯಾವ ಸೋಮರಸಗಳಿಗೆ ನೀನು ಅನೇಕ ದಿನಗಳು ಪ್ರಭುವಾಗಿರುವೆಯೋ ಯಾವ ಸೋಮವು ನಿನಗೆ ಅನ್ನಾತ್ಮಕವಾಗಿದೆಯೋ ಅಂತಹ ಈ ಸೋಮವನ್ನು ಪಾನಮಾಡು.

English Translation.

This undropping, omniform Soma, the showerer (of benefits), has been duly prepared for Indra, the showerer (of rain): lord of steeds, ruler over all, mighty (Indra), drink this over which you have of old presided, which is your food.

॥ ಸಂಹಿತಾಪಾಠಃ ॥

ಸುತಃ ಸೋಮೋ ಅಸುತಾದಿಂದ್ರ ವಸ್ಯಾನಯಂ ಶ್ರೇಯಾಞ್ಚಿಕಿತುಷೇ ರಣಾಯ ।
ಏತಂ ತಿತಿರ್ವ ಉಪ ಯಾಹಿ ಯಜ್ಞಂ ತೇನ ವಿಶ್ವಾಸ್ತವಿಷೀರಾ ಪೃಣಸ್ವ॥೪॥

॥ ಪದಪಾಠಃ ॥

**ಸುತಃ । ಸೋಮಃ । ಅಸುತಾತ್ । ಇಂದ್ರ । ವಸ್ಯಾನ್ । ಅಯಂ । ಶ್ರೇಯಾನ್ । ಚಿಕಿತುಷೇ । ರಣಾಯ। ಏತಂ । ತಿತಿರ್ವಃ । ಉಪ । ಯಾಹಿ । ಯಜ್ಞಂ । ತೇನ । ವಿಶ್ವಾಃ । ತವಿಷೀಃ । ಆ । ಪೃಣಸ್ವ ॥ ೪ ॥**

॥ ಸಾಯಣಭಾಷ್ಯಂ ॥

**ಹೇ ಇಂದ್ರ ಸುತೋऽಭಿಷುತೋऽಯಂ ಸೋಮೋऽಸುತಾದಕೃತಾಭಿಷವಾತ್ಸೋಮಾದನ್ಯದೀ-ಯಾದ್ವಸ್ಯಾನ್ ವಸೀಯಾನ್ ವಸುಮತ್ತರಃ ಪ್ರಶಸ್ಯತರಃ । ತಥಾ ಚಿಕಿತುಷೇ ವಿದುಷೇऽಭಿಜ್ಞಾಯ ತುಭ್ಯಂ ರಣಾಯ ರಮಣೀಯಾಯ ತದರ್ಥಂ ಶ್ರೇಯಾನ್ ಶ್ರೇಷ್ಠ ಭವತಿ । ತ್ವಾಮತಿಶಯೇನ ರಮಯಿತೇತ್ಯರ್ಥಃ । ಹೇ ತಿತಿರ್ವಃ ಶತ್ರೂಣಾಂ ತರಿತರಿಂದ್ರ ಯಜನಸಾಧನಮೇತಂ ಸೋಮಮುಪ ಯಾಹಿ । ಉಪಾಗಚ್ಛ । ತೇನ ಚ ಸೋಮೇನ ವಿಶ್ವಾಸ್ತವಿಷೀಃ ಸರ್ವಾಣಿ ಬಲಾನ್ಯಾ ಪೃಣಸ್ವ । ಆಪೂರಯ ॥**

॥ ಪ್ರತಿಪದಾರ್ಥ ॥

**ಇಂದ್ರ**—ಎಲೈ ಇಂದ್ರನೇ । **ಸುತಃ**—ಹಿಂಡಲ್ಪಟ್ಟಿರುವ । **ಅಯಂ ಸೋಮಃ**—ಈ ಸೋಮವು । **ಅಸುತಾತ್**—ಹಿಂಡದಿರುವ ಸೋಮಕ್ಕಿಂತಲೂ । **ವಸ್ಯಾನ್**—ಉತ್ತಮವಾಗಿದೆ । **ಚಿಕಿತುಷೇ**—ಪೂರ್ಣ ಪ್ರಜ್ಞನಾದ ನಿನಗೆ । **ರಣಾಯ**—ಹರ್ಷವನ್ನುಂಟುಮಾಡಲು । **ಶ್ರೇಯಾನ್**—ಉತ್ತಮವಾಗಿದೆ । **ತಿತಿರ್ವಃ**—ಶತ್ರುಗಳನ್ನು ಬೀಳಿಸುವ ಎಲೈ ಇಂದ್ರನೇ । **ಯಜ್ಞಂ**—ಯಜ್ಞಸಾಧನವಾದ । **ಏತಂ**—ಈ ಸೋಮದಲ್ಲಿಗೆ । **ಉಪ ಯಾಹಿ**—ದಯಮಾಡು । **ತೇನ**—ಇದೇ ಸೋಮದಿಂದ । **ವಿಶ್ವಾಃ ತವಿಷೀಃ**—ನಿನ್ನ ಸಕಲ ಶಕ್ತಿಗಳನ್ನೂ । **ಆ ಪೃಣಸ್ವ**—ತುಂಬಿಕೊ.

॥ ಭಾವಾರ್ಥ ॥

ಎಲೈ ಇಂದ್ರನೇ, ಹಿಂಡಿ ಸಿದ್ಧವಾಗಿರುವ ಈ ಸೋಮವು ಹಿಂಡದೇ ಇರುವ ಸೋಮಕ್ಕಿಂತಲೂ ಉತ್ತಮವಾಗಿದೆ. ಪೂರ್ಣಪ್ರಜ್ಞನಾದ ನಿನಗೆ ಹರ್ಷವನ್ನುಂಟುಮಾಡಲು ಉತ್ತಮವಾಗಿದೆ. ಶತ್ರುಗಳನ್ನು ಕೆಳಕ್ಕೆ ಬೀಳಿಸುವ ಎಲೈ ಇಂದ್ರನೇ, ಯಜ್ಞಸಾಧನವಾದ ಈ ಸೋಮವಿರುವಲ್ಲಿಗೆ ದಯಮಾಡು. ಇದೇ ಸೋಮದಿಂದ ನಿನ್ನ ಸಕಲ ಶಕ್ತಿಗಳನ್ನೂ ತುಂಬಿಕೊ.

English Translation.

The effuscd Soma, Indra, is more excellent than that which is not effused : it is better (qualified) to give pleasure to you, who are capable of judging : overcomer (of enemies), approach this sacrifice, and thereby perfect all yours powers.

॥ ಸಂಹಿತಾಪಾಠಃ ॥

ಹ್ವಯಾಮಸಿ ತ್ವೇಂದ್ರ ಯಾಹ್ಯರ್ವಾಜರಂ ತೇ ಸೋಮಸ್ತನ್ವೇ ಭವಾತಿ ।
ಶತಕ್ರತೋ ಮಾದಯಸ್ವಾ ಸುತೇಷು ಪ್ರಾಸ್ಮಾँ ಅವ ಪೃತನಾಸು ಪ್ರ
ವಿಕ್ಷು ॥ ೫ ॥

॥ ಪದಪಾಠಃ ॥

ಹ್ವಯಾಮಸಿ । ತ್ವಾ । ಆ । ಇಂದ್ರ । ಯಾಹಿ । ಅರ್ವಾಙ್ । ಅರಂ । ತೇ । ಸೋಮಃ । ತನ್ವೇ । ಭವಾತಿ ।
ಶತಕ್ರತೋ ಇತಿ ಶತऽಕ್ರತೋ । ಮಾದಯಸ್ವ । ಸುತೇಷು । ಪ್ರ । ಅಸ್ಮಾನ್ । ಅವ । ಪೃತನಾಸು । ಪ್ರ ।
ವಿಕ್ಷು ॥ ೫ ॥

॥ ಸಾಯಣಭಾಷ್ಯಂ ॥

ಹೇ ಇಂದ್ರ ತ್ವಾ ತ್ವಾಂ ಹ್ವಯಾಮಸಿ । ಆಹ್ವಯಾಮಃ । ಅತಃ ಕಾರಣಾತ್ತ್ವಮರ್ವಾಙಸ್ಮದಭಿಮುಖಃ ಸನ್ ಆ ಯಾಹಿ । ಆಗಚ್ಛ । ಅಸ್ಮದೀಯಃ ಸೋಮಶ್ಚ ತೇ ತನ್ವೇ ತವ ಶರೀರಾಯಾರಂ

**ಪರ್ಯಾಪ್ತಂ ಭವಾತಿ । ಭವತು । ತ್ವದೀಯಂ ಶರೀರಂ ಯಥಾಭಿಲಾಷಂ ತರ್ಪಯತ್ವಿತ್ಯರ್ಥಃ । ಹೇ ಶತಕ್ರತೋ ಬಹುವಿಧಕರ್ಮನ್ನಿಂದ್ರ ತ್ವಂ ಚ ಸುತೇಷ್ವಭಿಷುತೇಷ್ವಸ್ಮದೀಯೇಷು ಸೋಮೇಷು ಮಾದಯಸ್ವ । ತೃಪ್ಯಸ್ವ ॥ ಮದ ತೃಪ್ತಿಯೋಗೇ ॥ ತದನಂತರಂ ಪೃತನಾಸು ಸಂಗ್ರಾಮೇಷ್ವಸ್ಮಾನ್ಪ್ರಾವ । ಪ್ರಕರ್ಷೇಣ ರಕ್ಷ । ನ ಕೇವಲಂ ಪೃತನಾಸು ಕಿಂತು ವಿಕ್ಷು ಸರ್ವಾಸು ಪ್ರಜಾಸ್ವಸ್ಮಾನ್ಪ್ರಾವ । ಪ್ರರಕ್ಷ ॥**

॥ ಪ್ರತಿಪದಾರ್ಥ ॥

**ಇಂದ್ರ**—ಎಲೈ ಇಂದ್ರನೇ । **ತ್ವಾ**—ನಿನ್ನನ್ನು । **ಹ್ವಯಾಮಸಿ**-ಪ್ರಾರ್ಥಿಸಿ ಕರೆಯುತ್ತೇವೆ । **ಅರ್ವಾಙ್**—ನಮಗಭಿಮುಖವಾಗಿ । **ಆ ಯಾಹಿ**—ದಯಮಾಡು । **ಸೋಮಃ**—ಈ ಸೋಮವು । **ತೇ**—ನಿನ್ನ । **ತನ್ವೇ**—ಶರೀರ ಪೋಷಣೆಗಾಗಿ । **ಅರಂ**-ಪರ್ಯಾಪ್ತವಾದುದಾಗಿ । **ಭವಾತಿ**-ಆಗಲಿ । **ಶತಕ್ರತೋ**-ಅನೇಕ ಕರ್ಮಕರ್ತನಾದ ಎಲೈ ಇಂದ್ರನೇ । **ಸುತೇಷು**—ಹಿಂಡಿರುವ ಈ ಸೋಮಗಳಲ್ಲಿ । **ಮಾದಯಸ್ವ**—ತೃಪ್ತಿಯನ್ನು ಹೊಂದು । **ಪೃತನಾಸು**—ಸಂಗ್ರಾಮಗಳಲ್ಲಿ । **ಅಸ್ಮಾನ್**—ನಮ್ಮನ್ನು । **ಪ್ರ ಅವ**—ಪೂರ್ಣವಾಗಿ ರಕ್ಷಿಸು । **ವಿಕ್ಷು**—ಸಕಲ ಪ್ರಜೆಗಳ ನಡುವೆ । **ಪ್ರ**—ನಮ್ಮನ್ನು ರಕ್ಷಿಸು.

॥ ಭಾವಾರ್ಥ ॥

ಎಲೈ ಇಂದ್ರನೇ, ನಿನ್ನನ್ನು ನಾವು ಪ್ರಾರ್ಥಿಸಿ ಕರೆಯುತ್ತೇವೆ. ನಮಗಭಿಮುಖನಾಗಿ ದಯಮಾಡು. ಈ ಸೋಮವು ನಿನ್ನ ಶರೀರ ಪೋಷಣೆಗೆ ಸಾಕಾಗುವಂತಿರಲಿ. ಅನೇಕ ಕರ್ಮಕರ್ತನಾದ ಎಲೈ ಇಂದ್ರನೇ, ಹಿಂಡಿ ಸಿದ್ಧವಾಗಿರುವ ಈ ಸೋಮಗಳಲ್ಲಿ ತೃಪ್ತಿಯನ್ನು ಹೊಂದು. ಸಂಗ್ರಾಮಗಳಲ್ಲಿ ನಮ್ಮನ್ನು ಪೂರ್ಣವಾಗಿ ರಕ್ಷಿಸು. ಸಕಲ ಪ್ರಜೆಗಳ ನಡುವೆಯೂ ನಮ್ಮನ್ನು ರಕ್ಷಿಸು.

## English Translation.

We invoke you, Indra, come down : may the Soma be sufficient for (the satisfaction of) your person : exalt Shatakaratu with the libations, defend us in combats, and against the people.



# ನಲವತ್ತೆರಡನೆಯ ಸೂಕ್ತವು

। ಸಾಯಣಭಾಷ್ಯಂ ।

**ಪ್ರತ್ಯಸ್ಮಾ ಇತಿ ಚತುರ್ಋಚಮೇಕೋನವಿಂಶಂ ಸೂಕ್ತಂ ಭರದ್ವಾಜಸ್ಯಾರ್ಷಮೈಂದ್ರಂ । ಚತುರ್ಥೀ ಬೃಹತೀ ಶಿಷ್ಟಾ ಅನುಷ್ಟುಭಃ । ತಥಾ ಚಾನುಕ್ರಾಂತಂ । ಪ್ರತ್ಯಸ್ಮೈ ಚತುಷ್ಕಮಾನುಷ್ಟುಭಂ ಬೃಹತ್ಯಂತಮಿತಿ ॥ ಪ್ರಾತಃಸವನೇಽಚ್ಛಾವಾಕಸ್ಯೇದಮುನ್ನೀಯಮಾನಸೂಕ್ತಂ । ಸೂತ್ರಿತಂ ಚ । ಪ್ರತ್ಯಸ್ಮಾ ಇತ್ಯುನ್ನೀಯಮಾನಾಯಾನೂಚ್ಯ । ಆ. ೫-೭ । ಇತಿ.**

ಅನುವಾದವು—**ಪ್ರತ್ಯಸ್ಮೈ** ಎಂಬ ಈ ಸೂಕ್ತವು ಮೂರನೆಯ ಅನುವಾಕದಲ್ಲಿ ಹತ್ತೊಂಭತ್ತನೆಯ ಸೂಕ್ತವು. ಇದರಲ್ಲಿ ನಾಲ್ಕು ಋಕ್ಕುಗಳಿರುವವು. ಈ ಸೂಕ್ತಕ್ಕೆ ಭರದ್ವಾಜನು ಋಷಿಯು; ಇಂದ್ರನು ದೇವತೆಯು; ಈ ಸೂಕ್ತದ ನಾಲ್ಕನೆಯ ಋಕ್ಕು ಬೃಹತೀಛಂದಸ್ಕವು. ಉಳಿದ ಋಕ್ಕುಗಳು ಅನುಷ್ಟುಪ್‌ಛಂದಸ್ಕವು. ಅನುಕ್ರಮಣಿಕೆಯಲ್ಲಿ—**ಪ್ರತ್ಯಸ್ಮೈ ಚತುಷ್ಕಮಾನುಷ್ಟುಭಂ ಬೃಹತ್ಯಂತಂ** ಎಂದು ಹೇಳಿರುವುದು. ಪ್ರಾತಸ್ಸವನಕಾಲದಲ್ಲಿ ಅಚ್ಛಾವಾಕನೆಂಬ ಋತ್ವಿಜನು ಪಠಿಸಬೇಕಾದ ಉನ್ನೀಯಮಾನಸೂಕ್ತಕ್ಕಾಗಿ ಈ ಸೂಕ್ತದ ವಿನಿಯೋಗವಿರುವುದೆಂದು ಆಶ್ವಲಾಯನ ಶ್ರೌತಸೂತ್ರದ—**ಪ್ರತ್ಯಸ್ಮಾ ಇತ್ಯುನ್ನೀಯಮಾನಾಯೋನೂಚ್ಯ** ಎಂಬ ಸೂತ್ರದಿಂದ (ಆ. ೫-೭) ವಿವೃತವಾಗಿರುವುದು.

## ಸೂಕ್ತ—೪೨

ಮಂಡಲ—೬ ॥ ಅನುವಾಕ—೩ ॥ ಸೂಕ್ತ—೪೨ ॥
ಅಷ್ಟಕ—೪ ॥ ಅಧ್ಯಾಯ—೭ ॥ ವರ್ಗ—೧೪ ॥

॥ ಸೂಕ್ತದಲ್ಲಿರುವ ಋಕ್ಸಂಖ್ಯೆ—೪ ॥
॥ ಋಷಿಃ—ಭರದ್ವಾಜೋ ಬಾರ್ಹಸ್ಪತ್ಯಃ ॥
॥ ದೇವತಾ—ಇಂದ್ರಃ ॥
॥ ಛಂದಃ—೧-೩, ಅನುಷ್ಟುಪ್ । ೪. ಬೃಹತೀ ॥

॥ ಸಂಹಿತಾಪಾಠಃ ॥

**ಪ್ರತ್ಯಸ್ಮೈ ಪಿಪೀಷತೇ ವಿಶ್ವಾನಿ ವಿದುಷೇ ಭರ ।**
**ಅರಂಗಮಾಯ ಜಗ್ಮಯೇಽಪಶ್ಚಾದ್ದಘ್ವನೇ ನರೇ ॥ ೧ ॥**

॥ ಪದಪಾಠಃ ॥

ಪ್ರತಿ । ಅಸ್ಮೈ । ಪಿಪೀಷತೇ । ವಿಶ್ವಾನಿ । ವಿದುಷೇ । ಭರ ।
ಅರಂऽಗಮಾಯ । ಜಗ್ಮಯೇ । ಅಪಶ್ಚಾತ್ऽದಘ್ವನೇ । ನರೇ ॥ ೧ ॥

॥ ಸಾಯಣಭಾಷ್ಯಂ ॥

**ಹೇ ಅಧ್ವರ್ಯೋ ಅಸ್ಮಾ ಇಂದ್ರಾಯ ಪ್ರತಿ ಭರ । ಅಭಿಹರ । ಸೋಮಂ ಪ್ರಯಚ್ಛೇತ್ಯರ್ಥಃ । ಕೀದೃಶಾಯೇಂದ್ರಾಯ । ಪಿಪೀಷತೇ ಪಾತುಮಿಚ್ಛತೇ ವಿಶ್ವಾನಿ ಸರ್ವಾಣಿ ವೇದ್ಯಾನಿ ವಿದುಷೇ ಜಾನತೇಽರಂಗಮಾಯ ಪರ್ಯಾಪ್ತಗಮನಾಯ ಜಗ್ಮಯೇ ಯಜ್ಞೇಷು ಗಮನಶೀಲಾಯಾಪಶ್ಚಾದ್ದಘ್ವನೇ ॥ ದಘಿರ್ಗತಿಕರ್ಮಾ ॥ ಅಪಶ್ಚಾದ್ಗಮನಾಯ ಸರ್ವೇಷಾಮಗ್ರಗಾಮಿನೇ ನರೇ ನೇತ್ರೇ ಯಜ್ಞಾನಾಂ ॥**

॥ ಪ್ರತಿಪದಾರ್ಥ ॥

(ಎಲೈ ಅಧ್ವರ್ಯುವೇ) **ಪಿಪೀಷತೇ**—ಪಾನಮಾಡಲಿಚ್ಛೆಯುಳ್ಳವನೂ । **ವಿಶ್ವಾನಿ**—ತಿಳಿಯಬೇಕಾದ ಸಮಸ್ತವನ್ನೂ । **ವಿದುಷೇ**—ಅರಿತವನೂ । **ಅರಂಗಮಾಯ**—ಪೂರ್ಣಗಮನವುಳ್ಳವನೂ । **ಜಗ್ಮಯೇ**—

ಯಜ್ಞಗಳಲ್ಲಿ ಗಮನಶೀಲನೂ । **ಅಪಶ್ಚಾದ್ದಘ್ವನೇ**-ಎಲ್ಲರಿಗಿಂತಲೂ ಮುಂಗಾಮಿಯೂ । **ನರೇ**-ನೇತೃವಾದವನೂ ಆದ । **ಅಸ್ಮೈ**—ಈ ಇಂದ್ರನನ್ನುದ್ದೇಶಿಸಿ । **ಪ್ರತಿಭರ**--ಸೋಮವನ್ನು ಅರ್ಪಿಸು.

॥ ಭಾವಾರ್ಥ ॥

ಎಲೈ ಅಧ್ವರ್ಯುವೇ, ಪಾನಮಾಡಲಿಚ್ಛೆಯುಳ್ಳವನೂ, ತಿಳಿಯಬೇಕಾದ ಸಮಸ್ತವನ್ನೂ ಅರಿತವನೂ, ಪೂರ್ಣ ಗಮನವುಳ್ಳವನೂ ಯಜ್ಞಗಳಲ್ಲಿ ಗಮನಶೀಲನೂ, ಎಲ್ಲರಿಗಿಂತಲೂ ಮುಂಗಾಮಿಯೂ ನೇತೃವೂ ಆದ ಈ ಇಂದ್ರನನ್ನುದ್ದೇಶಿಸಿ ಸೋಮವನ್ನರ್ಪಿಸು.

English Translation.

Offer, (priests), the libation to him who is desirous to drink; who knows all things; whose movements are all-sufficient; who goes readily (to sacrifices); the leader (of holy rites), following no one.

॥ ಸಂಹಿತಾಪಾಠಃ ॥

ಏಮೇನಂ ಪ್ರತ್ಯೇತನ ಸೋಮೇಭಿಃ ಸೋಮಪಾತಮಂ ।
ಅಮತ್ರೇಭಿರೃಜೀಷಿಣಮಿಂದ್ರಂ ಸುತೇಭಿರಿಂದುಭಿಃ ॥ ೨ ॥

॥ ಪದಪಾಠಃ ॥

ಆ । ಈಂ । ಏನಂ । ಪ್ರತಿಽಏತನ । ಸೋಮೇಭಿಃ । ಸೋಮಪಾಽತಮಂ ।
ಅಮತ್ರೇಭಿಃ । ಋಜೀಷಿಣಂ । ಇಂದ್ರಂ । ಸುತೇಭಿಃ । ಇಂದುಽಭಿಃ ॥ ೨ ॥

॥ ಸಾಯಣಭಾಷ್ಯಂ ॥

ತೃತೀಯೇ ಸ್ವರಸಾಮ್ನಿ ನಿಷ್ಕೇವಲ್ಯ ಏಮೇನಮಿತಿ ಸ್ತೋತ್ರಿಯಸ್ತೃಚಃ । ಸೂತ್ರಿತಂ ಚ । ಏಮೇನಂ ಪ್ರತ್ಯೇತನೇತ್ಯಾದ್ಯೋ ವಾ ಸರ್ವೇಷಾಂ । ಆ. ೮-೫ । ಇತಿ ॥

ಹೇ ಅಧ್ವರ್ಯವಃ ಸೋಮೇಭಿಃ ಸೋಮೈಃ ಕರಣಭೂತೈಃ ಸೋಮಪಾತಮಮತಿಶಯೇನ ಸೋಮಸ್ಯ ಪಾತಾರಮೇನಮಿಂದ್ರಮಾ ಅಭಿಮುಖಂ ಪ್ರತ್ಯೇತನ । ಪ್ರತಿಗಚ್ಛತ । ಈಮಿತಿ ನಿಪಾತೋಽನರ್ಥಕಃ । ಕೀದೃಶಮಿಂದ್ರಂ । ಅಮತ್ರೇಭಿರಮತ್ರೈಃ ಸೋಮಪಾತ್ರೈರ್ಗ್ರಹಚಮಸಾದಿಭಿರೃಜೀಷಿಣಂ । ಋಜೀಷಂ ಶತ್ರೂಣಾಮುಪಾರ್ಜಕಂ ಬಲಂ । ತದ್ವಂತಂ । ಯದ್ವಾ । ಋಜೀಷಿಣಮಿತ್ಯತ್ರ ರತ ಸಂಬಂಧನೀಯಂ । ಸುತೇಭಿರಭಿಷುತೈರಿಂದುಭಿಃ ಸೋಮೈರೃಜೀಷಿಣಂ । ಗತಸಾರಃ ಸೋಮ ಋಜೀಷಃ । ತದ್ವಂತಂ । ಅಥವಾಮತ್ರೇಭಿರಮತ್ರೈರಮಾತ್ರೈರಪರಿಮಿತೈರಭಿಷುತೈಃ ಸೋಮೈರೃಜೀಷಿಣಂ ॥ ಋಜೇರ್ಗತ್ಯರ್ಥಾದ್ಭಾವಸಾಧನ ಋಜೀಷ ಶಬ್ದಃ । ತತೋ ಮತ್ವರ್ಥೀಯ ಇನಿಃ ॥ ಸಂಗತಮಿತ್ಯರ್ಥಃ । ಏವಂವಿಧಮಿಂದ್ರಂ ಪ್ರತಿಗಚ್ಛತೇತ್ಯನ್ವಯಃ । ಅನ್ಯ ಆಹ । ಅಮತ್ರೇಭಿರ್ಗ್ರಹಚಮಸಾದಿಗತೈರಭಿಷುತೈಃ ಸೋಮೈರೃಜೀಷಿಣಂ ಬಲವಂತಮೇನಮಿಂದ್ರಂ ಪ್ರತಿಗಚ್ಛತೇತಿ ॥

॥ ಪ್ರತಿಪದಾರ್ಥ ॥

(ಎಲೈ ಅಧ್ವರ್ಯುಗಳೇ) **ಸೋಮೇಭಿಃ**—ಸೋಮರಸಗಳೊಡನೆ । **ಸೋಮಪಾತಮಂ**—ಅತಿಶಯವಾಗಿ ಸೋಮಪಾನಮಾಡತಕ್ಕ । **ಏನಂ**—ಇಂದ್ರನನ್ನು । **ಆ ಪ್ರತ್ಯೇತನ**—ಎದುರುಗೊಂಡು ಹೋಗಿರಿ । **ಋಜೀಷಿಣಂ**-ಶತ್ರುನಾಶಕವಾದ ಶಕ್ತಿಯುಳ್ಳ । **ಇಂದ್ರಂ**—ಇಂದ್ರನನ್ನು । **ಸುತೇಭಿಃ**—ಹಿಂಡಲ್ಪಟ್ಟುದೂ । **ಅಮತ್ರೇಭಿಃ**—ಚಮಸ ಪಾತ್ರೆಯಲ್ಲಿರುವುದೂ ಆದ । **ಇಂದುಭಿಃ**—ಸೋಮರಸಗಳೊಡನೆ (ಎದುರುಗೊಳ್ಳಿರಿ).

॥ ಭಾವಾರ್ಥ ॥

ಎಲೈ ಅಧ್ವರ್ಯುಗಳೇ, ಸೋಮರಸಗಳೊಡನೆ ಅತಿಶಯವಾಗಿ ಸೋಮಪಾನ ಮಾಡತಕ್ಕ ಇಂದ್ರನನ್ನು ಎದುರುಗೊಂಡು ಹೋಗಿರಿ. ಹಿಂಡಲ್ಪಟ್ಟುದೂ ಚಮಸ ಪಾತ್ರೆಯಲ್ಲಿರುವುದೂ ಆದ ಸೋಮರಸಗಳೊಡನೆ ಶತ್ರುನಾಶಕವಾದ ಶಕ್ತಿಯುಳ್ಳ ಇಂದ್ರನನ್ನು ಎದುರುಗೊಳ್ಳಿರಿ.

## English Translation.

Proceed to the presence of that deep quaffer of the Soma, with the Soma juices; to the vigorous Indra with vessels (filled) with the effused libations.

॥ ವಿಶೇಷವಿಷಯಗಳು ॥

ಮೂರನೆಯ ಸ್ವರಸಾಮವೆಂಬ ಇಷ್ಟಿಯಲ್ಲಿ ನಿಷ್ಕೇವಲ್ಯ ಶಸ್ತ್ರ ಮಂತ್ರಗಳಲ್ಲಿ **ಏಮೇನಂ** ಎಂಬ ತೃಚವನ್ನು ಸ್ತೋತ್ರಿಯ ತೃಚವನ್ನಾಗಿ ಪಠಿಸಬೇಕೆಂದು ಆಶ್ವಲಾಯನ ಶ್ರೌತ ಸೂತ್ರದ-**ಏಮೇನಂ ಪ್ರತ್ಯೇತನೇತ್ಯಾದ್ಯೋ ವಾ ಸರ್ವೇಷಾಂ** ಎಂಬ ಸೂತ್ರದಿಂದ (ಆ. ೮-೫) ವಿವೃತವಾಗಿರುವುದು.

॥ ಸಂಹಿತಾಪಾಠಃ ॥

**ಯದೀ ಸುತೇಭಿರಿಂದುಭಿಃ ಸೋಮೇಭಿಃ ಪ್ರತಿಭೂಷಥ ।**

**ವೇದಾ ವಿಶ್ವಸ್ಯ ಮೇಧಿರೋ ಧೃಷತ್ತಂತಮಿದೇಷತೇ ॥ ೩ ॥**

॥ ಪದಪಾಠಃ ॥

**ಯದಿ । ಸುತೇಭಿಃ । ಇಂದುಽಭಿಃ । ಸೋಮೇಭಿಃ । ಪ್ರತಿಽಭೂಷಥ ।**

**ವೇದ । ವಿಶ್ವಸ್ಯ । ಮೇಧಿರಃ । ಧೃಷತ್ । ತಂಽತಂ । ಇತ್ । ಆ । ಈಷತೇ ॥ ೩ ॥**

॥ ಸಾಯಣಭಾಷ್ಯಂ ॥

**ಹೇ ಅಧ್ವರ್ಯವಃ ಸುತೇಭಿರಭಿಷುತೈರಿಂದುಭಿರುಂದನಶೀಲೈರ್ದೀಪ್ತೈರ್ವಾ ಸೋಮೇಭಿಃ ಸೋಮೈರ್ಯದಿ ಪ್ರತಿಭೂಷಥ ಇಂದ್ರಂ ಪ್ರತಿ ಯೂಯಂ ಪ್ರತಿಗಚ್ಛಥ॥ ಭೂ ಪ್ರಾಪ್ತಾವಿತ್ಯಸ್ಯೈತದ್ರೂಪಂ॥**

ತದಾನೀಂ ಮೇಧಿರೋ ಮೇಧಾವೀ । ಮೇಧೋ ಯಜ್ಞಸ್ತದ್ವಾನ್ವಾ । ಸ ಇಂದ್ರೋ ವಿಶ್ವಸ್ಯ ವಿಶ್ವಂ ಸರ್ವಂ ಭವದೀಯಂ ಕಾಮಂ ವೇದ । ವೇತ್ತಿ । ಜಾನಾತಿ । ಜ್ಞಾತ್ವಾ ಚ ಧೃಷತ್ ಶತ್ರೂಣಾಂ ಧರ್ಷಕಃ ಸನ್ ತಂ ತಮಿತ್ತಂ ತಂ ಕಾಮಮೇನ್ಯೈಷತೇ । ಪ್ರಾಪಯತಿ ॥

॥ ಪ್ರತಿಪದಾರ್ಥ ॥

(ಎಲೈ ಅಧ್ವರ್ಯುಗಳೇ) **ಸುತೇಭಿಃ**—ಹಿಂಡಲ್ಪಟ್ಟವೂ । **ಇಂದುಭಿಃ**—ಸ್ರವಿಸತಕ್ಕವೂ ಆದ । **ಸೋಮೇಭಿಃ**—ಸೋಮರಸಗಳೊಡನೆ । **ಯದಿ**-ಯಾವಾಗ । **ಪ್ರತಿ ಭೂಷಥ**-ಎದುರುಗೊಳ್ಳುವಿರೋ (ಆಗ) । **ಮೇಧಿರಃ**—ಮೇಧಾವಿಯಾದ ಇಂದ್ರನು । **ವಿಶ್ವಸ್ಯ**—ನಿಮ್ಮ ಎಲ್ಲಾ ಕಾಮಗಳನ್ನೂ । **ವೇದ**—ತಿಳಿಯುತ್ತಾನೆ (ಮತ್ತು) । **ಧೃಷತ್**—ಶತ್ರುನಾಶಕನಾಗಿದ್ದು । **ತಂತಮಿತ್**—ಆ ಎಲ್ಲಾ ಕಾಮಗಳನ್ನೂ । **ಆ ಈಷತೇ**—ನೀವು ಪಡೆಯುವಂತೆ ಮಾಡುತ್ತಾನೆ.

॥ ಭಾವಾರ್ಥ ॥

ಎಲೈ ಅಧ್ವರ್ಯುಗಳೇ, ಹಿಂಡಲ್ಪಟ್ಟವೂ ಸ್ರವಿಸತಕ್ಕವೂ ಆದ ಸೋಮರಸಗಳೊಡನೆ ಯಾವಾಗ ಎದುರುಗೊಳ್ಳುವಿರೋ, ಆಗ ಮೇಧಾವಿಯಾದ ಇಂದ್ರನು ನಿಮ್ಮ ಎಲ್ಲಾ ಕಾಮಗಳನ್ನೂ ತಿಳಿಯುತ್ತಾರೆ. ಮತ್ತು ಶತ್ರುನಾಶಕನಾಗಿದ್ದು ನಿಮ್ಮ ಎಲ್ಲಾ ಕಾಮಗಳನ್ನೂ ನೀವು ಪಡೆಯುವಂತೆ ಮಾಡುತ್ತಾನೆ.

## English Translation.

When, with the effused and flowing Soma juices, you come into his presence, the sagacious (Indra) knows your wish, and the suppresser (of enemies) assuredly grants it, whatever it may be.

|| ಸಂಹಿತಾಪಾಠಃ ||

ಅಸ್ಮಾಅಸ್ಮಾ ಇದಂಧಸೋಽಧ್ವರ್ಯೋ ಪ್ರ ಭರಾ ಸುತಂ ।
ಕುವಿತ್ಸಮಸ್ಯ ಜೇನ್ಯಸ್ಯ ಶರ್ಧತೋಽಭಿಶಸ್ತೇರವಸ್ಪರತ್ ॥ ೪ ॥

॥ ಪದಪಾಠಃ ॥

ಅಸ್ಮೈಽಅಸ್ಮೈ । ಇತ್ । ಅಂಧಸಃ । ಅಧ್ವರ್ಯೋ ಇತಿ । ಪ್ರ । ಭರ । ಸುತಂ ।
ಕುವಿತ್ । ಸಮಸ್ಯ । ಜೇನ್ಯಸ್ಯ । ಶರ್ಧತಃ । ಅಭಿಽಶಸ್ತೇಃ । ಅವಽಸ್ಪರತ್ ॥ ೪ ॥

|| ಸಾಯಣಭಾಷ್ಯಂ ||

**ಅಸ್ಮಾ ಅಸ್ಮಾ ಇತ್ ಅಸ್ಮಾ ಏವೇಂದ್ರಾಯ ನಾನ್ಯಸ್ಮೈ ಹೇ ಅಧ್ವರ್ಯೋ ತ್ವಮಂಧಸಃ ಸೋಮಲಕ್ಷಣಸ್ಯಾನ್ನಸ್ಯ ಸುತಮಭಿಷುತಂ ರಸಂ ಪ್ರ ಭರ । ಸಂಪ್ರಹರ । ಪ್ರಯಚ್ಛೇತಿ ಯಾವತ್ । ಸ ಚೇಂದ್ರಃ ಸಮಸ್ಯ ಸರ್ವಸ್ಯ ಜೇನ್ಯಸ್ಯ ಜೇತವ್ಯಸ್ಯ ಶರ್ಧತ ಉತ್ಸಹಮಾನಸ್ಯ ಶತ್ರೋರಭಿಶಸ್ತೇರಭಿಶಂಸನಾತ್ ತತ್ಕೃತಾದ್ಧಿಂಸನಾತ್ಕುವಿದ್ಬಹುಶೋಽವಸ್ಪರತ್ ಅಸ್ಮಾನ್ಪಾಲಯತು ॥**

॥ ಪ್ರತಿಪದಾರ್ಥ ॥

**ಅಧ್ವರ್ಯೋ**–ಎಲೈ ಅಧ್ವರ್ಯುವೇ । **ಅಂಧಸಃ**-ಸೋಮರೂಪದ ಅನ್ನದ । **ಸುತಂ**-ಹಿಂಡಲ್ಪಟ್ಟ ರಸವನ್ನು । **ಅಸ್ಮಾಅಸ್ಮಾ ಇತ್**—ಇತರ ಯಾವ ದೇವತೆಗೂ ಅಲ್ಲದೆ ಕೇವಲ ಇಂದ್ರನಿಗೇ । **ಪ್ರ ಭರ**—ಉತ್ತಮ ರೀತಿಯಲ್ಲಿ ಅರ್ಪಿಸು (ಇದೇ ಇಂದ್ರನು) । **ಸಮಸ್ಯ**—ಸಮಸ್ತವಾದ । **ಜೇನ್ಯಸ್ಯ**—ಜಯಿಸಲ್ಪಡುವವನೂ । **ಶರ್ಧತಃ**–ಹಿಂಸಕನೂ ಆದ ಶತ್ರುವನ್ನು । **ಅಭಿಶಸ್ತೇಃ**—ನಾಶಮಾಡುವುದರಿಂದ । **ಕುವಿತ್**-ಅನೇಕ ವೇಳೆ । **ಅವಸ್ಪರತ್**—ನಮ್ಮನ್ನು ರಕ್ಷಿಸಲಿ.

॥ ಭಾವಾರ್ಥ ॥

ಎಲೈ ಅಧ್ವರ್ಯುವೇ, ಹಿಂಡಿ ಸಿದ್ಧವಾಗಿರುವ ಸೋಮರೂಪದ ರಸವನ್ನು ಇತರ ಯಾವ ದೇವತೆಗೂ ಅಲ್ಲದೇ ಕೇವಲ ಇಂದ್ರನನ್ನೇ ಉದ್ದೇಶಿಸಿ ಉತ್ತಮರೀತಿಯಲ್ಲಿರ್ಪಿಸು. ಇದೇ ಇಂದ್ರನು ಜಯಿಸಲ್ಪಡುವವನೂ ಹಿಂಸಕನೂ ಆದ ಸಮಸ್ತ ಶತ್ರುವಿನ ನಾಶದಿಂದ ನಮ್ಮನ್ನು ಅನೇಕ ವೇಳೆ ರಕ್ಷಿಸಲಿ.

English Translation

Offer, priest, to him, and him (only) this libation of (sacrificial) food, and may he ever defend us against the malignity of every superable adversary.



# ನಲವತ್ತಮೂರನೆಯ ಸೂಕ್ತವು

॥ ಸಾಯಣಭಾಷ್ಯಂ ॥

**ಯಸ್ಯ ತ್ಯದಿತಿ ಚತುರ್ಋಚಂ ವಿಂಶಂ ಸೂಕ್ತಂ ಭರದ್ವಾಜಸ್ಯಾರ್ಷಮೌಷ್ಣಿಹಮೈಂದ್ರಂ । ಅನುಕ್ರಮ್ಯತೇ ಚ । ಯಸ್ಯೌಷ್ಣಿಹಮಿತಿ ॥ ಮಹಾವ್ರತೇಽಪಿ ನಿಷ್ಕೇವಲ್ಯೇಽಪ್ಯೌಷ್ಣಿಹತೃಚಾಶೀತಾವೇತತ್ಸೂಕ್ತಂ । ತಥೈವ ಪಂಚಮಾರಣ್ಯಕೇ ಸೂತ್ರಿತಂ । ಯಸ್ಯ ತ್ಯಚ್ಛಂಬರಂ ಮದ ಇತಿ ತ್ರಯಸ್ತೃಚಾ ಗಾಯತ್ರ್ಯಃ । ಐ. ಆ. ೫-೨-೫ । ಇತಿ ॥**

ಅನುವಾದವು—**ಯಸ್ಯ ತ್ಯತ್** ಎಂಬ ಈ ಸೂಕ್ತವು ಮೂರನೆಯ ಅನುವಾಕದಲ್ಲಿ ಇಪ್ಪತ್ತನೆಯ ಸೂಕ್ತವು ಇವರಲ್ಲಿ ನಾಲ್ಕು ಋಕ್ಕುಗಳಿರುವವು. ಈ ಸೂಕ್ತಕ್ಕೆ ಭರದ್ವಾಜನು ಋಷಿಯು; ಇಂದ್ರನು ದೇವತೆಯು; **ಉಷ್ಣಿಕ್** ಛಂದಸ್ಸು. ಅನುಕ್ರಮಣಿಕೆಯಲ್ಲಿ—**ಯಸ್ಯೌಷ್ಣಿಹಂ** ಎಂದು ಹೇಳಿರುವುದು. ಮಹಾವ್ರತೇಷ್ಟಿಯಲ್ಲಿ ನಿಷ್ಕೇವಲ್ಯ ಶಸ್ತ್ರಮಂತ್ರಗಳನ್ನು ಪಠಿಸುವಾಗ ಉಷ್ಣಿಕ್ ಛಂದಸ್ಸಿನ ಋಕ್ಕುಗಳಿಗಾಗಿ ಈ ಸೂಕ್ತದ ವಿನಿಯೋಗವಿರುವುದೆಂದು ಐತರೇಯಾರಣ್ಯಕದ ಪಂಚಮಾರಣ್ಯಕದಲ್ಲಿ—**ಯಸ್ಯ ತ್ಯಚ್ಛಂಬರಂ ಮದ ಇತಿ ತ್ರಯಸ್ತ್ರೃಚಾ ಗಾಯತ್ರ್ಯಃ** ಎಂಬ ವಾಕ್ಯದಿಂದ (ಐ. ಆ. ೫-೨-೫) ನಿರ್ದೇಶಿಸಲ್ಪಟ್ಟಿರುವುದು,

## ಸೂಕ್ತ—೪೩

ಮಂಡಲ—೬ ॥ ಅನುವಾಕ—೩ ॥ ಸೂಕ್ತ—೪೩ ॥
ಅಷ್ಟಕ—೪ ॥ ಅಧ್ಯಾಯ—೭ ॥ ವರ್ಗ—೧೫ ॥
॥ ಸೂಕ್ತದಲ್ಲಿರುವ ಋಕ್ಸಂಖ್ಯೆ—೪ ॥
॥ ಋಷಿಃ—ಭರದ್ವಾಜೋ ಬಾರ್ಹಸ್ಪತ್ಯಃ ॥
॥ ದೇವತಾ—ಇಂದ್ರಃ ॥
॥ ಛಂದಃ—ಉಷ್ಣಿಕ್ ॥

॥ ಸಂಹಿತಾಪಾಠಃ ॥

ಯಸ್ಯ ತ್ಯಚ್ಛಂಬರಂ ಮದೇ ದಿವೋದಾಸಾಯ ರಂಧಯಃ ।
ಅಯಂ ಸ ಸೋಮ ಇಂದ್ರ ತೇ ಸುತಃ ಪಿಬ ॥ ೧ ॥

॥ ಪದಪಾಠಃ ॥

ಯಸ್ಯ । ತ್ಯತ್ । ಶಂಬರಂ । ಮದೇ । ದಿವಃऽದಾಸಾಯ । ರಂಧಯಃ ।
ಅಯಂ । ಸಃ । ಸೋಮಃ । ಇಂದ್ರ । ತೇ । ಸುತಃ । ಪಿಬ ॥ ೧ ॥

॥ ಸಾಯಣಭಾಷ್ಯಂ ॥

**ಹೇ ಇಂದ್ರ ಯಸ್ಯ ಸೋಮಸ್ಯ ಮದೇ ಪಾನೇನ ಜನಿತೇ ಹರ್ಷೇ ಸತಿ ಶಂಬರಮಸುರಂ ದಿವೋದಾಸಾಯ ರಾಜ್ಞೇ ರಂಧಯಃ ಅಹಿಂಸೀಃ । ಯದ್ವಾ । ವಶೀಕೃತವಾನಸಿ ॥ ರಧ್ಯತಿರ್ವಶಗಮನೇ । ನಿ. ೬-೩೨ । ಇತಿ ಯಾಸ್ಕಃ ॥ ತ್ಯದಿತಿ ಕ್ರಿಯಾವಿಶೇಷಣಂ । ತ್ಯತ್ತತ್ಪ್ರಸಿದ್ಧಂ ಯಥಾ ಭವತಿ ತಥಾರಂಧಯ ಇತ್ಯರ್ಥಃ । ಹೇ ಇಂದ್ರ ಸೋಽಯಂ ಸೋಮಸ್ತೇ ತ್ವದರ್ಥಂ ಸುತೋಽಭಿಷುತಃ । ಅತಸ್ತ್ವಂ ಪಿಬ ॥**

॥ ಪ್ರತಿಪದಾರ್ಥ ॥

**ಇಂದ್ರ**—ಎಲೈ ಇಂದ್ರನೇ । **ಯಸ್ಯ ಮದೇ**—ಯಾವ ಸೋಮರಸದ ಪಾನದಿಂದ ತೃಪ್ತನಾಗಿ । **ದಿವೋದಾಸಾಯ**—ದಿವೋದಾಸನೆಂಬ ರಾಜನಿಗಾಗಿ । **ಶಂಬರಂ**—ಶಂಬರಾಸುರನನ್ನು । **ರಂಧಯಃ**—

ಹಿಂಸಿಸಿದೆಯೋ । **ತ್ಯತ್**— ಪ್ರಸಿದ್ಧವಾದ । **ಸಃ ಅಯಂ ಸೋಮಃ**— ಅದೇ ಸೋಮರಸವು । **ತೇ**— ನಿನ್ನನ್ನುದ್ದೇಶಿಸಿ । **ಸುತಃ**— ಹಿಂಡಲ್ಪಟ್ಟಿದೆ । **ಪಿಬ**— ಅದನ್ನು ಪಾನಮಾಡು.

॥ ಭಾವಾರ್ಥ ॥

ಎಲೈ ಇಂದ್ರನೇ, ಯಾವ ಸೋಮರಸದ ಪಾನದಿಂದ ತೃಪ್ತನಾಗಿ ದಿವೋದಾಸನೆಂಬ ರಾಜನಿಗಾಗಿ ಶಂಬರಾಸುರನನ್ನು ಹಿಂಸಿಸಿದೆಯೋ, ಪ್ರಸಿದ್ಧವಾದ ಅದೇ ಸೋಮರಸವು ನಿನ್ನನ್ನುದ್ದೇಶಿಸಿ ಹಿಂಡಲ್ಪಟ್ಟಿದೆ. ಅದನ್ನು ಪಾನಮಾಡು.

English Translation.

This Soma, in the exhilaration of which it is known that you have subdued Sambara for (the sake of) Divodasa, is poured out, Indra, for you; drink.

॥ ಸಂಹಿತಾಪಾಠಃ ॥

**ಯಸ್ಯ ತೀವ್ರಸುತಂ ಮದಂ ಮಧ್ಯಮಂತಂ ಚ ರಕ್ಷಸೇ ।**
**ಅಯಂ ಸ ಸೋಮ ಇಂದ್ರ ತೇ ಸುತಃ ಪಿಬ ॥ ೨ ॥**

॥ ಪದಪಾಠಃ ॥

**ಯಸ್ಯ । ತೀವ್ರಽಸುತಂ । ಮದಂ । ಮಧ್ಯಂ । ಅಂತಂ । ಚ । ರಕ್ಷಸೇ ।**
**ಅಯಂ । ಸಃ । ಸೋಮಃ । ಇಂದ್ರ । ತೇ । ಸುತಃ । ಪಿಬ ॥ ೨ ॥**

॥ ಸಾಯಣಭಾಷ್ಯಂ ॥

**ಹೇ ಇಂದ್ರ ತ್ವಂ ಯಸ್ಯ ಸೋಮಸ್ಯಾವಯವಭೂತಂ ತೀವ್ರಸುತಂ । ತೀಕ್ಷ್ಣಂ ಸುತಮಭಿಷವೋ ಯಸ್ಯ ಸ ತೀವ್ರಸುತಃ ಪ್ರಾತಃಸವನಿಕಃ । ತಂ ಮದಂ ಮದಕರಂ ಸೋಮರಸಂ ಮಧ್ಯಂ ಮಧ್ಯಂದಿನಸವನಗತಮಂತಂ ತೃತೀಯಸವನಗತಂ ಚ ಸೋಮರಸಂ ರಕ್ಷಸೇ ರಕ್ಷಸಿ ಸೋಽಯಂ ಸೋಮಸ್ತ್ವದರ್ಥಮಭಿಸುತಸ್ತಂ ಪಿಬೇತಿ ॥**

॥ ಪ್ರತಿಪದಾರ್ಥ ॥

**ಇಂದ್ರ**— ಎಲೈ ಇಂದ್ರನೇ । **ಯಸ್ಯ**— ಯಾವ ಸೋಮದ ರಸದ ಭಾಗದಲ್ಲಿ । **ತೀವ್ರಸುತಂ**— ಪ್ರಾತಃಸವನದಲ್ಲಿ ಹಿಂಡಿ ತೀವ್ರವಾಗಿರುವುದೂ । **ಮದಂ**— ಯಾವುದು ಮದಕರವೋ । **ಮಧ್ಯಂ**— ಮಾಧ್ಯಂದಿನ ಸವನದಲ್ಲಿ ಹಿಂಡಲ್ಪಟ್ಟುದೂ । **ಅಂತಂ** ತೃತೀಯಸವನದಲ್ಲಿ ಹಿಂಡಲ್ಪಟ್ಟುದೂ ಆದ ಯಾವ ಸೋಮರಸಗಳನ್ನು । **ರಕ್ಷಸೇ**— ನೀನು ಆದರದಿಂದ ರಕ್ಷಿಸುವೆಯೋ । **ಸ ಅಯಂ ಸೋಮಃ**— ಅದೇ ಸೋಮವು । **ತೇ ಸುತಃ**— ನಿನ್ನನ್ನುದ್ದೇಶಿಸಿ ಹಿಂಡಲ್ಪಟ್ಟಿದೆ । **ಪಿಬ**— ಅದನ್ನು ಪಾನಮಾಡು.

|| ಭಾವಾರ್ಥ ||

ಎಲೈ ಇಂದ್ರನೇ, ಮದಕರವಾದುದೂ, ಪ್ರಾತಃಸವನದಲ್ಲಿ ಹಿಂಡಿ ಸಿದ್ಧವಾಗಿರುವುದೂ, ಮಾಧ್ಯಂದಿನ ಸವನದಲ್ಲಿ ಹಿಂಡಲ್ಪಟ್ಟುದೂ ತೃತೀಯಸವನದಲ್ಲಿ ಹಿಂಡಲ್ಪಟ್ಟುದೂ ಆದ ಯಾವ ಯಾವ ಸೋಮರಸವಿರುವುದೋ ಆಯಾ ಸೋಮರಸಗಳನ್ನೆಲ್ಲಾ ಪಾನಮಾಡು.

## English Translation.

This Soma, the exhilarating draught of which, when fresh effused (at dawn), or at noon, or at the last (or evening worship), you cherish is poured out, Indra, for you: drink.

|| ಸಂಹಿತಾಪಾಠಃ ||

ಯಸ್ಯ ಗಾ ಅಂತರಶ್ಮನೋ ಮದೇ ದೃಳ್ಹಾ ಅವಾಸೃಜಃ |
ಅಯಂ ಸ ಸೋಮ ಇಂದ್ರ ತೇ ಸುತಃ ಪಿಬ || ೩ ||

|| ಪದಪಾಠಃ ||

ಯಸ್ಯ | ಗಾಃ | ಅಂತಃ | ಅಶ್ಮನಃ | ಮದೇ | ದೃಳ್ಹಾಃ | ಅವ೭ಅಸೃಜಃ |
ಅಯಂ | ಸಃ | ಸೋಮಃ | ಇಂದ್ರ | ತೇ | ಸುತಃ | ಪಿಬ || ೩ ||

|| ಸಾಯಣಭಾಷ್ಯಂ ||

ಯಸ್ಯ ಸೋಮಸ್ಯ ಮದೇ ಮದಕರೇ ರಸೇ ಪೀತೇ ಸತ್ಯಶ್ಮನೋ ವಲಾಸುರೇಣ ನಿಹಿತಸ್ಯ ಪರ್ವತಸ್ಯಾಂತರ್ಮಧ್ಯೇ ವಿದ್ಯಮಾನಾ ದೃಳ್ಹಾ ದೃಢಪಿಧಾನಾಶ್ಚ ಗಾಃ ಪಣಿಭಿರಪಹೃತಾ ಅವಾಸೃಜಃ ವಲಸ್ಯ ಬಂಧನಾದ್ವ್ಯಸೃಜಃ ಸ ಸೋಮ ಇತ್ಯಾದಿ ಗತಂ ||

|| ಪ್ರತಿಪದಾರ್ಥ ||

**ಇಂದ್ರ**—ಎಲೈ ಇಂದ್ರನೇ | **ಯಸ್ಯ**—ಯಾವ ಸೋಮಪಾನದಿಂದ | **ಮದೇ**—ತೃಪ್ತಿಯುಂಟಾದಾಗ | **ಅಶ್ಮನಃ**—ಪರ್ವತದ | **ಅಂತಃ**—ಮಧ್ಯಭಾಗದಲ್ಲಿ | **ದೃಳ್ಹಾಃ**—ದೃಢವಾಗಿ ಬಂಧಿತವಾಗಿದ್ದರೂ | **ಗಾಃ**—ಗೋವುಗಳನ್ನು | **ಅವಾಸೃಜಃ**—ಬಿಡಿಸಿದೆಯೋ | **ಅಯಂ ಸ ಸೋಮಃ**—ಅದೇ ಸೋಮವು | **ತೇ**—ನಿನ್ನನ್ನುದ್ದೇಶಿಸಿ | **ಸುತಃ**—ಹಿಂಡಲ್ಪಟ್ಟಿದೆ | **ಪಿಬ**—ಅದನ್ನು ಪಾನಮಾಡು.

|| ಭಾವಾರ್ಥ ||

ಎಲೈ ಇಂದ್ರನೇ, ಯಾವ ಸೋಮಪಾನದಿಂದ ತೃಪ್ತಿಯುಂಟಾದಾಗ ಪರ್ವತದ ಮಧ್ಯಭಾಗದಲ್ಲಿ ದೃಢವಾಗಿ ಬಂಧಿತವಾಗಿದ್ದರೂ ಸಹ ಗೋವುಗಳನ್ನು ಬಿಡಿಸಿದೆಯೋ, ಅದೇ ಸೋಮವು ನಿನ್ನನ್ನು ಉದ್ದೇಶಿಸಿ ಹಿಂಡಲ್ಪಟ್ಟಿದೆ. ಅದನ್ನು ಪಾನಮಾಡು.

## English Translation.

This Soma, in the exhilaration of which you have liberated the cattle, firm (fastened) within the rock, is poured out, Indra, for you: drink.

|| ಸಂಹಿತಾಪಾಠಃ ||

ಯಸ್ಯ ಮಂದಾನೋ ಅಂಧಸೋ ಮಾಘೋನಂ ದಧಿಷೇ ಶವಃ |
ಅಯಂ ಸ ಸೋಮ ಇಂದ್ರ ತೇ ಸುತಃ ಪಿಬ || ೪ ||

|| ಪದಪಾಠಃ ||

ಯಸ್ಯ | ಮಂದಾನಃ | ಅಂಧಸಃ | ಮಾಘೋನಂ | ದಧಿಷೇ | ಶವಃ |
ಅಯಂ | ಸಃ | ಸೋಮಃ | ಇಂದ್ರ | ತೇ | ಸುತಃ | ಪಿಬ || ೪ ||

|| ಸಾಯಣಭಾಷ್ಯಂ ||

ಹೇ ಇಂದ್ರ ತ್ವಂ ಯಸ್ಯಾಂಧಸಃ ಸೋಮಲಕ್ಷಣಸ್ಯಾನ್ನಸ್ಯ ಪಾನೇನ ಮಂದಾನೋ ಮಂದಮಾನೋ ಹೃಷ್ಟಃ ಸನ್ ಮಾಘೋನಮೈಂದ್ರಂ ಶವೋಽಸಾಧಾರಣಂ ಬಲಂ ದಧಿಷೇ ಧಾರಯಸಿ | ಯೇನ ಸೋಮೇನ ಶವೇಂದ್ರತ್ವಂ ಜಾತಮಿತ್ಯರ್ಥಃ | ಸೋಽಯಂ ಸೋಮಃ ಸುತೋಽಭಿಷುತಸ್ತಂ ಪಿಬ ||

|| ಪ್ರತಿಪದಾರ್ಥ ||

**ಇಂದ್ರ**—ಎಲೈ ಇಂದ್ರನೇ | **ಯಸ್ಯ**—ಯಾವ | **ಅಂಧಸ್ಯ**—ಸೋಮರಸದ ಪಾನದಿಂದ | **ಮಂದಾನಃ**—ಹೃಷ್ಟನಾಗಿ | **ಮಾಘೋನಂ**—'ಮಘವಾ' ಎಂಬ ಸರ್ವೇಶ್ವರತ್ವವನ್ನೂ | **ಶವಃ**—ಅಸಾಧಾರಣವಾದ ಶಕ್ತಿಯನ್ನೂ | **ದಧಿಷೇ**—ಹೊಂದಿದ್ದೀಯೋ | **ಸಃ ಅಯಂ ಸೋಮಃ**—ಅದೇ ಸೋಮವು | **ತೇ**—ನಿನ್ನನ್ನುದ್ದೇಶಿಸಿ | **ಸುತಃ**--ಹಿಂಡಲ್ಪಟ್ಟಿದೆ | **ಪಿಬ**—ಅದನ್ನು ಪಾನಮಾಡು.

|| ಭಾವಾರ್ಥ ||

ಎಲೈ ಇಂದ್ರನೇ, ಯಾವ ಸೋಮರಸದ ಪಾನದಿಂದ ಹೃಷ್ಟನಾಗಿ ನೀನು "ಮಘವಾ" ಎಂಬ **ಈಶ್ವರತ್ವ**ವನ್ನು ಪಡೆದೆಯೋ ಮತ್ತು ಅಸಾಧಾರಣವಾದ ಶಕ್ತಿಯನ್ನು ಹೊಂದಿದೆಯೋ ಅದೇ ಸೋಮವು ನಿನ್ನನ್ನುದ್ದೇಶಿಸಿ ಹಿಂಡಲ್ಪಟ್ಟಿದೆ. ಅದನ್ನು ಪಾನಮಾಡು.

English Translation.

This Soma, exhilarated (by drinking) of which (sacrificial) food you possess the might of Maghavan, is poured out, Indra, for you : drink.

# ನಲವತ್ತನಾಲ್ಕನೆಯ ಸೂಕ್ತವು

|| ಸಾಯಣಭಾಷ್ಯಂ ||

**ಚತುರ್ಥೇಽನುವಾಕೇ ಷಟ್ ಸೂಕ್ತಾನಿ । ತತ್ರ ಯೋ ರಯಿವ ಇತಿ ಚತುರ್ವಿಂಶತ್ಯೃಚಂ ಪ್ರಥಮಂ ಸೂಕ್ತಂ ಬೃಹಸ್ಪತಿಪುತ್ರಸ್ಯ ಶಂಯೋರಾರ್ಷಮೈಂದ್ರಂ । ಆದಿತಃ ಷಡನುಷ್ಟುಭಃ ಸಪ್ತಮ್ಯಷ್ಟಮೀನವಮ್ಯೋ ವಿರಾಜೋಽಷ್ಟಮ್ಯೇಕೈವ ವಾ ವಿರಾಟ್ ಶಿಷ್ಟಾಸ್ತ್ರಿಷ್ಟುಭಃ । ತಥಾ ಚಾನುಕ್ರಾಂತಂ । ಯೋ ರಯಿವಶ್ಚತುರ್ವಿಂಶತಿಃ ಶಂಯುರ್ಬಾರ್ಹಸ್ಪತ್ಯೋ ಹ್ಯಾದೌ ಷಳನುಷ್ಟುಭಸ್ತಿಸ್ರಶ್ಚ ವಿರಾಜೋ ಮಧ್ಯಮೈವ ವಾಸಾಮಿತಿ । ಗತಃ ಸೂಕ್ತವಿನಿಯೋಗಃ ||**

ಅನುವಾದವು—ಆರನೆಯ ಮಂಡಲದ ನಾಲ್ಕನೆಯ ಅನುವಾಕದಲ್ಲಿ ಆರು ಸೂಕ್ತಗಳಿರುವವು. ಅವುಗಳಲ್ಲಿ **ಯೋ ರಯಿವಃ** ಎಂಬ ಈ ಸೂಕ್ತವು ಮೊದಲನೆಯದು. ಇದರಲ್ಲಿ ಇಪ್ಪತ್ತನಾಲ್ಕು ಋಕ್ಕುಗಳಿರುವವು. ಈ ಸೂಕ್ತಕ್ಕೆ ಬೃಹಸ್ಪತಿಪುತ್ರನಾದ ಶಂಯುವೆಂಬುವನು ಋಷಿಯು; ಇಂದ್ರನು ದೇವತೆಯು; ಈ ಸೂಕ್ತದಲ್ಲಿ ಮೊದಲಿನ ಆರು ಋಕ್ಕುಗಳು ಅನುಷ್ಟುಪ್‌ಛಂದಸ್ಕವು ಏಳು, ಎಂಟು, ಒಂಭತ್ತನೆಯ ಋಕ್ಕುಗಳು ವಿರಾಟ್‌ಛಂದಸ್ಕವು; ಎಂಟನೆಯ ಋಕ್ಕು ವಿರಾಟ್ ಅಥವಾ ತ್ರಿಷ್ಟುಪ್‌ಛಂದಸ್ಕವು; ಉಳಿದ ಋಕ್ಕುಗಳೆಲ್ಲಾ ತ್ರಿಷ್ಟುಪ್‌ಛಂದಸ್ಕವು. ಅನುಕ್ರಮಣಿಕೆಯಲ್ಲಿ—**ಯೋ ರಯಿವಶ್ಚತುರ್ವಿಂಶತಿಃ ಶಂಯುರ್ಬಾರ್ಹಸ್ಪತ್ಯೋ ಹ್ಯಾದೌ ಷಳನುಷ್ಟುಭಸ್ತಿಸ್ರಶ್ಚ ವಿರಾಜೋ ಮಧ್ಯಮೈವ ವಾಸಾಂ** ಎಂದು ಹೇಳಿರುವುದು. ಸೂಕ್ತದ ವಿನಿಯೋಗವನ್ನು ಹಿಂದೆಯೇ ಹೇಳಲಾಗಿದೆ.

## ಸೂಕ್ತ—೪೪

ಮಂಡಲ—೬ || ಅನುವಾಕ – ೪ || ಸೂಕ್ತ—೪೪ ||
ಅಷ್ಟಕ—೪ || ಅಧ್ಯಾಯ—೭ || ವರ್ಗ—೧೬, ೧೭, ೧೮, ೧೯, ೨೦ ||
|| ಸೂಕ್ತದಲ್ಲಿರುವ ಋಕ್ಸಂಖ್ಯೆ—೨೪ ||
|| ಋಷಿಃ—ಶಂಯುರ್ಬಾರ್ಹಸ್ಪತ್ಯಃ ||
|| ದೇವತಾ—ಇಂದ್ರಃ ||
|| ಛಂದಃ—೧-೬ ಅನುಷ್ಟುಪ್ | ೭, ೯. ವಿರಾಟ್ | ೮. ವಿರಾಟ್ ತ್ರಿಷ್ಟುಬ್ವಾ |
೧೦-೨೪. ತ್ರಿಷ್ಟುಪ್ ||

|| ಸಂಹಿತಾಪಾಠಃ ||

ಯೋ ರಯಿವೋ ರಯಿಂತಮೋ ಯೋ ದ್ಯುಮ್ನೈರ್ದ್ಯುಮ್ನವತ್ತಮಃ ।
ಸೋಮಃ ಸುತಃ ಸ ಇಂದ್ರ ತೇಽಸ್ತಿ ಸ್ವಧಾಪತೇ ಮದಃ ॥ ೧ ॥

|| ಪದಪಾಠಃ ||

ಯಃ । ರಯಿಽವಃ । ರಯಿಂಽತಮಃ । ಯಃ । ದ್ಯುಮ್ನೈಃ । ದ್ಯುಮ್ನವತ್‌ಽತಮಃ ।
ಸೋಮಃ । ಸುತಃ । ಸಃ । ಇಂದ್ರ । ತೇ । ಅಸ್ತಿ । ಸ್ವಧಾಽಪತೇ । ಮದಃ ॥ ೧ ॥

|| ಸಾಯಣಭಾಷ್ಯಂ ||

ಹೇ ರಯಿವೋ ಧನವನ್ನಿಂದ್ರ ಯಃ ಸೋಮೋ ರಯಿಂತಮೋಽತಿಶಯೇನ ರಯಿಮಾನ್ ಧನವಾನ್ । ಯಶ್ಚ ದ್ಯುಮ್ನೈರ್ದ್ಯೋತಮಾನೈರ್ಯಶೋಭಿರ್ದ್ಯುಮ್ನವತ್ತಮೋಽತಿಶಯೇನ ಯಶಸ್ವೀ ಹೇ ಸ್ವಧಾಪತೇ ಸ್ವಧಾಯಾ ಅನ್ನಸ್ಯ ಸೋಮಲಕ್ಷಣಸ್ಯ ಪಾಲಕೇಂದ್ರ ಸ ಸೋಮೋಽಭಿಷುತಃ ಸನ್ ತೇ ತವ ಮದೋ ಮದಕರೋಽಸ್ತಿ । ಭವತಿ ॥

|| ಪ್ರತಿಪದಾರ್ಥ ||

**ರಯಿವಃ**—ಧನವಂತನೂ । **ಸ್ವಧಾಪತೇ**—ಸ್ವಧಾರೂಪದ ಸೋಮಪಾಲಕನೂ ಆದ । **ಇಂದ್ರ**—ಎಲೈ ಇಂದ್ರನೇ । **ಯಃ**—ಯಾವ ಸೋಮವು । **ರಯಿಂತಮಃ**—ಅತ್ಯಂತ ಧನಯುಕ್ತವಾಗಿದೆಯೋ । **ಯಃ**—ಯಾವ ಸೋಮವು । **ದ್ಯುಮ್ನೈಃ**—ತನ್ನ ಕಾಂತಿಗಳಿಂದ । **ದ್ಯುಮ್ನವತ್ತಮಃ**—ಅತ್ಯಂತ ಪ್ರಭಾಯುತವೂ ಯಶಸ್ವಿಯೂ ಆಗಿರುವುದೋ । **ಸಃ ಸೋಮಃ**—ಅದೇ ಸೋಮವು । **ಸುತಃ**—ಹಿಂಡಲ್ಪಟ್ಟು । **ತೇ**—ನಿನಗೆ । **ಮದಃ**—ಹರ್ಷಕಾರಕವಾಗಿ । **ಅಸ್ತಿ**—ಆಗಿರುತ್ತದೆ.

|| ಭಾವಾರ್ಥ ||

ಧನವಂತನೂ, ಸ್ವಧಾರೂಪದ ಸೋಮಪಾಲಕನೂ ಆದ ಎಲೈ ಇಂದ್ರನೇ, ಯಾವ ಸೋಮವು ಅತ್ಯಂತ ಧನಯುಕ್ತವಾಗಿದೆಯೋ, ಯಾವ ಸೋಮವು ತನ್ನ ಕಾಂತಿಗಳಿಂದ ಅತ್ಯಂತ ಪ್ರಭಾವಯುತವೂ, ಯಶಸ್ವಿಯೂ ಆಗಿರುವುದೋ ಅದೇ ಸೋಮವು ಹಿಂಡಲ್ಪಟ್ಟು ನಿನಗೆ ಹರ್ಷಕಾರವಾಗಿರುತ್ತದೆ.

English Translation.

Opulent Indra, the Soma that abounds with riches, and is most resplendent with glories, is poured out : is is your exhilaration, Indra, lord of the offering.

॥ ಸಂಹಿತಾಪಾಠಃ ॥

ಯಃ ಶಗ್ಮಸ್ತುವಿಶಗ್ಮ ತೇ ರಾಯೋ ದಾಮಾ ಮತೀನಾಂ ।
ಸೋಮಃ ಸುತಃ ಸ ಇಂದ್ರ ತೇಽಸ್ತಿ ಸ್ವಧಾಪತೇ ಮದಃ ॥ ೨ ॥

॥ ಪದಪಾಠಃ ॥

ಯಃ । ಶಗ್ಮಃ । ತುವಿಽಶಗ್ಮ । ತೇ । ರಾಯಃ । ದಾಮಾ । ಮತೀನಾಂ ।
ಸೋಮಃ । ಸುತಃ । ಸಃ । ಇಂದ್ರ । ತೇ । ಅಸ್ತಿ । ಸ್ವಧಾಽಪತೇ । ಮದಃ ॥ ೨ ॥

॥ ಸಾಯಣಭಾಷ್ಯಂ ॥

**ಹೇ ತುವಿಶಗ್ಮ ಬಹುಸುಖೇಂದ್ರ ಯಃ ಶಗ್ಮಃ ಸುಖಕರಸ್ತೇ ತ್ವದೀಯೋ ಯಃ ಸೋಮೋ ಮತೀನಾಂ ಸ್ತೋತೄಣಾಂ ರಾಯೋ ಧನಸ್ಯ ದಾಮಾ ದಾತಾ ಭವತಿ ಹೇ ಸ್ವಧಾಪತ ಇಂದ್ರ ಸ ಸೋಮೋಽಭಿಷುತಸ್ತವ ಮದಕರೋ ಭವತಿ ॥**

। ಪ್ರತಿಪದಾರ್ಥ ॥

**ತುವಿಶಗ್ಮ**—ಅನೇಕ ವಿಧವಾದ ಸುಖವುಳ್ಳವನೂ । **ಸ್ವಧಾಪತೇ**—ಸ್ವಧಾರೂಪದ ಸೋಮಪಾಲಕನೂ ಆದ । **ಇಂದ್ರ**—ಎಲೈ ಇಂದ್ರನೇ । **ಯಃ**—ಯಾವ ಸೋಮವು । **ಶಗ್ಮಃ**—ಸುಖಕರವಾಗಿಯೂ । **ತೇ**—ನಿನ್ನ । **ಮತೀನಾಂ**—ಸ್ತೋತೃಗಳಿಗೆ । **ರಾಯಃ**—ಧನವನ್ನು । **ದಾಮಾ**—ಕೊಡತಕ್ಕದ್ದೂ ಆಗಿರುವುದೋ । **ಸಃ ಸೋಮಃ**—ಅದೇ ಸೋಮವು । **ಸುತಃ**—ಹಿಂಡಲ್ಪಟ್ಟು । **ತೇ**—ನಿನಗೆ । **ಮದಃ**—ಹರ್ಷಕಾರಕವಾಗಿ । **ಅಸ್ತಿ**—ಆಗಿರುತ್ತದೆ.

। ಭಾವಾರ್ಥ ॥

ಅನೇಕ ವಿಧವಾದ ಸುಖವುಳ್ಳವನೂ, ಸ್ವಧಾರೂಪದ ಸೋಮಪಾಲಕನೂ ಆದ ಎಲೈ ಇಂದ್ರನೇ, ಯಾವ ಸೋಮವು ಸುಖಕರವಾಗಿಯೂ ನಿನ್ನ ಸ್ತೋತೃಗಳಿಗೆ ಧನವನ್ನು ಕೊಡತಕ್ಕದ್ದೂ ಆಗಿರುವುದೋ ಅದೇ ಸೋಮವು ಹಿಂಡಲ್ಪಟ್ಟು ನಿನಗೆ ಹರ್ಷಕಾರಕವಾಗಿರುತ್ತದೆ.

English Translation.

The Soma, possessor of felicity, which gives you delight, and which is the bestower of riches on your votaries, is poured out: it is your exhilaration, Indra, lord of the offering.

॥ ಸಂಹಿತಾಪಾಠಃ ॥

ಯೇನ ವೃದ್ಧೋ ನ ಶವಸಾ ತುರೋ ನ ಸ್ವಾಭಿರೂತಿಭಿಃ ।
ಸೋಮಃ ಸುತಃ ಸ ಇಂದ್ರ ತೇಽಸ್ತಿ ಸ್ವಧಾಪತೇ ಮದಃ ॥ ೩ ॥

॥ ಪದಪಾಠಃ ॥

ಯೇನ । ವೃದ್ಧಃ । ನ । ಶವಸಾ । ತುರಃ । ನ । ಸ್ವಾಭಿಃ । ಊತಿಽಭಿಃ ।
ಸೋಮಃ । ಸುತಃ । ಸಃ । ಇಂದ್ರ । ತೇ । ಅಸ್ತಿ । ಸ್ವಧಾಽಪತೇ । ಮದಃ ॥ ೩ ॥

॥ ಸಾಯಣಭಾಷ್ಯಂ ॥

**ಇಮೌ ನಕಾರೌ ಸಮುಚ್ಚಯಾರ್ಥೌ । ಯೇನ ಪೀತೇನ ಸೋಮೇನ ವೃದ್ಧೋ ನ ಪ್ರವೃದ್ಧಶ್ಚ ಸನ್ ಸ್ವಾಭಿರೂತಿಭಿರಾತ್ಮೀಯೈರ್ಮರುದ್ಭಿಃ ಸಾರ್ಧಂ ಶವಸಾ ಬಲೇನ ತುರಃ ಶತ್ರೂಣಾಂ ಹಿಂಸಕಶ್ಚ ಭವಸಿ ಸ ಸೋಮ ಇತ್ಯಾದಿ ಪೂರ್ವವತ್ ॥**

॥ ಪ್ರತಿಪದಾರ್ಥ ॥

**ಸ್ವಧಾಪತೇ**—ಸ್ವಧಾರೂಪದ ಸೋಮಪಾಲಕನಾದ । **ಇಂದ್ರ**—ಎಲೈ ಇಂದ್ರನೇ । **ಯೇನ**—ಯಾವ ಸೋಮರಸದ ಪಾನದಿಂದ । **ವೃದ್ಧೋ ನ**—ನೀನು ಪ್ರವೃದ್ಧನಾಗಿ ಬೆಳೆದು । **ಸ್ವಾಭಿಃ**—ನಿನ್ನೊಡನಾಡಿಗಳಾದ । **ವಾತಿಭಿಃ**—ಮರುತ್ತುಗಳೊಡನೆಯೂ । **ಶವಸಾ**—ಶಕ್ತಿಯೊಡನೆಯೂ ಕೂಡಿಕೊಂಡು । **ತುರಃ**—ಶತ್ರುನಾಶಕನಾಗುತ್ತೀಯೋ । **ಸಃ ಸೋಮಃ**—ಅಂತಹ ಅದೇ ಸೋಮವು । **ಸುತಃ**—ಹಿಂಡಲ್ಪಟ್ಟು । **ತೇ**—ನಿನಗೆ । **ಮದಃ**—ಹರ್ಷಕಾರಕವಾಗಿ । **ಅಸ್ತಿ**—ಆಗಿರುತ್ತದೆ.

॥ ಭಾವಾರ್ಥ ॥

ಸ್ವಧಾರೂಪದ ಸೋಮಪಾಲಕನಾದ ಎಲೈ ಇಂದ್ರನೇ, ಯಾವ ಸೋಮರಸದ ಪಾನದಿಂದ ನೀನು ಪ್ರವೃದ್ಧನಾಗಿ ಬೆಳೆದು ನಿನ್ನೊಡನಾಡಿಗಳಾದ ಮರುತ್ತಗಳೊಡನೆಯೂ, ಶಕ್ತಿಯೊಡನೆಯೂ ಕೂಡಿಕೊಂಡು ಶತ್ರುನಾಶಕನಾಗುತ್ತೀಯೋ ಅಂತಹ ಅದೇ ಸೋಮವು ಹಿಂಡಲ್ಪಟ್ಟು ನಿನಗೆ ಹರ್ಷಕಾರಕವಾಗಿರುತ್ತದೆ.

## English Translation.

The Soma, whereby you are augmented in strength, and together with your defenders (the Maruts), are victorious (over your foes), is poured out: it is your exhilaration, Indra, lord of the offering.

॥ ಸಂಹಿತಾಪಾಠಃ ॥

ತ್ಯಮು ವೋ ಅಪ್ರಹಣಂ ಗೃಣೀಷೇ ಶವಸಸ್ಪತಿಂ ।
ಇಂದ್ರಂ ವಿಶ್ವಾಸಾಹಂ ನರಂ ಮಂಹಿಷ್ಠಂ ವಿಶ್ವಚರ್ಷಣಿಂ ॥ ೪ ॥

॥ ಪದಪಾಠಃ ॥

ತ್ಯಂ । ಊಂ ಇತಿ । ವಃ । ಅಪ್ರಽಹನಂ । ಗೃಣೀಷೇ । ಶವಸಃ । ಪತಿಂ ।
ಇಂದ್ರಂ । ವಿಶ್ವಽಸಹಂ । ನರಂ । ಮಂಹಿಷ್ಠಂ । ವಿಶ್ವಽಚರ್ಷಣಿಂ ॥ ೪ ॥

॥ ಸಾಯಣಭಾಷ್ಯಂ ॥

**ಪೃಷ್ಠ್ಯಷಡಹಸ್ಯ ಚತುರ್ಥೇಽಹನಿ ಪ್ರಉಗಶಸ್ತ್ರೇ ತ್ಯಮು ವ ಇತ್ಯೈಂದ್ರಸ್ತೃಚಃ । ಸೂತ್ರಿತಂ ಚ । ತ್ಯಮು ವೋ ಅಪ್ರಹಣಮುಪ ತ್ಯಂ ವೃಜಿನಂ ರಿಪುಂ । ಆ. ೭-೧೧ । ಇತಿ ॥**

**ಹೇ ಋತ್ವಿಗ್ಯಜಮಾನಾ ವೋ ಯುಷ್ಮದರ್ಥಂ ತ್ಯಮು ತಮೇವೇಂದ್ರಂ ಗೃಣೀಷೇ । ಸ್ತೌಮಿ । ಯದ್ವಾ । ವೋ ಯೂಯಂ ಗೃಣೀಷೇ । ಗೃಣೀತ । ಸ್ತುತ ॥ ವಚನವ್ಯತ್ಯಯಃ । ಕೀದೃಶಮಿಂದ್ರಂ । ಅಪ್ರಹಣಮಪ್ರಹಂತಾರಂ ಭಕ್ತಾನಾಮನುಗ್ರಾಹಕಂ ಶವಸೋ ಬಲಸ್ಯ ಪತಿಂ ಪಾಲಕಂ ವಿಶ್ವಾಸಾಹಂ ವಿಶ್ವಸ್ಯ ಶತ್ರೋರಭಿಭವಿತಾರಂ ನರಂ ನೇತಾರಂ ಮಂಹಿಷ್ಠಂ ದಾತೃತಮಂ ವಿಶ್ವಚರ್ಷಣಿಂ ಸರ್ವಸ್ಯ ದ್ರಷ್ಟಾರಂ ॥**

॥ ಪ್ರತಿಪದಾರ್ಥ ॥

(ಎಲೈ ಋತ್ವಿಗ್ಯಜಮಾನರೇ) **ಅಪ್ರಹಣಂ**—ಭಕ್ತರನ್ನು ಹಿಂಸಿಸದೇ ಅನುಗ್ರಹಿಸುವವನೂ । **ಶವಸಃ**—ಶಕ್ತಿಗೆ । **ಪತಿಂ**—ಪಾಲಕನೂ । **ವಿಶ್ವಾಸಾಹಂ**—ಸಕಲ ಶತ್ರುಗಳನ್ನೂ ಹೊಡೆಯುವವನೂ । **ನರಂ**—ನೇತೃವೂ । **ಮಂಹಿಷ್ಠಂ**—ಉದಾರವಾದ ದಾತೃವೂ । **ವಿಶ್ವಚರ್ಷಣಿಂ**—ಸಕಲವನ್ನೂ ನೋಡುವ ಶಕ್ತಿಯುಳ್ಳವನೂ ಆದ । **ತ್ಯಮು ಇಂದ್ರಂ**—ಅದೇ ಇಂದ್ರನನ್ನು । **ವಃ**—ನಿಮ್ಮ ಹಿತಕ್ಕಾಗಿ । **ಗೃಣೀಷೇ**—ಸ್ತುತಿಸುತ್ತೇನೆ.

॥ ಭಾವಾರ್ಥ ॥

ಎಲೈ ಋತ್ವಿಗ್ಯಜಮಾನರೇ, ಭಕ್ತರನ್ನು ಹಿಂಸಿಸದೇ ಅನುಗ್ರಹಿಸುವವನೂ, ನೇತೃವೂ ಉದಾರವಾದ ದಾತೃವೂ ಸಕಲವನ್ನೂ ನೋಡುವ ಶಕ್ತಿಯುಳ್ಳವನೂ ಆದ ಅದೇ ಇಂದ್ರನನ್ನು ನಿಮ್ಮ ಹಿತಕ್ಕಾಗಿ ಸ್ತುತಿಸುತ್ತೇನೆ.

## English Translation.

(Worshippers), for you I glorify that Indra who disappoints not (his adorers); the lord of strength, the all-subduing, the leader (of rites), the most beautiful, the beholder of the universe.

॥ ವಿಶೇಷವಿಷಯಗಳು ॥

ಪೃಷ್ಠ್ಯಷಡಹವೆಂಬ ಯಾಗದ ನಾಲ್ಕನೆಯ ದಿವಸ ಪ್ರಉಗಶಸ್ತ್ರಮಂತ್ರಗಳನ್ನು ಪಠಿಸುವಾಗ **ತ್ಯಮುವಃ** ಎಂದು ಮೊದಲಾಗುವ ಮೂರು ಋಕ್ಕುಗಳನ್ನು ಇಂದ್ರದೇವತಾಕವಾದ ತೃಚವನ್ನಾಗಿ ಪಠಿಸಬೇಕೆಂದು ಆಶ್ವಲಾಯನಶ್ರೌತಸೂತ್ರದ—**ತ್ಯಮು ವೋ ಅಪ್ರಹಣಮುಷ ತ್ಯಂ ವೃಜಿನಂ ರಿಪುಂ** ಎಂಬ ಸೂತ್ರದಿಂದ (ಆ. ೭-೧೧) ವಿವೃತವಾಗಿರುವುದು.

॥ ಸಂಹಿತಾಪಾಠಃ ॥

**ಯಂ ವರ್ಧಯಂತೀದ್ಗಿರಃ ಪತಿಂ ತುರಸ್ಯ ರಾಧಸಃ ।**

**ತಮಿನ್ನ್ವಸ್ಯ ರೋದಸೀ ದೇವೀ ಶುಷ್ಮಂ ಸಪರ್ಯತಃ ॥ ೫ ॥**

॥ ಪದಪಾಠಃ ॥

**ಯಂ । ವರ್ಧಯಂತಿ । ಇತ್ । ಗಿರಃ । ಪತಿಂ । ತುರಸ್ಯ । ರಾಧಸಃ ।**

**ತಂ । ಇತ್ । ನು । ಅಸ್ಯ । ರೋದಸೀ ಇತಿ । ದೇವೀ ಇತಿ । ಶುಷ್ಮಂ । ಸಪರ್ಯತಃ ॥ ೫ ॥**

॥ ಸಾಯಣಭಾಷ್ಯಂ ॥

**ಗಿರಃ ಸ್ತುತಯ ಇಂದ್ರಸಂಬಂಧಿನಂ ಯಮಿತ್ ಯಮೇವ ಶುಷ್ಮಂ ಬಲಂ ವರ್ಧಯಂತಿ । ಕೀದೃಶಂ । ಪತಿಮಿಶ್ವರಂ । ಕಸ್ಯ । ತುರಸ್ಯ ಹಿಂಸಕಸ್ಯ ಶತ್ರೋಃ ರಾಧಸೋ ಧನಸ್ಯ । ಶತ್ರುಧನಾನಾಮ- ಪಹರ್ತಾರಮಿತ್ಯರ್ಥಃ । ಅಸ್ಯೇಂದ್ರಸ್ಯ ತಮಿತ್ತಮೇವ ಶುಷ್ಮಂ ಶೋಷಕಂ ಬಲಂ ದೇವೀ ದೇವನಶೀಲೇ ರೋದಸೀ ದ್ಯಾವಾಪೃಥಿವ್ಯೌ ನು ಕ್ಷಿಪ್ರಂ ಸಪರ್ಯತಃ । ಪರಿಚರತಃ ॥**

॥ ಪ್ರತಿಪದಾರ್ಥ ॥

**ತುರಸ್ಯ**—ಹಿಂಸಕನಾದ ಶತ್ರುವಿನ । **ರಾಧಸಃ**—ಧನಕ್ಕೆ । **ಪತಿಂ**—ಪ್ರಭುವಾದ । **ಯಂ ಇತ್**-ಯಾವ ಇಂದ್ರನ ಬಲವನ್ನೇ । **ಗಿರಃ**—ಸ್ತುತಿಗಳು । **ವರ್ಧಯಂತಿ**—ಪ್ರವೃದ್ಧವಾಗುವಂತೆ ಮಾಡುತ್ತವೆಯೋ । **ಅಸ್ಯ ತಂ ಇತ್ ತುಷ್ಮಂ**—ಅಂತಹ ಆ ಇಂದ್ರನ ಅದೇ ಶಕ್ತಿಯನ್ನು । **ದೇವೀ**—ದೇವತಾತ್ಮರಾದ । **ರೋದಸೀ**—ದ್ಯಾವಾಪೃಥಿವಿಗಳು । **ನು**—ಶೀಘ್ರವಾಗಿ । **ಸಪರ್ಯತಃ**—ಪೂಜಿಸುತ್ತವೆ.

॥ ಭಾವಾರ್ಥ ॥

ಹಿಂಸಕನಾದ ಶತ್ರುವಿನ ಧನಕ್ಕೆ ಪ್ರಭುವಾದ ಯಾವ ಇಂದ್ರನ ಬಲವನ್ನೇ ಸ್ತುತಿಗಳು ಪ್ರವೃದ್ಧವಾಗುವಂತೆ ಮಾಡುತ್ತವೆಯೋ ಆ ಇಂದ್ರನ ಅದೇ ಶಕ್ತಿಯನ್ನು ದೇವತಾತ್ಮರಾದ ದ್ಯಾವಾಪೃಥಿವಿಗಳು ಶೀಘ್ರವಾಗಿ ಪೂಜಿಸುತ್ತವೆ.

## English Translation.

The divine heaven and earth adore that vigour of his, which our hymns augment, the appropriator of the riches of the foe.

॥ ಸಂಹಿತಾಪಾಠಃ ॥

ತದ್ವ ಉಕ್ಥಸ್ಯ ಬರ್ಹಣೇಂದ್ರಾಯೋಪಸ್ತೃಣೀಷಣಿ ।
ವಿಪೋ ನ ಯಸ್ಯೋತಯೋ ವಿ ಯದ್ರೋಹಂತಿ ಸಕ್ಷಿತಃ ॥ ೬ ॥

॥ ಪದಪಾಠಃ ॥

ತತ್ । ವಃ । ಉಕ್ಥಸ್ಯ । ಬರ್ಹಣಾ । ಇಂದ್ರಾಯ । ಉಪಽಸ್ತೃಣೀಷಣಿ ।
ವಿಪಃ । ನ । ಯಸ್ಯ । ಊತಯಃ । ವಿ । ಯತ್ । ರೋಹಂತಿ । ಸಽಕ್ಷಿತಃ ॥ ೬ ॥

॥ ಸಾಯಣಭಾಷ್ಯಂ ॥

ಹೇ ಸ್ತೋತಾರೋ ವೋ ಯುಷ್ಮದೀಯಸ್ಯೋಕ್ಥಸ್ಯ ಸ್ತೋತ್ರಸ್ಯ ತದ್ಬರ್ಹಣಾ ಬಹುತ್ವಂ ಮಾಹಾತ್ಮ್ಯಮಿಂದ್ರಾಯೇಂದ್ರಾರ್ಥಮುಪಸ್ತೃಣೀಷಣಿ । ಉಪಸ್ತರಣೀಯಂ । ಉಪೇತ್ಯ ವಿಸ್ತರಣೀಯಂ । ಇಂದ್ರೋ ಯಥಾ ಸ್ತೋತ್ರಸ್ಯ ಮಾಹಾತ್ಮ್ಯಂ ಜಾನೀಯಾತ್ ತಥಾ ವಿಸ್ತಾರ್ಯತ ಇತ್ಯರ್ಥಃ । ಯಸ್ಯೇಂದ್ರಸ್ಯೋತಯೋ ರಕ್ಷಾ ವಿಪೋ ನ ಮೇಧಾವಿನ ಇವ ಭವಂತಿ । ಸರ್ವಕಾರ್ಯಕುಶಲಾ ಇತ್ಯರ್ಥಃ । ಯದ್ವಾ ನೇತಿ ಪೂರಕಃ । ವಿಪೋ ವಿಪ್ರಸ್ಯ ಮೇಧಾವಿನೋ ಯಸ್ಯೇಂದ್ರಸ್ಯೇತಿ ಯೋಜ್ಯಂ । ಯದ್ಯಸ್ಮಿಂಶ್ಚೇಂದ್ರೇ ಸಕ್ಷಿತಃ ಸಮಾನನಿವಾಸಾಃ ಸಂಹತಾ ಊತಯೋ ವಿ ರೋಹಂತಿ ಪ್ರಾದುರ್ಭವಂತಿ ತಸ್ಮಾ ಇಂದ್ರಾಯೇತ್ಯರ್ಥಃ ॥

॥ ಪ್ರತಿಪದಾರ್ಥ ॥

(ಎಲೈ ಸ್ತೋತೃಗಳೇ) **ಯಸ್ಯ**—ಯಾವ ಇಂದ್ರನ । **ಊತಯಃ**—ರಕ್ಷಣೆಗಳು । **ವಿಪೋ ನ**—ಮೇಧಾವಿಗಳಂತೆ ಸರ್ವಕಾರ್ಯಗಳಿಗೂ ಸಮರ್ಥವಾಗಿರುವುವೋ । **ಯತ್**—ಯಾವ ಇಂದ್ರನಲ್ಲಿ । **ಸಕ್ಷಿತಃ**—ಸೇರಿಕೊಂಡಿರುವ ರಕ್ಷಣೆಗಳು । **ವಿ ರೋಹಂತಿ**—ಪ್ರಾದುರ್ಭವಿಸುವುವೋ ಅಂತಹ । **ಇಂದ್ರಾಯ**—ಇಂದ್ರಾರ್ಥವಾಗಿ । **ವಃ**—ನಿಮ್ಮ । **ಉಕ್ಥಸ್ಯ**—ಸ್ತೋತ್ರದ । **ತತ್ ಬರ್ಹಣಾ**—ಅದೇ ಬೃಹತ್ವವು । **ಉಪಸ್ತೃಣೀಷಣಿ**—ವಿಸ್ತೃತವಾಗಿ ಬೆಳೆಸಲ್ಪಡಲಿ.

॥ ಭಾವಾರ್ಥ ॥

ಎಲೈ ಸ್ತೋತೃಗಳೇ, ಯಾವ ಇಂದ್ರನ ರಕ್ಷಣೆಗಳು ಮೇಧಾವಿಗಳಂತೆ ಸರ್ವಕಾರ್ಯಗಳಿಗೂ ಸಮರ್ಥವಾಗಿರುವುವೋ, ಯಾವ ಇಂದ್ರನಲ್ಲಿ ಅಂತರ್ಗತವಾದ ರಕ್ಷಣೆಗಳು ಪ್ರಾದುರ್ಭವಿಸುವುವೋ, ಅಂತಹ ಇಂದ್ರಾರ್ಥವಾಗಿ ನಿಮ್ಮ ಸ್ತೋತ್ರದ ಅದೇ ಬೃಹತ್ವವು ವಿಸ್ತೃತವಾಗಿ ಬೆಳೆಸಲ್ಪಡಲಿ.

## English Translation.

(Worshippers), the efficacy of your eulogy is to be manifested to that Indra, whose protections, like (those) of a sensible man, are displayed as abiding along with him.

|| ಸಂಹಿತಾಪಾಠಃ ||

ಅವಿದದ್ದಕ್ಷಂ ಮಿತ್ರೋ ನವೀಯಾನ್ಪಪಾನೋ ದೇವೇಭ್ಯೋ ವಸ್ಯೋ ಅಚೈತ್ ।
ಸಸವಾನ್ಸ್ತೌಲಾಭಿರ್ಧೌತರೀಭಿರುರುಷ್ಯಾ ಪಾಯುರಭವತ್ಸಖಿಭ್ಯಃ ॥ ೭ ॥

|| ಪದಪಾಠಃ ||

ಅವಿದತ್ । ದಕ್ಷಂ । ಮಿತ್ರಃ । ನವೀಯಾನ್ । ಪಪಾನಃ । ದೇವೇಭ್ಯಃ । ವಸ್ಯಃ । ಅಚೈತ್ ।
ಸಸ್ಽವಾನ್ । ಸ್ತೌಲಾಭಿಃ । ಧೌತರೀಭಿಃ । ಉರುಷ್ಯಾ । ಪಾಯುಃ । ಅಭವತ್ । ಸಖಿಽಭ್ಯಃ ॥ ೭ ॥

|| ಸಾಯಣಭಾಷ್ಯಂ ||

ಸ ಇಂದ್ರೋ ದಕ್ಷಂ ಕರ್ಮಸು ಸಮರ್ಥಂ ಪ್ರವೃದ್ಧಂ ವಾ ಯಷ್ಟಾರಮವಿದತ್ । ಜಾನಾತಿ । ಕೀದೃಶಃ । ಮಿತ್ರೋ ಮಿತ್ರಭೂತೋ ನವೀಯಾನ್ನವತರಃ ಕಲ್ಯಾಣತರಃ ಸ್ತುತ್ಯತರೋ ವಾ । ಸ ಚ ಪಪಾನಃ ಸೋಮಂ ಪಿಬನ್ ದೇವೇಭ್ಯಃ ಸ್ತೋತೃಭ್ಯೋ ವಸ್ಯೋ ವಸೀಯಃ ಶ್ರೇಷ್ಠಂ ಧನಮಚೈತ್ । ಚಿನೋತಿ । ಉಪಚಿತಂ ಕರೋತಿ । ದದಾತೀತಿ ಯಾವತ್ । ಅಪಿ ಚ ಸಸವಾನ್ । ಸಸಮಿತ್ಯನ್ನನಾಮ । ಹವಿರ್ಲಕ್ಷಣಾನ್ನೋಪೇತಃ ಸ ಇಂದ್ರಃ ಸ್ತೌಲಾಭಿಃ ಸ್ಥೂಲಾಭಿಃ ಪ್ರವೃದ್ಧಾಭಿರ್ಧೌತರೀಭಿಃ ಕಂಪನಕಾರಿಣೀಭಿರ್ವಡವಾಭಿರೀದೃಶೈರ್ಮರುದ್ಭಿರ್ವಾ ಯುಕ್ತಃ ಸನ್ ಸಖಿಭ್ಯಃ ಸ್ತೋತೃಭ್ಯ ಉರುಷ್ಯಾ ರಕ್ಷಣೇಚ್ಛಯಾಗತ್ಯ ಪಾಯುರಭವತ್ । ರಕ್ಷಕೋ ಭವತಿ । ಯದ್ವಾ । ಸಸವಾನಿತಿ ಸನತೇಃ ಕ್ವಸೌ ರೂಪಂ । ಸ್ತೌಲಾಭಿರ್ಧೌತರೀಭಿಃ ಸಸವಾನ್ ಸಂಭಜಮಾನ ಇತಿ ಸಂಬಂಧಃ ॥

|| ಪ್ರತಿಪದಾರ್ಥ ||

(ಇಂದ್ರಃ—ಇಂದ್ರನು) । ದಕ್ಷಂ— ಕರ್ಮಸಮರ್ಥನಾದ ಯಜಮಾನನನ್ನು । ಅವಿದತ್— ತಿಳಿಯುತ್ತಾನೆ । ಮಿತ್ರಃ—ಎಲ್ಲರಿಗೂ ಮಿತ್ರಭೂತನೂ । ನವೀಯಾನ್—ಪೂಜ್ಯನೂ ಆದ ಇಂದ್ರನು । ಪಪಾನಃ—ಸೋಮಪಾನವನ್ನು ಮಾಡುತ್ತಾ । ದೇವೇಭ್ಯಃ—ಸ್ತೋತೃಗಳಿಗೆ । ವಸ್ಯಃ—ಶ್ರೇಷ್ಠವಾದ ಧನವನ್ನು । ಅಚೈತ್—ಕೊಡುತ್ತಾನೆ । ಸಸವಾನ್-ಅನ್ನೋಪೇತನಾದ ಇಂದ್ರನು । ಸ್ತೌಲಾಭಿಃ-ಪ್ರವೃದ್ಧಮಾನಗಳಾದ ।

**ಧೌತರೀಭಿಃ**—ಅಶ್ವಗಳೊಡನೆ ಕೂಡಿಕೊಂಡು | **ಸಖಿಭ್ಯಃ**—ಸ್ತೋತೃಗಳಿಗೆ | **ಉರುಷ್ಯಾ**— ನೆರವಾಗಬೇಕೆಂಬಾಸೆಯಿಂದ ಬಂದು | **ಪಾಯುಃ**—ಅವರ ರಕ್ಷಕನಾಗಿ | **ಅಭವತ್**—ಆಗುತ್ತಾನೆ.

|| ಭಾವಾರ್ಥ ||

ಕರ್ಮಸಮರ್ಥನಾದ ಯಜಮಾನನಾರೆಂಬುದನ್ನು ಇಂದ್ರನು ತಿಳಿಯುತ್ತಾನೆ. ಎಲ್ಲರಿಗೂ ಮಿತ್ರಭೂತನೂ ಪೂಜ್ಯನೂ ಆದ ಇಂದ್ರನು ಸೋಮಪಾನವನ್ನು ಮಾಡುತ್ತಾ ಸ್ತೋತೃಗಳಿಗೆ ಶ್ರೇಷ್ಠವಾದ ಧನವನ್ನು ಕೊಡುತ್ತಾನೆ. ಅನ್ನೋಪೇತನಾದ ಇಂದ್ರನು ಪ್ರವೃದ್ಧಮಾನಗಳಾದ ಅಶ್ವಗಳೊಡನೆ ಕೂಡಿಕೊಂಡು ಸ್ತೋತೃಗಳಿಗೆ ನೆರವಾಗಬೇಕೆಂಬಾಸೆಯಿಂದ ಬಂದು ಅವರ ರಕ್ಷಕನಾಗಿ ಆಗುತ್ತಾನೆ.

English Translation.

Indra appreciates him who is skilled (in holy rites): a recent friend, quaffing (the libation), he heaps excellent (wealth) upon the devout: partaking of (the sacrificial) food, (and brought) by his robust agitators (of the earth, his steeds), he, through his benevolence, is a protector to his friends.

|| ಸಂಹಿತಾಪಾಠಃ ||

ಋತಸ್ಯ ಪಥಿ ವೇಧಾ ಅಪಾಯಿ ಶ್ರಿಯೇ ಮನಾಂಸಿ ದೇವಾಸೋ ಅಕ್ರನ್ |
ದಧಾನೋ ನಾಮ ಮಹೋ ವಚೋಭಿರ್ವಪುರ್ದೃಶಯೇ ವೇನ್ಯೋ ವ್ಯಾವಃ ||

|| ಪದಪಾಠಃ ||

ಋತಸ್ಯ | ಪಥಿ | ವೇಧಾಃ | ಅಪಾಯಿ | ಶ್ರಿಯೇ | ಮನಾಂಸಿ | ದೇವಾಸಃ | ಅಕ್ರನ್ |
ದಧಾನಃ | ನಾಮ | ಮಹಃ | ವಚಃऽಭಿಃ | ವಪುಃ | ದೃಶಯೇ | ವೇನ್ಯಃ | ಆ | ಅವರಿತ್ಯಾವಃ || ೮ ||

|| ಸಾಯಣಭಾಷ್ಯಂ ||

ಋತಸ್ಯ ಯಜ್ಞಸ್ಯ ಪಥಿ ಮಾರ್ಗೇ ವೇಧಾ ವಿಧಾತಾ ಸರ್ವಸ್ಯ ದ್ರಷ್ಟಾ ಸೋಮೋಽಪಾಯಿ | ಇಂದ್ರೇಣ ಪೀತೋಽಭೂತ್ | ಯದ್ವಾ | ವೇಧಾ ವಿಧಾತೇಂದ್ರೋಽಪಾಯಿ | ಸೋಮಂ ಪಿಬತು || ವ್ಯತ್ಯಯೇನ ಕರ್ತರಿ ಚಿಣ್ || ತಸ್ಮಿನ್ ಸೋಮ ಇಂದ್ರಸ್ಯ ಮನಾಂಸಿ ಶ್ರಿಯೇ ಶ್ರಯಿತುಂ ದೇವಾಃ ಸ್ತೋತಾರ ಋತ್ವಿಜೋಽಕ್ರನ್ | ಕರ್ಮಾಣಿ ಕುರ್ವಂತಿ | ಸ ಚೇಂದ್ರೋ ನಾಮ ಶತ್ರೂಣಾಂ ನಾಮಕಂ

ಮಹೋ ಮಹದಾತ್ಮೀಯಂ ವಪುಃ ಶರೀರಂ ದಧಾನೋ ಧಾರಯನ್ ವಚೋಽಭಿಃ ಸ್ತುತಿಭಿರ್ವೇನ್ಯೋ ವನನೀಯಃ ಸಂಭಜನೀಯಶ್ಚ ಸನ್ ದೃಶಯೇ ದರ್ಶನಾರ್ಥಂ ವ್ಯಾವಃ । ವಿವೃಣೋತು । ಪ್ರಕಾಶಯತು । ಅನುಕೂಲಂ ತೇಜ ಇತಿ ಶೇಷಃ। ಯದ್ವಾ । ವೇನ್ಯ ಇತಿ ವೇನತೇಃ ಕಾಂತಿಕರ್ಮಣೋ ರೂಪಂ ವಪುರಿತಿ ಚ ರೂಪನಾಮ । ವೇನ್ಯಃ ಕಮನೀಯೋ ವಪುರ್ಭಾಸ್ವರಂ ರೂಪಂ ದೃಶಯೇ ದರ್ಶನಾರ್ಥಂ ವ್ಯಾವಃ ವಿವೃಣೋತು ವಚೋಽಭಿಃ ಸ್ತೂಯಮಾನಃ ಸನ್ ॥

॥ ಪ್ರತಿಪದಾರ್ಥ ॥

**ಋತಸ್ಯ**—ಯಜ್ಞದ । **ಪಥಿ**—ಮಾರ್ಗದಲ್ಲಿ । **ವೇಧಾಃ**—ಸರ್ವದ್ರಷ್ಟೃವಾದ (ಸ್ರಷ್ಟೃವಾದ) ಇಂದ್ರನು । **ಅಪಾಯಿ**—ಸೋಮವನ್ನು ಪಾನಮಾಡಲಿ । **ಮನಾಂಸಿ**—ಇಂದ್ರನ ಮನಸ್ಸನ್ನು । **ಶ್ರಿಯೇ**-ಸಂತೋಷಗೊಳಿಸಲು । **ದೇವಾಸಃ**—ಸ್ತೋತೃಗಳು । **ಅಕ್ರನ್**—ಕರ್ಮವನ್ನಾಚರಿಸುತ್ತಾರೆ । (**ಇಂದ್ರಃ**—ಇಂದ್ರನು) । **ನಾಮ**—ಶತ್ರುಗಳನ್ನು ಬೀಳಿಸುವುದೂ । **ಮಹಃ**—ಮಹತ್ತಾದುದೂ ಆದ । **ವಪುಃ**—ಶರೀರವನ್ನು । **ದಧಾನಃ**—ಹೊಂದಿದವನಾಗಿಯೂ । **ವಚೋಭಿಃ**—ಸ್ತುತಿಗಳಿಂದ । **ವೇನ್ಯಃ**—ಪೂಜಿತನಾಗಿಯೂ । **ದೃಶಯೇ**—ಎಲ್ಲರಿಗೂ ಗೋಚರನಾಗಲು । **ವ್ಯಾವಃ**—ಪ್ರಕಾಶಗೊಳ್ಳಲಿ.

॥ ಭಾವಾರ್ಥ ॥

ಸರ್ವ ಸ್ರಷ್ಟೃವಾದ ಇಂದ್ರನು ಯಜ್ಞಮಾರ್ಗದಲ್ಲಿ ಸೋಮವನ್ನು ಪಾನಮಾಡಲಿ. ಇಂದ್ರನ ಮನಸ್ಸನ್ನು ಸಂತೋಷಗೊಳಿಸಲು ಸ್ತೋತೃಗಳು ಕರ್ಮವನ್ನಾಚರಿಸುತ್ತಾರೆ. ಶತ್ರುಗಳನ್ನು ಬೀಳಿಸುವುದೂ ಮಹತ್ತಾದುದೂ ಆದ ಶರೀರವನ್ನು ಹೊಂದಿದವನಾಗಿಯೂ ಸ್ತುತಿಗಳಿಂದ ಪೂಜಿತನಾಗಿಯೂ, ಇಂದ್ರನು ಎಲ್ಲರಿಗೂ ಗೋಚರನಾಗಲು ಪ್ರಕಾಶವನ್ನು ಹೊಂದಿ ಕಾಣಿಸಿಕೊಳ್ಳಲಿ

English Translation.

The Soma, creator (of all), on the path of sacrifice, has been drunk: the worshippers have presented it to gratify the mind (of Indra): may he, the humilator (of his foes), possessing a vast body, propitiated by our praises, become manifest to our view.

॥ ಸಂಹಿತಾಪಾಠಃ ॥

ದ್ಯುಮತ್ತಮಂ ದಕ್ಷಂ ಧೇಹ್ಯಸ್ಮೇ ಸೇಧಾ ಜನಾನಾಂ ಪೂರ್ವೀರರಾತೀಃ ।

ವರ್ಷೀಯೋ ವಯಃ ಕೃಣುಹಿ ಶಚೀಭಿರ್ಧನಸ್ಯ ಸಾತಾವಸ್ಮಾಁ ಅವಿಡ್ಢಿ ॥೯॥

॥ ಪದಪಾಠಃ ॥

ದ್ಯುಮತ್ऽತಮಂ । ದಕ್ಷಂ । ಧೇಹಿ । ಅಸ್ಮೇ ಇತಿ । ಸೇಧ । ಜನಾನಾಂ । ಪೂರ್ವೀಃ । ಅರಾತೀಃ ।

ವರ್ಷೀಯಃ । ವಯಃ । ಕೃಣುಹಿ । ಶಚೀಭಿಃ । ಧನಸ್ಯ । ಸಾತೌ । ಅಸ್ಮಾನ್ । ಅವಿಡ್ಢಿ ॥ ೯ ॥

॥ ಸಾಯಣಭಾಷ್ಯಂ ॥

ಹೇ ಇಂದ್ರ ದ್ಯುಮತ್ತಮಂ ದೀಪ್ತಿಮತ್ತಮಂ ದಕ್ಷಂ ಬಲಮಸ್ಮೇ ಅಸ್ಮಾಸು ಧೇಹಿ । ಧಾರಯ । ಜನಾನಾಂ ಸ್ತೋತೄಣಾಮಸ್ಮಾಕಂ ಪೂರ್ವೀರ್ಬಹ್ವೀರರಾತೀಃ ಶತ್ರುಸೇನಾಃ ಸೇಧ । ನಿಷೇಧ । ನಿವಾರಯ । ಅಪಿ ಚಾಸ್ಮಾಕಂ ವರ್ಷೀಯೋ ವೃದ್ಧತರಂ ವಯೋऽನ್ನಂ ಶಚೀಭಿರಾತ್ಮೀಯಾಭಿಃ ಪ್ರಜ್ಞಾಭಿಃ ಕೃಣಿಹಿ । ಕುರು । ತಥಾ ಧನಸ್ಯ ಸಾತೌ ಸಂಭಜನೇऽಸ್ಮಾನವಿಡ್ಢಿ । ಗಮಯ । ಯದ್ವಾ । ಧನಸ್ಯ ಸಂಭಜನಾರ್ಥಮಸ್ಮಾನ್ರಕ್ಷ ॥

॥ ಪ್ರತಿಪದಾರ್ಥ ॥

(ಎಲೈ ಇಂದ್ರನೇ) **ದ್ಯುಮತ್ತಮಂ**—ಅತ್ಯಂತ ಪ್ರಕಾಶಮಾನವಾದ । **ದಕ್ಷಂ**—ಶಕ್ತಿಯನ್ನು । **ಅಸ್ಮೇ**—ನಮಗೆ । **ಧೇಹಿ**—ಕೊಡು । **ಜನಾನಾಂ**—ಸ್ತೋತೃಗಳಾದ ನಮಗಾಗಿ । **ಪೂರ್ವೀಃ**—ಅನೇಕವಾದ । **ಅರಾತೀಃ**—ಶತ್ರು ಸೇನೆಗಳನ್ನು । **ಸೇಧ**—ನಾಶಗೊಳಿಸು । **ಶಚೀಭಿಃ**—ಕರ್ಮದೊಡಗೂಡಿರುವ ನಮಗೆ । **ವರ್ಷೀಯಃ**—ಶ್ರೇಷ್ಠವಾದ । **ವಯಃ**—ಅನ್ನವನ್ನು । **ಕೃಣುಹಿ**—ನಿರ್ಮಿಸು । **ಧನಸ್ಯ**—ಧನದ । **ಸಾತೌ**—ಲಾಭಕ್ಕಾಗಿ । **ಅಸ್ಮಾನ್** —ನಮ್ಮನ್ನು । **ಅವಿಡ್ಢಿ**—ರಕ್ಷಿಸು.

॥ ಭಾವಾರ್ಥ ॥

ಎಲೈ ಇಂದ್ರನೇ, ನಮಗೆ ಅತ್ಯಂತ ಪ್ರಕಾಶಮಾನವಾದ ಶಕ್ತಿಯನ್ನು ಕೊಡು. ಸ್ತೋತೃಗಳಾದ ನಮಗಾಗಿ ಅನೇಕವಾದ ಶತ್ರುಸೇನೆಗಳನ್ನು ನಾಶಪಡಿಸು. ಕರ್ಮದೊಡಗೂಡಿದ ನಮಗೆ ಶ್ರೇಷ್ಠವಾದ ಅನ್ನವನ್ನು ನಿರ್ಮಿಸು. ಧನವನ್ನು ಪಡೆಯಲು ನಮ್ಮನ್ನು ರಕ್ಷಿಸು.

## English Translation.

Bestow upon us most brilliant vigour : oppose the numerous enemies of your worshippers : grant us, for our pious acts, abundant food : secure us in the enjoyment of wealth.

॥ ಸಂಹಿತಾಪಾಠಃ ॥

ಇಂದ್ರ ತುಭ್ಯಮಿನ್ಮಘವನ್ನಭೂಮ ವಯಂ ದಾತ್ರೇ ಹರಿವೋ ಮಾ ವಿ ವೇನಃ ।

ನಕಿರಾಪಿರ್ದದೃಶೇ ಮರ್ತ್ಯತ್ರಾ ಕಿಮಂಗ ರಧ್ರಚೋದನಂ ತ್ವಾಹುಃ॥೧೦॥

॥ ಪದಪಾಠಃ ॥

ಇಂದ್ರ । ತುಭ್ಯಂ । ಇತ್ । ಮಘ್ಽವನ್ । ಅಭೂಮ । ವಯಂ । ದಾತ್ರೇ । ಹರಿಽವಃ । ಮಾ । ವಿ । ವೇನಃ ।
ನಕಿಃ । ಆಪಿಃ । ದದೃಶೇ । ಮರ್ತ್ಯಽತ್ರಾ । ಕಿಂ । ಅಂಗ । ರಧ್ರಽಚೋದನಂ । ತ್ವಾ । ಆಹುಃ ॥ ೧೦ ॥

॥ ಸಾಯಣಭಾಷ್ಯಂ ॥

ಹೇ ಮಘವನ್ ಧನವನ್ನಿಂದ್ರ ದಾತ್ರೇ ಕಾಮಾನಾಂ ದಾತ್ರೇ ತುಭ್ಯಮಿತ್ ತುಭ್ಯಮೇವ ವಯಂ ಶೇಷಭೂತಾ ಅಭೂಮ । ಯದ್ವಾ । ತ್ವದರ್ಥಮೇವ ದಾತ್ರೇ ಹವಿಷಾಂ ದಾನೇ ವರ್ತಮಾನಾ ಅಭೂಮ । ಹೇ ಹರಿವೋ ಹರಿವನ್ನಿಂದ್ರ ಅತಃ ಕಾರಣಾನ್ಮಾ ವಿ ವೇನಃ । ಮಾ ವಿಗತಕಾಮೋ ಭೂಃ । ಅಸ್ಮಾನ್ ಸರ್ವದಾ ಕಾಮಯಸ್ವ ॥ ವೇನತಿಃ ಕಾಂತಿಕರ್ಮಾ ॥ ಮರ್ತ್ಯತ್ರಾ ಮರ್ತ್ಯೇಷು ಮನುಷ್ಯೇಷು ಮಧ್ಯ ಆಪಿರ್ಬಂಧುಸ್ತ್ವತ್ತೋಽನ್ಯಃ ಕಶ್ಚಿದಪಿ ನಕಿರ್ದದೃಶೇ । ನೈವ ದೃಶ್ಯತೇ । ಕಿಮನೇನ ವಿಶೇಷಕಥನೇನ । ಅಂಗ ಹೇ ಇಂದ್ರ ತ್ವಾ ತ್ವಾಂ ರಧ್ರಚೋದನಂ ರಧ್ರಸ್ಯ ರಾಧಕಸ್ಯ ಸಮೃದ್ಧಸ್ಯ ಧನಸ್ಯ ಚೋದನಂ ಚೋದಯಿತಾರಮಾಹುಃ ಕಥಯಂತಿ ಪುರಾಣಾಃ ॥

॥ ಪ್ರತಿಪದಾರ್ಥ ॥

**ಮಘವನ್**—ಧನವಂತನಾದ । **ಇಂದ್ರ**—ಎಲೈ ಇಂದ್ರನೇ । **ದಾತ್ರೇ**—ಕಾಮಪ್ರದನಾದ । **ತುಭ್ಯಮಿತ್**—ನಿನ್ನ ಸೇವೆಗಾಗಿಯೇ । **ವಯಂ**—ನಾವು । **ಅಭೂಮ**—ಸಿದ್ಧರಾಗಿದ್ದೇವೆ । **ಹರಿವಃ**—ಅಶ್ವಯುಕ್ತನಾದ ಎಲೈ ಇಂದ್ರನೇ । **ಮಾ ವಿ ವೇನಃ**—ನಮ್ಮನ್ನು ಮರೆಯಬೇಡ । **ಮರ್ತ್ಯತ್ರಾ**—ಮಾನವರಲ್ಲಿ । **ಆಪಿಃ**—ಬಂಧುವಾದವನು (ನಿನ್ನ ಹೊರತು) । **ನಕಿಃ ದದೃಶೇ**--ಯಾರೂ ಕಾಣಲಿಲ್ಲ । **ಅಂಗ**—ಎಲೈ ಇಂದ್ರನೇ । **ತ್ವಾ**—ನಿನ್ನನ್ನು । **ರಧ್ರಚೋದನಂ**—ಧನದ ಪ್ರೇರಕನೆಂದು । **ಆಹುಃ**—ಪ್ರಶಂಸಿಸಿದ್ದಾರೆ.

॥ ಭಾವಾರ್ಥ ॥

ಧನವಂತನಾದ ಎಲೈ ಇಂದ್ರನೇ, ಕಾಮಪ್ರದನಾದ ನಿನ್ನ ಸೇವೆಗಾಗಿಯೇ ನಾವು ಸಿದ್ಧರಾಗಿದ್ದೇವೆ. ಅಶ್ವಯುಕ್ತನಾದ ಎಲೈ ಇಂದ್ರನೇ, ನಮ್ಮನ್ನು ಮರೆಯಬೇಡ. ನಿನ್ನ ಹೊರತು ನಮಗೆ ಮಾನವರಲ್ಲಿ ಬಂಧುವಾದವನು ಯಾರೂ ಕಾಣಲಿಲ್ಲ. ಎಲೈ ಇಂದ್ರನೇ, ನಿನ್ನನ್ನೇ ಧನಪ್ರೇರಕನೆಂದೂ ಧನದಾತೃನೆಂದೂ ಎಲ್ಲರೂ ಪ್ರಶಂಸಿಸಿದ್ದಾರೆ.

## English Translation.

Indra, possessor of affluence, we have recourse to you, the bountiful lord of steeds, be not unfavourable to us: no other kinsman is beheld (by us) amongst men: why else have they called you the bestower of wealth?

॥ ಸಂಹಿತಾಪಾಠಃ ॥

ಮಾ ಜಸ್ವನೇ ವೃಷಭ ನೋ ರರೀಥಾ ಮಾ ತೇ ರೇವತಃ ಸಖ್ಯೇ ರಿಷಾಮ ।
ಪೂರ್ವೀಷ್ಟ ಇಂದ್ರ ನಿಷ್ಷಿಧೋ ಜನೇಷು ಜಹ್ಯಸುಷ್ವೀನ್ಪ್ರ ವೃಹಾಪೃಣತಃ ॥

॥ ಪದಪಾಠಃ ॥

ಮಾ । ಜಸ್ವನೇ । ವೃಷಭ । ನಃ । ರರೀಥಾಃ । ಮಾ । ತೇ । ರೇವತಃ । ಸಖ್ಯೇ । ರಿಷಾಮ ॥
ಪೂರ್ವೀಃ । ತೇ । ಇಂದ್ರ । ನಿಃऽಸಿಧಃ । ಜನೇಷು । ಜಹಿ । ಅಸುಸ್ವೀನ್ । ಪ್ರ । ವೃಹ । ಅಪೃಣತಃ ॥೧೧॥

॥ ಸಾಯಣಭಾಷ್ಯಂ ॥

ಹೇ ವೃಷಭ ಕಾಮಾನಾಂ ವರ್ಷಿತರಿಂದ್ರ ಜಸ್ವನೇ ॥ ಜಸಿರುಪಕ್ಷಯಕರ್ಮಾ ॥ ಉಪಕ್ಷಪಯಿತ್ರೇ ರಾಕ್ಷಸಾದಯೇ ನೋऽಸ್ಮಾನ್ ಮಾ ರರೀಥಾಃ । ಮಾ ದಾಃ । ರೇವತೋ ಧನವತಸ್ತೇ ತವ ಸಖ್ಯೇ ಸಖಿತ್ವೇ ವರ್ತಮಾನಾ ವಯಂ ಮಾ ರಿಷಾಮ । ಹಿಂಸಿತಾ ಮಾ ಭೂಮ । ಹೇ ಇಂದ್ರ ತೇ ತ್ವದೀಯಾಃ ಪೂರ್ವೀರ್ಬಹ್ವೀರ್ನಿಷ್ಷಿಧೋ ನಿಃಷೇಧಾ ನಿವಾರಣಾನಿ ಜನೇಷು ಶತ್ರುಷು ನಿಹಿತಾಃ ಸಂತಿ । ಯದ್ವಾ । ನಿಷ್ಷಿಧೋ ನಿಷೇಧಾರ್ಥಾ ರಜ್ಜವಃ । ತಾಃ ಶತ್ರುಜನೇಷು ತವ ಬಹ್ವ್ಯೋ ವಿದ್ಯಂತೇ । ಅತಃ ಕಾರಣಾದ-ಸುಷ್ವೀನನಭಿಷೋತೄನಯಜಮಾನಾನ್ ಜಹಿ । ಮಾರಯ । ಅಪೃಣತೋ ಹವೀಂಷ್ಯಪ್ರಯಚ್ಛತಶ್ಚ ಪ್ರ ವೃಹ । ಉನ್ಮೂಲಯ ॥ ಪೃಣ ದಾನ ಇತಿ ಧಾತುಃ ॥

॥ ಪ್ರತಿಪದಾರ್ಥ ॥

**ವೃಷಭ**—ಕಾಮವರ್ಷಕನಾದ ಎಲೈ ಇಂದ್ರನೇ । **ಜಸ್ವನೇ**—ಹಿಂಸಾಕಾರಕನಾದ ಶತ್ರುವಿಗೆ । **ನಃ**—ನಮ್ಮನ್ನು । **ಮಾ ರರೀಥಾಃ**—ಬಿಟ್ಟುಕೊಡಬೇಡ । **ರೇವತಃ**—ಧನವಂತನಾದ । **ತೇ** - ನಿನ್ನ । **ಸಖ್ಯೇ**—ಸಖಿತ್ವದಲ್ಲಿರುವ ನಾವು । **ಮಾ ರಿಷಾಮ**—ಹಿಂಸಿತರಾಗುವಂತೆ ಮಾಡಬೇಡ । **ಇಂದ್ರ**—ಎಲೈ ಇಂದ್ರನೇ । **ತೇ**—ನಿನ್ನ । **ಪೂರ್ವೀಃ**—ಅನೇಕವಾದ । **ನಿಷ್ಷಿಧಃ**—ಪ್ರತಿಬಂಧಕಗಳು । **ಜನೇಷು**—ಶತ್ರುಜನರಲ್ಲಿವೆ । **ಅಸುಷ್ವೀನ್**—ಸೋಮವನ್ನು ಹಿಂಡದೆ ಇರುವವರನ್ನು । **ಜಹಿ**—ನಾಶಮಾಡು । **ಅಪೃಣತಃ**-ಹವಿಸ್ಸನ್ನರ್ಪಿಸದಿರುವವರನ್ನು । **ಪ್ರ ವೃಹ**—ನಾಶಮಾಡು.

॥ ಭಾವಾರ್ಥ ॥

ಕಾಮವರ್ಷಕನಾದ ಎಲೈ ಇಂದ್ರನೇ, ಹಿಂಸಾಕಾರಕನಾದ ಶತ್ರುವಿಗೆ ನಮ್ಮನ್ನು ಬಿಟ್ಟುಕೊಡಬೇಡ. ಧನವಂತನಾದ ನಿನ್ನ ಸಖಿತ್ವದಲ್ಲಿರುವ ನಾವು ಹಿಂಸಿತರಾಗುವಂತೆ ಮಾಡಬೇಡ. ಎಲೈ ಇಂದ್ರನೇ, ನಿನ್ನ ಅನೇಕ ಪ್ರತಿಬಂಧಕಗಳು ಶತ್ರುಜನರಲ್ಲಿವೆ. ಸೋಮವನ್ನು ಹಿಂಡದೇ ಇರುವವರನ್ನೂ ಹವಿಸ್ಸನ್ನರ್ಪಿಸದವರನ್ನೂ ನಾಶಮಾಡು.

## English Translation

Give us not up, showerer (of benefits), to the obstructor (of our rites): relying upon the friendship of you, lord of riches, may we be unharmed: many are the hindrances (opposed) to you amongst men: slay those who make no libations, root out those who present no offering.

॥ ಸಂಹಿತಾಪಾಠಃ ॥

ಉದಭ್ರಾಣೀವ ಸ್ತನಯನ್ನಿಯರ್ತೀಂದ್ರೋ ರಾಧಾಂಸ್ಯಶ್ವ್ಯಾನಿ ಗವ್ಯಾ ।
ತ್ವಮಸಿ ಪ್ರದಿವಃ ಕಾರುಧಾಯಾ ಮಾ ತ್ವಾದಾಮಾನ ಆ ದಭನ್ಮಘೋನಃ ॥

॥ ಪದಪಾಠಃ ॥

ಉತ್ । ಅಭ್ರಾಣಿಽಇವ । ಸ್ತನಯನ್ । ಇಯರ್ತಿ । ಇಂದ್ರಃ । ರಾಧಾಂಸಿ । ಅಶ್ವ್ಯಾನಿ । ಗವ್ಯಾ ॥
ತ್ವಂ । ಅಸಿ । ಪ್ರಽದಿವಃ । ಕಾರುಽಧಾಯಾಃ । ಮಾ । ತ್ವಾ । ಅದಾಮಾನಃ । ಆ । ದಭನ್ । ಮಘೋನಃ ।

॥ ಸಾಯಣಭಾಷ್ಯಂ ॥

ಅಭ್ರಾಣೀವ ಸ್ತನಯನ್ ಗರ್ಜಯನ್ ಪರ್ಜನ್ಯೋ ಯಥಾ ಮೇಘಾನುದ್ಗಮಯತ್ಯೇವ-ಮಿಂದ್ರೋಽಶ್ವ್ಯಾನ್ಯಶ್ವಸಂಬಂಧೀನಿ ಗವ್ಯಾ ಗವ್ಯಾನಿ ಗೋಸಂಬಂಧೀನ್ಯೇತತ್ಸಮೂಹದ್ವಯರೂಪಾಣಿ ರಾಧಾಂಸಿ ಧನಾನ್ಯುದಿಯರ್ತಿ । ಉದೀರಯತಿ । ಉದ್ಗಮಯತಿ ಸ್ತೋತೃಭ್ಯೋ ದಾತುಂ । ಉತ್ತರಾರ್ಧಃ ಪ್ರತ್ಯಕ್ಷಕೃತಃ । ಹೇ ಇಂದ್ರ ಪ್ರದಿವಃ ಪುರಾಣಸ್ತ್ವಂ ಕಾರುಧಾಯಾಃ ಕಾರೂಣಾಂ ಸ್ತೋತ್ರೄಣಾಂ ಧಾರಯಿತಾಸಿ । ಭವಸಿ । ತಾದೃಶಂ ತ್ವಾ ತ್ವಾಂ ಮಘೋನೋ ಧನವಂತಃ ಕೃಪಣಾ ಅದಾಮಾನೋ ಹವಿಷಾಮದಾತಾರೋ ಮಾ ದಭನ್ । ಮಾ ಹಿಂಸಿಷುಃ । ಯದ್ವಾ ವಚನವ್ಯತ್ಯಯಃ । ಮಘವಾನಂ ಧನವಂತಂ ತ್ವಾಮಿತಿ ಸಂಬಂಧಃ ॥

॥ ಪ್ರತಿಪದಾರ್ಥ ॥

**ಸ್ತನಯನ್**—ಗರ್ಜಿಸುವ ಪರ್ಜನ್ಯನು । **ಅಭ್ರಾಣೀವ**—ಮೇಘಗಳವ್ನು ಗುಂಪು ಗುಂಪಾಗಿ ಮೇಲಕ್ಕೆರಚುವಂತೆ (ಚದುರಿಸುವಂತೆ)। **ಇಂದ್ರಃ**—ಇಂದ್ರನು । **ಅಶ್ವ್ಯಾನಿ**—ಅಶ್ವಸಂಬಂಧವಾದುದೂ । **ಗವ್ಯಾ**—ಗೋಪೂರ್ಣವಾದುದೂ ಆದ । **ರಾಧಾಂಸಿ**-ಧನಗಳನ್ನು । **ಉದಿಯರ್ತಿ**—ಹೇರಳವಾಗಿ ಹರಡುತ್ತಾನೆ (ಎಲ್ಲೈ ಇಂದ್ರನೇ) । **ಪ್ರದಿವಃ**—ಪುರಾತನನಾದ । **ತ್ವಂ**—ನೀನೇ । **ಕಾರುಧಾಯಾಃ**—ಸ್ತೋತೃಗಳಿಗೆ ಧಾರಕನಾಗಿ । **ಅಸಿ**—ಆಗಿದ್ದೀಯೆ (ಅಂತಹ) । **ತ್ವಾ**—ನಿನ್ನನ್ನು । **ಮಘೋನಃ**—ಧನವಂತರಾದ ಲೋಭಿಗಳು । **ಅದಾಮಾನಃ**—ಹವಿಸ್ಸನ್ನರ್ಪಿಸದೇ । **ಮಾ ಆ ಧಭನ್**—ಹಿಂಸಿಸದಿರಲಿ.

। ಭಾವಾರ್ಥ ॥

ಗರ್ಜಿಸುವ ಪರ್ಜನ್ಯನು ಮೇಘಗಳನ್ನು ಗುಂಪುಗುಂಪಾಗಿ ಮೇಲಕ್ಕೆ ಎರಚುವಂತೆ, (ಚದುರಿಸುವಂತೆ) ಇಂದ್ರನು ಅಶ್ವಪೂರ್ಣ ವಾದುದೂ, ಗೋಪೂರ್ಣವಾದುದೂ ಆದ ಧನಗಳನ್ನು ಹೇರಳವಾಗಿ ಹರಡುತ್ತಾನೆ. ಎಲೈ ಇಂದ್ರನೇ, ಪುರಾತನ ನಾದ ನೀನೇ ಸ್ತೋತೃಗಳಿಗೆ ಧಾರಕನಾಗಿ ಆಗಿದ್ದೀಯೆ. ಅಂತಹ ನಿನ್ನನ್ನು ಧನವಂತರಾಗಿದ್ದರೂ ಹವಿಸ್ಸನ್ನರ್ಪಿಸದ ಲೋಭಿಗಳು ಹಿಂಸಿಸದಿರಲಿ.

## English Translation.

As Indra, when thundering, raises the clouds, so he (heaps upon his worshippers) riches of horses and cattle: you, Indra, are the ancient upholder of the sacrificer: let not the opulent wrong you, not presenting (oblations).

। ಸಂಹಿತಾಪಾಠಃ ॥

ಅಧ್ವರ್ಯೋ ವೀರ ಪ್ರ ಮಹೇ ಸುತಾನಾಮಿಂದ್ರಾಯ ಭರ ಸ ಹ್ಯಸ್ಯ ರಾಜಾ।
ಯಃ ಪೂರ್ವ್ಯಾಭಿರುತ ನೂತನಾಭಿರ್ಗೀರ್ಭಿರ್ವಾವೃಧೇ ಗೃಣತಾಮೃಷೀಣಾಂ ॥ ೩ ॥

॥ ಪದಪಾಠಃ ॥

ಅಧ್ವರ್ಯೋ ಇತಿ । ವೀರ । ಪ್ರ । ಮಹೇ । ಸುತಾನಾಂ । ಇಂದ್ರಾಯ । ಭರ । ಸಃ । ಹಿ । ಅಸ್ಯ । ರಾಜಾ।
ಯಃ । ಪೂರ್ವ್ಯಾಭಿಃ । ಉತ । ನೂತನಾಭಿಃ । ಗೀಃಽಭಿಃ । ವವೃಧೇ । ಗೃಣತಾಂ । ಋಷೀಣಾಂ ॥ ೦೩ ॥

। ಸಾಯಣಭಾಷ್ಯಂ ॥

ಹೇ ವೀರ ಹವಿಷಾಂ ವಿಶೇಷೇಣ ಪ್ರೇರಯಿತರಧ್ವರ್ಯೋ ಮಹೇ ಮಹತೇಽಸ್ಮಾ ಇಂದ್ರಾಯ ಸುತಾನಾಂ ॥ ಕರ್ಮಣಿ ಷಷ್ಠೀ ॥ ಸುತಾನಭಿಷುತಾನ್ ಸೋಮಾನ್ ಪ್ರ ಭರ । ಪ್ರಹರ । ಪ್ರಗಮಯ । ಸ ಹಿ ಖಲ್ವಿಂದ್ರೋಽಸ್ಯ ಸೋಮಸ್ಯ ರಾಜಾ ಸ್ವಾಮೀ ಭವತಿ । ಯ ಇಂದ್ರಃ ಪೂರ್ವ್ಯಾಭಿಃ ಪೂರ್ವಕಾಲೇ ಕೃತಾಭಿರುತಾಪಿ ಚ ನೂತನಾಭಿರಿದಾನೀಂ ಕ್ರಿಯಮಾಣಾಭಿರ್ಗೃಣತಾಂ ಸ್ತುವತಾಮೃಷೀಣಾಂ ಸಂಬಂಧಿನೀಭಿರ್ಗೀರ್ಭಿರುಭಯವಿಧಾಭಿಃ ಸ್ತುತಿಭಿರ್ವಾವೃಧೇ ವರ್ಧತೇ । ಸ ಇಂದ್ರೋ ಯಸ್ಮಾತ್ಸೋಮಸ್ಯ ರಾಜಾ ತಸ್ಮಾದಸ್ಮೈ ಸೋಮಃ ಪ್ರದೇಯ ಇತ್ಯರ್ಥಃ ॥

|| ಪ್ರತಿಪದಾರ್ಥ ||

**ಯಃ**-ಯಾವ ಇಂದ್ರನು । **ಪೂರ್ವ್ಯಾಭಿಃ**-ಪ್ರಾಚೀನ ಕಾಲದವೂ । **ಉತ**-ಮತ್ತು । **ನೂತನಾಭಿಃ**-ಆಧುನಿಕಕಾಲದವೂ । **ಗೃಣತಾಂ**—ಸ್ತೋತ್ರಮಾಡತಕ್ಕ । **ಋಷೀಣಾಂ**—ಋಷಿಗಳಿಂದ ನಿರ್ಮಿತವಾದವೂ ಆದ । **ಗೀರ್ಭಿಃ**—ಸ್ತುತಿಗಳಿಂದ । **ವಾವೃಧೇ**—ವೃದ್ಧಿಯನ್ನು ಹೊಂದುವನೋ । **ಸ ಹಿ**—ಅದೇ ಇಂದ್ರನು । **ಅಸ್ಯ**—ಈ ಸೋಮಕ್ಕೆ । **ರಾಜಾ**—ಪ್ರಭುವಾಗಿದ್ದಾನೆ (ಆದುದರಿಂದ) । **ವೀರ**—ಹವಿಸ್ಸನ್ನರ್ಪಿಸತಕ್ಕ । **ಅಧ್ವರ್ಯೋ**—ಎಲೈ ಅಧ್ವರ್ಯುವೇ । **ಮಹೇ**—ಮಹಾತ್ಮನಾದ । **ಇಂದ್ರಾಯ**—ಇಂದ್ರನನ್ನುದ್ದೇಶಿಸಿ । **ಸುತಾನಾಂ**—ಹಿಂಡಿದ ಸೋಮಗಳನ್ನು । **ಪ್ರ ಭರ**—ಅರ್ಪಿಸು.

|| ಭಾವಾರ್ಥ ||

ಯಾವ ಇಂದ್ರನು ಪ್ರಾಚೀನಕಾಲದವೂ ಮತ್ತು ಆಧುನಿಕ ಕಾಲಕ್ಕೆ ಸೇರಿದವೂ, ಸ್ತುತಿಕರ್ತರಾದ ಋಷಿಗಳಿಂದ ನಿರ್ಮಿತವಾದವೂ ಆದ ಸ್ತುತಿಗಳಿಂದ ವೃದ್ಧಿಯನ್ನು ಹೊಂದುವನೋ ಆದೇ ಇಂದ್ರನು ಈ ಸೋಮಕ್ಕೆ ಪ್ರಭುವಾಗಿದ್ದಾನೆ. ಆದುದರಿಂದ- ಹವಿಸ್ಸನ್ನರ್ಪಿಸತಕ್ಕ ಎಲೈ ಅಧ್ವರ್ಯುವೇ, ಮಹಾತ್ಮನಾದ ಇಂದ್ರನನ್ನುದ್ದೇಶಿಸಿ ಹಿಂಡಿರುವ ಸೋಮಗಳನ್ನರ್ಪಿಸು.

## English Translation.

Ministrant priests offer libations to the mighty Indra, for he is their king, he who has been exalted by the ancient and recent hymns of adoring sages.

|| ಸಂಹಿತಾಪಾಠಃ ||

ಅಸ್ಯ ಮದೇ ಪುರು ವರ್ಪಾಂಸಿ ವಿದ್ವಾನಿಂದ್ರೋ ವೃತ್ರಾಣ್ಯಪ್ರತೀ ಜಘಾನ ।
ತಮು ಪ್ರ ಹೋಷಿ ಮಧುಮಂತಮಸ್ಮೈ ಸೋಮಂ ವೀರಾಯ ಶಿಪ್ರಿಣೇ ಪಿಬಧ್ಯೈ || ೧೪ ||

|| ಪದಪಾಠಃ ||

ಅಸ್ಯ । ಮದೇ । ಪುರು । ವರ್ಪಾಂಸಿ । ವಿದ್ವಾನ್ । ಇಂದ್ರಃ । ವೃತ್ರಾಣಿ । ಅಪ್ರತಿ । ಜಘಾನ ||
ತಂ । ಊಂ ಇತಿ । ಪ್ರ । ಹೋಷಿ । ಮಧುऽಮಂತಂ । ಅಸ್ಮೈ । ಸೋಮಂ । ವೀರಾಯ । ಶಿಪ್ರಿಣೇ । ಪಿಬಧ್ಯೈ || ೧೪ ||

॥ ಸಾಯಣಭಾಷ್ಯಂ ॥

**ಪ್ರಥಮೇ ರಾತ್ರಿಪರ್ಯಾಯೇ ಮೈತ್ರಾವರುಣಸ್ಯಾಸ್ಯ ಮದ ಇತಿ ಶಸ್ತ್ರಯಾಜ್ಯಾ । ಸೂತ್ರಿತಂ ಚ । ಅಸ್ಯ ಮದೇ ಪುರು ವರ್ಪಾಂಸಿ ವಿದ್ವಾನಿತಿ ಯಾಜ್ಯಾ । ಆ. ೬-೪ । ಇತಿ ॥**

**ಅಸ್ಯ ಸೋಮಸ್ಯ ಪಾನೇನ ಮದೇ ಹರ್ಷೇ ಸತಿ ವಿದ್ವಾನಭಿಜ್ಞ ಇಂದ್ರಃ ಪುರು ಪುರೂಣಿ ಬಹೂನಿ ವರ್ಪಾಂಸ್ಯಾವರಕಾಣಿ ವೃತ್ರಾಣಿ ಶತ್ರೂನಪ್ರತಿ ಸ್ವಯಮನ್ಯೈರಪ್ರತಿಗತಃ ಸನ್ ಜಘಾನ । ಹತವಾನ್ । ಯದ್ವಾ । ವರ್ಪ ಇತಿ ರೂಪನಾಮ । ಬಹೂನಿ ವರ್ಪಾಂಸ್ಯಸುರಮಾಯಯಾ ನಿರ್ಮಿತಾನಿ ರೂಪಾಣಿ ವಿದ್ವಾನ್ ಜಾನನ್ನಿಂದ್ರೋ ವೃತ್ರಾಣ್ಯಾವರಕಾಣಿ ರಕ್ಷಃಪ್ರಭೃತೀನೀತಃ ಪೂರ್ವಮನ್ಯೈರಪ್ರತಿಗತಾನಿ ಜಘಾನ । ಹತವಾನ್ । ಮಧುಮಂತಂ ಮಾಧುರ್ಯವಂತಂ ತಮು ತಮೇವ ಸೋಮಂ ಶಿಪ್ರಿಣೇ ಶೋಭನಹನುಕಾಯಾಸ್ಮೈ ವೀರಾಯ ಶತ್ರೂಣಾಂ ವೀರಯಿತ್ರ ಇಂದ್ರಾಯ ಪಿಬಧ್ಯೈ ಪಾತುಂ ಪ್ರ ಹೋಷಿ । ಹೇ ಅಧ್ವರ್ಯೋ ಪ್ರಜುಹುಧಿ ॥**

॥ ಪ್ರತಿಪದಾರ್ಥ ॥

**ಅಸ್ಯ**—ಈ ಸೋಮದ ಪಾನದಿಂದ । **ಮದೇ**—ಹರ್ಷವುಂಟಾದಾಗ । **ವಿದ್ವಾನ್**—ಪ್ರಾಜ್ಞನಾದ । **ಇಂದ್ರಃ**—ಇಂದ್ರನು । **ಪುರು**—ಅನೇಕ ಸಂಖ್ಯೆಯುಳ್ಳವರೂ । **ವರ್ಪಾಂಸಿ**—ಪ್ರತಿಬಂಧಕರೂಪರೂ ಆದ । **ವೃತ್ರಾಣಿ**—ಶತ್ರುಗಳನ್ನು । **ಅಪ್ರತಿ**—ಅಪ್ರತಿಹತನಾಗಿ । **ಜಘಾನ**—ಕೊಂದನು । **ಶಿಪ್ರಿಣೇ**—ಶ್ರೇಷ್ಠವಾದ ಕೆನ್ನೆಯುಳ್ಳವನೂ । **ವೀರಾಯ**—ಪರಾಕ್ರಮಿಯೂ ಆದ । **ಅಸ್ಮೈ**—ಈ ಇಂದ್ರನಿಗೆ । **ಮಧುಮಂತಂ**—ಮಾಧುರ್ಯದಿಂದ ಕೂಡಿದುದೂ । **ತಮು**—ಪ್ರಸಿದ್ಧವಾದುದೂ ಆದ । **ಸೋಮಂ**—ಅದೇ ಸೋಮವನ್ನು । **ಪಿಬಧ್ಯೈ**—ಪಾನಮಾಡಲು । **ಪ್ರ ಹೋಷಿ**—ಹೋಮದ ರೂಪದಲ್ಲಿ ಅರ್ಪಿಸು.

॥ ಭಾವಾರ್ಥ ॥

ಈ ಸೋಮದ ಪಾನದಿಂದ ಹರ್ಷವುಂಟಾದಾಗ ಪ್ರಾಜ್ಞನಾದ ಇಂದ್ರನು ಅನೇಕ ಸಂಖ್ಯೆಯುಳ್ಳವರೂ ಪ್ರತಿಬಂಧಕರೂಪರೂ ಆದ ಶತ್ರುಗಳನ್ನು ಅಪ್ರತಿಹತನಾಗಿ ಕೊಂದನು. ಶ್ರೇಷ್ಠವಾದ ಕೆನ್ನೆಯುಳ್ಳವನೂ ಪರಾಕ್ರಮಿಯೂ ಆದ ಈ ಇಂದ್ರನಿಗೆ ಮಾಧುರ್ಯದಿಂದ ಕೂಡಿದುದೂ ಪ್ರಸಿದ್ಧವಾದುದೂ ಆದ ಸೋಮವನ್ನು ಪಾನ ಮಾಡಲು ಹೋಮದ ರೂಪದಲ್ಲಿ ಅರ್ಪಿಸು.

## English Translation.

In the exhilaration of this Soma, the wise Indra, irresistible, has destroyed numerous opposing enemies : offer the sweet-flavoured beverage to that h-ro, the handsome-chinned, to drink.

॥ ವಿಶೇಷವಿಷಯಗಳು ॥

ಮೊದಲನೆಯ ರಾತ್ರಿಪರ್ಯಾಯದಲ್ಲಿ ಮೈತ್ರಾವರುಣನೆಂಬ ಋತ್ವಿಜನು **ಅಸ್ಯ ಮದೇ** ಎಂಬ ಈ ಋಕ್ಕನ್ನು ಶಸ್ತ್ರಯಾಜ್ಯಮಂತ್ರವನ್ನಾಗಿ ಪಠಿಸಬೇಕೆಂದು ಆಶ್ವಲಾಯನಶ್ರೌತಸೂತ್ರದ—**ಅಸ್ಯ ಮದೇ ಪುರು ವರ್ಪಾಂಸಿ ವಿದ್ವಾನಿತಿ ಯಾಜ್ಯಾ** ಎಂಬ ಸೂತ್ರದಿಂದ (ಆ. ೬-೪) ವಿವೃತವಾಗಿರುವುದು.

॥ ಸಂಹಿತಾಪಾಠಃ ॥

ಪಾತಾ ಸುತಮಿಂದ್ರೋ ಅಸ್ತು ಸೋಮಂ ಹಂತಾ ವೃತ್ರಂ ವಜ್ರೇಣ ಮಂದ-
ಸಾನಃ ।

ಗಂತಾ ಯಜ್ಞಂ ಪರಾವತಶ್ಚಿದಚ್ಛಾ ವಸುರ್ಧೀನಾಮವಿತಾ ಕಾರುಧಾಯಾಃ ॥

॥ ಪದಪಾಠಃ ॥

ಪಾತಾ । ಸುತಂ । ಇಂದ್ರಃ । ಅಸ್ತು । ಸೋಮಂ । ಹಂತಾ । ವೃತ್ರಂ । ವಜ್ರೇಣ । ಮಂದಸಾನಃ ।

ಗಂತಾ । ಯಜ್ಞಂ । ಪರಾऽವತಃ । ಚಿತ್ । ಅಚ್ಛ । ವಸುಃ । ಧೀನಾಂ । ಅವಿತಾ । ಕಾರುऽಧಾಯಾಃ ॥೧೫॥

॥ ಸಾಯಣಭಾಷ್ಯಂ ॥

ದ್ವಿತೀಯೇ ರಾತ್ರಿಪರ್ಯಾಯೇ ಮೈತ್ರಾವರುಣಸ್ಯೈವ ಪಾತಾ ಸುತಮಿತಿ ಶಸ್ತ್ರಯಾಜ್ಯಾ । ಸೂತ್ರಿತಂ ಚ । ಪಾತಾ ಸುತಮಿಂದ್ರೋ ಅಸ್ತು ಸೋಮಂ ಹಂತಾ ವೃತ್ರಮಿತಿ ಯಾಜ್ಯಾ । ಆ. ೬-೪ । ಇತಿ ॥

ಅಯಮಿಂದ್ರಃ ಸುತಮಭಿಷುತಂ ಸೋಮಂ ಪಾತಾಸ್ತು । ಸಾಧು ಪಾತಾ ಭವತು ॥ ಸಾಧುಕಾರಿಣಿ ತೃನ್ । ಅತ ಏವ ನ ಲೋಕಾವ್ಯಯೇತಿ ಷಷ್ಠೀಪ್ರತಿಷೇಧಾತ್ ದ್ವಿತೀಯಾ । ಏವಂ ಹಂತೇತ್ಯಾದಾವಪಿ ದ್ರಷ್ಟವ್ಯಂ ॥ ತೇನ ಚ ಸೋಮೇನ ಮಂದಸಾನೋ ಮಾದ್ಯನ್ ವಜ್ರೇಣಾಯುಧೇನ ವೃತ್ರಮಾವರಕಂ ಶತ್ರುಂ ಹಂತಾಸ್ತು । ಭವತು । ಏತದುಭಯಾರ್ಥಂ ಪರಾವತಶ್ಚಿತ್ ದೂರದೇಶಾದಪಿ ಯಜ್ಞಮಚ್ಛಾಸ್ಮದೀಯಂ ಯಜ್ಞಮಭಿ ಗಂತಾ ಭವತು । ದೂರದೇಶಸ್ಥೋಽಪಿ ಶೀಘ್ರಮಸ್ಮದ್ಯಜ್ಞೇ ಸೋಮಪಾನಾಯಾಗಚ್ಛತ್ವಿತ್ಯರ್ಥಃ । ಕೀದೃಶ ಇಂದ್ರಃ । ವಸುಃ ಸರ್ವೇಷಾಂ ನಿವಾಸಯಿತಾ ಧೀನಾಂ ಧ್ಯಾತೄಣಾಂ ಸ್ತೋತೄಣಾಂ ಕರ್ಮಣಾಂ ವಾವಿತಾ ರಕ್ಷಿತಾ ಕಾರುಧಾಯಾಃ ಕಾರೂಣಾಂ ಕರ್ತೄಣಾಂ ಯಜಮಾನಾನಾಂ ಧಾರಯಿತಾ ॥

॥ ಪ್ರತಿಪದಾರ್ಥ ॥

**ಇಂದ್ರಃ**—ಇಂದ್ರನು । **ಸುತಂ**—ಹಿಂಡಲ್ಪಟ್ಟ । **ಸೋಮಂ**—ಸೋಮವನ್ನು । **ಪಾತಾ ಅಸ್ತು**—ಪಾನ ಮಾಡುವವನಾಗಲಿ । **ಮಂದಸಾನಃ**—ಅದರಿಂದ ತೃಪ್ತನಾಗಿ । **ವಜ್ರೇಣ**—ವಜ್ರಾಯುಧದಿಂದ । **ವೃತ್ರಂ**—ಶತ್ರುವನ್ನು । **ಹಂತಾ**—ನಾಶಮಾಡುವವನಾಗಲಿ । **ವಸುಃ**—ಸರ್ವರಿಗೂ ನಿವಾಸಕನೂ । **ಧೀನಾಂ**—ಸ್ತೋತೃಗಳಿಗೆ । **ಅವಿತಾ**—ರಕ್ಷಕನೂ । **ಕಾರುಧಾಯಾಃ**—ಯಜಮಾನರ ಧಾರಕನೂ ಅದ ಇಂದ್ರನು । **ಪರಾವತಶ್ಚಿತ್**—ಅತ್ಯಂತ ದೂರದೇಶದಲ್ಲಿದ್ದರೂ ಸಹ । **ಯಜ್ಞಂ ಅಚ್ಛ**—ನಮ್ಮ ಯಜ್ಞಕ್ಕಭಿಮುಖವಾಗಿ । **ಗಂತಾ**—ಆಗಮಿಸುವವನಾಗಲಿ,

॥ ಭಾವಾರ್ಥ ॥

ಇಂದ್ರನು ಹಿಂಡಲ್ಪಟ್ಟ ಸೋಮವನ್ನು ಪಾನಮಾಡುವವನಾಗಲಿ. ಅದರಿಂದ ತೃಪ್ತನಾಗಿ ವಜ್ರಾಯುಧದಿಂದ ಶತ್ರುವನ್ನು ನಾಶಮಾಡುವವನಾಗಲಿ. ಸರ್ವರಿಗೂ ನಿವಾಸಕನೂ, ಸ್ತೋತೃಗಳಿಗೆ ರಕ್ಷಕನೂ ಯಜಮಾನರ ಧಾರಕನೂ ಆದ ಇಂದ್ರನು ಅತ್ಯಂತ ದೂರ ದೇಶದಲ್ಲಿದ್ದರೂ ಸಹ ನಮ್ಮ ಯಜ್ಞಕ್ಕಭಿಮುಖನಾಗಿ ಆಗಮಿಸುವವನಾಗಲಿ.

## English Translation.

May Indra be the drinker of this effused Soma juice, and exhilarated by it, become the destroyer of Vritra by the thunderbolt: may he come, although from afar, to our sacrifice, (he who is) the giver of dwellings, the upholder of the celebrator (of religious rites).

॥ ವಿಶೇಷವಿಷಯಗಳು ॥

ಎರಡನೆಯ ರಾತ್ರಿ ಪರ್ಯಾಯದಲ್ಲಿ ಮೈತ್ರಾವರುಣನೆಂಬ ಋತ್ವಿಜನು **ಪಾತಾ ಸುತಂ** ಎಂಬ ಈ ಋಕ್ಕನ್ನು ಶಸ್ತ್ರಯಾಜ್ಯಾ ಮಂತ್ರವನ್ನಾಗಿ ಪಠಿಸಬೇಕೆಂದು ಆಶ್ವಲಾಯನಶ್ರೌತಸೂತ್ರದ—**ಪಾತಾ ಸುತಮಿಂದ್ರೋ ಅಸ್ತು ಸೋಮಂ ಹಂತಾ ವೃತ್ರಮಿತಿ ಯಾಜ್ಯಾ** ಎಂಬ ಸೂತ್ರದಿಂದ (ಆ. ೬-೪) ವಿವೃತವಾಗಿರುವುದು.

॥ ಸಂಹಿತಾಪಾಠಃ ॥

ಇದಂ ತ್ಯತ್ಪಾತ್ರಮಿಂದ್ರಪಾನಮಿಂದ್ರಸ್ಯ ಪ್ರಿಯಮಮೃತಮಪಾಯಿ ।
ಮತ್ಸದ್ಯಥಾ ಸೌಮನಸಾಯ ದೇವಂ ವ್ಯಸ್ಮದ್ದ್ವೇಷೋ ಯುಯವ-
ದ್ವ್ಯಂಹಃ ॥ ೧೬ ॥

॥ ಪದಪಾಠಃ ॥

ಇದಂ । ತ್ಯತ್ । ಪಾತ್ರಂ । ಇಂದ್ರಪಾನಂ । ಇಂದ್ರಸ್ಯ । ಪ್ರಿಯಂ । ಅಮೃತಂ । ಅಪಾಯಿ ।
ಮತ್ಸತ್ । ಯಥಾ । ಸೌಮನಸಾಯ । ದೇವಂ । ವಿ । ಅಸ್ಮತ್ । ದ್ವೇಷಃ । ಯುಯವತ್ । ವಿ । ಅಂಹಃ ॥ ೧೬ ॥

॥ ಸಾಯಣಭಾಷ್ಯಂ ॥

**ತೃತೀಯೇ ರಾತ್ರಿಪರ್ಯಾಯೇ ಪ್ರಶಾಸ್ತುರಿದಂ ತ್ಯದಿತಿ ಶಸ್ತ್ರಯಾಜ್ಯಾ । ಸೂತ್ರಿತಂ ಚ । ಇದಂ ತ್ಯತ್ಪಾತ್ರಮಿಂದ್ರಪಾನಮಿತಿ ಯಾಜ್ಯಾ । ಆ. ೬-೪ । ಇತಿ ॥**

**ಪಾತ್ರಂ ಪಾತವ್ಯಮಿಂದ್ರಪಾನಮಿಂದ್ರಸ್ಯ ಪಾನಾರ್ಹಮಿಂದ್ರಸ್ಯ ಪ್ರಿಯಮನುಕೂಲಂ ತ್ಯತ್ತದಿದಂ ಸೋಮಾತ್ಮಕಮಮೃತಮಪಾಯಿ । ಇಂದ್ರಃ ಪಿಬತು ॥ ವ್ಯತ್ಯಯೇನ ಕರ್ತರಿ ಚಿಣ್ ॥ ಯದ್ವಾ । ಏತದಮೃತಮಪಾಯಿ । ಇಂದ್ರೇಣ ಪೀಯತಾಂ । ಯಥಾ ಯೇನ ಪ್ರಕಾರೇಣ ಪೀತಃ ಸೋಮಃ**

**ಸೌಮನಸಾಯ ಸುಮನಸ್ತ್ವಾಯ ದೇವಮಿಂದ್ರಂ ಮತ್ಸತ್ ಮಾದಯೇತ್ತಥಾ ಪೀಯತಾಮಿತ್ಯರ್ಥಃ । ಸ ಪೀತಸೋಮ ಇಂದ್ರೋ ದ್ವೇಷೋ ದ್ವೇಷ್ಟ್ಯನಸ್ಮದಸ್ಮತ್ತೋ ವಿ ಯುಯವತ್ । ವಿಯೋಜಯತು । ಅಂಹಃ ಪಾಪಂ ಚಾಸ್ಮತ್ತೋ ವಿಯೋಜಯತು ॥**

॥ ಪ್ರತಿಪದಾರ್ಥ ॥

**ಯಥಾ**—ಯಾವ ಪ್ರಕಾರವಾಗಿ । **ಸೌಮನಸಾಯ**—ಅನುಗ್ರಹಿಸುವ ಸಲುವಾಗಿ । **ದೇವಂ**—ಇಂದ್ರನನ್ನು । **ಮತ್ಸತ್**—ಸಂತೋಷಗೊಳಿಸುವುದೋ ಅದೇ ಕಾರಣಕ್ಕಾಗಿ । **ಪಾತ್ರಂ**—ಪಾನಾರ್ಹವಾದುದೂ। **ಇಂದ್ರಪಾನಂ**—ಇಂದ್ರನು ಪಾನಮಾಡಲು ಯೋಗ್ಯವಾದುದೂ । **ಇಂದ್ರಸ್ಯ**—ಇಂದ್ರನಿಗೆ । **ಪ್ರಿಯಂ**—ಅನುಕೂಲವಾದುದೂ । **ತ್ಯತ್**—ಪ್ರಸಿದ್ಧವಾದುದೂ । **ಇದಂ**—ಸೋಮಾತ್ಮಕವೂ ಆದ । **ಅಮೃತಂ**—ಈ ಅಮೃತವು । **ಅಪಾಯಿ**—ಪಾನಮಾಡಲ್ಪಡಲಿ (ಅನಂತರ ಇಂದ್ರನು) । **ದ್ವೇಷಃ**—ಶತ್ರುಗಳನ್ನು । **ಅಸ್ಮತ್**—ನಮ್ಮಿಂದ । **ವಿ ಯುಯವತ್**—ದೂರವಾಗಿಯೂ ಪ್ರತ್ಯೇಕವಾಗಿಯೂ ಇರಿಸಲಿ । **ಅಂಹಃ**—ಪಾಪವನ್ನು । **ವಿ**—ದೂರವಾಗಿರಿಸಲಿ.

॥ ಭಾವಾರ್ಥ ॥

ಇಂದ್ರನು ನಮ್ಮನ್ನು ಅನುಗ್ರಹಿಸುವ ಸಂತೋಷವನ್ನು ಹೊಂದುವ ಸಲುವಾಗಿ, ಪಾನಾರ್ಹವಾದುದೂ, ಇಂದ್ರನು ಪಾನಮಾಡಲು ಯೋಗ್ಯವಾದುದೂ ಇಂದ್ರನಿಗೆ ಅನುಕೂಲವಾದುದೂ, ಪ್ರಸಿದ್ಧವಾದುದೂ, ಸೋಮಾತ್ಮಕವೂ ಆದ ಈ ಅಮೃತವು ಪಾನಮಾಡಲ್ಪಡಲಿ. ಅನಂತರ ಇಂದ್ರನು ನಮ್ಮಿಂದ ಶತ್ರುಗಳನ್ನೂ, ಪಾಪಗಳನ್ನೂ ಪ್ರತ್ಯೇಕವಾಗಿಟ್ಟಿರಲಿ (ಅಥವಾ ನಾಶಮಾಡಲಿ).

English Translation.

May this ambrosia, the appropriate beverage of Indra, of which he is fond, be quaffed (by him), so that it may inspire the divinity with favourable feelings (towards us), and that he may remove from us our adversaries, and (all) iniquity.

॥ ವಿಶೇಷವಿಷಯಗಳು ॥

ಮೂರನೆಯ ರಾತ್ರಿ ಪರ್ಯಾಯದಲ್ಲಿ ಪ್ರಶಾಸ್ತೃವೆಂಬ ಋತ್ವಿಜನು **ಇದಂ ತ್ಯತ್** ಎಂಬ ಈ ಋಕ್ಕನ್ನು ಶಸ್ತ್ರಯಾಜ್ಯಾಮಂತ್ರವನ್ನಾಗಿ ಪಠಿಸಬೇಕೆಂದು ಆಶ್ವಲಾಯನಶ್ರೌತಸೂತ್ರದ—**ಇದಂ ತ್ಯತ್ಪಾತ್ರಮಿಂದ್ರಪಾನಮಿತಿ ಯಾಜ್ಯಾ** ಎಂಬ ಸೂತ್ರದಿಂದ (ಆ. ೬-೪) ವಿವೃತವಾಗಿರುವುದು.

। ಸಂಹಿತಾಪಾಠಃ ।

ವಿನಾ ಮಂದಾನೋ ಜಹಿ ಶೂರ ಶತ್ರೂಞ್ಜಾಮಿಮಜಾಮಿಂ ಮಘವನ್ನ-
ಮಿತ್ರಾನ್ ।
ಅಭಿಷೇಣಾ ಅಭ್ಯಾ೩ ದೇದಿಶಾನಾನ್ಪರಾಚ ಇಂದ್ರ ಪ್ರ ಮೃಣಾ ಜಹೀ ಚ॥೧೭॥

॥ ಪದಪಾಠಃ ॥

ಏನಾ । ಮಂದಾನಃ । ಜಹಿ । ಶೂರ । ಶತ್ರೂನ್ । ಜಾಮಿಂ । ಅಜಾಮಿಂ । ಮಘ್ಽವನ್ । ಅಮಿತ್ರಾನ್ ।
ಅಭಿಽಸೇನಾನ್ । ಅಭಿ । ಆಽದೇದಿಶಾನಾನ್ । ಪರಾಚಃ । ಇಂದ್ರ । ಪ್ರ । ಮೃಣ । ಜಹಿ । ಚ ॥ ೧೭ ॥

॥ ಸಾಯಣಭಾಷ್ಯಂ ॥

**ಹೇ ಮಘವನ್ ಧನವನ್ ಶೂರ ಶೌರ್ಯವನ್ನಿಂದ್ರ ಏನ್ಯೈನೇನ ಪ್ರಕೃತೇನಾನೇನ ಸೋಮೇನ ಮಂದಾನೋ ಮಂದಮಾನೋ ಮಾದ್ಯನ್ ಜಾಮಿಂ ಜ್ಞಾತಿಮಜಾಮಿಂ ತದ್ಭಿಲಕ್ಷಣಮೇವಮುಭಯ-ವಿಧಾನಮಿತ್ರಾನಸ್ಮತ್ಪ್ರತಿಕೂಲಾಚರಣಪರಾನ್ ಶತ್ರೂನ್ ಜಹಿ। ಹಿಂಸಿತಾನ್ಕುರು। ಕಿಂಚಾಭಿಷೇಣಾನ್ ಅಸ್ಮಾನ್ಪ್ರತ್ಯಭಿಗತಾಃ ಸೇನಾ ಯೇಷಾಂ ತಾದೃಶಾನಸ್ಮದಭಿಮುಖಮಾದೇದಿಶಾನಾನಾಯುಧಾನಿ ಪುನಃ ಪುನರಾದಿಶತೋ ವಿಸೃಜತಃ ಶತ್ರೂಂಶ್ಚ ಹೇ ಇಂದ್ರ ಪರಾಚಃ ಪ್ರ ಮೃಣ। ತೇ ಯಥಾ ಪರಾಙ್ಮುಖಾ ಭವಂತಿ ತಥಾ ಬಾಧಸ್ವ। ತದನಂತರಂ ತಾನ್ ಜಹಿ ಚ ॥**

॥ ಪ್ರತಿಪದಾರ್ಥ ॥

**ಮಘವನ್**—ಧನವಂತನೂ । **ಶೂರ**—ಪರಾಕ್ರಮಿಯೂ ಆದ ಎಲೈ ಇಂದ್ರನೇ । **ಏನಾ**—ಈ ಸೋಮದಿಂದ । **ಮಂದಾನಃ**—ಸಂತೋಷಗೊಂಡು । **ಜಾಮಿಂ**—ಬಂಧುವಾಗಿರಲಿ ಅಥವಾ । **ಅಜಾಮಿಂ**—ಬಂಧುವಲ್ಲದಿರಲಿ ಅಂತಹ । **ಅಮಿತ್ರಾನ್**—ನಮಗೆ ಕೇಡನ್ನುಂಟುಮಾಡುವ । **ಶತ್ರೂನ್**—ಶತ್ರುಗಳನ್ನು । **ಜಹಿ**—ನಾಶಮಾಡು । **ಇಂದ್ರ**—ಎಲೈ ಇಂದ್ರನೇ । **ಅಭಿಷೇಣಾನ್**—ನಮಗೆದುರು ಬೀಳುವವರೂ । **ಅಭಿ ಆದೇದಿಶಾನಾನ್**—ನಮ್ಮಮೇಲೆ ಆಯುಧಗಳನ್ನು ಪ್ರಯೋಗಿಸುವವರೂ ಆದ ಶತ್ರುಗಳನ್ನು । **ಪರಾಚಃ**—ಹಿಂದಕ್ಕೋಡಿಹೋಗುವಂತೆ । **ಪ್ರ ಮೃಣ**—ಹಿಂಸಿಸು । **ಜಹಿ ಚ**—ನಾಶವನ್ನೂ ಮಾಡು.

॥ ಭಾವಾರ್ಥ ॥

ಧನವಂತನೂ ಪರಾಕ್ರಮಿಯೂ ಆದ ಎಲೈ ಇಂದ್ರನೇ, ಈ ಸೋಮದಿಂದ ಸಂತೋಷಗೊಂಡು ನಮ್ಮ ಶತ್ರುಗಳನ್ನು ನಾಶಮಾಡು. ಆ ಶತ್ರುವು ನಮಗೆ ಬಂಧುವಾಗಿರಲಿ ಅಥವಾ ಬಂಧುವಲ್ಲದಿರಲಿ ಅವನು ನಮ್ಮ ಮೇಲೆ ಬಿದ್ದು ನಮ್ಮಮೇಲೆ ಆಯುಧಗಳನ್ನು ಪ್ರಯೋಗಿಸುವ ಕಾಲದಲ್ಲಿ ಅಂತಹ ಶತ್ರುಗಳು ಹಿಂದಕ್ಕೋಡುವಂತೆ ಹಿಂಸಿಸಿ ಅವರನ್ನು ನಾಶಮಾಡು.

## English Translation.

Exhilarated by it, valiant Maghavan, slay our unfriendly adversaries, whether kinsmen or unrelated (to us): put to flight, Indra, hostile armies menacing us (with their weapons), and slay them.

॥ ಸಂಹಿತಾಪಾಠಃ ॥

ಆಸು ಷ್ಮಾ ಣೋ ಮಘವನ್ನಿಂದ್ರ ಪೃತ್ಸ್ವ೧ಸ್ಮಭ್ಯಂ ಮಹಿ ವರಿವಃ ಸುಗಂ ಕಃ ।
ಅಪಾಂ ತೋಕಸ್ಯ ತನಯಸ್ಯ ಜೇಷ ಇಂದ್ರ ಸೂರೀನ್ಕೃಣುಹಿ ಸ್ಮಾ ನೋ ಅರ್ಧಂ ॥ ೧೮ ॥

॥ ಪದಪಾಠಃ ॥

ಆಸು । ಸ್ಮ । ನಃ । ಮಘಽವನ್ । ಇಂದ್ರ । ಪೃತ್ಽಸು । ಅಸ್ಮಭ್ಯಂ । ಮಹಿ । ವರಿವಃ । ಸುಽಗಂ । ಕರಿತಿ ಕಃ ।
ಅಪಾಂ । ತೋಕಸ್ಯ । ತನಯಸ್ಯ । ಜೇಷೇ । ಇಂದ್ರ । ಸೂರೀನ್ । ಕೃಣುಹಿ । ಸ್ಮ । ನಃ । ಅರ್ಧಂ ॥೧೮॥

॥ ಸಾಯಣಭಾಷ್ಯಂ ॥

ಹೇ ಮಘವನ್ ಧನವನ್ನಿಂದ್ರ ನೋಽಸ್ಮದೀಯಾಸ್ವಾಸು ಪೃತ್ಸು ಪೃತನಾಸು ಸಂಗ್ರಾಮೇಷ್ವ-ಸ್ಮಭ್ಯಂ ಮಹಿ ಮಹತ್ಸುಗಂ ಸುಖೇನ ಪ್ರಾಪ್ಯಂ ವರಿವೋ ಧನಂ ಕಃ । ಕುರು । ಸ್ಮೇತಿ ಪೂರಣಃ । ಅಪಿ ಚ ಹೇ ಇಂದ್ರ ಅಪಃ ಅಮಾಪ್ತವ್ಯಾನಾಂ ಧನಾನಾಂ ವೋದಕಾನಾಂ ವಾ ತೋಕಸ್ಯ ಪುತ್ರಸ್ಯ ತನಯಸ್ಯ ಪೌತ್ರಸ್ಯ ಚ ಜೇಷೇ ಜಯಾರ್ಥಂ ಸೂರೀನ್ ಸ್ತೋತೄನ್ ನೋಽಸ್ಮಾನರ್ಧಮರ್ಧಾನ್ ಸಮೃದ್ಧಾನ್ ಕೃಣುಹಿ । ಕುರು । ಯದ್ವಾ । ಅರ್ಧಕಾರಿಣಃ ಶತ್ರೂಣಾಂ ಖಂಡಯಿತೄನ್ ಕುರು । ಸ್ಮೇತಿ ಪೂರಕಃ ॥

॥ ಪ್ರತಿಪದಾರ್ಥ ॥

**ಮಘವನ್**—ಧನವಂತನಾದ । **ಇಂದ್ರ**—ಎಲೈ ಇಂದ್ರನೇ । **ನಃ**—ನಮ್ಮ ಸಂಬಂಧಿಯಾದ । **ಆಸು ಪೃತ್ಸು**—ಈ ಯುದ್ಧಗಳಲ್ಲಿ । **ಅಸ್ಮಭ್ಯಂ**—ನಮಗೆ । **ಮಹಿ**—ಮಹತ್ತಾದುದೂ । **ಸುಗಂ**—ಸುಖವಾಗಿ ಹೊಂದಲ್ಪಡುವುದೂ ಆದ । **ವರಿವಃ**—ಧನವನ್ನು । **ಕಃ**—ಉಂಟುಮಾಡು । **ಇಂದ್ರ**—ಎಲೈ ಇಂದ್ರನೇ । **ಅಪಾಂ**—ಉದಕಾರ್ಥವಾಗಿಯೂ । **ತೋಕಸ್ಯ**—ಪುತ್ರಾರ್ಥವಾಗಿಯೂ । **ತನಯಸ್ಯ**-ಪೌತ್ರಾರ್ಥವಾಗಿಯೂ । **ಜೇಷೇ**—ಜಯವನ್ನು ಹೊಂದಲು । **ಸೂರೀನ್**—ಸ್ತೋತೃಗಳಾದ । **ನಃ**—ನಮ್ಮನ್ನು । **ಅರ್ಧಂ**—ಸಮೃದ್ಧರನ್ನಾಗಿ । **ಕೃಣುಹಿ**—ಮಾಡು.

॥ ಭಾವಾರ್ಥ ॥

ಧನವಂತನಾದ ಎಲೈ ಇಂದ್ರನೇ, ನಮ್ಮನ್ನು ಕ್ಲೇಶಕ್ಕೆ ಸಿಕ್ಕಿಸಿರುವ ಈ ಯುದ್ಧಗಳಲ್ಲಿ ನಮಗೆ ಮಹತ್ತಾದುದೂ, ಸುಖವಾಗಿ ಹೊಂದಲ್ಪಡುವುದೂ ಆದ ಧನವನ್ನು ಉಂಟುಮಾಡು. ಎಲೈ ಇಂದ್ರನೇ, ಉದಕಾರ್ಥ

ವಾಗಿಯೂ, ಪುತ್ರಾರ್ಥವಾಗಿಯೂ, ಪೌತ್ರಾರ್ಥವಾಗಿಯೂ ಜಯವನ್ನು ಹೊಂದಲು ಸ್ತೋತೃಗಳಾದ ನಮ್ಮನ್ನು ಸಮೃದ್ಧರನ್ನಾಗಿ ಮಾಡು.

English Translation.

Affluent Indra, facilitate to us (the acquirement of) vast riches in these our battles: (enable us) to gain the victory: make us prosperous with rain, and with sons and grandsons.

॥ ಸಂಹಿತಾಪಾಠಃ ॥

ಆ ತ್ವಾ ಹರಯೋ ವೃಷಣೋ ಯುಜಾನಾ ವೃಷರಥಾಸೋ ವೃಷರಶ್ಮಯೋಽತ್ಯಾಃ ।

ಅಸ್ಮತ್ರಾಂಚೋ ವೃಷಣೋ ವಜ್ರವಾಹೋ ವೃಷ್ಣೇ ಮದಾಯ ಸುಯುಜೋ ವಹಂತು ॥ ೧೯ ॥

॥ ಪದಪಾಠಃ ॥

ಆ । ತ್ವಾ । ಹರಯಃ । ವೃಷಣಃ । ಯುಜಾನಾಃ । ವೃಷಽರಥಾಸಃ । ವೃಷಽರಶ್ಮಯಃ । ಅತ್ಯಾಃ ।

ಅಸ್ಮತ್ರಾಂಚಃ । ವೃಷಣಃ । ವಜ್ರಽವಾಹಃ । ವೃಷ್ಣೇ । ಮದಾಯ । ಸುಽಯುಜಃ । ವಹಂತು ॥ ೧೯ ॥

॥ ಸಾಯಣಭಾಷ್ಯಂ ॥

ಹೇ ಇಂದ್ರ ತ್ವಾ ತ್ವಾಂ ಹರಯೋಽಶ್ವಾ ವೃಷ್ಣೇ ವರ್ಷಿತ್ರೇ ಮದಾಯ ಮದಕರಾಯ ಸೋಮಾಯೇದೃಶಂ ಸೋಮಂ ಪಾಯಯಿತುಮಾ ವಹಂತು । ಕೀದೃಶಾ ಅಶ್ವಾಃ । ವೃಷಣಃ ಕಾಮಾನಾಂ ವರ್ಷಿತಾರೋ ಯುಜಾನಾಃ ಸ್ವಯಮೇವ ರಥೇ ಯುಜ್ಯಮಾನಾ ವೃಷರಥಾಸಃ । ವೃಷಾ ಕಾಮಾಭಿ-ವರ್ಷಕೋ ರಥೋ ಯೇಷಾಂ ತೇ ತಥೋಕ್ತಾಃ । ವೃಷರಶ್ಮಯಃ । ವರ್ಷಿತಾರೋ ರಶ್ಮಯಃ ಪ್ರಗ್ರಹಾ ಯೇಷಾಂ ತಾದೃಶಾಃ । ಅತ್ಯಾಃ ಸತತಗಾಮಿನೋಽಸ್ಮತ್ರಾಂಚೋಽಸ್ಮಾನ್ಪ್ರತ್ಯಂಚಂತೋ ಗಚ್ಛಂತೋ ವೃಷಣೋ ನಿತ್ಯತರುಣಾ ವಜ್ರವಾಹೋ ವಜ್ರಾದೀನ್ಯಾಯುಧಾನಿ ವಹಂತಃ ಸುಯುಜಃ ಶೋಭನ-ಯೋಜನಾಃ ॥

॥ ಪ್ರತಿಪದಾರ್ಥ ॥

(ಎಲೈ ಇಂದ್ರನೇ) **ವೃಷಣಃ**—ಕಾಮವರ್ಷಕಗಳೂ । **ಯುಜಾನಾಃ**—ರಥಕ್ಕೆ ಸೇರಿಕೊಂಡಿರುವುವೂ / **ವೃಷರಥಾಸಃ**—ಇಷ್ಟಾರ್ಥಪ್ರದವಾದ ರಥವನ್ನು ಹೊಂದಿರುವುವೂ । **ವೃಷರಶ್ಮಯಃ**—ವೃಷ್ಟಿಕಾರಕವಾದ ಕಡಿವಾಣವನ್ನು ಹೊಂದಿರುವುವೂ । **ಅತ್ಯಾಃ**—ವೇಗಗಾಮಿಗಳೂ । **ಅಸ್ಮತ್ರಾಂಚಃ**—ನಮಗಭಿಮುಖವಾಗಿ

ಬರತಕ್ಕವೂ । **ವೃಷಣಃ**—ತಾರುಣ್ಯವನ್ನು ಹೊಂದಿರುವುವೂ । **ವಜ್ರವಾಹಃ**—ವಜ್ರಾದ್ಯಾಯುಧಗಳನ್ನು ಹೊರ ತಕ್ಕವೂ । **ಸುಯುಜಃ**—ಉತ್ತಮವಾಗಿ ಯೋಜಿತವಾಗಿರುವುವೂ ಆದ । **ಹರಯಃ**—ಅಶ್ವಗಳು । **ತ್ವಾ**—ನಿನ್ನನ್ನು । **ವೃಷ್ಣೇ**—ಸಂಪದ್ಯುಕ್ತವಾದುದೂ । **ಮದಾಯ**—ಹರ್ಷಕಾರಕವಾದುದೂ ಆದ ಸೋಮಪಾನಕ್ಕಾಗಿ । **ಆ ವಹಂತು**—ಕರೆತರಲಿ.

॥ ಭಾವಾರ್ಥ ॥

ಎಲೈ ಇಂದ್ರನೇ, ಕಾಮವರ್ಷಕಗಳೂ, ರಥಕ್ಕೆ ಸೇರಿಕೊಂಡಿರುವುವೂ, ಇಷ್ಟಾರ್ಥಪ್ರದವಾದ ರಥವನ್ನು ಹೊಂದಿರುವುವೂ, ವೇಗಗಾಮಿಗಳೂ, ನಮಗಭಿಮುಖವಾಗಿ ಬರತಕ್ಕವೂ, ತಾರುಣ್ಯವನ್ನು ಹೊಂದಿರುವುವೂ ವಜ್ರಾಧ್ಯಾಯುಧಗಳನ್ನು ಹೊರತಕ್ಕವೂ, ಉತ್ತಮವಾಗಿ ಯೋಜಿತವಾಗಿರುವುವೂ ಆದ ಅಶ್ವಗಳು ನಿನ್ನನ್ನು ಸಂಪದ್ಯುಕ್ತವಾದುದೂ, ಮದಕಾರಕವಾದುದೂ ಆದ ಸೋಮಪಾನಕ್ಕಾಗಿ ಕರೆತರಲಿ.

## English Translation.

Let your vigorous steeds, harnessed of their own will, drawing your wish-bestowing chariot, guided by shower-yielding reins, quick-moving, hastening towards us, youthful, thunder-bearing, well-yoked, bring you to the bountiful, exhilarating (libations).

॥ ಸಂಹಿತಾಪಾಠಃ ॥

ಆ ತೇ ವೃಷನ್ವೃಷಣೋ ದ್ರೋಣಮಸ್ಥುರ್ಘೃತಪ್ರುಷೋ ನೋರ್ಮಯೋ ಮದಂತಃ ।
ಇಂದ್ರ ಪ್ರ ತುಭ್ಯಂ ವೃಷಭಿಃ ಸುತಾನಾಂ ವೃಷ್ಣೇ ಭರಂತಿ ವೃಷಭಾಯ ಸೋಮಂ ॥ ೧೦ ॥

॥ ಪದಪಾಠಃ ॥

ಆ । ತೇ । ವೃಷನ್ । ವೃಷಣಃ । ದ್ರೋಣಂ । ಅಸ್ಥುಃ । ಘೃತ್ಽಪ್ರುಷಃ । ನ । ಊರ್ಮಯಃ । ಮದಂತಃ । ಇಂದ್ರ । ಪ್ರ । ತುಭ್ಯಂ । ವೃಷಽಭಿಃ । ಸುತಾನಾಂ । ವೃಷ್ಣೇ । ಭರಂತಿ । ವೃಷಭಾಯ । ಸೋಮಂ ॥ ೧೦ ॥

॥ ಸಾಯಣಭಾಷ್ಯಂ ॥

ಹೇ ವೃಷನ್ ಕಾಮಾನಾಂ ವರ್ಷಿತರಿಂದ್ರ ವೃಷಣಃ ಸೇಕ್ತಾರೋ ಯುವಾನಸ್ತ್ವದೀಯಾ ಅಶ್ವಾ ಘೃತಪ್ರುಷೋ ನೋರ್ಮಯೋ ಘೃತಮುದಕಂ ಸಿಂಚಂತಃ ಸಾಮುದ್ರಾಸ್ತರಂಗಾ ಇವ ಮದಂತೋ

ಹೃಷ್ಯಂತೋ ಮತ್ತಾಃ ಸಂತಸ್ತೇ ತ್ವದೀಯಂ ದ್ರೋಣಂ ದ್ರುಮಮಯಂ ರಥಮಾಸ್ಥುಃ । ಆತಿಷ್ಠಂತೆ । ಅತಸ್ತ್ವಮಾಗಚ್ಛೇತಿ ಭಾವಃ । ಕುತ ಇತ್ಯತ ಆಹ । ಹೇ ಇಂದ್ರ ವೃಷ್ಣೇ ಯೂನೇ ನಿತ್ಯತರುಣಾಯ ವೃಷಭಾಯ ಕಾಮಾನಾಂ ವರ್ಷಯಿತ್ರೇ ತುಭ್ಯಂ ವೃಷಭಿಃ ಕಾಮಾಭಿವರ್ಷಕೈರ್ಗ್ರಾವಭಿಃ ಸುತಾನಾಮಭಿಷುತಾನಾಂ ಸೋಮಾನಾಂ ಮಧ್ಯೇ ತ್ವದ್ಭಾಗರೂಪಂ ಸೋಮಂ ಯಸ್ಮಾದಧ್ವರ್ಯವಃ ಪ್ರ ಭರಂತಿ ಪ್ರಹರಂತಿ ಹೋಮಾರ್ಥಂ ಪ್ರಣಯಂತಿ ತಸ್ಮಾದಾಗಚ್ಛೇತ್ಯರ್ಥಃ ॥

॥ ಪ್ರತಿಪದಾರ್ಥ ॥

**ವೃಷನ್**—ಕಾಮವರ್ಷಕನಾದ ಎಲೈ ಇಂದ್ರನೇ । **ವೃಷಣಃ**—ತಾರುಣ್ಯಯುತವೂ । **ಘೃತಪ್ರುಷಃ**—ಉದಕವನ್ನು ಸ್ರವಿಸತಕ್ಕವೂ । **ಊರ್ಮಯೋ ನ**—ನರ್ತನಮಾಡುವವೂ ಆದ ಸಮುದ್ರದ ಅಲೆಗಳಂತೆ । **ಮದಂತಃ**—ಹರ್ಷವನ್ನು ಸೂಚಿಸುವುವೂ ಆದ ನಿನ್ನ ಅಶ್ವಗಳು । **ತೇ**—ನಿನ್ನ । **ದ್ರೋಣಂ**—ರಥವನ್ನು । **ಆ ಅಸ್ಥುಃ**—ಸೇರಿಕೊಂಡು ನಿಂತಿವೆ । **ಇಂದ್ರ**—ಎಲೈ ಇಂದ್ರನೇ । **ವೃಷ್ಣೇ**—ತರುಣನೂ । **ವೃಷಭಾಯ**—ಕಾಮವರ್ಷಕನೂ ಆದ । **ತುಭ್ಯಂ**—ನಿನ್ನನ್ನುದ್ದೇಶಿಸಿ । **ವೃಷಭಿಃ**—ವರ್ಷಕಗಳಾದ ಕಲ್ಲುಗಳಿಂದ (ಗ್ರಾವ) । **ಸುತಾನಾಂ**—ಹಿಂಡಲ್ಪಟ್ಟ ಸೋಮಗಳಲ್ಲಿ । **ಸೋಮಂ**—ನಿನ್ನ ಭಾಗಕ್ಕೆ ಕ್ಲೃಪ್ತವಾದ ರಸವನ್ನು । **ಪ್ರ ಭರಂತಿ**—ಹವಿಸ್ಸಿನ ರೂಪದಲ್ಲಿ ಅರ್ಪಿಸುತ್ತಾರೆ.

॥ ಭಾವಾರ್ಥ ॥

ಕಾಮವರ್ಷಕನಾದ ಎಲೈ ಇಂದ್ರನೇ, ತಾರುಣ್ಯಯುತವೂ, ಉದಕವನ್ನು ಸ್ರವಿಸತಕ್ಕವೂ, ನರ್ತನಮಾಡುವುವೂ ಆದ ಸಮುದ್ರದ ಅಲೆಗಳಂತೆ ಹರ್ಷವನ್ನು ಸೂಚಿಸುವುವೂ ಆದ ನಿನ್ನ ಅಶ್ವಗಳು ನಿನ್ನ ರಥವನ್ನು ಸೇರಿಕೊಂಡು ನಿಂತಿವೆ. ಎಲೈ ಇಂದ್ರನೇ, ತರುಣನೂ ಕಾಮವರ್ಷಕನೂ ಆದ ನಿನ್ನನ್ನುದ್ದೇಶಿಸಿ ಕಲ್ಲುಗಳಿಂದ ಜಜ್ಜಿ ಹಿಂಡಲ್ಪಟ್ಟ ಸೋಮರಸಗಳಲ್ಲಿ ನಿನ್ನ ಭಾಗಕ್ಕೆ ಸೇರಿದ ರಸವನ್ನು ಅಧ್ವರ್ಯುಗಳು ಹವಿಸ್ಸಿನ ರೂಪದಲ್ಲಿ ಅರ್ಪಿಸುತ್ತಾರೆ.

English Translation.

Showerer (of benefits), your vigorous water-shedding steeds, like the waves (of the sea), exulting, are harnessed to your car: for they, (the priests), offer to you, the showerer (of benefits), ever youthful, the libation of the Soma juices expressed by the stones.

॥ ಸಂಹಿತಾಪಾಠಃ ॥

ವೃಷಾಸಿ ದಿವೋ ವೃಷಭಃ ಪೃಥಿವ್ಯಾ ವೃಷಾ ಸಿಂಧೂನಾಂ ವೃಷಭಃ ಸ್ತಿಯಾನಾಂ ।
ವೃಷ್ಣೇ ತ ಇಂದುರ್ವೃಷಭ ಪೀಪಾಯ ಸ್ವಾದೂ ರಸೋ ಮಧುಪೇಯೋ ವರಾಯ ॥ ೨೧ ॥

॥ ಪದಪಾಠಃ ॥

ವೃಷಾ । ಅಸಿ । ದಿವಃ । ವೃಷಭಃ । ಪೃಥಿವ್ಯಾಃ । ವೃಷಾ । ಸಿಂಧೂನಾಂ । ವೃಷಭಃ । ಸ್ತಿಯಾನಾಂ ।

ವೃಷ್ಣೇ । ತೇ । ಇಂದುಃ । ವೃಷಭ । ಪೀಪಾಯ । ಸ್ವಾದುಃ । ರಸಃ । ಮಧುऽಪೇಯಃ । ವರಾಯ ॥ ೨೦ ॥

॥ ಸಾಯಣಭಾಷ್ಯಂ ॥

ಹೇ ಇಂದ್ರ ತ್ವಂ ದಿವೋ ದ್ಯುಲೋಕಸ್ಯ ವೃಷಾಸಿ । ಹವಿರ್ಭಿಃ ಸೇಕ್ತಾ ಭವಸಿ । ಪೃಥಿವ್ಯಾ ಭೂಮೇಶ್ಚ ವೃಷಭಃ ಕಾಮಾನಾಂ ವರ್ಷಿತಾ । ಸಿಂಧೂನಾಂ ಸ್ಯಂದನಶೀಲಾನಾಂ ಚ ನದೀನಾಂ ವೃಷಾ ವರ್ಷೇಣ ಪೂರಯಿತಾಸಿ । ತಥಾ ಸ್ತಿಯಾನಾಂ ಸಂಘೀಭೂತಾನಾಂ ಸ್ಥಾವರಜಂಗಮಾತ್ಮನಾಂ ಪ್ರಾಣಿನಾಂ ವೃಷಭಃ ಕಾಮಾನಾಂ ವರ್ಷಿತಾ ಭವಸಿ । ಯದ್ವಾ । ಸ್ತಿಯಾಃ ಸಂಘೀಭೂತಾ ಆಪಃ । ತಾಸಾಂ ವರ್ಷಿತಾಸಿ । ವೃಷಭ ಕಾಮಾನಾಂ ವರ್ಷಕೇಂದ್ರ ವರಾಯ ಶ್ರೇಷ್ಠಾಯ ವೃಷ್ಣೇ ಸೇಕ್ತ್ರೇ ತೇ ತುಭ್ಯಂ ತ್ವದರ್ಥಂ ಸ್ವಾದುರ್ಮಧುರೋ ರಸೋ ರಸನೀಯಃ ಪ್ರಶಸ್ಯೋ ರಸವಾನ್ವಾ ರಸಾತ್ಮಕೋ ವಾ ಮಧುಪೇಯೋ ಮಧುವತ್ಪಾತವ್ಯ ಇಂದುಃ ಸೋಮಃ ಪೀಪಾಯ । ಪ್ಯಾಯತೇ । ವರ್ಧತೇ । ಅತಸ್ತ್ವಮಾಗತ್ಯ ತಂ ಸೋಮಂ ಪಿಬೇತಿ ಭಾವಃ ॥

॥ ಪ್ರತಿಪದಾರ್ಥ ॥

**ವೃಷಭ**—ಕಾಮವರ್ಷಕನಾದ ಎಲೈ ಇಂದ್ರನೇ । (**ತ್ವಂ**—ನೀನು) । **ದಿವಃ**—ದ್ಯುಲೋಕಕ್ಕೆ । **ವೃಷಾ**—ಇಷ್ಟಾರ್ಥಪ್ರದನಾಗಿ । **ಅಸಿ**—ಆಗಿದ್ದೀಯೆ । **ಪೃಥಿವ್ಯಾ**—ಭೂಮಿಗೆ । **ವೃಷಭಃ**—ಕಾಮವರ್ಷಕನಾಗಿದ್ದೀಯೆ । **ಸಿಂಧೂನಾಂ**-ನದಿಗಳಿಗೆ । **ವೃಷಾ**-ವೃಷ್ಟಿಯಿಂದ ಜಲವನ್ನು ತುಂಬುತ್ತೀಯೆ । **ಸ್ತಿಯಾನಾಂ**-ಸಂಘಾತ್ಮಕವಾದ ಪ್ರಾಣಿಗಳಿಗೆಲ್ಲಾ । **ವೃಷಭಃ**—ಕಾಮವರ್ಷಕನಾಗಿದ್ದೀಯೆ । **ವೃಷಭ**—ಇಷ್ಟಾರ್ಥಪ್ರದನಾದ ಎಲೈ ಇಂದ್ರನೇ । **ವರಾಯ**—ಶ್ರೇಷ್ಠನೂ । **ವೃಷ್ಣೇ**—ವೃಷ್ಟಿಕಾರಕನೂ ಆದ । **ತೇ**—ನಿನನಾಗಿ । **ಸ್ವಾದುಃ**—ಮಧುರವೂ । **ರಸಃ**—ರುಚಿಕರವಾದುದೂ (ರಸಾತ್ಮಕವೂ) । **ಮಧುಪೇಯಃ**—ಮಧುವಿನಂತೆ ಪಾನಮಾಡಲ್ಪಡುವುದೂ ಆದ । **ಇಂದುಃ**—ಸೋಮವು । **ಪೀಪಾಯ**—ಪಾನ ಮಾಡಲು ಸಿದ್ಧವಾಗಿದೆ.

॥ ಭಾವಾರ್ಥ ॥

ಕಾಮವರ್ಷಕನಾದ ಎಲೈ ಇಂದ್ರನೇ. ನೀನು ದ್ಯುಲೋಕಕ್ಕೆ ಇಷ್ಟಾರ್ಥಪ್ರದನಾಗಿದ್ದೀಯೆ. ಭೂಮಿಗೆ ವೃಷ್ಟಿದಾನದಿಂದ ಕಾಮವರ್ಷಕನಾಗಿದ್ದೀಯೆ. ನದಿಗಳಿಗೆ ವೃಷ್ಟಿಯಿಂದ ಜಲವನ್ನು ತುಂಬುತ್ತೀಯೆ. ಸಂಘಾತ್ಮಕವಾದ ಪ್ರಾಣಿಗಳಿಗೆಲ್ಲಾ ಕಾಮವರ್ಷಕನಾಗಿದ್ದೀಯೆ. ಇಷ್ಟಾರ್ಥಪ್ರದನಾದ ಎಲೈ ಇಂದ್ರನೇ, ಶ್ರೇಷ್ಠನೂ ವೃಷ್ಟಿಕಾರಕನೂ ಆದ ನಿನಗಾಗಿ ಸೋಮರಸವು ಪಾನಮಾಲು ಸಿದ್ಧವಾಗಿದೆ.

## English Translation.

You, Indra, are the showerer of heaven, the bedewer of earth, the the feeder of the rivers. the supplier of the aggregated (waters): for you,

showerer (of desires), who are the most excellent shedder of rain, the sweet Soma, the honey-flavourd juice, is ready to be quaffed.

|| ವಿಶೇಷವಿಷಯಗಳು ||

**ಸ್ತಿಯಾನಾಂ**—ಈ ಶಬ್ದಕ್ಕೆ ಯಾಸ್ಕರು—

**ಸ್ತಿಯಾನಾಂ ! ಸ್ತಿಯಾ ಆಪೋ ಭವಂತಿ ಸ್ತ್ಯಾಯನಾತ್ ।**
**ವೃಷಾ ಸಿಂಧೂನಾಂ ವೃಷಭಃ ಸ್ತಿಯಾನಾಂ ಇತ್ಯಪಿ ನಿಗಮೋ ಭವತಿ ॥**
**(ನಿ. ೬-೧೭)**

ಎಂದು ನಿರ್ವಚನವನ್ನು ಹೇಳಿದಾರೆ. ಸ್ತಿಯಾಃ ಎಂದರೆ ಉದಕ, ನೀರು ಎಂದರ್ಥವು. ಏಕೆಂದರೆ ಸ್ತ್ಯಾಯನವೆಂಬ ಶಬ್ದಕ್ಕೆ ಒಂದಕ್ಕೊಂದು ಸೇರಿಸು ಎಂಬರ್ಥವಿರುವುದು. ಭೂಮಿಯಲ್ಲಿರುವ ಮಣ್ಣು ಮೊದಲಾದ ಅನೇಕ ಪದಾರ್ಥಗಳು ಒಂದಕ್ಕೊಂದು ಸೇರದೆ ಪುಡಿಪುಡಿಯಾಗಿದ್ದಾಗ ನೀರು ಅದನ್ನು ಒಟ್ಟಿಗೆ ಸೇರುವಂತೆ (ನೀರು ಹಾಕಿ ಕಲೆಸುವುದರಿಂದ) ಮಾಡುವುದು. ಎರಡು ಪದಾರ್ಥಗಳು ಒಂದಕ್ಕೊಂದು ಸೇರುವಂತೆ ಮಾಡುವ ಶಕ್ತಿಯು ನೀರಿಗಿರುವುದು. ಆದುದರಿಂದ ನೀರಿಗೆ ಸ್ತಿಯಾ ಎಂಬ ಹೆಸರು ಬಂದಿರುವುದು. ಈ ವಿಷಯದಲ್ಲಿ ಪ್ರಕೃತ ಋಕ್ಕಿನಲ್ಲಿರುವ **ವೃಷಾ ಸಿಂಧೂನಾಂ ವೃಷಭಃ ಸ್ತಿಯಾನಾಂ** ಎಂಬ ವೇದವಾಕ್ಯವೇ ಉದಾಹರಣೆಯಾಗಿರುವುದು ಎಂದು ನಿರ್ವಚನಾಭಿಪ್ರಾಯವು.

॥ ಸಂಹಿತಾಪಾಠಃ ॥

**ಅಯಂ ದೇವಃ ಸಹಸಾ ಜಾಯಮಾನ ಇಂದ್ರೇಣ ಯುಜಾ ಪಣಿಮಸ್ತ-ಭಾಯತ್ ।**
**ಅಯಂ ಸ್ವಸ್ಯ ಪಿತುರಾಯುಧಾನೀಂದುರಮುಷ್ಣಾದಶಿವಸ್ಯ ಮಾಯಾಃ ॥೨೨॥**

॥ ಪದಪಾಠಃ ॥

**ಅಯಂ । ದೇವಃ । ಸಹಸಾ । ಜಾಯಮಾನಃ । ಇಂದ್ರೇಣ । ಯುಜಾ । ಪಣಿಂ । ಅಸ್ತಭಾಯತ್ ।**
**ಅಯಂ । ಸ್ವಸ್ಯ । ಪಿತುಃ । ಆಯುಧಾನಿ । ಇಂದುಃ । ಅಮುಷ್ಣಾತ್ । ಅಶಿವಸ್ಯ । ಮಾಯಾಃ ॥ ೨೨ ॥**

॥ ಸಾಯಣಭಾಷ್ಯಂ ॥

**ದೇವೋ ದ್ಯೋತಮಾನೋಽಯಮಿಂದುಃ ಸೋಮ ಇಂದ್ರೇಣ ಯುಜಾ ಸಖ್ಯಾ ಸಹ ಜಾಯಮಾನಃ ಪ್ರಾದುರ್ಭವನ್ ಪಣಿಂ ವಣಿಜಂ ಗವಾಮಾದಾತಾರಂ ವಲಾಖ್ಯಮಸುರಂ । ಯದ್ವಾ । ಪಣೀನಾಂ ಸ್ವಾಮಿತ್ವಾತ್ಪಣಿರಿತ್ಯುಚ್ಯತೇ । ತಮಸುರಂ ಸಹಸಾ ಬಲೇನಾಸ್ತಭಾಯತ್ । ಅಸ್ತಭ್ನಾತ್ । ನ್ಯರುಧತ್ । ಅಪಿ ಚ ಸ್ವಸ್ಯ ಧನಸ್ಯ ಗೋರೂಪಸ್ಯ ಪಿತುಃ ಪಾಲಯಿತುರಶಿವಸ್ಯಾಸುಖಕರಸ್ಯ**

**ವಲಸ್ಯಾಯುಧಾನಿ ವಜ್ರಾದೀನ್ಯಮುಷ್ಣಾತ್ । ಅಪಾಹರತ್ । ತದೀಯಾ ಮಾಯಾಶ್ಚಾಮುಷ್ಣಾತ್ । ಹೇ ಇಂದ್ರ ತ್ವತ್ಸಖ್ಯಬಲಾದೇತತ್ಸರ್ವಂ ಸೋಮಃ ಕೃತವಾನ್ ಅತಸ್ತವ ಮಹಿಮಾ ಕೇನ ವರ್ಣಯಿತುಂ ಶಕ್ಯತ ಇತೀಂದ್ರಸ್ತುತಿಃ ॥**

॥ ಪ್ರತಿಪದಾರ್ಥ ॥

**ದೇವಃ**—ದೇವತಾತ್ಮನಾದ । **ಅಯಂ ಇಂದುಃ**—ಈ ಸೋಮನು । **ಇಂದ್ರೇಣ ಯುಜಾ**—ಇಂದ್ರನೊಡನೆ ಸೇರಿಕೊಂಡು । **ಜಾಯಮಾನಃ**—ಉತ್ಪನ್ನನಾದೊಡನೆಯೇ । **ಪಣಿಂ**—ಪಣಿಯೆಂಬ ಅಸುರನನ್ನು । **ಸಹಸಾ**—ತನ್ನ ಶಕ್ತಿಯಿಂದ । **ಅಸ್ತಭಾಯತ್**—ನಾಶಮಾಡಿದನು । **ಸ್ವಸ್ಯ**—ತನ್ನ ಗೋರೂಪವಾದ ಧನದ । **ಪಿತುಃ**—ಪಾಲಕನೂ । **ಅಶಿವಸ್ಯ**—ಅಮಂಗಳಕರನೂ ಆದ ವಲನ । **ಆಯುಧಾನಿ**—ಆಯುಧಗಳನ್ನು । **ಅಮುಷ್ಣಾತ್**—ಅಪಹರಿಸಿದನು । **ಮಾಯಾಃ**—ವಂಚಕವಾದ ಶಕ್ತಿಗಳನ್ನೂ (ಅಪಹರಿಸಿದನು).

॥ ಭಾವಾರ್ಥ ॥

ದೇವತ್ಮಾನಾದ ಈ ಸೋಮನು ಇಂದ್ರನೊಡನೆ ಸೇರಿಕೊಂಡು ಉತ್ಪನ್ನನಾದೊಡನೆಯೇ ತನ್ನ ಶಕ್ತಿಯಿಂದ ಪಣಿಯೆಂಬ ಅಸುರನನ್ನು ನಾಶಮಾಡಿದನು. ತನ್ನ ಗೋರೂಪವಾದ ಧನಕ್ಕೆ ಪಾಲಕನೂ ಅಮಂಗಳಕರನೂ ಆದ ವಲನ ಆಯುಧಗಳನ್ನು ಅಪಹರಿಸಿದನು. ಅವನ ವಂಚಕವಾದ ಶಕ್ತಿಗಳನ್ನೂ ಅಪಹರಿಸಿದನು.

## English Translation.

This divine Soma, with Indra for its ally, crushed, as soon as generated, Pani by force: this Soma baffled the devices and the weapons of the malignant secreter of (the stolen wealth, the cattle).

॥ ಸಂಹಿತಾಪಾಠಃ ॥

ಅಯಮಕೃಣೋದುಷಸಃ ಸುಪತ್ನೀರಯಂ ಸೂರ್ಯೇ ಅದಧಾಜ್ಜ್ಯೋತಿ-
ರಂತಃ ।

ಅಯಂ ತ್ರಿಧಾತು ದಿವಿ ರೋಚನೇಷು ತ್ರಿತೇಷು ವಿಂದದಮೃತಂ ನಿಗೂಳ್ಹಂ॥

॥ ಪದಪಾಠಃ ॥

ಅಯಂ । ಅಕೃಣೋತ್ । ಉಷಸಃ । ಸುऽಪತ್ನೀಃ । ಅಯಂ । ಸೂರ್ಯೇ । ಅದಧಾತ್ । ಜ್ಯೋತಿಃ ।
ಅಂತರಿತಿ ।

ಅಯಂ । ತ್ರಿऽಧಾತು । ದಿವಿ । ರೋಚನೇಷು । ತ್ರಿತೇಷು । ವಿಂದತ್ । ಅಮೃತಂ । ನಿऽಗೂಳ್ಹಂ ॥ ೨೩ ॥

॥ ಸಾಯಣಭಾಷ್ಯಂ ॥

**ಅಯಂ ಸೋಮಃ ಉಷಸ ಉಷಃಕಾಲಾನ್ ಸುಪತ್ನೀಃ ಶೋಭನಃ ಪತಿಃ ಪಾಲಕಃ ಸೂರ್ಯೋ ಯಾಸಾಮುಷಸಾಂ ತಾದೃಶೀರಕೃಣೋತ್ । ಅಕರೋತ್ । ಅಯಮೇವ ಸೂರ್ಯೇ ಸೂರ್ಯಮಂಡಲೇಂತರ್ಮಧ್ಯೇ ಜ್ಯೋತಿಸ್ತೇಜೋಽದಧಾತ್ । ನಿಹಿತವಾನ್ । ತ್ರಿಧಾತು ಸವನತ್ರಯರೂಪೇಣ ತ್ರಿಪ್ರಕಾರಮಯಂ ಲತಾರೂಪಃ ಸೋಮೋ ದಿವಿ ದ್ಯುಲೋಕೇ ರೋಚನೇಷು ರೋಚಮಾನೇಷು ತ್ರಿತೇಷು ತೃತೀಯೇ ಸ್ಥಾನೇ ತತೇಷು ವಿಸ್ತೃತೇಷು ದೇವೇಷು ನಿಗೂಳ್ಹಂ ನಿತರಾಂ ಗೂಢಮದೃಶ್ಯತಯಾ ವರ್ತಮಾನಮಮೃತಮಮೃತತ್ವಕಾರಣಂ ಪೀಯೂಷಂ ವಿಂದತ್ । ಅವಿಂದತ್ । ಅಲಭತ । ಹೇ ಇಂದ್ರ ತ್ವತ್ಸಾಹಾಯ್ಯಾದೇವಮೇವಂ ಸೋಮಃ ಕೃತವಾನಿತೀಂದ್ರಸ್ಯ ಸ್ತುತಿರಧಿಗಂತವ್ಯಾ । ಯದ್ವಾ । ಇದಂಶಬ್ದೇನೇಂದ್ರ ಏವ ಪರಾಮೃಶ್ಯತೇ । ಅಯಮಿಂದ್ರ ಉಷಸಃ ಶೋಭನಪತಿಕಾ ಅಕರೋತ್ । ಅಯಮೇವ ಸೂರ್ಯೇಽಂತರ್ಜ್ಯೋತಿರದಧಾತ್ । ದಿವಿ ದ್ಯುಲೋಕೇ ರೋಚಮಾನೇಷು ತ್ರಿಸ್ಥಾನಗತೇಷು ದೇವೇಷು ಮಧ್ಯೇಽಯಮೇವೇಂದ್ರಸ್ತ್ರಿಧಾತು ಸವನತ್ರಯಾತ್ಮನಾ ತ್ರಿಪ್ರಕಾರಂ ನಿಗೂಢಂ ಪಾತ್ರೈಃ ಸಂವೃತಮಮೃತಮಮರಣಹೇತುಭೂತಂ ಸೋಮಮವಿಂದತ್ । ಅಲಭತ ॥**

। ಪ್ರತಿಪದಾರ್ಥ ।

**ಅಯಂ**—ಈ ಸೋಮನು । **ಉಷಸಃ**—ಉಷಸ್ಸುಗಳನ್ನು । **ಸುಪತ್ನೀಃ**—ಉತ್ತಮನಾದ ಸೂರ್ಯನಿಗೆ ಪತ್ನಿಗಳಾಗಿರುವಂತೆ । **ಅಕೃಣೋತ್**—ಮಾಡಿದನು । **ಅಯಂ**—ಇದೇ ಸೋಮನು । **ಸೂರ್ಯೇ**—ಸೂರ್ಯಮಂಡಲದ । **ಅಂತಃ**—ಮಧ್ಯ ಭಾಗದಲ್ಲಿ । **ಜ್ಯೋತಿಃ**—ತೇಜಸ್ಸನ್ನು । **ಅದಧಾತ್**—ಇಟ್ಟನು **ಅಯಂ**—ಲತಾರೂಪನಾದ ಈ ಸೋಮನು । **ದಿವಿ**—ದ್ಯುಲೋಕದಲ್ಲಿ । **ರೋಚನೇಷು**—ಪ್ರಕಾಶಮಾನರಾದವರೂ । **ತ್ರಿತೇಷು**—ತೃತೀಯ ಸ್ಥಾನದಲ್ಲಿ ವಿಸ್ತೃತರಾದವರೂ ಆದ ದೇವತೆಗಳಲ್ಲಿ । **ನಿಗೂಳ್ಹಂ**—ಗೂಢವಾಗಿದ್ದುದೂ । **ತ್ರಿಧಾತು**—ಸವನತ್ರಯರೂಪದಲ್ಲಿ ಮೂರು ರೂಪವುಳ್ಳದ್ದೂ । **ಅಮೃತಂ**—ಮೃತಿರಹಿತವಾದುದೂ ಆದ ರಸವನ್ನು । **ವಿಂದತ್**—ಪಡೆದನು.

। ಭಾವಾರ್ಥ ।

ಈ ಸೋಮನು ಉಷಸ್ಸುಗಳನ್ನು ಉತ್ತಮನಾದ ಸೂರ್ಯನಿಗೆ ಪತ್ನಿಗಳಾಗಿರುವಂತೆ ಮಾಡಿದನು. ಇದೇ ಸೋಮನು ಸೂರ್ಯಮಂಡಲದ ಮಧ್ಯ ಭಾಗದಲ್ಲಿ ತೇಜಸ್ಸನ್ನಿಟ್ಟನು. ಲತಾರೂಪನಾದ ಈ ಸೋಮನು ದ್ಯುಲೋಕದಲ್ಲಿ ಪ್ರಕಾಶಮಾನರಾದವರೂ, ತೃತೀಯ ಸ್ಥಾನದಲ್ಲಿ ವಿಸ್ತೃತರಾದವರೂ ಆದ ದೇವತೆಗಳಲ್ಲಿ ಗೂಢವಾಗಿದ್ದುದೂ ಸವನತ್ರಯರೂಪವಾದ ಮೂರು ರೂಪಗಳುಳ್ಳದ್ದೂ, ಮೃತಿರಹಿತವಾದುದೂ ಆದ ರಸವನ್ನು ಪಡೆದನು.

## English Translation.

This Soma made the dawns happily wedded to the sun: this Soma placed the light within the solar orb: this (Soma) has found the threefold ambrosia hidden in heaven in the three bright regions.

|| ಸಂಹಿತಾಪಾಠಃ ||

ಅಯಂ ದ್ಯಾವಾಪೃಥಿವೀ ವಿ ಷ್ಕಭಾಯದಯಂ ರಥಮಯುನಕ್ಸಪ್ತರಶ್ಮಿಂ ।
ಅಯಂ ಗೋಷು ಶಚ್ಯಾ ಪಕ್ವಮಂತಃ ಸೋಮೋ ದಾಧಾರ ದಶಯಂತ್ರ-
ಮುತ್ಸಂ ॥ ೨೪ ॥

॥ ಪದಪಾಠಃ ॥

ಅಯಂ । ದ್ಯಾವಾಪೃಥಿವೀ ಇತಿ । ವಿ । ಸ್ಕಭಾಯತ್ । ಅಯಂ । ರಥಂ । ಅಯುನಕ್ । ಸಪ್ತಽರಶ್ಮಿಂ ।
ಅಯಂ । ಗೋಷು । ಶಚ್ಯಾ । ಪಕ್ವಂ । ಅಂತರಿತಿ । ಸೋಮಃ । ದಾಧಾರ । ದಶಽಯಂತ್ರಂ । ಉತ್ಸಂ ॥೨೪॥

॥ ಸಾಯಣಭಾಷ್ಯಂ ॥

ಅಯಂ ಸೋಮೋ ದ್ಯಾವಾಪೃಥಿವೀ ದಿವಂ ಚ ಪೃಥಿವೀಂ ಚ ವಿ ಷ್ಕಭಾಯತ್ । ವಿವಿಧಮಸ್ಥಾಪಯತ್ । ಅಪಿ ಚಾಯಂ ಸೋಮಃ ಸೂರ್ಯಸ್ಯ ಚ ರಥಂ ಸಪ್ತರಶ್ಮಿಂ ಸಪ್ತ ರಶ್ಮಿಭಿಃ ಕಿರಣೈರುಪೇತಂ ಸಪ್ತಾಶ್ವಂ ಸಪ್ತಚಕ್ರಂ ವಾಯುನಕ್ । ಅಯೋಜಯತ್ । ತಥಾಯಂ ಸೋಮೋ ಗೋಷ್ವಂತರ್ಮಧ್ಯೇ ಪಕ್ವಂ ನಿಷ್ಪನ್ನಂ ಶಚ್ಯಾ ಪ್ರಜ್ಞಯಾ ಸಂಕಲ್ಪರೂಪಯೋತ್ಸಮುತ್ಸರಣಶೀಲಂ ಪಯೋ ದಾಧಾರ । ಧಾರಯತಿ । ದಶಯಂತ್ರಂ । ಉತ್ಸಸ್ಯ ಹೇತುಗರ್ಭವಿಶೇಷಣಮೇತತ್ । ಉತ್ಸರಣಹೇತುಭೂತೈರ್ದಶಭಿಶ್ಚಕ್ಷುಃಶ್ರೋತ್ರಾದಿಭಿರ್ಯಂತ್ರೈರುಪಾಯೈರ್ಯುಕ್ತಂ । ಇದಂ ಚ ಪದಂ ಖೈಲಿಕೇನ ಮಂತ್ರಾಂತರೇಣ ವ್ಯಾಖ್ಯಾಯತೇ । ಚಕ್ಷುಶ್ಚ ಶ್ರೋತ್ರಂ ಚ ಮನಶ್ಚ ವಾಕ್ಚ ಪ್ರಾಣಾಪಾನೌ ದೇಹ ಇದಂ ಶರೀರಂ । ದ್ವೌ ಪ್ರತ್ಯಂಚಾವನುಲೋಮೌ ವಿಸರ್ಗಾವೇತಂ ತಂ ಮನ್ಯೇ ದಶಯಂತ್ರಮುತ್ಸಮಿತಿ । ಯದ್ವಾ । ಅಯಮಿಂದ್ರೋ ದ್ಯಾವಾಪೃಥಿವೀ ವಿ ಷ್ಕಭಾಯತ್ । ಸ್ವೇ ಸ್ವೇ ಸ್ಥಾನೇ ಸ್ಥಿತೇ ಅಕರೋತ್ । ಅಯಮೇವ ಸಪ್ತರಶ್ಮಿಂ ಸೂರ್ಯಸ್ಯ ರಥಮಯುನಕ್ । ಅಯಮೇವೇಂದ್ರೋ ಗೋಷ್ವಂತಃ ಶಚ್ಯಾತ್ಮೀಯೇನ ಕರ್ಮಣಾ ಪಕ್ವಂ ಪಯೋ ಧಾರಯತಿ । ಏವಂಭೂತೇಂದ್ರಾರ್ಥಂ ಸೋಮೋ ದಶಯಂತ್ರಂ ದಶಸಂಖ್ಯಾಕೈರೈಂದ್ರವಾಯವಾದಿಭಿರ್ಗ್ರಹೈರ್ಯಂತ್ರಿತೈರ್ಗೃಹೀತೈರುಪೇತಮುತ್ಸಮುತ್ಸರಣಶೀಲಂ ರಸಂ ದಾಧಾರ । ಧಾರಯತಿ । ಪ್ರಾತಃಸವನ ಐಂದ್ರವಾಯವಾದಯೋ ದಶ ಗ್ರಹಾ ಗೃಹ್ಯಂತೇ । ತಥಾ ಚ ಬ್ರಾಹ್ಮಣಂ । ನವ ಪ್ರಾತರ್ಗ್ರಹಾ ಗೃಹ್ಯಂತೇ ನವಭಿರ್ಬಹಿಷ್ಪವಮಾನೇ ಸ್ತುವತೇ ಸ್ತುತೇ ಸ್ತೋಮೇ ದಶಮಂ ಗೃಹ್ಣಾತಿ । ಐ. ಬ್ರಾ. ೩-೧ । ಇತಿ । ಅನ್ಯತ್ರಾಪ್ಯಾಮ್ನಾತಂ । ದಶೈತಾನಧ್ವರ್ಯುಃ ಪ್ರಾತಃಸವನೇ ಗ್ರಹಾನ್ ಗೃಹ್ಣಾತೀತಿ । ತದಭಿಪ್ರಾಯೇಣೇದಂ ದಶಯಂತ್ರಮಿತಿ ವಿಶೇಷಣಂ ॥

॥ಪ್ರತಿಪದಾರ್ಥ ॥

**ಅಯಂ**—ಈ ಸೋಮನು । **ದ್ಯಾವಾಪೃಥಿವೀ**—ದ್ಯಾವಾಪೃಥಿವಿಗಳನ್ನು । **ವಿ ಷ್ಕಭಾಯತ್**—ವೈಯಕ್ತಿಕವಾಗಿ ಸ್ಥಾಪಿಸಿದನು । **ಅಯಂ**—ಈ ಸೋಮನು । **ರಥಂ**—ಸೂರ್ಯನ ರಥವನ್ನು । **ಸಪ್ತರಶ್ಮಿಂ**—

ಸಪ್ತರಶ್ಮಿ (ಕಿರಣ ಅಥವಾ ಚಕ್ರ) ಗಳುಳ್ಳದ್ದನ್ನಾಗಿ | **ಅಯುನಕ್**— ಯೋಜಿಸಿದನು | **ಅಯಂ ಸೋಮಃ**—ಇದೇ ಸೋಮನು | **ಗೋಷು ಅಂತಃ**— ಗೋವುಗಳ ದೇಹದಲ್ಲಿ | **ಶಚ್ಯಾ**—ತನ್ನ ಸಂಕಲ್ಪರೂಪವಾದ ಪ್ರಜ್ಞೆಯಿಂದ | **ಉತ್ಸಂ**—ಪ್ರಸಿಸತಕ್ಕದ್ದೂ | **ದಶಯಂತ್ರಂ**—ದಶಯಂತ್ರಾತ್ಮಕವಾದುದೂ | **ಪಕ್ವಂ**— ಪಕ್ವವಾದುದೂ ಆದ ಹಾಲನ್ನು | **ದಾಧಾರ**—ತುಂಬಿದ್ದಾನೆ.

॥ ಭಾವಾರ್ಥ ॥

ಈ ಸೋಮನು ದ್ಯಾವಾಪೃಥಿವಿಗಳನ್ನು ಪೈಯಕ್ತಿಕವಾಗಿ ಸ್ಥಾಪಿಸಿದನು. ಇದೇ ಸೋಮನು ಸೂರ್ಯನ ರಥವನ್ನು ಸಪ್ತರಶ್ಮಿಗಳುಳ್ಳದ್ದನ್ನಾಗಿ ಮಾಡಿದನು. ಮತ್ತು ತನ್ನ ಸಂಕಲ್ಪರೂಪವಾದ ಪ್ರಜ್ಞೆಯಿಂದ ಗೋವುಗಳ ದೇಹದಲ್ಲಿ ಪ್ರಸಿಸತಕ್ಕದ್ದೂ ದಶಯಂತ್ರಾತ್ಮಕವಾದುದೂ, ಪಕ್ವವಾದುದೂ ಆದ ಹಾಲನ್ನು ತುಂಬಿದ್ದಾನೆ.

English Translation.

This (Soma) has fixed heaven and earth: this has harnessed the seven-rayed chariot (of the sun): this Soma has developed of its own will the mature deeply-organized secretion in the cows.

॥ ವಿಶೇಷವಿಷಯಗಳು ॥

ಈ ಸೂಕ್ತದ ಕೊನೆಯಲ್ಲಿ ಪಠಿಸಬೇಕಾದ ಪರಿಶಿಷ್ಟಮಂತ್ರಗಳನ್ನು ಈ ಮಂಡಲದ ಕೊನೆಯಲ್ಲಿ ಕೊಟ್ಟಿದೆ.



# ನಲವತ್ತೈದನೆಯ ಸೂಕ್ತವು

॥ ಸಾಯಣಭಾಷ್ಯಂ ॥

**ಯ ಆನಯದಿತಿ ತ್ರಯಸ್ತ್ರಿಂಶದೃಚಂ ದ್ವಿತೀಯಂ ಸೂಕ್ತಂ ಬೃಹಸ್ಪತಿಪುತ್ರಸ್ಯ ಶಂಯೋರಾರ್ಷಂ। ಪುರೂತಮಮಿತ್ಯೇಷಾತಿನಿಚೃತ್ ತ್ರಯಃ ಸಪ್ತಕಾಃ ಪಾದನಿಚೃತ್ ಮಧ್ಯಮಃ ಷಟ್ಕಶ್ಚೇದತಿನಿಚೃದಿತ್ಯುಕ್ತ-ಲಕ್ಷಣಾತ್ ತ್ರಯಸ್ತ್ರಿಂಶ್ಯನುಷ್ಟುಪ್ ಶಿಷ್ಟಾ ಗಾಯತ್ರ್ಯಃ। ಅಧಿ ಬೃಬುಃ ಪಣೀನಾಮಿತ್ಯಸ್ಮಿನ್ನಂತ್ಯೇ ತೃಚೇ ಬೃಬುರ್ನಾಮ ತಕ್ಷಾ ಸ್ತೂಯತೇ। ಅತಃ ಸ ತೃಚಸ್ತದ್ದೇವತಾಕಃ। ಶಿಷ್ಟಾಸ್ತ್ರಿಂಶದೈಂದ್ರ್ಯಃ। ತಥಾ ಚಾನುಕ್ರಾಂತಂ। ಯ ಆನಯತ್ತ್ರಯಸ್ತ್ರಿಂಶದ್ಗಾಯತ್ರಂ ಪುರೂತಮಮತಿನಿಚೃದಂತ್ಯಾನುಷ್ಟುಪ್ ತೃಚೇಽಂತ್ಯೇ ಬೃಬುಸ್ತಕ್ಷಾ ದೈವತಮಿತಿ ॥ ಮಹಾವ್ರತೇಽಪಿ ನಿಷ್ಕೇವಲ್ಯೇಽಂತ್ಯತೃಚವರ್ಜಮೇ-ತತ್ಸೂಕ್ತಂ। ತಥೈವ ಪಂಚಮಾರಣ್ಯಕಂ। ಯ ಆನಯತ್ಪರಾವತ ಇತಿ ತಿಸ್ರ ಉತ್ತಮಾ ಉದ್ಧರತಿ ॥ ಐ. ಆ. ೫-೨-೫ । ಇತಿ ॥**

ಅನುವಾದವು — **ಯ ಆನಯತ್** ಎಂಬ ಈ ಸೂಕ್ತವು ನಾಲ್ಕನೆಯ ಅನುವಾಕದಲ್ಲಿ ಎರಡನೆಯ ಸೂಕ್ತವು. ಇದರಲ್ಲಿ ಮೂವತ್ತುಮೂರು ಋಕ್ಕುಗಳಿರುವುವು. ಈ ಸೂಕ್ತಕ್ಕೆ ಬೃಹಸ್ಪತಿಪುತ್ರನಾದ ಶಂಯುವೆಂಬುವನು ಋಷಿಯು; ಈ ಸೂಕ್ತದ **ಪುರೂತಮಂ** ಎಂಬ (೨೯ ನೇ ಋಕ್ಕು) ಅತಿನಿಚೃತ್ ಎಂಬ ಛಂದಸ್ಸಿನದು. ಏಳೇಳು ಅಕ್ಷರಗಳ ಮೂರು ಪಾದಗಳುಳ್ಳ ಋಕ್ಕು ಪಾದನಿಚೃತ್‌ಛಂದಸ್ಸೆಂದು ಹೇಳಲ್ಪಡುವುದು. ಎರಡು ಪಾದಗಳಲ್ಲಿ ಎಂದರೆ ಮೊದಲು

ಮತ್ತು ಕೊನೆಯ ಪಾದಗಳಲ್ಲಿ ಏಳೇಳು ಅಕ್ಷರಗಳಿದ್ದು ಮಧ್ಯದ ಪಾದವಲ್ಲಿ ಆರು ಅಕ್ಷರಗಳಿದ್ದರೆ ಅದು ಅತಿನಿಚೃತ್ ಛಂದಸ್ಸೆನಿಸುವುದು. ಮೂವತ್ತಮೂರನೆಯ ಋಕ್ಕು ಅನುಷ್ಟುಪ್‌ಛಂದಸ್ಕವು. ಉಳಿದ ಋಕ್ಕುಗಳು ಗಾಯತ್ರೀ ಛಂದಸ್ಕವು. **ಅಧಿ ಬೃಬುಃ ಪಣೀನಾಂ** ಎಂದು ಮೊದಲಾಗುವ ಕೊನೆಯ ಮೂರು ಋಕ್ಕುಗಳಲ್ಲಿ ಬೃಬು ಎಂಬ ತಕ್ಷನು ಸ್ತುತಿಸಲ್ಪಡುವುದರಿಂದ ಆ ಮೂರು ಋಕ್ಕುಗಳಿಗೆ ಬೃಬುವೇ ದೇವತೆಯು; ಉಳಿದ ಮೂವತ್ತು ಋಕ್ಕುಗಳಿಗೂ ಇಂದ್ರನೇ ದೇವತೆಯು ; ಅನುಕ್ರಮಣಿಕೆಯಲ್ಲಿ—**ಯ ಆನಯತ್ತ್ರಯಸ್ತ್ರಿಂಶದ್ಗಾಯತ್ರಂ ಪುರೂಣಿಮುಮತಿ-ನಿಚೃದಂತ್ಯಾನುಷ್ಟುಪ್ ತೃಚೇಽನ್ತ್ಯೇ ಬೃಬುಸ್ತಕ್ಷಾ ದೈವತಂ** ಎಂದು ಹೇಳಿರುವುದು. ಮಹಾವ್ರತೇಷ್ಟಿಯಲ್ಲಿ ನಿಷ್ಕೇವಲ್ಯಶಸ್ತ್ರಮಂತ್ರಗಳಿಗಾಗಿ ಈ ಸೂಕ್ತದ ಕೊನೆಯ ಮೂರು ಋಕ್ಕುಗಳನ್ನು ಬಿಟ್ಟು ಉಳಿದ ಋಕ್ಕುಗಳ ವಿನಿಯೋಗವಿರುವುದೆಂದು ಐತರೇಯಾರಣ್ಯಕದ ಪಂಚಮಾರಣ್ಯಕದಲ್ಲಿ—**ಯ ಆನಯತ್ಪರಾವತ ಇತಿ ತಿಸ್ರ ಉತ್ತಮಾ ಉದ್ಧರತಿ** ಎಂಬ ವಾಕ್ಯದಿಂದ (ಐ. ಆ. ೫-೨-೫) ನಿರ್ದಿಷ್ಟವಾಗಿರುವುದು.

## ಸೂಕ್ತ—೪೫

ಮಂಡಲ—೬ ॥ ಅನುವಾಕ—೪ ॥ ಸೂಕ್ತ—೪೫ ॥

ಅಷ್ಟಕ—೪ ॥ ಅಧ್ಯಾಯ—೭ ॥ ವರ್ಗ—೨೧, ೨೨, ೨೩, ೨೪, ೨೫, ೨೬ ॥

॥ ಸೂಕ್ತದಲ್ಲಿರುವ ಋಕ್ಸಂಖ್ಯೆ—೩೩ ॥

॥ ಋಷಿಃ—ಶಂಯುರ್ಬಾರ್ಹಸ್ಪತ್ಯಃ ॥

॥ ದೇವತಾ—೧-೩೦. ಇಂದ್ರಃ । ೩೧-೩೩. ಬೃಬುಸ್ತಕ್ಷಾ ॥

॥ ಛಂದಃ—೧-೨೮, ೩೦-೩೨. ಗಾಯತ್ರೀ । ೨೯. ಅತಿನಿಚೃತ್ । ೩೩. ಅನುಷ್ಟುಪ್ ॥

॥ ಸಂಹಿತಾಪಾಠಃ ॥

ಯ ಆನಯತ್ಪರಾವತಃ ಸುನೀತೀ ತುರ್ವಶಂ ಯದುಂ ।

ಇಂದ್ರಃ ಸ ನೋ ಯುವಾ ಸಖಾ ॥ ೧ ॥

॥ ಪದಪಾಠಃ ॥

ಯಃ । ಆ । ಅನಯತ್ । ಪರಾಽವತಃ । ಸುಽನೀತೀ । ತುರ್ವಶಂ । ಯದುಂ ॥

ಇಂದ್ರಃ । ಸಃ । ನಃ । ಯುವಾ । ಸಖಾ ॥ ೧ ॥

॥ ಸಾಯಣಭಾಷ್ಯಂ ॥

ಯ ಇಂದ್ರಸ್ತುರ್ವಶಂ ಯದುಂ ಚೈತತ್ಸಂಜ್ಞೌ ರಾಜಾನೌ ಶತ್ರುಭಿರ್ದೂರದೇಶೇ ಪ್ರಕ್ಷಿಪ್ತೌ ಸುನೀತೀ ಸುನೀತ್ಯಾ ಶೋಭನೇನ ನಯನೇನ ಪರಾವತಸ್ತಸ್ಮಾದ್ದೂರದೇಶಾದಾನಯತ್ ಆನೀತವಾನ್ ಯುವಾ ತರುಣಃ ಸ ಇಂದ್ರೋ ನೋಽಸ್ಮಾಕಂ ಸಖಾ ಭವತು ॥

॥ ಪ್ರತಿಪದಾರ್ಥ ॥

**ಯಃ**—ಯಾವ ಇಂದ್ರನು । **ತುರ್ವಶಂ**—ತುರ್ವಶನೆಂಬ ಹೆಸರುಳ್ಳವನೂ । **ಯದುಂ**—ಯದು ನಾಮಕನೂ ಆದ ಇಬ್ಬರು ರಾಜರನ್ನು । **ಸುನೀತೀ**—ತನ್ನ ಉತ್ತಮವಾದ ಮಾರ್ಗದರ್ಶಿತ್ವದಿಂದ । **ಪರಾವತಃ**—ಅತ್ಯಂತ ದೂರ ದೇಶದಿಂದ । **ಆ ಅನಯತ್**—ಕರೆತಂದನೋ । **ಯುವಾ**—ತರುಣನಾದ । **ಸ ಇಂದ್ರಃ**—ಅದೇ ಇಂದ್ರನು । **ನಃ**—ನಮಗೆ । **ಸಖಾ**—ಸ್ನೇಹಿತನಾಗಿರಲಿ.

॥ ಭಾವಾರ್ಥ ॥

ಯಾವ ಇಂದ್ರನು ತುರ್ವಶ ಮತ್ತು ಯದು ಎಂಬ ಹೆಸರುಳ್ಳ ಇಬ್ಬರು ರಾಜರನ್ನು ತನ್ನ ಉತ್ತಮವಾದ ಮಾರ್ಗದರ್ಶಿತ್ವದಿಂದ ಅತ್ಯಂತ ದೂರ ದೇಶದಿಂದ ಕರೆತಂದನೋ ತರುಣನಾದ ಅದೇ ಇಂದ್ರನು ನಮಗೂ ಸಖನಾಗಿರಲಿ.

English Translation.

May that youthful Indra, who by good guidance, brought Turvasa and Yadu from afar, (be) our friend.

॥ ಸಂಹಿತಾಪಾಠಃ ॥

ಅವಿಪ್ರೇ ಚಿದ್ವಯೋ ದಧದನಾಶುನಾ ಚಿದರ್ವತಾ ।
ಇಂದ್ರೋ ಜೇತಾ ಹಿತಂ ಧನಂ ॥ ೨ ॥

॥ ಪದಪಾಠಃ ॥

**ಅವಿಪ್ರೇ । ಚಿತ್ । ವಯಃ । ದಧತ್ । ಅನಾಶುನಾ । ಚಿತ್ । ಅರ್ವತಾ ॥**
**ಇಂದ್ರಃ । ಜೇತಾ । ಹಿತಂ । ಧನಂ ॥ ೨ ॥**

॥ ಸಾಯಣಭಾಷ್ಯಂ ॥

**ಅವಿಪ್ರೇ ಚಿತ್ । ವಿಪ್ರಃ ಸ್ತೋತಾ । ತದ್ವಿಲಕ್ಷಣೇಽಪಿ ಪುರುಷೇ ವಯೋಽನ್ನಂ ದಧತ್ । ಇಂದ್ರೋ ಧಾರಯತಿ । ಕಿಮು ವಕ್ತವ್ಯಂ ಸ್ತೋತರಿ ಧಾರಯತೀತಿ । ಸ ಇಂದ್ರೋಽನಾಶುನಾ ಚಿತ್ ಅಕ್ಷಿಪ್ರಗಮನೇನಾಪ್ಯರ್ವತಾಶ್ವೇನ ಹಿತಂ ಶತ್ರುಷು ನಿಹಿತಂ ಸ್ಥಾಪಿತಂ ಧನಂ ಜೇತಾ ಜಯಶೀಲೋ ಭವತಿ ॥ ಜಯತೇಸ್ತಾಚ್ಛೀಲಿಕಸ್ತೃನ್ । ಅತೋ ನ ಲೋಕಾವ್ಯಯೇತಿ ಷಷ್ಠೀಪ್ರತಿಷೇಧಃ ॥**

॥ ಪ್ರತಿಪದಾರ್ಥ ॥

ಇಂದ್ರಃ—ಇಂದ್ರನು । **ಅವಿಪ್ರೇ ಚಿತ್**—ಸ್ತುತಿಕರ್ತನಲ್ಲದ ಪುರುಷನಿಗೂ ಸಹ । **ವಯಃ**—ಅನ್ನವನ್ನು । **ದಧತ್**—ಕೊಡುತ್ತಾನೆ । **ಅನಾಶುನಾ ಅರ್ವತಾ ಚಿತ್**—ಶೀಘ್ರವಾಗಿ ನಡೆಯದೇ ಇರುವ

ಅಶ್ವದೊಡನೆ ಹೋಗುತ್ತಿದ್ದರೂ ಸಹ | **ಹಿತಂ**— ಶತ್ರುಗಳಲ್ಲಿ ಸ್ಥಾಪಿತವಾದ | **ಧನಂ**— ಧನವನ್ನು | **ಜೇತಾ**— ತನ್ನ ಸ್ವಾಧೀನ ಮಾಡಿಕೊಳ್ಳುತ್ತಾನೆ.

‖ ಭಾವಾರ್ಥ ‖

ಇಂದ್ರನು ಸ್ತುತಿಕರ್ತನಲ್ಲದ ಪುರುಷನಿಗೂ ಸಹ ಅನ್ನವನ್ನು ಕೊಡುತ್ತಾನೆ. ಶೀಘ್ರವಾಗಿ ನಡೆಯದೇ ಇರುವ ಅಶ್ವದೊಡನೆ ಹೋಗುತ್ತಿದ್ದರೂ ಸಹ ಶತ್ರುಗಳಲ್ಲಿ ಸ್ಥಾಪಿತವಾದ ಧನವನ್ನು ತನ್ನ ಸ್ವಾಧೀನಮಾಡಿಕೊಳ್ಳುತ್ತಾನೆ.

## English Translation.

Indra gives sustenance, even to the undevout : he is the conqueror of wealth accumulated (by enemies), through (going against) them with a slow-paced steed.

‖ ಸಂಹಿತಾಪಾಠಃ ‖

ಮಹೀರಸ್ಯ ಪ್ರಣೀತಯಃ ಪೂರ್ವೀರುತ ಪ್ರಶಸ್ತಯಃ |

ನಾಸ್ಯ ಕ್ಷೀಯಂತ ಊತಯಃ ‖ ೩ ‖

‖ ಪದಪಾಠಃ ‖

ಮಹೀಃ | ಅಸ್ಯ | ಪ್ರऽನೀತಯಃ | ಪೂರ್ವೀಃ | ಉತ | ಪ್ರऽಶಸ್ತಯಃ |

ನ | ಅಸ್ಯ | ಕ್ಷೀಯಂತೇ | ಊತಯಃ ‖ ೩ ‖

‖ ಸಾಯಣಭಾಷ್ಯಂ ‖

**ಅಸ್ಯೇಂದ್ರಸ್ಯ ಪ್ರಣೀತಯಃ ಪ್ರಕೃಷ್ಟಾ ನೀತಯಃ ಪ್ರಾಪಣಾನಿ ಮಹೀರ್ಮಹ್ಯೋ ಮಹತ್ಯೋ ಭವಂತಿ | ಉತಾಪಿ ಚ ಪ್ರಶಸ್ತಯಃ ಪ್ರಕೃಷ್ಟಾಃ ಸ್ತುತಯಃ ಸ್ತೋತೃಭಿಃ ಕ್ರಿಯಮಾಣಾಃ ಪೂರ್ವೀರ್ಬಹ್ವ್ಯೋ ಭವಂತಿ | ತಥಾಸ್ಯೇಂದ್ರಸ್ಯೋತಯೋ ರಕ್ಷಾ ನ ಕ್ಷೀಯಂತೇ | ನಾಪಚೀಯಂತೇ ಕಿಂತು ಸರ್ವದಾ ವರ್ಧಂತ ಏವ ‖**

‖ ಪ್ರತಿಪದಾರ್ಥ ‖

**ಅಸ್ಯ**— ಇಂದ್ರನ | **ಪ್ರಣೀತಯಃ**— ಉತ್ತಮವಾದ ಕುಶಲನೀತಿಗಳು | **ಮಹೀಃ**— ಮಾಹಾತ್ಮ್ಯವುಳ್ಳವಾಗಿವೆ | **ಉತ**— ಮತ್ತು | **ಪ್ರಶಸ್ತಯಃ**— ಸ್ತುತಿರೂಪವಾದ ಕ್ರಿಯೆಗಳು | **ಪೂರ್ವೀಃ**— ಅನೇಕವಾಗಿವೆ | **ಅಸ್ಯ**— ಅದೇ ಇಂದ್ರನ | **ಊತಯಃ**— ರಕ್ಷಣೆಗಳು | **ನ ಕ್ಷೀಯಂತೇ**— ನಾಶವನ್ನು ಹೊಂದುವುದಿಲ್ಲ.

‖ ಭಾವಾರ್ಥ ‖

ಇಂದ್ರನ ಉತ್ತಮವಾದ ಕುಶಲನೀತಿಗಳು ಅತ್ಯಂತ ಮಾಹಾತ್ಮ್ಯವುಳ್ಳವಾಗಿವೆ. ಅವನನ್ನು ಸ್ತುತಿಸತಕ್ಕ ಕ್ರಮವೂ ಅನೇಕವಾಗಿವೆ. ಇಂದ್ರನ ರಕ್ಷಣೆಗಳಿಗೆ ನಾಶವೇ ಇಲ್ಲ.

English Translation.

Vast are his designs, manifold are his praises, his protections are never withdrawn,

॥ ಸಂಹಿತಾಪಾಠಃ ॥

ಸಖಾಯೋ ಬ್ರಹ್ಮವಾಹಸೇಽರ್ಚತ ಪ್ರ ಚ ಗಾಯತ ।
ಸ ಹಿ ನಃ ಪ್ರಮತಿರ್ಮಹೀ ॥ ೪ ॥

॥ ಪದಪಾಠಃ ॥

ಸಖಾಯಃ । ಬ್ರಹ್ಮಽವಾಹಸೇ । ಅರ್ಚತ । ಪ್ರ । ಚ । ಗಾಯತ ॥
ಸ । ಹಿ । ನಃ । ಪ್ರಽಮತಿಃ । ಮಹೀ ॥ ೪ ॥

॥ ಸಾಯಣಭಾಷ್ಯಂ ॥

**ಹೇ ಸಖಾಯಃ ಸಮಾನಖ್ಯಾನಾಃ ಸ್ತೋತಾರೋ ಬ್ರಹ್ಮವಾಹಸೇ ಬ್ರಹ್ಮಭಿರ್ಮಂತ್ರೈರ್ವಹನೀಯಾಯ ಪ್ರಾಪ್ತವ್ಯಾಯೇಂದ್ರಾಯಾರ್ಚತ । ಶಸ್ತ್ರಾಣಿ ಶಂಸತ । ಪ್ರ ಗಾಯತ ಚ ಸ್ತೋತ್ರಾಣಿ । ಸ ಹಿ ಸ ಖಲ್ವಿಂದ್ರೋ ನೋಽಸ್ಮಾಕಂ ಮಹೀ ಮಹತೀ ಪ್ರಮತಿಃ ಪ್ರಕೃಷ್ಟಾ ಬುದ್ಧಿಃ । ಈದೃಶ್ಯಾ ಬುದ್ಧೇಃ ಪ್ರದಾತೇತ್ಯರ್ಥಃ ॥**

॥ ಪ್ರತಿಪದಾರ್ಥ ॥

**ಸಖಾಯಃ**—ಎಲೈ ಸ್ತೋತೃಗಳೇ । **ಬ್ರಹ್ಮವಾಹಸೇ**—ಸ್ತುತಿಯಿಂದಲೇ ಸಮೀಪಿಸಲು ಯೋಗ್ಯನಾದ ಇಂದ್ರನನ್ನು ಕುರಿತು । **ಅರ್ಚತ**—ಶಸ್ತ್ರಮಂತ್ರಗಳನ್ನು ಪಠಿಸಿ ಪೂಜಿಸಿರಿ । **ಪ್ರ ಗಾಯತ**—ಸ್ತುತಿಗಳನ್ನು ಪಠಿಸಿರಿ । **ಸ ಹಿ**—ಅದೇ ಇಂದ್ರನು । **ನಃ**—ನಮಗೆ । **ಮಹೀ**—ಮಹತ್ವವುಳ್ಳದ್ದೂ । **ಪ್ರಮತಿಃ**—ಉತ್ತಮವೂ ಆದ ಬುದ್ಧಿಪ್ರದನಾಗಿದ್ದಾನೆ.

॥ ಭಾವಾರ್ಥ ॥

ಸಖಿಭೂತರಾದ ಎಲೈ ಸ್ತೋತೃಗಳೇ, ಸ್ತುತಿಯಿಂದಲೇ ಸಮೀಪಿಸಲು ಯೋಗ್ಯನಾದ ಇಂದ್ರನನ್ನು ಕುರಿತು ಶಸ್ತ್ರಮಂತ್ರಗಳನ್ನು ಪಠಿಸಿ ಪೂಜಿಸಿರಿ. ಸ್ತೋತ್ರಗಳಿಂದ ಗಾನಮಾಡಿರಿ. ಅದೇ ಇಂದ್ರನು ನಮಗೆ ಮಹತ್ವವುಳ್ಳದ್ದೂ ಉತ್ತಮವೂ ಆದ ಬುದ್ಧಿಪ್ರದನಾಗಿದ್ದಾನೆ.

English Translation.

Offer worship and praises, friends, to him who is to be attracted by prayers; for he verily is our great intelligence.

॥ ಸಂಹಿತಾಪಾಠಃ ॥

ತ್ವಮೇಕಸ್ಯ ವೃತ್ರಹನ್ನವಿತಾ ದ್ವಯೋರಸಿ ।

ಉತೇದೃಶೇ ಯಥಾ ವಯಂ ॥ ೫ ॥

॥ ಪದಪಾಠಃ ॥

ತ್ವಂ । ಏಕಸ್ಯ । ವೃತ್ರಽಹನ್ । ಅವಿತಾ । ದ್ವಯೋಃ । ಅಸಿ ॥

ಉತ । ಈದೃಶೇ । ಯಥಾ । ವಯಂ ॥ ೫ ॥

॥ ಸಾಯಣಭಾಷ್ಯಂ ॥

**ಹೇ ವೃತ್ರಹನ್ ವೃತ್ರಾಣಾಂ ಶತ್ರೂಣಾಂ ಹಂತರಿಂದ್ರ ತ್ವಮೇಕಸ್ಯ ಸ್ತೋತುರ್ದ್ವಯೋಶ್ಚ ಸ್ತೋತ್ರೋರವಿತಾ ರಕ್ಷಿತಾಸಿ । ಸರ್ವೇಷಾಂ ಸ್ತೋತೃಣಾಂ ರಕ್ಷಕೋ ಭವಸೀತ್ಯರ್ಥಃ । ಉತಾಪಿ ಚೇದೃಶೇ ಜನೇಽಪ್ಯವಿತಾ ಭವಸಿ ಯಥಾ ಯಾದೃಶಾ ವಯಂ ತ್ವಯಾ ರಕ್ಷಿತಾ ಬಹುವಿಧಪುತ್ರಪೌತ್ರಾ ಅಭೂಮ । ಈದೃಶಸ್ಯಾಪಿ ಜನಸ್ಯ ತ್ವಮೇವ ರಕ್ಷಕೋ ನಾನ್ಯ ಇತ್ಯರ್ಥಃ ॥**

॥ ಪ್ರತಿಪದಾರ್ಥ ॥

**ವೃತ್ರಹನ್**—ಶತ್ರುನಾಶಕನಾದ ಎಲೈ ಇಂದ್ರನೇ । **ತ್ವಂ**—ನೀನು । **ಏಕಸ್ಯ**—ಒಬ್ಬಂಟಿಗನಾದ ಸ್ತೋತೃವಿಗೂ । **ದ್ವಯೋಃ**—ಜೊತೆಯಲ್ಲಿರುವ ಇಬ್ಬರು ಸ್ತೋತೃಗಳಿಗೂ । **ಅವಿತಾ**—ರಕ್ಷಕನಾಗಿ । **ಅಸಿ**—ಆಗಿದ್ದೀಯೆ । **ಉತ**—ಮತ್ತು । **ಯಥಾ**—ಯಾವ ನಿನ್ನ ಭಕ್ತರಾಗಿ । **ವಯಂ**—ನಾವಿರುವೆವೋ ಅಂತಹ । **ಈದೃಶೇ**—ನಮ್ಮಂತಹ ಜನರಿಗೂ ರಕ್ಷಕನಾಗಿದ್ದೀಯೆ.

॥ ಭಾವಾರ್ಥ ॥

ಶತ್ರುನಾಶಕನಾದ ಎಲೈ ಇಂದ್ರನೇ, ನಿನ್ನ ಸ್ತೋತೃವು ಒಬ್ಬಂಟಿಗನಾಗಿರಲಿ ಅಥವಾ ಇಬ್ಬರು ಒಟ್ಟಿಗೆ ಸೇರಿರಲಿ, ಅವರಿಗೆಲ್ಲಾ ನೀನು ರಕ್ಷಕನಾಗಿರುವೆ. ನಿನ್ನ ಸ್ತುತಿಕರ್ತರಾದ ನಮ್ಮಂತಹ ಭಕ್ತರಿಗೂ ರಕ್ಷಕನಾಗಿರುವೆ.

English Translation.

Slayer of Vritra, you are the protector of one (adorer), or of two, and of such as we are.

॥ ಸಂಹಿತಾಪಾಠಃ ॥

ನಯಸೀದ್ವತಿ ದ್ವಿಷಃ ಕೃಣೋಷ್ಯುಕ್ಥಶಂಸಿನಃ ।

ನೃಭಿಃ ಸುವೀರ ಉಚ್ಯಸೇ ॥ ೬ ॥

॥ ಪದಪಾಠಃ ॥

**ನಯಸಿ । ಇತ್ । ಊಂ ಇತಿ । ಅತಿ । ದ್ವಿಷಃ । ಕೃಣೋಷಿ । ಉಕ್ಥಽಶಂಸಿನಃ ।**

**ನೃಽಭಿಃ । ಸುಽವೀರಃ । ಉಚ್ಯಸೇ ॥ ೬ ॥**

॥ ಸಾಯಣಭಾಷ್ಯಂ ॥

**ಹೇ ಇಂದ್ರೇತ್ ತ್ವಮೇವ ದ್ವಿಷೋ ದ್ವೇಷ್ಟ್ರ್ನತಿ ನಯಸಿ । ಅಸ್ಮಾನ್ನಯಸಿ । ತಾರಯಸಿ । ಉ ಇತಿ ಪೂರಕಃ । ತಥೋಕ್ಥಶಂಸಿನ ಉಕ್ಥಾನಿ ಶಸ್ತ್ರಾಣಿ ಶಂಸತಃ ಸ್ತೋತೄನಸ್ಮಾನ್ಕೃಣೋಷಿ । ಸಮೃದ್ಧಾನ್ಕರೋಷಿ । ಯಸ್ಮಾತ್ತ್ವಂ ನೃಭಿಃ ಸ್ತುತೀನಾಂ ನೇತೃಭಿಃ ಪುರುಷೈಃ ಸುವೀರಃ ಶೋಭನೈ-ರ್ವೀರೈಃ ಪುತ್ರಪೌತ್ರಾದಿಭಿಃ ಸ್ತೋತೃಭ್ಯೋ ದಾತವ್ಯೈರುಪೇತ ಇತ್ಯುಚ್ಯಸೇ ಸ್ತೂಯಸೇ ಅತಸ್ತಾನ-ಸ್ಮಸ್ಮಭ್ಯಂ ಪ್ರಯಚ್ಛೇತಿ ಶೇಷಃ ॥**

॥ ಪ್ರತಿಪದಾರ್ಥ ॥

ಎಲೈ ಇಂದ್ರನೇ) **ಇತ್**—ನೀನೇ । **ದ್ವಿಷಃ**—ನಮ್ಮನ್ನು ದ್ವೇಷಿಸುವವರನ್ನು । **ಅತಿ ನಯಸಿ**—ನಮ್ಮಿಂದ ದೂರಕ್ಕೆ ಅಟ್ಟುತ್ತೀಯೆ । **ಉಕ್ಥಶಂಸಿನಃ**—ಉಕ್ಥಮಂತ್ರದ ಪಠನದಿಂದ ನಿನ್ನನ್ನು ಸ್ತುತಿಸುವವರನ್ನು । **ಕೃಣೋಷಿ**—ನೀನು ಸಮೃದ್ಧರನ್ನಾಗಿ ಮಾಡುತ್ತೀಯೆ । **ಸುವೀರಃ**—ಶ್ರೇಷ್ಠರಾದ ವೀರಪುತ್ರಾದಿಗಳನ್ನನುಗ್ರಹಿಸುವ ನೀನು । **ನೃಭಿಃ**—ಸ್ತುತಿಕರ್ತರಿಂದ । **ಉಚ್ಯಸೇ**—ಪ್ರಶಂಸಿಸಲ್ಪಡುತ್ತೀಯೆ.

॥ ಭಾವಾರ್ಥ ॥

ಎಲೈ ಇಂದ್ರನೇ, ನಮ್ಮನ್ನು ದ್ವೇಷಿಸತಕ್ಕವರನ್ನು ನೀನೇ ನಮ್ಮಿಂದ ದೂರಕ್ಕೆ ಅಟ್ಟುತ್ತೀಯೆ. ಉಕ್ಥಮಂತ್ರದ ಪಠನದಿಂದ ನಿನ್ನನ್ನು ಸ್ತುತಿಸುವವರನ್ನು ನೀನು ಸಮೃದ್ಧರನ್ನಾಗಿ ಮಾಡುತ್ತೀಯೆ. ಶ್ರೇಷ್ಠರಾದ ವೀರಪುತ್ರಾದಿಗಳನ್ನನುಗ್ರಹಿಸುವ ನೀನು ಸ್ತುತಿಕರ್ತರಿಂದ ಪ್ರಶಂಸಿಸಲ್ಪಡುತ್ತೀಯೆ.

English Translation.

Remove (from us) those who hate us: prosper those who repeat your praise: bestower of excellent male descendants, you are glorified by men.

॥ ಸಂಹಿತಾಪಾಠಃ ॥

ಬ್ರಹ್ಮಾಣಂ ಬ್ರಹ್ಮವಾಹಸಂ ಗೀರ್ಭಿಃ ಸಖಾಯಮೃಗ್ಮಿಯಂ ।

ಗಾಂ ನ ದೋಹಸೇ ಹುವೇ ॥ ೭ ॥

॥ ಪದಪಾಠಃ ॥

ಬ್ರಹ್ಮಾಣಂ । ಬ್ರಹ್ಮಽವಾಹಸಂ । ಗೀಃಽಭಿಃ । ಸಖಾಯಂ । ಋಗ್ಮಿಯಂ ।

ಗಾಂ । ನ । ದೋಹಸೇ । ಹುವೇ ॥ ೭ ॥

॥ ಸಾಯಣಭಾಷ್ಯಂ ॥

ಬ್ರಹ್ಮಾಣಂ ಪರಿವೃಢಂ ಬ್ರಹ್ಮವಾಹಸಂ ಬ್ರಹ್ಮಭಿಃ ಸ್ತುತಿರೂಪೈರ್ಮಂತ್ರೈರ್ವಹನೀಯಂ ಸಖಾಯಮಸ್ಮಾಕಂ ಸಖಿಭೂತಮೃಗ್ಮಿಯಂ । ಋಗ್ಮಾ ಋಚಃ । ತದರ್ಹಂ । ಸ್ತುತ್ಯರ್ಹಮಿತ್ಯರ್ಥಃ । ಏವಂಭೂತಮಿಂದ್ರಂ ದೋಹಸೇ ದೋಗ್ಧುಂ ಗಾಂ ನ ಗಾಮಿವ ಗೀರ್ಭಿಃ ಸ್ತುತಿಭಿರ್ಹುವೇ । ಆಹ್ವಯಾಮ್ಯಸ್ಮದೀಯಾನ್ಕಾಮಾನ್ದೋಗ್ಧುಂ ॥

॥ ಪ್ರತಿಪದಾರ್ಥ ॥

**ಬ್ರಹ್ಮಾಣಂ**—ಬೃಹದ್ರೂಪನೂ । **ಬ್ರಹ್ಮವಾಹಸಂ**-ಸ್ತುತಿಯಿಂದ ವಹಿಸಲ್ಪಡತಕ್ಕವನೂ । **ಸಖಾಯಂ**—ಸಖಿಭೂತನೂ । **ಋಗ್ಮಿಯಂ**—ಸ್ತುತ್ಯರ್ಹನೂ ಆದ ಇಂದ್ರನನ್ನು । **ಗಾಂ ನ**—ಗೋವನ್ನು ಕರೆಯುವಂತೆ । **ದೋಹಸೇ**—ಆ ಇಂದ್ರನ ಸಂಪತ್ತನ್ನು ಕರೆಯಲು । **ಗೀರ್ಭಿಃ**—ಸ್ತುತಿಗಳಿಂದ । **ಹುವೇ**—ಕರೆಯುತ್ತೇನೆ.

॥ ಭಾವಾರ್ಥ ॥

ಬ್ರಹ್ಮರೂಪನೂ ಸ್ತುತಿಯಿಂದ ವಹಿಸಲ್ಪಡತಕ್ಕವನೂ, ಸಖಿಭೂತನೂ ಸ್ತುತ್ಯರ್ಹನೂ ಆದ ಇಂದ್ರನನ್ನು ಗೋವಿನಿಂದ ಹಾಲನ್ನು ಕರೆಯುವಂತೆ ಅವನಿಂದ ಸಂಪತ್ತನ್ನು ಕರೆಯಲು ಸ್ತುತಿಗಳಿಂದ ಪ್ರಾರ್ಥಿಸಿ ಕರೆಯುತ್ತೇನೆ.

## English Translation.

I invoke with hymns Indra, our friend, who is Brahma, who is attracted by prayer and entitled to adoration, to milk him as a cow.

॥ ಸಂಹಿತಾಪಾಠಃ ॥

ಯಸ್ಯ ವಿಶ್ವಾನಿ ಹಸ್ತಯೋರೂಚುರ್ವಸೂನಿ ನಿ ದ್ವಿತಾ ॥

ವೀರಸ್ಯ ಪೃತನಾಷಹಃ ॥ ೮ ॥

॥ ಪದಪಾಠಃ ॥

ಯಸ್ಯ । ವಿಶ್ವಾನಿ । ಹಸ್ತಯೋಃ । ಊಚುಃ । ವಸೂನಿ । ನಿ । ದ್ವಿತಾ ॥

ವೀರಸ್ಯ । ಪೃತನಾಽಸಹಃ ॥ ೮ ॥

॥ ಸಾಯಣಭಾಷ್ಯಂ ॥

ವೀರಸ್ಯ ವೀರ್ಯವತಃ ಪೃತನಾಸಹಃ । ಪೃತನಾಃ ಶತ್ರುಸೇನಾಃ । ತಾಸಾಮಭಿಭವಿತುರ್ಯಸ್ಯೇಂದ್ರಸ್ಯ ಹಸ್ತಯೋರ್ಬಾಹ್ವೋರ್ವಿಶ್ವಾನಿ ಸರ್ವಾಣಿ ದ್ವಿತಾ ದಿವ್ಯಪಾರ್ಥಿವರೂಪೇಣ ದ್ವೈಧಂ ವರ್ತಮಾನಾನಿ ವಸೂನಿ ವಿದ್ಯಂತ ಇತಿ ನ್ಯೂಚುಃ ಋಷಯೋ ನಿತರಾಂ ವದಂತಿ ತಮಿಂದ್ರಂ ಹುವ ಇತಿ ಪೂರ್ವತ್ರ ಸಂಬಂಧಃ ॥

॥ ಪ್ರತಿಪದಾರ್ಥ ॥

**ವೀರಸ್ಯ**—ಪರಾಕ್ರಮಿಯಾದವನೂ । **ಪೃತನಾಸಹಃ**—ಶತ್ರುಸೇನೆಗಳನ್ನು ಸೋಲಿಸುವವನೂ ಆದ । **ಯಸ್ಯ**—ಯಾವ ಇಂದ್ರನ । **ಹಸ್ತಯೋಃ**—ಬಾಹುಗಳಲ್ಲಿ । **ವಿಶ್ವಾನಿ**—ಸಮಸ್ತವಾದವೂ । **ದ್ವಿತಾ**—ದ್ಯಾವಾಪೃಥಿವಿಗಳೆಂಬ ಎರಡು ರೂಪಗಳಲ್ಲಿರುವುವೂ ಆದ । **ವಸೂನಿ**—ಸಂಪತ್ತುಗಳು ಸ್ಥಾಪಿತವಾಗಿವೆಯೆಂದು । **ನಿ ಊಚುಃ**—ಋಷಿಗಳು ಪ್ರಶಂಸಿಸಿದ್ದಾರೋ (ಆ ಇಂದ್ರನನ್ನು ಕರೆಯುತ್ತೇನೆ).

॥ ಭಾವಾರ್ಥ ॥

ಪರಾಕ್ರಮಿಯಾದವನೂ ಶತ್ರುಸೇನೆಗಳನ್ನು ಸೋಲಿಸುವವನೂ ಆದ ಯಾವ ಇಂದ್ರನ ಬಾಹುಗಳಲ್ಲಿ ಸಮಸ್ತವಾದವೂ, ದ್ಯಾವಾಪೃಥಿವಿಗಳೆಂಬ ಎರಡು ರೂಪಗಳಲ್ಲಿರುವುವೂ ಆದ ಸಂಪತ್ತುಗಳು ಸ್ಥಾಪಿತವಾಗಿವೆಯೆಂದು ಋಷಿಗಳು ಪ್ರಶಂಸಿಸಿದ್ದಾರೆಯೋ ಆ ಇಂದ್ರನನ್ನು ಪ್ರಾರ್ಥಿಸಿ ಕರೆಯುತ್ತೇನೆ.

**English Translation.**

In the hands of whom, the heroic subduer of hostile armies, (the sages) have declared, are all the treasures in both (heaven and earth).

॥ ಸಂಹಿತಾಪಾಠಃ ॥

ವಿ ದೃಳ್ಹಾನಿ ಚಿದದ್ರಿವೋ ಜನಾನಾಂ ಶಚೀಪತೇ ।
ವೃಹ ಮಾಯಾ ಅನಾನತ ॥ ೯ ॥

॥ ಪದಪಾಠಃ ॥

ವಿ । ದೃಳ್ಹಾನಿ । ಚಿತ್ । ಅದ್ರಿಽವಃ । ಜನಾನಾಂ । ಶಚೀಽಪತೇ ॥
ವೃಹ । ಮಾಯಾಃ । ಅನಾನತ ॥ ೯ ॥

॥ ಸಾಯಣಭಾಷ್ಯಂ ॥

ಹೇ ಅದ್ರಿವಃ । ಆದೃಣಾತ್ಯನೇನೇತ್ಯದ್ರಿರ್ವಜ್ರಃ । ತದ್ವನ್ ಶಚೀಪತ ಇಂದ್ರ ಜನಾನಾಂ ಶತ್ರೂಣಾಂ ದೃಳ್ಹಾನಿ ಚಿತ್ ದೃಢಾನಿ ಸ್ಥಿರಾಣ್ಯಪಿ ಪುರಾಣಿ ಬಲಾನಿ ವಾ ವಿ ವೃಹ । ವಿಭಂಧಿ ।

**ವಿವಿಧಮುನ್ಮೂಲಯೇತ್ಯರ್ಥಃ । ಹೇ ಅನಾನತ ಅಪ್ರಹ್ವೀಭೂತ ಸರ್ವೋರ್ಜಿತ್ರೇಂದ್ರ ಮಾಯಾಶ್ಚ ಶತ್ರುಭಿರ್ನಿರ್ಮಿತಾ ವಿ ವೃಹ । ವಿನಾಶಯ ॥**

॥ ಪ್ರತಿಪದಾರ್ಥ ॥

**ಅದ್ರಿವಃ**—ವಜ್ರಾಯುಧಧಾರಿಯೂ । **ಶಚೀಪತೇ**–ಶಚೀಪತಿಯೂ ಆದ ಎಲೈ ಇಂದ್ರನೇ । **ಜನಾನಾಂ**—ಶತ್ರುಜನರ । **ದೃಳ್ಹಾನಿ ಚಿತ್**—ಅತ್ಯಂತ ಕಠಿಣವಾಗಿದ್ದರೂ ಕೂಡ ಅವರ ಪಟ್ಟಣಗಳನ್ನು । **ವಿ ವೃಹ**—ಸೀಳಿಹಾಕು । **ಅನಾನತ**—ಯಾರಿಗೂ ಬಾಗದಿರುವ ಶಕ್ತಿಯುಳ್ಳ ಎಲೈ ಇಂದ್ರನೇ । **ಮಾಯಾಃ**—ಶತ್ರುಗಳ ವಂಚಕಕರ್ಮಗಳನ್ನು ನಾಶಮಾಡು

॥ ಭಾವಾರ್ಥ ॥

ವಜ್ರಾಯುಧಧಾರಿಯೂ, ಶಚೀಪತಿಯೂ ಆದ ಎಲೈ ಇಂದ್ರನೇ, ಅತ್ಯಂತ ದೃಢವಾಗಿದ್ದರೂ ಸಹ ಶತ್ರುಗಳ ಪಟ್ಟಣಗಳನ್ನು ಸೀಳಿಹಾಕು. ಯಾರಿಗೂ ಬಗ್ಗದಿರುವ ಶಕ್ತಿಯುಳ್ಳ ಎಲೈ ಇಂದ್ರನೇ, ಶತ್ರುಗಳ ಮೋಸಕಾರ್ಯಗಳನ್ನೆಲ್ಲಾ ನಾಶಮಾಡು.

Wielder of the thunderbolt, lord of Sachi, demolish the strong (cities) of men : (baffle), unbending (Indra), their devices.

॥ ಸಂಹಿತಾಪಾಠಃ ॥

ತಮು ತ್ವಾ ಸತ್ಯ ಸೋಮಪಾ ಇಂದ್ರ ವಾಜಾನಾಂ ಪತೇ ।
ಅಹೂಮಹಿ ಶ್ರವಸ್ಯವಃ ॥ ೧೦ ॥

॥ ಪದಪಾಠಃ ॥

ತಂ । ಊಂ ಇತಿ । ತ್ವಾ । ಸತ್ಯ । ಸೋಮಽಪಾಃ । ಇಂದ್ರ । ವಾಜಾನಾಂ । ಪತೇ ॥
ಅಹೂಮಹಿ । ಶ್ರವಸ್ಯವಃ ॥ ೧೦ ॥

॥ ಸಾಯಣಭಾಷ್ಯಂ ॥

**ಹೇ ಸತ್ಯ ಅವಿತಥಸ್ವಭಾವ ಸೋಮಪಾಃ ಸೋಮಸ್ಯ ಪಾತರ್ಹೇ ವಾಜಾನಾಂ ಪತೇ ಅನ್ನಾನಾಂ ಪಾಲಯಿತರೇವಂಭೂತ ಹೇ ಇಂದ್ರ ಶ್ರವಸ್ಯವಃ ಶ್ರವೋಽನ್ನಮಾತ್ಮನ ಇಚ್ಛಂತೋ ವಯಂ ತಮು ತ್ವಾ ತಾದೃಶಂ ತ್ವಾಮೇವಾಹೂಮಹಿ । ಆಹ್ವಯಾಮಃ । ಸ್ತುಮ ಇತ್ಯರ್ಥಃ ॥**

॥ ಪ್ರತಿಪದಾರ್ಥ ॥

**ಸತ್ಯೆ**—ಸತ್ಯಾತ್ಮನೂ। **ಸೋಮಪಾಃ**—ಸೋಮವನ್ನು ಪಾನಮಾಡತಕ್ಕವನೂ। **ವಾಜಾನಾಂ ಪತೇ**—ಅನ್ನಗಳಿಗೆ ಪಾಲಕನೂ ಆದ। ಇಂದ್ರ—ಎಲೈ ಇಂದ್ರನೇ। **ಶ್ರವಸ್ಯವಃ**—ಅನ್ನೇಚ್ಛುಗಳಾದ ನಾವು। **ತಮು ತ್ವಾ**—ಅದೇ ನಿನ್ನನ್ನು। **ಅಹೂಮಹಿ**—ಸ್ತುತಿಸಿ ಕರೆಯುತ್ತೇವೆ.

॥ ಭಾವಾರ್ಥ ॥

ಸತ್ಯಾತ್ಮನೂ, ಸೋಮವನ್ನು ಪಾನಮಾಡತಕ್ಕವನೂ, ಅನ್ನಗಳಿಗೆ ಪಾಲಕನೂ ಆದ ಎಲೈ ಇಂದ್ರನೇ, ಅನ್ನೇಚ್ಛುಗಳಾದ ನಾವು ಅದೇ ಪ್ರಸಿದ್ಧನಾದ ನಿನ್ನನ್ನು ಸ್ತುತಿಸಿ ಕರೆಯುತ್ತೇವೆ.

## English Translation.

Veracious Indra, drinker of the Soma, provider of sustenance, we, desirous of food, invoke such as you are.

॥ ಸಂಹಿತಾಪಾಠಃ ॥

ತಮು ತ್ವಾ ಯಃ ಪುರಾಸಿಥ ಯೋ ವಾ ನೂನಂ ಹಿತೇ ಧನೇ।
ಹವ್ಯಃ ಸ ಶ್ರುಧೀ ಹವಂ ॥ ೧೧ ॥

॥ ಪದಪಾಠಃ ॥

ತಂ। ಊಂ ಇತಿ। ತ್ವಾ। ಯಃ। ಪುರಾ। ಆಸಿಥ। ಯಃ। ವಾ। ನೂನಂ। ಹಿತೇ। ಧನೇ।
ಹವ್ಯಃ। ಸಃ। ಶ್ರುಧಿ। ಹವಂ ॥ ೧೧ ॥

॥ ಸಾಯಣಭಾಷ್ಯಂ ॥

**ಹೇ ಇಂದ್ರ ತಮು ತ್ವಾ ತಮೇವ ತ್ವಾಂ ಸ್ತುಮ ಇತಿ ಶೇಷಃ। ಯಸ್ತ್ವಂ ಪುರಾ ಪೂರ್ವಸ್ಮಿನ್ಕಾಲೇ ಹವ್ಯೋ ಹ್ವಾತವ್ಯ ಆಸಿಥ ಬಭೂವಿಥ ಧನಲಾಭಾರ್ಥಂ। ಯೋ ವಾ ಯಶ್ಚ ತ್ವಂ ಹಿತೇ ಶತ್ರುಷು ನಿಹಿತೇ ಧನೇ ನಿಮಿತ್ತಭೂತೇ ಸತಿ ನೂನಮದ್ಯಾಪಿ ಹವ್ಯೋ ಹ್ವಾತವ್ಯೋ ಬಭೂವಿಥ ಸ ತ್ವಮಸ್ಮದೀಯಂ ಹವಂ ಸ್ತೋತ್ರಂ ಶ್ರುಧಿ। ಶೃಣು ॥**

॥ ಪ್ರತಿಪದಾರ್ಥ ॥

(ಎಲೈ ಇಂದ್ರನೇ) **ತಮು ತ್ವಾ**—ಪ್ರಸಿದ್ಧನಾದ ಅದೇ ನಿನ್ನನ್ನು ಸ್ತುತಿಸುತ್ತೇವೆ। **ಯಃ**—ಯಾವ ನೀನು। **ಪುರಾ**—ಪೂರ್ವಕಾಲದಲ್ಲಿ। **ಹವ್ಯಃ ಆಸಿಥ**—ಧನಾರ್ಜನವಾಗಿ ಕರೆಯಲ್ಪಟ್ಟೆಯೋ। **ಯೋ ವಾ**—ಯಾವ ಅದೇ ನೀನು। **ಹಿತೇ**—ಶತ್ರುಗಳಲ್ಲಿ ನಿಹಿತವಾದ। **ಧನೇ**—ಧನಾರ್ಜನವಾಗಿ। **ನೂನಂ**—ಈಗಲೂ ಕರೆಯಲ್ಪಡುವೆಯೋ। **ಸಃ**—ಅದೇ ನೀನು। **ಹವಂ**—ನಮ್ಮ ಸ್ತುತಿಯನ್ನು। **ಶ್ರುಧಿ**—ಕೇಳು.

|| ಭಾವಾರ್ಥ ||

ಎಲೈ ಇಂದ್ರನೇ, ಪ್ರಸಿದ್ಧನಾದ ಅದೇ ಇಂದ್ರನನ್ನು ನಾನು ಸ್ತುತಿಸುತ್ತೇನೆ. ಯಾವ ನೀನು ಪೂರ್ವಕಾಲದಲ್ಲಿ ಧನಾರ್ಥವಾಗಿ ಕರೆಯಲ್ಪಟ್ಟೆಯೋ, ಯಾವ ಅದೇ ನೀನು ಶತ್ರುಗಳಲ್ಲಿ ನಿಹಿತವಾದ ಧನ ಲಾಭಾರ್ಥವಾಗಿ ಈಗಲೂ ಕರೆಯಲ್ಪಡುವೆಯೋ ಅದೇ ನೀನು ನಮ್ಮ ಸ್ತುತಿಯನ್ನು ಕೇಳು.

English Translation.

(We invoke) you, such as you are, you who have been invocable of old, and who are now to be invoked for the wealth held (by the foe): hear our invocation.

|| ಸಂಹಿತಾಪಾಠಃ ||

ಧೀಭಿರರ್ವದ್ಭಿರರ್ವತೋ ವಾಜಾಁ ಇಂದ್ರ ಶ್ರವಾಯ್ಯಾನ್ ।
ತ್ವಯಾ ಜೇಷ್ಮ ಹಿತಂ ಧನಂ ॥ ೧೨ ॥

|| ಪದಪಾಠಃ ||

ಧೀಭಿಃ । ಅರ್ವತ್ಽಭಿಃ । ಅರ್ವತಃ । ವಾಜಾನ್ । ಇಂದ್ರ । ಶ್ರವಾಯ್ಯಾನ್ ॥
ತ್ವಯಾ । ಜೇಷ್ಮ । ಹಿತಂ । ಧನಂ ॥ ೧೨ ॥

|| ಸಾಯಣಭಾಷ್ಯಂ ||

**ಹೇ ಇಂದ್ರ ಧೀಭಿಃ ಸ್ತುತಿಭಿಸ್ತ್ವದ್ವಿಷಯಾಭಿಃ ಪ್ರೀತೇನ ತ್ವಯಾನುಗೃಹೀತಾ ವಯಮರ್ವದ್ಭಿರಸ್ಮದೀಯೈರಶ್ವೈರರ್ವತಃ ಶತ್ರುಸಂಬಂಧಿನೋಽಶ್ವಾನ್ ಶ್ರವಾಯ್ಯಾನ್ ಶ್ರವಣೀಯಾನ್ ಪ್ರಶಸ್ಯಾನ್ ವಾಜಾನನ್ನಾನಿ ಚ ಹಿತಂ ಶತ್ರುಷು ನಿಹಿತಂ ಧನಂ ಚ ಜೇಷ್ಮ । ತ್ವದನುಗ್ರಹಾಜ್ಜಯೇಮ ॥**

|| ಪ್ರತಿಪದಾರ್ಥ ||

**ಇಂದ್ರ**—ಎಲೈ ಇಂದ್ರನೇ । **ಧೀಭಿಃ**—ನಮ್ಮ ಸ್ತುತಿಗಳಿಂದ ಪ್ರೀತನಾದ । **ತ್ವಯಾ**—ನಿನ್ನಿಂದ ಅನುಗೃಹೀತರಾದ ನಾವು । **ಅರ್ವದ್ಭಿಃ**—ನಮ್ಮ ಅಶ್ವಗಳ ಬಲದಿಂದ । **ಅರ್ವತಃ**—ಶತ್ರುಗಳ ಅಶ್ವಗಳನ್ನೂ । **ಶ್ರವಾಯ್ಯಾನ್**—ಪ್ರಶಸ್ಯವಾದ । **ವಾಜಾನ್**—ಅವರ ಅನ್ನಗಳನ್ನೂ । **ಹಿತಂ**—ಶತ್ರುಗಳಲ್ಲಿರತಕ್ಕ । **ಧನಂ**—ಧನವನ್ನೂ । **ಜೇಷ್ಮ**—ಜಯಿಸುತ್ತೇವೆ.

॥ ಭಾವಾರ್ಥ ॥

ಎಲೈ ಇಂದ್ರನೇ, ನಮ್ಮ ಸ್ತುತಿಗಳಿಂದ ಪ್ರೀತನಾದ ನಿನ್ನಿಂದ ಅನುಗೃಹೀತರಾದ ನಾವು ನಮ್ಮ ಅಶ್ವಗಳ ಬಲದಿಂದ ಶತ್ರುಗಳ ಅಶ್ವಗಳನ್ನೂ, ಪ್ರಶಸ್ಯವಾದ ಅವರ ಅನ್ನಗಳನ್ನೂ, ಶತ್ರುಗಳಲ್ಲಿ ಸ್ಥಿತವಾಗಿರುವ ಧನಗಳನ್ನೂ ಜಯಿಸಬಲ್ಲೆವು.

English Translation.

(Favoured) by you, Indra, (who are propitiated) by our hymns, (we overcome) with our steeds, the steeds (of the enemy), and we conquer abundant food, and the wealth held (by the foe)

॥ ಸಂಹಿತಾಪಾಠಃ ॥

ಅಭೂರು ವೀರ ಗಿರ್ವಣೋ ಮಹಾँ ಇಂದ್ರ ಧನೇ ಹಿತೇ ।
ಭರೇ ವಿತಂತಸಾಯ್ಯಃ ॥ ೧೩ ॥

॥ ಪದಪಾಠಃ ॥

ಅಭೂಃ । ಊಂ ಇತಿ । ವೀರ । ಗಿರ್ವಣಃ । ಮಹಾನ್ । ಇಂದ್ರ । ಧನೇ । ಹಿತೇ ॥
ಭರೇ । ವಿತಂತಸಾಯ್ಯಃ ॥ ೧೩ ॥

॥ ಸಾಯಣಭಾಷ್ಯಂ ॥

ಹೇ ವೀರ ವಿವಿಧವಿಾರಯಿತಃ ಶತ್ರೂಣಾಂ ಹೇ ಗಿರ್ವಣೋ ಗೀರ್ಭಿರ್ವನನೀಯೇಂದ್ರ ಹಿತೇ ಶತ್ರುಷು ನಿಹಿತೇ ಧನೇ ನಿಮಿತ್ತಭೂತೇ ಸತಿ ಮಹಾನ್ ಪ್ರವೃದ್ಧಸ್ತ್ವಂ ಭರೇ ಸಂಗ್ರಾಮೇ ವಿತಂತಸಾಯ್ಯಃ ಶತ್ರೂಣಾಂ ಜೇತಾಭೂಃ ॥ ತಂತಸ ಇತಿ ಧಾತುರ್ಜಯಾರ್ಥಃ ಕಂಡ್ವಾದೌ ಪಠ್ಯತೇ । ತಸ್ಮಾದ್ವ್ಯುಪಸೃಷ್ಟಾದೌಣಾದಿಕಃ ಕರ್ತರ್ಯಾಯ್ಯಪ್ರತ್ಯಯಃ ॥

॥ ಪ್ರತಿಪದಾರ್ಥ ॥

ವೀರ—ಪರಾಕ್ರಮಿಯೂ । ಗಿರ್ವಣಃ—ಸ್ತುತಿಗಳಿಂದ ಪೂಜಿತನೂ ಆದ । ಇಂದ್ರ—ಎಲೈ ಇಂದ್ರನೇ । ಹಿತೇ—ಶತ್ರುಗಳಲ್ಲಿ ಸ್ಥಿತನಾದ । ಧನೇ—ಧನಾರ್ಥವಾದ । ಭರೇ—ಯುದ್ಧದಲ್ಲಿ । ಮಹಾನ್—ಪ್ರವೃದ್ಧನಾದ ನೀನು । ವಿತಂತಸಾಯ್ಯಃ—ಶತ್ರುಗಳನ್ನು ಜಯಿಸುವವನಾಗಿ । ಅಭೂಃ—ಆಗುತ್ತೀಯೆ.

॥ ಭಾವಾರ್ಥ ॥

ಪರಾಕ್ರಮಿಯೂ ಸ್ತುತಿಗಳಿಂದ ಪೂಜಿತನೂ ಆದ ಎಲೈ ಇಂದ್ರನೇ, ಶತ್ರುಗಳಲ್ಲಿ ಸ್ಥಿತವಾದ ಧನಾರ್ಥವಾದ ಯುದ್ಧದಲ್ಲಿ ಪ್ರವೃದ್ಧನಾದ ನೀನು ಶತ್ರುಗಳನ್ನು ಜಯಿಸುತ್ತೀಯೆ.

### English Translation.

Heroic and adorable Indra, verily you are mighty in battle, and victor of the wealth held (by the enemy).

॥ ಸಂಹಿತಾಪಾಠಃ ॥

ಯಾತ ಊತಿರಮಿತ್ರಹನ್ಮಕ್ಷೂಜವಸ್ತಮಾಸತಿ ।
ತಯಾ ನೋ ಹಿನುಹೀ ರಥಂ ॥ ೧೪ ॥

॥ ಪದಪಾಠಃ ॥

ಯಾ । ತೇ । ಊತಿಃ । ಅಮಿತ್ರಽಹನ್ । ಮಕ್ಷುಜವಃಽತಮಾ । ಅಸತಿ ।
ತಯಾ । ನಃ । ಹಿನುಹಿ । ರಥಂ ॥ ೧೪ ॥

॥ ಸಾಯಣಭಾಷ್ಯಂ ॥

ಹೇ ಅಮಿತ್ರಹನ್ ಅಮಿತ್ರಾಣಾಂ ಶತ್ರೂಣಾಂ ಹಂತರಿಂದ್ರ ತೇ ತ್ವದೀಯಾ ಮಕ್ಷುಜವಸ್ತಮಾತಿಶಯೇನ ಶೀಘ್ರಜವಾ ಯೋತಿರ್ಗತಿರಸತಿ ಅಸ್ತಿ ತಯಾ ಗತ್ಯಾ ನೋಽಸ್ಮಾಕಂ ರಥಂ ಹಿನುಹಿ । ಪ್ರೇರಯ । ಶತ್ರುಜಯಾರ್ಥಂ ಶೀಘ್ರಂ ಗಮಯ ॥

॥ ಪ್ರತಿಪದಾರ್ಥ ॥

**ಅಮಿತ್ರಹನ್**—ಶತ್ರುನಾಶಕನಾದ ಎಲೈ ಇಂದ್ರನೇ । **ತೇ**—ನಿನ್ನ । **ಮಕ್ಷು ಜವಸ್ತಮಾ**—ಅತ್ಯಂತ ಶೀಘ್ರಗಾಮಿಯಾದ । **ಯಾ ಊತಿಃ**—ಯಾವ ಗಮನವು । **ಅಸತಿ**—ಇರುವುದೋ । **ತಯಾ**—ಅದೇ ಗತಿಯಿಂದ । **ನಃ**—ನಮ್ಮ । **ರಥಂ**—ರಥವನ್ನು । **ಹಿನುಹಿ**—(ಶತ್ರು ಜಯಾರ್ಥವಾಗಿ) ಪ್ರೇರಿಸು.

॥ ಭಾವಾರ್ಥ ॥

ಶತ್ರುನಾಶಕನಾದ ಎಲೈ ಇಂದ್ರನೇ, ನಿನ್ನ ಅತ್ಯಂತ ಶೀಘ್ರಗಾಮಿಯಾದ ಯಾವ ಗಮನವಿರುವುದೋ ಅದೇ ಗತಿಯಿಂದ ನಮ್ಮ ರಥವನ್ನು ಶತ್ರು ಜಯಾರ್ಥವಾಗಿ ಪ್ರೇರಿಸು.

### English Translation.

Destroyer of enemies with that your velocity, which is of exceeding swiftness impel our chariots (against the foe).

॥ ಸಂಹಿತಾಪಾಠಃ ॥

ಸ ರಥೇನ ರಥೀತಮೋಽಸ್ಮಾಕೇನಾಭಿಯುಗ್ವನಾ ।
ಜೇಷಿ ಜಿಷ್ಣೋ ಹಿತಂ ಧನಂ ॥ ೧೫ ॥

॥ ಪದಪಾಠಃ ॥

ಸಃ । ರಥೇನ । ರಥಿಽತಮಃ । ಅಸ್ಮಾಕೇನ । ಅಭಿಽಯುಗ್ವನಾ ।
ಜೇಷಿ । ಜಿಷ್ಣೋ ಇತಿ । ಹಿತಂ । ಧನಂ ॥ ೧೫ ॥

॥ ಸಾಯಣಭಾಷ್ಯಂ ॥

**ಹೇ ಜಿಷ್ಣೋ ಜಯಶೀಲೇಂದ್ರ ರಥೀತಮೋಽತಿಶಯೇನ ರಥೀ ಮಹಾರಥಃ ಸ ತ್ವಮಸ್ಮಾಕೇನಾ. ಸ್ಮದೀಯೇನಾಭಿಯುಗ್ವನಾಭಿಯೋಕ್ತ್ರಾ ಶತ್ರೂಣಾಮಭಿಭವಿತ್ರಾ ರಥೇನ ಹಿತಂ ಶತ್ರುಷು ನಿಹಿತಂ ಧನಂ ಜೇಷಿ । ಅಸ್ಮದರ್ಥಂ ಜಯ ॥**

॥ ಪ್ರತಿಪದಾರ್ಥ ॥

**ಜಿಷ್ಣೋ**—ಜಯಶೀಲನಾದ ಎಲೈ ಇಂದ್ರನೇ । **ರಥೀತಮಃ**—ಅತಿಶಯವಾದ ರಥವುಳ್ಳ । **ಸಃ**—ನೀನು । **ಅಸ್ಮಾಕೇನ**—ನಮ್ಮ ಸಂಬಂಧಿಯಾದುದೂ । **ಅಭಿಯುಗ್ವನಾ**—ಶತ್ರುಗಳನ್ನು ಸೋಲಿಸತಕ್ಕದ್ದೂ ಆದ । **ರಥೇನ**—ರಥದಿಂದ । **ಹಿತಂ**—ಶತ್ರುಗಳಲ್ಲಿ ನಿಹಿತವಾದ । **ಧನಂ**—ಸಂಪತ್ತನ್ನು । **ಜೇಷಿ**—ನಮಗಾಗಿ ಜಯಿಸು.

॥ ಭಾವಾರ್ಥ ॥

ಜಯಶೀಲನಾದ ಎಲೈ ಇಂದ್ರನೇ, ಅತಿಶಯವಾದ ರಥವುಳ್ಳ ನೀನು ನಮ್ಮ ಸಂಬಂಧಿಯಾದುದೂ. ಶತ್ರುಗಳನ್ನು ಸೋಲಿಸತಕ್ಕದ್ದೂ ಆದ ರಥದಿಂದ ಶತ್ರುಗಳಲ್ಲಿ ನಿಹಿತವಾದ ಸಂಪತ್ತನ್ನು ನಮಗಾಗಿ ಜಯಿಸು.

English Translation.

Victorious Indra, you are the chief of charioteers; couquer the wealth that is held (by the enemy) with our assailing car.

॥ ಸಂಹಿತಾಪಾಠಃ ॥

ಯ ಏಕ ಇತ್ತಮು ಷ್ಟುಹಿ ಕೃಷ್ಟೀನಾಂ ವಿಚರ್ಷಣಿಃ ।
ಪತಿರ್ಜಜ್ಞೇ ವೃಷಕ್ರತುಃ ॥ ೧೬ ॥

॥ ಪದಪಾಠಃ ॥

ಯಃ । ಏಕಃ । ಇತ್ । ತಂ । ಊಂ ಇತಿ । ಸ್ತುಹಿ । ಕೃಷ್ಟೀನಾಂ । ವಿऽಚರ್ಷಣಿಃ ।

ಪತಿಃ । ಜಜ್ಞೇ । ವೃಷऽಕ್ರತುಃ ॥ ೧೬ ॥

॥ ಸಾಯಣಭಾಷ್ಯಂ ॥

ವಿಚರ್ಷಣಿರ್ವಿಶೇಷೇಣ ಸರ್ವಸ್ಯ ದ್ರಷ್ಟಾ ವೃಷಕ್ರತುರ್ವರ್ಷಕಕರ್ಮಾ ಯ ಇಂದ್ರ ಏಕ ಇದೇಕ ಏವ ಕೃಷ್ಟೀನಾಂ ಪ್ರಜಾನಾಂ ಪತಿರಧಿಪತಿರ್ಜಜ್ಞೇ ಅಜಾಯತ ನಾನ್ಯಃ ಕಶ್ಚಿತ್ ತಮು ತಮೇವೇಂದ್ರಂ ಹೇ ಸ್ತೋತಃ ಸ್ತುಹಿ ॥

॥ ಪ್ರತಿಪದಾರ್ಥ ॥

(ಎಲೈ ಸ್ತೋತೃವೇ) **ವಿಚರ್ಷಣಿಃ**—ಎಲ್ಲವನ್ನೂ ನೋಡಬಲ್ಲವನೂ । **ವೃಷಕ್ರತುಃ**—ವೃಷ್ಟಿಕರ್ಮವುಳ್ಳವನೂ ಆದ । **ಯಃ**—ಯಾವ ಇಂದ್ರನು । **ಏಕ ಇತ್**—ಅದ್ವಿತೀಯನಾಗಿ । **ಕೃಷ್ಟೀನಾಂ**—ಪ್ರಜೆಗಳಿಗೆಲ್ಲಾ । **ಪತಿಃ**—ಒಡೆಯನಾಗಿ । **ಜಜ್ಞೇ**—ಉತ್ಪನ್ನನಾದನೋ । **ತಮು**—ಅದೇ ಇಂದ್ರನನ್ನು । **ಸ್ತುಹಿ**—ಸ್ತುತಿಸು.

॥ ಭಾವಾರ್ಥ ॥

ಎಲೈ ಸ್ತೋತೃವೇ, ಸಕಲವನ್ನೂ ನೋಡಬಲ್ಲವನೂ, ವೃಷ್ಟಿಕರ್ಮವುಳ್ಳವನೂ ಆದ ಯಾವ ಇಂದ್ರನು ಅದ್ವಿತೀಯನಾಗಿ ಪ್ರಜೆಗಳಿಗೆಲ್ಲಾ ಒಡೆಯನಾಗಿ ಉತ್ಪನ್ನನಾದನೋ ಅದೇ ಇಂದ್ರನನ್ನು ಸ್ತುತಿಸು.

## English Translation.

Praise that Indra who alone has been born the supervisor (of all), the lord of men, the giver of rain.

॥ ಸಂಹಿತಾಪಾಠಃ ॥

ಯೋ ಗೃಣತಾಮಿದಾಸಿಥಾಪಿರೂತೀ ಶಿವಃ ಸಖಾ ।
ಸ ತ್ವಂ ನ ಇಂದ್ರ ಮೃಳಯ ॥ ೧೭ ॥

॥ ಪದಪಾಠಃ ॥

ಯಃ । ಗೃಣತಾಂ । ಇತ್ । ಆಸಿಥ । ಆಪಿಃ । ಊತೀ । ಶಿವಃ । ಸಖಾ ।

ಸಃ । ತ್ವಂ । ನಃ । ಇಂದ್ರ । ಮೃಳಯ ॥ ೧೭ ॥

॥ ಸಾಯಣಭಾಷ್ಯಂ ॥

**ಹೇ ಇಂದ್ರ ಯಸ್ತ್ವಮೂತೀ ಊತ್ಯಾ ರಕ್ಷಯಾ ಶಿವಃ ಸುಖಕರೋಽತ ಏವ ಸಖಾ ಮಿತ್ರಭೂತಶ್ಚ ಸನ್ ಗೃಣತಾಮಿತ್ ಸ್ತುವತಾಮಸ್ಮಾಕಮೇವಾಪಿರ್ಬಂಧುರಾಸಿಥ ಪುರಾ ಬಭೂವಿಥ ಸ ತಾದೃಶಸ್ತ್ವಂ ನೋಽಸ್ಮಾನಿದಾನೀಂ ಮೃಳಯ ಸುಖಯ ॥**

॥ ಪ್ರತಿಪದಾರ್ಥ ॥

ಇಂದ್ರ—ಎಲೈ ಇಂದ್ರನೇ। **ಯಃ**—ಯಾವ ನೀನು। **ಊತೀ**—ನಿನ್ನ ರಕ್ಷಣೆಯಿಂದ। **ಶಿವಃ**—ಮಂಗಳಕರನೂ। **ಸಖಾ**—ಸ್ನೇಹಿತನೂ ಆಗಿ। **ಗೃಣತಾಂ ಇತ್**—ಕೇವಲ ಸ್ತುತಿಕರ್ತರಿಗೆ ಮಾತ್ರ। **ಆಪಿಃ**—ಬಂಧುವಾಗಿ। **ಆಸಿಥ**—ಆಗಿರುವೆಯೋ। **ಸಃ**—ಅಂತಹ। **ತ್ವಂ**—ನೀನು। **ನಃ**—ನಮ್ಮನ್ನು। **ಮೃಳಯ**—ಸುಖಪಡಿಸು.

॥ ಭಾವಾರ್ಥ ॥

ಎಲೈ ಇಂದ್ರನೇ, ಯಾವ ನೀನು ನಿನ್ನ ರಕ್ಷಣೆಯಿಂದ ಮಂಗಳಕರನೂ ಸ್ನೇಹಿತನೂ ಆಗಿ ಕೇವಲ ಸ್ತುತಿಕರ್ತರಿಗೆ ಮಾತ್ರ ಬಂಧುವಾಗಿ ಆಗಿರುವೆಯೋ ಅಂತಹ ನೀನು ನಮ್ಮನ್ನು ಸುಖಪಡಿಸು.

English Translation.

Indra, you have ever been the friend of those who praise you, and the insurer of their happiness by your protection; grant us felicity.

॥ ಸಂಹಿತಾಪಾಠಃ ॥

ಧಿಷ್ವ ವಜ್ರಂ ಗಭಸ್ತ್ಯೋೀ ರಕ್ಷೋಹತ್ಯಾಯ ವಜ್ರಿವಃ ।
ಸಾಸಹೀಷ್ಠಾ ಅಭಿ ಸ್ಪೃಧಃ ॥ ೧೮ ॥

॥ ಪದಪಾಠಃ ॥

ಧಿಷ್ವ । ವಜ್ರಂ । ಗಭಸ್ತ್ಯೋಃ । ರಕ್ಷಃಽಹತ್ಯಾಯ । ವಜ್ರಿಽವಃ ।
ಸಸಹೀಷ್ಠಾಃ । ಅಭಿ । ಸ್ಪೃಧಃ ॥ ೧೮ ॥

॥ ಸಾಯಣಭಾಷ್ಯಂ ॥

**ಹೇ ವಜ್ರಿವೋ ವಜ್ರವನ್ನಿಂದ್ರ ಗಭಸ್ತ್ಯೋರಾತ್ಮೀಯಯೋರ್ಹಸ್ತಯೋರ್ವಜ್ರಂ ಕುಲಿಶಂ ಧಿಷ್ವ। ಧಾರಯ। ಕಿಮರ್ಥಂ। ರಕ್ಷೋಹತ್ಯಾಯ ರಕ್ಷಸಾಂ ಹನನಾರ್ಥಂ। ಧೃತ್ವಾ ಚ ಸ್ಪೃಧಃ ಸ್ಪರ್ಧಮಾನಾ ಅಭಿ ಅಭಿಗಂತ್ರೀರಾಸುರೀಃ ಸೇನಾಃ ಸಸಹೀಷ್ಠಾಃ। ಅತ್ಯರ್ಥಮಭಿಭವ ॥**

॥ ಪ್ರತಿಪದಾರ್ಥ ॥

**ವಜ್ರಿವಃ**—ವಜ್ರಾಯುಧವನ್ನು ಹಿಡಿದಿರುವ ಎಲೈ ಇಂದ್ರನೇ । **ಗಭಸ್ತ್ಯೋಃ**—ನಿನ್ನ ಎರಡು ತೋಳು ಗಳಿಂದಲೂ । **ವಜ್ರಂ**—ವಜ್ರಾಯುಧವನ್ನು । **ರಕ್ಷೋಹತ್ಯಾಯ**—ರಾಕ್ಷಸರ ನಾಶಕ್ಕಾಗಿ । **ಧಿಷ್ವ**—ಧರಿಸು । **ಸ್ಪೃಧಃ**—ಸ್ಪರ್ಧಿಸುವವರೂ । **ಅಭಿ**—ಎದುರು ಬೀಳುವವರೂ ಆದ ಅಸುರಸೇನೆಗಳನ್ನು । **ಸಸಹೀಷ್ಠಾಃ**—ಪೂರ್ಣವಾಗಿ ಸೋಲಿಸು.

॥ ಭಾವಾರ್ಥ ॥

ವಜ್ರಾಯುಧವನ್ನು ಹೊಂದಿರುವ ಎಲೈ ಇಂದ್ರನೇ, ನಿನ್ನ ಎರಡು ತೋಳುಗಳಿಂದಲೂ ರಾಕ್ಷಸರ ನಾಶಾರ್ಥ ವಾಗಿ ವಜ್ರಾಯುಧವನ್ನು ಧರಿಸು. ನಿನ್ನೊಡನೆ ಸ್ಪರ್ಧಿಸುವವರೂ ನಿನಗೆದುರು ಬೀಳುವವರೂ ಆದ ಅಸುರಸೇನೆ ಗಳನ್ನು ಪೂರ್ಣವಾಗಿ ಸೋಲಿಸು.

## English Translation.

Wielder of the thunderbolt, take the bolt in your hands for the destruction of the Rakshasas, and utterly overthrow those who defy you.

॥ ಸಂಹಿತಾಪಾಠಃ ॥

ಪ್ರತ್ನಂ ರಯೀಣಾಂ ಯುಜಂ ಸಖಾಯಂ ಕೀರಿಚೋದನಂ ।
ಬ್ರಹ್ಮವಾಹಸ್ತಮಂ ಹುವೇ ॥ ೧೯ ॥

॥ ಪದಪಾಠಃ ॥

ಪ್ರತ್ನಂ । ರಯೀಣಾಂ । ಯುಜಂ । ಸಖಾಯಂ । ಕೀರಿऽಚೋದನಂ ।
ಬ್ರಹ್ಮವಾಹಃऽತಮಂ । ಹುವೇ ॥ ೧೯ ॥

॥ ಸಾಯಣಭಾಷ್ಯಂ ॥

**ಪ್ರತ್ನಂ ಚಿರಂತನಂ ಸರ್ವೇಷಾಮಾದ್ಯಂ ರಯೀಣಾಂ ಧನಾನಾಂ ಯುಜಂ ಯೋಜಯಿತಾರಂ ದಾತಾರಂ ಸಖಾಯಂ ಮಿತ್ರಭೂತಂ ಕೀರಿಚೋದನಂ ಕೀರೀಣಾಂ ಸ್ತೋತೄಣಾಂ ಚೋದಯಿತಾರಂ ಬ್ರಹ್ಮವಾಹಸ್ತಮಮತಿಶಯೇನ ಬ್ರಹ್ಮಭಿರ್ಮಂತ್ರೈರ್ವಹನೀಯಮೇವಂವಿಧಮಿಂದ್ರಂ ಹುವೇ । ಆಹ್ವ-ಯಾಮಿ ॥**

॥ ಪ್ರತಿಪದಾರ್ಥ ॥

**ಪ್ರತ್ನಂ**—ಪುರಾತನನೂ । **ರಯೀಣಾಂ**—ಧನಗಳನ್ನು । **ಯುಜಂ**—ಸ್ತೋತೃಗಳೊಡನೆ ಸೇರಿಸು ವವನೂ । **ಸಖಾಯಂ**—ಮಿತ್ರಭೂತನೂ । **ಕೀರಿಚೋದನಂ**—ಸ್ತೋತೃಗಳ ಪ್ರೇರಕನೂ । **ಬ್ರಹ್ಮವಾಹಸ್ತಮಂ**-ಮಂತ್ರಗಳಿಂದ ಅತಿಶಯವಾಗಿ ವಹಿಸಲ್ಪಡತಕ್ಕವನೂ ಆದ ಇಂದ್ರನನ್ನು । **ಹುವೇ**—ಸ್ತುತಿಸಿ ಕರೆಯುತ್ತೇನೆ.

|| ಭಾವಾರ್ಥ ||

ಪುರಾತನನೂ, ಸ್ತುತಿಕರ್ತರಿಗೆ ಸಂಪತ್ತನ್ನು ಸೇರಿಸುವನನೂ, ಮಿತ್ರಭೂತನೂ ಸ್ತೋತೃಗಳ ಪ್ರೇರಕನೂ, ಮಂತ್ರಗಳಿಂದ ಅತಿಶಯವಾಗಿ ವಹಿಸಲ್ಪಡುವವನೂ ಆದ ಇಂದ್ರನನ್ನು ಸ್ತುತಿಸಿ ಕರೆಯುತ್ತೇನೆ.

English Translation.

I invoke the ancient Indra, the giver of riches, (our) friend, the encourager of his adorers, who is to be propitiated by prayer.

|| ಸಂಹಿತಾಪಾಠಃ ||

ಸ ಹಿ ವಿಶ್ವಾನಿ ಪಾರ್ಥಿವಾ ಏಕೋ ವಸೂನಿ ಪತ್ಯತೇ ।
ಗಿರ್ವಣಸ್ತಮೋ ಅಧ್ರಿಗುಃ ॥ ೨೦ ॥

|| ಪದಪಾಠಃ ||

ಸಃ । ಹಿ । ವಿಶ್ವಾನಿ । ಪಾರ್ಥಿವಾ । ಏಕಃ । ವಸೂನಿ । ಪತ್ಯತೇ ।
ಗಿರ್ವಣಃऽತಮಃ । ಅಧ್ರಿऽಗುಃ ॥ ೨೦ ॥

|| ಸಾಯಣಭಾಷ್ಯಂ ||

**ಸ ಹಿ ಸ ಖಲ್ವಿಂದ್ರೋ ವಿಶ್ವಾನಿ ಸರ್ವಾಣಿ ಪಾರ್ಥಿವಾ ಪೃಥಿವ್ಯಾಂ ಭವಾನಿ ವಸೂನಿ ಧನಾನ್ಯೇಕ ಏವ ಪತ್ಯತೇ ಈಷ್ಟೇ ನಾನ್ಯಃ ಕಶ್ಚಿತ್ । ಪತ್ಯತಿರೈಶ್ವರ್ಯಕರ್ಮಾ । ಕೀದೃಶ ಇಂದ್ರಃ । ಗಿರ್ವಣಸ್ತಮೋऽತಿಶಯೇನ ಗೀರ್ಭಿಃ ಸ್ತುತಿಭಿಃ ಸಂಭಜನೀಯೋऽಧ್ರಿಗುರಧೃತಗಮನಃ । ಅಪ್ರತಿಹತಗತಿರಿತ್ಯರ್ಥಃ ॥**

|| ಪ್ರತಿಪದಾರ್ಥ ||

**ಗಿರ್ವಣಸ್ತಮಃ**—ಸ್ತುತಿಗಳಿಂದ ಅತಿಶಯವಾಗಿ ಪೂಜಿತನೂ । **ಅಧ್ರಿಗುಃ**—ಅಪ್ರತಿಹತವಾದ ಗತಿಯುಳ್ಳವನೂ ಆದ । **ಸ ಹಿ**—ಅದೇ ಇಂದ್ರನು । **ವಿಶ್ವಾನಿ**—ಸಮಸ್ತವಾದುದೂ । **ಪಾರ್ಥಿವಾ**—ಪೃಥಿವೀ ಸಂಬಂಧವಾದುದೂ ಆದ । **ವಸೂನಿ**—ಧನಗಳಿಗೆಲ್ಲಾ । ಏಕಃ—ಅದ್ವಿತೀಯನಾಗಿ । **ಪತ್ಯತೇ**—ಪ್ರಭುವಾಗಿದ್ದಾನೆ.

|| ಭಾವಾರ್ಥ ||

ಸ್ತುತಿಗಳಿಂದ ಅತಿಶಯವಾಗಿ ಪೂಜಿತನೂ ಅಪ್ರತಿಹತವಾದ ಗತಿಯುಳ್ಳವನೂ ಆದ ಅದೇ ಇಂದ್ರನು ಸಮಸ್ತವಾದುದೂ ಪೃಥಿವೀ ಸಂಬಂಧವಾದುದೂ ಆದ ಧನಗಳಿಗೆಲ್ಲಾ ಅದ್ವಿತೀಯನಾದ ಪ್ರಭುವಾಗಿದ್ದಾನೆ.

## English Translation.

He alone rules over all terrestrial riches, he who is entitled to especial praise, he who is irresistible.

॥ ಸಂಹಿತಾಪಾಠಃ ॥

ಸ ನೋ ನಿಯುದ್ಭಿರಾ ಪೃಣ ಕಾಮಂ ವಾಜೇಭಿರಶ್ವಿಭಿಃ ।
ಗೋಮದ್ಭಿರ್ಗೋಪತೇ ಧೃಷತ್ ॥ ೨೧ ॥

॥ ಪದಪಾಠಃ ॥

ಸಃ । ನಃ । ನಿಯುತ್ಽಭಿಃ । ಆ । ಪೃಣ । ಕಾಮಂ । ವಾಜೇಭಿಃ । ಅಶ್ವಿಽಭಿಃ ।
ಗೋಮತ್ಽಭಿಃ । ಗೋಽಪತೇ । ಧೃಷತ್ ॥ ೨೧ ॥

॥ ಸಾಯಣಭಾಷ್ಯಂ ॥

ಹೇ ಗೋಪತೇ ಗವಾಂ ಪಾಲಯಿತಃ ಸ ತ್ವಂ ನೋಽಸ್ಮಾಕಂ ಕಾಮಂ ನಿಯುದ್ಭಿರ್ವಡವಾಭಿರ್ಧೃಷದ್ಧೃಷ್ಟಂ ದಾರಿದ್ರ್ಯನಾಶನಸಮರ್ಥಂ ಯಥಾ ಭವತಿ ತಥಾ ಆ ಪೃಣ । ಆಪೂರಯ । ಯದ್ವಾ ಧೃಷದಿತೀಂದ್ರವಿಶೇಷಣಂ । ಶತ್ರೂಣಾಂ ಧರ್ಷಕಸ್ತ್ವಮಿತ್ಯರ್ಥಃ । ತಥಾ ಗೋಮದ್ಭಿರ್ಬಹುಭಿರ್ಗೋಭಿರ್ಯುಕ್ತೈರಶ್ವಿಭಿರ್ಬಹುಭಿರಶ್ವೈರುಪೇತೈರ್ವಾಜೈರನ್ನೈಶ್ಚಾಸ್ಮದೀಯಂ ಕಾಮಮಾಪೂರಯ ॥

॥ ಪ್ರತಿಪದಾರ್ಥ ॥

**ಗೋಪತೇ**—ಗೋವುಗಳಿಗೆ ಪಾಲಕನಾದ ಎಲೈ ಇಂದ್ರನೇ। **ಸಃ**—ಅದೇ ನೀನು। **ನಃ**—ನಮ್ಮ। **ಕಾಮಃ**—ಇಷ್ಟಾರ್ಥವನ್ನು । **ನಿಯುದ್ಭಿಃ**—ಅಶ್ವಗಳ ಸಹಾಯದಿಂದ । **ಧೃಷತ್**—ನಮ್ಮ ದಾರಿದ್ರ್ಯವು ನಾಶವಾಗುವಂತೆ। **ಆ ಪೃಣ**—ನೆರವೇರಿಸು । **ವಾಜೇಭಿಃ**—ಅನ್ನಪೂರ್ಣವಾದುದೂ । **ಗೋಮದ್ಭಿಃ**—ಗೋವುಗಳಿಂದ ಪೂರ್ಣವಾದುದೂ। **ಅಶ್ವಿಭಿಃ**—ಅಶ್ವಗಳಿಂದ ಪೂರ್ಣವಾದುದೂ ಆದ ಐಶ್ವರ್ಯಗಳಿಂದ ನಮ್ಮ ಇಷ್ಟಾರ್ಥವನ್ನು ನೆರವೇರಿಸು.

॥ ಭಾವಾರ್ಥ ॥

ಗೋಪಾಲಕನಾದ ಎಲೈ ಇಂದ್ರನೇ, ನಿನ್ನ ನಿಯುತ್ತುಗಳ ಸಹಾಯದಿಂದ ನಮ್ಮ ದಾರಿದ್ರ್ಯವು ನಾಶವಾಗುವಂತೆ ನಮ್ಮ ಇಷ್ಟಾರ್ಥಗಳು ನೆರವೇರುವಂತೆ ಮಾಡು ಅನ್ನಭರಿತವಾದುದೂ, ಗೋವುಗಳಿಂದ ಪೂರ್ಣವಾದುದೂ, ಅಶ್ವಗಳಿಂದ ಪೂರ್ಣವಾದುದೂ ಆದ ಐಶ್ವರ್ಯಗಳಿಂದ ನಮ್ಮ ಇಷ್ಟಾರ್ಥಗಳನ್ನು ನೆರವೇರಿಸು.

## English Translation.

Lord of cattle, (coming) with your mares, satisfy our desires completely with (abundant) food, with horses, and with cows.

॥ ಸಂಹಿತಾಪಾಠಃ ॥

ತದ್ವೋ ಗಾಯ ಸುತೇ ಸಚಾ ಪುರುಹೂತಾಯ ಸತ್ವನೇ ।
ಶಂ ಯದ್ಗವೇ ನ ಶಾಕಿನೇ ॥ ೨೨ ॥

॥ ಪದಪಾಠಃ ॥

ತತ್ । ವಃ । ಗಾಯ । ಸುತೇ । ಸಚಾ । ಪುರುऽಹೂತಾಯ । ಸತ್ವನೇ ।
ಶಂ । ಯತ್ । ಗವೇ । ನ । ಶಾಕಿನೇ ॥ ೨೨ ॥

॥ ಸಾಯಣಭಾಷ್ಯಂ ॥

ಹೇ ಸ್ತೋತಾರೋ ವೋ ಯೂಯಂ ಸುತೇऽಭಿಷುತೇ ಸೋಮೇ ಸತಿ ಪುರುಹೂತಾಯ ಬಹುಭಿರ್ಯಜಮಾನೈರಾಹೂತಾಯ ಸತ್ವನೇ ಶತ್ರೂಣಾಂ ಸಾದಯಿತ್ರೇ ಧನಾನಾಂ ವಾ ಸನಿತ್ರೇ ದಾತ್ರ ಇಂದ್ರಾಯ ತತ್ಸ್ತೋತ್ರಂ ಸಚಾ ಸಹ ಸಂಹತಾ ಭೂತ್ವಾ ಗಾಯ । ಗಾಯತ । ಯತ್ಸ್ತೋತ್ರಂ ಶಾಕಿನೇ ಶಕ್ತಿಮತ ಇಂದ್ರಾಯ ಶಂ ಸುಖಕರಂ ಭವತಿ ಗವೇ ನ । ಯಥಾ ಗವೇ ಯವಸಂ ಸುಖಕರಂ ತದ್ವದಿತ್ಯರ್ಥಃ ॥

॥ ಪ್ರತಿಪದಾರ್ಥ ॥

(ಎಲೈ ಸ್ತೋತೃಗಳೇ) **ಗವೇ ನ**—ಗೋವುಗಳಿಗೆ ಹುಲ್ಲುಗಳು ಸುಖಸಾಧನವಾಗುವಂತೆ। **ಯತ್**—ಯಾವ ಸ್ತೋತ್ರವು। **ಶಾಕಿನೇ**—ಶಕ್ತಿವಂತನಾದ ಇಂದ್ರನಿಗೆ। **ಶಂ**—ಸುಖಕರವಾಗಿ ಆಗುವುದೋ। **ತತ್**—ಅಂತಹ ಸ್ತುತಿಯನ್ನು। **ವಃ**—ನೀವು। **ಸಚಾ**—ಒಟ್ಟಿಗೆ ಸೇರಿಕೊಂಡು। **ಸುತೇ**—ಸೋಮರಸವು ಹಿಂಡಲ್ಪಟ್ಟಾಗ। **ಪುರುಹೂತಾಯ**—ಅನೇಕರಿಂದ ಕರೆಯಲ್ಪಡುವವನೂ। **ಸತ್ವನೇ**—ಧನದಾತೃವೂ ಆದ ಇಂದ್ರನನ್ನುದ್ದೇಶಿಸಿ। **ಗಾಯ**—ಗಾನರೂಪದಲ್ಲಿ ಪಠಿಸಿರಿ.

॥ ಭಾವಾರ್ಥ ॥

ಎಲೈ ಸ್ತೋತೃಗಳೇ, ಗೋವುಗಳಿಗೆ ಹುಲ್ಲು ಸುಖಸಾಧನವಾಗುವಂತೆ ಯಾವ ಸ್ತೋತ್ರವು ಶಕ್ತಿವಂತನಾದ ಇಂದ್ರನಿಗೆ ಸುಖಕರವಾಗಿ ಆಗುವುದೋ ಅಂತಹ ಸ್ತುತಿಯನ್ನು ನೀವು ಒಟ್ಟಿಗೆ ಸೇರಿಕೊಂಡು ಸೋಮರಸವು ಹಿಂಡಲ್ಪಟ್ಟಾಗ ಅನೇಕರಿಂದ ಕರೆಯಲ್ಪಡುವವನೂ ಧನದಾತೃವೂ ಆದ ಇಂದ್ರನನ್ನುದ್ದೇಶಿಸಿ ಗಾನರೂಪದಲ್ಲಿ ಪಠಿಸಿರಿ.

English Translation.

Sing praises, when your libation is poured out, to him who is the invoked of many, the subduer (of foes), giving him gratification, like (fresh pasture) to cattle.

॥ ಸಂಹಿತಾಪಾಠ ॥

ನ ಘಾ ವಸುರ್ನಿ ಯಮತೇ ದಾನಂ ವಾಜಸ್ಯ ಗೋಮತಃ ।

ಯತ್ಸೀಮುಪ ಶ್ರವದ್ಗಿರಃ ॥ ೨೩ ॥

॥ ಪದಪಾಠಃ ॥

ನ । ಘ । ವಸುಃ । ನಿ । ಯಮತೇ । ದಾನಂ । ವಾಜಸ್ಯ । ಗೋಽಮತಃ ।

ಯತ್ । ಸೀಂ । ಉಪ । ಶ್ರವತ್ । ಗಿರಃ ॥ ೨೩ ॥

॥ ಸಾಯಣಭಾಷ್ಯಂ ॥

**ವಸುರ್ವಾಸಯಿತಾ ಸ ಇಂದ್ರೋ ಗೋಮತೋ ಬಹುಭಿರ್ಗೋಭಿರ್ಯುಕ್ತಸ್ಯ ವಾಜಸ್ಯಾನ್ನಸ್ಯ ಬಲಸ್ಯ ವಾ ದಾನಂ ಪ್ರದಾನಂ ನ ಘ ನ ಖಲು ನಿ ಯಮತೇ । ನಿಯಚ್ಛತಿ । ಉಪರತಂ ಕರೋತಿ । ಯದ್ಯದಿ ಸೀಮಯಂ ಗಿರೋಽಸ್ಮದೀಯಾಃ ಸ್ತುತೀರುಪ ಶ್ರವತ್ ಉಪಶೃಣುಯಾತ್ । ಸ್ತೋತ್ರಶ್ರವಣೇ ಸತಿ ಸರ್ವದಾ ದದಾತೀತ್ಯರ್ಥಃ ।**

॥ ಪ್ರತಿಪದಾರ್ಥ ॥

**ವಸುಃ**—ವಸತಿದಾಯಕನಾದ ಇಂದ್ರನು । **ಯತ್**—ಯಾವಾಗ । **ಸೀಮ್**—ಖಂಡಿತವಾಗಿಯೂ । **ಗಿರಃ**—ನಮ್ಮ ಸ್ತುತಿಗಳನ್ನು । **ಉಪ ಶ್ರವತ್**—ಕೇಳುವನೋ ಆಗ । **ಗೋಮತಃ**—ಗೋವುಗಳಿಂದ ಭರಿತವಾದ । **ವಾಜಸ್ಯ**—ಅನ್ನದ । **ದಾನಂ**—ಪ್ರದಾನವನ್ನು । **ನ ಘ ನಿ ಯಮತೇ**—ಖಂಡಿತ ತಡೆದಿಡುವುದಿಲ್ಲ.

॥ ಭಾವಾರ್ಥ ॥

ವಸತಿದಾಯಕನಾದ ಇಂದ್ರನು ಯಾವಾಗ ಖಂಡಿತವಾಗಿಯೂ ನಮ್ಮ ಸ್ತುತಿಗಳನ್ನು ಕೇಳುವನೋ ಆಗ ಗೋವುಗಳಿಂದ ಭರಿತವಾದ ಅನ್ನದ ಪ್ರದಾನವನ್ನು ಖಂಡಿತ ತಡೆದಿಡುವುದಿಲ್ಲ.

English Translation.

The giver of dwellings verily withholds not the gift of food conjoined with cattle, when he hears our praises.

॥ ಸಂಹಿತಾಪಾಠಃ ॥

ಕುವಿತ್ಸಸ್ಯ ಪ್ರ ಹಿ ವ್ರಜಂ ಗೋಮಂತಂ ದಸ್ಯುಹಾ ಗಮತ್ ।

ಶಚೀಭಿರಪ ನೋ ವರತ್ ॥ ೨೪ ॥

॥ ಪದಪಾಠಃ ॥

ಕುವಿತ್ऽಸಸ್ಯ । ಪ್ರ । ಹಿ । ವ್ರಜಂ । ಗೋऽಮಂತಂ । ದಸ್ಯುऽಹಾ । ಗಮತ್ ।
ಶಚೀಭಿಃ । ಅಪ । ನಃ । ವರತ್ ॥ ೨೪ ॥

॥ ಸಾಯಣಭಾಷ್ಯಂ ॥

ಕುವಿತ್ಸಸ್ಯ । ಕುವಿದ್ಬಹುಶಃ ಸ್ಯತಿ ಹಿನಸ್ತೀತಿ ಕುವಿತ್ಸೋ ನಾಮ ಕಶ್ಚಿತ್ । ತಸ್ಯ ಸ್ವಭೂತಂ ಗೋಮಂತಂ ಬಹುಭಿರ್ಗೋಭಿರ್ಯುಕ್ತಂ ವ್ರಜಂ ಗೋಷ್ಠಂ ದಸ್ಯುಹಾ ದಸ್ಯೂನಾಮುಪಕ್ಷಪಯಿತ್ರೂಣಾಂ ಹಂತೇಂದ್ರಃ ಪ್ರ ಗಮತ್ । ಪ್ರಕರ್ಷೇಣ ಗಚ್ಛತಿ । ಹಿ ಯಸ್ಮಾದೇವಂ ತಸ್ಮಾತ್ ಶಚೀಭಿರಾತ್ಮೀಯೈಃ ಕರ್ಮಭಿಃ ಪ್ರಜ್ಞಾಭಿರ್ವಾ ನೋऽಸ್ಮಾಕಂ ತಾ ಗಾ ಅಪ ವರತ್ । ನಿಗೂಢಾಸ್ತಾ ಅಪಾವೃಣೋತ್ ॥

॥ ಪ್ರತಿಪದಾರ್ಥ ॥

**ಕುವಿತ್ಸಸ್ಯ**—ಕುವಿತ್ಸನೆಂಬ ಅಸುರನ । **ಗೋಮಂತಂ**—ಗೋಭರಿತವಾದ । **ವ್ರಜಂ**—ಕೊಟ್ಟಿಗೆಯನ್ನು । **ದಸ್ಯುಹಾ**—ಶತ್ರುನಾಶಕನಾದ ಇಂದ್ರನು । **ಪ್ರ ಗಮತ್**—ಸುಲಭವಾಗಿ ಪ್ರವೇಶಿಸುವನು । **ಹಿ**—ಆದುದರಿಂದಲೇ । **ಶಚೀಭಿಃ**—ತನ್ನ ಉತ್ತಮವಾದ ಕರ್ಮಗಳಿಂದ । **ನಃ**—ನಮಗೂ । **ಅಪ ವರತ್**—(ಬಾಗಿಲನ್ನು) ತೆಗೆದಿರುತ್ತಾನೆ.

॥ ಭಾವಾರ್ಥ ॥

ಕುವಿತ್ಸನೆಂಬ ಅಸುರನ ಗೋಭರಿತವಾದ ಕೊಟ್ಟಿಗೆಯನ್ನು ಶತ್ರುನಾಶಕನಾದ ಇಂದ್ರನು ಸುಲಭವಾಗಿ ಪ್ರವೇಶಿಸುತ್ತಾನೆ. ಆದಕಾರಣದಿಂದಲೇ, ತನ್ನ ಉತ್ತಮವಾದ ಕರ್ಮಗಳಿಂದ ನಮಗೂ ಆ ಗೋಗೃಹದ ಬಾಗಿಲನ್ನೂ ತೆಗೆದೇ ಇರಿಸಿರುತ್ತಾನೆ.

## English Translation.

Then the destroyer of the Dasyus, proceeds to the cattle-crowded folds of Kuvitsa, and by his acts opens them for us.

॥ ಸಂಹಿತಾಪಾಠಃ ॥

ಇಮಾ ಉ ತ್ವಾ ಶತಕ್ರತೋऽಭಿ ಪ್ರ ಣೋನುವುರ್ಗಿರಃ ।
ಇಂದ್ರ ವತ್ಸಂ ನ ಮಾತರಃ ॥ ೨೫ ॥

॥ ಪದಪಾಠಃ ॥

ಇಮಾಃ । ಊಂ ಇತಿ । ತ್ವಾ । ಶತಕ್ರತೋ ಇತಿ ಶತऽಕ್ರತೋ । ಅಭಿ । ಪ್ರ । ನೋನುವುಃ । ಗಿರಃ ।
ಇಂದ್ರ । ವತ್ಸಂ । ನ । ಮಾತರಃ ॥ ೨೫ ॥

॥ ಸಾಯಣಭಾಷ್ಯಂ ॥

ಹೇ ಶತಕ್ರತೋ ಬಹುವಿಧಕರ್ಮನ್ ಬಹುವಿಧಪ್ರಜ್ಞ ವೇಂದ್ರ ತ್ವಾ ತ್ವಾಮಭೀಮಾ ಅಸ್ಮದೀಯಾ ಗಿರಃ ಸ್ತುತಯಃ ಪ್ರ ಣೋನುವುಃ । ಪ್ರಕರ್ಷೇಣ ಪುನಃ ಪುನರ್ಗಚ್ಛಂತಿ । ನೌತಿರತ್ರ ಗತಿಕರ್ಮಾ । ತತ್ರ ದೃಷ್ಟಾಂತಃ । ವತ್ಸಂ ನ ಮಾತರಃ । ಯಥಾ ಮಾತರೋ ಗಾವೋ ಗೃಹೇ ವರ್ತಮಾನಂ ವತ್ಸಂ ಶೀಘ್ರಮಭಿಗಚ್ಛಂತಿ ತದ್ವತ್ । ಯದ್ವಾ । ಅಸ್ಮದೀಯಾ ವಾಚಸ್ತ್ವಾಮಭಿ ನೋನುವುಃ । ಅಭಿತಃ ಶಬ್ದಯಂತಿ । ಸ್ತುವಂತಿ । ಯಥಾ ಗಾವೋ ವತ್ಸಮಭಿಲಕ್ಷ್ಯ ಹಂಭಾರವಂ ಕುರ್ವಂತಿ ತದ್ವತ್ ॥

॥ ಪ್ರತಿಪದಾರ್ಥ ॥

**ಶತಕ್ರತೋ**—ಅನೇಕ ವಿಧವಾದ ಕರ್ಮಕರ್ತನಾದ । **ಇಂದ್ರ**—ಎಲೈ ಇಂದ್ರನೇ । **ಮಾತರಃ**—ತಾಯಿ ಹಸುಗಳು । **ವತ್ಸಂ ನ**—ತಮ್ಮ ಕರುಗಳಿಗೆದುರಾಗಿ ಆದರದಿಂದ ಓಡಿಹೋಗಿ ಸೇರುವಂತೆ । **ಇಮಾ ಗಿರಃ**—ನಮ್ಮಿಂದ ಪಠಿತವಾದ ಈ ಸ್ತುತಿಗಳು । **ತ್ವಾ ಅಭಿ**—ನಿನಗಭಿಮುಖವಾಗಿ । **ಪ್ರ ಣೋನುವುಃ**—ಪದೇ ಪದೇ ಬಂದು ಸೇರುತ್ತವೆ.

॥ ಭಾವಾರ್ಥ ॥

ಅನೇಕ ವಿಧವಾದ ಕರ್ಮಗಳ ಕರ್ತನಾದ ಎಲೈ ಇಂದ್ರನೇ, ತಾಯಿಹಸುಗಳು ತಮ್ಮ ವತ್ಸಗಳಿಗೆದುರಾಗಿ ಆದರದಿಂದ ಓಡಿಹೋಗಿ ಸೇರುವಂತೆ, ನಮ್ಮಿಂದ ಪಠಿತವಾದ ಈ ಸ್ತುತಿಗಳು ನಿನಗಭಿಮುಖವಾಗಿ ಪದೇಪದೇ ಬಂದುಸೇರುತ್ತವೆ.

English Translation.

Indra, performer of many exploits, these our praises repeatedly recur to you as parent (cows) to their young.

॥ ಸಂಹಿತಾಪಾಠಃ ॥

ದೂಣಾಶಂ ಸಖ್ಯಂ ತವ ಗೌರಸಿ ವೀರ ಗವ್ಯತೇ ।
ಅಶ್ವೋ ಅಶ್ವಾಯತೇ ಭವ ॥ ೨೬ ॥

|| ಪದಪಾಠಃ ||

ದುಃऽನಶಂ । ಸಖ್ಯಂ । ತವ । ಗೌಃ । ಅಸಿ । ವೀರ । ಗವ್ಯತೇ ।

ಅಶ್ವಃ । ಅಶ್ವऽಯತೇ । ಭವ ॥ ೨೬ ॥

|| ಸಾಯಣಭಾಷ್ಯಂ ||

ಹೇ ಇಂದ್ರ ತವ ತ್ವದೀಯಂ ಸಖ್ಯಂ ಸಖಿತ್ವಂ ದೂಣಾಶಂ ದುರ್ಣಾಶಂ ನಾಶಯಿತುಮಶಕ್ಯಂ । ಅತಿದೃಢಮಿತ್ಯರ್ಥಃ । ಅತೋ ಹೇ ವೀರ ವೀರಯಿತರಿಂದ್ರ ಗವ್ಯತೇ ಗಾಮಾತ್ಮನ ಇಚ್ಛತೇ ತ್ವಂ ಗೌರಸಿ । ಗವಾಂ ಪ್ರದಾತಾ ಭವಸಿ । ಉಪಚಾರಾತ್ಕಾರಣೇ ಕಾರ್ಯಶಬ್ದಃ । ತಥಾಶ್ವಾಯತೇಽಶ್ವಾನಾತ್ಮನ ಇಚ್ಛತೇಽಶ್ವೋ ಭವ । ಅಶ್ವಪ್ರದೋ ಭವಸಿ ॥

|| ಪ್ರತಿಪದಾರ್ಥ ||

(ಎಲೈ ಇಂದ್ರನೇ) **ತವ**—ನಿನ್ನ । **ಸಖ್ಯಂ**—ಸಖಿತ್ವವು । **ದೂಣಾಶಂ**—ಸುಲಭವಾಗಿ ನಾಶವಾಗ ತಕ್ಕದ್ದಲ್ಲ । **ವೀರ**—ಪರಾಕ್ರಮಿಯಾದ ಎಲೈ ಇಂದ್ರನೇ । **ಗವ್ಯತೇ**—ಗೋವುಗಳನ್ನು ಇಚ್ಛಿಸುವವರಿಗೆ । **ಗೌಃ ಅಸಿ**—ಗೋವುಗಳ ದಾತೃವಾಗಿದ್ದೀಯೆ । **ಅಶ್ವಾಯತೇ**—ಅಶ್ವಗಳನ್ನು ಇಚ್ಛಿಸುವವರಿಗೆ । **ಅಶ್ವಃ ಭವ**—ಅಶ್ವಗಳ ದಾತೃವಾಗಿದ್ದೀಯೆ.

|| ಭಾವಾರ್ಥ ||

ಎಲೈ ಇಂದ್ರನೇ, ನಿನ್ನ ಸಖಿತ್ವವು ಸುಲಭವಾಗಿ ನಾಶವಾಗತಕ್ಕದ್ದಲ್ಲ. ಪರಾಕ್ರಮಿಯಾದ ಎಲೈ ಇಂದ್ರನೇ, ನೀನು ಗೋವುಗಳನ್ನು ಇಚ್ಛಿಸುವವರಿಗೆ ಗೋವುಗಳನ್ನೂ, ಅಶ್ವೇಚ್ಛುಗಳಿಗೆ ಅಶ್ವಗಳನ್ನೂ ಅನುಗ್ರಹಿಸಿ ಕೊಡುತ್ತೀಯೆ.

## English Translation.

Your friendship, Indra, is not easily lost : you, hero, are (the giver of) cattle to him who desires cattle, (of) horses to him who desires horses.

|| ಸಂಹಿತಾಪಾಠಃ ||

ಸ ಮಂದಸ್ವಾ ಹ್ಯಂಧಸೋ ರಾಧಸೇ ತನ್ವಾ ಮಹೇ ।

ನ ಸ್ತೋತಾರಂ ನಿದೇ ಕರಃ ॥ ೨೭ ॥

|| ಪದಪಾಠಃ ||

ಸಃ । ಮಂದಸ್ವ । ಹಿ । ಅಂಧಸಃ । ರಾಧಸೇ । ತನ್ವಾ । ಮಹೇ ।

ನ । ಸ್ತೋತಾರಂ । ನಿದೇ । ಕರಃ ॥ ೨೭ ॥

**ಹೇ ಇಂದ್ರ ಸ ತಾದೃಶಸ್ತ್ವಮಂಧಸಃ ಸೋಮಸ್ಯ ಪಾನೇನ ಹೃಷ್ಟಯಾ ತನ್ವಾತ್ಮೀಯೇನ ಶರೀರೇಣ ಮಂದಸ್ವ । ಮೋದಸ್ವ । ಕಿಮರ್ಥಂ । ಮಹೇ ಮಹತೇ ರಾಧಸೇ ಧನಾರ್ಥಂ । ಹಿ ಪೂರಣಃ । ಅಪಿ ಚ ತ್ವದೀಯಂ ಸ್ತೋತಾರಂ ನಿದೇ ನಿಂದಕಾಯ ತಸ್ಯ ವಶಂ ನ ಕರಃ । ಕುರ್ಯಾಃ ॥**

॥ ಪ್ರತಿಪದಾರ್ಥ ॥

(ಎಲೈ ಇಂದ್ರನೇ) **ಸಃ**—ಪ್ರಸಿದ್ಧನಾದ ನೀನು । **ಮಹೇ**—ಮಹತ್ತಾದ । **ರಾಧಸೇ**—ಧನಾರ್ಥವಾಗಿ । **ಅಂಧಸಃ**—ಸೋಮಪಾನದಿಂದ ತೃಪ್ತವಾದ । **ತನ್ವಾ**—ಶರೀರದಿಂದ । **ಮಂದಸ್ವ**—ಸಂತುಷ್ಟಿಯನ್ನು ಹೊಂದು । **ಸ್ತೋತಾರಂ**—ನಿನ್ನನ್ನು ಸ್ತುತಿಸುವವನನ್ನು । **ನಿದೇ**—ನಿಂದಕನಾದ ಶತ್ರುವಿಗೆ । **ನ ಕರಃ**—ಬಿಟ್ಟುಕೊಡಬೇಡ.

॥ ಭಾವಾರ್ಥ ॥

ಎಲೈ ಇಂದ್ರನೇ, ಪ್ರಸಿದ್ಧನಾದ ನೀನು ಮಹತ್ತಾದ ಧನಲಾಭಕ್ಕಾಗಿ ಸೋಮಪಾನದಿಂದ ತೃಪ್ತವಾದ ಶರೀರದಿಂದ ಸಂತುಷ್ಟಿಯನ್ನು ಹೊಂದು. ನಿನ್ನನ್ನು ಸ್ತುತಿಸುವವನನ್ನು ನಿಂದಕನಾದ ಶತ್ರುವಿಗೆ ಬಿಟ್ಟುಕೊಡಬೇಡ.

English Translation.

Delight your person with the (beverage of the) libation (offered) for the sake of great treasure : subject not your worshipper to his reviler.

॥ ಸಂಹಿತಾಪಾಠಃ ॥

ಇಮಾ ಉ ತ್ವಾ ಸುತೇಸುತೇ ನಕ್ಷಂತೇ ಗಿರ್ವಣೋ ಗಿರಃ ।
ವತ್ಸಂ ಗಾವೋ ನ ಧೇನವಃ ॥ ೨೮ ॥

॥ ಪದಪಾಠಃ ॥

ಇಮಾಃ । ಊಂ ಇತಿ । ತ್ವಾ । ಸುತೇಽಸುತೇ । ನಕ್ಷಂತೇ । ಗಿರ್ವಣಃ । ಗಿರಃ ।
ವತ್ಸಂ । ಗಾವಃ । ನ । ಧೇನವಃ ॥ ೨೮ ॥

॥ ಸಾಯಣಭಾಷ್ಯಂ ॥

**ಹೇ ಗಿರ್ವಣೋ ಗೀರ್ಭಿರ್ವನನೀಯೇಂದ್ರ ಸುತೇ ಸುತೇ ಸೋಮೇಽಭಿಷುತೇಽಭಿಷುತೇ ಸತೀಮಾ ಅಸ್ಮದೀಯಾ ಗಿರಃ ಸ್ತುತಯಸ್ತ್ವಾ ತ್ವಾಂ ನಕ್ಷಂತೇ । ವ್ಯಾಪ್ನುವಂತಿ । ಧೇನವೋ ದೋಗ್ಧ್ರ್ಯೋ ಗಾವೋ ನ ಗಾವ ಇವ ವತ್ಸಂ । ಯಥಾ ಶೀಘ್ರಂ ವತ್ಸಂ ವ್ಯಾಪ್ನುವಂತಿ ತದ್ವತ್ ॥**

॥ ಪ್ರತಿಪದಾರ್ಥ ॥

**ಗಿರ್ವಣಃ**—ಸ್ತುತಿಗಳಿಂದ ಪೂಜಿತನಾಗತಕ್ಕ ಎಲೈ ಇಂದ್ರನೇ। **ಧೇನವಃ**—ಕರೆಯತಕ್ಕ। **ಗಾವಃ**—ಪಶುಗಳು। **ವತ್ಸಂ ನ**—ತಮ್ಮ ಕರುಗಳನ್ನು ಬಂದು ಸೇರಿಕೊಳ್ಳುವಂತೆ। **ಸುತೇ ಸುತೇ**—ಸೋಮರಸವು ಹಿಂಡಲ್ಪಟ್ಟಾಗೆಲ್ಲಾ। **ಇಮಾ ಗಿರಃ**—ಈ ನಮ್ಮ ಸ್ತುತಿವಾಕ್ಯಗಳು। **ತ್ವಾ**—ನಿನ್ನನ್ನು। **ನಕ್ಷಂತೇ**—ಬಂದು ವ್ಯಾಪಿಸಿಕೊಳ್ಳುತ್ತವೆ.

॥ ಭಾವಾರ್ಥ ॥

ಸ್ತುತಿಗಳಿಂದ ಪೂಜಿತನಾಗತಕ್ಕ ಎಲೈ ಇಂದ್ರನೇ, ಕರೆಯತಕ್ಕ ಪಶುಗಳು ತಮ್ಮ ಕರುಗಳನ್ನು ಬಂದು ಸೇರಿಕೊಳ್ಳುವಂತೆ ಸೋಮರಸವು ಹಿಂಡಲ್ಪಟ್ಟಾಗೆಲ್ಲಾ, ಈ ನಮ್ಮ ಸ್ತುತಿವಾಕ್ಯಗಳು ನಿನ್ನನ್ನು ಬಂದು ವ್ಯಾಪಿಸಿಕೊಳ್ಳುತ್ತವೆ.

English Translation.

These our praises tend, as the libations are repeatedly poured out, eagerly to you who are gratified by praise, as the milch cows (hasten) to their calves.

॥ ಸಂಹಿತಾಪಾಠಃ ॥

**ಪುರೂತಮಂ ಪುರೂಣಾಂ ಸ್ತೋತೄಣಾಂ ವಿವಾಚಿ ।**

**ವಾಜೇಭಿರ್ವಾಜಯತಾಂ ॥ ೨೯ ॥**

॥ ಪದಪಾಠಃ ॥

**ಪುರುಽತಮಂ । ಪುರೂಣಾಂ । ಸ್ತೋತೄಣಾಂ । ವಿಽವಾಚಿ ।**

**ವಾಜೇಭಿಃ । ವಾಜಽಯತಾಂ ॥ ೨೯ ॥**

॥ ಸಾಯಣಭಾಷ್ಯಂ ॥

**ಹೇ ಇಂದ್ರ ಪುರುತಮಂ ಪುರೂಣಾಂ ಬಹೂನಾಂ ಶತ್ರೂಣಾಂ ತಮಯಿತಾರಂ ಗ್ಲಪಯಿತಾರಂ ತ್ವಾಂ ಪುರೂಣಾಂ ಬಹೂನಾಂ ಸ್ತೋತೄಣಾಮಸ್ಮಾಕಂ ಸ್ತುತಿಃ ಪ್ರಾಪ್ನೋತ್ವಿತಿ ಶೇಷಃ । ಕೀದೃಶಾನಾಂ । ವಿವಾಚಿ ವಿವಿಧಾಃ ಸ್ತುತಶಸ್ತ್ರಾತ್ಮಿಕಾ ವಾಚೋ ಯಸ್ಮಿನ್ಯಜ್ಞೇ ತಸ್ಮಿನ್ವಾಜೇಭಿರ್ವಾಜೈರ್ಹವಿರ್ಲಕ್ಷಣೈರನ್ನೈರ್ವಾಜಯತಾಂ ವಾಜವಂತಂ ಬಲವಂತಂ ವಾ ತ್ವಾಂ ಕುರ್ವತಾಂ ॥**

॥ ಪ್ರತಿಪದಾರ್ಥ ॥

(ಎಲೈ ಇಂದ್ರನೇ) **ವಿವಾಚಿ**—ಅನೇಕವಿಧವಾದ ಸ್ತುತಿಗಳಿಂದ ಕೂಡಿದ ಯಜ್ಞದಲ್ಲಿ। **ವಾಜೇಭಿಃ**—ಹವಿಸ್ಸಿನ ರೂಪದ ಅನ್ನಗಳಿಂದ। **ವಾಜಯತಾಂ**—ನಿನ್ನನ್ನು ಶಕ್ತಿಯುತನನ್ನಾಗಿ ಮಾಡತಕ್ಕವರೂ। **ಪುರೂಣಾಂ**-

ಅನೇಕ ಸಂಖ್ಯೆಯುಳ್ಳವರೂ ಆದ | **ಸ್ತೋತೄಣಾಂ**— ಸ್ತುತಿಕರ್ತರಾದ ನಮ್ಮ (ಸ್ತುತಿಗಳು) | **ಪುರುತಮಃ**— ಅನೇಕ ಶತ್ರುಗಳನ್ನು ಕೊಲ್ಲುವ ನಿನ್ನನ್ನು ಬಂದು ಸೇರಲಿ.

॥ ಭಾವಾರ್ಥ ॥

ಎಲೈ ಇಂದ್ರನೇ, ಅನೇಕವಿಧವಾದ ಸ್ತುತಿಗಳಿಂದ ಕೂಡಿದ ಯಜ್ಞದಲ್ಲಿ ಹವಿಸ್ಸಿನ ರೂಪದ ಅನ್ನಗಳಿಂದ ನಿನ್ನನ್ನು ಶಕ್ತಿಯುತನನ್ನಾಗಿ ಮಾಡತಕ್ಕವರೂ, ಅನೇಕ ಸಂಖ್ಯೆಯುಳ್ಳವರೂ ಆದ ಸ್ತುತಿಕರ್ತರಾದ ನಮ್ಮ ಸ್ತುತಿಗಳು ಅನೇಕ ಶತ್ರುಗಳನ್ನು ಕೊಲ್ಲುವ ನಿನ್ನನ್ನು ಬಂದು ಸೇರಿಕೊಳ್ಳಲಿ.

English Translation.

May the praises of many worshippers offered at the sacrifice, (accompanied) by (sacrificial) viands, invigorate you, destroyer of multitudes.

॥ ಸಂಹಿತಾಪಾಠಃ ॥

ಅಸ್ಮಾಕಮಿಂದ್ರ ಭೂತು ತೇ ಸ್ತೋಮೋ ವಾಹಿಷ್ಠೋ ಅಂತಮಃ ।
ಅಸ್ಮಾನ್ರಾಯೇ ಮಹೇ ಹಿನು ॥ ೩೦ ॥

॥ ಪದಪಾಠಃ ॥

ಅಸ್ಮಾಕಂ । ಇಂದ್ರ । ಭೂತು । ತೇ । ಸ್ತೋಮಃ । ವಾಹಿಷ್ಠಃ । ಅಂತಮಃ ।
ಅಸ್ಮಾನ್ । ರಾಯೇ । ಮಹೇ । ಹಿನು ॥ ೩೦ ॥

॥ ಸಾಯಣಭಾಷ್ಯಂ ॥

**ಹೇ ಇಂದ್ರ ವಾಹಿಷ್ಠೋ ವೋಢೃತಮೋಽಸ್ಮಾಕಂ ಸ್ತೋಮಃ ಸ್ತೋತ್ರಂ ತೇ ತವಾಂತಮೋಽನ್ತಿಕತಮೋ ಭೂತು । ಭವತು । ತ್ವಂ ಚಾಸ್ಮಾನ್ಮಹೇ ಮಹತೇ ರಾಯೇ ಧನಾಯ ಹಿನು । ಪ್ರೇರಯ ॥**

॥ ಪ್ರತಿಪದಾರ್ಥ ॥

ಇಂದ್ರ—ಎಲೈ ಇಂದ್ರನೇ | **ವಾಹಿಷ್ಠಃ**— ಅತಿಶಯವಾಗಿ ಔನ್ನತ್ಯವನ್ನು ಹೊಂದಿರುವ | **ಅಸ್ಮಾಕಂ ಸ್ತೋಮಃ**—ನಮ್ಮ ಸ್ತುತಿಯು | **ತೇ**—ನಿನಗೆ | **ಅಂತಮಃ**—ಅತ್ಯಂತ ಸಮೀಪಸ್ಥವಾಗಿ | **ಭೂತು**—ಬಂದಿರಲಿ | **ಅಸ್ಮಾನ್**—ನಮ್ಮನ್ನು | **ಮಹೇ**—ಮಹತ್ತಾದ | **ರಾಯೇ**—ಧನಾರ್ಥವಾಗಿ | **ಹಿನು**—ಪ್ರೇರಿಸು.

॥ ಭಾವಾರ್ಥ ॥

ಎಲೈ ಇಂದ್ರನೇ, ಅತಿಶಯವಾಗಿ ಔನ್ನತ್ಯವನ್ನು ಹೊಂದಿರುವ ನಮ್ಮ ಸ್ತುತಿಯು ನಿನಗೆ ಅತ್ಯಂತ ಸಮೀಪಸ್ಥವಾಗಿ ಬಂದಿರಲಿ. ನಮ್ಮನ್ನು ಮಹತ್ತಾದ ಧನಾರ್ಥವಾಗಿ ಪ್ರೇರಿಸು.

English Translation.

May our most elevating praise be near, Indra, to you, and urge us to (the acquirement of) great riches.

॥ ಸಂಹಿತಾಪಾಠಃ ॥

ಅಧಿ ಬೃಬುಃ ಪಣೀನಾಂ ವರ್ಷಿಷ್ಠೇ ಮೂರ್ಧನ್ನಸ್ಥಾತ್ ।
ಉರುಃ ಕಕ್ಷೋ ನ ಗಾಂಗ್ಯಃ ॥ ೩೧ ॥

॥ ಪದಪಾಠಃ ॥

ಅಧಿ । ಬೃಬುಃ । ಪಣೀನಾಂ । ವರ್ಷಿಷ್ಠೇ । ಮೂರ್ಧನ್ । ಅಸ್ಥಾತ್ ।
ಉರುಃ । ಕಕ್ಷಃ । ನ । ಗಾಂಗ್ಯಃ ॥ ೩೧ ॥

॥ ಸಾಯಣಭಾಷ್ಯಂ ॥

ಬೃಬುರ್ನಾಮ ಪಣೀನಾಂ ತಕ್ಷಾ । ತತ್ಸಕಾಶಾಲ್ಲಬ್ಧಧನೋ ಭರದ್ವಾಜಸ್ತದೀಯಂ ದಾನಮನೇನ ತೃಚೇನಾಸ್ತೌತ್ । ಏತಚ್ಚ ಮನುನಾ ಸ್ಮರ್ಯತೇ । ಭರದ್ವಾಜಃ ಕ್ಷುಧಾರ್ತಸ್ತು ಸಪುತ್ರೋ ವಿಜನೇ ವನೇ । ಬಹ್ವೀರ್ಗಾಃ ಪ್ರತಿಜಗ್ರಾಹ ಬೃಬೋಸ್ತಕ್ಷ್ಣೋ ಮಹಾಯಶಾಃ ॥ ಮ ೧೦-೧೦೭ ॥ ಇತಿ ॥ ಪಣನಾತ್ಪಣಯೋ ವಣಿಜ ಏತತ್ಸಂಜ್ಞಾ ಅಸುರಾ ವಾ । ತೇಷಾಂ ತಕ್ಷಾ ಬೃಬುರ್ವರ್ಷಿಷ್ಠೇ ಮೂರ್ಧನ್ಮೂರ್ಧನಿ ಮೂರ್ಧವದುಚ್ಛ್ರಿತೇ ಸ್ಥಲೇಽಧ್ಯಸ್ಥಾತ್ ಅಧಿಷ್ಠಿತೋಽಭೂತ್ ಗಾಂಗ್ಯೋ ಗಂಗಾಯಾಃ ಕೂಲ ಉನ್ನತೇ ಭವಃ ಕಕ್ಷೋ ನ ಕಕ್ಷ ಇವೋರುರ್ವಿಸ್ತೀರ್ಣಃ ಸನ್ । ಜಾತಿತೋ ಹೀನೋಽಪಿ ದಾತೃತ್ವಾತ್ಸರ್ವತ್ರ ಶ್ರೇಷ್ಠೋ ಭವತೀತ್ಯರ್ಥಃ ॥

॥ ಪ್ರತಿಪದಾರ್ಥ ॥

**ಗಾಂಗ್ಯಃ**—ಗಂಗಾನದಿಯ । **ಕಕ್ಷೋ ನ**—ಅತ್ಯುನ್ನತವಾದ ಪದದಂತೆ । **ಬೃಬುಃ**—ಬೃಬುವೆಂಬ ತಕ್ಷನು । **ಪಣೀನಾಂ**—ಪಣಿಗಳ ನಡುವೆ । **ವರ್ಷಿಷ್ಠೇ**—ಅತ್ಯಂತ ಶ್ರೇಷ್ಠವಾದುದೂ । **ಮೂರ್ಧನ್**—ಅತ್ಯುನ್ನತವಾದುದೂ ಆದ ಸ್ಥಾನವನ್ನು । **ಅಧಿ ಅಸ್ಥಾತ್**—ಪಡೆದಿದ್ದಾನೆ । **ಉರುಃ**—ವಿಸ್ತೃತವಾದ ಯಶಸ್ಸನ್ನೂ ಹೊಂದಿದ್ದಾನೆ.

॥ ಭಾವಾರ್ಥ ॥

ಗಂಗಾನದಿಯ ಅತ್ಯುನ್ನತವಾದ ದಡದಂತೆ, ಬೃಬುವೆಂಬ ತಕ್ಷನು ಪಣಿಗಳಲ್ಲೆಲ್ಲಾ ಅತ್ಯಂತ ಶ್ರೇಷ್ಠವಾದುದೂ, ಅತ್ಯುನ್ನತವಾದುದೂ ಆದ ಸ್ಥಾನವನ್ನು ಪಡೆದು ಅತ್ಯಂತ ವಿಸ್ತೃತವಾದ ಯಶಸ್ಸನ್ನು ಹೊಂದಿದ್ದಾನೆ.

## English Translation.

Bribu presided over the high places of the Panis, like the elevated bank of the Ganges.

॥ ಸಂಹಿತಾಪಾಠಃ ॥

ಯಸ್ಯ ವಾಯೋರಿವ ದ್ರವದ್ಭದ್ರಾ ರಾತಿಃ ಸಹಸ್ರಿಣೀ ।

ಸದ್ಯೋ ದಾನಾಯ ಮಂಹತೇ ॥ ೩೨ ॥

॥ ಪದಪಾಠಃ ॥

ಯಸ್ಯ । ವಾಯೋಃऽಇವ । ದ್ರವತ್ । ಭದ್ರಾ । ರಾತಿಃ । ಸಹಸ್ರಿಣೀ ।

ಸದ್ಯಃ । ದಾನಾಯ । ಮಂಹತೇ ॥ ೩೨ ॥

॥ ಸಾಯಣಭಾಷ್ಯಂ ॥

ವಾಯೋರಿವ ದ್ರವತ್ ಕ್ಷಿಪ್ರಗಾಮಿನೋ ಯಸ್ಯ ಬೃಬೋರ್ಭದ್ರಾ ಕಲ್ಯಾಣೀ ಸಹಸ್ರಿಣೀ ಸಹಸ್ರ ಸಂಖ್ಯಾಯುಕ್ತಾ ರಾತಿರ್ದಾನಂ ಸದ್ಯಃ ಸ್ತುತಿಸಮಯ ಏವ ದಾನಾಯ ದಾನಕಾಮಾಯ ಯಾಚಮಾನಾಯ ಮಹ್ಯಂ ಮಂಹತೇ ಅಪೇಕ್ಷಿತಂ ಧನಂ ದದಾತಿ ತಂ ಬೃಬುಮಿತ್ಯುತ್ತರಸ್ಯಾಮೃಚಿ ಸಂಬಂಧಃ ॥

॥ ಪ್ರತಿಪದಾರ್ಥ ॥

**ವಾಯೋಃ ಇವ**—ವಾಯುವಿನಂತೆ । **ದ್ರವತ್**—ಶೀಘ್ರಗಾಮಿಯಾದ । **ಯಸ್ಯ**— ಯಾವ ಬೃಬುವಿನ । **ಭದ್ರಾ**—ಮಂಗಳಾತ್ಮಕವಾದುದೂ । **ಸಹಸ್ರಿಣೀ**—ಸಹಸ್ರಸಂಖ್ಯಾಕವಾದುದೂ ಆದ । **ರಾತಿಃ**—ದಾನವು । **ಸದ್ಯಃ**—ಸ್ತುತಿಸಮಯದಲ್ಲೇ । **ದಾನಾಯ**— ದಾನವನ್ನಪೇಕ್ಷಿಸುವವನೂ । **ಮಂಹತೇ**—ಧನಾರ್ಥಿಯೂ ಆದ ನನಗೆ ಕೊಡಲ್ಪಟ್ಟಿತೋ (ಅಂತಹ ಬೃಬುವು ಪ್ರಸಿದ್ಧನಾಗಿದ್ದಾನೆ.)

॥ ಭಾವಾರ್ಥ ॥

ವಾಯುವಿನಂತೆ ಶೀಘ್ರಗಾಮಿಯಾದ ಯಾವ ಬೃಬುವಿನ ಮಂಗಳಾತ್ಮಕವಾದುದೂ, ಸಹಸ್ರಸಂಖ್ಯಾಕ ವಾದುದೂ ಆದ ದಾನವು ಸ್ತುತಿಸಮಯದಲ್ಲೇ ದಾನವನ್ನಪೇಕ್ಷಿಸಿದ ಧನಾರ್ಥಿಯಾದ ನನಗೆ ಕೊಡಲ್ಪಟ್ಟಿತೋ ಅಂತಹ ಬೃಬುವು ಪ್ರಸಿದ್ಧನಾಗಿದ್ದಾನೆ.

## English Translation.

Of whom, prompt as the wind, the liberal donation of thousands (of cattle) has been quickly given to (me) soliciting a gift.

॥ ಸಂಹಿತಾಪಾಠಃ ॥

ತತ್ಸು ನೋ ವಿಶ್ವೇ ಅರ್ಯ ಆ ಸದಾ ಗೃಣಂತಿ ಕಾರವಃ ।
ಬೃಬುಂ ಸಹಸ್ರದಾತಮಂ ಸೂರಿಂ ಸಹಸ್ರಸಾತಮಂ ॥ ೩೩ ॥

॥ ಪದಪಾಠಃ ॥

ತತ್ । ಸು । ನಃ । ವಿಶ್ವೇ । ಅರ್ಯಃ । ಆ । ಸದಾ । ಗೃಣಂತಿ । ಕಾರವಃ ।
ಬೃಬುಂ । ಸಹಸ್ರಽದಾತಮಂ । ಸೂರಿಂ । ಸಹಸ್ರಽಸಾತಮಂ ॥ ೩೩ ॥

॥ ಸಾಯಣಭಾಷ್ಯಂ ॥

ತತ್ತಂ ಬೃಬುಂ ನೋಽಸ್ಮದೀಯಾ ವಿಶ್ವೇ ಸರ್ವೇಽರ್ಯಃ ಸ್ತುತೀನಾಮೀರಯಿತಾರಃ ಕಾರವಃ ಸ್ತೋತಾರಃ ಸದಾ ಸು ಸುಷ್ಠ್ವಾ ಗೃಣಂತಿ । ಅಭಿಗೃಣಂತಿ । ಅಭಿಷ್ಟುವಂತಿ । ಕೀದೃಶಂ । ಸಹಸ್ರದಾತಮಮತಿಶಯೇನ ಸಹಸ್ರಸಂಖ್ಯಸ್ಯ ಧನಸ್ಯ ದಾತಾರಂ ಸೂರಿಂ ಪ್ರಾಜ್ಞಂ ಯದ್ವಾ ಪ್ರೇರಯಿತಾರಂ ಸಹಸ್ರಸಾತಮಮತಿಶಯೇನ ಸಹಸ್ರಸಂಖ್ಯಸ್ಯ ಸ್ತೋತ್ರಸ್ಯ ಧನಸ್ಯ ವಾ ಸಂಭಕ್ತಾರಂ ॥

॥ ಪ್ರತಿಪದಾರ್ಥ ॥

**ಸಹಸ್ರದಾತಮಂ**—ಸಹಸ್ರಸಂಖ್ಯಾಕವಾದ ಧನದ ದಾತೃವೂ । **ಸೂರಿಂ**—ಪ್ರಾಜ್ಞನೂ । **ಸಹಸ್ರಸಾತಮಂ**—ಸಹಸ್ರಸಂಖ್ಯಾಕವಾದ ಧನಕ್ಕೆ ಭಾಗಿಯೂ ಆದ । **ತತ್ ಬೃಬುಂ**—ಅದೇ ಬೃಬುವನ್ನು । **ನಃ**—ನಮಗೆ ಸೇರಿದವರೂ । **ವಿಶ್ವೇ**—ಸಮಸ್ತರೂ । **ಅರ್ಯಃ**—ಪೂಜ್ಯರೂ ಆದ । **ಕಾರವಃ**—ಸ್ತುತಿಕರ್ತರು । **ಸದಾ**—ಯಾವಾಗಲೂ । **ಸು**—ಅತಿಶಯವಾಗಿ । **ಆ ಗೃಣಂತಿ**—ಪೂರ್ಣವಾಗಿಯೂ ಪ್ರಶಂಸಿಸುತ್ತಾರೆ.

॥ ಭಾವಾರ್ಥ ॥

ಸಹಸ್ರಸಂಖ್ಯಾಕವಾದ ಧನಕ್ಕೆ ದಾತೃವೂ, ಪ್ರಾಜ್ಞನೂ, ಸಹಸ್ರಸಂಖ್ಯಾಕವಾದ ಧನಕ್ಕೆ ಅಧಿಪತಿಯೂ ಆದ ಅದೇ ಬೃಬುವನ್ನು ನಮಗೆ ಸೇರಿದವರೂ, ಸಮಸ್ತರೂ ಪೂಜ್ಯರೂ ಆದ ಸ್ತುತಿಕರ್ತರು ಸರ್ವದಾ ಅತ್ಯಂತ ಅತಿಶಯವಾಗಿ ಪ್ರಶಂಸಿಸುತ್ತಾರೆ.

## English Translation.

Whom, therefore, we all, who are the profferers and bestowers of praise ever commend, as the pious Bribu, the donor of thousands (of cattle) the recciver of thousands (of laudations).



# ನಲವತ್ತಾರನೆಯ ಸೂಕ್ತವು

॥ ಸಾಯಣಭಾಷ್ಯಂ ॥

**ತ್ವಾಮಿದ್ಧೀತಿ ಚತುರ್ದಶರ್ಚಂ ತೃತೀಯಂ ಸೂಕ್ತಂ ಬೃಹಸ್ಪತಿಪುತ್ರಸ್ಯ ಶಂಯೋರಾರ್ಷಮೈಂದ್ರಂ। ಪ್ರಥಮಾತೃತೀಯಾದ್ಯಾ ಅಯುಜೋ ಬೃಹತ್ಯೋ ದ್ವಿತೀಯಾಚತುರ್ಥ್ಯಾದ್ಯಾ ಯುಜಃ ಸತೋಬೃಹತ್ಯಃ। ತಥಾ ಚಾನುಕ್ರಾಂತಂ। ತ್ವಾಮಿದ್ಧಿ ಷಳೂನಾ ಪ್ರಾಗಾಥಮಿತಿ॥ ಸೂಕ್ತವಿನಿಯೋಗೋ ಲೈಂಗಿಕಃ॥ ಯದಿ ಜ್ಯೋತಿಃಷ್ಟೋಮೋ ಬೃಹತ್ಪೃಷ್ಠಃ ಸ್ಯಾತ್ತದಾನೀಂ ನಿಷ್ಕೇವಲ್ಯಸ್ಯಾದ್ಯಃ ಪ್ರಗಾಥಃ ಸ್ತೋತ್ರಿಯಃ। ಸೂತ್ರಿತಂ ಚ। ಯದ್ಯು ವೈ ಬೃಹತ್ತ್ವಾಮಿದ್ಧಿ ಹವಾಮಹೇ। ಆ. ೫-೧೫। ಇತಿ॥ ಮಹಾವ್ರತೇಽಪಿ ನಿಷ್ಕೇವಲ್ಯೇಽಯಂ ಪ್ರಗಾಥಃ ಶಂಸನೀಯಃ। ತಥೈವ ಪಂಚಮಾರಣ್ಯಕೇ ಸೂತ್ರಿತಂ। ತ್ವಾಮಿದ್ಧಿ ಹವಾಮಹೇ ತ್ವಂ ಹ್ಯೇಹಿ ಚೇರವ ಇತಿ ಬೃಹತಃ ಸ್ತೋತ್ರಿಯಾನುರೂಪೌ। ಐ. ಆ. ೫-೨-೨। ಇತಿ॥**

ಅನುವಾದವು—**ತ್ವಾಮಿದ್ಧಿ** ಎಂಬ ಈ ಸೂಕ್ತವು ನಾಲ್ಕನೆಯ ಅನುವಾಕದಲ್ಲಿ ಮೂರನೆಯ ಸೂಕ್ತವು. ಇದರಲ್ಲಿ, ಹದಿನಾಲ್ಕು ಋಕ್ಕುಗಳಿರುವವು. ಈ ಸೂಕ್ತಕ್ಕೆ ಬೃಹಸ್ಪತಿಪುತ್ರನಾದ ಶಂಯುವೆಂಬುವನು ಋಷಿಯು; ಇಂದ್ರನು ದೇವತೆಯು; ಈ ಸೂಕ್ತದಲ್ಲಿ ೧, ೩, ೫ ಮೊದಲಾದ ಅಸಮ ಸಂಖ್ಯೆಯ ಋಕ್ಕುಗಳು ಬೃಹತೀಛಂದಸ್ಕವು; ೨, ೪, ೬ ಮೊದಲಾದ ಸಮಸಂಖ್ಯೆಯ ಋಕ್ಕುಗಳು ಸತೋಬೃಹತೀಛಂದಸ್ಕವು. ಅನುಕ್ರಮಣಿಕೆಯಲ್ಲಿ—**ತ್ವಾಮಿದ್ಧಿ ಷಳೂನಾ ಪ್ರಾಗಾಥಂ** ಎಂದು ಹೇಳಿರುವುದು. ಸೂಕ್ತ ವಿನಿಯೋಗವು ಲೈಂಗಿಕವು. ಜ್ಯೋತಿಷ್ಟೋಮ ಯಾಗದ ಬೃಹತ್ಪೃಷ್ಠವೆಂಬ ಪ್ರಭೇದದಲ್ಲಿ ನಿಷ್ಕೇವಲ್ಯಶಸ್ತ್ರಮಂತ್ರಪಠನಕಾಲದಲ್ಲಿ ಪ್ರಾರಂಭದ ಪ್ರಗಾಥವೆಂಬ ಸ್ತೋತ್ರಿಯಮಂತ್ರಗಳಿಗಾಗಿ ಈ ಸೂಕ್ತದ ವಿನಿಯೋಗವಿರುವುದೆಂದು ಆಶ್ವಲಾಯನ ಶ್ರೌತಸೂತ್ರದ—**ಯದ್ಯು ವೈ ಬೃಹತ್ತ್ವಾಮಿದ್ಧಿ ಹವಾಮಹೇ** ಎಂಬ ಸೂತ್ರದಿಂದ (ಆ. ೫-೧೫) ವಿವೃತವಾಗಿರುವುದು. ಮಹಾವ್ರತೇಷ್ಟಿಯಲ್ಲಿಯೂ ನಿಷ್ಕೇವಲ್ಯಶಸ್ತ್ರಮಂತ್ರಗಳನ್ನು ಪಠಿಸುವಾಗ ಈ ಸೂಕ್ತವನ್ನು ಪ್ರಗಾಥಸೂಕ್ತವನ್ನಾಗಿ ಪಠಿಸಬೇಕೆಂದು ಐತರೇಯಾರಣ್ಯಕದ ಪಂಚಮಾರಣ್ಯಕದಲ್ಲಿ—**ತ್ವಾಮಿದ್ಧಿ ಹವಾಮಹೇ ತ್ವಂ ಹ್ಯೇಹಿ ಚೇರವ ಇತಿ ಬೃಹತಃ ಸ್ತೋತ್ರಿಯಾನುರೂಪೌ** ಎಂಬ ವಾಕ್ಯದಿಂದ (ಐ. ಆ. ೫-೨-೨) ನಿರ್ದಿಷ್ಟವಾಗಿರುವುದು.

## ಸೂಕ್ತ—೪೬

ಮಂಡಲ—೬ ॥ ಅನುವಾಕ—೪ ॥ ಸೂಕ್ತ—೪೬ ॥
ಅಷ್ಟಕ—೪ ॥ ಅಧ್ಯಾಯ—೭ ॥ ವರ್ಗ — ೨೭, ೨೮, ೨೯ ॥
॥ ಸೂಕ್ತದಲ್ಲಿರುವ ಋಕ್ಸಂಖ್ಯೆ—೧೪ ॥
॥ ಋಷಿಃ— ಶಂಯುರ್ಬಾರ್ಹಸ್ಪತ್ಯಃ ॥
॥ ದೇವತಾ—ಇಂದ್ರಃ ॥
॥ ಛಂದಃ—ಪ್ರಾಗಾಥಂ ॥

॥ ಸಂಹಿತಾಪಾಠಃ ॥

ತ್ವಾಮಿದ್ಧಿ ಹವಾಮಹೇ ಸಾತಾ ವಾಜಸ್ಯ ಕಾರವಃ ।
ತ್ವಾಂ ವೃತ್ರೇಷ್ವಿಂದ್ರ ಸತ್ಪತಿಂ ನರಸ್ತ್ವಾಂ ಕಾಷ್ಠಾಸ್ವರ್ವತಃ ॥ ೧ ॥

॥ ಪದಪಾಠಃ ॥

**ತ್ವಾಂ । ಇತ್ । ಹಿ । ಹವಾಮಹೇ । ಸಾತಾ । ವಾಜಸ್ಯ । ಕಾರವಃ ।**
**ತ್ವಾಂ । ವೃತ್ರೇಷು । ಇಂದ್ರ । ಸತ್ಽಪತಿಂ । ನರಃ । ತ್ವಾಂ । ಕಾಷ್ಠಾಸು । ಅರ್ವತಃ ॥ ೧ ॥**

॥ ಸಾಯಣಭಾಷ್ಯಂ ॥

**ಕಾರವಃ ಸ್ತೋತಾರೋ ವಯಂ ವಾಜಸ್ಯಾನ್ನಸ್ಯ ಸಾತಾ ಸಾತೌ ಸಂಭಜನೇ ನಿಮಿತ್ತಭೂತೇ ಸತಿ ಹೇ ಇಂದ್ರ ತ್ವಾಮಿದ್ಧಿ ತ್ವಾಮೇವ ಹವಾಮಹೇ । ಸ್ತುತಿಭಿರಾಹ್ವಯಾಮಃ । ಹೇ ಇಂದ್ರ ಸತ್ಪತಿಂ ಸತಾಂ ಪಾಲಯಿತಾರಂ ಶ್ರೇಷ್ಠಂ ತ್ವಾಂ ನರೋಽನ್ಯೇಽಪಿ ಮನುಷ್ಯಾ ವೃತ್ರೇಷ್ವಾವರಕೇಷು ಶತ್ರುಷು ಸತ್ಸು ಹವಂತೇ । ಆಹ್ವಯಂತಿ ತಜ್ಜಯಾರ್ಥಂ । ಅಪಿ ಚಾರ್ವತೋಽಶ್ವಸ್ಯ ಸಂಬಂಧಿನೀಷು ಕಾಷ್ಠಾಸು ಯತ್ರಾಶ್ವಃ ಕ್ರಾಂತ್ವಾ ತಿಷ್ಠತಿ ತಾಸು ಕಾಷ್ಠಾಸು ಸಂಗ್ರಾಮೇಷು ಯುದ್ಧಕಾಮಾಶ್ಚ ತ್ವಾಮೇವಾಹ್ವಯಂತಿ। ಅತೋ ವಯಂ ತ್ವಾಮೇವಾಹ್ವಯಾಮ ಇತ್ಯರ್ಥಃ ॥**

॥ ಪ್ರತಿಪದಾರ್ಥ ॥

ಇಂದ್ರ—ಎಲೈ ಇಂದ್ರನೇ । **ಕಾರವಃ**—ಸ್ತೋತೃಗಳಾದ ನಾವು । **ವಾಜಸ್ಯ**—ಅನ್ನದ । **ಸಾತಾ**—ಲಾಭಾರ್ಥವಾಗಿ । **ತ್ವಾಮಿದ್ಧಿ**—ನಿನ್ನನ್ನೇ । **ಹವಾಮಹೇ**—ಪ್ರಾರ್ಥಿಸಿ ಕರೆಯುತ್ತೇವೆ । **ಸತ್ಪತಿಂ**—ಸಜ್ಜನರ ಪಾಲಕನೂ ಶ್ರೇಷ್ಠನೂ ಆದ । **ತ್ವಾಂ**—ನಿನ್ನನ್ನು । **ನರಃ**—ಇತರ ಪುರುಷರೂ ಸಹ । **ವೃತ್ರೇಷು**—ಶತ್ರುಗಳೊಡನೆ ಹೋರಾಡುವ ಕಾಲದಲ್ಲಿ (ಸಹಾಯಕ್ಕಾಗಿ ಕರೆಯುತ್ತಾರೆ) । **ಅರ್ವತಃ**—ಅಶ್ವಗಳೊಡಗೂಡಿದ । **ಕಾಷ್ಠಾಸು**—ಯುದ್ಧಗಳಲ್ಲೂ । **ತ್ವಾಂ**—ನಿನ್ನನ್ನೇ ಕರೆಯುತ್ತಾರೆ.

|| ಭಾವಾರ್ಥ ||

ಎಲೈ ಇಂದ್ರನೇ, ಸ್ತೋತೃಗಳಾದ ನಾವು ಅನ್ನದ ಲಾಭಾರ್ಥವಾಗಿ ನಿನ್ನನ್ನೇ ಪ್ರಾರ್ಥಿಸಿ ಕರೆಯುತ್ತೇವೆ. ಸಜ್ಜನರ ಪಾಲಕನೂ ಶ್ರೇಷ್ಠನೂ ಆದ ನಿನ್ನನ್ನು ಇತರ ಪುರುಷರೂ ಸಹ ಅಶ್ವಗಳೊಡಗೂಡಿದ ಯುದ್ಧಗಳಲ್ಲಿ ಶತ್ರುಗಳೊಡನೆ ಹೋರಾಡುತ್ತಿರುವಾಗ ನಿನ್ನನ್ನೇ ಸಹಾಯಕ್ಕಾಗಿ ಕರೆಯುತ್ತಾರೆ.

English Translation.

We worshippers invoke you for the acquirement of food; you, Indra, the protector of the good, (do) men (invoke for aid) against enemies, and in places where horses (enconnter).

|| ಸಂಹಿತಾಪಾಠಃ ||

ಸ ತ್ವಂ ನಶ್ಚಿತ್ರ ವಜ್ರಹಸ್ತ ಧೃಷ್ಣುಯಾ ಮಹಃ ಸ್ತವಾನೋ ಅದ್ರಿವಃ ।
ಗಾಮಶ್ವಂ ರಥ್ಯಮಿಂದ್ರ ಸಂ ಕಿರ ಸತ್ರಾ ವಾಜಂ ನ ಜಿಗ್ಯುಷೇ ॥ ೨ ॥

|| ಪದಪಾಠಃ ||

ಸಃ । ತ್ವಂ । ನಃ । ಚಿತ್ರ । ವಜ್ರಽಹಸ್ತ । ಧೃಷ್ಣುಽಯಾ । ಮಹಃ । ಸ್ತವಾನಃ । ಅದ್ರಿಽವಃ ।
ಗಾಂ । ಅಶ್ವಂ । ರಥ್ಯಂ । ಇಂದ್ರ । ಸಂ । ಕಿರ । ಸತ್ರಾ । ವಾಜಂ । ನ । ಜಿಗ್ಯುಷೇ ॥ ೨ ॥

|| ಸಾಯಣಭಾಷ್ಯಂ ||

ಹೇ ಚಿತ್ರ ಚಾಯನೀಯ ವಜ್ರಹಸ್ತ ವಜ್ರಬಾಹೋ ಅದ್ರಿವೋ ವಜ್ರವನ್ । ಯದ್ವಾ । ಆದೃಣಾತ್ಯನೇನೇತ್ಯದ್ರಿರಶನಿಃ । ತದ್ವನ್ । ಏವಂಭೂತೇಂದ್ರ ಧೃಷ್ಣುಯಾ ಧೃಷ್ಣುಃ ಶತ್ರೂಣಾಂ ಧರ್ಷಯಿತಾ ಮಹೋ ಮಹಾನ್ ಸ ತಾದೃಶಸ್ತ್ವಂ ಸ್ತವಾನೋಽಸ್ಮಾಭಿಃ ಸ್ತೂಯಮಾನಃ ಸನ್ ಗಾಂ ರಥ್ಯಂ ರಥವಾಹನಮಶ್ವಂ ಚ ಸಂ ಕಿರ । ಸಮ್ಯಕ್ ಪ್ರಯಚ್ಛ । ಜಿಗ್ಯುಷೇ ಜಿತವತೇ ಪುರುಷಾಯ ಭೋಗಾರ್ಥಂ ಸತ್ರಾ ಮಹತ್ಪ್ರಭೂತಂ ವಾಜಂ ನಾನ್ನಮಿವ । ಯಥಾ ಶತ್ರೂನ್ ಜಿತವತೇ ಭೋಗಾರ್ಥಂ ಬಹ್ವನ್ನಂ ಪ್ರಯಚ್ಛಸಿ ತದ್ವತ್ ॥

|| ಪ್ರತಿಪದಾರ್ಥ ||

**ಚಿತ್ರ**—ಆಶ್ಚರ್ಯಕಾರಕನೂ । **ವಜ್ರಹಸ್ತ**—ಕೈಯಲ್ಲಿ ವಜ್ರಾಯುಧವನ್ನು ಹಿಡಿದಿರುವವನೂ । **ಅದ್ರಿವಃ**—ವಜ್ರಾಯುಧವನ್ನು ಹಿಂಡಿರುವವನೂ ಆದ । **ಇಂದ್ರ**—ಎಲೈ ಇಂದ್ರನೇ । **ಧೃಷ್ಣುಯಾ**—ಶತ್ರುಧರ್ಷಕನೂ । **ಮಹಃ**—ಮಹಾತ್ಮನೂ । **ಸಃ**—ಪ್ರಸಿದ್ಧನೂ ಆದ । **ತ್ವಂ**—ನೀನು । **ಸ್ತವಾನಃ**—ನಮ್ಮಿಂದ ಸ್ತುತಿಸಲ್ಪಟ್ಟವ

ನಾಗಿ | **ಜಿಗ್ಯುಷೇ**—ಜಯಶಾಲಿಯಾದ ಪುರುಷನಿಗೆ ಭೋಗಾರ್ಥವಾಗಿ | **ಸತ್ರಾ**—ಪ್ರಭೂತವಾದ | **ವಾಜಂ ನ**—ಅನ್ನವನ್ನು ಕೊಡುವಂತೆ | **ಗಾಂ**—ಗೋವುಗಳನ್ನೂ | **ಅಶ್ವಂ**—ಅಶ್ವಗಳನ್ನೂ | **ಸಂ ಕಿರ**—ಒದಗಿಸು.

|| ಭಾವಾರ್ಥ ||

ಆಶ್ಚರ್ಯಕಾರಕನೂ, ಕೈಯಲ್ಲಿ ವಜ್ರಾಯುಧವನ್ನು ಹಿಡಿದಿರುವವನೂ ಆದ ಎಲೈ ಇಂದ್ರನೇ, ಶತ್ರುಧರ್ಷಕನೂ, ಮಹಾತ್ಮನೂ, ಪ್ರಸಿದ್ಧನೂ ಆದ ನೀನು ನಮ್ಮಿಂದ ಸ್ತುತಿಸಲ್ಪಟ್ಟವನಾಗಿ ಜಯಶಾಲಿಯಾದ ಪುರುಷನಿಗೆ ಭೋಗಾರ್ಥವಾಗಿ ಪ್ರಭೂತವಾದ ಅನ್ನವನ್ನು ಕೊಡುವಂತೆ ನಮಗೂ ಗೋವುಗಳನ್ನೂ ಅಶ್ವಗಳನ್ನೂ ಒದಗಿಸು.

English Translation.

Wonderful wielder of the thunderbolt, Indra, the lord of clouds, mighty in resolution, being glorified by us, grant us cattle, and horses fit for chariots, as (you grant) abundant food to him who is victorious (in battle).

| ಸಂಹಿತಾಪಾಠಃ ||

ಯಃ ಸತ್ರಾಹಾ ವಿಚರ್ಷಣಿರಿಂದ್ರಂ ತಂ ಹೂಮಹೇ ವಯಂ |
ಸಹಸ್ರಮುಷ್ಕ ತುವಿನೃಮ್ಣ ಸತ್ಪತೇ ಭವಾ ಸಮತ್ಸು ನೋ ವೃಧೇ || ೩ ||

|| ಪದಪಾಠಃ ||

ಯಃ | ಸತ್ರಾಽಹಾ | ವಿಽಚರ್ಷಣಿಃ | ಇಂದ್ರಂ | ತಂ | ಹೂಮಹೇ | ವಯಂ |
ಸಹಸ್ರಽಮುಷ್ಕ | ತುವಿಽನೃಮ್ಣ | ಸತ್ಽಪತೇ | ಭವ | ಸಮತ್ಽಸು | ನಃ | ವೃಧೇ || ೩ ||

|| ಸಾಯಣಭಾಷ್ಯಂ ||

ಮಹಾವ್ರತೇ ನಿಷ್ಕೇವಲ್ಯೇ ಯಃ ಸತ್ರಾಹೇತ್ಯಾದಿಸೂಕ್ತಶೇಷಃ ಶಂಸನೀಯಃ | ಸೂತ್ರ್ಯತೇ ಹಿ | ಯಃ ಸತ್ರಾಹಾ ವಿಚರ್ಷಣಿರಿತಿ ಶೇಷೋಽಯಂ ತೇ ಅಸ್ತು ಹರ್ಯತ ಇತಿ ಸೂಕ್ತೇ | ಐ. ಆ. ೫-೨-೪ | ಇತಿ || ಚಾತುರ್ವಿಂಶಿಕೇಽಹನಿ ಮಾಧ್ಯಂದಿನಸವನೇ ಯಃ ಸತ್ರಾಹೇತಿ ಪ್ರಗಾಥೋ ವೈಕಲ್ಪಿಕೋಽನುರೂಪಃ | ಸೂತ್ರಿತಂ ಚ | ಯಃ ಸತ್ರಾಹಾ ವಿಚರ್ಷಣಿಃ ಸ್ವಾದೋರಿತ್ಥಾ ವಿಷೂವತಃ | ಆ. ೭-೪ || ಇತಿ ||

ಯ ಇಂದ್ರಃ ಸತ್ರಾಹಾ ಮಹತಾಂ ಶತ್ರೂಣಾಂ ಹಂತಾ ವಿಚರ್ಷಣಿರ್ವಿಶೇಷೇಣ ಸರ್ವಸ್ಯ ದ್ರಷ್ಟಾ ತಮಿಂದ್ರಂ ವಯಂ ಹೂಮಹೇ | ಸ್ತುತಿಪದೈರಾಹ್ವಯಾಮಃ | ಉತ್ತರಾರ್ಧಃ ಪ್ರತ್ಯಕ್ಷಕೃತಃ | ಹೇ ಸಹಸ್ರಮುಷ್ಕ ಸಹಸ್ರಶೇಫ | ಯಾಂ ಕಾಂ ಚ ಸ್ತ್ರಿಯಂ ಸಂಭವನ್ನಿಂದ್ರೋ ಭೋಗಲೋಲುಪತಯಾ

**ಸ್ವಶರೀರೇ ಪರ್ವಣಿ ಪರ್ವಣಿ ಶೇಫಾನ್ ಸಸರ್ಜೇತಿ ಕೌಷೀತಕಿಭಿರಾಮ್ನಾತಂ । ತದಭಿಪ್ರಾಯೇಣೇದಂ ಸಂಬೋಧನಂ । ಹೇ ತುವಿನೃಮ್ಣ ಬಹುಧನ ಸತ್ಪತೇ ಸತಾಂ ಪಾಲಯಿತರಿಂದ್ರ ಸಮತ್ಸು ಸಂಗ್ರಾಮೇಷು ನೋಽಸ್ಮಾಕಂ ವೃಧೇ ವರ್ಧನಾಯ ಭವ ॥**

॥ ಪ್ರತಿಪದಾರ್ಥ ॥

**ಯಃ**—ಯಾವ ಇಂದ್ರನು । **ಸತ್ರಾಹಾ**--ಶತ್ರುನಾಶಕನೋ । **ವಿಚರ್ಷಣಿಃ**—ಸಕಲವನ್ನೂ ನೋಡಬಲ್ಲವನೋ । **ತಂ ಇಂದ್ರಂ**—ಅದೇ ಇಂದ್ರನನ್ನು । **ವಯಂ**—ನಾವು । **ಹೂಮಹೇ**—ಪ್ರಾರ್ಥಿಸಿ ಕರೆಯುತ್ತೇವೆ । **ಸಹಸ್ರಮುಷ್ಕ**—ಸಾವಿರಾರು ಭೋಗೇಂದ್ರಿಯಗಳುಳ್ಳವನೂ । **ತುವಿನೃಮ್ಣ**—ಅನೇಕ ವಿಧವಾದ ಧನಗಳುಳ್ಳವನೂ । **ಸತ್ಪತೇ**—ಸಜ್ಜನರ ಪಾಲಕನೂ ಆದ ಎಲೈ ಇಂದ್ರನೇ । **ಸಮತ್ಸು**—ಯುದ್ಧಗಳಲ್ಲಿ । **ನಃ**—ನಮ್ಮ । **ವೃಧೇ**—ಪ್ರವೃದ್ಧಿಕಾರಕನಾಗಿ । **ಭವ** – ಆಗಿರು.

॥ ಭಾವಾರ್ಥ ॥

ಯಾವ ಇಂದ್ರನು ಶತ್ರುನಾಶಕನೋ, ಸಕಲವನ್ನೂ ನೋಡಬಲ್ಲವನೋ ಅದೇ ಇಂದ್ರನನ್ನು ನಾವು ಪ್ರಾರ್ಥಿಸಿ ಕರೆಯುತ್ತೇವೆ. ಸಾವಿರಾರು ಭೋಗೇಂದ್ರಿಯಗಳುಳ್ಳವನೂ, ಅನೇಕ ವಿಧವಾದ ಧನಗಳುಳ್ಳವನೂ ಸಜ್ಜನರ ಪಾಲಕನೂ ಆದ ಎಲೈ ಇಂದ್ರನೇ, ಯುದ್ಧಗಳಲ್ಲಿ ನಮಗೆ ವೃದ್ಧಿಕಾರಕನಾಗಿರು.

## English Translation.

We invoke that Indra who is the destroyer of mighty foes, the supervisor (of all things): you, the many-organed, the protector to the good, the distributor of wealth, be unto us (the ensurer of) successs in combats.

॥ ವಿಶೇಷವಿಷಯಗಳು ॥

ಯಜ್ಞದ ಚಾತುರ್ವಿಂಶಕವೆಂಬ ದಿವಸದ ಮಾಧ್ಯಂದಿನಸವನಕಾಲದಲ್ಲಿ ಬ್ರಾಹ್ಮಣಾಚ್ಛಂಸಿಯೆಂಬ ಋತ್ವಿಜನು **ಇಂದ್ರ ಜ್ಯೇಷ್ಠಂ ನ ಆ ಭರ** ಎಂಬ ಈ ಋಕ್ಕನ್ನು (ಪ್ರಗಾಥವನ್ನು) ವಿಕಲ್ಪವಾಗಿ ಅನುರೂಪ ಋಕ್ಕಿಗಾಗಿ ಪಠಿಸಬಹುದೆಂದು ಆಶ್ವಲಾಯನಶ್ರೌತಸೂತ್ರದ—**ಇಂದ್ರ ಜ್ಯೇಷ್ಠಂ ನ ಆ ಭರಾ ತ್ವಾ ಸಹಸ್ರಮಾ ಶತಂ** ಎಂಬ ಸೂತ್ರದಿಂದ (ಆ. ೭-೪) ವಿವೃತವಾಗಿರುವುದು.

॥ ಸಂಹಿತಾಪಾಠಃ ॥

ಬಾಧಸೇ ಜನಾನ್ವೃಷಭೇವ ಮನ್ಯುನಾ ಘೃಷೌ ಮೀಳ್ಹ ಋಚೀಷಮ ।
ಅಸ್ಮಾಕಂ ಬೋಧ್ಯವಿತಾ ಮಹಾಧನೇ ತನೂಷ್ವಪ್ಸು ಸೂರ್ಯೇ ॥ ೪ ॥

॥ ಪದಪಾಠಃ ॥

ಬಾಧಸೇ । ಜನಾನ್ । ವೃಷಭಾಽಇವ । ಮನ್ಯುನಾ । ಘೃಷೌ । ಮೀಳ್ಹೇ । ಋಚೀಷಮ ।

ಅಸ್ಮಾಕಂ । ಬೋಧಿ । ಅವಿತಾ । ಮಹಾಽಧನೇ । ತನೂಷು । ಅಪ್ಽಸು । ಸೂರ್ಯೇ ॥ ೪ ॥

॥ ಸಾಯಣಭಾಷ್ಯಂ ॥

**ಹೇ ಋಚೀಷಮ ಋಚಾ ಸಮ ಋಗ್ಯಾದೃಶಂ ರೂಪಂ ಪ್ರತಿಪಾದಯತಿ ತಾದೃಗ್ರೂಪೇಂದ್ರ ಘೃಷೌ ಶತ್ರೂಣಾಂ ಘರ್ಷಕೇ ಬಾಧಕೇ ಮೀಳ್ಹೇ ಸಂಗ್ರಾಮೇ ಜನಾನಸ್ಮದೀಯಾನ್ ಶತ್ರೂನ್ ವೃಷಭೇವ ವೃಷಭೇಣೇವ ಬಲವತಾ ಮನ್ಯುನಾ ಕ್ರೋಧೇನ ಬಾಧಸೇ । ಬಾಧಸ್ವ । ತಥಾ ಮಹಾಧನೇ ಮಹತೋ ಧನಸ್ಯ ನಿಮಿತ್ತಭೂತೇ ಸಂಗ್ರಾಮೇ ಚಾಸ್ಮಾಕಮವಿತಾ ರಕ್ಷಿತಾ ಬೋಧಿ । ಬುಧ್ಯಸ್ವ । ರಕ್ಷಿತೃತ್ವೇನಾತ್ಮಾನಂ ಜಾನೀಹಿ । ರಕ್ಷಕೋ ಭವೇತಿ ಯಾವತ್ । ಕಿಮರ್ಥಂ । ತನೂಷು ತನಯೇಷ್ವಪ್ಸೂದಕೇಷು ಸೂರ್ಯೇ ಚ ಲಬ್ಧವ್ಯೇಷು ಸತ್ಸ್ವೇತೇಷಾಂ ಲಾಭಾರ್ಥಂ । ಸೂರ್ಯಸ್ಯ ಲಾಭಃ ಸಂದರ್ಶನಂ । ತದರ್ಥಮಿತ್ಯರ್ಥಃ॥**

॥ ಪ್ರತಿಪದಾರ್ಥ ॥

**ಋಚೀಷಮ**—ಋಗಾದಿ ಮಂತ್ರಗಳಿಂದ ಪ್ರತಿಪಾದಿತವಾದ ರೂಪವುಳ್ಳ ಎಲೈ ಇಂದ್ರನೇ । **ಘೃಷೌ**—ಶತ್ರುಧರ್ಷಕವಾದ । **ಮೀಳ್ಹೇ**—ಸಂಗ್ರಾಮದಲ್ಲಿ । **ಜನಾನ್**—ಶತ್ರು ಜನಗಳನ್ನು । **ವೃಷಭೇವ**—ವೃಷಭದಂತೆ ಶಕ್ತಿಯುತವಾದ । **ಮನ್ಯುನಾ**—ಕ್ರೋಧದಿಂದ । **ಬಾಧಸೇ**—ಹಿಂಸಿಸು । **ಮಹಾಧನೇ**—ಪ್ರಭೂತವಾದ ಧನನಿಮಿತ್ತವಾದ ಸಂಗ್ರಾಮದಲ್ಲಿ । **ಅಸ್ಮಾಕಂ**—ನಮ್ಮ । **ಅವಿತಾ**—ರಕ್ಷಕನಾಗಿರಬೇಕೆಂಬುದಾಗಿ । **ಬೋಧಿ**—ತಿಳಿ । **ತನೂಷು**—ಪುತ್ರಾದಿಗಳ ಲಾಭಾರ್ಥವಾಗಿಯೂ । **ಅಪ್ಸು**—ಉದಕ ಲಾಭಕ್ಕಾಗಿಯೂ । **ಸೂರ್ಯೇ**—ಸೂರ್ಯ ಪ್ರಕಾಶವನ್ನು ಪಡೆಯುವುದಕ್ಕಾಗಿಯೂ (ನಮ್ಮ ರಕ್ಷಕನಾಗಿರು).

॥ ಭಾವಾರ್ಥ ॥

ಋಗಾದಿಮಂತ್ರಗಳಿಂದ ಪ್ರತಿಪಾದಿತವಾದ ರೂಪವುಳ್ಳ ಎಲೈ ಇಂದ್ರನೇ, ಶತ್ರುಗಳೊಡನೆ ಹೋರಾಡತಕ್ಕ ಸಂಗ್ರಾಮದಲ್ಲಿ ಶತ್ರು ಜನಗಳನ್ನು ವೃಷಭದಂತೆ ಶಕ್ತಿಯುತವಾದ ಕ್ರೋಧದಿಂದ ಹಿಂಸಿಸು. ಪ್ರಭೂತವಾದ ಧನ ನಿಮಿತ್ತವಾದ ಸಂಗ್ರಾಮದಲ್ಲಿ ನಮ್ಮ ರಕ್ಷಕನಾಗಿರಬೇಕೆಂದು ತಿಳಿ. ಮತ್ತು ನಮಗೆ ಪುತ್ರಾದಿಗಳ ಲಾಭಾರ್ಥವಾಗಿಯೂ, ಉದಕ ಲಾಭಾರ್ಥವಾಗಿಯೂ, ನಾವು ಸೂರ್ಯಪ್ರಕಾಶವನ್ನು ಹೊಂದುವುದಕ್ಕಾಗಿಯೂ ನಮ್ಮ ರಕ್ಷಕನಾಗಿರು.

English Translation.

Such, Indra, as you are represented in holy texts, assail (our) adversaries with fierceness like (that of) a bull in close conflict: regard yourself as our defender in war, (that we may long enjoy) posterity, water, and the (sight of the) sun.

॥ ಸಂಹಿತಾಪಾಠಃ ॥

ಇಂದ್ರ ಜ್ಯೇಷ್ಠಂ ನ ಆ ಭರ ಓಜಿಷ್ಠಂ ಪಪುರಿ ಶ್ರವಃ ।

ಯೇನೇಮೇ ಚಿತ್ರ ವಜ್ರಹಸ್ತ ರೋದಸೀ ಓಭೇ ಸುಶಿಪ್ರ ಪ್ರಾಃ ॥ ೫ ॥

॥ ಪದಪಾಠಃ ॥

ಇಂದ್ರ । ಜ್ಯೇಷ್ಠಂ । ನಃ । ಆ । ಭರ । ಓಜಿಷ್ಠಂ । ಪಪುರಿ । ಶ್ರವಃ ।

ಯೇನ । ಇಮೇ ಇತಿ । ಚಿತ್ರ । ವಜ್ರ್ಽಹಸ್ತ । ರೋದಸೀ ಇತಿ । ಆ । ಉಭೇ ಇತಿ । ಸುಽಶಿಪ್ರ । ಪ್ರಾಃ ॥

ಚಾತುರ್ವಿಂಶಿಕೇಽಹನಿ ಮಾಧ್ಯಂದಿನಸವನೇ ಬ್ರಾಹ್ಮಣಾಚ್ಛಂಸಿನ ಇಂದ್ರ ಜ್ಯೇಷ್ಠಂ ನ ಆ ಭರೇತಿ ಪ್ರಗಾಥೋ ವೈಕಲ್ಪಿಕೋಽನುರೂಪಃ । ಸೂತ್ರಿತಂ ಚ । ಇಂದ್ರ ಜ್ಯೇಷ್ಠಂ ನ ಆ ಭರಾ ತ್ವಾ ಸಹಸ್ರಮಾ ಶತಂ । ಆ. ೭-೪ । ಇತಿ ॥

ಹೇ ಇಂದ್ರ ಜ್ಯೇಷ್ಠಂ ಪ್ರಶಸ್ಯತಮಮೋಜಿಷ್ಠಮೋಜಸ್ವಿತಮಮತಿಶಯೇನ ಬಲಕರಂ ಪಪುರಿ ಪೂರಕಂ ಶ್ರವೋಽನ್ನಂ ನೋಽಸ್ಮಭ್ಯಮಾ ಭರ । ಆಹರ । ಪ್ರಯಚ್ಛ । ಹೇ ಚಿತ್ರ ಚಾಯನೀಯ ವಜ್ರಹಸ್ತ ವಜ್ರಬಾಹೋ ಹೇ ಸುಶಿಪ್ರ ಶೋಭನಹನುಕ ಏವಂಭೂತ ಹೇ ಇಂದ್ರ ಯೇನಾನ್ನೇನೇಮೇ ಪರಿದೃಶ್ಯಮಾನೇ ಉಭೇ ರೋದಸೀ ದ್ಯಾವಾಪೃಥಿವ್ಯಾ ಆ ಪ್ರಾ ಆಪೂರಯಸಿ ತದನ್ನಮಾ ಭರೇತ್ಯನ್ವಯಃ॥

॥ ಪ್ರತಿಪದಾರ್ಥ ॥

**ಚಿತ್ರ**—ಆಕರ್ಷಕನೂ । **ವಜ್ರಹಸ್ತ**—ವಜ್ರವನ್ನು ಹಿಡಿದಿರುವ ಹಸ್ತವುಳ್ಳವನೂ । **ಸುಶಿಪ್ರ**—ಶ್ರೇಷ್ಠವಾದ ಕೆನ್ನೆಯುಳ್ಳವನೂ ಆದ । **ಇಂದ್ರ**—ಎಲೈ ಇಂದ್ರನೇ । **ಯೇನ**—ಯಾವ ಅನ್ನದಿಂದ । **ಇಮೇ**—ಈ ಪ್ರತ್ಯಕ್ಷವಾದ । **ಉಭೇ ರೋದಸೀ**—ದ್ಯಾವಾಪೃಥಿವಿಗಳೆರಡನ್ನೂ । **ಆ ಪ್ರಾಃ**—ರಕ್ಷಿಸುವೆಯೋ ಅಂತಹ । **ಜ್ಯೇಷ್ಠಃ**—ಪ್ರಶಸ್ಯವಾದುದೂ । **ಓಜಿಷ್ಠಂ**—ವೀರ್ಯಯುತವಾದುದೂ । **ಪಪುರಿ**—ಪುಷ್ಟಿದಾಯಕವಾದುದೂ ಆದ । **ಶ್ರವಃ**—ಅನ್ನವನ್ನು । **ನಃ**—ನಮಗೆ । **ಆ ಭರ**—ಒದಗಿಸಿಕೊಡು.

॥ ಭಾವಾರ್ಥ ॥

ಆಕರ್ಷಕನೂ, ವಜ್ರವನ್ನು ಹಿಡಿದಿರುವ ಹಸ್ತವುಳ್ಳವನೂ, ಶ್ರೇಷ್ಠವಾದ ಕೆನ್ನೆಯುಳ್ಳವನೂ ಆದ ಎಲೈ ಇಂದ್ರನೇ, ಯಾವ ಅನ್ನದಿಂದ ಈ ಪ್ರತ್ಯಕ್ಷವಾದ ದ್ಯಾವಾಪೃಥಿವಿಗಳೆರಡನ್ನೂ ರಕ್ಷಿಸುವೆಯೋ, ಅಂತಹ ಪ್ರಶಸ್ಯವಾದುದೂ, ವೀರ್ಯಯುತವಾದುದೂ ಪುಷ್ಟಿದಾಯಕವಾದುದೂ ಆದ ಅನ್ನವನ್ನು ನಮಗೆ ಒದಗಿಸಿಕೊಡು.

## English Translation.

Indra, bring to us most excellent, most invigorating and nutritious food, wherewith, wonderful wielder of the thunderbolt, the handsome-chinned, you sustain both heaven and earth.

|| ಸಂಹಿತಾಪಾಠಃ ||

ತ್ವಾಮುಗ್ರಮವಸೇ ಚರ್ಷಣೀಸಹಂ ರಾಜನ್ದೇವೇಷು ಹೂಮಹೇ ।
ವಿಶ್ವಾ ಸು ನೋ ವಿಥುರಾ ಪಿಬ್ದನಾ ವಸೋಽಮಿತ್ರಾನ್ತ್ಸುಷಹಾನ್ಕೃಧಿ ॥

॥ ಪದಪಾಠಃ ॥

ತ್ವಾಂ । ಉಗ್ರಂ । ಅವಸೇ । ಚರ್ಷಣಿಽಸಹಂ । ರಾಜನ್ । ದೇವೇಷು । ಹೂಮಹೇ ।
ವಿಶ್ವಾ । ಸು । ನಃ । ವಿಥುರಾ । ಪಿಬ್ದನಾ । ವಸೋ ಇತಿ । ಅಮಿತ್ರಾನ್ । ಸುಽಸಹಾನ್ । ಕೃಧಿ ॥ ೬ ॥

॥ ಸಾಯಣಭಾಷ್ಯಂ ॥

ಹೇ ರಾಜನ್ ರಾಜಮಾನೇಂದ್ರ ದೇವೇಷು ದೇವಾನಾಂ ಮಧ್ಯ ಉಗ್ರಮುದ್ಗೂರ್ಣಬಲಂ ಚರ್ಷಣೀಸಹಂ ಚರ್ಷಣೀನಾಂ ಶತ್ರುಭೂತಾನಾಂ ಪ್ರಜಾನಾಮಭಿಭವಿತಾರಂ ತ್ವಾಮವಸೇ ರಕ್ಷಣಾಯ ಹೂಮಹೇ । ಆಹ್ವಯಾಮಃ । ತ್ವಂ ವಿಶ್ವಾ ಸರ್ವಾಣಿ ಪಿಬ್ದನಾ ಪಿಬ್ದನಾನಿ ರಕ್ಷಾಂಸಿ । ಪಿಹಿತಮವ್ಯಕ್ತಂ ಶಬ್ದಯಂತ ಇತಿ ಪಿಬ್ದನಾನಿ । ಪೃಷೋದರಾದಿಃ । ತಾನಿ ಸು ಸುಷ್ಠು ವಿಥುರಾ ವ್ಯಥಿತಾನಿ ಬಾಧಿತಾನಿ ಕುರು । ಹೇ ವಸೋ ವಾಸಕೇಂದ್ರ ನೋಽಸ್ಮದೀಯಾನಮಿತ್ರಾನ್ ಶತ್ರೂಂಶ್ಚ ಸುಷಹಾನ್ ಸುಖೇನಾಭಿ-ಭವಿತುಂ ಶಕ್ಯಾನ್ ಕೃಧಿ । ಕುರು ॥

||ಪ್ರತಿಪದಾರ್ಥ ||

**ರಾಜನ್**--ಪ್ರಕಾಶಮಾನನಾದ ಎಲೈ ಇಂದ್ರನೇ । **ದೇವೇಷು**—ದೇವತೆಗಳ ನಡುವೆ । **ಉಗ್ರಂ**—ಅತ್ಯಧಿಕವಾದ ಬಲವುಳ್ಳವನೂ । **ಚರ್ಷಣೀಸಹಂ**—ಶತ್ರುಸೈನ್ಯಗಳನ್ನು ನಾಶಮಾಡುವವನೂ ಆದ । **ತ್ವಾಂ**—ನಿನ್ನನ್ನು । **ಅವಸೇ**—ರಕ್ಷಣಾರ್ಥಣಾಗಿ । **ಹೂಮಹೇ**—ಕರೆಯುತ್ತೇವೆ । **ವಸೋ**—ವಸತಿದಾಯಕನಾದ ಎಲೈ ಇಂದ್ರನೇ । **ವಿಶ್ವಾ**--ಸಮಸ್ತವಾದ । **ಪಿಬ್ದನಾ**—ರಾಕ್ಷಸರನ್ನು । **ಸು**--ಪೂರ್ಣವಾಗಿ । **ವಿಥುರಾ**—ಹಿಂಸಿತರನ್ನಾಗಿ ಮಾಡು । **ನಃ**—ನಮ್ಮ । **ಅಮಿತ್ರಾನ್**—ಶತ್ರುಗಳನ್ನು । **ಸುಷಹಾನ್**—ಸುಖವಾಗಿ ಜಯಿಸುವಂತೆ । **ಕೃಧಿ**—ಸಹಾಯಮಾಡು.

॥ ಭಾವಾರ್ಥ ॥

ಪ್ರಕಾಶಮಾನನಾದ ಎಲೈ ಇಂದ್ರನೇ, ದೇವತೆಗಳ ನಡುವೆ ಅತ್ಯಧಿಕವಾದ ಬಲವುಳ್ಳವನೂ, ಶತ್ರುಸೈನ್ಯಗಳನ್ನು ನಾಶಮಾಡುವವನೂ ಆದ ನಿನ್ನನ್ನು ರಕ್ಷಣಾರ್ಥವಾಗಿ ಕರೆಯುತ್ತೇವೆ. ವಸತಿದಾಯಕನಾದ ಎಲೈ ಇಂದ್ರನೇ, ಸಮಸ್ತವಾದ ರಾಕ್ಷಸರನ್ನು ಪೂರ್ಣವಾಗಿ ಹಿಂಸಿತರನ್ನಾಗಿ ಮಾಡು. ನಮ್ಮ ಶತ್ರುಗಳನ್ನು ನಾವು ಸುಖವಾಗಿ ಜಯಿಸುವಂತೆ ಸಹಾಯಮಾಡು.

## English Translation.

We invoke for proteetion you, royal Indra, who are mighty amongst the gods, the subduer of men; granter of dwellings, repel all evil spirits, and render our enemies easy of discomfiture.

॥ ಸಂಹಿತಾಪಾಠಃ ॥

ಯದಿಂದ್ರ ನಾಹುಷೀಷ್ವಾ ಓಜೋ ನೃಮ್ಣಂ ಚ ಕೃಷ್ಟಿಷು ।
ಯದ್ವಾ ಪಂಚ ಕ್ಷಿತೀನಾಂ ದ್ಯುಮ್ನಮಾ ಭರ ಸತ್ರಾ ವಿಶ್ವಾನಿ ಪೌಂಸ್ಯಾ ॥

॥ ಪದಪಾಠಃ ॥

ಯತ್ । ಇಂದ್ರ । ನಾಹುಷೀಷು । ಆ । ಓಜಃ । ನೃಮ್ಣಂ । ಚ । ಕೃಷ್ಟಿಷು ।
ಯತ್ । ವಾ । ಪಂಚ । ಕ್ಷಿತೀನಾಂ । ದ್ಯುಮ್ನಂ । ಆ । ಭರ । ಸತ್ರಾ । ವಿಶ್ವಾನಿ । ಪೌಂಸ್ಯಾ ॥ ೭ ॥

॥ ಸಾಯಣಭಾಷ್ಯಂ ॥

**ಹೇ ಇಂದ್ರ ನಾಹುಷೀಷು । ನಹುಷ ಇತಿ ಮನುಷ್ಯನಾಮ । ತತ್ಸಂಬಂಧಿನೀಸು ಕೃಷ್ಟಿಷು ಪ್ರಜಾಸು । ಆಕಾರಃ ಸಮುಚ್ಚಯೇ । ಯಚ್ಚಾಜೋ ಬಲಂ ನೃಮ್ಣಂ ಧನಂ ಚ ವಿದ್ಯತೇ । ಯದ್ವಾ ಯಚ್ಚ ಪಂಚ ಪಂಚಾನಾಂ ಕ್ಷಿತೀನಾಂ । ನಿಷಾದಪಂಚಮಾಶ್ಚತ್ವಾರೋ ವರ್ಣಾಃ ಪಂಚ ಕ್ಷಿತಯಃ । ತೇಷಾಂ ಸ್ವರೂಪಂ ದ್ಯುಮ್ನಂ ದ್ಯೋತಮಾನಮನ್ನಂ ತತ್ಸರ್ವಮಸ್ಮಭ್ಯಮಾ ಭರ । ಆಹರ । ಪ್ರಯಚ್ಛ ತಥಾ ಸತ್ರಾ ಮಹಾಂತಿ ವಿಶ್ವಾನಿ ಸರ್ವಾಣಿ ಪೌಂಸ್ಯಾನಿ ಬಲಾನಿ ಚಾಸ್ಮಭ್ಯಮಾಹರ ॥**

॥ ಪ್ರತಿಪದಾರ್ಥ ॥

**ಇಂದ್ರ**—ಎಲೈ ಇಂದ್ರನೇ । **ನಾಹುಷೀಷು**—ಮನುಷ್ಯಸಂಬಂಧವಾದ । **ಕೃಷ್ಟಿಷು**—ಪ್ರಜೆಗಳಲ್ಲಿ । **ಯತ್**—ಯಾವ । **ಓಜಃ**—ಬಲವೂ । **ನೃಮ್ಣಂ ಚ**—ಧನವೂ ಸಹ ಇರುವುದೋ । **ಯದ್ವಾ**—ಅಥವಾ । **ಪಂಚ ಕ್ಷಿತೀನಾಂ**—ನಿಷಾದಾದಿ ಪಂಚಜನರಲ್ಲಿ । **ದ್ಯುಮ್ನಂ**—ಪ್ರಕಾಶಮಾನವಾದ ಯಾವ ಅನ್ನವಿದೆಯೋ ಅವೆಲ್ಲವನ್ನೂ । **ಆ ಭರ**—ನಮಗೆ ಒದಗಿಸಿ ಕೊಡು । **ಸತ್ರಾ**—ಮಹತ್ತಾದುದೂ । **ವಿಶ್ವಾನಿ**—ಸಮಸ್ತವಾದುದೂ ಆದ ಶಕ್ತಿಗಳೆಲ್ಲವನ್ನೂ ಕೊಡು.

|| ಭಾವಾರ್ಥ ||

ಎಲೈ ಇಂದ್ರನೇ, ಮನುಷ್ಯ ಸಂಬಂಧವಾದ ಪ್ರಜೆಗಳಲ್ಲಿ ಯಾವ ಬಲವೂ ಧನವೂ ಇರುವುದೋ, ಅಥವಾ ನಿಷಾದಾದಿ ಪಂಚಜನರಲ್ಲಿ ಪ್ರಕಾಶಮಾನವಾದ ಯಾವ ಅನ್ನವಿದೆಯೋ ಅವೆಲ್ಲವನ್ನೂ ನಮಗೆ ಒದಗಿಸಿ ಕೊಡು. ಮಹತ್ತಾದುದೂ ಸಮಸ್ತವಾದುದೂ ಆದ ಶಕ್ತಿಗಳೆಲ್ಲವನ್ನೂ ಕೊಡು.

English Translation.

Whatever strength and opulence (exist) amongst human beings, whatever be the sustenance of the five classes of men, bring Indra to us, as well (as) all great manly energies.

|| ಸಂಹಿತಾಪಾಠಃ ||

ಯದ್ವಾ ತೃಕ್ಷೌ ಮಘವನ್ದ್ರುಹ್ಯಾವಾ ಜನೇ ಯತ್ಪೂರೌ ಕಚ್ಚ ವೃಷ್ಣ್ಯಂ।
ಅಸ್ಮಭ್ಯಂ ತದ್ರಿರೀಹಿ ಸಂ ನೃಷಾಹ್ಯೇಽಮಿತ್ರಾನ್ಪೃತ್ಸು ತುರ್ವಣೇ ॥ ೮ ॥

|| ಪದಪಾಠಃ ||

ಯತ್ । ವಾ । ತೃಕ್ಷೌ । ಮಘsವನ್ । ದ್ರುಹ್ಯೌ । ಆ । ಜನೇ । ಯತ್ । ಪೂರೌ । ಕತ್ । ಚ । ವೃಷ್ಣ್ಯಂ।
ಅಸ್ಮಭ್ಯಂ । ತತ್ । ರಿರೀಹಿ । ಸಂ । ನೃsಸಹ್ಯೇ । ಅಮಿತ್ರಾನ್ । ಪೃತ್sಸು । ತುರ್ವಣೇ ॥ ೮ ॥

|| ಸಾಯಣಭಾಷ್ಯಂ ||

**ಹೇ ಮಘವನ್ ಧನವನ್ನಿಂದ್ರ ತೃಕ್ಷಾವೇತತ್ಸಂಜ್ಞೇ ರಾಜನಿ ಯದ್ವಾ ಯಚ್ಚ ಬಲಂ ವಿದ್ಯತೇ ದ್ರುಹ್ಯಾವಾ ದ್ರುಹ್ಯೌ ಚೈತತ್ಸಂಜ್ಞೇ ಚ ಜನೇ ಯದ್ಬಲಮಸ್ತಿ। ಪೂರಾವೇತತ್ಸಂಜ್ಞೇ ನೃಪೇ ಚ ಯತ್ಕಚ್ಚ ಯತ್ಕಿಂಚನ ವೃಷ್ಣ್ಯಂ ವೀರ್ಯಂ ವಿದ್ಯತೇ ತತ್ಸರ್ವಮಸ್ಮಭ್ಯಂ ಸ್ತೋತೃಭ್ಯಃ ಸಂ ಸಮ್ಯಗ್ರಿರೀಹಿ। ಪ್ರಯಚ್ಛ। ಕದಾ। ನೃಸಹ್ಯೇ ನೃಭಿರ್ಯೋದ್ಧೃಭಿಃ ಸೋಢವ್ಯೇ ಯುದ್ಧೇ ಪ್ರವೃತ್ತೇ। ಕಿಮರ್ಥಂ। ಪೃತ್ಸು ಪೃತನಾಸು ಸಂಗ್ರಾಮೇಷ್ವಮಿತ್ರಾನ್ ಶತ್ರೂನ್ ತುರ್ವಣೇ ತುರ್ವಿತುಂ ಹಿಂಸಿತುಂ ||**

|| ಪ್ರತಿಪದಾರ್ಥ ||

**ಮಘವನ್**—ಧನವಂತನಾದ ಎಲೈ ಇಂದ್ರನೇ। **ತೃಕ್ಷೌ**—ತೃಕ್ಷುವೆಂಬ ರಾಜನಲ್ಲಿಯೂ। **ಯದ್ವಾ**—ಅಥವಾ। **ದ್ರುಹ್ಯೌ**—ದ್ರುಹ್ಯುವೆಂಬ। **ಆ ಜನೇ**—ಜನಸಮೂಹದಲ್ಲಿಯೂ। **ಪೂರೌ**—ಪೂರುವೆಂಬ ರಾಜನಲ್ಲಿಯೂ। **ಯತ್ ಕಚ್ಚ**—ಯಾವಯಾವ ವಿಧವಾದ। **ವೃಷ್ಣ್ಯಂ**—ವೀರ್ಯವಿದೆಯೋ। **ತತ್**—ಆ

ಎಲ್ಲವನ್ನೂ । **ಅಸ್ಮಭ್ಯಂ**—ಸ್ತೋತೃಗಳಾದ ನಮಗೆ । **ನೃಷಹ್ಯೇ**—ಶತ್ರುಗಳನ್ನು ಎದುರಿಸುವ । **ಪೃತ್ಸು**—ಸಂಗ್ರಾಮಗಳಲ್ಲಿ । **ಅಮಿತ್ರಾನ್**—ಶತ್ರುಗಳನ್ನು । **ತುರ್ವಣೇ**—ಹಿಂಸಿಸಲು । **ಸಂ ರಿರೀಹಿ**—ಪೂರ್ಣವಾಗಿ ಕೊಡು ।

॥ ಭಾವಾರ್ಥ ॥

ಧನವಂತನಾದ ಎಲೈ ಇಂದ್ರನೇ, ತೃಕ್ಷುವೆಂಬ ರಾಜನಲ್ಲಿಯೂ, ಅಥವಾ ದ್ರುಹ್ಯುವೆಂಬ ರಾಜನಲ್ಲಿಯೂ ಪೂರುವೆಂಬ ರಾಜನಲ್ಲಿಯೂ ಯಾವ ಯಾವ ವಿಧವಾದ ವೀರ್ಯವಿದೆಯೋ ಆ ಎಲ್ಲವನ್ನೂ ಸ್ತೋತೃಗಳಾದ ನಮಗೆ ಶತ್ರುಗಳನ್ನು ಎದುರಿಸುವ ಸಂಗ್ರಾಮಗಳಲ್ಲಿ ಶತ್ರುಗಳನ್ನು ಹಿಂಸಿಸಲು ಪೂರ್ಣವಾಗಿ ಕೊಡು.

English Translation.

Whatever vigour, Maghavan, (existed) in Trikshu, in Druhyu, in Puru, bestow fully upon us in conflicts wish foes, so that we may destroy our enemies in war.

॥ ಸಂಹಿತಾಪಾಠಃ ॥

ಇಂದ್ರ ತ್ರಿಧಾತು ಶರಣಂ ತ್ರಿವರೂಥಂ ಸ್ವಸ್ತಿಮತ್ ।
ಛರ್ದಿರ್ಯಚ್ಛ ಮಘವದ್ಭ್ಯಶ್ಚ ಮಹ್ಯಂ ಚ ಯಾವಯಾ ದಿದ್ಯುಮೇಭ್ಯಃ ॥

॥ ಪದಪಾಠಃ ॥

ಇಂದ್ರ । ತ್ರಿಽಧಾತು । ಶರಣಂ । ತ್ರಿಽವರೂಥಂ । ಸ್ವಸ್ತಿಽಮತ್ ।
ಛರ್ದಿಃ । ಯಚ್ಛ । ಮಘವತ್ಽಭ್ಯಃ । ಚ । ಮಹ್ಯಂ । ಚ । ಯವಯ । ದಿದ್ಯುಂ । ಏಭ್ಯಃ ॥ ೯ ॥

॥ ಸಾಯಣಭಾಷ್ಯಂ ॥

ಚಾತುರ್ವಿಂಶಿಕೇಽಹನಿ ನಿಷ್ಕೇವಲ್ಯೇ ಇಂದ್ರ ತ್ರಿಧಾತ್ವಿತಿ ವೈರೂಪಸ್ಯ ಸಾಮಪ್ರಗಾಥಃ ಶಂಸನೀಯಃ। ಸೂತ್ರಿತಂ ಚ । ಇಂದ್ರ ತ್ರಿಧಾತು ಶರಣಂ ತ್ವಮಿಂದ್ರ ಪ್ರತೂರ್ತಿಷು । ಆ ೭ ೩ । ಇತಿ ॥

ಹೇ ಇಂದ್ರ ತ್ರಿಧಾತು ತ್ರಿಪ್ರಕಾರಂ ತ್ರಿಭೂಮಿಕಂ ತ್ರಿವರೂಥಂ ತ್ರಯಾಣಾಂ ಶೀತಾತಪವರ್ಷಾಣಾಂ ವಾರಕಂ ಸ್ವಸ್ತಿಮದವಿನಾಶಯುಕ್ತಂ ಛರ್ದಿಶ್ಛದಿಷ್ಮಚ್ಛಾದನಯುಕ್ತಮೇವಂಗುಣವಿಶಿಷ್ಟಂ ಶರಣಂ ಗೃಹಂ ಮಘವದ್ಭ್ಯಶ್ಚ । ಮಘಂ ಹವಿರ್ಲಕ್ಷಣಂ ಧನಂ । ತದ್ವದ್ಭ್ಯಶ್ಚಾಸ್ಮದೀಯೇಭ್ಯೋ ಮಹ್ಯಂ ಭರದ್ವಾಜಾಯ ಚ ಯಚ್ಛ । ದೇಹಿ । ಅಪಿ ಚೈಭ್ಯಃ ಸಕಾಶಾದ್ದಿದ್ಯುಂ ಶತ್ರುಪ್ರೇರಿತಂ ದ್ಯೋತಮಾನಮಾಯುಧಂ ಯವಯ । ಪೃಥಕ್ಕುರು ।

॥ ಪ್ರತಿಪದಾರ್ಥ ॥

**ಇಂದ್ರ**—ಎಲೈ ಇಂದ್ರನೇ । **ತ್ರಿಧಾತು**—ಮೂರು ಪ್ರಕಾರವಾದುದೂ । **ತ್ರಿವರೂಥಂ**—ಶೀತ, ಬಿಸಿಲು ಮತ್ತು ವೃಷ್ಟಿ ಇವುಗಳಿಂದ ರಕ್ಷಿಸಬಲ್ಲುದೂ । **ಸ್ವಸ್ತಿಮತ್**—ಮಂಗಳಕರವಾದುದೂ । **ಛರ್ದಿಃ**—ರಕ್ಷಕ ವಾದುದೂ ಆದ । **ಶರಣಂ**—ಗೃಹವನ್ನು । **ಮಘವದ್ಭ್ಯಃ**—ಹವಿಸ್ಸಿನರೂಪದ ಧನವಂತರಾದ ನಮ್ಮ ಬಂಧು ಗಳಿಗೂ । **ಮಹ್ಯಂ**—ಭರದ್ವಾಜನಾದ ನನಗೂ । **ಯಚ್ಛ**—ಅನುಗ್ರಹಿಸಿಕೊಡು । **ಏಭ್ಯಃ**—ಈ ಗೃಹಗಳಿಂದ । **ದಿದ್ಯುಂ**—(ಶತ್ರುಪ್ರೇರಿತವೂ) ಜ್ವಾಲಾಯುತವಾದುದೂ ಆದ ಆಯುಧಗಳನ್ನು । **ಯುವಯ**—ಬೇರೆ ಮಾಡು.

॥ ಭಾವಾರ್ಥ ॥

ಎಲೈ ಇಂದ್ರನೇ, ಮೂರು ಪ್ರಕಾರವಾದುದೂ, ಶೀತ, ಬಿಸಿಲು ಮತ್ತು ಮಳೆ ಇವುಗಳಿಂದ ರಕ್ಷಿಸಬಲ್ಲುದೂ, ಮಂಗಳಕರವಾದುದೂ, ರಕ್ಷಕವಾದುದೂ, ಆದ ಗೃಹವನ್ನು ಹವಿಸ್ಸನ್ನರ್ಪಿಸಲು ಸಿದ್ಧರಾಗಿರುವ ನಮ್ಮ ಬಂಧುಗಳಿಗೂ ಭರದ್ವಾಜನಾದ ನನಗೂ ಅನುಗ್ರಹಿಸಿ ಕೊಡು. ಈ ಗೃಹಗಳಿಂದ ಶತ್ರುಪ್ರೇರಿತವೂ, ಜ್ವಾಲಾಯುತವೂ ಆದ ಶತ್ರುಗಳ ಆಯುಧವನ್ನು ದೂರದಲ್ಲಿರಿಸಿ ಇದಕ್ಕೆ ಅಪಾಯವಾಗದಂತೆ ಮಾಡು.

## English Translation.

Give, Indra, to the affluent, and to me also, a sheltering and prosperous dwelling, combining three elements, and defending in three ways, and keep from them the blazing (weapon of our foes).

॥ ವಿಶೇಷವಿಷಯಗಳು ॥

ಯಜ್ಞದ ಚಾತುರ್ವಿಂಶಕವೆಂಬ ದಿವಸ ನಿಷ್ಕೇವಲ್ಯಶಸ್ತ್ರಮಂತ್ರಗಳನ್ನು ಪಠಿಸುವಾಗ **ಇಂದ್ರ ತ್ರಿಧಾತು** ಎಂಬ ಈ ಋಕ್ಕನ್ನು ಸಾನುಪ್ರಗಾಥಮಂತ್ರಕ್ಕಾಗಿ ಪಠಿಸಬೇಕೆಂದು ಆಶ್ವಲಾಯನಶ್ರೌತಸೂತ್ರದ—**ಇಂದ್ರ ತ್ರಿಧಾತು ಶರಣಂ ತ್ವಮಿಂದ್ರ ಪ್ರತೂರ್ತಿಷು** ಎಂಬ ಸೂತ್ರದಿಂದ (ಆ. ೭-೩) ವಿವೃತವಾಗಿರುವುದು.

॥ ಸಂಹಿತಾಪಾಠಃ ॥

ಯೇ ಗವ್ಯತಾ ಮನಸಾ ಶತ್ರುಮಾದಭುರಭಿಪ್ರಘ್ನಂತಿ ಧೃಷ್ಣುಯಾ ।
ಅಧ ಸ್ಮಾ ನೋ ಮಘವನ್ನಿಂದ್ರ ಗಿರ್ವಣಸ್ತನೂಪಾ ಅಂತಮೋ ಭವ ॥ ೧೦ ॥

॥ ಪದಪಾಠಃ ॥

ಯೇ । ಗವ್ಯತಾ । ಮನಸಾ । ಶತ್ರುಂ । ಆಽದಭುಃ । ಅಭಿಽಪ್ರಘ್ನಂತಿ । ಧೃಷ್ಣುಽಯಾ ।
ಅಧ । ಸ್ಮ । ನಃ । ಮಘಽವನ್ । ಇಂದ್ರ । ಗಿರ್ವಣಃ । ತನೂಽಪಾಃ । ಅಂತಮಃ । ಭವ ॥ ೧೦ ॥

॥ ಸಾಯಣಭಾಷ್ಯಂ ॥

ಯೇ ಜನಾ ಗವ್ಯತಾ ಶತ್ರೂಣಾಂ ಗಾ ಇಚ್ಛತಾ ಮನಸಾ ಯುಕ್ತಾಃ ಸಂತಃ ಶತ್ರುಂ ಶಾತಯಿತಾರಂ ವೈರಿಣಮಾದಭುಃ ಅಹಿಂಸಿಷುಃ । ಯೇ ಚ ಧೃಷ್ಣುಯಾ ಧೃಷ್ಣವೋ ಧೃಷ್ಟಾಃ ಸಂತೋಽಸ್ಮಾನಭಿಲಕ್ಷ್ಯ ಪೃಷ್ಣಂತಿ ಪ್ರಕರ್ಷೇಣ ಹಿಂಸಂತಿ ಹೇ ಮಘವನ್ ಧನವನ್ ಗಿರ್ವಣೋ ಗಿರಾಂ ಸಂಭಕ್ತರಿಂದ್ರ ಅಧ ಸ್ಮಾಸ್ಮಿನ್ಕಾಲೇ ತೇಭ್ಯಃ ಸಕಾಶಾತ್ ನೋಽಸ್ಮಾಕಂ ತನೂಪಾಸ್ತನೂನಾಂ ಶರೀರಾಣಾಂ ರಕ್ಷಿತಾ ಸನ್ ಅಂತಮೋಽಂತಿಕತಮೋ ಭವ ॥

॥ ಪ್ರತಿಪದಾರ್ಥ ॥

**ಮಘವನ್**—ಧನವಂತನೂ । **ಗಿರ್ವಣಃ**—ಸ್ತುತಿಯಿಂದ ಪ್ರಾಪ್ಯನೂ ಆದ । **ಇಂದ್ರ**—ಎಲೈ ಇಂದ್ರನೇ । **ಯೇ**—ಯಾವ ಪುರುಷರು । **ಗವ್ಯತಾ**—(ಶತ್ರುಗಳಿಂದ) ಗೋವುಗಳನ್ನು ಪಡೆಯಬೇಕೆಂಬ । **ಮನಸಾ**—ಮನಸ್ಸಿನಿಂದ ಕೂಡಿದವರಾಗಿ । **ಶತ್ರುಂ**—ಶತ್ರುವನ್ನು । **ಆದಭುಃ**—ಹಿಂಸಿಸಿದರೋ (ಮತ್ತು ಯಾರು) । **ಧೃಷ್ಣುಯಾ**—ಶತ್ರುಧರ್ಷಕವಾದ ಮನಸ್ಸಿನಿಂದ । **ಪೃಷ್ಣಂತಿ**—ಹಿಂಸಿಸುವರೋ (ಅಂತಹ ಪುರುಷರಂತೆ) । **ಅಧ ಸ್ಮ**—ಈ ಕಾಲದಲ್ಲಿ । **ನಃ**—ನಮಗೆ । **ತನೂಪಾಃ**—ದೇಹರಕ್ಷಕನಾಗಿ । **ಅಂತಮಃ**—ಅತ್ಯಂತ ಸಮೀಪಸ್ಥನಾಗಿ । **ಭವ**—ಆಗಿರು.

॥ ಭಾವಾರ್ಥ ॥

ಧನವಂತನೂ ಸ್ತುತಿಯಿಂದ ಲಭ್ಯನೂ ಆದ ಎಲೈ ಇಂದ್ರನೇ, ಯಾವ ಪುರುಷರು ಶತ್ರುಗಳಿಂದ ಗೋವುಗಳನ್ನು ಪಡೆಯಬೇಕೆಂಬ ಮನಸ್ಸಿನಿಂದ ಕೂಡಿದವರಾಗಿ ಶತ್ರುವನ್ನು ಹಿಂಸಿಸಿದರೋ ಮತ್ತು ಯಾರು ಶತ್ರುಧರ್ಷಕವಾದ ಮನಸ್ಸಿನಿಂದ ಹಿಂಸಿಸುವರೋ ಅಂತಹ ಪುರುಷರಂತೆ ಈ ಕಾಲದಲ್ಲಿ ನಮಗೆ ಅತ್ಯಂತ ಸಮೀಪಸ್ಥನಾಗಿ ಆಗಿರು.

English Translation.

Affluent Indra, propitiated by praise, be near to us, the defender of our persons (against those) who assail (us as) enemies, with a mind bent upon carrying off (our) cattle, or who assault us with arrogance.

॥ ಸಂಹಿತಾಪಾಠಃ ॥

ಅಧ ಸ್ಮಾ ನೋ ವೃಧೇ ಭವೇಂದ್ರ ನಾಯಮವಾ ಯುಧಿ ।
ಯದಂತರಿಕ್ಷೇ ಪತಯಂತಿ ಪರ್ಣಿನೋ ದಿದ್ಯವಸ್ತಿಗ್ಮಮೂರ್ಧಾನಃ ॥ ೧೧ ॥

॥ ಪದಪಾಠಃ ॥

ಅಧ । ಸ್ಮ । ನಃ । ವೃಧೇ । ಭವ । ಇಂದ್ರ । ನಾಯಂ । ಅವ । ಯುಧಿ ।
ಯತ್ । ಅಂತರಿಕ್ಷೇ । ಪತಯಂತಿ । ಪರ್ಣಿನಃ । ದಿದ್ಯವಃ । ತಿಗ್ಮಮೂರ್ಧಾನಃ ॥ ೧೧ ॥

|| ಸಾಯಣಭಾಷ್ಯಂ ||

ಹೇ ಇಂದ್ರ ಅಥ ಸ್ಮ ತದಾನೀಂ ನೋಽಸ್ಮಾಕಂ ವೃಧೇ ವರ್ಧನಾಯ ಭವ । ಅಪಿ ಚ ನಾಯಂ ಯೋಽಸ್ಮಾಕಂ ನಯೋ ನೇತಾ ಯುಧಿ ಯುದ್ಧೇ ತಮುಷ್ಯೈವ । ರಕ್ಷ । ತದೇತ್ಯುಕ್ತಂ ಕದೇತ್ಯತ ಆಹ । ಪರ್ಣಿನಃ ಪಕ್ಷವಂತಸ್ತಿಗ್ಮಮೂರ್ಧಾನಸ್ತೀಕ್ಷ್ಣಾಗ್ರಾ ದಿದ್ಯವೋ ದೀಪ್ತಾ ವಾಣಾ ಯದ್ಯದಾಂತರಿಕ್ಷೇ ವ್ಯೋಮ್ನಿ ಪತಯಂತಿ ಶತ್ರುಭಿರ್ವಿಸೃಷ್ಟಾಃ ಪತಂತಿ ತದಾನೀಂ ವೃಧೇ ಭವೇತ್ಯನ್ವಯಃ ||

|| ಪ್ರತಿಪದಾರ್ಥ ||

**ಇಂದ್ರ**—ಎಲೈ ಇಂದ್ರನೇ | **ಯತ್**—ಯಾವಾಗ | **ಪರ್ಣಿನಃ**—ಗರಿಗಳುಳ್ಳವೂ | **ತಿಗ್ಮಮೂರ್ಧಾನಃ**–ಹರಿತವಾದ ಮೊನೆಯುಳ್ಳವೂ | **ದಿದ್ಯವಃ**—ಪ್ರಕಾಶಮಾನವೂ ಆದ ಬಾಣಗಳು (ಶತ್ರುಪ್ರೇರಿತಗಳಾಗಿ) | **ಅಂತರಿಕ್ಷೇ**—ಅಂತರಿಕ್ಷದಿಂದ | **ಪತಯಂತಿ**—(ನಮ್ಮ ಮೇಲೆ) ಬೀಳುವುವೋ | **ಅಥ ಸ್ಮ**—ಆ ಒಡನೆಯೇ | **ನಃ**—ನಮಗೆ | **ವೃಧೇ**—ವೃದ್ಧಿಕಾರಕನಾಗಿ | **ಭವ**—ಆಗು | **ಯುಧಿ**—ಯುದ್ಧದಲ್ಲಿ | **ನಾಯಂ**—ನಮ್ಮ ನೇತೃವನ್ನು | **ಅವ**—ರಕ್ಷಿಸು.

|| ಭಾವಾರ್ಥ ||

ಎಲೈ ಇಂದ್ರನೇ, ಗರಿಗಳುಳ್ಳವೂ, ಹರಿತವಾದ ಮೊನೆಗಳುಳ್ಳವೂ ಪ್ರಕಾಶಮಾನವೂ ಆದ ಶತ್ರುಗಳ ಬಾಣಗಳು ಶತ್ರುಪ್ರೇರಿತಗಳಾಗಿ ಅಂತರಿಕ್ಷದಿಂದ ನಮ್ಮ ಮೇಲೆ ಬೀಳುವಾಗ ನಮಗೆ ವೃದ್ಧಿಕಾರಕನಾಗಿ (ರಕ್ಷಕನಾಗಿ) ಆಗು. ಯುದ್ಧದಲ್ಲಿ ನಮ್ಮ ನೇತೃವನ್ನು ರಕ್ಷಿಸು.

## English Translation.

Indra, be (favourable) at present to our success: protect our leader in battle when the feathered, sharp-pointed, shining shafts fall from the sky.

|| ಸಂಹಿತಾಪಾಠಃ ||

ಯತ್ರ ಶೂರಾಸಸ್ತನ್ವೋ ವಿತನ್ವತೇ ಪ್ರಿಯಾ ಶರ್ಮ ಪಿತೄಣಾಂ |
ಅಧ ಸ್ಮಾ ಯಚ್ಛ ತನ್ವೇ೩ ತನೇ ಚ ಛರ್ದಿರಚಿತ್ತಂ ಯಾವಯ ದ್ವೇಷಃ||೧೨||

|| ಪದಪಾಠಃ ||

ಯತ್ರ | ಶೂರಾಸಃ | ತನ್ವಃ | ವಿಽತನ್ವತೇ | ಪ್ರಿಯಾ | ಶರ್ಮ | ಪಿತೄಣಾಂ ||
ಅಧ | ಸ್ಮ | ಯಚ್ಛ | ತನ್ವೇ | ತನೇ | ಚ | ಛರ್ದಿಃ | ಅಚಿತ್ತಂ | ಯವಯ | ದ್ವೇಷಃ || ೧೨ ||

॥ ಸಾಯಣಭಾಷ್ಯಂ ॥

ಯತ್ರ ಯಸ್ಮಿನ್ಕಾಲೇ ಶೂರಾಸಃ ಶೂರಾಃ ಶೌರ್ಯವಂತೋ ಯೋದ್ಧಾರಸ್ತನ್ವಃ ಸ್ವಕೀಯಾನಿ ಶರೀರಾಣಿ ವಿತನ್ವತೇ ವಿಸ್ತಾರಯಂತಿ ಸ್ವಾಮಿನೋ ಜಯಾಯ ಶತ್ರೂಣಾಂ ಪುರತೋ ದರ್ಶಯಂತಿ। ತಥಾಸ್ಮಿನ್ಕಾಲೇ ಪ್ರಿಯಾ ಪ್ರಿಯಾಣಿ ಶರ್ಮ ಶರ್ಮಾಣಿ ಸ್ಥಾನಾನಿ ಪಿತ್ರ್ಯಾಣಾಂ ಜನಕಾನಾಂ ಸಂಬಂಧೀನಿ। ತೈರರ್ಜಿತಾನೀತಿ ಯಾವತ್। ಏತಾನಿ ಚ ವಿತನ್ವತೇ ಶತ್ರೂಣಾಂ ಪುರಸ್ತಾದ್ವಿಸ್ತಾರಯಂತಿ। ಪರಿತ್ಯಜಂತೀತಿ ಯಾವತ್। ಅಧ ಸ್ಮಾಸ್ಮಿನ್ಕಾಲೇ ತನ್ವೇ ಶರೀರಾಯ ತನೇ ತನಯಾಯ ಚ ಛರ್ದಿಶ್ಛಾದನಮಾಯುಧಾನಾಂ ನಿವಾರಕಂ ಕವಚಮಚಿತ್ತಂ ಶತ್ರುಭಿರಜ್ಞಾತಂ ಯಥಾ ಭವತಿ ತಥಾ ಯಚ್ಛ। ಪ್ರಯಚ್ಛ। ಶತ್ರುಜ್ಞಾನಾ-ತ್ಪೂರ್ವಮೇವ ದೇಹೀತ್ಯರ್ಥಃ। ಅಪಿ ಚ ದ್ವೇಷೋ ದ್ವೇಷ್ಟ್ರೄನ್ ಶತ್ರೂನ್ಯಾವಯ। ತೇಭ್ಯೋ ವಿಯೋಜಯ ॥

॥ ಪ್ರತಿಪದಾರ್ಥ ॥

(ಎಲೈ ಇಂದ್ರನೇ) **ಯತ್ರ**—ಯಾವ ಕಾಲದಲ್ಲಿ। **ಶೂರಾಸಃ**—ಪರಾಕ್ರಮಿಗಳಾದ ಯೋಧರು। **ತನ್ವಃ**—ತಮ್ಮ ಶರೀರಗಳನ್ನು। **ವಿತನ್ವತೇ**—(ಸ್ವಾಮಿ ಜಯಕ್ಕಾಗಿ) ಯುದ್ಧರಂಗದಲ್ಲಿ ಪ್ರಸರಿಸುವರೋ (ಆ ಕಾಲದಲ್ಲಿ)। **ಪ್ರಿಯಾ**-ಹಿತಕರವಾದುದೂ। **ಪಿತ್ರ್ಯಾಣಾಂ**—ಪಿತ್ರಾರ್ಜಿತವಾದುದೂ ಆದ। **ಶರ್ಮ**—ಸ್ಥಾನಗಳನ್ನು (ತ್ಯಜಿಸುತ್ತಾರೆ)। **ಅಧ ಸ್ಮ**—ಆ ಸನ್ನಿವೇಶದಲ್ಲಿ। **ತನ್ವೇ**—ಅವರ ಶರೀರ ರಕ್ಷಣೆಗೂ। **ತನೇ**—ಪುತ್ರಾದಿಗಳೂ। **ಛರ್ದಿಃ**—ಅವರ ದೇಹರಕ್ಷಣೆ ಮಾಡತಕ್ಕ ಯುದ್ಧಕವಚವನ್ನು। **ಅಚಿತ್ತಂ**—ಶತ್ರುಗಳಿಗೆ ತಿಳಿಯದಿರುವಂತೆ। **ಯಚ್ಛ**—ಕೊಡಿಸು। **ದ್ವೇಷಃ**—ಶತ್ರುಗಳನ್ನು। **ಯಾವಯ**—ಜಯಿಸಿ ನಾಶಮಾಡು.

॥ ಭಾವಾರ್ಥ ॥

ಎಲೈ ಇಂದ್ರನೇ, ಪರಾಕ್ರಮಿಗಳಾದ ಯೋಧರು ತಮ್ಮ ಸ್ವಾಮಿಜಯಕ್ಕಾಗಿ ತಮ್ಮ ಶರೀರಗಳನ್ನು ಯುದ್ಧ ರಂಗದಲ್ಲಿ ಪ್ರಸರಿಸುವ ಕಾಲದಲ್ಲಿ ಹಿತಕರವೂ ಪಿತ್ರಾರ್ಜಿತವೂ ರಕ್ಷಕವೂ ಆದ ಸ್ವಗೃಹಗಳನ್ನು ತ್ಯಜಿಸುತ್ತಾರೆ. ಆ ಕಾಲದಲ್ಲಿ ಅವರ ಮತ್ತು ಅವರ ಪುತ್ರಾದಿಗಳ ದೇಹರಕ್ಷಣೆಗಾಗಿ ಯುದ್ಧಕವಚಗಳನ್ನು ಶತ್ರುಗಳಿಗೆ ತಿಳಿಯದಂತೆ ಕೊಡು. ಮತ್ತು ಶತ್ರುಗಳನ್ನು ನಾಶಮಾಡು.

English Translation.

When heroes rest their persons (until abandoning) the pleasant abodes of their progenitors: grant us, for ourselves and our posterity, an unsuspected defence, and scatter our enemies.

॥ ಸಂಹಿತಾಪಾಠಃ ॥

ಯದಿಂದ್ರ ಸರ್ಗೇ ಅರ್ವತಶ್ಚೋದಯಾಸೇ ಮಹಾಧನೇ।
ಅಸಮನೇ ಅಧ್ವನಿ ವೃಜಿನೇ ಪಥಿ ಶ್ಯೇನಾಁಇವ ಶ್ರವಸ್ಯತಃ ॥ ೧೩ ॥

|| ಪದಪಾಠಃ ||

ಯತ್ । ಇಂದ್ರ । ಸರ್ಗೇ । ಅರ್ವತಃ । ಚೋದಯಾಸೇ । ಮಹಾಽಧನೇ ।

ಅಸಮನೇ । ಅಧ್ವನಿ । ವೃಜಿನೇ । ಪಥಿ । ಶ್ಯೇನಾನ್ಽಇವ । ಶ್ರವಸ್ಯತಃ || ೧೩ ||

|| ಸಾಯಣಭಾಷ್ಯಂ ||

ಹೇ ಇಂದ್ರ ಮಹಾಧನೇ ಜೇತವ್ಯಸ್ಯ ಮಹತೋ ಧನಸ್ಯ ನಿಮಿತ್ತೇ ಮಹತಿ ಸಂಗ್ರಾಮೇ ಸರ್ಗ ಉದ್ಯೋಗೇ ಸತ್ಯಸಮನೇ ವಿಷಮೇಽಧ್ವನಿ ಮಾರ್ಗೇಽರ್ವತೋಽಸ್ಮದೀಯಾನಶ್ವಾನ್ಯದ್ಯದಾ ಚೋದಯಾಸೇ ಪ್ರೇರಯಸಿ । ವೃಜಿನೇ ಕುಟಿಲೇ ಪಥಿ ಮಾರ್ಗೇಽಂತರಿಕ್ಷಲಕ್ಷಣೇ ಶ್ರವಸ್ಯತಃ ಶ್ರವೋಽನ್ನಮಾಮಿಷರೂಪಮಾತ್ಮನ ಇಚ್ಛತಃ ಶ್ಯೇನಾನಿವ ಯಥಾಮಿಷಾರ್ಥಿನ ಶ್ಯೇನಾ ಅಂತರಿಕ್ಷೇ ಶೀಘ್ರಂ ಗಚ್ಛಂತಿ ತಥಾಸ್ಮದೀಯಾನಶ್ವಾನ್ಯದಾ ತ್ವಂ ಶೀಘ್ರಂ ಗಮಯಸಿ ತದಾನೀಮಸ್ಮಾಕಂ ತನ್ವೇ ತನಯಾಯ ಚ ಛರ್ದಿರ್ಯಚ್ಛೇತಿ ಪೂರ್ವಸ್ಯಾಮೃಚಿ ಸಂಬಂಧಃ ||

|| ಪ್ರತಿಪದಾರ್ಥ ||

ಇಂದ್ರ—ಎಲೈ ಇಂದ್ರನೇ । **ವೃಜಿನೇ**—ವಕ್ರವಾದ । **ಪಥಿ**—ಅಂತರಿಕ್ಷರೂಪವಾದ ಮಾರ್ಗದಲ್ಲಿ । **ಶ್ರವಸ್ಯತಃ**—ಮಾಂಸರೂಪವಾದ ಅನ್ನವನ್ನು ಹುಡುಕುವ । **ಶ್ಯೇನಾನಿವ**—ಶ್ಯೇನಪಕ್ಷಿಗಳು ವೇಗವಾಗಿ ಹಾರುವಂತೆ। **ಮಹಾಧನೇ**—ಪ್ರಭೂತವಾದ ಧನನಿಮಿತ್ತವಾದ ಸಂಗ್ರಾಮದಲ್ಲಿ । **ಸರ್ಗೇ**—ಉದ್ಯುಕ್ತವಾದ ಕಾಲದಲ್ಲಿ । **ಅಸಮನೇ**—ಹಳ್ಳ ದಿಣ್ಣೆಗಳಿಂದ ಕೂಡಿ ವಿಷಮವಾದ । **ಅಧ್ವನಿ**—ಮಾರ್ಗದಲ್ಲಿ । **ಅರ್ವತಃ**—ನಮ್ಮ ಅಶ್ವಗಳನ್ನು। **ಯತ್**—ಯಾವಾಗ । **ಚೋದಯಾಸೇ**—(ವೇಗವಾಗಿ ಓಡಲು) ಪ್ರೇರಿಸುವೆಯೋ (ಆಗ ರಕ್ಷಕವಾದ ಕವಚವನ್ನು ಕೊಡು).

|| ಭಾವಾರ್ಥ ||

ಎಲೈ ಇಂದ್ರನೇ, ವಕ್ರವಾದ ಅಂತರಿಕ್ಷಮಾರ್ಗದಲ್ಲಿ ಮಾಂಸರೂಪವಾದ ಆಹಾರವನ್ನು ಹುಡುಕತಕ್ಕ ಶ್ಯೇನಪಕ್ಷಿಗಳು ವೇಗವಾಗಿ ಹಾರುವಂತೆ, ಪ್ರಭೂತವಾದ ಧನನಿಮಿತ್ತವಾದ ಸಂಗ್ರಾಮದಲ್ಲಿ ಉದ್ಯುಕ್ತವಾದಾಗ ಹಳ್ಳದಿಣ್ಣೆಗಳಿಂದ ಕೂಡಿ ವಿಷಮವಾದ ಮಾರ್ಗದಲ್ಲಿ ನಮ್ಮ ಅಶ್ವಗಳನ್ನು ಯಾವಾಗ ವೇಗವಾಗಿ ಓಡಲು ಪ್ರೇರಿಪಿಸುವೆಯೋ ಆಗ ರಕ್ಷಕವಾದ ಕವಚವನ್ನು ಕೊಡು.

English Translation.

(At the time) when, in the effort (made) in an arduous conflict; urge our horses over an uneven road, like falcons darting upon their food through the difficult path (of the firmament).

॥ ಸಂಹಿತಾಪಾಠಃ ॥

ಸಿಂಧೋರಿವ ಪ್ರವಣೇ ಆಶುಯಾ ಯತೋ ಯದಿ ಕ್ಲೋಶಮನು ಷ್ವಣಿ ।

ಆ ಯೇ ವಯೋ ನ ವರ್ವೃತತ್ಯಾಮಿಷಿ ಗೃಭೀತಾ ಬಾಹ್ವೋರ್ಗವಿ ॥ ೧೪ ॥

॥ ಪದಪಾಠಃ ॥

ಸಿಂಧೋಃಽಇವ । ಪ್ರವಣೇ । ಆಶುಽಯಾ । ಯತಃ । ಯದಿ । ಕ್ಲೋಶಂ । ಅನು । ಸ್ವನಿ ।

ಆ । ಯೇ । ವಯಃ । ನ । ವರ್ವೃತತಿ । ಆಮಿಷಿ । ಗೃಭೀತಾಃ । ಬಾಹ್ವೋಃ । ಗವಿ ॥ ೧೪ ॥

॥ ಸಾಯಣಭಾಷ್ಯಂ ॥

ಉಕ್ತಸ್ಯೈವಾರ್ಥಸ್ಯಾತಿಶಯಪ್ರತಿಪಾದನಾರ್ಥೇಯಂ । ಪ್ರವಣೇ ನಿಮ್ನದೇಶೇ ಸಿಂಧೂನಿವ ಸ್ಯಂದಮಾನಾ ನದೀರಿವಾಶುಯಾಶು ಶೀಘ್ರಂ ಯತೋ ಗಚ್ಛತೋಽಶ್ವಾನ್ ಹೇ ಇಂದ್ರ ಯದಿ ಚೋದಯಾಸೇ ಪ್ರೇರಯಸಿ । ಕದಾ । ಕ್ಲೋಶಮನು । ಕ್ಲೋಶ ಇತಿ ಭಯನಾಮ । ಭಯಮನುಲಕ್ಷ್ಯ ಸ್ವನಿ ಸ್ವನ ಆಕ್ರೋಶೇ ಸತಿ । ಕೀದೃಶಾಸ್ತೇಽಶ್ವಾಃ । ಬಾಹ್ವೋರ್ಬಾಹುಮೂಲಯೋರ್ಗೃಭೀತಾಃ ಕಕ್ಷ್ಯಯಾ ಬದ್ಧಾ ಯೇಽಶ್ವಾ ಗವಿ ಗೋರೂಪೇ ಧನೇ ಜೇತವ್ಯೇ ಸತ್ಯಾ ವರ್ವೃತತಿ ಪುನಃ ಪುನರಾವರ್ತಂತೇ । ಆಮಿಷ್ಯಾಮಿಷೇ ಮಾಂಸೇ ಗ್ರಹೀತವ್ಯೇ ಸತಿ ವಯೋ ನ ಯಥಾ ಶ್ಯೇನಾದಯಃ ಪಕ್ಷಿಣಃ ಪುನಃ ಪುನರಾವರ್ತಂತೇ ತದ್ವತ್ । ಏವಂಭೂತಾನಶ್ವಾನ್ ಭಯೇನ ಕ್ರೋಶೇ ಸತಿ ಯದಾ ತ್ವಂ ಪ್ರೇರಯಸಿ ತದಾನೀಮಸ್ಮದೀಯೇಭ್ಯಶ್ಛದಿರ್ಃ ಪ್ರಯಚ್ಛೇತಿ ಸಂಬಂಧಃ । ಯದ್ಯಪ್ಯೈಷೇಯರ್ಯುದ್ಧೇ ಪ್ರಸಕ್ತಿರ್ನಾಸ್ತಿ ತಥಾಪಿ ರಾಜಪುರೋಹಿತತ್ವೇನ ರಾಜಕೀಯಾನಾಂ ಪುರುಷಾಣಾಂ ಜಯಃ ಪ್ರಾರ್ಥ್ಯತ ಇತಿ ನ ಕಶ್ಚಿದ್ವಿರೋಧಃ ॥

॥ ಪ್ರತಿಪದಾರ್ಥ ॥

(ಎಲೈ ಇಂದ್ರನೇ) **ಆಮಿಷಿ**—ಮಾಂಸವನ್ನು ಹೊಂದಲು । **ವಯೋ ನ**—ಶ್ಯೇನಾದಿ ಪಕ್ಷಿಗಳು ಪುನಃ ಪುನಃ ಓಡಿಬರುವಂತೆ । **ಬಾಹ್ವೋಃ**—ಬಾಹು ಮೂಲಗಳಲ್ಲಿ । **ಗೃಭೀತಾಃ**—ಸುತ್ತು ಪಟ್ಟಿಯಿಂದ ಬದ್ಧವಾಗಿರುವ । **ಯೇ**—ಯಾವ ಅಶ್ವಗಳು । **ಗವಿ** ಗೋನಿಮಿತ್ತವಾಗಿ । **ಆ ವರ್ವೃತತಿ**-ಪುನಃಪುನಃ ಬರುವುವೋ । **ಕ್ಲೋಶಮನು**-ಭಯದಿಂದ । **ಸ್ವನಿ**—ಹೇಷಾಶಬ್ದವನ್ನು ಮಾಡುತ್ತಿದ್ದರೂ ಸಹ । **ಪ್ರವಣೇ**—ತಗ್ಗು ಪ್ರದೇಶಗಳಲ್ಲಿ । **ಸಿಂಧೂನಿವ**—ವೇಗವಾಗಿ ಪ್ರವಹಿಸುವ ನದಿಗಳಂತೆ । **ಆಶುಯಾ**—ಬಹು ವೇಗವಾಗಿ । **ಯತಃ**—ಓಡುವಂತೆ । **ಯದಿ**—ಯಾವಾಗ ಪ್ರೇರಿಸುವೆಯೋ (ಆಗ ಯುದ್ಧ ಕವಚಗಳನ್ನು ಕೊಡು.)

॥ ಭಾವಾರ್ಥ ॥

ಎಲೈ ಇಂದ್ರನೇ, ಮಾಂಸವನ್ನು ಹೊಂದಲು ಶ್ಯೇನಾದಿ ಪಕ್ಷಿಗಳು ಪುನಃಪುನಃ ಓಡಿಬರುವಂತೆ ಬಾಹು ಮೂಲಗಳಲ್ಲಿ ಸುತ್ತು ಪಟ್ಟಿಯಿಂದ ಬದ್ಧವಾಗಿರುವ ಯಾವ ಅಶ್ವಗಳು ಗೋನಿಮಿತ್ತವಾಗಿ ಪುನಃಪುನಃ ಬರುವುವೋ

ಅಂತಹ ಅಶ್ವಗಳು ಭಯದಿಂದ ಹೇಷಾಶಬ್ದವನ್ನು ಮಾಡುತ್ತಿದ್ದರೂ ಸಹ ತಗ್ಗು ಪ್ರದೇಶಗಳಲ್ಲಿ ವೇಗವಾಗಿ ಪ್ರವಹಿಸುವ ನದಿಗಳಂತೆ ಬಹು ವೇಗವಾಗಿ ಓಡುವಂತೆ ಯಾವಾಗ ಪ್ರೇರಿಸುವೆಯೋ ಆಗ ಯುದ್ಧಕವಚಗಳನ್ನು ಕೊಡು.

English Translation.

Rushing rapidly like rivers in their downward course, and although neighing loudly through terror, they yet, tight-girthed, return repeatedly (to the conflict) for cattle, like birds darting on their prey.



# ನಲವತ್ತೇಳನೆಯ ಸೂಕ್ತವು

॥ ಸಾಯಣಭಾಷ್ಯಂ ॥

**ಸ್ವಾದುರಿತ್ಯೇಕತ್ರಿಂಶದೃಚಂ ಚತುರ್ಥಂ ಸೂಕ್ತಂ ಭರದ್ವಾಜಪುತ್ರಸ್ಯ ಗರ್ಗಸ್ಯಾರ್ಷಂ। ಪ್ರಸ್ತೋಕ ಇನ್ನ್ವಿತ್ಯೇಷಾ ತ್ರಿಷ್ಟುಪ್ ದಶಾಶ್ವಾನಿತ್ಯನುಷ್ಟುಪ್ ದಶ ರಥಾನಿತಿ ಗಾಯತ್ರೀ ಮಹಿ ರಾಧ ಇತಿ ದ್ವಿಪದಾ ದ್ವ್ಯೇಕಾದಶಕಾ ಯುಜಾನೋ ಹರಿತೇತ್ಯೇಷಾ ಬೃಹತೀ ದಿವಸ್ಪೃಥಿವ್ಯಾ ಇತಿ ಜಗತೀ ಶಿಷ್ಟಾಸ್ತ್ರಿಷ್ಟುಭಃ। ಆದಿತಃ ಪಂಚಾನಾಮೃಚಾಂ ಸೋಮೋ ದೇವತಾ। ಅಗವ್ಯೂತಿ ಕ್ಷೇತ್ರಮಿತ್ಯರ್ಧರ್ಚಪ್ರಥಮಪಾದೇ ದೇವಾ ಉತ್ತರಸ್ಯ ಭೂಮಿಸ್ತೃತೀಯಸ್ಯ ಬೃಹಸ್ಪತಿಶ್ಚತುರ್ಥಸ್ಯೇಂದ್ರಃ। ಪ್ರಸ್ತೋಕ ಇತ್ಯಾದ್ಯಾಶ್ಚತಸ್ರಃ ಸೃಂಜಯಪುತ್ರಸ್ಯ ರಾಜ್ಞೋ ದಾನಸ್ತುತಿರೂಪತ್ವಾತ್ತದ್ದೇವತಾಕಾಃ। ವನಸ್ಪತೇ ವೀಡ್ವಂಗ ಇತ್ಯಯಂ ತೃಚೋ ರಥದೇವತ್ಯಃ। ಉಪ ಶ್ವಾಸಯೇತಿ ತೃಚೋ ದುಂದುಭಿದೇವತ್ಯಃ। ಸಮಶ್ವಪರ್ಣಾ ಇತ್ಯರ್ಧರ್ಚ ಐಂದ್ರಃ। ಶಿಷ್ಟಾ ಇಂದ್ರದೇವತಾಕಾಃ। ತಥಾ ಚಾನುಕ್ರಾಂತಂ। ಸ್ವಾದುರೇಕತ್ರಿಂಶದ್ಗರ್ಗಃ ಪಂಚಾದೌ ಸೌಮ್ಯೋಽಗವ್ಯೂತ್ಯರ್ಧರ್ಚೋ ಲಿಂಗೋಕ್ತದೇವತಃ ಪ್ರಸ್ತೋಕ ಇತಿ ತ್ರಿಷ್ಟುಬನುಷ್ಟುಬ್ಗಾಯತ್ರೀ ದ್ವಿಪದಾ ಸಾರ್ಞ್ಜಯಸ್ಯ ಪ್ರಸ್ತೋಕಸ್ಯ ದಾನಸ್ತುತಿಃ ಪರೌ ತೃಚೌ ರಥದುಂದುಭಿದೇವತ್ಯಾ-ವೈಂದ್ರೋಂಽತ್ಯೋಽರ್ಧರ್ಚೋ ಯುಜಾನೋ ಬೃಹತೀ ದಿವಸ್ಪೃಥಿವ್ಯಾ ಜಗತೀ॥ ಅಗ್ನಿಮಾರುತ ಆದಿತಶ್ಚತಸ್ರಃ ಶಂಸನೀಯಾಃ। ಸೂತ್ರಿತಂ ಚ। ಸ್ವಾದುಷ್ಕಿಲಾಯಮಿತಿ ಚತಸ್ರೋ ಮಧ್ಯೇ ಚಾಹ್ವಾನಂ। ಆ. ೫-೨೦। ಇತಿ॥**

ಅನುವಾದವು—**ಸ್ವಾದುಃ** ಎಂಬ ಈ ಸೂಕ್ತವು ನಾಲ್ಕನೆಯ ಅನುವಾಕದಲ್ಲಿ ನಾಲ್ಕನೆಯ ಸೂಕ್ತವು. ಇದರಲ್ಲಿ ಮೂವತ್ತೊಂದು ಋಕ್ಕುಗಳಿರುವವು. ಈ ಸೂಕ್ತಕ್ಕೆ ಭರದ್ವಾಜಋಷಿಯ ಪುತ್ರನಾದ ಗರ್ಗನೆಂಬುವನು ಋಷಿಯು. ಈ ಸೂಕ್ತದ **ಪ್ರಸ್ತೋಕ** ಇನ್ನು ಎಂಬ (೨೨ ನೇ) ಋಕ್ಕು ತ್ರಿಷ್ಟುಪ್ ಛಂದಸ್ಕವು; **ದಶಾಶ್ವಾನ್** ಎಂಬ (೨೩ನೇ) ಋಕ್ಕು ಅನುಷ್ಟುಪ್ ಛಂದಸ್ಕವು; **ದಶ ರಥಾನ್** ಎಂಬ (೨೪ನೇ) ಋಕ್ಕು ಗಾಯತ್ರೀಛಂದಸ್ಕವು; **ಮಹಿ ರಾಧಃ** ಎಂಬ (೨೫ ನೇ) ಋಕ್ಕು ಹನ್ನೊಂದು ಅಕ್ಷರಗಳ ಎರಡು ಪಾದಗಳುಳ್ಳ ದ್ವಿಪದಾ ಎಂಬ ಛಂದಸ್ಸಿನದು; **ಯುಜಾನೋ ಹರಿತಾ** ಎಂಬ (೧೯) ನೇ ಋಕ್ಕು ಬೃಹತೀ ಛಂದಸ್ಕವು; **ದಿವಸ್ಪೃಥಿವ್ಯಾಃ** ಎಂಬ (೨೭ನೇ) ಋಕ್ಕು ಜಗತೀ

ಛಂದಸ್ಕವು. ಉಳಿದ ಋಕ್ಕುಗಳು ತ್ರಿಷ್ಟುಪ್‌ಛಂದಸ್ಕವು. ಈ ಸೂಕ್ತದ ಮೊದಲಿನ ಐದು ಋಕ್ಕುಗಳಿಗೆ ಸೋಮವು ದೇವತೆಯು. **ಆಗವ್ಯೂತಿ ಕ್ಷೇತ್ರಂ** ಎಂಬ ಇಪ್ಪತ್ತನೆಯ ಋಕ್ಕಿನ ಪೂರ್ವಾರ್ಧದ ಪ್ರಥಮಪಾದಕ್ಕೆ ಅದರಲ್ಲಿ ಹೇಳಿರುವ ದೇವತೆಗಳೇ ದೇವತೆಯು ; ಎರಡನೆಯ ಪಾದಕ್ಕೆ ಭೂಮಿಯೂ, ಮೂರನೆಯ ಪಾದಕ್ಕೆ ಬೃಹಸ್ಪತಿಯೂ ನಾಲ್ಕನೆಯ ಪಾದಕ್ಕೆ ಇಂದ್ರನೂ ದೇವತೆಗಳು. **ಪ್ರಸ್ತೋಕ** ಎಂದು ಮೊದಲಾಗುವ (೨೨-೨೫) ನಾಲ್ಕು ಋಕ್ಕುಗಳಲ್ಲಿ ಸೃಂಜಯಪುತ್ರನಾದ ಪ್ರಸ್ತೋಕ ಎಂಬ ರಾಜನ ದಾನಸ್ತುತಿ ಇರುವುದರಿಂದ ಆ ನಾಲ್ಕು ಋಕ್ಕುಗಳಿಗೆ ಪ್ರಸ್ತೋಕನ ದಾನಸ್ತುತಿಯೇ ದೇವತೆಯು ; **ವನಸ್ಪತೇ ವೀಡ್ವಂಗಃ** ಎಂದು ಮೊದಲಾಗುವ (೨೬-೨೮) ಮೂರು ಋಕ್ಕುಗಳಿಗೆ ರಥವೇ ದೇವತೆಯು ; **ಉಪಶ್ವಾಸಯ** ಎಂದು ಮೊದಲಾದ (೨೯-೩೧) ಮೂರು ಕೊನೆಯ ಋಕ್ಕಿನ ಉತ್ತರಾರ್ಧವನ್ನು ಬಿಟ್ಟು ಉಳಿದ ಭಾಗಕ್ಕೆ ದುಂದುಭಿಯು ದೇವತೆಯು. **ಸಮಶ್ವಪರ್ಣಾಃ** ಎಂಬ ಮೂವತ್ತೊಂದನೆಯ ಋಕ್ಕಿನ ಉತ್ತರಾರ್ಧಕ್ಕೆ ಇಂದ್ರನು ದೇವತೆಯು. ಉಳಿದ ಋಕ್ಕುಗಳಿಗೆಲ್ಲಾ ಇಂದ್ರನೇ ದೇವತೆಯು. ಅನುಕ್ರಮಣಿಕೆಯಲ್ಲಿ— **ಸ್ವಾದುರೇಕತ್ರಿಂಶದ್ಗರ್ಗಃ ಪಂಚಾದೌ ಸೌಮ್ಯೋಽಗವ್ಯೂತ್ಯರ್ಧರ್ಚೋ ಲಿಂಗೋಕ್ತದೇವತಃ ಪ್ರಸ್ತೋಕ ಇತಿ ತ್ರಿಷ್ಟುಬನುಷ್ಟುಬ್ಗಾಯತ್ರೀ ದ್ವಿಪದಾ ಸಾಂಜರ್ಯಸ್ಯ ಪ್ರಸ್ತೋಕಸ್ಯ ದಾನಸ್ತುತಿಃ ಪರೌ ತೃಚೌ ರಥದುಂದುಭಿದೇವತ್ಯಾವೈಂದ್ರೋಽನ್ತ್ಯೋಽರ್ಧರ್ಚೋ ಯುಜಾನೋ ಬೃಹತೀ ತ್ರಿಷ್ಟುವ್ವಾಹಿ ದ್ವಿಪದಾ ದಿವಸ್ಪೃಥಿವ್ಯಾ ಜಗತೀ** ಎಂದು ಹೇಳಿರುವುದು. ಆಗ್ನಿಮಾರುತಶಸ್ತ್ರಮಂತ್ರಗಳಿಗಾಗಿ ಈ ಸೂಕ್ತದ ಮೊದಲನೆಯನಾಲ್ಕು ಋಕ್ಕುಗಳನ್ನು ಪಠಿಸಬೇಕೆಂದು ಆಶ್ವಲಾಯನಶ್ರೌತಸೂತ್ರದ— **ಸ್ವಾದುಷ್ಕಿಲಾಯಮಿತಿ ಚತಸ್ರೋ ಮಧ್ಯೇ ಚಾಹ್ವಾನಾಂ** ಎಂಬ ಸೂತ್ರದಿಂದ (ಆ. ೫-೨೦) ವಿವೃತವಾಗಿರುವುದು.

## ಸೂಕ್ತ—೪೭

ಮಂಡಲ— ೬ ‖ ಅನುವಾಕ— ೪ ‖ ಸೂಕ್ತ— ೪೭. ‖

ಅಷ್ಟಕ— ೪ ‖ ಅಧ್ಯಾಯ— ೭ ‖ ವರ್ಗ— ೩೦, ೩೧, ೩೨, ೩೩, ೩೪, ೩೫ ‖

‖ ಸೂಕ್ತದಲ್ಲಿರುವ ಋಕ್ಸಂಖ್ಯೆ— ೩೧ ‖

‖ ಋಷಿಃ— ಗರ್ಗಃ ‖

‖ ದೇವತಾ— ೧-೫. ಸೋಮಃ । ೬-೧೯, ೨೧, ೩೧ ರಲ್ಲಿ ಉತ್ತರಾರ್ಧ. ಇಂದ್ರಃ । ೨೦ ನೆಯ ಋಕ್ಕಿನ ಪ್ರಥಮಪಾದಕ್ಕೆ ಲಿಂಗೋಕ್ತದೇವತೆಗಳು, ಎರಡನೆಯ ಪಾದಕ್ಕೆ ಭೂಮಿಯೂ, ಮೂರನೆಯ ಪಾದಕ್ಕೆ ಬೃಹಸ್ಪತಿಯೂ, ನಾಲ್ಕನೆಯ ಪಾದಕ್ಕೆ ಇಂದ್ರನೂ ದೇವತೆಗಳು । ೨೨-೨೫. ಪ್ರಸ್ತೋಕಸ್ಯ ಸಾಂಜರ್ಯಸ್ಯ ದಾನಸ್ತುತಿಃ । ೨೬-೨೮. ರಥಃ । ೨೯-೩೦, ೩೧ ರಲ್ಲಿ ಪೂರ್ವಾರ್ಧ. ದುಂದುಭಿಃ ‖

‖ ಛಂದಃ— ೧-೧೮, ೨೦-೨೨, ೨೬, ೨೮-೩೧. ತ್ರಿಷ್ಟುಪ್ । ೧೯. ಬೃಹತೀ । ೨೩. ಅನುಷ್ಟುಪ್ । ೨೪. ಗಾಯತ್ರೀ । ೨೫. ದ್ವಿಪದಾ । ೨೭. ಜಗತೀ ‖

‖ ಸಂಹಿತಾಪಾಠಃ ‖

ಸ್ವಾದುಷ್ಕಿಲಾಯಂ ಮಧುಮಾಁ ಉತಾಯಂ ತೀವ್ರಃ ಕಿಲಾಯಂ ರಸವಾಁ ಉತಾಯಂ ।
ಉತೋ ನ್ವ೧ಸ್ಯ ಪಪಿವಾಂಸಮಿಂದ್ರಂ ನ ಕಶ್ಚನ ಸಹತ ಆಹವೇಷು ‖ ೧ ‖

॥ ಪದಪಾಠಃ ॥

ಸ್ವಾದುಃ । ಕಿಲ । ಅಯಂ । ಮಧುಽಮಾನ್ । ಉತ । ಅಯಂ । ತೀವ್ರಃ । ಕಿಲ । ಅಯಂ । ರಸಽವಾನ್ । ಉತ । ಅಯಂ ।

ಉತೋ ಇತಿ । ನು । ಅಸ್ಯ । ಪಪಿಽವಾಂಸಂ । ಇಂದ್ರಂ । ನ । ಕಃ । ಚನ । ಸಹತೇ । ಆಽಹವೇಷು ॥೧॥

॥ ಸಾಯಣಭಾಷ್ಯಂ ॥

ಅಯಮಭಿಷುತಃ ಸೋಮಃ ಸ್ವಾದುರಾಸ್ವಾದನೀಯಃ ಕಿಲ ಭವತಿ । ಉತಾಪಿ ಚ ಮಧುಮಾನ್ಮಾಧುರ್ಯವಾಂಶ್ಚಾಯಂ ಸೋಮೋ ಭವತಿ । ತಥಾಯಂ ಸೋಮಸ್ತೀವ್ರಃ ಕಿಲ ಮದೋತ್ಪಾದನೇ ತೀಕ್ಷ್ಣಃ ಖಲು ಭವತಿ । ಉತಾಪಿ ಚಾಯಂ ಸೋಮೋ ರಸವಾನ್ ಸಾರವಾಂಶ್ಚ ಭವತಿ । ಅನೇನ ವಾಕ್ಯಚತುಷ್ಟಯೇನ ಸೋಮಸ್ಯ ಮಾಧುರ್ಯಾತಿಶಯತ್ವಂ ಚ ಪ್ರತಿಪಾದಿತಂ । ಉತೋ ಅಪಿ ಚಾಸ್ಯ ಸೋಮಸ್ಯ ॥ ದ್ವಿತೀಯಾರ್ಥೇ ಷಷ್ಠೀ ॥ ಇಮಂ ಸೋಮಂ ಪಪಿವಾಂಸಂ ಪೀತವಂತಮಿಂದ್ರಮಾಹವೇಷು ಸಂಗ್ರಾಮೇಷು ನ ಕಶ್ಚನ ನ ಕೋಽಪಿ ಸಹತೇ ಅಭಿಭವತಿ । ನು ಇತಿ ಪೂರಕಃ ॥

॥ ಪ್ರತಿಪದಾರ್ಥ ॥

**ಅಯಂ**—ಹಿಂಡಿರುವ ಈ ಸೋಮವು । **ಸ್ವಾದುಃ ಕಿಲ**—ಖಂಡಿತವಾಗಿಯೂ ರುಚಿಕರವಾಗಿರುತ್ತದೆ । **ಉತ**—ಮತ್ತು । **ಅಯಂ**—ಇದು । **ಮಧುಮಾನ್**—ಮಾಧುರ್ಯೋಪೇತವಾಗಿದೆ । **ಅಯಂ**—ಇದೇ ಸೋಮರಸವು । **ತೀವ್ರಃ ಕಿಲ** ಮದಕಾರಕವಾಗುವ ತೀಕ್ಷ್ಣತೆಯನ್ನು ಹೊಂದಿದೆ । **ಉತ**—ಅಲ್ಲದೇ । **ಅಯಂ**—ಇದೇ ಸೋಮವು । **ರಸವಾನ್**—ಸಾರವತ್ತಾಗಿದೆ । **ಉತೋ**—ಮತ್ತು । **ಅಸ್ಯ**—ಈ ಸೋಮವನ್ನು । **ಪಪಿವಾಂಸಂ**—ಪಾನಮಾಡತಕ್ಕ । **ಇಂದ್ರಂ**—ಇಂದ್ರನನ್ನು । **ಆಹವೇಷು**—ಸಂಗ್ರಾಮಗಳಲ್ಲಿ । **ಕಶ್ಚನ**—ಯಾರೂ ಸಹ । **ನ ಸಹತೇ ನು**—ಪ್ರತಿಭಟಿಸಿ ಸೋಲಿಸಲಾರರು.

॥ ಭಾವಾರ್ಥ ॥

ಹಿಂಡಿ ಸಿದ್ಧವಾಗಿರುವ ಈ ಸೋಮವು ಖಂಡಿತವಾಗಿಯೂ ರುಚಿಕರವಾಗಿರುತ್ತದೆ. ಮತ್ತು ಮಾಧುರ್ಯೋಪೇತವೂ, ರಸವತ್ತಾದುದೂ ಅಲ್ಲದೇ ಮದಕಾರಕವಾದ ತೀಕ್ಷ್ಣತೆಯನ್ನು ಹೊಂದಿರುವುದೂ ಆಗಿದೆ. ಈ ಸೋಮರಸವನ್ನು ಪಾನಮಾಡತಕ್ಕ ಇಂದ್ರನನ್ನು ಪ್ರತಿಭಟಿಸಿ ಸಂಗ್ರಾಮಗಳಲ್ಲಿ ಯಾರೂ ಸೋಲಿಸಲಾರರು.

## English Translation.

Savoury indeed is this (Soma); sweet is it, sharp, and full of flavour: no one is able to encounter Indra in battles after he has been quaffing this (beverage).

॥ ಸಂಹಿತಾಪಾಠಃ ॥

ಅಯಂ ಸ್ವಾದುರಿಹ ಮದಿಷ್ಠ ಆಸ ಯಸ್ಯೇಂದ್ರೋ ವೃತ್ರಹತ್ಯೇ ಮಮಾದ।
ಪುರೂಣಿ ಯಶ್ಚ್ಯೌತ್ನಾ ಶಂಬರಸ್ಯ ವಿ ನವತಿಂ ನವ ಚ ದೇಹ್ಯೋ೩ ಹನ್॥೨॥

॥ ಪದಪಾಠಃ ॥

ಅಯಂ । ಸ್ವಾದುಃ । ಇಹ । ಮದಿಷ್ಠಃ । ಆಸ । ಯಸ್ಯ । ಇಂದ್ರಃ । ವೃತ್ರಽಹತ್ಯೇ । ಮಮಾದ ।
ಪುರೂಣಿ । ಯಃ । ಚ್ಯೌತ್ನಾ । ಶಂಬರಸ್ಯ । ವಿ । ನವತಿಂ । ನವ । ಚ । ದೇಹ್ಯಃ । ಹನ್ ॥ ೨ ॥

॥ ಸಾಯಣಭಾಷ್ಯಂ ॥

ಇಹಾಸ್ಮಿನ್ಯಜ್ಞೇಽಯಂ ಸೋಮಃ ಸ್ವಾದುರಾಸ್ವಾದಿತಃ ಪೀತಃ ಸನ್ ಮದಿಷ್ಠೋಽತಿಶಯೇನ ಮದಯಿತಾಸ। ಬಭೂವ। ಯಸ್ಯ ಸೋಮಸ್ಯ ಪಾನೇನೇಂದ್ರೋ ವೃತ್ರಹತ್ಯೇ ವೃತ್ರಹನನಕಾಲೇ ಮಮಾದ ಮತ್ತೋ ಬಭೂವ। ಯಃ ಸೋಮಃ ಶಂಬರಸ್ಯಾಸುರಸ್ಯ ಪುರೂಣಿ ಬಹೂನಿ ಚ್ಯೌತ್ನಾ ಚ್ಯೌತ್ನಾನಿ ಬಲಾನಿ ಜಘಾನ। ತಥಾ ದೇಹ್ಯೋ ದಿಗ್ಧಾ ಉಪಚಿತಾ ಆಸುರೀಃ ಪುರೀಃ ಕದೀಯಾನ್ ದೇಹಾನ್ ವಾ ನವತಿಂ ನವ ಚ ನವೋತ್ತರನವತಿಸಂಖ್ಯಾಕಾ ಯಃ ಸೋಮೋ ವಿ ಹನ್ ವ್ಯಹನ್ ಅಯಂ ಸೋಮ ಇತಿ ಪ್ರಥಮಪಾದೇನ ಸಂಬಂಧಃ ॥

॥ ಪ್ರತಿಪದಾರ್ಥ ॥

**ಯಸ್ಯ**—ಯಾವ ಸೋಮಪಾನದಿಂದ । **ಇಂದ್ರಃ**—ಇಂದ್ರನು । **ವೃತ್ರಹತ್ಯೇ**—ವೃತ್ರಾಸುರನ ಹನನ ಕಾಲದಲ್ಲಿ । **ಮಮಾದ**—ಮದವನ್ನು ಹೊಂದಿದನೋ । **ಯಃ**—ಯಾವ ಸೋಮವು । **ಶಂಬರಸ್ಯ**—ಶಂಬರಾ ಸುರನ । **ಪುರೂಣಿ**—ಬಹುಸಂಖ್ಯಾಕವಾದ । **ಚ್ಯೌತ್ನಾ**—ಸೇನೆಗಳನ್ನು (ಕೊಲ್ಲಲು ಸಾಧನವಾಯಿತೋ) । ಮತ್ತು (**ಯಸ್ಯ**—ಯಾವ ಸೋಮಪಾನದಿಂದ)। **ನವತಿಂ ನವ ಚ**—ತೊಂಭತ್ತೊಂಭತ್ತು ಸಂಖ್ಯೆಯುಳ್ಳವೂ । **ದೇಹ್ಯಃ**—ದೃಢವೂ ಆದ ಅಸುರಪಟ್ಟಣಗಳನ್ನು । **ವಿ ಹನ್**—ಕೊಂದನೋ (ಅಂತಹ) । **ಅಯಂ**—ಈ ಸೋಮವು । **ಇಹ**—ಈ ಯಜ್ಞದಲ್ಲಿ । **ಸ್ವಾದುಃ**—ರುಚಿಕರವಾಗಿಯೂ । **ಮದಿಷ್ಠಃ**—ಮದಕಾರಕವಾಗಿಯೂ । **ಆಸ**—ಆಗಿರುತ್ತದೆ.

॥ ಭಾವಾರ್ಥ ॥

ಯಾವ ಸೋಮಪಾನದಿಂದ ಇಂದ್ರನು ವೃತ್ರಾಸುರನ ಹನನಕಾಲದಲ್ಲಿ ಮದವನ್ನು ಹೊಂದಿದನೋ, ಯಾವ ಸೋಮವು ಶಂಬರಾಸುರನ ಬಹುಸಂಖ್ಯಾಕವಾದ ಸೇನೆಗಳನ್ನು ಕೊಲ್ಲಲು ಸಾಧನವಾಯಿತೋ, ಮತ್ತು ಸೋಮದ ಪಾನದಿಂದ ತೊಂಭತ್ತೊಂಭತ್ತು ಸಂಖ್ಯೆಯುಳ್ಳವೂ, ದೃಢವಾದವೂ ಆದ ಅಸುರ ಪಟ್ಟಣಗಳನ್ನು ಕೊಂದನೋ ಅಂತಹ ಈ ಸೋಮವು ಈ ಯಜ್ಞದಲ್ಲಿ ರುಚಿಕರವಾಗಿಯೂ ಮದಕಾರಕವಾಗಿಯೂ ಇರುತ್ತದೆ.

## English Translation.

This savoury Soma, drunk on this occasion, has been most exhilarating : dy drinking of it Indra, has been elevated to the slaying of Vritra, and it has destroyed the numerous hosts of Sambara and the ninety-nine cities.

॥ ಸಂಹಿತಾಪಾಠಃ ॥

ಅಯಂ ಮೇ ಪೀತ ಉದಿಯರ್ತಿ ವಾಚಮಯಂ ಮನೀಷಾಮುಶ-
ತೀಮಜೀಗಃ ।
ಅಯಂ ಷಳುರ್ವೀರಮಿಮೀತ ಧೀರೋ ನ ಯಾಭ್ಯೋ ಭುವನಂ ಕಚ್ಚನಾರೇ ॥

॥ ಪದಪಾಠಃ ॥

ಅಯಂ । ಮೇ । ಪೀತಃ । ಉತ್ । ಇಯರ್ತಿ । ವಾಚಂ । ಅಯಂ । ಮನೀಷಾಂ । ಉಶತೀಂ ।
ಅಜೀಗರಿತಿ ।
ಅಯಂ । ಷಟ್ । ಉರ್ವೀಃ । ಅಮಿಮೀತ । ಧೀರಃ । ಯಾಭ್ಯಃ । ಭುವನಂ । ಕತ್ । ಚನ । ಆರೇ ॥ ೩ ॥

॥ ಸಾಯಣಭಾಷ್ಯಂ ॥

ಅಯಂ ಸೋಮಃ ಪೀತಃ ಸನ್ ಮೇ ಮಮ ವಾಚಮುದಿಯರ್ತಿ । ಉದ್ಗಮಯತಿ । ಅಯಮೇವ ಸೋಮ ಉಶತೀಂ ಕಾಂತಾಂ ಮನೀಷಾಂ ಬುದ್ಧಿಮುದಜೀಗಃ । ಉದ್ಗಾರಯತಿ । ಪ್ರಕಾಶಯತಿ ॥ ಗೄ ನಿಗರಣ ಇತ್ಯಸ್ಮಾಣ್ಣ್ಯಂತಾಲ್ಲುಙಿ ಚಙಿ ರೂಪಂ ॥ ಅಪಿ ಚಾಯಂ ಧೀರೋ ಧೀಮಾನ್ ಸೋಮಃ ಷಳುರ್ವೀಃ ಷಣ್ಮೋರ್ವೀರಂಹಸಸ್ಪಾಂತು ದ್ಯೌಶ್ಚ ಪೃಥಿವೀ ಚಾಹಶ್ಚ ರಾತ್ರಿಶ್ಚಾಪಶ್ಚೌಷಧಯ-ಶ್ಚೇತಿ ಪ್ರತಿಪಾದಿತಾ ದ್ಯುಪೃಥಿವ್ಯಾದ್ಯಾಃ ಷಡಮಿಮೀತ । ನಿರ್ಮಿತವಾನ್ । ಯಾಭ್ಯ ಉರ್ವೀಭ್ಯ ಆರೇ ದೂರೇ ವಿಪ್ರಕೃಷ್ಟೇ ದೇಶೇ ಕಚ್ಚನ ಕಿಂಚನ ಭುವನಂ ಭೂತಜಾತಂ ನ ಭವತಿ ಅಪಿ ತ್ವಾಸ್ವೇವ ಸರ್ವಂ ಭೂತಜಾತಂ ವರ್ತತೇ ತಾದೃಶೀರುರ್ವೀರ್ನಿರ್ಮಿತವಾನ್ ॥

॥ ಪ್ರತಿಪದಾರ್ಥ ॥

ಅಯಂ—ಈ ಸೋಮವು । ಪೀತಃ—ಪಾನಮಾಡಲ್ಪಟ್ಟ । ಮೇ—ನನ್ನ । ವಾಚಂ—ವಾಕ್ಕನ್ನು । ಉದಿಯರ್ತಿ—ಪ್ರಕಾಶಪಡಿಸುತ್ತದೆ। ಅಯಂ—ಇದೇ ಸೋಮವು। ಉಶತೀಂ—ಆಕರ್ಷಕವಾದ। ಮನೀಷಾಂ—ಬುದ್ಧಿಯನ್ನು । ಅಜೀಗಃ—ತೀಕ್ಷ್ಣವಾಗುವಂತೆ ಬೆಳೆಸುತ್ತದೆ । ಯಾಭ್ಯಃ—ಯಾವ ತತ್ತ್ವಗಳಿಗಿಂತಲೂ ।

**ಆರೇ**—ಮೀರಿರತಕ್ಕದ್ದಾಗಿ। **ಕಚ್ಚನ ಭುವನಂ**—ಬೇರಾವ ಲೋಕವೂ। **ನ**—ಇರುವುದಿಲ್ಲವೋ ಅಂತಹ। **ಷಟ್ ಉರ್ವೀಃ**—ದ್ಯುಲೋಕವೇ ಮುಂತಾದ ಆರು ಲೋಕಗಳನ್ನು। **ಧೀರಃ**—ಪ್ರಾಜ್ಞನಾದ। **ಅಯಂ**—ಈ ಸೋಮ ರಾಜನು। **ಅಮಿಮೀತ**—ನಿರ್ಮಿಸಿದನು.

॥ ಭಾವಾರ್ಥ ॥

ಪಾನಮಾಡಲ್ಪಟ್ಟ ಈ ಸೋಮರಸವು ನನ್ನ ವಾಕ್ಕನ್ನು ಪ್ರಕಾಶಪಡಿಸುತ್ತದೆ. ಇದೇ ಸೋಮವು ಆಕರ್ಷಕವಾದ ಬುದ್ಧಿಯನ್ನು ತೀಕ್ಷ್ಣವಾಗುವಂತೆ ಬೆಳೆಸುತ್ತದೆ. ಯಾವ ತತ್ತ್ವಗಳಿಗಿಂತಲೂ ಮೀರಿರತಕ್ಕದ್ದಾಗಿ ಬೇರಾವ ಲೋಕವೂ ಇರುವುದಿಲ್ಲವೋ ಅಂತಹ ದ್ಯುಲೋಕ, ಪೃಥಿವೀ, ಅಹಸ್, ರಾತ್ರಿ, ಅಪಃ, ಓಷಧಿ ಎಂಬ ಆರು ತತ್ತ್ವಗಳನ್ನೂ ಪ್ರಾಜ್ಞನಾದ ಈ ಸೋಮರಾಜನು ನಿರ್ಮಿಸಿದನು.

English Translation.

This beverage inspires my speech; this developes the desired intelligence: this sagacious (Soma) has created the six vast conditions, from which no creature is distinct.

॥ ಸಂಹಿತಾಪಾಠಃ ॥

ಅಯಂ ಸ ಯೋ ವರಿಮಾಣಂ ಪೃಥಿವ್ಯಾ ವರ್ಷ್ಮಾಣಂ ದಿವೋ ಅಕೃಣೋದಯಂ ಸಃ।
ಅಯಂ ಪೀಯೂಷಂ ತಿಸೃಷು ಪ್ರವತ್ಸು ಸೋಮೋ ದಾಧಾರೋರ್ವಂತರಿಕ್ಷಂ ॥ ೪ ॥

॥ ಪದಪಾಠಃ ॥

**ಅಯಂ। ಸಃ। ಯಃ। ವರಿಮಾಣಂ। ಪೃಥಿವ್ಯಾಃ। ವರ್ಷ್ಮಾಣಂ। ದಿವಃ। ಅಕೃಣೋತ್। ಅಯಂ। ಸಃ।**
**ಅಯಂ। ಪೀಯೂಷಂ। ತಿಸೃಷು। ಪ್ರವತ್ಽಸು। ಸೋಮಃ। ದಾಧಾರ। ಉರು। ಅಂತರಿಕ್ಷಂ ॥ ೪ ॥**

॥ ಸಾಯಣಭಾಷ್ಯಂ ॥

**ಸ ಖಲ್ವಯಂ ಸೋಮೋ ಯಃ ಪೃಥಿವ್ಯಾ ವರಿಮಾಣಮುರುತ್ವಂ ವಿಸ್ತೃತತ್ವಮಕೃಣೋತ್ ಅಕರೋತ್। ತಥಾಯಂ ಸೋಮೋ ದಿವೋ ದ್ಯುಲೋಕಸ್ಯ ವರ್ಷ್ಮಾಣಂ ಸಂಹತತ್ವಂ ದೃಢತ್ವಮಕೃಣೋತ್ ಅಕರೋತ್। ಅಯಂ ಸೋಮಃ ಸ ಹಿ ಭವತಿ। ಅಪಿ ಚಾಯಂ ಸೋಮಸ್ತಿಸೃಷ್ವೋಷಧೀಷ್ವಪ್ಸು ಗೋಷು ಚ ಪ್ರವತ್ಸು ಪ್ರಕೃಷ್ಟಾಸ್ವೇತಾಸು ಪೀಯೂಷಂ ರಸಂ ದಾಧಾರ। ಧಾರಯತಿ।**

**ತಥೋರು ವಿಸ್ತೀರ್ಣಮಂತರಿಕ್ಷಂ ಚ ಧಾರಯತಿ । ತಥಾ ಚ ಮಂತ್ರಾಂತರಂ । ತ್ವಮಿಮಾ ಓಷಧೀಃ ಸೋಮ ವಿಶ್ವಾಸ್ತ್ವಮಪೋ ಅಜನಯಸ್ತ್ವಂ ಗಾಃ । ತ್ವಮಾ ತತಂಥೋರ್ವಂತರಿಕ್ಷಂ ಖಗ್ನೇ. ೧-೯೧-೨೨ । ಇತಿ ॥**

॥ ಪ್ರತಿಪದಾರ್ಥ ॥

**ಯಃ**—ಯಾರು । **ಪೃಥಿವ್ಯಾಃ**—ಪೃಥಿವಿಯ । **ಪರಿಮಾಣಂ**—ವಿಸ್ತೃತಿಯನ್ನು । **ಅಕೃಣೋತ್**—ಉಂಟುಮಾಡಿರುವನೋ । **ಸಃ**—ಅವನೇ । **ಅಯಂ ಸೋಮಃ**—ಈ ಸೋಮರಾಜನು । **ಅಯಂ ಸಃ**—ಇದೇ ಸೋಮನು । **ದಿವಃ**—ದ್ಯುಲೋಕದ । **ವರ್ಷ್ಮಾಣಂ**—ದೃಢತ್ವವನ್ನು (ಉಂಟುಮಾಡಿದನು) । **ಅಯಂ**—ಈ ಸೋಮನು । **ಪ್ರವತ್ಸು**—ಉತ್ಕೃಷ್ಟಗಳಾದ । **ತಿಸೃಷು**—ಓಷಧಿಗಳಲ್ಲೂ, ಉದಕಗಳಲ್ಲೂ ಮತ್ತು ಗೋವುಗಳಲ್ಲೂ । **ಪೀಯೂಷಂ**—ಅಮೃತರೂಪವಾದ ರಸವನ್ನು । **ದಾಧಾರ**—ತುಂಬಿದ್ದಾನೆ । **ಉರು**—ವಿಸ್ತೃತವಾದ । **ಅಂತರಿಕ್ಷಂ**—ಅಂತರಿಕ್ಷವನ್ನು (ಧರಿಸಿದ್ದಾನೆ.)

॥ ಭಾವಾರ್ಥ ॥

ಯಾರು ಪೃಥಿವಿಯನ್ನು ಅತ್ಯಂತ ವಿಸ್ತೃತವಾದುದನ್ನಾಗಿ ಮಾಡಿದರೋ, ಯಾರು ದ್ಯುಲೋಕವು ದೃಢವಾಗಿ ನಿಲ್ಲುವಂತೆ ಮಾಡಿದರೋ ಅವನೇ ಈ ಸೋಮ ರಾಜನು. ಇದೇ ಸೋಮನು ಅತ್ಯುತ್ಕೃಷ್ಟವಾದ ಓಷಧಿಗಳಲ್ಲೂ, ಉದಕಗಳಲ್ಲೂ, ಗೋವುಗಳಲ್ಲೂ ಸಹ ಅಮೃತರೂಪವಾದ ರಸವನ್ನು ತುಂಬಿದ್ದಾನೆ. ಮತ್ತು ವಿಸ್ತೃತವಾದ ಅಂತರಿಕ್ಷವನ್ನು ಧರಿಸಿದ್ದಾನೆ.

English Translation.

This it is which has formed the earth, the compactness of the heaven : this soma has deposited the ambrosia in its three principal (receptacles), and has upheld the spacious firmament.

॥ ಸಂಹಿತಾಪಾಠಃ ॥

ಅಯಂ ವಿದಚ್ಚಿತ್ರದೃಶೀಕಮರ್ಣಃ ಶುಕ್ರಸದ್ಮನಾಮುಷಸಾಮನೀಕೇ ।
ಅಯಂ ಮಹಾನ್ಮಹತಾ ಸ್ಕಂಭನೇನೋದ್ದ್ಯಾಮಸ್ತಭ್ನಾದ್ವೃಷಭೋ ಮರುತ್ವಾನ್ ॥ ೫ ॥

॥ ಪದಪಾಠಃ ॥

ಅಯಂ । ವಿದತ್ । ಚಿತ್ರಽದೃಶೀಕಂ । ಅರ್ಣಃ । ಶುಕ್ರಽಸದ್ಮನಾಂ । ಉಷಸಾಂ । ಅನೀಕೇ ।
ಅಯಂ । ಮಹಾನ್ । ಮಹತಾ । ಸ್ಕಂಭನೇನ । ಉತ್ । ದ್ಯಾಂ । ಅಸ್ತಭ್ನಾತ್ । ವೃಷಭಃ । ಮರುತ್ವಾನ್ ॥

॥ ಸಾಯಣಭಾಷ್ಯಂ ॥

ಅಯಂ ಸೋಮಶ್ಚಿತ್ರದೃಶೀಕಂ ವಿಚಿತ್ರದರ್ಶನಂ ಯದ್ವಾಶ್ಚರ್ಯತ್ವೇನ ದರ್ಶನೀಯಮರ್ಣಃ ಸರ್ವಸ್ಯ ಪ್ರೇರಕಂ ಸೌರಂ ಜ್ಯೋತಿರವಿದತ್ । ಲಂಭಯತಿ । ಕಸ್ಮಿನ್ಕಾಲೇ । ಶುಕ್ರಸದ್ಮನಾಂ ಶುಕ್ರಂ ನಿರ್ಮಲಮಂತರಿಕ್ಷಂ ಸದ್ಮ ಸದನಂ ಯಾಸಾಂ ತಾಸಾಮುಷಸಾಮನೀಕೇ ಪ್ರಮುಖೇ । ಉಷಃಕಾಲ ಇತ್ಯರ್ಥಃ । ಅಪಿ ಚ ಮಹಾನ್ ಪ್ರವೃದ್ಧೋಽಯಂ ಸೋಮೋ ಮಹತಾ ಸ್ಥವಿಷ್ಠೇನ ಸ್ಕಂಭನೇನ ಸ್ತಂಭನಸಾಧನೇನ ಮಧ್ಯವರ್ತಿನಾಂತರಿಕ್ಷೇಣ ದ್ಯಾಂ ದ್ಯುಲೋಕಮುದಸ್ತಭ್ನಾತ್ । ಊರ್ಧ್ವಮ-ಸ್ಥಾಪಯತ್ । ಯಥಾಧೋ ನ ಪತತಿ ತಥಾಂತರಿಕ್ಷಂ ತಸ್ಯಾಧಾರತ್ವೇನ ಕೃತವಾನಿತ್ಯರ್ಥಃ । ಕೀದೃಶಃ ಸೋಮಃ । ವೃಷಭೋ ವೃಷ್ಟೇರ್ಜನಯಿತಾ । ಸೋಮಾಹುತ್ಯಾ ಹಿ ವೃಷ್ಟಿರ್ಜನ್ಯತೇ । ಮರುತ್ವಾ-ನ್ಮರುದ್ಭಿರ್ಯುಕ್ತಃ ॥

॥ ಪ್ರತಿಪದಾರ್ಥ ॥

**ಶುಕ್ರಸದ್ಮನಾಂ**—ಪ್ರಕಾಶಮಾನವಾದ ಅಂತರಿಕ್ಷವೇ ನಿವಾಸಸ್ಥಾನವಾಗಿ ಉಳ್ಳ । **ಉಷಸಾಂ**—ಉಷಸ್ಸುಗಳ । **ಅನೀಕೇ**—ಆವಿರ್ಭಾವ ಕಾಲದಲ್ಲಿ । **ಅಯಂ**—ಈ ಸೋಮ ರಾಜನು । **ಚಿತ್ರದೃಶೀಕಂ**—ಅತ್ಯಂತ ಆಕರ್ಷಕವಾಗಿ ಗೋಚರವಾಗತಕ್ಕ । **ಅರ್ಣಃ**—ಸೂರ್ಯಜ್ಯೋತಿಯನ್ನು । **ವಿದತ್**—ಪ್ರಕಾಶಪಡಿಸುತ್ತಾನೆ । **ವೃಷಭಃ**—ವೃಷ್ಟಿಕಾರಕನೂ । **ಮರುತ್ವಾನ್**—ಮರುತ್ತುಗಳೊಡಗೂಡಿದವನೂ । **ಮಹಾನ್**—ಮಹಾತ್ಮನೂ ಆದ । **ಅಯಂ**—ಈ ಸೋಮ ರಾಜನು । **ಮಹತಾ**—ಅತ್ಯಂತ ದೃಢವಾದ । **ಸ್ಕಂಭನೇನ**—ಆಧಾರಸ್ತಂಭದಂತಿರುವ ಅಂತರಿಕ್ಷದಿಂದ । **ದ್ಯಾಂ**—ದ್ಯುಲೋಕವನ್ನು । **ಉದಸ್ತಭ್ನಾತ್**—ಸ್ಥಾಪಿಸಿ ನಿಲ್ಲಿಸಿದ್ದಾನೆ.

॥ ಭಾವಾರ್ಥ ॥

ಪ್ರಕಾಶಮಾನವಾದ ಅಂತರಿಕ್ಷವೇ ನಿವಾಸಸ್ಥಾನವಾಗಿ ಉಳ್ಳ ಉಷಸ್ಸುಗಳ ಆವಿರ್ಭಾವ ಕಾಲದಲ್ಲಿ ಈ ಸೋಮರಾಜನು ಅತ್ಯಂತ ಆಕರ್ಷಕವಾಗಿ ಗೋಚರವಾಗತಕ್ಕ ಸೂರ್ಯಜ್ಯೋತಿಯನ್ನು ಪ್ರಕಾಶಪಡಿಸುತ್ತಾನೆ. ವೃಷ್ಟಿಕಾರಕನೂ, ಮರುತ್ತುಗಳೊಡಗೂಡಿದವನೂ ಮಹಾತ್ಮನೂ ಆದ ಈ ಸೋಮ ರಾಜನು ಅತ್ಯಂತ ದೃಢವಾದ ಆಧಾರ ಸ್ತಂಭದಂತಿರುವ ಅಂತರಿಕ್ಷದ ಸಹಾಯದಿಂದ ದ್ಯುಲೋಕವನ್ನು ಸ್ಥಾಪಿಸಿ ನಿಲ್ಲಿಸಿದ್ದಾನೆ.

English Translation.

This makes known the wonderfully beautiful and inspiring (solar radiance) at the appearance of the dawns, whose dwelling is the firmament : this mighty (Soma) has sustained the heaven with a powerful support, the sender of rain, the leader of the winds.

॥ ಸಂಹಿತಾಪಾಠಃ ॥

ಧೃಷತ್ಪಿಬ ಕಲಶೇ ಸೋಮಮಿಂದ್ರ ವೃತ್ರಹಾ ಶೂರ ಸಮರೇ ವಸೂನಾಂ ।
ಮಾಧ್ಯಂದಿನೇ ಸವನ ಆ ವೃಷಸ್ವ ರಯಿಸ್ಥಾನೋ ರಯಿಮಸ್ಮಾಸು ಧೇಹಿ ॥೬॥

॥ ಪದಪಾಠಃ ॥

ಧೃಷತ್ । ಪಿಬ । ಕಲಶೇ । ಸೋಮಂ । ಇಂದ್ರ । ವೃತ್ರಽಹಾ । ಶೂರ । ಸಂಽಅರೇ । ವಸೂನಾಂ ।

ಮಾಧ್ಯಂದಿನೇ । ಸವನೇ । ಆ । ವೃಷಸ್ವ । ರಯಿಽಸ್ಥಾನಃ । ರಯಿಂ । ಅಸ್ಮಾಸು । ಧೇಹಿ ॥ ೬ ॥

॥ ಸಾಯಣಭಾಷ್ಯಂ ॥

ಹೇ ಶೂರ ಶೌರ್ಯವನ್ನಿಂದ್ರ ವೃತ್ರಹಾ ವೃತ್ರಾಣಾಮಾವರಕಾಣಾಂ ಶತ್ರೂಣಾಂ ಹಂತಾ ತ್ವಂ ವಸೂನಾಂ ಧನಾನಾಂ ಸಮರೇ ಸಂಗ್ರಾಮೇ ನಿಮಿತ್ತಭೂತೇ ಸತಿ ಕಲಶೇ ದ್ರೋಣಕಲಶೇಽವಸ್ಥಿತಂ ಸೋಮಂ ಧೃಷತ್ ಧೃಷ್ಟಂ ಯಥಾ ಭವತಿ ತಥಾ ಪಿಬ । ಅಪಿ ಚ ಮಾಧ್ಯಂದಿನೇ ಸವನ ಆ ವೃಷಸ್ವ । ಆಸಿಂಚಸ್ವ । ಜಠರಂ ಸೋಮೇನ ಪೂರಯ । ಸರ್ವೈಂದ್ರಂ ಹಿ ಮಾಧ್ಯಂದಿನಂ ಸವನಂ । ಕಿಂ ಚ ರಯಿಸ್ಥಾನೋ ರಯೀಣಾಂ ಧನಾನಾಂ ಸ್ಥಾನಭೂತಸ್ತ್ವಂ ರಯಿಂ ಧನಮಸ್ಮಾಸು ಧೇಹಿ । ಧಾರಯ ॥

॥ ಪ್ರತಿಪದಾರ್ಥ ॥

**ಶೂರ**—ಪರಾಕ್ರಮಿಯಾದ । **ಇಂದ್ರ**—ಎಲೈ ಇಂದ್ರನೇ । **ವೃತ್ರಹಾ**—ವೃತ್ರಹಂತಕನಾದ ನೀನು । **ವಸೂನಾಂ**—ಧನಗಳಿಗಾಗಿ ನಡೆಯುವ । **ಸಮರೇ**—ಸಂಗ್ರಾಮದಲ್ಲಿ ಭಾಗವಹಿಸಲು । **ಕಲಶೇ**—ದ್ರೋಣ ಕಲಶದಲ್ಲಿರುವ । **ಸೋಮಂ**—ಸೋಮವನ್ನು । **ಧೃಷತ್**—ಶಕ್ತಿಯನ್ನೂ ಧೈರ್ಯವನ್ನೂ ತುಂಬಿಕೊಳ್ಳುವಂತೆ । **ಪಿಬ**—ಪಾನಮಾಡು । **ಮಾಧ್ಯಂದಿನೇ ಸವನೇ**—ಮಾಧ್ಯಂದಿನಸವನಕಾಲದಲ್ಲೂ । **ಆ ವೃಷಸ್ವ**—ಜಠರವನ್ನು ಸೋಮದಿಂದ ಪೂರ್ಣವಾಗಿ ತುಂಬು । **ರಯಿಸ್ಥಾನಃ**—ಧನಗಳಿಗೆ ಉತ್ಪತ್ತಿಸ್ಥಾನನಾದ ನೀನು । **ಅಸ್ಮಾಸು**—ನಮ್ಮಲ್ಲಿ । **ರಯಿಂ**—ಧನವನ್ನು । **ಧೇಹಿ**—ತುಂಬಿಡು.

॥ ಭಾವಾರ್ಥ ॥

ಪರಾಕ್ರಮಿಯಾದ ಎಲೈ ಇಂದ್ರನೇ, ವೃತ್ರಹಂತಕನಾದ ನೀನು ಧನಗಳಿಗಾಗಿ ನಡೆಯತಕ್ಕ ಯುದ್ಧದಲ್ಲಿ ಭಾಗವಹಿಸಲು ದ್ರೋಣಕಲಶದಲ್ಲಿರುವ ಸೋಮವನ್ನು ನಿನಗೆ ಶಕ್ತಿಯನ್ನೂ ಧೈರ್ಯವನ್ನೂ ತುಂಬಿಕೊಳ್ಳುವಂತೆ ಪಾನಮಾಡು. ಮಾಧ್ಯಂದಿನಸವನಕಾಲದಲ್ಲೂ ಸಹ ಜಠರವನ್ನು ಸೋಮದಿಂದ ಪೂರ್ಣವಾಗಿ ತುಂಬು. ಧನಗಳಿಗೆ ಉತ್ಪತ್ತಿಸ್ಥಾನನಾದ ನೀನು ನಮ್ಮಲ್ಲಿ ಪೂರ್ಣವಾಗಿ ಧನವನ್ನು ತುಂಬಿಡು.

## English Translation.

Hero, Indra, you are the slayer of foes in contests for (the acquirement of) treasures, drink boldly from the pitcher : drink copiously at the noon-day rite : receptacle of riches, bestow riches upon us.

॥ ಸಂಹಿತಾಪಾಠಃ ॥

ಇಂದ್ರ ಪ್ರ ಣಃ ಪುರುಏತೇವ ಪಶ್ಯ ಪ್ರ ನೋ ನಯ ಪ್ರತರಂ ವಸ್ಯೋ ಅಚ್ಛ।
ಭವಾ ಸುಪಾರೋ ಅತಿಪಾರಯೋ ನೋ ಭವಾ ಸುನೀತಿರುತ ವಾಮನೀತಿಃ॥

॥ ಪದಪಾಠಃ ॥

ಇಂದ್ರ । ಪ್ರ । ನಃ । ಪುರಏತಾಽಇವ । ಪಶ್ಯ । ಪ್ರ । ನಃ । ನಯ । ಪ್ರತರಂ । ವಸ್ಯಃ । ಅಚ್ಛ ।
ಭವ । ಸುಽಪಾರಃ । ಅತಿಽಪಾರಯಃ । ನಃ । ಭವ । ಸುಽನೀತಿಃ । ಉತ । ವಾಮಽನೀತಿಃ ॥ ೭ ॥

॥ ಸಾಯಣಭಾಷ್ಯಂ ॥

ಹೇ ಇಂದ್ರ ತ್ವಂ ಪುರಏತೇವ ಪುರತೋ ಗಂತೇವ ನೋಽಸ್ಮಾನ್ ಪ್ರ ಪಶ್ಯ । ಪ್ರಕರ್ಷೇಣೇಕ್ಷಸ್ವ । ಯಥಾ ಮಾರ್ಗರಕ್ಷಕಃ ಸ್ವಯಂ ಪುರತೋ ಗಚ್ಛನ್ನನುಗಚ್ಛತೋ ರಕ್ಷಣೀಯಾನ್ ಪಥಿಕಾನ್ಪಶ್ಯತಿ ತಥಾ ಪಶ್ಯೇತ್ಯರ್ಥಃ । ತಥಾ ವಸ್ಯೋ ವಸೀಯಃ ಶ್ರೇಷ್ಠಂ ಧನಮಚ್ಛಾಭಿಮುಖ್ಯೇನ ಪ್ರತರಂ ಪ್ರಕೃಷ್ಟತರಮತಿಶಯೇನ ಪ್ರ ಣಯ । ಅಸ್ಮಾನ್ಪ್ರಾಪಯ । ತಥಾ ಸುಪಾರಃ ಸುಷ್ಠು ಪಾರಯಿತಾ ದುಃಖೇಭ್ಯಸ್ತಾರಯಿತಾ ಭವ । ತಥಾ ನೋಽಸ್ಮಾನ್ ಸ್ತೋತೄನತಿಪಾರಯಃ । ಶತ್ರೂನತಿಕ್ರಾಮಯ । ಸುನೀತಿ ಶೋಭನಯಾನಶ್ಚಾಸ್ಮಾಕಂ ಭವ । ಉತಾಪಿ ಚ ವಾಮನೀತಿರ್ವಾಮಾನಾಂ ವನನೀಯಾನಾಂ ಧನಾನಾಂ ನೇತಾ ಭವ । ಯದ್ವಾ । ಅಸ್ಮದರ್ಥಂ ಶ್ರೇಷ್ಠಪ್ರಾಪಣೋ ಭವ ॥

॥ ಪ್ರತಿಪದಾರ್ಥ ॥

**ಇಂದ್ರ**—ಎಲೈ ಇಂದ್ರನೇ । **ಪುರ ಏತೇವ**—ನಮ್ಮ ಮುಂಭಾಗದಲ್ಲಿಯೇ ಹೋಗುವವನಂತೆ । **ನಃ**—ನಮ್ಮನ್ನು । **ಪ್ರ ಪಶ್ಯ**—ಪೂರ್ಣವಾಗಿ ನೋಡು । **ವಸ್ಯಃ**—ಶ್ರೇಷ್ಠವಾದ ಧನವನ್ನು । **ಅಚ್ಛ**—ನಮಗಭಿಮುಖವಾಗಿ । **ಪ್ರತರಂ**—ಅತಿಶಯವಾಗಿ । **ಪ್ರ ಣಯ**—ತಂದೊದಗಿಸು । **ಸುಪಾರಃ**—ದುಃಖದಿಂದ ಕೊನೆಗಾಣಿಸುವವನಾಗಿ । **ಭವ**—ಆಗು । **ನಃ**—ನಮ್ಮನ್ನು । **ಅತಿಪಾರಯಃ**—ಶತ್ರುಗಳ ಹಿಡಿತದಿಂದ ತಪ್ಪಿಸು । **ಸುನೀತಿಃ**—ನಮಗೆ ಶ್ರೇಷ್ಠವಾದ ಮಾರ್ಗದರ್ಶಕನಾಗಿ । **ಭವ**—ಆಗಿರು । **ಉತ**—ಮತ್ತು । **ವಾಮನೀತಿಃ**—ಆಕರ್ಷಕವಾದ ಧನವನ್ನು ಒದಗಿಸುವವನಾಗಿಯೂ ಆಗಿರು.

॥ ಭಾವಾರ್ಥ ॥

ಎಲೈ ಇಂದ್ರನೇ, ನೀನು ನಮ್ಮ ಮುಂಭಾಗದಲ್ಲಿಯೇ ಇರುವವನಾಗಿ ನಮ್ಮನ್ನು ಪೂರ್ಣವಾಗಿ ವೀಕ್ಷಿಸು. ನಮಗೆ ಶ್ರೇಷ್ಠವಾದ ಧನವನ್ನು ಒದಗಿಸು. ನಮ್ಮನ್ನು ದುಃಖದಿಂದ ಕೊನೆಗಾಣಿಸು. ಶತ್ರುಗಳ ಹಿಡಿತದಿಂದ ತಪ್ಪಿಸು. ನಮಗೆ ಶ್ರೇಷ್ಠವಾದ ಮಾರ್ಗದರ್ಶಕನಾಗಿಯೂ ಆಕರ್ಷಕವಾದ ಧನವನ್ನು ಒದಗಿಸುವವನಾಗಿಯೂ ಆಗಿರು.

English Translation.

Like one who goes before us, Indra, (on the road), look out, bring before us infinite wealth ; be our conductor beyond the bounds (of want), convey us safely over (peril) ; be our careful guide, our guide to desirable (affluence).

। ಸಂಹಿತಾಪಾಠಃ ।

ಉರುಂ ನೋ ಲೋಕಮನು ನೇಷಿ ವಿದ್ವಾನ್ತ್ಸ್ವರ್ವಜ್ಜ್ಯೋತಿರಭಯಂ ಸ್ವಸ್ತಿ ।

ಋಷ್ವಾ ತ ಇಂದ್ರ ಸ್ಥವಿರಸ್ಯ ಬಾಹೂ ಉಪ ಸ್ಥೇಯಾಮ ಶರಣಾ ಬೃಹಂತಾ ॥ ೮ ॥

॥ ಪದಪಾಠಃ ॥

ಉರುಂ । ನಃ । ಲೋಕಂ । ಅನು । ನೇಷಿ । ವಿದ್ವಾನ್ । ಸ್ವಃಽವತ್ । ಜ್ಯೋತಿಃ । ಅಭಯಂ । ಸ್ವಸ್ತಿ ।
ಋಷ್ವಾ । ತೇ । ಇಂದ್ರ । ಸ್ಥವಿರಸ್ಯ । ಬಾಹೂ ಇತಿ । ಉಪ । ಸ್ಥೇಯಾಮ । ಶರಣಾ । ಬೃಹಂತಾ ॥ ೮ ॥

॥ ಸಾಯಣಭಾಷ್ಯಂ ॥

ಐಂದ್ರೇ ಪಶಾವುರುಂ ನ ಇತ್ಯೇಷಾ ವಪಾಯಾ ಯಾಜ್ಯಾ । ಸೂತ್ರಿತಂ ಚ । ಉರುಂ ನೋ ಲೋಕಮನು ನೇಷಿ ವಿದ್ವಾನ್ ಪ್ರ ಸಸಾಹಿಷೇ ಪುರುಹೂತ ಶತ್ರೂನ್ । ಆ. ೩-೭ । ಇತಿ ॥ ಹೋತ್ರಕೈಃ ಸದಃಪ್ರಸರ್ಪಣಸಮಯೇಽಪ್ಯೇಷಾ ಜಪ್ಯಾ । ಸೂತ್ರಿತಂ ಚ । ಉರುಂ ನೋ ಲೋಕಮನು ನೇಷಿ ವಿದ್ವಾನಿತಿ ಜಪಂತಃ । ಆ. ೫-೩ । ಇತಿ ॥ ಚಾತುರ್ವಿಂಶಿಕೇಽಹನ್ಯಹರ್ಗಣೇಷು ಚ ದ್ವಿತೀಯಾದಿಷ್ವಹಃಸು ಮಾಧ್ಯಂದಿನಸವನೇಽಚ್ಛಾವಾಕಸ್ಯೈಷಾ ಚಾರಂಭಣೀಯಾ ಸೂತ್ರಿತಂ ಚ । ಉರುಂ ನೋ ಲೋಕಮನು ನೇಷಿ ವಿದ್ವಾನಿತಿ ಕದ್ವದ್ಭ್ಯ ಆರಂಭಣೀಯಾಃ । ಆ. ೭-೪. ಇತಿ ॥

ಹೇ ಇಂದ್ರ ವಿದ್ವಾನ್ ಜಾನಂಸ್ತ್ವಮುರುಂ ವಿಸ್ತೀರ್ಣಂ ಲೋಕಂ ಸ್ಥಾನಂ ಸ್ವರ್ಗಾಖ್ಯಂ ನೋಽಸ್ಮಾನನು ನೇಷಿ । ಅನುಗಮಯ । ತಥಾ ಸ್ವರ್ವತ್ಸುಖವದಭಯಂ ಭಯರಹಿತಂ ಜ್ಯೋತಿಶ್ಚ ಸ್ವಸ್ತಿ ಕ್ಷೇಮೇಣಾನು ನೇಷಿ । ಅಸ್ಮಾನನುಗಮಯ । ಹೇ ಇಂದ್ರ ಸ್ಥವಿರಸ್ಯ ಸ್ಥೂಲಸ್ಯ ವೃದ್ಧಸ್ಯ ತೇ ತವ ಸಂಬಂಧಿನಾವೃಷ್ವಾ ದರ್ಶನೀಯೌ ಬೃಹಂತಾ ಮಹಾಂತೌ ಬಾಹೂ ತ್ವದೀಯೌ ಹಸ್ತೌ ಶರಣಾ ಶರಣೌ ರಕ್ಷಕೌ ರಕ್ಷಕತಯೋಪ ಸ್ಥೇಯಾಮ । ಉಪತಿಷ್ಠೇಮ । ಸೇವೇಮಹಿ ॥

॥ ಪ್ರತಿಪದಾರ್ಥ ॥

(ಎಲೈ ಇಂದ್ರನೇ) **ವಿದ್ವಾನ್**—ಸಕಲವನ್ನೂ ತಿಳಿದಿರುವ ನೀನು । **ಸ್ವಸ್ತಿ**—ನಮಗೆ ಕ್ಷೇಮವುಂಟಾಗುವಂತೆ । **ಸ್ವರ್ವತ್**—ಸುಖಯುಕ್ತವಾದುದೂ । **ಅಭಯಂ**—ಭಯರಹಿತವಾದುದೂ । **ಜ್ಯೋತಿಃ**—ಕಾಂತಿಯುತವಾದುದೂ । **ಉರುಂ**—ವಿಸ್ತೃತವಾದುದೂ ಆದ । **ಲೋಕಂ**—ಸ್ಥಾನಕ್ಕೆ । **ನಃ**—ನಮ್ಮನ್ನು । **ಅನು ನೇಷಿ**—ಕರೆದುಕೊಂಡು ಹೋಗಿ ಸೇರಿಸು । **ಇಂದ್ರ**—ಎಲೈ ಇಂದ್ರನೇ । **ಸ್ಥವಿರಸ್ಯ**—ದೃಢಕಾಯನಾದ । **ತೇ**—ನಿನ್ನ । **ಋಷ್ವಾ**—ಆಕರ್ಷಕವಾದುದೂ । **ಬೃಹಂತಾ**—ದೀರ್ಘವಾದುದೂ ಆದ । **ಬಾಹೂ**—ಬಾಹುಗಳನ್ನು । **ಶರಣಾ**—ನಮಗೆ ರಕ್ಷಕಗಳಾಗಿರುವಂತೆ । **ಉಪ ಸ್ಥೇಯಾಮ**—ಆಶ್ರಯಿಸಿ ಸುಖವಾಗಿರುವಂತಾಗಲಿ.

॥ ಭಾವಾರ್ಥ ॥

ಎಲೈ ಇಂದ್ರನೇ, ಸರ್ವಜ್ಞನಾದ ನೀನು ನಮಗೆ ಕ್ಷೇಮವುಂಟಾಗುವಂತೆ ಸುಖಯುಕ್ತವಾದುದೂ, ಭಯರಹಿತವಾದುದೂ, ಶಾಂತಿಯುತವಾದುದೂ, ವಿಸ್ತೃತವಾದುದೂ ಆದ ಸ್ಥಾನಕ್ಕೆ ನಮ್ಮನ್ನು ಕರೆದುಕೊಂಡು ಹೋಗಿ ಸೇರಿಸು. ಎಲೈ ಇಂದ್ರನೇ, ದೃಢಕಾಯನಾದ ನಿನ್ನ ಆಕರ್ಷಕವಾದುದೂ, ದೀರ್ಘವಾದುದೂ ಆದ ಬಾಹುಗಳನ್ನು ನಮಗೆ ರಕ್ಷಕಗಳಾಗಿರುವಂತೆ ಆಶ್ರಯಿಸಿ ನಾವು ಸುಖವಾಗಿರುವಂತಾಗಲಿ.

English Translation

Do you, Indra, who are wise, conduct us to the spacious world (of heaven), to a blessed state of happiness, light, and safety : may we recline in the graceful, protecting, and mighty arms of you the ancient one.

॥ ವಿಶೇಷವಿಷಯಗಳು ॥

ದೇವತೆಗಳಿಗೆ ಮನುಷ್ಯರಿಗಿರುವಂತೆ ಹಸ್ತಪಾದಾದ್ಯವಯವಗಳುಂಟೇ? ಎಂಬ ವಿಚಾರದಲ್ಲಿ ಮತಭೇದವಿದ್ದರೂ ಋಗ್ವೇದದಲ್ಲಿ ಋಷಿಗಳು ಇಂದ್ರಾದಿ ದೇವತೆಗಳನ್ನು ಹಸ್ತಪಾದಾದಿ ಅವಯವವುಳ್ಳವರನ್ನಾಗಿ ಭಾವಿಸಿ ಸ್ತುತಿಸಿರುವುದು ಕಂಡುಬರುವುದು. ಈ ವಿಷಯದಲ್ಲಿ ಯಾಸ್ಕರು—

> **ಅಥಾಕಾರಚಿಂತನಂ ದೇವತಾನಾಂ । ಪುರುಷವಿಧಾಃ ಸ್ಯುರಿತ್ಯೇಕಂ ಚೇತನಾವದ್ವದ್ಧಿ ಸ್ತುತಯೋ ಭವಂತಿ । ತಥಾಭಿಧಾನಾನಿ । ಅಥಾಪಿ ಪೌರುಷವಿಧಿಕೈರಂಗೈಃ ಸಂಸ್ತೂಯಂತೇ । ಋಷ್ವಾತ ಇಂದ್ರ ಸ್ಥವಿರಸ್ಯ ಬಾಹೂ । ಯತ್ಸಂಗೃಭ್ಣಾ ಮಘವನ್ ಕಾಶಿರಿತ್ತೇ ॥**
>
> (ನಿ. ೭-೬)

ಎಂದು ನಿರ್ವಚನವನ್ನು ಹೇಳಿದ್ದಾರೆ. ಈಗ ದೇವತೆಗಳ ಆಕಾರ, ರೂಪ ಮೊದಲಾದುವುಗಳನ್ನು ವಿಮರ್ಶೆ ಮಾಡೋಣ. ದೇವತೆಗಳಿಗೆ ಪುರುಷರಿಗಿರುವಂತೆ ಹಸ್ತಾದ್ಯವಯವಾದಿಗಳಿರುವವು ಎಂದು ಕೆಲವರ ಮತ, ಮನುಷ್ಯರಿಗೆ ಚೈತನ್ಯವಿರುವಂತೆ ದೇವತೆಗಳಿಗೂ ಚೈತನ್ಯ ಪ್ರಜ್ಞೆ ಮೊದಲಾದವು ಇರುವವು ಎಂದು ಭಾವಿಸಿ ಹಸ್ತಾದ್ಯವಯವಗಳೂ ಆಕಾರವೂ ಮನುಷ್ಯರಿಗಿರುವಂತೆ ದೇವತೆಗಳಿಗೂ ಇರುವುದರಿಂದ ಅವರನ್ನು ಚೈತನ್ಯಯುಕ್ತರೆಂದು ಭಾವಿಸಿ

ಅದರಂತೆ ಸ್ತುತಿಸಲಾಗಿರುವುದು. ಈ ಕಾರಣಕ್ಕಾಗಿಯೇ ಇಂದ್ರ ಮೊದಲಾದ ದೇವತೆಗಳನ್ನು ವರ್ಣಿಸುವಾಗ ಅವರ ಹಸ್ತಾದಿಗಳನ್ನು ವರ್ಣಿಸುವುದು ರೂಢಿಯು. ಪ್ರಕೃತ ಋಕ್ಕಿನ **ಋಷ್ವಾತೆ ಇಂದ್ರ ಸ್ಥವಿರಸ್ಯ ಬಾಹೂ** ಎಂಬ ಮೂರನೆಯ ಪಾದದಲ್ಲಿ ಇಂದ್ರನ ಬಾಹುಗಳ ವರ್ಣನೆ ಇದೆ. ಅದರಂತೆ,

**ಉತಾಭಯೇ ಪುರುಹೂತ ಶ್ರವೋಭಿರೇಕೋ ದೃಳ್ಹಮವದೋ ವೃತ್ರಹಾ ಸನ್ ।**
**ಇಮೇ ಚಿದಿಂದ್ರ ರೋದಸೀ ಅಪಾರೇ ಯತ್ಸಂಗೃಭ್ಣಾ ಮಘವನ್ ಕಾಶಿರಿತ್ತೇ ॥**

(ಋ. ಸಂ. ೩-೩೦-೫)

ಎಂಬ ಋಕ್ಕಿನಲ್ಲಿಯೂ ಇಂದ್ರನ ಅವಯವ ವರ್ಣನೆ ಇರುವುದನ್ನು ನಿರುಕ್ತಕಾರರು ಉದಾಹರಿಸಿದ್ದಾರೆ.

ದೇವತೆಗಳಿಗೆ ಪುರುಷಾದಿರೂಪಗಳಲ್ಲದೆ ಪುರುಷರಿಗಿರುವಂತೆ ನಾನಾ ವಿಧ ದ್ರವ್ಯ ಸಂಯೋಗವೂ ಉಂಟೆಂದು ಅನೇಕ ವರ್ಣನೆಗಳಿವೆ—

**ಅಥಾಪಿ ಪೌರುಷವಿಧಿಕೈರ್ದ್ರವ್ಯಸಂಯೋಗೈಃ ।** (ನಿ. ೭-೬)

ಈ ವಿಷಯದಲ್ಲಿ—

**ಆ ದ್ವಾಭ್ಯಾಂ ಹರಿಭ್ಯಾಮಿಂದ್ರ ಯಾಹ್ಯಾ ಚತುರ್ಭಿರಾ ಷಡ್ಭಿರ್ಹೂಯಮಾನಃ ।**
**ಆಷ್ಟಾಭಿರ್ದಶಭಿಃ ಸೋಮಪೇಯಮಯಂ ಸುತಃ ಸುಮುಖ ಮಾ ಮೃಧಸ್ಕಃ ।**

(ಋ. ಸಂ. ೨-೧೮-೪)

ಎಂಬ ಋಕ್ಕಿನ ಉದಾಹರಣೆಯನ್ನು ಕೊಟ್ಟು ಪುರುಷರಿಗೆ ಗೋವು, ಅಶ್ವಗಳು ಮೊದಲಾದವುಗಳಿರುವಂತೆ ಇಂದ್ರಾದಿ ದೇವತೆಗಳಿಗೂ ಅವುಗಳಿರುವವು ಎಂಬುದನ್ನು ಈ ಋಕ್ಕಿನಲ್ಲಿ ಸ್ಪಷ್ಟವಾಗಿ ವಿವರಿಸಿದೆ. ಎಲೈ ಇಂದ್ರನೇ, ನೀನು ನಿನ್ನ ಹರೀ ಎಂಬ ಹೆಸರಿನ ಎರಡು ಕುದುರೆಗಳಿಂದ ಕೂಡಿ (ರಥದಲ್ಲಿ ಕುಳಿತು) ನಮ್ಮ ಯಜ್ಞಕ್ಕೆ ಬಾ. ಅಥವಾ ನಾಲ್ಕು, ಆರು, ಎಂಟು, ಹತ್ತು ಕುದುರೆಗಳಿಂದಲಾದರೂ ಕೂಡಿ ಸೋಮಪಾನಾರ್ಥವಾಗಿ ಇಲ್ಲಿಗೆ ಬಾ ಎಂದು ಹೇಳಿರುವುದರಿಂದ ಲೋಕವ್ಯವಹಾರದಲ್ಲಿ ಪುರುಷರಿಗೆ ಸ್ವತ್ತುಗಳಿರುವಂತೆಯೇ ದೇವತೆಗಳಿಗೂ ಅಶ್ವಾದಿಗಳಿರುವವು ಎಂಬಭಿಪ್ರಾಯವು ವ್ಯಕ್ತವಾಗಿರುವುದು. ಮತ್ತು

**ಅಪಾಃ ಸೋಮಮಸ್ತಮಿಂದ್ರ ಪ್ರ ಯಾಹಿ ಕಲ್ಯಾಣೀರ್ಜಾಯಾ ಸುರಣಂ ಗೃಹೇ ತೇ ।**
**ಯತ್ರಾ ರಥಸ್ಯ ಬೃಹತೋ ನಿಧಾನಂ ವಿಮೋಚನಂ ವಾಜಿನೋ ದಕ್ಷಿಣಾವತ್ ॥**

(ಋ. ಸಂ. ೩-೫೩-೬)

ಎಂಬ ಈ ಋಕ್ಕಿನಲ್ಲಿ ಪುರುಷರಿಗಿರುವಂತೆ ಇಂದ್ರನಿಗೂ ಮನೆಯಲ್ಲಿ ಪತ್ನಿಯೂ, ರಥ, ಕುದುರೆಗಳೂ ಇರುವ ವಿಷಯದ ಪ್ರಸ್ತಾಪವಿದೆ.

ಇನ್ನೂ ಪುರುಷರ ಕರ್ಮಗಳಂತೆ ದೇವತೆಗಳ ಕರ್ಮಗಳೂ ಇರುವವು ಎಂಬ ವಿಷಯದಲ್ಲಿ ಕೆಲವು ಉದಾಹರಣೆಗಳನ್ನು ಕೊಟ್ಟು ಸಮರ್ಥಿಸಿದ್ದಾರೆ—

**ಅಥಾಪಿ ಪೌರುಷವಿಧಿಕೈಃ ಕರ್ಮಭಿಃ ।** (ನಿ. ೭-೬)

**ಇದಂ ಹವಿರ್ಮಘವನ್ ತುಭ್ಯಂ ರಾತಂ ಪ್ರತಿ ಸಮ್ರಾಳಹೃಣಾನೋ ಗೃಭಾಯ ।**
**ತುಭ್ಯಂ ಸುತೋ ಮಘವನ್ ತುಭ್ಯಂ ಪಕ್ವೋಽದ್ಧೀಂದ್ರ ಪಿಬ ಚ ಪ್ರಸ್ಥಿತಸ್ಯ ॥**
(ಋ. ಸಂ. ೧೦-೧೧೬-೭)

**ಆಶ್ರುತ್ಕರ್ಣ ಶ್ರುಧೀ ಹವಂ ನೂ ಚಿದ್ದಧಿಷ್ವ ಮೇ ಗಿರಃ ।**
**ಇಂದ್ರ ಸ್ತೋಮಮಿಮಂ ಮಮ ಕೃಷ್ವಾ ಯುಜಶ್ಚಿದಂತರಂ ॥**

ಎಂಬ ಋಕ್ಕುಗಳನ್ನು ಉದಾಹರಣೆಗಾಗಿ ಕೊಟ್ಟಿದಾರೆ. ಮೊದಲನೆಯ ಋಕ್ಕಿನಲ್ಲಿ ಇಂದ್ರನಿಗಾಗಿ ಹವಿಸ್ಸನ್ನೂ ಸೋಮವನ್ನೂ ಅರ್ಪಿಸಿರುವುದೂ ಅದನ್ನು ಇಂದ್ರನು ಪಾನಮಾಡಬೇಕೆಂದು ಪ್ರಾರ್ಥಿಸಿರುವುದೂ ಉಕ್ತವಾಗಿದೆ. ಎರಡನೇ ಋಕ್ಕಿನಲ್ಲಿ ನಮ್ಮ ಆಹ್ವಾನವನ್ನು ಸ್ತೋತ್ರವನ್ನೂ ಕೇಳಬೇಕೆಂಬ ಪ್ರಾರ್ಥನೆ ಇದೆ. ಎಂದರೆ ಮನುಷ್ಯರ ಕರ್ಮದಂತೆ, ಮನುಷ್ಯರು ಮಾಡುವಂತೆ ಹವಿಸ್ಸನ್ನು ಭಕ್ಷಿಸುವುದು, ಸೋಮರಸವನ್ನು ಪಾನಮಾಡುವುದು ಆಹ್ವಾನ ವನ್ನು ಮತ್ತು ಸ್ತೋತ್ರವನ್ನು ಆಲಿಸಿ ಕೇಳುವುದು ಮೊದಲಾದ ಮನುಷ್ಯೋಚಿತವಾದ ಕರ್ಮಗಳನ್ನು ಇಂದ್ರಾದಿ ದೇವತೆಗಳಲ್ಲಿಯೂ ಆರೋಪಮಾಡಿ ಸ್ತುತಿಸಲಾಗಿದೆ. ಈ ರೀತಿ ಪುರುಷರಂತೆ ದೇವತೆಗಳಿಗೆ ಆಕಾರ, ಹಸ್ತಾದ್ಯವ ಯವಗಳು, ಭಕ್ಷಣಾದಿಕರ್ಮಗಳು ದೇವತೆಗಳಿಗೂ ಇರುವವು ಎಂಬುದು ಕೆಲವರ ವಾದವು. ಮತ್ತೆ ಕೆಲವರು ದೇವತೆ ಗಳಿಗೆ ಮನುಷ್ಯರಿಗಿರುವಂತೆ ಆಕಾರಾದಿಗಳಿರುವುದಿಲ್ಲವೆಂದೂ, ಕರ್ಮಗಳೂ ಮನುಷ್ಯರು ಆಚರಿಸುವ ಕರ್ಮಗಳಿಗಿಂತ ಭಿನ್ನವಾಗಿರುವುವೆಂತಲೂ ದೇವತೆಗಳ ಮಹತ್ತ್ವವನ್ನು ವರ್ಣಿಸುವುದಕ್ಕಾಗಿ ಉತ್ಪ್ರೇಕ್ಷೆಯಿಂದ ಆ ರೀತಿ ವರ್ಣಿಸ ಲಾಗಿರುವುದೆಂದೂ ಅಭಿಪ್ರಾಯಪಡುವರು—

**ಅಪುರುಷವಿಧಾಃ ಸ್ಯುರಿತ್ಯಪರಂ ॥**　　(ನಿ. ೭-೭)

ಪುರುಷರಿಗಿರುವಂತೆ ದೇವತೆಗಳಿಗೆ ರೂಪ, ಆಕಾರ, ಕರ್ಮ ಮೊದಲಾದುವುಗಳಿಲ್ಲವೆಂದೂ ಅವುಗಳ ವೈಶಿಷ್ಟ್ಯವೇ ಬೇರೆವಿಧವೆಂದೂ ಮತ್ತೆ ಕೆಲವರು ಅಭಿಪ್ರಾಯಪಡುವರು. ಹೇಗೆಂದರೆ—

**ಅಪಿ ತು ಯದ್ದೃಶ್ಯತೇಽಪುರುಷವಿಧಂ ತದ್ಯಥಾಗ್ನಿರ್ವಾಯುರಾದಿತ್ಯಃ ಪೃಥಿವೀ ಚಂದ್ರಮಾ ಇತಿ ॥**　　(ನಿ. ೭-೭)

ಕೆಲವು ದೇವತೆಗಳ ರೂಪಗಳು, ಕರ್ಮಗಳು ಪುರುಷರಿಗಿರುವಂತೆ ಕಾಣಿಸುವುದಾದರೂ ಅವುಗಳು ಆ ರೀತಿಯಾಗಿಲ್ಲ. ಅಗ್ನಿ, ವಾಯು, ಆದಿತ್ಯ, ಪೃಥಿವೀ ಚಂದ್ರಮಾ ಇತ್ಯಾದಿ ದೇವತೆಗಳ ರೂಪ ಮತ್ತು ಕರ್ಮಗಳು ಪುರುಷರ (ಮನುಷ್ಯರ) ಕರ್ಮಗಳಂತೆ ಕಾಣಿಸುವುದಾದರೂ, ಅವುಗಳ ರೀತಿಯೇ ಬೇರೆ. ಆ ಕರ್ಮಗಳಿಗೂ ಮನುಷ್ಯರ ಕರ್ಮಗಳಿಗೂ ವಿಶೇಷ ವ್ಯತ್ಯಾಸವಿರುವುದು.

**ಯಥೋ ಏತಚ್ಚೇತನಾವದ್ವದ್ಧಿ ಸ್ತುತಯೋ ಭವಂತೀತ್ಯಚೇತನಾನ್ಯಪ್ಯೇವಂ ಸ್ತೂಯಂತೇ ಯಥಾಕ್ಷಪ್ರಭೃತೀನ್ಯೋಷಧಿಪರ್ಯಂತಾನಿ ॥**　　(ನಿ. ೭-೭)

ಹೇಗೆಂದರೆ, ಅಗ್ನ್ಯಾದಿದೇವತೆಗಳನ್ನು ಸ್ತುತಿಸುವಾಗ ಅವುಗಳಿಗೆ ಚೇತನವಿರುವಂತೆಯೇ ಭಾವಿಸಿ ಸ್ತುತಿಸಲ್ಪಡುವವು. ಜೂಜಾಡುವಾಗ ದಾಳಗಳನ್ನು ಸಂಬೋಧಿಸುವರು. ದಾಳಗಳು ಚೇತನಾರಹಿತವಾಗಿದ್ದರೂ ಚೇತನವಿರುವ ಪ್ರಾಣಿಗಳಂತೆ ಅವುಗಳನ್ನು ಸಂಬೋಧಿಸುವರು. ಓಷಧಿಗಳನ್ನೂ ಎಂದರೆ, ಗಿಡ, ಮರ ಬಳ್ಳಿ ಇವುಗಳನ್ನೂ ಚೇತನವಿರುವಂತೆಯೇ ಭಾವಿಸಿ ಸಂಬೋಧಿಸುವರು.

**ಯಥೋ ಏತತ್ಪೌರುಷವಿಧಿಕೈರಂಗೈಃ ಸಂಸ್ತೂಯಂತೆ ಇತ್ಯಚೇತನೇಷ್ವಪ್ಯೇತದ್ಭವತ್ಯಭಿಕ್ರಂದಂತಿ ಹರಿತೇಭಿರಾಸಭಿರಿತಿ ಗ್ರಾವಸ್ತುತಿಃ ||** (ನಿ. ೭-೭)

ಹಾಗೆಯೇ ಅಚೇತನವಸ್ತುಗಳನ್ನೂ ಪುರುಷಸಂಬಂಧವಾದ ಅಂಗವುಳ್ಳವುಗಳಂತೆಯೇ ಭಾವಿಸಿ ಸ್ತುತಿಸಲಾಗಿರುವುದು. ಓಷಧಿಗಳು, ಸೋಮವನ್ನು ಜಜ್ಜುವ ಕಲ್ಲು ಇವುಗಳು ಅಚೇತವಾದುವು. ಆದರೂ ಸೋಮಲತೆಗಳನ್ನು ಕಲ್ಲುಗಳಿಂದ ಜಜ್ಜುವಾಗ ಉಂಟಾಗುವ ಶಬ್ದವನ್ನು—ಆ ಕಲ್ಲುಗಳು ತಮ್ಮ ಹಸುರಾದ ಬಾಯಿಗಳಿಂದ ಕೂಗುತ್ತವೆ—ಎಂದು ವರ್ಣಿಸಲಾಗಿದೆ. ಕಲ್ಲುಗಳು ಅಚೇತನವಾದ್ದರಿಂದ ಅವುಗಳಿಗೆ ಪ್ರಾಣಿಗಳಿಗಿರುವಂತೆ ಬಾಯಿ ಇಲ್ಲ. ಆದರೂ ಕಲ್ಲಿನ ಮೇಲೆ ಲತೆಯನ್ನಿಟ್ಟು ಜಜ್ಜುವಾಗ ಆಗುವ ಶಬ್ದವನ್ನು ಕಲ್ಲುಗಳೇ ತಮ್ಮ ಬಾಯಿನಿಂದ ಮಾಡುತ್ತವೆ ಎಂದು ಋಷಿಯು ಅಲಂಕಾರಿಕವಾಗಿ ವರ್ಣಿಸಿದ್ದಾನೆ. ಸೋಮಲತೆಯನ್ನು ಜಜ್ಜುವಾಗ ಆ ಲತೆಗಳ ಹಸುರಾದ ವರ್ಣವು ಕಲ್ಲುಗಳಿಗೆ ಅಂಟಿಕೊಳ್ಳುವುದರಿಂದ ಕಲ್ಲುಗಳ ಬಾಯಿಯು ಹಸರು ವರ್ಣವುಳ್ಳದ್ದಾಗಿದೆ ಎಂಬುದನ್ನು ಸೂಚಿಸುವುದಕ್ಕಾಗಿ ಕಲ್ಲುಗಳ ಬಾಯಿಯು ಹಸರುವರ್ಣವುಳ್ಳದ್ದಾಗಿದೆ ಎಂದು ಉತ್ಪ್ರೇಕ್ಷೆಯುಳ್ಳ ವರ್ಣನೆಮಾಡಲಾಗಿದೆ.

**ಯಥೋ ಏತತ್ಪೌರುಷವಿಧಿಕೈರ್ದ್ರವ್ಯಸಂಯೋಗೈರಿತ್ಯೇತದಪಿ ತಾದೃಶಮೇವ | ಸುಖಂ ರಥಂ ಯುಯುಜೇ ಸಿಂಧುರಶ್ವಿನಂ ಇತಿ ನದೀಸ್ತುತಿಃ ||** (ನಿ. ೭-೭)

ಪುರುಷರಿಗಿರುವಂತೆ ಅಚೇತನವಸ್ತುಗಳಿಗೂ ದ್ರವ್ಯಸಂಯೋಗವಿರುವ ವಿಷಯದಲ್ಲಿ—ನದಿಯು (ಸಿಂಧುವು) ತನ್ನ ಕುಮಾರಿಗಳನ್ನು ಸುಖಕರವಾದ ರಥಕ್ಕೆ ಹೂಡಿದಳು—ಇತ್ಯಾದಿ ವಾಕ್ಯಗಳಲ್ಲಿರುವಂತೆ ನದಿಯು ಅಚೇತನವಸ್ತುವಾದ್ದರಿಂದ ಅದಕ್ಕೆ ರಥವೂ ಇಲ್ಲ. ಆದರೂ ನದಿಯನ್ನೂ ಸ್ತುತಿಸುವಾಗ ಋಷಿಯು ಮನುಷ್ಯರಿಗಿರುವಂತೆ ನದಿಗೂ ದ್ರವ್ಯಸಂಯೋಗವನ್ನು (ಸ್ವತ್ತನ್ನು ಹೊಂದಿರುವಿಕೆ) ಆರೋಪಮಾಡಿ ಸ್ತುತಿಸಿರುವನು.

**ಯಥೋ ಏತತ್ಪೌರುಷವಿಧಿಕೈಃ ಕರ್ಮಭಿರಿತ್ಯೇತದಪಿ ತಾದೃಶಮೇವ | ಹೋತುಶ್ಚಿತ್ಪೂರ್ವೇ ಹವಿರದ್ಯಮಾಶತ ಇತಿ ಗ್ರಾವಸ್ತುತಿರೇವ ||** (ನಿ. ೭-೭)

ಕರ್ಮಗಳ ವಿಷಯದಲ್ಲಿಯೂ ಪುರುಷರಿಗಿರುವಂತೆಯೇ ಅಚೇತನವಸ್ತುಗಳಾದ ಕಲ್ಲು ಮೊದಲಾದವುಗಳಿಗೂ ಕರ್ಮಕರ್ತೃತ್ವವನ್ನು ಆರೋಪಿಸಿ ಸ್ತುತಿಸಲಾಗಿದೆ. ಸೋಮಲತೆಯನ್ನು ಕಲ್ಲಿನಿಂದ ಜಜ್ಜುವಾಗ ಲತೆಯಿಂದ ಹೊರಡುವ ರಸವು ಕಲ್ಲಿಗೆ ಸ್ಪರ್ಶವಾಗುವುದು ಸಹಜವಷ್ಟೆ. ಇದನ್ನೇ ಋಷಿಯು ಸೋಮಾಭಿಷವಣಸಾಧನವಾದ ಕಲ್ಲುಗಳು ಸೋಮರಸವನ್ನು ಹೋತೃಮೊದಲಾದ ಯಜ್ಞಕರ್ತರಿಗಿಂತಲೂ ಮೊದಲೇ ರುಚಿನೋಡುತ್ತವೆ-ಎಂದು ವರ್ಣಿಸಿದಾನೆ. ಕಲ್ಲಿಗೆ ಬಾಯಿಇಲ್ಲ, ಅದಕ್ಕೆ ರುಚಿನೋಡುವ ಸಾಮರ್ಥ್ಯವೂ ಇಲ್ಲ. ಆದರೂ ಲತೆಯನ್ನು ಕಲ್ಲಿನಿಂದ ಜಜ್ಜುವಾಗ ಹೊರಹೊರಡುವ ರಸವು ಕಲ್ಲಿಗೆ ಸ್ಪರ್ಶವಾಗುವುದರಿಂದ ಕಲ್ಲು ಎಲ್ಲರಿಗಿಂದ ಮೊದಲೇ ಸೋಮರಸದ ರುಚಿನೋಡುತ್ತದೆ ಎಂದು ವರ್ಣಿಸಿರುವುದು ಉತ್ಪ್ರೇಕ್ಷೆಯುತವಾಗಿಯೂ ಅಲಂಕಾರಿಕವಾಗಿಯೂ ಇದೆ. ವಾಸ್ತವವಾಗಿ ಕಲ್ಲುಗಳು ಅಚೇತನವಾದ್ದರಿಂದ ಅವುಗಳಿಗೆ ಬಾಯಿಯಾಗಲೀ, ರುಚಿನೋಡುವ ಸಾಮರ್ಥ್ಯವಾಗಲಿ ಇಲ್ಲವೆಂಬ ವಿಷಯವು ಸರ್ವರಿಗೂ ಅನುಭವಸಿದ್ಧವಾಗಿದೆ.

**ಅಪಿ ವಾ ಪುರುಷವಿಧಾನಾಮೇವ ಸತಾಂ ಕರ್ಮಾತ್ಮಾನ ಏತೇ ಸ್ಯುರ್ಯಥಾ ಯಜ್ಞೋ ಯಜಮಾನಸ್ಯ | ಏಷ ಚಾಖ್ಯಾನಸಮಯಃ ||** (ನಿ. ೭-೭)

ಆದ್ದರಿಂದ ಈ ಎರಡು ವಿಧವಾದ ಮತಗಳಿಗೂ ಅವಕಾಶವಿದೆ. ಪೃಥಿವ್ಯಾದಿ ವಸ್ತುಗಳು ಅಚೇತನವಾದರೂ ಚೇತನಾಸಹಿತರಾದವರಂತೆ ಪ್ರವರ್ತಿಸುವುದರಿಂದ ಅವುಗಳನ್ನು ಚೇತನರಂತೆಯೂ ಅಚೇತನರಂತೆಯೂ ಎರಡುವಿಧವಾಗಿಯೂ ಭಾವಿಸುವುದರಲ್ಲಿ ಭಿನ್ನಾಭಿಪ್ರಾಯವಿದ್ದರೂ ಆ ಎರಡುವಿಧಗಳನ್ನೂ ಸರಿಯೆಂದು ಒಪ್ಪಬಹುದು. **ಯಜ್ಞೋ ಯಜ್ಞಮಾನಸ್ಯ** ಎಂಬ ವಾಕ್ಯದಲ್ಲಿ ಯಜಮಾನನು ಚೇತನಾಸಹಿತನು. ಯಜ್ಞವು ಅಚೇತನವು. ಆದರೂ ಯಜ್ಞದ ವಿಷಯವನ್ನು ಮಾತನಾಡುವಾಗ—ಯಜ್ಞವು ಯಜಮಾನನಿಗೆ ಉತ್ತಮಸ್ಥಾನವಾದ ಸ್ವರ್ಗವನ್ನು ಒದಗಿಸಿ ಕೊಡುವುದು—ಇತ್ಯಾದಿ ವಾಕ್ಯಗಳಲ್ಲಿ ಯಜ್ಞವು ಚೇತನಾಸಹಿತರಾಗಿರುವಂತೆಯೇ ವ್ಯವಹರಿಸಲ್ಪಡುವುದು. ಆದ್ದರಿಂದ ಅಚೇತನವಸ್ತುಗಳನ್ನು ವರ್ಣಿಸುವಾಗ ಚೇತನಾಸಹಿತರಾಗಿರುವಂತೆ ವರ್ಣಿಸುವುದರಲ್ಲಿ ತಪ್ಪೇನಿಲ್ಲ. ಉದಾಹರಣೆಗೆ ಹೇಳುವುದಾದರೆ—**ಪೃಥಿವೀ ಸ್ತ್ರೀರೂಪೇಣ ಭಾರಾವತರಣಾಯ ಬ್ರಹ್ಮಾಣಂ ಯಯಾಚೇ। ಅಗ್ನಿಶ್ಚ ಬ್ರಾಹ್ಮಣರೂಪೇಣ ವಾಸುದೇವಾರ್ಜುನಾವುಭೌ ಖಾಂಡವಂ ಯಯಾಚೇ। ಪುರುಷರೂಪೇಣಾಗ್ನಿ-ರೂಪೇಣ ಚ ಖಾಂಡವಂ ದದಾಹ।** ಪೃಥಿವಿಯು ಸ್ತ್ರೀರೂಪವನ್ನು ಧರಿಸಿ ಭೂಭಾರವನ್ನು ಇಳುಹಿಸಬೇಕೆಂದು ಬ್ರಹ್ಮನನ್ನು ಪ್ರಾರ್ಥಿಸಿದಳು; ಅಗ್ನಿಯು ಬ್ರಾಹ್ಮಣರೂಪದಿಂದ ಕೃಷ್ಣಾರ್ಜುನರನ್ನು ಸಮೀಪಿಸಿ ಇಂದ್ರನ ಖಾಂಡವ ವನವನ್ನೂ ಪ್ರಾರ್ಥಿಸಿದನು. ಅಗ್ನಿಯು ಪುರುಷ ಮತ್ತು ಅಗ್ನಿರೂಪದಿಂದ ಖಾಂಡವವನವನ್ನು ದಹಿಸಿದನು. ಇತ್ಯಾದಿ ವಾಕ್ಯಗಳಲ್ಲಿ ಅಗ್ನಿ, ಪೃಥಿವೀ ಮೊದಲಾದ ನಿರ್ಜೀವವಸ್ತುಗಳು ಅಥವಾ ಅವುಗಳ ಅಭಿಮಾನಿದೇವತೆಗಳು ಪುರುಷರೂಪವನ್ನು ಧರಿಸಿ ನಾನಾಕಾರ್ಯಗಳನ್ನು ಮಾಡಿರುವರೆಂದು ಪುರಾಣಾದಿಗಳಲ್ಲಿಯೂ ಅನೇಕ ವರ್ಣನೆಗಳಿವೆ. ಆದ್ದರಿಂದ ಇವುಗಳನ್ನು ಚೇತನಾ ಮತ್ತು ಅಚೇತನಾ ಎಂದು ಎರಡು ವಿಧವಾಗಿ ಭಾವಿಸುವುದೂ ಸರಿಯೆಂಬುದೇ ಸಿದ್ಧಾಂತವು ಎಂದು ನಿರ್ವಚನದ ಮುಖ್ಯಾಭಿಪ್ರಾಯವು.

॥ ಸಂಹಿತಾಪಾಠಃ ॥

ವರಿಷ್ಠೇ ನ ಇಂದ್ರ ವಂಧುರೇ ಧಾ ವಹಿಷ್ಠಯೋಃ ಶತಾವನ್ನಶ್ವಯೋರಾ।
ಇಷಮಾ ವಕ್ಷೀಷಾಂ ವರ್ಷಿಷ್ಠಾಂ ಮಾ ನಸ್ತಾರೀನ್ಮಘವನ್ರಾಯೋ ಅರ್ಯಃ॥

॥ ಪದಪಾಠಃ ॥

ವರಿಷ್ಠೇ। ನಃ। ಇಂದ್ರ। ವಂಧುರೇ। ಧಾಃ। ವಹಿಷ್ಠಯೋಃ। ಶತಽವನ್। ಅಶ್ವಯೋಃ। ಆ।
ಇಷಂ। ಆ। ವಕ್ಷಿ। ಇಷಾಂ। ವರ್ಷಿಷ್ಠಾಂ। ಮಾ। ನಃ। ತಾರೀತ್। ಮಘಽವನ್। ರಾಯಃ। ಅರ್ಯಃ॥

॥ ಸಾಯಣಭಾಷ್ಯಂ ॥

ಹೇ ಇಂದ್ರ ವರಿಷ್ಠ ಉರುತಮೇ ವಿಸ್ತೀರ್ಣತಮೇ ವಂಧುರ ಆತ್ಮೀಯೇ ರಥೇ ನೋಽಸ್ಮಾನ್ ಧಾಃ। ಧೇಹಿ। ಧಾರಯ। ಅಪಿ ಚ ಹೇ ಶತಾವನ್ ಶತಸಂಖ್ಯಧನೇಂದ್ರ ವಹಿಷ್ಠಯೋರ್ವೋಢೃತ-ಮಯೋಃ। ಆಕಾರಃ ಸಮುಚ್ಚಯೇ। ಅಶ್ವಯೋರಾ ತ್ವದೀಯಯೋರಶ್ವಯೋಃಶ್ಚಾಸ್ಮಾನ್ ಧಾರಯ।

**ತಥೇಷಾಮನ್ನಾನಾಂ ಮಧ್ಯೇ ವರ್ಷಿಷ್ಠಾಂ ವೃದ್ಧತಮಾಮಿಷಮನ್ನಮಾ ವಕ್ಷಿ। ಅಸ್ಮದರ್ಥಮಾವಹ। ಆನಯ। ಹೇ ಮಘವನ್ ಧನವನ್ನಿಂದ್ರ ಅರ್ಯೋ ಧನಸ್ಯ ಸ್ವಾಮ್ಯನ್ಯಃ ಕಶ್ಚಿನ್ನೋಽಸ್ಮಾಕಂ ರಾಯೋ ಧನಾನಿ ಮಾ ತಾರೀತ್। ಮಾ ಹಿಂಸೀತ್॥**

॥ ಪ್ರತಿಪದಾರ್ಥ ॥

**ಇಂದ್ರ**—ಎಲೈ ಇಂದ್ರನೇ। **ವರಿಷ್ಠೇ**—ಅತ್ಯಂತ ವಿಸ್ತೃತವಾದ। **ವಂಧುರೇ**—ನಿನ್ನ ರಥದಲ್ಲಿ। **ನಃ**—ನಮ್ಮನ್ನು। **ಧಾಃ**—ಕುಳ್ಳಿರಿಸಿಕೋ। **ಶತಾವನ್**—ಶತಸಂಖ್ಯಾತವಾದ ಧನವುಳ್ಳ ಎಲೈ ಇಂದ್ರನೇ। **ವಹಿಷ್ಠಯೋಃ**—ನಿನ್ನ ರಥವನ್ನು ವಹಿಸಲು ಯೋಗ್ಯವಾದ। **ಅಶ್ವಯೋಃ**—ಅಶ್ವಗಳ ಹಿಂಭಾಗದಲ್ಲಿ। **ಆ (ಧೇಹಿ)** ನಮ್ಮನ್ನು ಕುಳ್ಳಿರಿಸಿಕೊ। **ಇಷಾಂ**—ಸಕಲ ವಿಧವಾದ ಅನ್ನಗಳ ನಡುವೆ। **ವರ್ಷಿಷ್ಠಾಂ**—ಅತ್ಯಂತ ಶ್ರೇಷ್ಠವಾದ। **ಇಷಂ**—ಅನ್ನವನ್ನು। **ಆ ವಕ್ಷಿ**—ನಮಗೊದಗಿಸು। **ಮಘವನ್**—ಧನವಂತನಾದ ಎಲೈ ಇಂದ್ರನೇ। **ಅರ್ಯಃ**—ಧನಕ್ಕೆ ಒಡೆಯನಾದ ಇನ್ನಾರೂ। **ನಃ**—ನಮ್ಮ। **ರಾಯಃ**—ಧನವನ್ನು। **ಮಾ ತಾರೀತ್**—ಹಿಂಸಿಸದಿರಲಿ.

॥ ಭಾವಾರ್ಥ ॥

ಶತಸಂಖ್ಯಾಕವಾದ ಧನವುಳ್ಳ ಎಲೈ ಇಂದ್ರನೇ, ನಿನ್ನ ಅತ್ಯಂತ ವಿಸ್ತೃತವಾದ ರಥದಲ್ಲಿ, ನಿನ್ನ ರಥವನ್ನು ವಹಿಸಲು ಯೋಗ್ಯವಾದ ಅಶ್ವಗಳ ಹಿಂಭಾಗದಲ್ಲಿ ನಮ್ಮನ್ನು ಕುಳ್ಳಿರಿಸಿಕೊ. ಸಕಲ ವಿಧವಾದ ಅನ್ನಗಳ ನಡುವೆ ಅತ್ಯಂತ ಶ್ರೇಷ್ಠವಾದ ಅನ್ನವನ್ನು ನಮಗೊದಗಿಸು ಧನವಂತನಾದ ಎಲೈ ಇಂದ್ರನೇ, ಧನಕ್ಕೆ ಒಡೆಯನಾದ ಇನ್ನಾರೂ ನಮ್ಮ ಧನವನ್ನು ಹಿಂಸಿಸದಿರಲಿ (ಅಪಹರಿಸದಿರಲಿ).

## English Translation.

Place us, possessor of riches, in your ample chariot, (behind) your powerful horses ; bring to us from among all viands the most excellent food : let not, Maghavan, any oppulent man surpass us in wealth.

॥ ಸಂಹಿತಾಪಾಠಃ ॥

ಇಂದ್ರ ಮೃಳ ಮಹ್ಯಂ ಜೀವಾತುಮಿಚ್ಛ ಚೋದಯ ಧಿಯಮಯಸೋ ನ ಧಾರಾಂ।
ಯತ್ಕಿಂ ಚಾಹಂ ತ್ವಾಯುರಿದಂ ವದಾಮಿ ತಜ್ಜುಷಸ್ವ ಕೃಧಿ ಮಾ ದೇವವಂತಂ ॥ ೧೦ ॥

॥ ಪದಪಾಠಃ ॥

ಇಂದ್ರ । ಮೃಳ । ಮಹ್ಯಂ । ಜೀವಾತುಂ । ಇಚ್ಛ । ಚೋದಯ । ಧಿಯಂ । ಅಯಸಃ । ನ । ಧಾರಾಂ ।
ಯತ್ । ಕಿಂ । ಚ । ಅಹಂ । ತ್ವಾಽಯುಃ । ಇದಂ । ವದಾಮಿ । ತತ್ । ಜುಷಸ್ವ । ಕೃಧಿ । ಮಾ ।
ದೇವಽವಂತಂ ॥ ೧೦ ॥

॥ ಸಾಯಣಭಾಷ್ಯಂ ॥

ಹೇ ಇಂದ್ರ ಮೃಳ । ಮೃಳಯ । ಅಸ್ಮಾನ್ ಸುಖಯ । ಜೀವಾತುಂ ಜೀವನೌಷಧಂ ಚ ಮಹ್ಯಂ ದಾತುಮಿಚ್ಛ । ತಥಾ ಧಿಯಂ ಬುದ್ಧಿಂ ಚೋದಯ । ಸ್ತುತಿವಿಷಯಾಂ ಕರ್ಮವಿಷಯಾಂ ವಾ ಪ್ರೇರಯ । ತೀಕ್ಷ್ಣೀಕುರು । ಅಯಸೋ ನ ಧಾರಾಮಯೋಮಯಸ್ಯ ಖಡ್ಗಾದೇರ್ಧಾರಾಮಿವ । ಸಾ ಯಥಾ ಸೂಕ್ಷ್ಮಾ ತದ್ವತ್ಸೂಕ್ಷ್ಮವಿಷಯಾಂ ಧಿಯಂ ಚೋದಯೇತ್ಯರ್ಥಃ । ಕಿಂ ಚ ತ್ವಾಯುಸ್ತ್ವಾಮಾತ್ಮನ ಇಚ್ಛನ್ ಇದಮಿದಾನೀಂ ಯತ್ಕಿಂಚನಾಹಂ ವದಾಮಿ ಸಮೀಚೀನಮಸಮೀಚೀನಂ ವಾ ತಜ್ಜುಷಸ್ವ । ಮಾ ಮಾಂ ಚ ದೇವವಂತಂ ರಕ್ಷಕೈರ್ದೇವೈರುಪೇತಂ ಕೃಧಿ । ಕುರು ॥

॥ ಪ್ರತಿಪದಾರ್ಥ ॥

**ಇಂದ್ರ**—ಎಲೈ ಇಂದ್ರನೇ । **ಮೃಳ**—ನನ್ನನ್ನು ಸುಖಪಡಿಸು । **ಮಹ್ಯಂ**—ನನಗೆ । **ಜೀವಾತುಂ**—ದೀರ್ಘಾಯುಷ್ಯವನ್ನು । **ಇಚ್ಛ**—ಅಪೇಕ್ಷಿಸು । **ಅಯಸಃ**—ಉಕ್ಕಿನಿಂದ ಮಾಡಿದ ಖಡ್ಗದ । **ಧಾರಾಂ ನ**—ಅಲುಗನ್ನು ಹರಿತವಾಗಿ ಮಾಡುವಂತೆ । **ಧಿಯಂ**—ಕರ್ಮವಿಷಯಕವಾದ ನನ್ನ ಬುದ್ಧಿಯನ್ನು ತೀಕ್ಷ್ಣವಾದುದನ್ನಾಗಿ ಮಾಡು । **ತ್ವಾಯುಃ**—ನಿನ್ನ ಸಹಾಯವನ್ನಪೇಕ್ಷಿಸಿ । **ಅಹಂ**—ನಾನು । **ಯತ್ ಕಿಂ ಚ**—ಸಮೀಚೀನವೋ ಅಥವಾ ಅಸಮೀಚೀನವೋ ಆದ । **ಇದಂ ವದಾಮಿ**—ಯಾವ ನಿನ್ನ ಸ್ತುತಿಯನ್ನು ಪಠಿಸುತ್ತೇನೆಯೋ । **ತತ್**—ಅದನ್ನು । **ಜುಷಸ್ವ**—ಸೇವಿಸು । **ಮಾ**—ನನ್ನನ್ನು । **ದೇವವಂತಂ**—ದೇವರಕ್ಷಣೆಗಳೊಡನೆ ಕೂಡಿದವನನ್ನಾಗಿ । **ಕೃಧಿ**—ಮಾಡು.

॥ ಭಾವಾರ್ಥ ॥

ಎಲೈ ಇಂದ್ರನೇ, ನನ್ನನ್ನು ಸುಖಪಡಿಸು. ನನಗೆ ದೀರ್ಘಾಯುಷ್ಯವನ್ನಪೇಕ್ಷಿಸು. ಉಕ್ಕಿನಿಂದ ಮಾಡಿದ ಖಡ್ಗದ ಅಲಗನ್ನು ತೀಕ್ಷ್ಣವಾಗಿ ಮಾಡುವಂತೆ ಕರ್ಮವಿಷಯಕವಾದ ನನ್ನ ಬುದ್ಧಿಯನ್ನು ತೀಕ್ಷ್ಣವಾದುದನ್ನಾಗಿ ಮಾಡು. ನಿನ್ನ ಸಹಾಯವನ್ನಪೇಕ್ಷಿಸಿ ನಾನು ಯಾವ ಸ್ತುತಿಯನ್ನಪಠಿಸುವೆನೋ, ಅದು ಉತ್ತಮವಾಗಿರಲಿ ಅಥವಾ ಉತ್ತಮವಾಗಿಲ್ಲದಿರಲಿ, ಅದನ್ನು ನೀನು ಸೇವಿಸು. ನನ್ನನ್ನು ದೇವರಕ್ಷಣೆಗಳೊಡನೆ ಕೂಡಿದವನನ್ನಾಗಿ ಮಾಡು.

## English Translation.

Make me happy, Indra ; be pleased to prolong my life : sharpen my intellect like the edge of an iron sword : whatever, desirous (propitiating) you, I may utter, be pleased by it : render me the object of divine protection.

॥ ಸಂಹಿತಾಪಾಠಃ ॥

ತ್ರಾತಾರಮಿಂದ್ರಮವಿತಾರಮಿಂದ್ರಂ ಹವೇಹವೇ ಸುಹವಂ ಶೂರಮಿಂದ್ರಂ।
ಹ್ವಯಾಮಿ ಶಕ್ರಂ ಪುರುಹೂತಮಿಂದ್ರಂ ಸ್ವಸ್ತಿ ನೋ ಮಘವಾ ಧಾತ್ವಿಂದ್ರಃ॥

॥ ಪದಪಾಠಃ ॥

ತ್ರಾತಾರಂ । ಇದ್ರಂ । ಅವಿತಾರಂ । ಇಂದ್ರಂ । ಹವೇऽಹವೇ । ಸುऽಹವಂ । ಶೂರಂ । ಇಂದ್ರಂ ।
ಹ್ವಯಾಮಿ । ಶಕ್ರಂ । ಪುರುऽಹೂತಂ । ಇಂದ್ರಂ । ಸ್ವಸ್ತಿ । ನಃ । ಮಘऽವಾ । ಧಾತು । ಇಂದ್ರಃ ॥೧೧॥

॥ ಸಾಯಣಭಾಷ್ಯಂ ॥

ಆಯುಷ್ಕಾಮೇಷ್ಟ್ಯಾಮಿಂದ್ರಸ್ಯ ತ್ರಾತುಸ್ತ್ರಾತಾರಮಿತ್ಯನುವಾಕ್ಯಾ । ಸೂತ್ರಿತಂ ಚ । ತ್ರಾತಾರಮಿಂದ್ರಮವಿತಾರಮಿಂದ್ರಂ ಮಾ ತೇ ಅಸ್ಯಾಂ ಸಹಸಾವನ್ಪರಿಷ್ಟೌ । ಆ. ೨-೧೦ । ಇತಿ ॥

ತ್ರಾತಾರಂ ಶತ್ರುಭ್ಯಃ ಪಾಲಯಿತಾರಮಿಂದ್ರಮಾಹ್ವಯಾಮಿ । ತಥಾವಿತಾರಂ ಕಾಮೈಸ್ತರ್ಪಯಿತಾರಮಿಂದ್ರಮಾಹ್ವಯಾಮಿ ಹವೇ ಹವೇ ಸರ್ವೇಷ್ವಾಹವನೇಷು ಸುಹವಂ ಸುಖೇನಾಹ್ವಾತುಂ ಶಕ್ಯಂ ಶೂರಂ ಶೌರ್ಯವಂತಂ ಶಕ್ರಂ ಸರ್ವಕಾರ್ಯೇಷು ಶಕ್ತಂ ಪುರುಹೂತಂ ಪುರುಭಿರ್ಬಹುಭಿಃ ಪಾಲನಾರ್ಥಮಾಹೂತಮೇವಂವಿಧಮಿಂದ್ರಂ ಹ್ವಯಾಮಿ । ಆಹ್ವಯಾಮಿ । ಏವಮಾಹೂತೋ ಮಘವಾ ಧನವಾನ್ ಸ ಇಂದ್ರಃ ಸ್ವಸ್ತ್ಯವಿನಾಶಂ ನೋऽಸ್ಮಭ್ಯಂ ಧಾತು । ಪದಾತು । ಯದ್ವಾ । ಅಸ್ಮಾಕಂ ವಿದಧಾತು ॥

॥ ಪ್ರತಿಪದಾರ್ಥ ॥

**ತ್ರಾತಾರಂ**—ರಕ್ಷಕನಾದ । **ಇಂದ್ರಂ**—ಇಂದ್ರನನ್ನು । **ಹ್ವಯಾಮಿ**—ಸ್ತುತಿಸಿ ಕರೆಯುತ್ತೇನೆ । **ಅವಿತಾರಂ**—ಇಷ್ಟಾರ್ಥಗಳನ್ನು ಕೊಟ್ಟು ತೃಪ್ತಿಪಡಿಸುವ । **ಇಂದ್ರಂ**—ಇಂದ್ರನನ್ನು (ಕರೆಯುತ್ತೇನೆ) । **ಹವೇಹವೇ**—ಪ್ರತಿಯೊಂದು ಆಹ್ವಾನಕಾಲದಲ್ಲೂ । **ಸುಹವಂ**—ಸುಲಭವಾಗಿ ನಮ್ಮ ಪ್ರಾರ್ಥನೆಗೆ ಮನ್ನಣೆಯನ್ನು ಕೊಡತಕ್ಕವನೂ । **ಶೂರಂ**—ಪರಾಕ್ರಮಿಯೂ । **ಇಂದ್ರಂ**—ಸರ್ವೇಶ್ವರನೂ । **ಶಕ್ರಂ**—ಸರ್ವಕರ್ಮ ಸಮರ್ಥನೂ । **ಪುರುಹೂತಂ**—ಅನೇಕರಿಂದ ಕರೆಯಲ್ಪಡುವವನೂ ಆದ । **ಇಂದ್ರಂ**—ಇಂದ್ರನನ್ನು (ಸ್ತುತಿಸಿ ಕರೆಯುತ್ತೇನೆ) । **ಮಘವಾ**—ಧನವಂತನಾದ । **ಇಂದ್ರಃ**—ಇಂದ್ರನು । **ನಃ**—ನಮಗೆ । **ಸ್ವಸ್ತಿ**—ಕಲ್ಯಾಣವನ್ನು । **ಧಾತು**—ಉಂಟುಮಾಡಲಿ.

॥ ಭಾವಾರ್ಥ ॥

ಈ ಯಜ್ಞದಲ್ಲಿ ರಕ್ಷಕನಾದ ಇಂದ್ರನನ್ನು ಸ್ತುತಿಸಿ ಕರೆಯುತ್ತೇನೆ. ಇಷ್ಟಾರ್ಥಗಳನ್ನು ಕೊಟ್ಟು ತೃಪ್ತಿಪಡಿಸತಕ್ಕ ಇಂದ್ರನನ್ನು ಕರೆಯುತ್ತೇನೆ. ಪ್ರತಿಯೊಂದು ಆಹ್ವಾನಕಾಲದಲ್ಲೂ ಸುಲಭವಾಗಿ ನಮ್ಮ ಪ್ರಾರ್ಥನೆಗೆ

ಮನ್ನಣೆಯನ್ನು ಕೊಡತಕ್ಕವನೂ, ಪರಾಕ್ರಮಿಯೂ ಸರ್ವೇಶ್ವರನೂ ಸರ್ವಕರ್ಮಸಮರ್ಥನೂ, ಅನೇಕರಿಂದ ಕರೆಯಲ್ಪಡುವವನೂ ಆದ ಇಂದ್ರನನ್ನು ಸ್ತುತಿಸಿ ಕರೆಯುತ್ತೇನೆ. ಧನವಂತನಾದ ಇಂದ್ರನು ನಮಗೆ ಕಲ್ಯಾಣ ವನ್ನುಂಟುಮಾಡಲಿ.

### English Translation.

I invoke, at repeated sacrifices, Indra, the preserver, the protector, the hero, who is easily propitiated, Indra the powerful, the invoked of many : may Indra, the lord of affluence, bestow upon us prosperity.

॥ ವಿಶೇಷವಿಷಯಗಳು ॥

ಆಯುಷ್ಕಾಮೇಷ್ಟಿಯಲ್ಲಿ ಯಜಮಾನನು **ತ್ರಾತಾರಂ** ಎಂಬ ಈ ಋಕ್ಕನ್ನು ಅನುವಾಕ್ಯಾಮಂತ್ರವನ್ನಾಗಿ ಪಠಿಸಬೇಕೆಂದು ಆಶ್ವಲಾಯನ ಶ್ರೌತಸೂತ್ರದ—**ತ್ರಾತಾರಮಿಂದ್ರಮವಿತಾರಮಿಂದ್ರಂ ಮಾ ತೇ ಅಸ್ಯಾಂ ಸಹಸಾವನ್ಪರಿಷ್ಟೌ** ಎಂಬ ಸೂತ್ರದಿಂದ (ಆ. ೨-೧೦) ವಿವೃತವಾಗಿರುವುದು,

॥ ಸಂಹಿತಾಪಾಠಃ ॥

ಇಂದ್ರಃ ಸುತ್ರಾಮಾ ಸ್ವವಾँ ಅವೋಭಿಃ ಸುಮೃಳೀಕೋ ಭವತು ವಿಶ್ವವೇದಾಃ।
ಬಾಧತಾಂ ದ್ವೇಷೋ ಅಭಯಂ ಕೃಣೋತು ಸುವೀರ್ಯಸ್ಯ ಪತಯಃ
ಸ್ಯಾಮ ॥ ೧೨ ॥

॥ ಪದಪಾಠಃ ॥

ಇಂದ್ರಃ । ಸುऽತ್ರಾಮಾ । ಸ್ವऽವಾನ್ । ಅವಃऽಭಿಃ । ಸುऽಮೃಳೀಕಃ । ಭವತು । ವಿಶ್ವऽವೇದಾಃ ।
ಬಾಧತಾಂ । ದ್ವೇಷಃ । ಅಭಯಂ । ಕೃಣೋತು । ಸುऽವೀರ್ಯಸ್ಯ । ಪತಯಃ । ಸ್ಯಾಮ ॥ ೧೨ ॥

॥ ಸಾಯಣಭಾಷ್ಯಂ ॥

**ಸುತ್ರಾಮಾ ಸುಷ್ಠು ತ್ರಾತಾ ಸ್ವವಾನ್ಧನವಾನ್ ಸ ಇಂದ್ರೋऽವೋಭೀ ರಕ್ಷಣೈಃ ಸುಮೃಳೀಕಃ ಸುಷ್ಠು ಸುಖಯಿತಾ ಭವತು । ತಥಾ ಚ ವಿಶ್ವವೇದಾಃ ಸರ್ವಧನಃ ಸರ್ವವಿದ್ವಾನ್ವಾ ಸ ಇಂದ್ರೋ ದ್ವೇಷೋ ದ್ವೇಷ್ಟೄನ್ ಶತ್ರೂನ್ ಬಾಧತಾಂ । ಹಿನಸ್ತು । ಅಭಯಂ ಭಯರಹಿತಂ ಚಾಸ್ಮಾಕಂ ಕೃಣೋತು । ಕರೋತು । ವಯಂ ಚ ತತ್ಪ್ರಸಾದಾತ್ಸುವೀರ್ಯಸ್ಯ ಶೋಭನವೀರ್ಯಸ್ಯ ಪತಯಃ ಸ್ಯಾಮ । ಭವೇಮ ॥**

॥ ಪ್ರತಿಪದಾರ್ಥ ॥

**ಸುತ್ರಾಮಾ**—ಅತಿಶಯವಾಗಿ ರಕ್ಷಿಸುವವನೂ । **ಸ್ವವಾನ್**—ಧನವಂತನೂ ಆದ । **ಇಂದ್ರಃ**—ಇಂದ್ರನು । **ಅವೋಭಿಃ**—ತನ್ನ ರಕ್ಷಣೆಗಳೊಡನೆ । **ಸುಮೃಳೀಕಃ**—ಉತ್ತಮವಾದ ಸುಖವನ್ನುಂಟುಮಾಡುವವನಾಗಿ ।

**ಭವತು**—ಆಗಲಿ | **ವಿಶ್ವವೇದಾಃ**—ಸಮಸ್ತವನ್ನೂ ತಿಳಿದ ಇಂದ್ರನು | **ದ್ವೇಷಃ**—ನಮ್ಮನ್ನು ದ್ವೇಷಿಸುವ ಶತ್ರುಗಳನ್ನು | **ಬಾಧತಾಂ**—ಹಿಂಸಿಸಲಿ | **ಅಭಯಂ**—ನಮಗೆ ಭಯರಾಹಿತ್ಯವನ್ನು | **ಕೃಣೋತು**—ಉಂಟುಮಾಡಲಿ | **ಸುವೀರ್ಯಸ್ಯ**—ಉತ್ತಮವಾದುದೂ ಶಕ್ತಿಯುತವಾದುದೂ ಆದ ಸಂಪತ್ತಿಗೆಲ್ಲಾ | **ಪತಯಃ**—ಒಡೆಯರಾಗಿ | **ಸ್ಯಾಮ**—ನಾವು ಆಗುವಂತೆ ಅನುಗ್ರಹಿಸಲಿ.

॥ ಭಾವಾರ್ಥ ॥

ಅತಿಶಯವಾಗಿ ರಕ್ಷಿಸುವವನೂ, ಧನವಂತನೂ ಆದ ಇಂದ್ರನು ತನ್ನ ರಕ್ಷಣೆಗಳೊಡನೆ ಉತ್ತಮವಾದ ಸುಖವನ್ನುಂಟುಮಾಡುವವನಾಗಲಿ. ಸಮಸ್ತವನ್ನೂ ತಿಳಿದ ಇಂದ್ರನು ನಮ್ಮನ್ನು ದ್ವೇಷಿಸುವ ಶತ್ರುಗಳನ್ನು ಹಿಂಸಿಸಲಿ. ನಮಗೆ ಭಯರಾಹಿತ್ಯವನ್ನುಂಟುಮಾಡಲಿ. ಉತ್ತಮವಾದುದೂ, ಶಕ್ತಿಯುತವಾದುದೂ ಆದ ಸಂಪತ್ತಿಗೆಲ್ಲಾ ನಾವು ಒಡೆಯರಾಗುವಂತಾಗಲಿ.

## English Translation.

May the protecting, opulent Indra be the bestower of felicity by his protections : may he, who is all-knowing, foil our adversaries : may he keep us out of danger, and may we be the possessors of excellent posterity.

॥ ಸಂಹಿತಾಪಾಠಃ ॥

ತಸ್ಯ ವಯಂ ಸುಮತೌ ಯಜ್ಞಿಯಸ್ಯಾಪಿ ಭದ್ರೇ ಸೌಮನಸೇ ಸ್ಯಾಮ।
ಸ ಸುತ್ರಾಮಾ ಸ್ವವಾँ ಇಂದ್ರೋ ಅಸ್ಮೇ ಆರಾಚ್ಚಿದ್ದ್ವೇಷಃ ಸನುತರ್ಯುಯೋತು ॥ ೧೩ ॥

॥ ಪದಪಾಠಃ ॥

ತಸ್ಯ । ವಯಂ । ಸುಽಮತೌ । ಯಜ್ಞಿಯಸ್ಯ । ಅಪಿ । ಭದ್ರೇ । ಸೌಮನಸೇ । ಸ್ಯಾಮ ।
ಸಃ । ಸುಽತ್ರಾಮಾ । ಸ್ವಽವಾನ್ । ಇಂದ್ರಃ । ಅಸ್ಮೇ ಇತಿ । ಆರಾತ್ । ಚಿತ್ । ದ್ವೇಷಃ । ಸನುತಃ । ಯುಯೋತು ॥ ೧೩ ॥

॥ ಸಾಯಣಭಾಷ್ಯಂ ॥

ಯಜ್ಞಿಯಸ್ಯ ಯಜ್ಞಾರ್ಹಸ್ಯ ಸುಮತೌ ಶೋಭನಾಯಾಮನುಗ್ರಹಾತ್ಮಿಕಾಯಾಂ ಬುದ್ಧೌ ವಯಂ ಸ್ಯಾಮ । ತದ್ವಿಷಯಭೂತಾ ಭವೇಮ । ತಥಾ ಭದ್ರೇ ಕಲ್ಯಾಣೇ ಸೌಮನಸೇ ಸುಮನಸೋ ಭಾವೇಽಪಿ ತದೀಯೇ ಸ್ಯಾಮ । ಭವೇಮ । ಸ ಇಂದ್ರೋಽಸ್ಮಾಸ್ವನುಗ್ರಹಾತ್ಮಿಕಾಂ ಬುದ್ಧಿಂ ಸೌಮನಸ್ಯಂ

**ಚ ಕರೋತ್ವಿತ್ಯರ್ಥಃ । ಸುತ್ರಾಮಾ ಸುಷ್ಠು ತ್ರಾತಾ ಸ್ವವಾನ್ಧನವಾನ್ ಸ ಇಂದ್ರಶ್ಚಾಸ್ಮೇ ಅಸ್ಮತ್ತೆ ಆರಾಚ್ಚಿತ್ ದೂರದೇಶ ಏವ ದ್ವೇಷೋ ದ್ವೇಷ್ಟೄನ್ ಸನುತಃ। ಅಂತರ್ಹಿತೇನಾನ್ಯೈತತ್। ಅಂತರ್ಹಿತಾನ್ಯು-ಯೋತು । ಪೃಥಕ್ಕರೋತು ॥**

॥ ಪ್ರತಿಪದಾರ್ಥ ॥

**ತಸ್ಯ ಯಜ್ಞಿಯಸ್ಯ**—ಪೂಜಾರ್ಹನಾದ ಆ ಇಂದ್ರನ । **ಸುಮತೌ**—ಅನುಗ್ರಹಾತ್ಮಕವಾದ ಬುದ್ಧಿಗೆ ವಿಷಯರಾಗಿ । **ವಯಂ**—ನಾವು । **ಸ್ಯಾಮ**—ಇರುವಂತಾಗಲಿ । **ಭದ್ರೇ**—ಕಲ್ಯಾಣಕಾರಕವಾದ । **ಸೌಮನಸೇ ಅಪಿ**—ಅವನ ಪ್ರೀತಿವಿಷಯರಾಗಿಯೂ ಇರುವಂತಾಗಲಿ । **ಸುತ್ರಾಮಾ**—ಅತಿಶಯವಾಗಿ ರಕ್ಷಿಸುವವನೂ । **ಸ್ವವಾನ್**—ಧನವಂತನೂ ಆದ । **ಸ ಇಂದ್ರಃ**—ಅದೇ ಇಂದ್ರನು । **ದ್ವೇಷಃ**—ನಮ್ಮನ್ನು ದ್ವೇಷಿಸತಕ್ಕ ಶತ್ರುಗಳನ್ನು । **ಅಸ್ಮೇ**—ನಮಗಿಂತಲೂ । **ಆರಾಚ್ಚಿತ್**—ಅತ್ಯಂತ ದೂರ ಪ್ರದೇಶದಲ್ಲಿಯೇ । **ಸನುತಃ**—ಕಣ್ಣಿಗೆ ಕಾಣದಿರುವಂತೆಯೂ । **ಯುಯೋತು**—ನಮ್ಮೊಂದಿಗೆ ಸೇರದಿರುವಂತೆಯೂ ಬೇರೆಯಾಗಿಟ್ಟಿರಲಿ.

॥ ಭಾವಾರ್ಥ ॥

ಪೂಜಾರ್ಹನಾದ ಅದೇ ಇಂದ್ರನ ಅನುಗ್ರಹಾತ್ಮಕವಾದ ಬುದ್ಧಿಗೆ ವಿಷಯರಾಗಿ ನಾವು ಇರುವಂತಾಗಲಿ. ಕಲ್ಯಾಣಕಾರಕವಾದ ಅವನ ಪ್ರೀತಿವಿಷಯರಾಗಿಯೂ ಇರುವಂತಾಗಲಿ. ಅತಿಶಯವಾಗಿ ರಕ್ಷಿಸುವವನೂ ಧನವಂತನೂ ಆದ ಅದೇ ಇಂದ್ರನು ನಮ್ಮನ್ನು ದ್ವೇಷಿಸತಕ್ಕ ಶತ್ರುಗಳನ್ನು ನಮಗಿಂತಲೂ ಅತ್ಯಂತ ದೂರ ಪ್ರದೇಶದಲ್ಲಿಯೇ ನಮ್ಮ ಕಣ್ಣಿಗೆ ಕಾಣದಂತೆಯೂ ನಮ್ಮೊಂದಿಗೆ ಸೇರದಿರುವಂತೆಯೂ ಬೇರೆಯಾಗಿಟ್ಟಿರಲಿ.

## English Translation.

May we continue in the favour of that adorable (deity) even in his auspicious good-will : may that protecting and opulent Indra drive far from us, into extinction, all those who hate us.

॥ ವಿಶೇಷವಿಷಯಗಳು ॥

**ಅಸ್ಮೇ**—ಈ ಶಬ್ದಕ್ಕೆ ಏಳು ವಿಭಕ್ತ್ಯರ್ಥಗಳಲ್ಲಿಯೂ ಪ್ರಯೋಗವಿರುವುದೆಂದು ಯಾಸ್ಕರು ಹೇಳಿ ಉದಾಹರಣೆಗಾಗಿ ಈ ಋಕ್ಕಿನ ಅಸ್ಮೇ ಆರಾಚ್ಚಿದ್ದ್ವೇಷಃ **ಸನುತರ್ಯುಯೋತು** ಎಂಬ ವಾಕ್ಯವನ್ನು ಉದಾಹರಿಸಿದ್ದಾರೆ. **ಅಸ್ಮೇ** ಎಂಬ ಶಬ್ದದ ಏಳು ವಿಧವಾದ ವಿಭಕ್ತಿಪ್ರಯೋಗಗಳನ್ನು ನಾವು ಋ. ಸಂ. ಭಾಗ. ೧೦ ಪುಟ 170ಗಳಲ್ಲಿ ವಿಸ್ತಾರವಾಗಿ ವಿವರಿಸಿದ್ದೇವೆ.

॥ ಸಂಹಿತಾಪಾಠಃ ॥

**ಅವ ತ್ವೇ ಇಂದ್ರ ಪ್ರವತೋ ನೋರ್ವಿರ್ಗಿರೋ ಬ್ರಹ್ಮಾಣಿ ನಿಯುತೋ ಧವಂತೇ ।**
**ಉರೂ ನ ರಾಧಃ ಸವನಾ ಪುರೂಣ್ಯಪೋ ಗಾ ವಜ್ರಿನ್ಯುವಸೇ ಸಮಿಂದೂನ್॥**

|| ಪದಪಾಠಃ ||

ಅವ । ತ್ವೇ ಇತಿ । ಇಂದ್ರ । ಪ್ರವತಃ । ನ । ಊರ್ಮಿಃ । ಗಿರಃ । ಬ್ರಹ್ಮಾಣಿ । ನಿಽಯುತಃ । ಧವಂತೇ ।

ಉರು । ನ । ರಾಧಃ । ಸವನಾ । ಪುರೂಣಿ । ಅಪಃ । ಗಾಃ । ವಜ್ರಿನ್ । ಯುವಸೇ । ಸಂ । ಇಂದೂನ್ ॥

॥ ಸಾಯಣಭಾಷ್ಯಂ ॥

ಹೇ ಇಂದ್ರ ತ್ವೇ ತ್ವಾಂ ನಿಯುತಃ ಸ್ತೋತುರ್ಗಿರ ಉಕ್ಥಾತ್ಮಿಕಾ ವಾಚೋ ಬ್ರಹ್ಮಾಣಿ ಸಾಮರೂಪಾಣಿ ಸ್ತೋತ್ರಾಣಿ ಚಾವ ಧವಂತೇ। ಅವಗಚ್ಛಂತಿ। ತತ್ರ ದೃಷ್ಟಾಂತಃ। ಊರ್ಮಿರ್ಜಲಸಂಘಃ ಪ್ರವತೋ ನ ಪ್ರವಣದೇಶಾನಿವ। ಯಥೋಚ್ಛ್ರಿತಾತ್ಸ್ಥಲಾನ್ನಿಮ್ನದೇಶಂ ಶೀಘ್ರಂ ಗಚ್ಛತಿ ತದ್ವತ್। ನಶಬ್ದಃ ಸಮುಚ್ಚಯೇ। ಉರೂರೂಣಿ ಬಹು ರಾಧೋ ರಾಧಾಂಸಿ ಚ ಹವಿರ್ಲಕ್ಷಣಾನಿ ಧನಾನಿ ಪುರೂಣಿ ಬಹೂನಿ ಸವನಾ ಸವನಾನಿ ಬಹವೋಽಭಿಷುತಾಃ ಸೋಮಾಶ್ಚ ತ್ವಾಮೇವಾಭಿಗಚ್ಛಂತಿ। ಹೇ ವಜ್ರಿನ್ ವಜ್ರವನ್ನಿಂದ್ರ ಅಪೋ ವಸತೀವರ್ಯಾಖ್ಯಾ ಗಾ ಗೋವಿಕಾರಾನ್ ಶೃತದಧ್ಯಾದೀನ್ ಶ್ರಪಣಾರ್ಥಾನಿಂದೂನ್ ಸೋಮಾಂಶ್ಚ ಸಂ ಯುವಸೇ। ಸಮ್ಯಕ್ ಮಿಶ್ರಯಸಿ। ತ್ವಾಂ ಯಷ್ಟ್ವಂ ವಸತೀವರೀಭಿರಭಿಷುತ್ಯ ತಂ ಸೋಮಮಾಶಿರಾದಿಭಿಃ ಶ್ರಪಣದ್ರವ್ಯೈಃ ಸಂಸ್ಕುರ್ವಂತೀತ್ಯರ್ಥಃ ॥

|| ಪ್ರತಿಪದಾರ್ಥ ||

**ಇಂದ್ರ**—ಎಲೈ ಇಂದ್ರನೇ । **ಊರ್ಮಿಃ**—ಜಲಪ್ರವಾಹವು । **ಪ್ರವತೋ ನ**—ತಗ್ಗು ಪ್ರದೇಶಗಳಲ್ಲಿ ಯಾವ ರೀತಿ ವೇಗವಾಗಿ ಹರಿಯುವುದೋ ಹಾಗೆ । **ನಿಯುತಃ**—ಸ್ತೋತೃವಿನ । **ಗಿರಃ**—ಉಕ್ಥರೂಪವಾದ ವಾಕ್ಕುಗಳೂ । **ಬ್ರಹ್ಮಾಣಿ**—ಸಾಮರೂಪವಾದ ಸ್ತೋತ್ರಗಳೂ । **ತ್ವೇ**—ನಿನ್ನನ್ನು (ಲ್ಲಿ) । **ಅವ ಧವಂತೇ**—ವೇಗವಾಗಿ ಬಂದು ಸೇರುತ್ತವೆ । **ವಜ್ರಿನ್**—ವಜ್ರಾಯುಧದಾರಿಯಾದ ಎಲೈ ಇಂದ್ರನೇ । **ತ್ವಂ**—ನೀನು । **ಉರು**—ಅಧಿಕವಾಗಿ । **ರಾಧಃ**—ಹವಿಸ್ಸಿನ ರೂಪದ ಧನಗಳನ್ನೂ । **ಪುರೂಣಿ**—ಅನೇಕ ವಿಧವಾದ । **ಸವನಾ**—ಹಿಂಡಿದ ಸೋಮರಸಗಳನ್ನೂ । **ಅಪಃ**—ವಸತೀವರೀರೂಪವಾದ ಉದಕಗಳನ್ನೂ । **ಗಾಃ**—ಗೋವಿಕಾರವಾದ ಕ್ಷೀರಾದಿಗಳನ್ನೂ । **ಇಂದೂನ್**—ಸೋಮರಸಗಳನ್ನೂ । **ಸಂ ಯುವಸೇ**—ಒಟ್ಟಿಗೆ ಸೇರಿಸುತ್ತೀಯೆ.

॥ ಭಾವಾರ್ಥ ॥

ಎಲೈ ಇಂದ್ರನೇ, ಜಲಪ್ರವಾಹವು ತಗ್ಗುಪ್ರದೇಶಗಳಲ್ಲಿ ಯಾವ ರೀತಿ ವೇಗವಾಗಿ ಹರಿಯುವುದೋ ಹಾಗೆ ಸ್ತೋತೃವಿನ ಉಕ್ಥರೂಪವಾದ ವಾಕ್ಕುಗಳೂ ಸಾಮರೂಪವಾದ ಸ್ತೋತ್ರಗಳೂ ನಿನ್ನನ್ನು ವೇಗವಾಗಿ ಬಂದು ಸೇರುತ್ತವೆ. ವಜ್ರಾಯುಧಧಾರಿಯಾದ ಎಲೈ ಇಂದ್ರನೇ, ನೀನು ಅಧಿಕವಾಗಿ ಹವಿಸ್ಸಿನ ರೂಪದ ಧನಗಳನ್ನೂ ಅನೇಕವಿಧವಾದ ಹಿಂಡಿದ ಸೋಮರಸಗಳನ್ನೂ, ವಸತೀವರೀರೂಪವಾದ ಉದಕಗಳನ್ನೂ ಗೋವಿಕಾರಕವಾದ ಕ್ಷೀರಾದಿಗಳನ್ನೂ ಸೋಮರಸಗಳನ್ನೂ ಒಟ್ಟಿಗೆ ಸೇರಿಸುತ್ತೀಯೆ (ಸೇವಿಸುತ್ತೀಯೆ).

## English Translation.

To you the praises and paryers of the worshipper hasten like a torrent down a declivity ; and you, thunderer, aggregate the immense wealth (of sacrificial offerings), copious libations, and milk, and the juices of the Soma.

॥ ಸಂಹಿತಾಪಾಠಃ ॥

ಕ ಈಂ ಸ್ತವತ್ಕಃ ಪೃಣಾತ್ಕೋ ಯಜಾತೇ ಯದುಗ್ರಮಿನ್ಮಘವಾ ವಿಶ್ವ-
ಹಾಽವೇತ್ ।
ಪಾದಾವಿವ ಪ್ರಹರನ್ನನ್ಯಮನ್ಯಂ ಕೃಣೋತಿ ಪೂರ್ವಮಪರಂ ಶಚೀಭಿಃ ॥೧೫॥

॥ ಪದಪಾಠಃ ॥

ಕಃ । ಈಂ । ಸ್ತವತ್ । ಕಃ । ಪೃಣಾತ್ । ಕಃ । ಯಜಾತೇ । ಯತ್ । ಉಗ್ರಂ । ಇತ್ । ಮಘಽವಾ ।
ವಿಶ್ವಹಾ । ಅವೇತ್ ।
ಪಾದೌಽಇವ । ಪ್ರಽಹರನ್ । ಅನ್ಯಂಽಅನ್ಯಂ । ಕೃಣೋತಿ । ಪೂರ್ವಂ । ಅಪರಂ । ಶಚೀಭಿಃ ॥ ೧೫ ॥

॥ ಸಾಯಣಭಾಷ್ಯಂ ॥

ಕಃ ಸ್ತೋತೇನೇನಮಿಂದ್ರಂ ಸ್ತವತ್ । ಸ್ತುಯಾತ್ । ಸ್ತೋತುಂ ಶಕ್ನುಯಾತ್ । ಕೋ ವಾ ಪೃಣಾತ್ । ಏನಂ ಪ್ರೀಣಯೇತ್ । ಕಶ್ಚ ಯಜಾತೇ । ಏನಂ ಹವಿರ್ಭಿರ್ಯಜೇತ । ಯದ್ಯಸ್ಮಾದಯಂ ಮಘವಾ ಧನವಾನಿಂದ್ರ ಉಗ್ರಮಿದುದ್ಗೂರ್ಣಮೇವ ವಿಶ್ವಹಾ ಸರ್ವದಾವೇತ್ ಆತ್ಮಾನಂ ವೇತ್ತಿ ಜಾನಾತಿ ಸರ್ವದೋಗ್ರ ಏವ ಭವತಿ ತಸ್ಮಾತ್ಕಾರಣಾತ್ ನ ಕೋಽಪ್ಯೇನಂ ಸ್ತೋತುಂ ಪ್ರೀಣಯಿತುಂ ಯಷ್ಟುಂ ವಾ ಶಕ್ನೋತೀತಿ ಭಾವಃ । ಇತೋಽಪಿ ಸ್ತುತ್ಯಾದೇರವಿಷಯ ಇತ್ಯಾಹ ಯಸ್ಮಾದಯಮಿಂದ್ರಃ ಶಚೀಭಿರಾತ್ಮೀಯಾಭಿಃ ಪ್ರಜ್ಞಾಭಿಃ ಪೂರ್ವಂ ಪ್ರಥಮಭಾವಿನಂ ಸಂತಂ ಸ್ತೋತಾರಮಪರಂ ಪಶ್ಚಾದ್ಭಾವಿನಂ ಚಾನ್ಯಮನ್ಯಂ ಪರಸ್ಪರವ್ಯತಿಹಾರೇಣ ಕೃಣೋತಿ ಕರೋತಿ । ಯಃ ಪ್ರಥಮಭಾವೀ ಮುಖ್ಯಃ ಸ್ತೋತಾ ತಂ ಜಘನ್ಯಂ ಕರೋತಿ ಯಶ್ಚ ಜಘನ್ಯಃ ಸ್ತೋತಾ ತಂ ಮುಖ್ಯಂ ಕರೋತಿ । ತತ್ರ ದೃಷ್ಟಾಂತಃ । ಪ್ರಹರನ್ ಪಾದಾವಿವ । ಯಥಾ ಪಾದೌ ಪ್ರಹರನ್ ಮಾರ್ಗೇ ಪ್ರಕ್ಷಿಪನ್ ಪುರುಷಃ ಪೂರ್ವಂ ಪಾದಮಪರಂ ಕರೋತ್ಯಪರಂ ಚ ಪೂರ್ವಂ ತದ್ವತ್ । ಅತೋಽಪಿ ಕಾರಣಾದಿಂದ್ರಃ ಸ್ತುತ್ಯಾದೇರವಿಷಯ ಇತಿ ಭಾವಃ । ಏತದಾದಿಕೇನ ಪಂಚರ್ಚೇನೇಂದ್ರಸ್ಯಾತಿಸ್ವಾತಂತ್ರ್ಯಂ ಪ್ರತಿಪಾದ್ಯತೇ ॥

॥ ಪ್ರತಿಪದಾರ್ಥ ॥

**ಕಃ**—ಯಾವ ಸ್ತೋತೃವು । **ಈಂ**— ಈ ಇಂದ್ರನನ್ನು । **ಸ್ತವತ್**— ತೃಪ್ತಿಕರವಾಗಿ ಸ್ತುತಿಸಬಲ್ಲನು । **ಕಃ**—ಯಾವ ಪೂಜಕನು । **ಸ್ಪೃಣಾತ್**—ಇವನನ್ನು ಸಂತೋಷಗೊಳಿಸಬಲ್ಲನು । **ಕಃ**—ಯಾವ ಯಜಮಾನನು । **ಯಜಾತೇ**—ತೃಪ್ತಿಕರವಾದ ಹವಿಸ್ಸುಗಳಿಂದ ಪೂಜಿಸಬಲ್ಲನು । **ಯತ್**— ಏತಕ್ಕೆಂದರೆ । **ಮಘವಾ**—ಧನವಂತನಾದ ಇಂದ್ರನು । **ಉಗ್ರಮಿತ್**—ತಾನೇ ಅತ್ಯಧಿಕವಾದ ಬಲವುಳ್ಳವನೆಂದು । **ವಿಶ್ವಹಾ**—ಯಾವಾಗಲೂ । **ಅವೇತ್**—ತಿಳಿದುಕೊಂಡಿದ್ದಾನೆ । **ಪ್ರಹರನ್**—ಮಾರ್ಗಗಾಮಿಯಾದ ಪುರುಷನು । **ಪಾದಾವಿವ**—ತನ್ನ ಪಾದಗಳನ್ನು ಒಂದಾದ ಮೇಲೆ ಮತ್ತೊಂದನ್ನು ಪರ್ಯಾಯರೂಪದಲ್ಲಿಡುವಂತೆ । **ಅಯಂ**— ಈ ಇಂದ್ರನು । **ಶಚೀಭಿಃ**—ತನ್ನ ಪ್ರಜ್ಞೆಗಳಿಂದ । **ಪೂರ್ವಂ**—ಪ್ರಥಮತಃ ಒಂದು ಕಾರ್ಯವನ್ನು । **ಅಪರಂ**—ಅನಂತರ । **ಅನ್ಯಂ ಅನ್ಯಂ**—ಬೇರೆಬೇರೆ ಇತರ ಕಾರ್ಯಗಳನ್ನೂ (ಪರ್ಯಾಯ ರೂಪದಲ್ಲಿ) । **ಕೃಣೋತಿ**—ಮಾಡುತ್ತಾನೆ.

॥ ಭಾವಾರ್ಥ ॥

ಈ ಇಂದ್ರನು ಯಾವಾಗಲೂ ತಾನೇ ಅತ್ಯಧಿಕವಾದ ಬಲವುಳ್ಳವನೆಂದು ತಿಳಿದಿರುತ್ತಾನೆ. ಈ ಇಂದ್ರನನ್ನು ಯಾವ ಸ್ತೋತೃವು ತೃಪ್ತಿಕರವಾಗಿ ಸ್ತುತಿಸಬಲ್ಲನು ? ಯಾವ ಪೂಜಕನು ಇವನನ್ನು ಸಂತೋಷಗೊಳಿಸಬಲ್ಲನು ? ಯಾವ ಯಜಮಾನನು ತೃಪ್ತಿಕರವಾದ ಹವಿಸ್ಸಿನಿಂದ ಇವನನ್ನು ಪೂಜಿಸಬಲ್ಲನು ? (ಇವೆಲ್ಲ ಸಾಧಾರಣ ಕೆಲಸಗಳಲ್ಲ) ಮಾರ್ಗದಲ್ಲಿ ಸಂಚರಿಸುವ ಪುರುಷನು ತನ್ನ ಪಾದಗಳನ್ನು ಒಂದಾದಮೇಲೆ ಮತ್ತೊಂದನ್ನು ಬದಲಾಯಿಸಿ ಇಡುವಂತೆ ಈ ಇಂದ್ರನು ತನ್ನ ಪ್ರಜ್ಞೆಗಳಿಂದ ಪ್ರಥಮತಃ ಒಂದು ಕಾರ್ಯವನ್ನೂ ಅನಂತರ ಬೇರೆ ಕಾರ್ಯವನ್ನೂ ಹೀಗೆ ಪರ್ಯಾಯ ರೂಪವನ್ನು ಮಾಡುತ್ತಾನೆ. ಹಿಂದಿನ ಕಾರ್ಯವು ಮುಂದಿರುವಂತೆಯೂ ಕಾಣಬಹುದು. ಅದೇ ಪೂರ್ವಭಾವಿಯಾಗಿರುವಂತೆ ಇನ್ನೊಂದುಸಲ ಕಾಣಿಸುತ್ತದೆ. ಇವೆಲ್ಲವೂ ಇಂದ್ರನ ಮಹಿಮೆಯು.

English Translation.

Who may (adequately) praise him ? who may satisfy him ? who offer worthy adoration ? since Maghavas is daily conscious of his own terrible (power) : by his acts he makes first one and then the other precede and follow, as (a man) throws out his feet (alternately in walking).

॥ ಸಂಹಿತಾಪಾಠಃ ॥

ಶೃಣ್ವೇ ವೀರ ಉಗ್ರಮುಗ್ರಂ ದಮಾಯನ್ನನ್ಯಮನ್ಯಮತಿನೇನೀಯಮಾನಃ ।
ಏಧಮಾನದ್ವಿಳುಭಯಸ್ಯ ರಾಜಾ ಚೋಷ್ಕೂಯತೇ ವಿಶ ಇಂದ್ರೋ ಮನುಷ್ಯಾನ್ ॥ ೧೬ ॥

॥ ಪದಪಾಠಃ ॥

ಶೃಣ್ವೇ । ವೀರಃ । ಉಗ್ರಂಽಉಗ್ರಂ । ದಮಾಽಯನ್ । ಅನ್ಯಂಽಅನ್ಯಂ । ಅತಿಽನೇನೀಯಮಾನಃ ।
ಏಧಮಾನಽದ್ವಿಟ್ । ಉಭಯಸ್ಯ । ರಾಜಾ । ಚೋಷ್ಕೂಯತೇ । ವಿಶಃ । ಇಂದ್ರಃ । ಮನುಷ್ಯಾನ್ ||೧೬||

**॥ ಸಾಯಣಭಾಷ್ಯಂ ॥**

**ಅಯಮಿಂದ್ರೋ ವೀರೋ ವೀರ್ಯವಾನಿತಿ ಶೃಣ್ವೇ । ಶ್ರೂಯತೇ । ಕಿಂ ಕುರ್ವನ್ । ಉಗ್ರಮುಗ್ರಮುದ್ಗೂರ್ಣಮುದ್ಗೂರ್ಣಂ ಬಲಿನಂ ಶತ್ರುಂ ಪ್ರತಿ ದಮಾಯನ್ । ದಮುಃ ದಮನಂ । ಬಾಧನಮಿಚ್ಛನ್ । ಅನ್ಯಮನ್ಯಂ ಪ್ರಥಮಂ ನೇತವ್ಯಮನ್ಯಂ ಪಶ್ಚಾನ್ನೇತವ್ಯಂ ಚಾನ್ಯಂ ಪೂರ್ವಮಪರಂ ಪರಸ್ಪರವ್ಯತಿಹಾರೇಣ ಸ್ತೋತೄನತಿನೇನೀಯಮಾನೋಽತ್ಯಂತಂ ಪುನಃ ಪುನರ್ನಯನ್ । ಅಪಿ ಚೈಧಮಾನದ್ವಿಟ್ ಏಧಮಾನಾನಾಂ ವರ್ಧಮಾನಾನಾಮಸುನ್ವತಾಂ ದ್ವೇಷ್ಟೋಭಯಸ್ಯ ದಿವ್ಯಸ್ಯ ಪಾರ್ಥಿವಸ್ಯ ಚ ಧನಸ್ಯ ರಾಜೇಶ್ವರೋಽಯಮಿಂದ್ರೋ ವಿಶೋ ನಿವೇಶಯಿತ್ರ್ಯಾನ್ ಸ್ವಸ್ಯ ಪರಿಚಾರಕಾನ್ಮನುಷ್ಯಾನ್ ಚೋಷ್ಕೂಯತೇ । ರಕ್ಷಣಾರ್ಥಂ ಪುನಃ ಪುನರಾಹ್ವಯತಿ ॥**

**॥ ಪ್ರತಿಪದಾರ್ಥ ॥**

**ಉಗ್ರಮುಗ್ರಂ**—ಅತ್ಯಂತ ಭಯಂಕರವಾದ ಶಕ್ತಿಯುಳ್ಳ ಶತ್ರುವನ್ನೂ ಸಹ । **ದಮಯನ್**—ಹಿಂಸಿಸುತ್ತಲೂ । **ಅನ್ಯಮನ್ಯಂ**—ಬೇರೆ ಜೇರೆ ಸ್ತೋತೃಗಳನ್ನು । **ಅತಿನೇನೀಯಮಾನಃ**—ಪರ್ಯಾಯರೂಪದಲ್ಲಿ ಹಿಂದುಮುಂದಾಗಿ ಇರಿಸುತ್ತಲೂ ಇರುವ ಇಂದ್ರನು । **ವೀರಃ**—ಪರಾಕ್ರಮಿಯೆಂದು । **ಶೃಣ್ವೇ**—ಪ್ರಸಿದ್ಧನಾಗಿದ್ದಾನೆ । **ಏಧಮಾನದ್ವಿಟ್**—ಅಹಂಕಾರದಿಂದ ಮೆರೆಯುವ ಧನಿಕರನ್ನು ದ್ವೇಷಿಸುವವನೂ । **ಉಭಯಸ್ಯ**—ದ್ಯಾವಾಪೃಥಿವಿಗಳೆರಡಕ್ಕೂ । **ರಾಜಾ**—ಪ್ರಭುವಾದವನೂ ಆದ । **ಇಂದ್ರಃ**—ಇಂದ್ರನು । **ವಿಶಃ ಮನುಷ್ಯಾನ್**—ತನ್ನ ಸ್ತೋತೃಜನರನ್ನು । **ಚೋಷ್ಕೂಯತೇ**—ರಕ್ಷಣಾರ್ಥವಾಗಿ ಪುನಃ ಪುನಃ ಕರೆಯುತ್ತಾನೆ.

**॥ ಭಾವಾರ್ಥ ॥**

ಅತ್ಯಂತ ಭಯಂಕರವಾದ ಶಕ್ತಿಯುಳ್ಳ ಶತ್ರುವನ್ನೂ ಸಹ ಹಿಂಸಿಸುತ್ತಲೂ ಬೇರೆ ಬೇರೆ ಸ್ತೋತೃಗಳನ್ನು ಪರ್ಯಾಯರೂಪದಲ್ಲಿ ಹಿಂದುಮುಂದಾಗಿ ಇರಿಸುತ್ತಲೂ ಇರುವ ಇಂದ್ರನು ಪರಾಕ್ರಮಿಯೆಂದು ಪ್ರಸಿದ್ಧನಾಗಿದ್ದಾನೆ. ಅಹಂಕಾರದಿಂದ ಮೆರೆಯುವ ಧನಿಕರನ್ನು ದ್ವೇಷಿಸುವವನೂ, ದ್ಯಾವಾಪೃಥಿನಿಗಳೆರಡಕ್ಕೂ ಪ್ರಭುವೂ ಆದ ಇಂದ್ರನು ತನ್ನ ಸ್ತೋತೃಜನರನ್ನು ಪುನಃ ಪುನಃ ಕರೆದು ಅವರಿಗೆ ಉತ್ತೇಜನವನ್ನೂ ರಕ್ಷಣೆಯನ್ನೂ ನೀಡುತ್ತಾನೆ.

## English Translation.

The hero Indra is renowned ; humiliating every formidable (foe), and rapeatedly changing the place of one (worshiper) with that of another ; Indra, the enemy of the arrogant, the sovereign of both (heaven and earth), calls again and again (to encourage) the men who are his worshippers.

|| ವಿಶೇಷವಿಷಯಗಳು ||

ಈ ಋಕ್ಕಿನಲ್ಲಿರುವ **ಚೋಷ್ಕೂಯತೇ** ಎಂಬ ಶಬ್ದವನ್ನು ವಿವರಿಸುತ್ತಾ ಯಾಸ್ಕರು ಈ ಋಕ್ಕಿನ ಉತ್ತರಾರ್ಧಕ್ಕೆ ನಿರ್ವಚನವನ್ನು ಹೇಳಿದ್ದಾರೆ—

> **ಚೋಷ್ಕೂಯಮಾಣಃ । ಚೋಷ್ಕೂಯತೇ । ಚೋಷ್ಕೂಯಮಾಣ ಇಂದ್ರ ಭೂರಿ ವಾಮಂ । ದದದಿಂದ್ರ ಬಹು ವನನೀಯಂ ವಿಭಮಾನಸ್ತ್ವಿಳುಭಯಸ್ಯ ರಾಜಾ ಚೋಷ್ಕೂಯತೇ ವಿಶ ಇಂದ್ರೋ ಮನುಷ್ಯಾನ್ ॥ ವ್ಯುದಸ್ಯತ್ಯೇಧಮಾನಾನಹರ್ವ್ವೇಷ್ಯ್ಯಸುನ್ವತಃ ಸುನ್ವತೋಽಭ್ಯಾದಧಾತ್ಯುಭಯಸ್ಯ ರಾಜಾ ದಿವ್ಯಸ್ಯ ಚ ಪಾರ್ಥಿವಸ್ಯ ಚ ಚೋಷ್ಕೂಯಮಾಣ ಇತಿ । ಚೋಷ್ಕೂಯತೇಶ್ಚರ್ಕರೀತವೃತ್ತಂ ॥** (ನಿ. ೬–೨೨)

**ಚೋಷ್ಕೂಯಮಾಣಃ** ಮತ್ತು **ಚೋಷ್ಕೂಯತೇ** ಎಂಬ ಎರಡು ಶಬ್ದಗಳೂ ಪರ್ಯಾಯ ಪದಗಳು ಎಂದರೆ ಎರಡು ಶಬ್ದಗಳಿಗೂ ಒಂದೇ ವಿಧವಾದ ಅರ್ಥವಿರುವುದು. **ಚೋಷ್ಕೂಯಮಾಣ ಇಂದ್ರ ಭೂರಿ ವಾಮಂ** ಎಂಬ ಶ್ರುತಿವಾಕ್ಯಕ್ಕೆ **ದದದಿಂದ್ರ** ಬಹು **ವನನೀಯಂ**—ಇಂದ್ರನು ಬಹಳವಾಗಿ ಅಪೇಕ್ಷಿಸಲ್ಪಡುವ ಧನವನ್ನು ಕೊಡುವನು ಎಂದರ್ಥವು. ಇಂದ್ರನು ಸೋಮಾಭಿಷವವನ್ನು ಮಾಡದಿರುವ ಎಂದರೆ ಯಜ್ಞಮಾಡದಿರುವ ಮತ್ತು ಅಹಂಕಾರದಿಂದ ಮೆರೆಯುವ ದುಷ್ಟಜನರನ್ನು ಹಿಂಸಿಸಿ (ಚದುರಿಸಿ) ಓಡಿಸುತ್ತಾನೆ. ಸೋಮಾಭಿಷವವನ್ನು ಮಾಡಿ ಯಜ್ಞಮಾಡುವ ಸಜ್ಜನರನ್ನು ರಕ್ಷಣಾರ್ಥವಾಗಿ ಆಹ್ವಾನ ಮಾಡುತ್ತಾನೆ. ಎಂದರೆ ಅವರನ್ನು ರಕ್ಷಿಸುತ್ತಾನೆ. ಇಂದ್ರನು ದ್ಯುಲೋಕಕ್ಕೂ (ಸ್ವರ್ಗಕ್ಕೂ) ಪೃಥಿವಿಗೂ ಎರಡು ಲೋಕಗಳಿಗೂ ರಾಜನು (ಪ್ರಭುವು) ಎಂದು ನಿರ್ವಚನದ ಮುಖ್ಯಾಭಿಪ್ರಾಯವು.

|| ಸಂಹಿತಾಪಾಠಃ ||

**ಪರಾ ಪೂರ್ವೇಷಾಂ ಸಖ್ಯಾ ವೃಣಕ್ತಿ ವಿತರ್ತುರಾಣೋ ಅಪರೇಭಿರೇತಿ ।**
**ಅನಾನುಭೂತೀರವಧೂನ್ವಾನಃ ಪೂರ್ವೀರಿಂದ್ರಃ ಶರದಸ್ತರ್ತರೀತಿ ॥ ೧೭ ॥**

|| ಪದಪಾಠಃ ||

**ಪರಾ । ಪೂರ್ವೇಷಾಂ । ಸಖ್ಯಾ । ವೃಣಕ್ತಿ । ವಿऽತರ್ತುರಾಣಃ । ಅಪರೇಭಿಃ । ಏತಿ ।**
**ಅನನುऽಭೂತೀಃ । ಅವऽಧೂನ್ವಾನಃ । ಪೂರ್ವೀಃ । ಇಂದ್ರಃ । ಶರದಃ । ತರ್ತರೀತಿ ॥ ೧೭ ॥**

|| ಸಾಯಣಭಾಷ್ಯಂ ||

**ಅಯಮಿಂದ್ರಃ ಪೂರ್ವೇಷಾಂ ಪೂರ್ವಭಾವಿನಾಂ ಪ್ರಶಸ್ತಾನಾಂ ಕರ್ಮಣಾಂ ಕುರ್ವತಾಂ ಪುರುಷಾಣಾಂ ಸಖ್ಯಾ ಸಖಿತ್ವಾನಿ ಪರಾ ವೃಣಕ್ತಿ। ವರ್ಜಯತಿ। ಅಪಿ ಚ ವಿತರ್ತುರಾಣಸ್ತಾನ್ ಹಿಂಸನ್ ಅಪರೇಭಿರಪರೈರಮುಖ್ಯೈರಪ್ರಶಸ್ತೈರಪಿ ಕರ್ಮಾನುಷ್ಠಾತೃಭಿರೇತಿ। ಸಖ್ಯಂ ಪ್ರಾಪ್ನೋತಿ।**

**ತಥಾನಾನುಭೂತೀರಪರಿಚರಣಾಃ ಪ್ರಜಾ ಅವಧೂನ್ವಾನಃ ಪರಿತ್ಯಜನ್ ಪೂರ್ವೀರ್ಬಹ್ವೀಃ ಶರದಃ ಸಂವತ್ಸರಾನಯಮಿಂದ್ರಸ್ತರ್ತರೀತಿ । ಭೃಶಮತಿಕ್ರಾಮತಿ । ಸ್ತೋತೃಭಿಃ ಸಹ ಸಖ್ಯಂ ಕುರ್ವನ್ ಚಿರಕಾಲಂ ವಸತೀತ್ಯರ್ಥಃ ॥**

॥ ಪ್ರತಿಪದಾರ್ಥ ॥

(ಇಂದ್ರಃ— ಇಂದ್ರನು) । **ಪೂರ್ವೇಷಾಂ**— ಪ್ರಥಮತಃ ಉತ್ತಮವಾದ ಕರ್ಮಗಳನ್ನು ನಿರವೇರಿಸಿದ ಪುರುಷರ । **ಸಖ್ಯಾ**— ಸ್ನೇಹವನ್ನು । **ಪರಾ ವೃಣಕ್ತಿ**— ತ್ಯಜಿಸುತ್ತಾನೆ । **ವಿತರ್ತುರಾಣಃ**— ಅವರನ್ನು ಹಿಂಸಿಸುತ್ತಾ । **ಅಪರೇಭಿಃ**— ಅವರಿಗಿಂತಲೂ ನಿಕೃಷ್ಟರಾದವರೊಂದಿಗೆ । **ಏತಿ**— ಸಖಿತ್ವವನ್ನು ಹೊಂದುತ್ತಾನೆ. **ಅನಾನುಭೂತೀಃ**— ತನ್ನನ್ನು ಪೂಜಿಸದಿರುವವರನ್ನು । **ಅವಧೂನ್ವಾನಃ**— ಪರಿತ್ಯಜಿಸುತ್ತಾ । **ಪೂರ್ವೀಃ**— ಅನೇಕವಾದ । **ಶರದಃ**— ಸಂವತ್ಸರಗಳನ್ನು । **ಇಂದ್ರಃ**— ಇಂದ್ರನು । **ತರ್ತರೀತಿ**— (ತನ್ನ ಸ್ತೋತೃಗಳೊಡನೆ) ಕಾಲವನ್ನು ಕಳೆಯುತ್ತಾನೆ.

॥ ಭಾವಾರ್ಥ ॥

ಇಂದ್ರನು ಪ್ರಥಮತಃ ಉತ್ತಮವಾದ ಕರ್ಮಗಳನ್ನು ನೆರವೇರಿಸಿದ ಪುರುಷರ ಸ್ನೇಹವನ್ನು ತ್ಯಜಿಸುತ್ತಾನೆ. ಅನಂತರ ಅವರನ್ನು ಹಿಂಸಿಸುತ್ತಾ ಅವರಿಗಿಂತಲೂ ನಿಕೃಷ್ಟರಾದವರೊಂದಿಗೆ ಸಖಿತ್ವವನ್ನು ಬೆಳೆಸುತ್ತಾನೆ. ಪುನಃ, ತನ್ನನ್ನು ಪೂಜಿಸದಿರುವವರನ್ನು ಪರಿತ್ಯಜಿಸಿ ಇಂದ್ರನು ಅನೇಕ ಸಂವತ್ಸರಗಳ ಕಾಲ ತನ್ನ ಸ್ತೋತೃಗಳೊಡನೆ ಕಾಲವನ್ನು ಕಳೆಯುತ್ತಾನೆ.

English Translation.

Indra rejects the friendship of those who are foremost (in pious acts), and, despoiling them, associates with (their) inferiors : or (again) shaking off those who neglect his worship, Indra abides many years with those who serve him.

॥ ಸಂಹಿತಾಪಾಠಃ ॥

ರೂಪಂರೂಪಂ ಪ್ರತಿರೂಪೋ ಬಭೂವ ತದಸ್ಯ ರೂಪಂ ಪ್ರತಿಚಕ್ಷಣಾಯ ।
ಇಂದ್ರೋ ಮಾಯಾಭಿಃ ಪುರುರೂಪ ಈಯತೇ ಯುಕ್ತಾಹ್ಯಸ್ಯ ಹರಯಃ
ಶತಾ ದಶ ॥ ೧೮ ॥

॥ ಪದಪಾಠಃ ॥

ರೂಪಂऽರೂಪಂ । ಪ್ರತಿऽರೂಪಃ । ಬಭೂವ । ತತ್ । ಅಸ್ಯ । ರೂಪಂ । ಪ್ರತಿऽಚಕ್ಷಣಾಯ ।
ಇಂದ್ರಃ । ಮಾಯಾಭಿಃ । ಪುರುऽರೂಪಃ । ಈಯತೇ । ಯುಕ್ತಾಃ । ಹಿ । ಅಸ್ಯ । ಹರಯಃ । ಶತಾ ।
ದಶ ॥ ೧೮ ॥

॥ ಸಾಯಣಭಾಷ್ಯಂ ॥

ಅಯಮಿಂದ್ರಃ ಪ್ರತಿರೂಪೋ ರೂಪಾಣಾಂ ಪ್ರತಿನಿಧಿಃ ಸನ್ ರೂಪಂ ರೂಪಂ ತತ್ತದಗ್ನ್ಯಾದಿದೇವತಾಸ್ವರೂಪಂ ಬಭೂವ । ಪ್ರಾಪ್ನೋತಿ ॥ ಭೂ ಪ್ರಾಪ್ತಾವಿತಿ ಧಾತುಃ ॥ ಇಂದ್ರಃ ಸ್ವಮಾಹಾತ್ಮ್ಯೇನ ತತ್ತದ್ದೇವತಾರೂಪೋ ಭವತೀತ್ಯರ್ಥಃ । ಅಸ್ಯ ಚೇಂದ್ರಸ್ಯ ತತ್ಪ್ರಾಪ್ತಮಗ್ನ್ಯಾದಿದೇವತಾಸ್ವರೂಪಂ ಪ್ರತಿಚಕ್ಷಣಾಯ ಪ್ರತಿನಿಯತದರ್ಶನಾಯಾಯಮಗ್ನಿರಯಂ ವಿಷ್ಣುರಯಂ ರುದ್ರ ಇತ್ಯೇವಮಸಂಕೀರ್ಣದರ್ಶನಾಯ ಭವತಿ । ಅಪಿ ಚಾಯಮಿಂದ್ರೋ ಮಾಯಾಭಿಃ ॥ ಜ್ಞಾನನಾಮೈತತ್ ॥ ಜ್ಞಾನೈರಾತ್ಮೀಯೈಃ ಸಂಕಲ್ಪೈಃ ಪುರುರೂಪೋ ಬಹುವಿಧಶರೀರಃ ಸನ್ ಈಯತೇ । ಬಹೂನ್ಯಜಮಾನಾನ್ ಗಚ್ಛತಿ । ನನು ದ್ವಾವೇವಾಸ್ಯಾಶ್ವಾವೇಕಶ್ಚ ರಥಃ ಕಥಮನೇನ ಯುಗಪದ್ಬಹೂನ್ ಗಚ್ಛತೀತ್ಯತ ಆಹ । ಅಸ್ಯೇಂದ್ರಸ್ಯ ಹರಯೋಽಶ್ವಾ ಯುಕ್ತಾ ರಥೇ ಯೋಜಿತಾಃ ಶತಾ ದಶ ಸಹಸ್ರಸಂಖ್ಯಾಕಾ ಅಪರಿಮಿತಾಃ ಸಂತಿ । ಹಿ ಯಸ್ಮಾದೇವಂ ತಸ್ಮಾದ್ಬಹುಶರೀರಾಣಿ ಸ್ವೀಕೃತ್ಯ ಯುಗಪದ್ವಿಶ್ವತೋ ಯಜಮಾನಾನ್ ಗಚ್ಛತೀತ್ಯರ್ಥಃ ॥ ಅನ್ಯೇ ಮನ್ಯಂತೇ । ಇದಿ ಪರಮೈಶ್ವರ್ಯೇ ಇತ್ಯಸ್ಯ ಧಾತೋರರ್ಥಾನುಗಮಾದಿಂದ್ರಃ ಪರಮಾತ್ಮಾ । ಸ ಚಾಕಾಶವತ್ಸರ್ವಗತಃ ಸದಾನಂದರೂಪಃ । ಸ ಏವೋಪಾಧಿಭಿರಂತಃಕರಣೈಃ ಪ್ರತಿಶರೀರಮವಚ್ಛಿನ್ನಃ ಸನ್ ಜೀವಾತ್ಮೇತಿ ವ್ಯಪದಿಶ್ಯತೇ । ಸ ಏವಾನಾದಿಮಾಯಾಶಕ್ತಿಭಿರ್ವಿಯದಾದಿಜಗದಾತ್ಮನಾ ವಿವರ್ತತೇ ಶಬ್ದಾದಿವಿಷಯಹರಣಶೀಲಾ ಇಂದ್ರಿಯವೃತ್ತಯಶ್ಚ ತೇನೈವ ಸಂಬದ್ಧಾಃ । ಏತತ್ಸರ್ವಂ ತಸ್ಯ ಪರಮಾತ್ಮನೋ ಯದ್ವಾಸ್ತವಂ ರೂಪಂ ತಸ್ಯ ದರ್ಶನಾಯೇತಿ । ಅಯಮರ್ಥೋಽನಯಾ ಪ್ರತಿಪಾದ್ಯತೇ । ರೂಪಂ ರೂಪಂ । ರೂಪ್ಯತ ಇತಿ ರೂಪಂ ಶರೀರಾದಿ । ಪ್ರತಿಶರೀರಂ ಚಿದ್ರೂಪಃ ಸರ್ವಗತಃ ಪರಮಾತ್ಮಾ ಪ್ರತಿರೂಪಃ ಪ್ರತಿಬಿಂಬರೂಪಃ ಸನ್ ಸರ್ವಾಣಿ ಶರೀರಾಣಿ ಬಭೂವ । ಪ್ರಾಪ್ನೋತ್ । ತಚ್ಚ ಪ್ರಾಪ್ತಂ ಪ್ರತಿಬಿಂಬರೂಪಮಸ್ಯ ಪರಮಾತ್ಮನಃ ಪ್ರತಿಚಕ್ಷಣಾಯ ಪ್ರತಿನಿಯತಾಕಾರಸ್ಯ ದರ್ಶನಾಯ ಭವತಿ । ಸ ಚೇಂದ್ರಃ ಪರಮೇಶ್ವರೋ ಮಾಯಾಭಿರ್ಮಾಯಾಶಕ್ತಿಭಿಃ ಪುರುರೂಪೋ ವಿಯದಾದಿಭಿರ್ಬಹುವಿಧರೂಪೈರುಪೇತಃ ಸನ್ ಈಯತೇ । ಚೇಷ್ಟತೇ । ಏತದಪ್ಯಸ್ಯ ಪರಮಾತ್ಮನಃ ಪ್ರತಿಚಕ್ಷಣಾಯ ಭವತಿ । ಅಸ್ಯ ಚ ದಶ ಶತಾ ಸಹಸ್ರಸಂಖ್ಯಾಕಾ ಹರಯ ಇಂದ್ರಿಯವೃತ್ತಯ ಯುಕ್ತಾ ವಿಷಯಗ್ರಹಣಾಯೋದ್ಯುಕ್ತಾಃ ಸಂತಿ । ತದಪ್ಯಸ್ಯ ವಾಸ್ತವರೂಪಸ್ಯ ದರ್ಶನಾಯ ಭವತೀತಿ । ಏವಂ ಸ್ಥೂಲಸೂಕ್ಷ್ಮಶರೀರಯೋರ್ವಿಯದಾದಿಮಹಾಪ್ರಪಂಚಸ್ಯ ಚ ತತ್ತ್ವಜ್ಞಾನಹೇತುತ್ವಮನಯಾ ಪ್ರತ್ಯಪಾದೀತಿ ॥

॥ ಪ್ರತಿಪದಾರ್ಥ ॥

(ಇಂದ್ರಃ—ಇಂದ್ರನು) । **ಪ್ರತಿರೂಪಃ**—ಅಗ್ನ್ಯಾದ್ಯನೇಕರೂಪಗಳಿಗೆಲ್ಲಾ ತಾನೇ ಪ್ರತಿನಿಧಿಯಾಗಿ । **ರೂಪಂ ರೂಪಂ**—ಅಗ್ನ್ಯಾದ್ಯನೇಕ ರೂಪಾಂತರಗಳನ್ನು ಹೊಂದಿದವನಾಗಿ । **ಬಭೂವ**—ಪರಿವರ್ತನವನ್ನು ಹೊಂದಿದ್ದಾನೆ । **ಅಸ್ಯ**—ಇಂದ್ರನಿಗೆ । **ತತ್ ರೂಪಂ**—ಆಯಾ ವೈಯಕ್ತಿಕವಾದ ಅಗ್ನ್ಯಾದಿ ಸ್ವರೂಪವು । **ಪ್ರತಿಭಕ್ಷಣಾಯ**—ಅಗ್ನ್ಯಾದ್ಯನೇಕ ರೂಪಗಳಲ್ಲಿ ಲೋಕಕ್ಕೆ ಗೋಚರವಾಗಲು (ಸಾಧನವಾಗಿದೆ) । **ಇಂದ್ರಃ**—ಇಂದ್ರನು । **ಮಾಯಾಭಿಃ**—ತನ್ನ ಅನಂತಶಕ್ತಿಗಳಿಂದ । **ಪುರುರೂಪಃ**—ಅಗ್ನಿ, ವಿಷ್ಣು, ರುದ್ರ ಇತ್ಯಾದ್ಯನೇಕ

ರೂಪಗಳನ್ನು ಹೊಂದಿ | **ಈಯತೇ**—ಯಜಮಾನನಲ್ಲಿಗೆ ಹೋಗುತ್ತಾನೆ | **ಅಸ್ಯ**—ಈ ಇಂದ್ರನ | **ಹರಯಃ**—ಅಶ್ವಗಳು | **ಶತಾ ದಶ**—ಸಾವಿರ ಸಂಖ್ಯೆಗಳುಳ್ಳವಾಗಿ | **ಯುಕ್ತಾ ಹಿ**—ರಥಕ್ಕೆ ಯೋಜಿತವಾಗಿವೆಯಲ್ಲವೇ ?

॥ ಭಾವಾರ್ಥ ॥

ಇಂದ್ರನು ಅಗ್ನ್ಯಾದ್ಯನೇಕ ರೂಪಾಂತರಗಳನ್ನು ತನ್ನ ಇಷ್ಟಾನುಸಾರವಾಗಿ ಹೊಂದುತ್ತಾನೆ. ಈ ಇಂದ್ರನಿಗೆ ಆಯಾ ವೈಯಕ್ತಿಕವಾದ ಅಗ್ನ್ಯಾದಿಸ್ವರೂಪವು ಅಗ್ನ್ಯಾದ್ಯನೇಕರೂಪಗಳಲ್ಲಿ ಲೋಕಕ್ಕೆಲ್ಲಾ ಗೋಚರವಾಗಲು ಸಾಧನವಾಗಿದೆ. ಇಂದ್ರನು ತನ್ನ ಅನಂತಶಕ್ತಿಗಳಿಂದ ಅಗ್ನಿ, ವಿಷ್ಣು, ರುದ್ರ ಇತ್ಯಾದ್ಯನೇಕ ರೂಪಗಳನ್ನು ಹೊಂದಿ ಯಜಮಾನನಲ್ಲಿಗೆ ಹೋಗುತ್ತಾನೆ. ಈ ಇಂದ್ರನ ಅಶ್ವಗಳು ಸಾವಿರಸಂಖ್ಯೆಯುಳ್ಳವಾಗಿ ರಥಕ್ಕೆ ಯೋಜಿತವಾಗಿವೆಯಲ್ಲವೆ ?

## English Translation.

Indra, the prototype, has assumed various forms, and such is his form as that which (he adopts) for his manifestation : Indra, maltiform by his illusions, proeeeds (to his many worshippers), for the horses yoked to his car are a thousand.

॥ ವಿಶೇಷವಿಷಯಗಳು ॥

ಈ ಋಕ್ಕಿನಲ್ಲಿ ಇಂದ್ರನ ಮಾಹಾತ್ಮ್ಯವನ್ನೂ ಅವನ ನಾನಾವಿಧವಾದ ಶಕ್ತಿಸಾಮರ್ಥ್ಯಗಳನ್ನೂ ವರ್ಣಿಸಲಾಗಿದೆ. ಈ ಋಕ್ಕಿಗೆ ಭಾಷ್ಯಕಾರರು ಎರಡು ವಿಧವಾದ ಅರ್ಥವನ್ನು ಹೇಳಿರುವರು. ಇಂದ್ರನ ಶಕ್ತ್ಯತಿಶಯವನ್ನು ವರ್ಣಿಸುವ ಅರ್ಥವೊಂದನ್ನೂ, ಇಂದ್ರನೇ ಪರಬ್ರಹ್ಮನೆಂಬ ಆಧ್ಯಾತ್ಮಿಕಾರ್ಥವನ್ನು ವಿವರಿಸುವ ಮತ್ತೊಂದು ವಿವರಣೆಯನ್ನೂ ಕೊಟ್ಟಿರುವರು. ಇವೆರಡನ್ನೂ ಪ್ರತ್ಯೇಕವಾಗಿ ವಿವರಿಸುವೆವು.

(೧) ಇಂದ್ರನ ಶಕ್ತಿಸಾಮರ್ಥ್ಯಗಳನ್ನು ವಿವರಿಸುವ ಅರ್ಥವು.

**ಅಯಮಿಂದ್ರಃ ಪ್ರತಿರೂಪಃ ರೂಪಂರೂಪಂ ಬಭೂವ—ಇಂದ್ರಃ ರೂಪಾಣಾಂ ಪ್ರತಿನಿಧಿಃ ಸನ್ ತತ್ತದಗ್ನ್ಯಾದಿದೇವತಾಸ್ವರೂಪಂ ಪ್ರಾಪ್ನೋತಿ** | ಇಂದ್ರನು ತನ್ನ ಶಕ್ತಿಸಾಮರ್ಥ್ಯಗಳಿಂದ ಅನೇಕ ರೂಪಗಳನ್ನು ಹೊಂದಬಲ್ಲನು. ಅಗ್ನಿ, ವಾಯು ಮೊದಲಾದ ಇತರ ದೇವತೆಗಳ ರೂಪವನ್ನೂ ಹೊಂದಿ ಆ ದೇವತೆಗಳ ಕಾರ್ಯಗಳನ್ನು ನಿರ್ವಹಿಸಬಲ್ಲನು. ಅಷ್ಟೇ ಅಲ್ಲ, ಅಗ್ನ್ಯಾದಿದೇವತೆಗಳು ಇಂದ್ರನ ಅಂಶಗಳು ಅಥವಾ ರೂಪಾಂತರಗಳೇ ಆಗಿವೆ ಎಂದು ಮುಖ್ಯಾಭಿಪ್ರಾಯವು.

**ಅಸ್ಯ ತತ್ ರೂಪಂ ಪ್ರತಿಚಕ್ಷಣಾಯ**—ಇವನು ಅಗ್ನಿಯು, ಇವನು ವಾಯುವು ಇತ್ಯಾದಿ ನಾನಾ ದೇವತೆಗಳನ್ನು ಜನರಿಗೆ ಗೋಚರಪಡಿಸುವುದಕ್ಕಾಗಿಯೇ ಇಂದ್ರನು ನಾನಾವಿಧ ರೂಪಗಳನ್ನು ಧರಿಸುವನು.

**ಇಂದ್ರಃ ಮಾಯಾಭಿಃ ಪುರುರೂಪಃ ಈಯತೇ**—ಇಂದ್ರನು ತನ್ನ ಸಂಕಲ್ಪರೂಪವಾದ ಜ್ಞಾನಗಳಿಂದಲೇ ಅನೇಕ ರೂಪಗಳನ್ನು ಧರಿಸಲು ಸಮರ್ಥನು. ಏತಕ್ಕಾಗಿ ಅನೇಕ ರೂಪಗಳನ್ನು ಧರಿಸಬೇಕು? ಇದರ ಅವಶ್ಯಕತೆ ಏನು ? ಎಂದರೆ, ಭೂಮಿಯಲ್ಲಿ ಅನೇಕ ಯಜಮಾನರು ಏಕಕಾಲದಲ್ಲಿ ಎಂದರೆ ಒಂದೇ ದಿವಸ ಯಜ್ಞಯಾಗಾದಿಗಳನ್ನು ಮಾಡಿ ಇಂದ್ರನನ್ನು ಆಹ್ವಾನಿಸುವರು. ಆ ಯಜ್ಞಗಳಿಗೆಲ್ಲಾ ಇಂದ್ರನು ಹೋಗಬೇಕಾದರೆ ಅವನು ಅನೇಕ ರೂಪಗಳನ್ನು (ಅನೇಕ ಇಂದ್ರರ ರೂಪಗಳನ್ನು) ಧರಿಸಿ ಪ್ರತಿ ಯಜಮಾನನ ಯಜ್ಞಭೂಮಿಗೂ ಹೋಗುವನು. ಅದಕ್ಕಾಗಿಯೇ

ಇಂದ್ರನು ಅನೇಕ ರೂಪಗಳನ್ನು ಧರಿಸುವನು ಎಂದು ಹೇಳಿದೆ. ಹಾಗಾದರೆ ಇಂದ್ರನಿಗೆ ಒಂದೇ ರಥವಿದ್ದು ಆ ರಥಕ್ಕೆ ಹರೀ ಎಂಬ ಎರಡು ಕುದುರೆಗಳು ಮಾತ್ರವಿರುವುದರಿಂದ ಒಂದೇ ರಥದಲ್ಲಿ ಅನೇಕ ಸ್ಥಳಗಳಿಗೆ ಏಕಕಾಲದಲ್ಲಿ ಹೋಗಲು ಹೇಗೆ ಸಾಧ್ಯ ಎಂದರೆ,

**ಅಸ್ಯ ಹರಯಃ ಯುಕ್ತಾಃ ಶತಾ ದಶ**—ಇಂದ್ರನ ಅಶ್ವಗಳಿಗೂ ಮಹತ್ಸಾಮರ್ಥ್ಯವಿರುವುದು. ಅವು ಸಾವಿರಾರು ಸಂಖ್ಯೆಯಿಂದ ಪರಿವರ್ತಿತವಾಗಿ ರಥಕ್ಕೆ ನಿಯೋಜಿತವಾಗಿರುವುದರಿಂದ ಇಂದ್ರನ ಅನೇಕ ರೂಪಗಳು ಅನೇಕರಥಗಳಲ್ಲಿ ಕುಳಿತು ಏಕಕಾಲದಲ್ಲಿ ಎಲ್ಲಾಕಡೆಗೂ ಹೋಗಲು ಸಾಧ್ಯವು ಎಂದು ಮುಖ್ಯಾಭಿಪ್ರಾಯವು.

(೨) ಆಧ್ಯಾತ್ಮಿಕಾರ್ಥವಿವರಣೆ.

ಈ ಅರ್ಥದಲ್ಲಿ—ಇಂದ್ರನೇ ಪರಮಾತ್ಮನು. ಅವನು ಆಕಾಶದಂತೆ ಸರ್ವವ್ಯಾಪಿಯು ಮತ್ತು ಸದಾ ಆನಂದಸ್ವರೂಪನು. ಆ ಪರಮಾತ್ಮನು ಅಂತಃಕರಣಗಳೆಂಬ ಉಪಾಧಿಗಳಿಂದ ಅನೇಕಶರೀರಗಳಲ್ಲಿ ಜೀವಾತ್ಮರೆಂಬ ಅಭಿಧಾನದಿಂದ ವ್ಯವಹರಿಸಲ್ಪಡುವನು. ಇದಲ್ಲದೆ ತನ್ನ ಅನಾದಿಯಾದ ಮಾಯಾಶಕ್ತಿಯಿಂದ ಆಕಾಶವೇ ಮೊದಲಾದ ಜಗತ್ಸ್ವರೂಪದಿಂದಲೂ ವ್ಯಕ್ತನಾಗಿರುವನು. ಇವೆಲ್ಲವೂ ಪರಮಾತ್ಮನಾದ ಆ ಇಂದ್ರನ ನಾನಾರೂಪಗಳೇ ಆಗಿರುವುವು. ಇಲ್ಲಿ ಪ್ರತಿರೂಪವೆಂಬ ಶಬ್ದಕ್ಕೆ ಪ್ರತಿಬಿಂಬರೂಪವೆಂದು ಅರ್ಥವು ಎಂದರೆ ಜೀವಾತ್ಮರ ಅನೇಕ ಶರೀರ ಗಳಲ್ಲಿ ತನ್ನ ಚಿದ್ರೂಪವನ್ನು (ಚೈತನ್ಯವನ್ನು) ಪ್ರತಿಬಿಂಬಿಸುತ್ತಾ ಸರ್ವಪ್ರಾಣಿಗಳಲ್ಲಿಯೂ ಅಂತರಾತ್ಮನಾಗಿರುವನು. **ಅಂತಃ ಪ್ರವಿಷ್ಟಃ ಶಾಸ್ತಾ ಜನಾನಾಗ್ಂ ಸರ್ವಾತ್ಮಾ** (ತೈ. ಆ. ೩-೧೧-೨) ಎಂಬ ಶ್ರುತಿವಾಕ್ಯವೂ ಇದನ್ನು ಸಮರ್ಥಿಸುವುದು. ಇಂತಹ ಇಂದ್ರರೂಪನಾಗಿರುವ ಪರಮಾತ್ಮನು—**ಹರಯಃ ಶತಾ ದಶ ಯುಕ್ತಾ ಈಯತೇ-ಸಹಸ್ರಸಂಖ್ಯಾಕಾ ಇಂದ್ರಿಯಪ್ರವೃತಿಭಿರ್ಯುಕ್ತಾ ಸರ್ವಪ್ರಾಣಿಷು ಪ್ರವಿಷ್ಟಃ ಸನ್ ಲೋಕ-ವ್ಯವಹಾರರೂಪೇಣ ಚೇಷ್ಟತೇ ।** ಸಮಸ್ತ ಪ್ರಾಣಿಗಳಲ್ಲಿಯೂ ಅಂತರಾತ್ಮನಾಗಿ ಸಾವಿರಾರು ವಿಧವಾದ ಇಂದ್ರಿಯ ಪ್ರವೃತ್ತಿಗಳ ಮೂಲಕ ಲೋಕವ್ಯವಹಾರದಲ್ಲಿ ಪ್ರವೃತ್ತನಾಗಿರುವನು ಎಂದು ಆಧ್ಯಾತ್ಮಿಕಾರ್ಥದ ಮುಖ್ಯಾಭಿಪ್ರಾಯವು.

॥ ಸಂಹಿತಾಪಾಠಃ ॥

**ಯುಜಾನೋ ಹರಿತಾ ರಥೇ ಭೂರಿ ತ್ವಷ್ಟೇಹ ರಾಜತಿ ।**

**ಕೋ ವಿಶ್ವಾಹಾ ದ್ವಿಷತಃ ಪಕ್ಷ ಆಸತ ಉತಾಸೀನೇಷು ಸೂರಿಷು ॥ ೧೯ ॥**

॥ ಪದಪಾಠಃ ॥

ಯುಜಾನಃ । ಹರಿತಾ । ರಥೇ । ಭೂರಿ । ತ್ವಷ್ಟಾ । ಇಹ । ರಾಜತಿ ।

ಕಃ । ವಿಶ್ವಾಹಾ । ದ್ವಿಷತಃ । ಪಕ್ಷಃ । ಆಸತೇ । ಉತ । ಆಸೀನೇಷು । ಸೂರಿಷು ॥ ೧೯ ॥

॥ ಸಾಯಣಭಾಷ್ಯಂ ॥

ಹರಿತಾ ಹರಿತಾವಶ್ವೌ ರಥೇ ಯುಜಾನೋ ಯುಂಜನ್ ತ್ವಷ್ಟಾ ದೀಪ್ತ ಇಂದ್ರ ಇಹ ತ್ರೈಲೋಕ್ಯೇ ಭೂರಿ ಭೂರಿಷು ಬಹುಷು ಪ್ರದೇಶೇಷು ರಾಜತಿ । ದೀಪ್ಯತೇ । ಉತಾಪಿ ಚ ಸೂರಿಷು ಸ್ತೋತೃಷ್ವಸ್ಮಾ-ದೃಶೇಷ್ವಾಸೀನೇಷು ಸತ್ಸು ವಿಶ್ವಾಹಾ ಸರ್ವದೇಂದ್ರಾದನ್ಯಃ ಕೋ ನಾಮ ದ್ವಿಷತಃ ಶತ್ರೋಃ ಪಕ್ಷಃ

ಪಾಚಕೋಃ ಬಾಧಕಃ ಸನ್ ಆಸತೇ। ಅಸ್ತೇ। ಇಂದ್ರ ಏವ ಸರ್ವದಾ ಶತ್ರೂನ್ಬಾಧತೆ ಇತ್ಯರ್ಥಃ। ಯದ್ವಾ। ಪಕ್ಷ ಇತಿ ಸಕಾರಾಂತಂ ಸಮೀಪವಚನಂ। ಇಂದ್ರಾದನ್ಯಃ ಕೋಃ ನಾಮ ದ್ವಿಷತಃ ಶತ್ರೋಃ ಸಮೀಪ ಆಸತೇ। ಅಸ್ತೇ। ಇಂದ್ರ ಏವ ನಿರ್ಭಯಃ ಸನ್ ಶತ್ರುಸಮೀಪೇ ಸ್ಥಾತುಂ ಶಕ್ನೋತೀತಿ ಭಾವಃ॥

॥ ಪ್ರತಿಪದಾರ್ಥ ॥

**ಹರಿತಾ**—ಹರಿದ್ವರ್ಣವುಳ್ಳ ತನ್ನ ಅಶ್ವಗಳನ್ನು। **ರಥೇ**—ರಥದೊಡನೆ। **ಯುಜಾನಃ**—ಸೇರಿಸಿಕೊಂಡವನಾಗಿ। **ತ್ವಷ್ಟಾ**—ಪ್ರಕಾಶಮಾನನಾದ ಇಂದ್ರನು। **ಇಹ**—ಈ ಮೂರು ಲೋಕಗಳಲ್ಲೂ। **ಭೂರಿ**—ಅತ್ಯಧಿಕವಾಗಿ। **ರಾಜತಿ**—ಪ್ರಕಾಶಿಸುತ್ತಾನೆ। **ಉತ**—ಮತ್ತು। **ವಿಶ್ವಾಹಾ**—ಪ್ರತಿದಿನಗಳಲ್ಲಿಯೂ। **ಸೂರಿಷು**—ಸ್ತೋತೃಗಳ ನಡುವೆ। **ಆಸೀನೇಷು**—ಇರತಕ್ಕ ದೇವತೆಗಳಲ್ಲಿ। **ಕಃ**—(ಇಂದ್ರನಲ್ಲದೇ) ಬೇರೆ ಯಾರು ತಾನೇ। **ದ್ವಿಷತಃ**—ಶತ್ರುವಿಗೆ। **ಪಕ್ಷಃ**—ಹಿಂಸಕನಾಗಿ। **ಆಸತೇ**—ಇರಬಲ್ಲನು?

॥ ಭಾವಾರ್ಥ ॥

ಹರಿದ್ವರ್ಣವುಳ್ಳ ತನ್ನ ಅಶ್ವಗಳನ್ನು ರಥದೊಡನೆ ಸೇರಿಸಿಕೊಂಡವನಾಗಿ ಪ್ರಕಾಶಮಾನನಾದ ಇಂದ್ರನು ಈ ಮೂರು ಲೋಕಗಳಲ್ಲೂ ಅತ್ಯಧಿಕವಾಗಿ ಪ್ರಕಾಶಿಸುತ್ತಾನೆ. ಮತ್ತು ಪ್ರತಿದಿನಗಳಲ್ಲಿಯೂ ಸ್ತೋತೃಗಳ ನಡುವೆ ಇರತಕ್ಕ ದೇವತೆಗಳಲ್ಲಿ ಇಂದ್ರನಲ್ಲದೇ ಬೇರೆ ಯಾರು ತಾನೇ ಶತ್ರುವಿಗೆ ಹಿಂಸಕನಾಗಿರಬಲ್ಲನು?

English Translation.

Yoking his horses to his car, Twashtri shines in many places here in the three worlds: who (else), sojourning daily amongst his present worshippers, is their protector against adversaries?

॥ ಸಂಹಿತಾಪಾಠಃ ॥

ಅಗವ್ಯೂತಿ ಕ್ಷೇತ್ರಮಾಗನ್ಮ ದೇವಾ ಉರ್ವೀ ಸತೀ ಭೂಮಿರಂಹೂರಣಾ-
ಭೂತ್।
ಬೃಹಸ್ಪತೇ ಪ್ರ ಚಿಕಿತ್ಸಾ ಗವಿಷ್ಟಾವಿತ್ಥಾ ಸತೇ ಜರಿತ್ರ ಇಂದ್ರ ಪಂಥಾಂ॥೨೦॥

॥ ಪದಪಾಠಃ ॥

ಅಗವ್ಯೂತಿ। ಕ್ಷೇತ್ರಂ। ಆ। ಅಗನ್ಮ। ದೇವಾಃ। ಉರ್ವೀ। ಸತೀ। ಭೂಮಿಃ। ಅಂಹೂರಣಾ। ಅಭೂತ್।
ಬೃಹಸ್ಪತೇ। ಪ್ರ। ಚಿಕಿತ್ಸ। ಗೋಽಇಷ್ಟೌ। ಇತ್ಥಾ। ಸತೇ। ಜರಿತ್ರೇ। ಇಂದ್ರ। ಪಂಥಾಂ॥ ೨೦।

॥ ಸಾಯಣಭಾಷ್ಯಂ ॥

ಅತ್ರೋಕ್ತಂ। ಅರಣ್ಯೇ ನಿರ್ಜನೇ ಗಗೋರ್ೀ ದೇವಾನ್ ಭೂಮಿಂ ಬೃಹಸ್ಪತಿಂ। ಇಂದ್ರಂ ಚಾಸ್ತೌತ್ಸ್ವರಕ್ಷಾರ್ಥಮೃಚಾ ಮಾರ್ಗಚ್ಯುತೋಽನಯೇತಿ॥ ಅಗವ್ಯೂತೀತ್ಯತ್ರ ದೇವಾನ್ ಪಾದೇ

ಭೂಮಿಮಘೋತ್ತರೇ । ಬೃಹಸ್ಪತಿಂ ತೃತೀಯೇ ತು ಇಂದ್ರ ಏವೋತ್ತಮೇ ಸ್ತುತೆ ಇತಿ ಚ ॥ ಹೇ ದೇವಾ ಅಗವ್ಯೂತ್ಯಗೋಚರಂ ಗೋಸಂಚಾರರಹಿತಂ ನಿರ್ಜನಂ ಕ್ಷೇತ್ರಂ ದೇಶಮಾಗನ್ಮ । ಆಗತಾಃ ಸ್ಮಃ । ಅತೋ ಮಾಂ ರಕ್ಷತೇತಿ ಶೇಷಃ । ಉರ್ವೀ ವಿಸ್ತೀರ್ಣಾ ಸತೀ ಭೂಮಿಶ್ಚಾಂಹೂರಣಾ । ಅಂಹವ ಆಹಂತಾರೋ ದಸ್ಯವಃ । ತೇಷಾಂ ರಮಣಾ ರಮಯಿತ್ರ್ಯಭೂತ್ । ಭವತಿ । ಅಸ್ಮಾನತಃ ಸಾಪಿ ರಕ್ಷತು । ಹೇ ಬೃಹಸ್ಪತೇ ತ್ವಂ ಗವಿಷ್ಟೌ ಗವಾಮನ್ವೇಷಣ ಉಪಾಯೇ ಪ್ರ ಚಿಕಿತ್ಸ । ಪ್ರವೇದಯ । ಇತ್ಥೇತ್ಥಮನೇನ ಪ್ರಕಾರೇಣ ಸತೇ ಭವತೇ ದುಃಖಮನುಭವತೇ ಜರಿತ್ರೇ ಸ್ತೋತ್ರೇ ಮಹ್ಯಂ ಹೇ ಇಂದ್ರ ಪಂಥಾಂ ಪಂಥಾನಂ ಮಾರ್ಗಂ ಪ್ರ ಚಿಕಿತ್ಸ । ಪ್ರಜ್ಞಾಪಯ ॥

॥ ಪ್ರತಿಪದಾರ್ಥ ॥

**ದೇವಾಃ**—ಎಲೈ ದೇವತೆಗಳೇ, । **ಅಗವ್ಯೂತಿ**— ಗೋರಹಿತವಾಗಿ ನಿರ್ಜನವಾದ । **ಕ್ಷೇತ್ರಂ**—ಪ್ರದೇಶಕ್ಕೆ । **ಅಗನ್ಮ**—ನಾವು ಬಂದಿದ್ದೇವೆ । **ಭೂಮಿಃ**—ಪೃಥ್ವಿಯು । **ಉರ್ವೀ ಸತೀ**—ಅತ್ಯಂತ ವಿಸ್ತೃತವಾಗಿ । **ಅಂಹೂರಣಾ**—ನಾಶಕರಾದ ಶತ್ರುಗಳಿಗೆಲ್ಲಾ ವಿಹಾರ ಪ್ರದೇಶವಾಗಿ । **ಅಭೂತ್**—ಆಗಿದೆ । **ಬೃಹಸ್ಪತೇ**—ಎಲೈ ಬೃಹಸ್ಪತಿಯೇ । **ಗವಿಷ್ಟಾ**—ಗೋವುಗಳನ್ನು ಹುಡುಕುವ ಉಪಾಯವನ್ನು । **ಪ್ರ ಚಿಕಿತ್ಸ**—ನಮಗೆ ಉಪದೇಶಿಸು । **ಇಂದ್ರ**—ಎಲೈ ಇಂದ್ರನೇ । **ಇತ್ಥಾ**—ಮೇಲೆ ವಿವರಿಸಿದ ರೀತಿಯಲ್ಲಿ । **ಸತೇ**—ದುಃಖವನ್ನನುಭವಿಸುತ್ತಿರುವ । **ಜರಿತ್ರೇ**—ಸ್ತೋತೃವಾದ ನನಗೆ । **ಪಂಥಾಂ**—ಸುಖಕಾರಕವಾದ ಮಾರ್ಗವನ್ನು (ತೋರಿಸು).

॥ ಭಾವಾರ್ಥ ॥

ಎಲೈ ದೇವತೆಗಳೇ, ಗೋರಹಿತವಾಗಿ ನಿರ್ಜನವಾದ ಪ್ರದೇಶಕ್ಕೆ ನಾವು ಅಲೆದು ಬಂದಿದ್ದೇವೆ. ಈ ಪ್ರದೇಶವು ಅತ್ಯಂತ ವಿಸ್ತೃತವಾಗಿ ನಮ್ಮನ್ನು ಹಿಂಸಿಸತಕ್ಕ ಶತ್ರುಗಳಿಗೆಲ್ಲಾ ವಿಹಾರಪ್ರದೇಶವಾಗಿದೆ. ಎಲೈ ಬೃಹಸ್ಪತಿಯೇ, ಗೋವುಗಳನ್ನು ಹುಡುಕುವ ಉಪಾಯವನ್ನು ನಮಗೆ ಉಪದೇಶಿಸು. ಎಲೈ ಇಂದ್ರನೇ, ಮೇಲೆ ವಿವರಿಸಿದ ರೀತಿಯಲ್ಲಿ ದುಃಖವನ್ನನುಭವಿಸುತ್ತಿರುವ ಸ್ತೋತೃವಾದ ನನಗೆ ಸುಖಕಾರಕವಾದ ಮಾರ್ಗವನ್ನು ತೋರಿಸು.

English Translation.

We have wandered, gods, into a desert where there is no track of cattle : the vast extant earth has become the protectress of murderers : direct us, Brihaspati, in our search for cattle : show the path, Indra, to your votary being thus astray.

॥ ಸಂಹಿತಾಪಾಠಃ ॥

ದಿವೇದಿವೇ ಸದೃಶೀರನ್ಯಮರ್ಧಂ ಕೃಷ್ಣಾ ಅಸೇಧದಪ ಸದ್ಮನೋ ಜಾಃ ।
ಅಹನ್ದಾಸಾ ವೃಷಭೋ ವಸ್ನಯಂತೋದವ್ರಜೇ ವರ್ಚಿನಂ ಶಂಬರಂ ಚ ॥

॥ ಪದಪಾಠಃ ॥

ದಿವೇಽದಿವೇ । ಸಽದೃಶೀಃ । ಅನ್ಯಂ । ಅರ್ಧಂ । ಕೃಷ್ಣಾಃ । ಅಸೇಧತ್ । ಅಪ । ಸದ್ಮನಃ । ಜಾಃ ।
ಅಹನ್ । ದಾಸಾ । ವೃಷಭಃ । ವಸ್ನಽಯಂತಾ । ಉದಽವ್ರಜೇ । ವರ್ಚಿನಂ । ಶಂಬರಂ । ಚ ॥ ೨೧ ॥

॥ ಸಾಯಣಭಾಷ್ಯಂ ॥

**ಅಯಮಿಂದ್ರಃ ಸದ್ಮನಃ ಸದನಾತ್ಸ್ವಕೀಯಾದಂತರಿಕ್ಷೈಕದೇಶಾತ್ಸ್ಥಾನಾಜ್ಜಾ ಜಾಯಮಾನಃ ಸೂರ್ಯಾತ್ಮನಾ ಪ್ರಾದುರ್ಭವನ್ ಸದೃಶೀಸ್ತುಲ್ಯರೂಪಾಃ ಕೃಷ್ಣಾಃ ಕೃಷ್ಣವರ್ಣಾ ರಾತ್ರೀರ್ದಿವೇ ದಿವೇ ಪ್ರತಿದಿವಸಮಪಾಸೇಧತ್ । ನಿವರ್ತಯತಿ । ಕಿಮರ್ಥಂ । ಅನ್ಯಮರ್ಧಮಹರರ್ಧಮಪರಂ ಭಾಗಂ ಪ್ರಕಾಶಯಿತುಂ । ಅಹೋರಾತ್ರಾತ್ಮಕಸ್ಯ ದಿವಸಸ್ಯ ಹಿ ರಾತ್ರಿರೇಕೋ ಭಾಗಃ । ಅಪಿ ಚ ವೃಷಭೋ ವರ್ಷಯಿತಾ ಸ ಇಂದ್ರೋ ದಾಸಾ ದಾಸಾವುಪಕ್ಷಪಯಿತಾರೌ ಯಜ್ಞಕರ್ಮಣಾಂ ವಸ್ನಯಂತಾ । ವಸ್ನಂ ನಿವಾಸಹೇತುಭೂತಂ ಧನಂ । ತದಿಚ್ಛಂತೌ ವರ್ಚಿನಂ ಶಂಬರಂ ಚೈತತ್ಸಂಜ್ಞಾವಸುರಾವುದವ್ರಜೇ । ಉದಕಾನಿ ವ್ರಜಂತ್ಯಸ್ಮಿನ್ನಿತ್ಯುದವ್ರಜೋ ದೇಶವಿಶೇಷಃ । ತಸ್ಮಿನ್ನಹನ್ । ಹತವಾನ್ ॥**

॥ ಪ್ರತಿಪದಾರ್ಥ ॥

(**ಇಂದ್ರಃ**---ಇಂದ್ರನು) । **ಸದ್ಮನಃ**—ತನ್ನ ಸ್ವಸ್ಥಾನವಾದ ಅಂತರಿಕ್ಷದಿಂದ । **ಜಾಃ**—ಸೂರ್ಯರೂಪದಲ್ಲಿ ಆವಿರ್ಭವಿಸಿ । **ಸದೃಶೀಃ**—ಒಂದೇ ರೂಪದಲ್ಲಿ ಕಾಣಿಸಿಕೊಳ್ಳತಕ್ಕವೂ । **ಕೃಷ್ಣಾಃ**—ಕಗ್ಗತ್ತಲೆಯಿಂದ ಕೂಡಿದವೂ ಆದ ರಾತ್ರಿಗಳನ್ನೆಲ್ಲಾ । **ದಿವೇ ದಿವೇ**—ಪ್ರತಿದಿವಸವೂ । **ಅನ್ಯಂ ಅರ್ಧಂ**—ಉಳಿದರ್ಧವಾದ ಅಹಸ್ಸನ್ನು ಪ್ರಕಾಶಗೊಳಿಸುವುದಕ್ಕಾಗಿ । **ಅಪ ಅಸೇಧತ್**—ಮರೆಯಾಗುವಂತೆ ಮಾಡುತ್ತಾನೆ । **ವೃಷಭಃ**—ವೃಷ್ಟಿಕಾರಕನಾದ ಇಂದ್ರನು । **ದಾಸಾ**—ನಮಗೆ ಹಿಂಸೆಮಾಡತಕ್ಕವರೂ । **ವಸ್ನಯಂತಾ**—ನಮ್ಮ ವಸತಿರೂಪವಾದ ಸಂಪತ್ತಿಗೆ ಆಶೆಪಡುವವರೂ ಆದ । **ವರ್ಚಿನಂ**—ವರ್ಚಿಯೆಂಬ ಅಸುರನನ್ನೂ । **ಶಂಬರಂ ಚ**—ಶಂಬರನೆಂಬ ಅಸುರನನ್ನೂ । **ಉದವ್ರಜೇ**—ಉದವ್ರಜವೆಂಬ ಪ್ರದೇಶದಲ್ಲಿ । **ಅಹನ್**—ಕೊಂದನು.

॥ ಭಾವಾರ್ಥ ॥

ಇಂದ್ರನು ತನ್ನ ಸ್ವಸ್ಥಾನವಾದ ಅಂತರಿಕ್ಷದಿಂದ ಸೂರ್ಯರೂಪದಲ್ಲಿ ಆವಿರ್ಭವಿಸಿ ಸಮಾನವಾದ ರೂಪವನ್ನು ಹೊಂದಿರುವುವೂ, ಕಗ್ಗತ್ತಲೆಯಿಂದ ಕೂಡಿದವೂ ಆದ ರಾತ್ರಿಗಳನ್ನೆಲ್ಲಾ ಪ್ರತಿದಿನವೂ ಉಳಿದರ್ಧವಾದ ಅಹಸ್ಸನ್ನು ಪ್ರಕಾಶಗೊಳಿಸುವುದಕ್ಕಾಗಿ ಮರೆಯಾಗುವಂತೆ ಮಾಡುತ್ತಾನೆ. ವೃಷ್ಟಿಕಾರಕನಾದ ಇಂದ್ರನು ನಮಗೆ ಹಿಂಸೆಮಾಡತಕ್ಕವರೂ, ನಮ್ಮ ವಸತಿರೂಪವಾದ ಸಂಪತ್ತಿಗೆ ಆಸೆಪಡುವವರೂ ಆದ ವರ್ಚಿಯೆಂಬ ಅಸುರನನ್ನೂ ಶಂಬರನೆಂಬ ಅಸುರನನ್ನೂ ಉದವ್ರಜವೆಂಬ ಪ್ರದೇಶದಲ್ಲಿ ಕೊಂದನು.

## English Translation.

Indra, becoming manifest from his abode (in the firmament), dissipates, day by day, the resembling glooms, (so that he may distinguish)

the other portion, (or the day) : and the showerer has slain the two wealth-seeking slaves, Varchin and Sambara, in (the couutry of) Udavraja.

॥ ಸಂಹಿತಾಪಾಠಃ ॥

ಪ್ರಸ್ತೋಕ ಇನ್ನು ರಾಧಸಸ್ತ ಇಂದ್ರ ದಶ ಕೋಶಯೀರ್ದಶ ವಾಜಿನೋಽ-
ದಾತ್ ।
ದಿವೋದಾಸಾದತಿಥಿಗ್ವಸ್ಯ ರಾಧಃ ಶಾಂಬರಂ ವಸು ಪ್ರತ್ಯಗ್ರಭೀಷ್ಮ ॥ ೨೨ ॥

॥ ಪದಪಾಠಃ ॥

ಪ್ರಽಸ್ತೋಕಃ । ಇತ್ । ನು । ರಾಧಸಃ । ತೇ । ಇಂದ್ರ । ದಶ । ಕೋಶಯೀಃ । ದಶ । ವಾಜಿನಃ । ಅದಾತ್ ।
ದಿವಃಽದಾಸಾತ್ । ಅತಿಥಿಽಗ್ವಸ್ಯ । ರಾಧಃ । ಶಾಂಬರಂ । ವಸು । ಪ್ರತಿ । ಅಗ್ರಭೀಷ್ಮ ॥ ೨೨ ॥

॥ ಸಾಯಣಭಾಷ್ಯಂ ॥

ಏತದಾದ್ಯಾಸು ಚತಸೃಷು ಸೃಂಜಯಪುತ್ರಸ್ಯ ಪ್ರಸ್ತೋಕಸ್ಯ ರಾಜ್ಞೋ ದಾನಸ್ತುತಿಃ । ಸ ಏವ ದಿವೋದಾಸೋಽಶ್ವಥೋಽತಿಥಿಗ್ವ ಇತಿ ಚಾಖ್ಯಾಯತೇ । ಹೇ ಇಂದ್ರ ತೇ ತವ ರಾಧಸ ಆರಾಧಯಿತುಃ ಸ್ತೋತುಃ ॥ ಚತುರ್ಥ್ಯರ್ಥೇ ಷಷ್ಠೀ ॥ ತ್ವಾಂ ಸ್ತುವತೇ ಮಹ್ಯಂ ಗರ್ಗಾಯ ಪ್ರಸ್ತೋಕೋ ರಾಜಾ ದಶ ಕೋಶಯೀಃ ಸುವರ್ಣಪೂರ್ಣಾನ್ದಶಸಂಖ್ಯಾಕಾನ್ ಕೋಶಾನ್ದಶ ವಾಜಿನೋಽಶ್ವಾಂಶ್ಚ ನು ಕ್ಷಿಪ್ರಮದಾತ್। ಪ್ರಾಯಚ್ಛತ್ । ಇದಿತಿ ಪೂರಣಃ । ವಯಂ ಚ ತಸ್ಮಾದ್ದಿವೋದಾಸಾದೇತತ್ಸಂಜ್ಞಾತ್ಪ್ರಸ್ತೋಕಾದ್ವಸು ಧನಂ ಪ್ರತ್ಯಗ್ರಭೀಷ್ಮ । ಪ್ರತಿಗೃಹೀತವಂತಃ । ಕೀದೃಶಂ । ಅತಿಥಿಗ್ವಸ್ಯ ತಸ್ಯೈವ ಪ್ರಸ್ತೋಕಸ್ಯ ಸ್ವಭೂತಂ ರಾಧೋ ರಾಧಕಂ ಶಾಂಬರಂ ಶಂಬರಾದಸುರಾದಾಗತಂ । ಶಂಬರಂ ಹತ್ವಾ ತ್ವಯಾ ದತ್ತಂ ತದೀಯಮಿತ್ಯರ್ಥಃ ॥

॥ ಪ್ರತಿಪದಾರ್ಥ ॥

ಇಂದ್ರ—ಎಲೈ ಇಂದ್ರನೇ । ತೇ—ನಿನ್ನ । ರಾಧಸಃ – ಆರಾಧಕನಾದ ಗರ್ಗನಿಗೆ । ಪ್ರಸ್ತೋಕಃ—ಪ್ರಸ್ತೋಕನೆಂಬ ರಾಜನು । ದಶ ಕೋಶಯೀಃ । ಸುವರ್ಣಪೂರಿತವಾದ ಹತ್ತು ಧನಕೋಶಗಳನ್ನೂ । ದಶ ವಾಜಿನಃ—ಹತ್ತು ಅಶ್ವಗಳನ್ನೂ । ನು—ಒಡನೆಯೇ । ಅದಾತ್ (ಇತ್)—ಕೊಟ್ಟನು । (ವಯಂ—ನಾವೂ ಸಹ) । ದಿವೋದಾಸಾತ್—ದಿವೋದಾಸನೆಂಬ ನಾಮಾಂತರವುಳ್ಳ ಆ ಪ್ರಸ್ತೋಕನಿಂದ । ಶಾಂಬರಂ—ಶಂಬರಾಸುರನ ಸಮೀಪದಿಂದ ಅಪಹೃತವಾದುದೂ । ಅತಿಥಿಗ್ವಸ್ಯ—ಅತಿಥಿಗ್ವನೆಂಬ ಹೆಸರೂ ಇರತಕ್ಕ ಅದೇ ಪ್ರಸ್ತೋಕನಿಗೆ ಸೇರಿದುದೂ । ರಾಧಃ—ಪೂಜ್ಯವಾದುದೂ ಆದ । ವಸು—ಧನವನ್ನು । ಪ್ರತ್ಯಗ್ರಭೀಷ್ಮ—ಸ್ವೀಕರಿಸಿದ್ದೇವೆ.

॥ ಭಾವಾರ್ಥ ॥

ಎಲೈ ಇಂದ್ರನೇ, ನಿನ್ನ ಆರಾಧಕನಾದ ಗರ್ಗನಿಗೆ ಪ್ರಸ್ತೋಕನೆಂಬ ರಾಜನು ಸುವರ್ಣಪೂರಿತವಾದ ಹತ್ತು ಧನಕೋಶಗಳನ್ನೂ ಹತ್ತು ಅಶ್ವಗಳನ್ನೂ ಒಡನೆಯೇ ಕೊಟ್ಟನು. ನಾವೂ ಸಹ ದಿವೋದಾಸನೆಂಬ ನಾಮಾಂತರವುಳ್ಳ ಆ ಪ್ರಸ್ತೋಕನಿಂದ ಶಂಬರಾಸುರನ ಸಮೀಪದಿಂದ ಅಪಹೃತವಾದುದೂ, ಅತಿಥಿಗ್ವನೆಂಬ ಇನ್ನೊಂದು ಹೆಸರಿರತಕ್ಕ ಅದೇ ಪ್ರಸ್ತೋಕನಿಗೆ ಸೇರಿದುದೂ, ಪೂಜ್ಯವಾದುದೂ ಆದ ಧನವನ್ನು ಪಡೆದಿದ್ದೇವೆ.

## English Translation.

Prastoka has given to your worshipper, Indra, ten purses of gold, and ten horses, and we have accepted this treasure from Divodasa, the spoil won by Atithigwan from Shambara.

॥ ಸಂಹಿತಾಪಾಠಃ ॥

ದಶಾಶ್ವಾನ್ದಶ ಕೋಶಾನ್ದಶ ವಸ್ತ್ರಾಧಿಭೋಜನಾ ।
ದಶೋ ಹಿರಣ್ಯಪಿಂಡಾನ್ದಿವೋದಾಸಾದಸಾನಿಷಂ ॥ ೨೩ ॥

॥ ಪದಪಾಠಃ ॥

ದಶ । ಅಶ್ವಾನ್ । ದಶ । ಕೋಶಾನ್ । ದಶ । ವಸ್ತ್ರಾ । ಅಧಿಽಭೋಜನಾ ।
ದಶೋ ಇತಿ । ಹಿರಣ್ಯಽಪಿಂಡಾನ್ । ದಿವಃಽದಾಸಾತ್ । ಅಸಾನಿಷಂ ॥ ೨೩ ॥

॥ ಸಾಯಣಭಾಷ್ಯಂ ॥

**ದಶ ದಶಸಂಖ್ಯಾಕಾನಶ್ವಾನ್ ದಶಸಂಖ್ಯಾಕಾನ್ ಹಿರಣ್ಯಪೂರ್ಣಾನ್ ಕೋಶಾನಧಿಭೋಜನಾ । ಭೋಜನಮಿತಿ ಧನನಾಮ । ಅಧಿಕಂ ಧನಂ ಯೇಷಾಂ ಮೂಲ್ಯಂ । ತಾದೃಶಾನಿ ದಶಸಂಖ್ಯಾನಿ ವಸ್ತ್ರಾಣಿ ಚ ದಶೋ ದಶ ಚ ದಶಸಂಖ್ಯಾಕಾಂಶ್ಚ ಹಿರಣ್ಯಪಿಂಡಾನ್ ಸುವರ್ಣಪಿಂಡಾನೇತಾನ್ ಸರ್ವಾನ್ದಿವೋದಾಸಾತ್ಪ್ರಸ್ತೋಕಾದಹಮಸಾನಿಷಂ । ಸಮಭಜಂ । ಲಬ್ಧವಾನಸ್ಮಿ ॥**

॥ ಪ್ರತಿಪದಾರ್ಥ ॥

**ಅಹಂ**—ನಾನು । **ದಿವೋದಾಸಾತ್**—ದಿವೋದಾಸನೆಂಬ ಬೇರೆ ಹೆಸರುಳ್ಳ ಪ್ರಸ್ತೋಕನಿಂದ । **ದಶ**—ದಶಸಂಖ್ಯಾಕವಾದ । **ಅಶ್ವಾನ್**—ಅಶ್ವಗಳನ್ನೂ । **ದಶ ಕೋಶಾನ್**—ಹತ್ತು ಧನಕೋಶಗಳನ್ನೂ । **ಅಧಿಭೋಜನಾ**—ಭೋಗಸಾಧಕವಾದ ಸಂಪತ್ತುಗಳನ್ನೂ । **ದಶ ವಸ್ತ್ರಾ**—ದಶಸಂಖ್ಯಾಕವಾದ ವಸ್ತ್ರಗಳನ್ನೂ । **ದಶೋ ಹಿರಣ್ಯಪಿಂಡಾನ್**—ಹತ್ತು ಸುವರ್ಣಖಂಡಗಳನ್ನೂ । **ಅಸಾನಿಷಂ**—ಹೊಂದಿದೆನು.

॥ ಭಾವಾರ್ಥ ॥

ದಿವೋದಾಸನೆಂದೂ ಬೇರೆ ಹೆಸರುಳ್ಳ ಪ್ರಸ್ತೋಕನಿಂದ ನಾನು ಹತ್ತು ಧನಕೋಶಗಳನ್ನೂ, ಹತ್ತು ಭೋಗ ಸಾಧಕವಾದ ಸಂಪತ್ತುಗಳನ್ನೂ, ಹತ್ತು ವಸ್ತ್ರಗಳನ್ನೂ ಹತ್ತು ಸುವರ್ಣಪಿಂಡಗಳನ್ನೂ ಹೊಂದಿದೆನು.

English Translation.

I have received ten horses, ten purses, cloths and ample food, and ten lumps of gold from Divodasa.

॥ ಸಂಹಿತಾಪಾಠಃ ॥

ದಶ ರಥಾನ್ಪ್ರಷ್ಟಿಮತಃ ಶತಂ ಗಾ ಅಥರ್ವಭ್ಯಃ ।

ಅಶ್ವಥಃ ಪಾಯವೇಽದಾತ್ ॥ ೨೪ ॥

॥ ಪದಪಾಠಃ ॥

ದಶ । ರಥಾನ್ । ಪ್ರಷ್ಟಿಽಮತಃ । ಶತಂ । ಗಾಃ । ಅಥರ್ವಽಭ್ಯಃ ।

ಅಶ್ವಥಃ । ಪಾಯವೇ । ಅದಾತ್ ॥ ೨೪ ॥

॥ ಸಾಯಣಭಾಷ್ಯಂ ॥

**ದಶ ದಶಸಂಖ್ಯಾಕಾನ್ ಪ್ರಷ್ಟಿಮತಃ। ಪ್ರಷ್ಟಿಸ್ತ್ರಿಪದ ಆಧಾರಃ। ತದ್ವದ್ವಹಂತೀತಿ ಪ್ರಷ್ಟ್ಯೋಽಶ್ವಾಃ । ತದ್ಯುಕ್ತಾನ್ರಥಾನ್ ಶತಂ ಶತಸಂಖ್ಯಾಕಾ ಗಾಶ್ಚಾಥರ್ವಭ್ಯೋಽಥರ್ವಗೋತ್ರೇಭ್ಯ ಋಷಿಭ್ಯಃ ಪಾಯವೇ ಭರದ್ವಾಜಪುತ್ರಾಯೈತತ್ಸಂಜ್ಞಾಯಾಸ್ಮದ್ಭ್ರಾತ್ರೇ ಚಾಶ್ವಥೋಽಶ್ವನಾನೇತತ್ಸಂಜ್ಞಃ ಪ್ರಸ್ತೋಕೋಽದಾತ್ । ದತ್ತವಾನ್ ॥**

॥ ಪ್ರತಿಪದಾರ್ಥ ॥

**ಅಶ್ವಥಃ**--ಅಶ್ವಥನೆಂಬ ನಾಮಾಂತರವುಳ್ಳ ಆ ಪ್ರಸ್ತೋಕನು । **ಅಥರ್ವಭ್ಯಃ**—ಅಥರ್ವಗೋತ್ರೋತ್ಪನ್ನರಾದ ಋಷಿಗಳಿಗೂ । **ಪಾಯವೇ**—ಭರದ್ವಾಜಪುತ್ರನಾದ ಪಾಯುವಿಗೂ । **ದಶ**—ದಶಸಂಖ್ಯಾಕವಾದವೂ । **ಪ್ರಷ್ಟಿಮತಃ**—ಅಶ್ವಗಳೊಡನೆ ಕೂಡಿದವೂ ಆದ । **ರಥಾನ್**--ರಥಗಳನ್ನೂ । **ಶತಂ**—ಶತಸಂಖ್ಯಾಕವಾದ । **ಗಾಃ**—ಗೋವುಗಳನ್ನೂ । **ಅದಾತ್**—ಕೊಟ್ಟನು.

॥ ಭಾವಾರ್ಥ ॥

ಅಶ್ವಥನೆಂಬ ನಾಮಾಂತರವುಳ್ಳ ಅದೇ ಪ್ರಸ್ತೋಕನು ಅಥರ್ವಗೋತ್ರೋತ್ಪನ್ನರಾದ ಋಷಿಗಳಿಗೂ, ಭರದ್ವಾಜ ಪುತ್ರನಾದ ಪಾಯುವಿಗೂ, ದಶಸಂಖ್ಯಾಕವೂ, ಅಶ್ವಯುಕ್ತವಾದವೂ ಆದ ರಥಗಳನ್ನೂ ಶತಸಂಖ್ಯಾಕವಾದ ಗೋವುಗಳನ್ನೂ ಕೊಟ್ಟನು.

English Translation.

Ashwatha has given to Payu ten chariots with their horses, and a hundred cows to the priests

॥ ಸಂಹಿತಾಪಾಠಃ ॥

ಮಹಿ ರಾಧೋ ವಿಶ್ವಜನ್ಯಂ ದಧಾನಾನ್ಭರದ್ವಾಜಾನ್ತ್ಸಾರ್ಞ್ಜಯೋ ಅಭ್ಯ-
ಯಷ್ಟ ॥ ೨೫ ॥

॥ ಪದಪಾಠಃ ॥

ಮಹಿ । ರಾಧಃ । ವಿಶ್ವऽಜನ್ಯಂ । ದಧಾನಾನ್ । ಭರತ್ऽವಾಜಾನ್ । ಸಾರ್ಞ್ಜಯಃ । ಅಭಿ । ಅಯಷ್ಟ ॥

॥ ಸಾಯಣಭಾಷ್ಯಂ ॥

**ವಿಶ್ವಜನ್ಯಂ ಸರ್ವಜನಹಿತಂ ಮಹಿ ಮಹಾದ್ರಾಧೋ ಧನಂ ದಧಾನಾನ್ಧಾರಯತೋ ಭರದ್ವಾಜಾನ್ ಭರದ್ವಾಜಪುತ್ರಾನಸ್ಮಾನ್ ಸಾರ್ಞ್ಜಯಃ ಸೃಂಜಯಪುತ್ರಃ ಪ್ರಸ್ತೋಕೋऽಭ್ಯಯಷ್ಟ । ಅಪೂಜಯತ್ ॥**

॥ ಪ್ರತಿಪದಾರ್ಥ ॥

**ವಿಶ್ವಜನ್ಯಂ**—ಸಕಲ ಜನರಿಗೂ ಹಿತಕಾರಿಯಾದುದೂ। **ಮಹಿ**—ಮಹತ್ತಾದುದೂ ಆದ। **ರಾಧಃ**—ಧನವನ್ನು। **ದಧಾನಾನ್**—ಸ್ವೀಕರಿಸತಕ್ಕ। **ಭರದ್ವಾಜಾನ್**—ಭರದ್ವಾಜ ಪುತ್ರರಾದ ನಮ್ಮನ್ನು। **ಸಾಂರ್ಜಯಃ**—ಸೃಂಜಯ ಪುತ್ರನಾದ ಪ್ರಸ್ತೋಕನು। **ಅಭ್ಯಯಷ್ಟ**—ಪೂಜಿಸಿದನು.

॥ ಭಾವಾರ್ಥ ॥

ಸಕಲ ಜನರಿಗೂ ಹಿತಕಾರಿಯಾದುದೂ, ಮಹತ್ತಾದುದೂ ಆದ ಧನವನ್ನು ಸ್ವೀಕರಿಸತಕ್ಕವರೂ ಭರದ್ವಾಜ ಪುತ್ರರೂ ಆದ ನಮ್ಮನ್ನು ಸೃಂಜಯ ಪುತ್ರನಾದ ಪ್ರಸ್ತೋಕನು ಪೂಜಿಸಿದ್ದಾನೆ.

English Translation.

The son of Srinjaya has reverenced the Bharadwajas who have accepted such great wealth for the good of all men.

॥ ಸಂಹಿತಾಪಾಠಃ ॥

ವನಸ್ಪತೇ ವೀಡ್ವಂಗೋ ಹಿ ಭೂಯಾ ಅಸ್ಮತ್ಸಖಾ ಪ್ರತರಣಃ ಸುವೀರಃ ।
ಗೋಭಿಃ ಸಂನದ್ಧೋ ಅಸಿ ವೀಳಯಸ್ವಾಸ್ಥಾತಾ ತೇ ಜಯತು ಜೇತ್ವಾನಿ ॥

॥ ಪದಪಾಠಃ ॥

ವನಸ್ಪತೇ । ವೀಳುಽಅಂಗಃ । ಹಿ । ಭೂಯಾಃ । ಅಸ್ಮತ್ಽಸಖಾ । ಪ್ರಽತರಣಃ । ಸುಽವೀರಃ ।

ಗೋಭಿಃ । ಸಂಽನದ್ಧಃ । ಅಸಿ । ವೀಳಯಸ್ವ । ಆಽಸ್ಥಾತಾ । ತೇ । ಜಯತು । ಜೇತ್ವಾನಿ ॥ ೨೬ ॥

॥ ಸಾಯಣಭಾಷ್ಯಂ ॥

ವನಸ್ಪತ ಇತ್ಯೇಷಾ ರಥಾರೋಹಣೇ ವಿನಿಯುಕ್ತಾ । ಸೂತ್ರಿತಂ ಚ । ವನಸ್ಪತೇ ವೀಡ್ವಂಗೋ ಹಿ ಭೂಯಾ ಇತ್ಯೇತಯಾನ್ಯಾನ್ಯಪಿ ವಾನಸ್ಪತ್ಯಾನಿ । ಆ. ಗೃ. ೨-೬-೫ । ಇತಿ ॥

ಹೇ ವನಸ್ಪತೇ ವನಸ್ಪತಿವಿಕಾರ ರಥ ತ್ವಂ ವೀಡ್ವಂಗೋ ದೃಢಾವಯವೋ ಭೂಯಾಃ । ಭವ । ಅಸ್ಮತ್ಸಖಾ ವಯಂ ಸಖಾಯೋ ಯಸ್ಯ ಸ ತಾದೃಶಶ್ಚ ಭವ । ಪ್ರತರಣಃ ಪ್ರವರ್ಧಯಿತಾ ಸುವೀರಃ ಶೋಭನೈರ್ವೀರೈಃ ಶೂರಭಟೈಃ ಪುತ್ರಾದಿಭಿರ್ವಾ ಯುಕ್ತಶ್ಚ ಭವ । ಅಪಿ ಚ ತ್ವಂ ಗೋಭಿರ್ಗೋವಿಕಾರೈಶ್ಚರ್ಮಭಿಃ ಸಂನದ್ಧೋಽಸಿ । ಸಮ್ಯಗ್ಬದ್ಧೋ ಭವಸಿ । ತಾದೃಶಸ್ತ್ವಂ ವೀಳಯಸ್ವ । ಅಸ್ಮಾನ್ದೃಢೀಕುರು । ತೇ ತವಾಸ್ಥಾತಾ ತ್ವಯ್ಯವಸ್ಥಿತೋ ರಥೀ ಚ ಜೇತ್ವಾನಿ ಜೇತವ್ಯಾನಿ ಶತ್ರುಸೈನ್ಯಾನಿ ಜಯತು ॥

॥ ಪ್ರತಿಪದಾರ್ಥ ॥

**ವನಸ್ಪತೇ**—ವನಸ್ಪತಿ ನಿರ್ಮಿತವಾದ ಎಲೈ ರಥವೇ । **ವೀಡ್ವಂಗಃ**—ದೃಢವಾದ ಅವಯವವುಳ್ಳದ್ದಾಗಿ । **ಭೂಯಾಃ**—ಆಗಿರು । **ಅಸ್ಮತ್ಸಖಾ**—ನಮಗೆಲ್ಲಾ ಮಿತ್ರನಾಗಿರು । **ಪ್ರತರಣಃ**—ನಮ್ಮ ರಕ್ಷಕನಾಗಿಯೂ । **ಸುವೀರಃ**—ಶ್ರೇಷ್ಠರಾದ ವೀರರೊಡನೆ ಕೂಡಿದವನಾಗಿಯೂ ಇರು । (**ತ್ವಂ**—ನೀನು) । **ಗೋಭಿಃ**—ಗೋ ಚರ್ಮಗಳಿಂದ । **ಸಂನದ್ಧಃ ಅಸಿ ಹಿ**—ಕೂಡಿದವನಾಗಿದ್ದೀಯೆ । **ವೀಳಯಸ್ವ**—ನಮ್ಮನ್ನೂ ಬಲಿಷ್ಠರನ್ನಾಗಿ ಮಾಡು । **ತೇ**—ನಿನ್ನಲ್ಲಿ । **ಆಸ್ಥಾತಾ**—ಕುಳಿತಿರುವ ರಥಿಯೂ ಸಹ । **ಜೇತ್ವಾನಿ**—ಜಯವನ್ನು ಪಡೆಯುವ ಸಾಧನಗಳೊಡಗೂಡಿದವನಾಗಿ । **ಜಯತು**—ಶತ್ರುಗಳನ್ನು ಜಯಿಸಲಿ.

॥ ಭಾವಾರ್ಥ ॥

ವನಸ್ಪತಿನಿರ್ಮಿತನೂ ರಥರೂಪನೂ ಆದ ಎಲೈ ದೇವತೆಯೇ, ನೀನು ದೃಢವಾದ ಅವಯವವುಳ್ಳವನಾಗಿರು. ನಮ್ಮ ರಕ್ಷಕನಾಗಿಯೂ ಶ್ರೇಷ್ಠರಾದ ವೀರರೊಡಗೂಡಿದವನಾಗಿಯೂ ಇರು. ನೀನು ಗೋಚರ್ಮಗಳಿಂದ ಕೂಡಿದವನಾಗಿದ್ದೀಯೆ. ನಮ್ಮನ್ನು ಬಲಿಷ್ಠರನ್ನಾಗಿ ಮಾಡು. ನಿನ್ನಲ್ಲಿ ಕುಳಿತಿರುವ ರಥಿಯೂ ಸಹ ಜಯವನ್ನು ಪಡೆಯುವ ಸಾಧನಗಳೊಡಗೂಡಿದವನಾಗಿ ಶತ್ರುಗಳನ್ನು ಜಯಿಸಲಿ.

## English Translation.

(Chariot made of the) forest lord, be strong of fabric; be our friend, be our protector, and be manned by warriors: you are girt with cow-hides: keep us steady; and may he who rides in you be victorious over conquered (foes).

|| ವಿಶೇಷವಿಷಯಗಳು ||

**ವನಸ್ಪತೇ** ಎಂಬ ಈ ಋಕ್ಕನ್ನು ರಥಾರೋಹಣ ಕಾಲದಲ್ಲಿ ಪಠಿಸಬೇಕೆಂದು ಆಶ್ವಲಾಯನ ಗೃಹ್ಯಸೂತ್ರದ—**ವನಸ್ಪತೇ ವೀಡ್ವಂಗೋ ಹಿ ಭೂಯಾ ಇತ್ಯೇತಯಾನ್ಯಾನ್ಯಪಿ ವಾನಸ್ಪತ್ಯಾನಿ** ಎಂಬ ಸೂತ್ರದಿಂದ (ಆ. ಗೃ. ೨-೬-೫) ವಿವೃತವಾಗಿರುವುದು.

ಈ ಋಕ್ಕಿಗೆ ಯಾಸ್ಕರು ನಿರ್ವಚನವನ್ನು ಹೇಳಿದಾರೆ. ಇಲ್ಲಿ ವನಸ್ಪತಿ ಶಬ್ದಕ್ಕೆ ಮರದಿಂದ ನಿರ್ಮಿತವಾದ ರಥವೆಂದು ಅರ್ಥಮಾಡಲಾಗಿದೆ—

**ವನಸ್ಪತೇ ದೃಢಾಂಗೋ ಹಿ ಭವಾಸ್ಮತ್ಸಖಾ ಪ್ರತರಣಃ ಸುವೀರಃ ಕಲ್ಯಾಣವೀರೋ ಗೋಭಿಃ ಸಂನದ್ಧೋ ಅಸಿ ವೀಳಯಸ್ವೇತಿ ಸಂಸ್ತಂಭ ಸ್ವಾಸ್ಥಾತಾ ತೇ ಜಯತು ಜೇತವ್ಯಾನಿ ||**
(ನಿ. ೯-೧೨)

ವನಸ್ಪತಿಯಿಂದ (ವೃಕ್ಷ ಅಥವಾ ಮರದಿಂದ) ನಿರ್ಮಿತವಾದ ಎಲೈ ರಥವೇ, ನೀನು ನಿನ್ನ ಅಂಗಗಳಲ್ಲಿ ಎಂದರೆ ಚಕ್ರಾದ್ಯವಯವರೂಪವಾದ ಭಾಗಗಳಲ್ಲಿ ದೃಢವಾಗಿರು ಎಂದರೆ ಘಟ್ಟಿಯಾಗಿರು. ನೀನು ನಮ್ಮ ಸ್ನೇಹಿತನು, ನಮ್ಮ ಹಿತವನ್ನು ಬಯಸುವವನು, ಉತ್ತಮನಾದ ವೀರನು. ಗೋಚರ್ಮದಿಂದ ಚೆನ್ನಾಗಿ ಕಟ್ಟಲ್ಪಟ್ಟು ಬಲವಾಗಿರುವೆ. ಮತ್ತು ಅಲುಗಾಡದಂತೆ ಸ್ಥಿರವಾಗಿರುವೆ. ನಿನ್ನಲ್ಲಿ ಕುಳಿತಿರುವ ರಥಿಕನು ತಾನು ಗೆಲ್ಲಬೇಕೆಂದು ಅಪೇಕ್ಷಿಸುವುದನ್ನು ಗೆಲ್ಲಲಿ ಎಂದು ನಿರ್ವಚನದ ಮುಖ್ಯಾರ್ಥವು.

|| ಸಂಹಿತಾಪಾಠಃ ||

ದಿವಸ್ಪೃಥಿವ್ಯಾಃ ಪರ್ಯೋಜ ಉದ್ಭೃತಂ ವನಸ್ಪತಿಭ್ಯಃ ಪರ್ಯಾಭೃತಂ ಸಹಃ ।
ಅಪಾಮೋಜ್ಮಾನಂ ಪರಿ ಗೋಭಿರಾವೃತಮಿಂದ್ರಸ್ಯ ವಜ್ರಂ ಹವಿಷಾ ರಥಂ ಯಜ ॥ ೨೭ ॥

|| ಪದಪಾಠಃ ||

ದಿವಃ । ಪೃಥಿವ್ಯಾಃ । ಪರಿ । ಓಜಃ । ಉತ್ಽಭೃತಂ । ವನಸ್ಪತಿಽಭ್ಯಃ । ಪರಿ । ಆಽಭೃತಂ । ಸಹಃ ।
ಅಪಾಂ । ಓಜ್ಮಾನಂ । ಪರಿ । ಗೋಭಿಃ । ಆಽವೃತಂ । ಇಂದ್ರಸ್ಯ । ವಜ್ರಂ । ಹವಿಷಾ । ರಥಂ । ಯಜ ॥

|| ಸಾಯಣಭಾಷ್ಯಂ ||

ದಿವೋ ದ್ಯುಲೋಕಾತ್ಪೃಥಿವ್ಯಾ ಭೂಮೇಶ್ಚೋದ್ಧೃತಮುದ್ಧೃತಂ ಸಾರತ್ವೇನೋಪಾತ್ತಂ ಯದೋಜೋ ಬಲಮಸ್ತಿ ತದ್ರೂಪಂ । ವನಸ್ಪತಿವಿಕಾರತ್ವಾದ್ರಥಸ್ಯ । ವನಸ್ಪತಯೋ ಹಿ ಪೃಥಿವ್ಯಾಃ ಸಾರಭೂತಾಃ ತೇ ಚ ದ್ಯುಸಂಬಂಧಿಭಿರುದಕೈಃ ಪ್ರವೃದ್ಧಾಃ । ಅತೋ ರಥಸ್ಯ ಲೋಕದ್ವಯಸಾರತ್ವಮುಪಪನ್ನಂ ॥ ಪರಿ

ಪಂಚಮ್ಯರ್ಥಾನುವಾದೀ ॥ ಅಪಿ ಚ ವನಸ್ಪತಿಭ್ಯೋ ವೃಕ್ಷೇಭ್ಯಃ । ಪರಿ ಪೂರ್ವವತ್ । ಆಭೃತಮಾಹೃತಂ ಸಹೋ ಬಲರೂಪಮಪಾಮುದಕಾನಾಮೋಜ್ಮಾನಂ ಪ್ರೇರಕಂ । ಯದ್ವಾ । ಓಜ್ಮಾ ವೇಗಃ । ಅಪಾಂ ವೇಗ ಇವ ವೇಗವಂತಂ ಗೋಭಿರ್ಗೋವಿಕಾರೈಶ್ಚರ್ಮಭಿಃ ಪರಿ ಪರಿತ ಆವೃತಮಾವೇಷ್ಟಿತಮಿಂದ್ರಸ್ಯ ವಜ್ರಂ ವಜ್ರೈಕದೇಶಂ । ಶ್ರೂಯತೇ ಹಿ । ಇಂದ್ರೋ ವೃತ್ರಾಯ ವಜ್ರಮುದಯಚ್ಛತ್ ಸ ತ್ರೇಧಾ ವ್ಯಭವತ್ ವಜ್ರಸ್ತೃತೀಯಂ ರಥಸ್ತೃತೀಯಂ ಯೂಪಸ್ತೃತೀಯಮಿತಿ । ಏವಂಗುಣವಿಶಿಷ್ಟಂ ರಥಂ ಹವಿಷಾ ಪುರೋಡಾಶಾದಿನಾ ಹೇ ಅಧ್ವರ್ಯೋ ಯಜ ॥ ನೂನಮೇಷೋತ್ತರಾ ಚ ರಥದೇವತ್ಯಸ್ಯ ಹವಿಷೋ ಯಾಜ್ಯಾನುವಾಕ್ಯೇ ಲಿಂಗಾದವಗಂತವ್ಯೇ ॥

॥ ಪ್ರತಿಪದಾರ್ಥ ॥

(ಎಲೈ ಅಧ್ವರ್ಯುವೇ) **ದಿವಃ**—ದ್ಯುಲೋಕದಿಂದಲೂ । **ಪೃಥಿವ್ಯಾಃ ಪರಿ**—ಪೃಥ್ವಿಯಿಂದಲೂ । **ಉದ್-ಭೃತಂ**—ಆವಿರ್ಭೂತವಾದುದೂ । **ಓಜಃ**—ಬಲ ವಿಶಿಷ್ಟವಾದುದೂ । **ವನಸ್ಪತಿಭ್ಯಃ ಪರಿ**—ವನಸ್ಪತಿಗಳಿಂದ । **ಆಭೃತಂ**—ಸಂಪಾದಿತವಾದುದೂ । **ಸಹಃ**—ಶಕ್ತಿರೂಪಿಯಾದುದೂ । **ಅಪಾಂ**—ಉದಕಗಳಿಗೆ । **ಓಜ್ಮಾನಂ**—ಪ್ರೇರಕವಾದುದೂ । **ಇಂದ್ರಸ್ಯ**—ಇಂದ್ರನ । **ವಜ್ರಂ**—ವಜ್ರದ ಏಕದೇಶವಾದುದೂ । **ಗೋಭಿಃ**—ಗೋ ಚರ್ಮಗಳಿಂದ । **ಪರಿ ಆವೃತಂ**—ಸುತ್ತಲೂ ಆವೃತವಾದುದೂ ಆದ । **ರಥಂ**—ರಥವನ್ನು । **ಹವಿಷಾ**—ಪುರೋಡಾಶಾದಿಗಳಿಂದ । **ಯಜ**—ಪೂಜಿಸು.

॥ ಭಾವಾರ್ಥ ॥

ಎಲೈ ಅಧ್ವರ್ಯುವೇ. ದ್ಯುಲೋಕದಿಂದಲೂ, ಪೃಥ್ವಿಯಿಂದಲೂ ಈ ಎರಡು ಲೋಕಗಳ ಸಾರಭೂತವಾಗಿಯೂ ಶಕ್ತಿಸ್ವರೂಪವಾಗಿಯೂ ಉದ್ಧೃತವಾದುದೂ, ವನಸ್ಪತಿಗಳಿಂದ ಸಂಪಾದಿತವಾದುದೂ, ವೀರ್ಯವತ್ತಾದುದೂ, ಉದಕ ಗಳಿಗೆ ಪ್ರೇರಕವಾದುದೂ, ಇಂದ್ರನ ವಜ್ರಾಯುಧದ ಏಕದೇಶವಾದುದೂ, ಗೋ ಚರ್ಮಗಳಿಂದ ಸುತ್ತಲೂ ಆವೃತ ವಾದುದೂ ಆದ ರಥವನ್ನು ಪುರೋಡಾಶಾದಿಗಳಿಂದ ಪೂಜಿಸು.

English Translation.

Worship with obtations the chariot constructed of the substanee of heaven and earth, the extracted essence of the forest lords ; the velocity of the waters; the encompassed with the cow-hide ; the thunderbolt (of Indra).

॥ ಸಂಹಿತಾಪಾಠಃ ॥

ಇಂದ್ರಸ್ಯ ವಜ್ರೋ ಮರುತಾಮನೀಕಂ ಮಿತ್ರಸ್ಯ ಗರ್ಭೋ ವರುಣಸ್ಯ ನಾಭಿಃ ।

ಸೇಮಾಂ ನೋ ಹವ್ಯದಾತಿಂ ಜುಷಾಣೋ ದೇವ ರಥ ಪ್ರತಿ ಹವ್ಯಾ ಗೃಭಾಯ ॥ ೨೮ ॥

॥ ಪದಪಾಠಃ ॥

ಇಂದ್ರಸ್ಯ । ವಜ್ರಃ । ಮರುತಾಂ । ಅನೀಕಂ । ಮಿತ್ರಸ್ಯ । ಗರ್ಭಃ । ವರುಣಸ್ಯ । ನಾಭಿಃ ।

ಸಃ । ಇಮಾಂ । ನಃ । ಹವ್ಯಽದಾತಿಂ । ಜುಷಾಣಃ । ದೇವ । ರಥ । ಪ್ರತಿ । ಹವ್ಯಾ । ಗೃಭಾಯ ॥ ೨೮ ॥

॥ ಸಾಯಣಭಾಷ್ಯಂ ॥

**ಯೋ ರಥ ಇಂದ್ರಸ್ಯ ವಜ್ರ ಉಕ್ತಪ್ರಕಾರೇಣ ವಜ್ರೈಕದೇಶೋ ಮರುತಾಮೇತತ್ಸಂಜ್ಞಾನಾಂ ದೇವಗಣಾನಾಮನೀಕಮಗ್ರಭೂತಂ ತದ್ವಚ್ಛೀಘ್ರಗಾಮೀ ಮಿತ್ರಸ್ಯಾಹರಭಿಮಾನಿನೋ ದೇವಸ್ಯ ಗರ್ಭೋ ಗರ್ಭವದಂತರ್ವರ್ತಮಾನಃ । ಅಹನಿ ಹಿ ರಥಃ ಸಂಚರತಿ । ವರುಣಸ್ಯ ರಾತ್ರ್ಯಭಿಮಾನಿದೇವಸ್ಯ ನಾಭಿರ್ನಾಭಿಸ್ಥಾನೀಯಃ । ನಾಭಿರ್ಯಥಾ ದೇಹಮಧ್ಯೇ ನೈಶ್ಚಲ್ಯೇನಾವತಿಷ್ಠತೇ ತದ್ವದ್ರಾತ್ರೌ ಕ್ವಚಿದೇವ ಸ್ಥಿತಃ । ಹೇ ದೇವ ದ್ಯೋತಮಾನ ರಥ ಯ ಉಕ್ತಗುಣಃ ಸ ತಾದೃಶಸ್ತ್ವಮಿಮಾಂ ನೋಽಸ್ಮದೀಯಾಂ ಹವ್ಯದಾತಿಂ ಹವಿರ್ದಾನವತೀಂ ಯಾಗಕ್ರಿಯಾಂ ಜುಷಾಣಃ ಸೇವಮಾನಃ ಸನ್ ಹವ್ಯಾ ಹವ್ಯಾನ್ಯಸ್ಮದೀಯಾನಿ ಹವೀಂಷಿ ಪ್ರತಿ ಗೃಭಾಯ । ಪ್ರತಿಗೃಹಾಣ ॥**

॥ ಪ್ರತಿಪದಾರ್ಥ ॥

**ದೇವ**—ಪ್ರಕಾಶಮಾನನೂ । **ರಥ**—ರಥಾಭಿಮಾನಿಯೂ ಆದ ಎಲೈ ದೇವನೇ । **ಇಂದ್ರಸ್ಯ**—ಇಂದ್ರನ । **ವಜ್ರಃ**—ವಜ್ರಾಯುಧದ ಏಕದೇಶಿಯಾಗಿಯೂ । **ಮರುತಾಂ**—ಮರುತ್ತುಗಳ । **ಅನೀಕಂ**—ಅಗ್ರಗಾಮಿಯಾಗಿಯೂ । **ಮಿತ್ರಸ್ಯ**—ಮಿತ್ರದೇವನಿಗೆ । **ಗರ್ಭಃ**—ಮಧ್ಯವರ್ತಿಯಾಗಿಯೂ । **ವರುಣಸ್ಯ**—ವರುಣದೇವನಿಗೆ । **ನಾಭಿಃ**—ನಾಭಿ ಸ್ಥಾನೀಯನಾಗಿಯೂ ಆದ । **ಸಃ**—ನೀನು । **ನಃ**—ನಮ್ಮಿಂದ ಅರ್ಪಿತವಾದ । **ಇಮಾಂ**—ಈ । **ಹವ್ಯದಾತಿಂ**—ಯಾಗಕ್ರಿಯೆಯನ್ನು । **ಜುಷಾಣಃ**—ಸೇವಿಸುತ್ತಾ । **ಹವ್ಯಾ**—ಹವಿಸ್ಸುಗಳನ್ನು । **ಪ್ರತಿ ಗೃಭಾಯ**—ಸ್ವೀಕರಿಸು.

॥ ಭಾವಾರ್ಥ ॥

ಪ್ರಕಾಶಮಾನನೂ, ರಥಾಭಿಮಾನಿಯೂ ಆದ ಎಲೈದೇವನೇ, ನೀನು ಇಂದ್ರನ ವಜ್ರಾಯುಧದ ಏಕದೇಶಿಯಾಗಿಯೂ, ಮರುತ್ತುಗಳ ಅಗ್ರಗಾಮಿಯಾಗಿಯೂ ಮಿತ್ರದೇವನಿಗೆ ಗರ್ಭರೂಪನಾಗಿಯೂ, ವರುಣ ದೇವನಿಗೆ ನಾಭಿಸ್ಥಾನೀಯನಾಗಿಯೂ ಆದ ನೀನು ನಮ್ಮಿಂದ ಅರ್ಪಿತವಾದ ಈ ಯಾಗಕ್ರಿಯೆಯನ್ನು ಸೇವಿಸುತ್ತಾ ಹವಿಸ್ಸುಗಳನ್ನು ಸ್ವೀಕರಿಸು.

## English Translation.

Do you, divine chariot, who are the thunderbolt of Indra, the precursor of the Maruts, the embryo of Mitra, the navel of Varuna, propitiated by this our sacrifice, accept the oblation.

॥ ಸಂಹಿತಾಪಾಠಃ ॥

ಉಪ ಶ್ವಾಸಯ ಪೃಥಿವೀಮುತ ದ್ಯಾಂ ಪುರುತ್ರಾ ತೇ ಮನುತಾಂ ವಿಷ್ಠಿತಂ
ಜಗತ್ ।
ಸ ದುಂದುಭೇ ಸಜೂರಿಂದ್ರೇಣ ದೇವೈರ್ದೂರಾದ್ದವೀಯೋ ಅಪ ಸೇಧ
ಶತ್ರೂನ್ ॥ ೨೯ ॥

॥ ಪದಪಾಠಃ ॥

ಉಪ । ಶ್ವಾಸಯ । ಪೃಥಿವೀಂ । ಉತ । ದ್ಯಾಂ । ಪುರುऽತ್ರಾ । ತೇ । ಮನುತಾಂ । ವಿऽಸ್ಥಿತಂ । ಜಗತ್ ।

ಸಃ । ದುಂದುಭೇ । ಸऽಜೂಃ । ಇಂದ್ರೇಣ । ದೇವೈಃ । ದೂರಾತ್ । ದವೀಯಃ । ಅಪ । ಸೇಧ ।
ಶತ್ರೂನ್ ॥ ೨೯ ॥

॥ ಸಾಯಣಭಾಷ್ಯಂ ॥

ಪರೇಣ ತೃಚೇನ ಸಂಗ್ರಾಮೇ ದುಂದುಭಿರಭಿಮರ್ಶನೀಯಃ । ಸೂತ್ರಿತಂ ಚ । ಉಪ ಶ್ವಾಸಯ ಪೃಥಿವೀಮುತ ದ್ಯಾಮಿತಿ ತೃಚೇನ ದುಂದುಭಿಮಭಿಮೃಶೇತ್ । ಆ. ಗೃ. ೩-೧೨-೧೭ । ಇತಿ ॥

ಹೇ ದುಂದುಭೇ ಪೃಥಿವೀಮುತಾಪಿ ಚ ದ್ಯಾಂ ದಿವಮುಪ ಶ್ವಾಸಯ । ಆತ್ಮೀಯೇನ ಜಯಘೋಷೇಣಾಶ್ವಾಸಯ । ಯಥಾ ಲೋಕದ್ವಯಂ ತ್ವದೀಯೇನ ಶಬ್ದೇನಾಪೂರಿತಂ ಭವತಿ ತಾದೃಶಂ ಶಬ್ದಂ ಕುರ್ವಿತ್ಯರ್ಥಃ । ಅಪಿ ಚ ವಿಷ್ಠಿತಂ ವಿಶೇಷೇಣ ಸ್ಥಿತಂ ಸ್ಥಾವರಂ ಜಂಗಮಂ ಚೋಭಯವಿಧಂ ಪ್ರಾಣಿಜಾತಂ ತೇ ತ್ವದೀಯಂ ಶಬ್ದಂ ಪುರುತ್ರಾ ಬಹುಧಾ ಮನುತಾಂ । ಮನ್ಯತಾಂ । ಜಾನಾತು । ಹೇ ದುಂದುಭೇ ಸ ತ್ವಮಿಂದ್ರೇಣಾನ್ಯೈರ್ದೇವೈಶ್ಚ ಸಜೂಃ ಸಹ ದೂರಾದ್ದವೀಯೋ ದೂರಾದಪಿ ದೂರತರಂ ಶತ್ರೂನಸ್ಮದೀಯಾನಪ ಸೇಧ । ಅಪಗಮಯ । ಅತ್ರ ನಿರುಕ್ತಂ । ದುಂದುಭಿರಿತಿ ಶಬ್ದಾನುಕರಣಂ ದ್ರುಮೋ ಭಿನ್ನ ಇತಿ ವಾ ದುಂದುಭ್ಯತೇರ್ವಾ ಸ್ಯಾದ್ವಧಕರ್ಮಣಃ । ನಿ. ೯-೧೨ । ಇತ್ಯಾದಿ ॥

॥ ಪ್ರತಿಪದಾರ್ಥ ॥

**ದುಂದುಭೇ**—ಎಲೈ ದುಂದುಭಿಸಂಜ್ಞಕವಾದ ರಣವಾದ್ಯವಿಶೇಷವೇ । **ಪೃಥಿವೀಂ**—ಪೃಥಿವಿಯನ್ನೂ । **ಉತ**—ಮತ್ತು । **ದ್ಯಾಂ ಉಪ**—ದ್ಯುಲೋಕವನ್ನೂ (ಪೂರ್ಣವಾಗಿ ವ್ಯಾಪಿಸುವಂತೆ) । **ಶ್ವಾಸಯ**—ಗಟ್ಟಿಯಾದ ಶಬ್ದವನ್ನು ಮಾಡು । **ವಿಷ್ಠಿತಂ**—ಸ್ಥಿರವಾಗಿ ನಿಂತಿರತಕ್ಕದ್ದೂ । **ಜಗತ್**—ಜಂಗಮಾತ್ಮಕವಾದುದೂ ಆದ ಎರಡು ವಿಧವಾದ ಭೂತಗಳೂ । **ತೇ**—ನಿನ್ನ ಶಬ್ದವನ್ನು । **ಪುರುತ್ರಾ**—ಅನೇಕ ಪ್ರಕಾರವಾಗಿ । **ಮನುತಾಂ**—ತಿಳಿಯಲಿ । (ಎಲೈ ದುಂದುಭಿಯೇ) । **ಸಃ**—ಪ್ರಸಿದ್ಧನಾದ ನೀನು । **ಇಂದ್ರೇಣ**—ಇಂದ್ರನೊಡನೆಯೂ । **ದೇವೈಃ**—

ಇತರ ದೇವತೆಗಳೊಡನೆಯೂ | **ಸಜೂಃ**—ಕೂಡಿಕೊಂಡು | **ದೂರಾದ್ದವೀಯಃ**—ಅತ್ಯಂತ ದೂರದಲ್ಲಿದ್ದರೂ ಸಹ | **ಶತ್ರೂನ್**—ಶತ್ರುಗಳನ್ನು | **ಅಪ ಸೇಧ**—ಓಡಿಸಿ ಕಣ್ಮರೆಯಾಗುವಂತೆ ಮಾಡು.

|| ಭಾವಾರ್ಥ ||

ಎಲೈ ದುಂದುಭಿಸಂಜ್ಞಕವಾದ ರಣವಾದ್ಯವಿಶೇಷವೇ, ಪೃಥ್ವಿಯನ್ನೂ, ದ್ಯುಲೋಕವನ್ನೂ ಪೂರ್ಣವಾಗಿ ವ್ಯಾಪಿಸುವಂತೆ ಗಟ್ಟಿಯಾದ ಶಬ್ದವನ್ನು ಮಾಡು. ಸ್ಥಾವರಜಂಗಮಾತ್ಮಕವಾದ ಎರಡು ವಿಧವಾದ ಭೂತಗಳೂ ನಿನ್ನ ಶಬ್ದವನ್ನು ಅನೇಕಪ್ರಕಾರವಾಗಿ ತಿಳಿಯಲಿ. ಎಲೈ ದುಂದುಭಿಯೇ, ಪ್ರಸಿದ್ಧನಾದ ನೀನು ಇಂದ್ರನೊಡನೆಯೂ ಇತರ ದೇವತೆಗಳೊಡನೆಯೂ ಕೂಡಿಕೊಂಡು ಅತ್ಯಂತ ದೂರದಲ್ಲಿದ್ದರೂ ಸಹ ಶತ್ರುಗಳನ್ನು ಓಡಿಸಿ ಕಣ್ಮರೆಯಾಗುವಂತೆ ಮಾಡು.

## English Translation.

War drum, fill with your sound both heaven and earth; and let all things, fixed or moveable, be aware of it: do you, who are associated with Indra and the gods, drive away our foes to the remotest distance.

|| ವಿಶೇಷವಿಷಯಗಳು ||

ಯುದ್ಧಕಾಲದಲ್ಲಿ ಉಪಶ್ವಾಸಯ ಎಂದು ಮೊದಲಾಗುವ ತೃಚದಿಂದ (ಮೂರು ಋಕ್ಕುಗಳಿಂದ) ದುಂದುಭಿಯನ್ನು (ನಗಾರಿಯನ್ನು) ಅಭಿಮರ್ಶನ ಮಾಡಬೇಕೆಂದು ಆಶ್ವಲಾಯಗೃಹ್ಯಸೂತ್ರದ—**ಉಪ ಶ್ವಾಸಯ ಪೃಥಿವೀಮುತ ದ್ಯಾಮಿತಿ ತೃಚೇನ ದುಂದುಭಿಮಭಿಮೃಶೇತ್** ಎಂಬ ಸೂತ್ರದಿಂದ (ಆ. ಗೃ. ೩-೧೨-೧೭) ವಿವೃತವಾಗಿರುವುದು.

ದುಂದುಭಿಶಬ್ದದ ಅರ್ಥವನ್ನು ವಿವರಿಸುವ ಸಂದರ್ಭದಲ್ಲಿ ಯಾಸ್ಕರು ಈ ಋಕ್ಕಿಗೆ ನಿರ್ವಚನವನ್ನು ಹೇಳಿದಾರೆ—

**ದುಂದುಭಿಃ । ದುಂದುಭಿರಿತಿ ಶಬ್ದಾನುಕರಣಂ । ದ್ರುಮೋ ಭಿನ್ನ ಇತಿ ವಾ । ದುಂದುಭ್ಯತೇರ್ವಾ ಸ್ಯಾಚ್ಛಬ್ದಕರ್ಮಣಃ ॥ ತಸ್ಯೈಷಾ ಭವತಿ ॥**

**ಉಪ ಶ್ವಾಸಯ ಪೃಥಿವೀಂ ಚ ದಿವಂ ಚ ಬಹುಧಾ ತೇ ಘೋಷಂ ಮನ್ಯತಾಂ ವಿಷ್ಠಿತಂ ಸ್ಥಾವರಂ ಜಂಗಮಂ ಚ ಯತ್ ಸ ದುಂದುಭೇ ಸಹಜೋಷಣ ಇಂದ್ರೇಣ ಚ ದೇವೇಭ್ಯಶ್ಚ ದೂರಾತ್ ದೂರತರಮಪಸೇಧ ಶತ್ರೂನ್ ॥**

(ನಿ. ೯-೧೩)

ದುಂದುಭಿ ಎಂದರೆ ನಗಾರಿಯು; ಧುಂ ಧುಂ ಎಂದು ಶಬ್ದ ಮಾಡುವುದರಿಂದ ಇದಕ್ಕೆ ದುಂದುಭಿಯೆಂದು ಹೆಸರುಬಂದಿರುವುದು. ಅಥವಾ ದ್ರುಮವೆಂದರೆ ಮರವು ಅದನ್ನು ಭಿನ್ನಮಾಡಿ ಕತ್ತರಿಸಿ ಇದನ್ನು ನಿರ್ಮಿಸಿರುವುದರಿಂದ ಇದಕ್ಕೆ ದುಂದುಭಿಯೆಂದು ಹೆಸರು ಅಥವಾ ಶಬ್ದಮಾಡುವುದು ಎಂಬರ್ಥವಿರುವ **ದುಂದುಭ್ಯ** ಎಂಬ ಶಬ್ದದಿಂದಲಾದರೂ ನಿಷ್ಪನ್ನವಾಗಬಹುದು

ಎಲೈ ದುಂದುಭಿಯೇ, ನಿನ್ನ ಘೋಷದಿಂದ ಭೂಮಿಯನ್ನೂ ಸ್ವರ್ಗವನ್ನೂ ವ್ಯಾಪಿಸಿ ತುಂಬುವಂತೆ ಮಾಡು ಎಂದರೆ ನಿನ್ನ ಘಟ್ಟಿಯಾದ ಧ್ವನಿಯು ಭೂಮ್ಯಂತರಿಕ್ಷಗಳನ್ನು ವ್ಯಾಪಿಸಲಿ. ಚರಾಚರಾತ್ಮಕವಾದ ಸಮಸ್ತ ವಸ್ತುಗಳೂ ಅಥವಾ ಪ್ರಾಣಿಗಳೂ ನಿನ್ನನ್ನು (ನಿನ್ನ ಶಬ್ದವನ್ನು) ತಿಳಿಯಲಿ. ಮತ್ತು ಎಲೈ ದುಂದುಭಿಯೇ, ನೀನು ಇಂದ್ರನೊಡನೆಯೂ ದೇವತೆಗಳೊಡನೆಯೂ ಸೇರಿ ನಮ್ಮ ಶತ್ರುಗಳನ್ನು ದೂರದೂರಕ್ಕೆ ಎಂದರೆ ಬಹುದೂರಕ್ಕೆ ಓಡಿಹೋಗುವಂತೆ ಮಾಡು ಎಂದು ನಿರ್ವಚನದ ಮುಖ್ಯಾರ್ಥವು.

॥ ಸಂಹಿತಾಪಾಠಃ ॥

**ಆ ಕ್ರಂದಯ ಬಲಮೋಜೋ ನ ಆ ಧಾ ನಿಃ ಷ್ಟನಿಹಿ ದುರಿತಾ ಬಾಧಮಾನಃ ।**
**ಅಪ ಪ್ರೋಥ ದುಂದುಭೇ ದುಚ್ಛುನಾ ಇತ ಇಂದ್ರಸ್ಯ ಮುಷ್ಟಿರಸಿ ವೀಳಯಸ್ವ ॥ ೩೦ ॥**

॥ ಪದಪಾಠಃ ॥

**ಆ । ಕ್ರಂದಯ । ಬಲಂ । ಓಜಃ । ನಃ । ಆ । ಧಾಃ । ನಿಃ । ಸ್ತನಿಹಿ । ದುಃऽಇತಾ । ಬಾಧಮಾನಃ ।**
**ಅಪ । ಪ್ರೋಥ । ದುಂದುಭೇ । ದುಚ್ಛುನಾಃ । ಇತಃ । ಇಂದ್ರಸ್ಯ । ಮುಷ್ಟಿಃ । ಅಸಿ । ವೀಳಯಸ್ವ ॥೩೦॥**

॥ ಸಾಯಣಭಾಷ್ಯಂ ॥

**ಹೇ ದುಂದುಭೇ ಆ ಕ್ರಂದಯ । ಅಸ್ಮಚ್ಛತ್ರೂನ್ರೋದಯ । ಬಲಂ ಸೇನಾರೂಪಮೋಜಃ ಶರೀರಬಲಂ ಚ ನೋಽಸ್ಮಭ್ಯಮಾ ಧಾಃ । ಆಧೇಹಿ । ಪ್ರಯಚ್ಛ । ತಥಾ ದುರಿತಾ ದುರಿತಾನಿ ದುರ್ಗಮನಾನಿ ಬಾಧಮಾನೋ ಹಿಂಸಂಸ್ತ್ವಂ ನಿಃ ಸ್ತನಿಹಿ । ನಿತರಾಂ ಶಬ್ದಂ ಕುರು ॥ ಸ್ತನ ಶಬ್ದ ಇತಿ ಧಾತುಃ ॥ ಹೇ ದುಂದುಭೇ ದುಚ್ಛುನಾ ಅಸ್ಮದ್ದುಃಖಹೇತುಭೂತಂ ಶುನಂ ಸುಖಂ ಯಾಸಾಂ ತಾದೃಶೀಃ ಶತ್ರುಸೇನಾ ಇತೋಽಸ್ಮತ್ಸ್ಥಾನಾದಪ ಪ್ರೋಥ । ಬಾಧಸ್ವ । ತ್ವಂ ಚೇಂದ್ರಸ್ಯ ಮುಷ್ಟಿರಸಿ । ಮುಷ್ಟಿರಿವ ಶತ್ರೂಣಾಂ ಹಂತಾ ಭವಸಿ । ಅತೋಽಸ್ಮಾನ್ವೀಳಯಸ್ವ । ದೃಢೀಕುರು ॥**

॥ ಪ್ರತಿಪದಾರ್ಥ ॥

**ದುಂದುಭೇ**—ಎಲೈ ದುಂದುಭಿಯೇ । **ಆ ಕ್ರಂದಯ**—ನಮ್ಮ ಶತ್ರುಗಳನ್ನು ಅಳಿಸು । **ಬಲಂ**—ಸೇನಾರೂಪವಾದ ಬಲವನ್ನೂ । **ಓಜಃ**—ನಮ್ಮ ಶರೀರಶಕ್ತಿಯನ್ನೂ । **ನಃ**—ನಮಗೆ । **ಆ ಧಾಃ**—ಒದಗಿಸು । **ದುರಿತಾ**—ಪಾಪಬುದ್ಧಿಯುಳ್ಳ ಶತ್ರುಗಳನ್ನು । **ಬಾಧಮಾನಃ**—ಹಿಂಸಿಸುತ್ತಾ । **ನಿಃ ಸ್ತನಿಹಿ**—ಅಧಿಕವಾದ ಶಬ್ದವನ್ನು ಮಾಡು । **ದುಚ್ಛುನಾಃ**—ನಮಗೆ ದುಃಖವನ್ನುಂಟುಮಾಡುವ ಶತ್ರುಸೇನೆಗಳನ್ನು । **ಇತಃ** – ಈ ಪ್ರದೇಶದಿಂದ । **ಅಪ ಪ್ರೋಥ**—ದೂರಕ್ಕೆ ಓಡಿಸು । (**ತ್ವಂ**—ನೀನಾದರೋ) । **ಇಂದ್ರಸ್ಯ**—ಇಂದ್ರನಿಗೆ । **ಮುಷ್ಟಿಃ ಅಸಿ**—ಮುಷ್ಟಿರೂಪನಾಗಿದ್ದೀಯೆ । **ವೀಳಯಸ್ವ**—(ಆದುದರಿಂದಲೇ) ನಮ್ಮನ್ನು ಬಲಪಡಿಸು.

॥ ಭಾವಾರ್ಥ ॥

ಎಲೈ ದುಂದುಭಿಯೇ, ನಮ್ಮ ಶತ್ರುಗಳು ಅಳುವಂತೆ ಮಾಡು. ಸೇನಾರೂಪವಾದ ಬಲವನ್ನೂ ನಮ್ಮ ಶರೀರಕ್ಕೆ ಸ್ವಶಕ್ತಿಯನ್ನೂ ಒದಗಿಸು. ಪಾಪ ಬುದ್ಧಿಯುಳ್ಳ ಶತ್ರುಗಳನ್ನು ಹಿಂಸಿಸುತ್ತಾ ಅಧಿಕವಾದ ಶಬ್ದವನ್ನುಂಟುಮಾಡು. ನನುಗೆ ದುಃಖವನ್ನುಂಟುಮಾಡುವ ಶತ್ರುಸೇನೆಗಳನ್ನು ಈ ಪ್ರದೇಶದಿಂದ ದೂರಕ್ಕೆ ಓಡಿಸು. ಎಲೈ ದುಂದುಭಿಯೇ, ನೀನು ಇಂದ್ರನಿಗೆ ಮುಷ್ಟಿರೂಪನಾಗಿದ್ದೀಯೆ. ಆದುದರಿಂದಲೇ ನಮ್ಮನ್ನು ಬಲವಂತರನ್ನಾಗಿ ಮಾಡು.

## English Translation.

Sound loud against the (hostile) host : animate our prowess: thunder aloud, terrifying the evil-minded : repel, drum, those whose delight it is to harm us : you are the fist of Indra ; inspire us with fierceness.

॥ ಸಂಹಿತಾಪಾಠಃ ॥

ಆಮೂರಜ ಪ್ರತ್ಯಾವರ್ತಯೇಮಾಃ ಕೇತುಮದ್ದುಂದುಭಿರ್ವಾವದೀತಿ ।
ಸಮಶ್ವಪರ್ಣಾಶ್ಚರಂತಿ ನೋ ನರೋಽಸ್ಮಾಕಮಿಂದ್ರ ರಥಿನೋ ಜಯಂತು ॥

॥ ಪದಪಾಠಃ ॥

ಆ । ಅಮೂಃ । ಅಜ । ಪ್ರತಿಽಆವರ್ತಯ । ಇಮಾಃ । ಕೇತುಽಮತ್ । ದುಂದುಭಿಃ । ವಾವದೀತಿ ।
ಸಂ । ಅಶ್ವಽಪರ್ಣಾಃ । ಚರಂತಿ । ನಃ । ನರಃ । ಅಸ್ಮಾಕಂ । ಇಂದ್ರ । ರಥಿನಃ । ಜಯಂತು ॥ ೩೧ ॥

॥ ಸಾಯಣಭಾಷ್ಯಂ ॥

ಅಸ್ಯಾಃ ಪೂರ್ವಾರ್ಧೋ ದುಂದುಭಿದೇವತ್ಯ ಉತ್ತರಾರ್ಧಶ್ಚೈಂದ್ರಃ । ಯದ್ವಾ । ಉಭಾವಪ್ಯರ್ಧರ್ಚಾವೈಂದ್ರೌ । ಹೇ ಇಂದ್ರ ಅಮೂಃ ಶತ್ರುಷು ಸ್ಥಿತಾಸ್ತಾ ಗಾ ಆಜ । ಅಸ್ಮಾನ್ಪ್ರತ್ಯಾಗಮಯ । ಇಮಾ ಅಸ್ಮದೀಯಾ ಗಾಃ ಶತ್ರುಭಿರ್ಜಿಘೃಕ್ಷಿತಾಃ ಪ್ರತ್ಯಾವರ್ತಯ । ಪ್ರತಿನಿವರ್ತಯ । ಅಯಂ ಚ ದುಂದುಭಿಃ ಕೇತುಮತ್ ಪ್ರಜ್ಞಾನವತ್ ಯಥಾ ಸರ್ವೈರ್ಜ್ಞಾಯತೇ ತಥಾ ವಾವದೀತಿ । ಭೃಶಂ ಶಬ್ದಂ ಕರೋತಿ । ಅಶ್ವಪರ್ಣಾ ಅಶ್ವಪತನಾ ಅಶ್ವವಾಹಾಶ್ಚ ನೋಽಸ್ಮದೀಯಾಶ್ಚ ನರಃ ಪುರುಷಾಃ ಸಂ ಚರಂತಿ । ಶತ್ರುಭಿರ್ಯುಧ್ಯಮಾನಾ ವರ್ತಂತೇ । ತಥಾ ಸತಿ ಹೇ ಇಂದ್ರ ಅಸ್ಮಾಕಂ ರಥಿನೋ ರಥಾರೂಢಾಃ ಪುರುಷಾಃ ಶತ್ರೂನ್ ಜಯಂತು ॥

॥ ಪ್ರತಿಪದಾರ್ಥ ॥

**ಇಂದ್ರ**—ಎಲೈ ಇಂದ್ರನೇ | **ಅಮೂಃ**—ಶತ್ರುಗಳಲ್ಲಿರುವ ನಮ್ಮ ಗೋವುಗಳನ್ನು | **ಆ ಅಜ**—ನಮ್ಮಲ್ಲಿ ಬಂದು ಸೇರುವಂತೆ ಮಾಡು | **ಇಮಾಃ**—ನಮ್ಮ ಇದೇ ಗೋವುಗಳನ್ನು | **ಪ್ರತ್ಯಾವರ್ತಯ**—ನಮ್ಮಲ್ಲಿಗೆ ಹಿಂತಿರುಗಿಸು | **ದುಂದುಭಿಃ**—ಈ ರಣವಾದ್ಯವು | **ಕೇತುಮತ್**—ಎಲ್ಲರ ಗಮನಕ್ಕೂ ಬರುವಂತೆ | **ವಾವದೀತಿ**—ಶಬ್ದವನ್ನು ಮಾಡುತ್ತದೆ | **ಅಶ್ವಪರ್ಣಾಃ**—ಅಶ್ವಾರೂಢರೂ |**ನಃ**—ನಮಗೆ ಸೇರಿದವರೂ ಆದ | **ನರಃ**—ಪುರುಷರು | **ಸಂ ಚರಂತಿ**—ರಣರಂಗದಲ್ಲಿ ಓಡಾಡುತ್ತಿದ್ದಾರೆ | **ಅಸ್ಮಾಕಂ**—ನಮಗೆ ಸೇರಿದ | **ರಥಿನಃ**—ರಥಾರೂಢರಾದ ಪುರುಷರು | **ಜಯಂತು**—ಶತ್ರುಗಳನ್ನು ಜಯಿಸಲಿ.

॥ ಭಾವಾರ್ಥ ॥

ಎಲೈ ಇಂದ್ರನೇ, ಶತ್ರುಗಳಲ್ಲಿರುವ ನಮ್ಮ ಗೋವುಗಳನ್ನು ನಮ್ಮಲ್ಲಿ ಬಂದು ಸೇರುವಂತೆ ಮಾಡು. ನಮ್ಮ ಇದೇ ಗೋವುಗಳನ್ನು ನಮ್ಮಲ್ಲಿಗೆ ಹಿಂತಿರುಗಿಸು. ಈ ರಣದುಂದುಭಿಯೂ ಸಕಲರಿಗೂ ತಿಳಿಯುವಂತೆ ಶಬ್ದವನ್ನು ಮಾಡುತ್ತದೆ. ಅಶ್ವಾರೂಢರೂ, ರಥಾರೂಢರೂ ಆದ ನಮ್ಮ ಯೋಧರು ರಣರಂಗದಲ್ಲಿ ಸಂಚರಿಸುತ್ತಿದ್ದಾರೆ. ಅವರೆಲ್ಲರೂ ಶತ್ರುಗಳನ್ನು ಜಯಿಸುವಂತಾಗಲಿ.

English Translation.

Recover these our cattle, Indra ; bring them back : the drum sounds repeatedly as a signal : our leaders, mounted on their steeds, assemble : may our warriors, riding in their cars, Indra, be victorious.



**ವೇದಾರ್ಥಸ್ಯ ಪ್ರಕಾಶೇನ ತಮೋ ಹಾರ್ದಂ ನಿವಾರಯನ್ ।**
**ಪುಮರ್ಥಾಂಶ್ಚತುರೋ ದೇಯಾದ್ವಿದ್ಯಾತೀರ್ಥಮಹೇಶ್ವರಃ ॥**

**ಇತಿ ಶ್ರೀಮದ್ರಾಜಾಧಿರಾಜ ಪರಮೇಶ್ವರ ವೈದಿಕಮಾರ್ಗಪ್ರವರ್ತಕ ಶ್ರೀ ವೀರಬುಕ್ಕಭೂಪಾಲಸಾಮ್ರಾಜ್ಯ-ಧುರಂಧರೇಣ ಸಾಯಣಾಚಾರ್ಯೇಣ ವಿರಚಿತೇ ಮಾಧವೀಯೇ ವೇದಾರ್ಥಪ್ರಕಾಶೇ ಋಕ್ಸಂಹಿತಾಭಾಷ್ಯೇ ಚತುರ್ಥಾಷ್ಟಕೇ ಸಪ್ತಮೋಽಧ್ಯಾಯಃ ಸಮಾಪ್ತಃ**

॥ ಓಂ ತತ್ಸತ್ ॥

ಇಲ್ಲಿಗೆ ಶ್ರೀಸಾಯಣಭಾಷ್ಯಸಹಿತವೂ ಕರ್ನಾಟಕ ಭಾಷಾನುವಾದಯುತವೂ ಆದ
ಋಗ್ವೇದಸಂಹಿತೆಯ ನಾಲ್ಕನೆಯ ಅಷ್ಟಕದಲ್ಲಿ
ಏಳನೆಯ ಅಧ್ಯಾಯವು ಮುಗಿದುದು.

ಯದಕ್ಷರಪದಭ್ರಷ್ಟಂ ಮಾತ್ರಾಹೀನಂ ತು ಯದ್ಭವೇತ್ ।
ತತ್ಸರ್ವಂ ಕ್ಷಮ್ಯತಾಂ ದೇವ ವಾಗೀಶ್ವರ ನಮೋಽಸ್ತು ತೇ ॥

॥ ಶುಭಂ ಭೂಯಾತ್ ॥

॥ ಮಂಗಳಂ ॥





॥ ಶ್ರೀಃ ॥

॥ ಶ್ರೀ ಗಣಾಧಿಪತಯೇ ನಮಃ ॥

ವಾಗೀಶಾದ್ಯಾಃ ಸುಮನಸಃ ಸರ್ವಾರ್ಥಾನಾಮುಪಕ್ರಮೇ ।
ಯಂ ನತ್ವಾ ಕೃತಕೃತ್ಯಾಃ ಸ್ಯುಸ್ತಂ ನಮಾಮಿ ಗಜಾನನಂ ॥
ಯಸ್ಯ ನಿಃಶ್ವಸಿತಂ ವೇದಾ ಯೋ ವೇದೇಭ್ಯೋಽಖಿಲಂ ಜಗತ್ ।
ನಿರ್ಮಮೇ ತಮಹಂ ವಂದೇ ವಿದ್ಯಾತೀರ್ಥಮಹೇಶ್ವರಂ ॥
ವೇದಃ ಶಿವಃ ಶಿವೋ ವೇದೋ ವೇದಾಧ್ಯಾಯೀ ಸದಾಶಿವಃ ।
ತಸ್ಮಾತ್ಸರ್ವಪ್ರಯತ್ನೇನ ವೇದಮೇವ ಸದಾ ಜಪೇತ್ ॥

## ಸಾಯಣಭಾಷ್ಯಸಹಿತಾ

# ಋಗ್ವೇದಸಂಹಿತಾ

(ಕರ್ನಾಟಕ ಭಾಷಾರ್ಥಾನುವಾದ ವಿವರಣೆ ಸಹಿತವಾಗಿ)

---

## ॥ ಚತುರ್ಥಾಷ್ಟಕೇ ಅಷ್ಟಮೋಽಧ್ಯಾಯಃ ॥

### ನಾಲ್ಕನೆಯ ಅಷ್ಟಕದಲ್ಲಿ ಎಂಟನೆಯ ಅಧ್ಯಾಯವು

## ಆರನೆಯ ಮಂಡಲದ ನಲವತ್ತೆಂಟನೆಯ ಸೂಕ್ತವು

॥ ಸಾಯಣಭಾಷ್ಯಂ ॥

ಅಥಾಷ್ಟಮಾಧ್ಯಾಯ ಆರಭ್ಯತೇ । ಷಷ್ಠಮಂಡಲಸ್ಯ ಚತುರ್ಥೇಽನುವಾಕೇ ಚತ್ವಾರಿ ಸೂಕ್ತಾನಿ ವ್ಯಾಖ್ಯಾತಾನಿ । ಯಜ್ಞಾಯಜ್ಞೇತಿ ದ್ವಾವಿಂಶತ್ಯೃಚಂ ಪಂಚಮಂ ಸೂಕ್ತಂ ಬೃಹಸ್ಪತಿಪುತ್ರಸ್ಯ ಶಂಯೋರಾರ್ಷಂ ಅತ್ರಾನುಕ್ರಮ್ಯತೇ । ಯಜ್ಞಾಯಜ್ಞಾ ದ್ವ್ಯಧಿಕಾ ಶಂಯುಸ್ತೃಣಪಾಣಿಕಂ ಪ್ರಶ್ನಿಸೂಕ್ತಂ ಪ್ರಗಾಥೌ ಬೃಹತೀ ಮಹಾಸತೋಬೃಹತೀ ಮಹಾಬಾರ್ಹತಬಾರ್ಹತೌ ಪ್ರಗಾಥಾವಿತ್ಯಾಗ್ನೇಯ್ಯಃ ಕಾಕುಭಃ ಪ್ರಗಾಥಃ ಪುರಉಷ್ಣಿಗ್ಬೃಹತ್ಯತಿಜಗತೀತಿ ಮಾರುತ್ಯೋಽಂತ್ಯಾಸ್ತಿಸ್ರೋ ವಾಸಾಂ ಲಿಂಗೋಕ್ತದೇವತಾಃ ಕಾಕುಭಃ ಪ್ರಗಾಥಃ ಪುರಉಷ್ಣಿಗ್ಬೃಹತೀತಿ ಪೌಷ್ಣ್ಯೋ ಬೃಹತೀ ಮಹಾಬೃಹತೀ ಯವಮಧ್ಯಾಂತ್ಯಾನುಷ್ಟುಬ್ದ್ಯಾವಾಭೂಮ್ಯೋರ್ವಾ ಪೃಶ್ನೇರ್ವೇತಿ । ಯಜ್ಞಾಯಜ್ಞಾ ವ ಇತ್ಯೇಷಾ

**ಬೃಹತೀ । ತೃತೀಯೋ ದ್ವಾದಶಕ ಇತಿ ತಲ್ಲಕ್ಷಣಸದ್ಭಾವಾತ್ । ದ್ವಿತೀಯಾ ಸತೋಬೃಹತೀ । ಅಯುಜೌ ಜಾಗತೌ ಸತೋಬೃಹತೀತ್ಯುಕ್ತಲಕ್ಷಣೋಪೇತತ್ವಾತ್ । ತೃತೀಯಾಚತುರ್ಥೀ ಬೃಹತೀಸತೋಬೃಹತ್ಯೌ ಪಂಚಮೀ ಬೃಹತೀ ಷಷ್ಠೀ ಮಹಾಸತೋಬೃಹತೀ । ಅಷ್ಟಾಕ್ಷರಾಸ್ತ್ರಯಃ ಪಾದಾ ದ್ವಾದಶಾಕ್ಷರಾ ದ್ವೌ ಪಾದೌ ಸಾ ಮಹಾಸತೋಬೃಹತೀ । ಸಪ್ತಮೀ ಮಹಾಬೃಹತೀ । ಅಷ್ಟಾಕ್ಷರಾಶ್ಚತ್ವಾರಃ ಪಾದಾ ಏಕೋ ದ್ವಾದಶಾಕ್ಷರಃ ಸಾ ಮಹಾಬೃಹತೀ । ಅಷ್ಟಮೀ ಮಹಾಸತೋಬೃಹತೀ । ಅಷ್ಟಿನಸ್ತ್ರಯೋ ದ್ವೌ ಜಾಗತೌ ಸಾ ಮಹಾಸತೋ ಬೃಹತೀ । ನವಮೀ ಬೃಹತೀ ದಶಮೀ ಸತೋಬೃಹತೀ । ಏತಾ ದಶಾಗ್ನಿದೇವತ್ಯಾಃ । ಏಕಾದಶೀ ಕಕುಪ್ । ಮಧ್ಯಮೋ ಯದಿ ದ್ವಾದಶಾಕ್ಷರ ಉಭಯತೋಽಷ್ಟಕೌ ದ್ವೌ ಪಾದೌ ಸಾ ಕಕುಪ್ । ದ್ವಾದಶೀ ಸತೋಬೃಹತೀ ತ್ರಯೋದಶೀ ಪುರಉಷ್ಣಿಕ್ । ಆದ್ಯೋ ಜಾಗತೋ ದ್ವಿತೀಯತೃತೀಯೌ ಗಾಯತ್ರೌ ಸಾ ಪುರಉಷ್ಣಿಕ್ । ಚತುರ್ದಶೀ ಬೃಹತೀ ಪಂಚದಶ್ಯತಿಜಗತೀ ದ್ವಾಪಂಚಾಶದಕ್ಷರಾ । ಏಕಾದಶ್ಯಾದ್ಯಾಃ ಪಂಚ ಮರುದ್ದೇವತಾಕಾಃ । ತ್ರಯೋದಶ್ಯಾದೀನಾಂ ತಿಸೃಣಾಂ ಲಿಂಗೋಕ್ತಾ ಇಂದ್ರಾದಯೋ ವಾ ದೇವತಾಃ । ಷೋಡಶೀ ಕಕುಪ್ ಸಪ್ತದಶೀ ಸತೋಬೃಹತ್ಯಷ್ಟಾದಶೀ ಪುರಉಷ್ಣಿಗೇ-ಕೋನವಿಂಶೀ ಬೃಹತೀ । ಷೋಡಶ್ಯಾದೀನಾಂ ಚತಸೃಣಾಂ ಪೂಷಾ ದೇವತಾ । ವಿಂಶೀ ಬೃಹತ್ಯೇಕವಿಂಶೀ ಯವಮಧ್ಯಾ ಮಹಾಬೃಹತೀ । ಆದ್ಯೌ ದ್ವಾವಷ್ಟಕೌ ತೃತೀಯೋ ದ್ವಾದಶಕಶ್ಚತುರ್ಥಪಂಚಮಾವಷ್ಟಕೌ ಸಾ ಯವಮಧ್ಯಾ ಮಹಾಬೃಹತೀ । ವಿಂಶ್ಯೇಕವಿಂಶ್ಯೋಃ ಪೃಶ್ನಿಸೂಕ್ತಮಿತ್ಯುಕ್ತತ್ವಾನ್ಮರುತಾಂ ಮಾತಾ ಪೃಶ್ನಿರ್ದೇವತಾ । ದ್ವಾವಿಂಶ್ಯನುಷ್ಟುಪ್ । ಸ ಚಾಪಿ ಪೃಶ್ನಿದೇವತ್ಯಾ ದ್ಯಾವಾಭೂಮಿದೇವತ್ಯಾ ವಾ ॥ ಸೂಕ್ತವಿನಿಯೋಗೋ ಲೈಂಗಿಕಃ । ಅಗ್ನಿಮಾರುತೇ ಯಜ್ಞಾಯಜ್ಞಾ ವ ಇತ್ಯಯಂ ಸ್ತೋತ್ರಿಯಪ್ರಗಾಥಃ । ಸೂತ್ರಿತಂ ಚ । ಯಜ್ಞಾಯಜ್ಞಾ ವೋ ಅಗ್ನಯೇ ದೇವೋ ವೋ ದ್ರವಿಣೋದಾ ಇತಿ ಪ್ರಗಾಥೌ ಸ್ತೋತ್ರಿಯಾನುರೂಪೌ ॥ ಆ. ೫-೨೦ । ಇತಿ ॥**

ಋಗ್ವೇದಸಂಹಿತೆಯಲ್ಲಿ ನಾಲ್ಕನೆಯ ಅಷ್ಟಕದ ಏಳನೆಯ ಅಧ್ಯಾಯದ ವಿವರಣೆಯು ಮುಗಿದಿರುವುದರಿಂದ ಈಗ ಎಂಟನೆಯ ಅಧ್ಯಾಯದ ವಿವರಣೆಯನ್ನು ಆರಂಭಿಸುವೆವು. ಆರನೆಯ ಮಂಡಲದ ನಾಲ್ಕನೆಯ ಅನುವಾಕದಲ್ಲಿ ನಾಲ್ಕು ಸೂಕ್ತಗಳನ್ನು ಹಿಂದಿನ ಅಧ್ಯಾಯದಲ್ಲಿ ವಿವರಿಸಿದ್ದಾಯಿತು. **ಯಜ್ಞಾಯಜ್ಞಾ** ಎಂಬ ಸೂಕ್ತವು ನಾಲ್ಕನೆಯ ಅನುವಾಕದಲ್ಲಿ ಐದನೆಯ ಸೂಕ್ತವು. ಇದರಲ್ಲಿ ಇಪ್ಪತ್ತೆರಡು ಋಕ್ಕುಗಳಿರುವವು. ಈ ಸೂಕ್ತಕ್ಕೆ ಬೃಹಸ್ಪತಿಪುತ್ರನಾದ ಶಂಯುವೆಂಬುವನು ಋಷಿಯು. ಅನುಕ್ರಮಣಿಕೆಯಲ್ಲಿ—**ಯಜ್ಞಾಯಜ್ಞಾ ದ್ವ್ಯಧಿಕಾ ಶಂಯುಸ್ತೃಣಪಾಣಿಕಂ ಪೃಶ್ನಿಸೂಕ್ತಂ ಪ್ರಗಾಥೌ ಬೃಹತೀ ಮಹಾಸತೋಬೃಹತೀ ಮಹಾಬಾರ್ಹತಬಾರ್ಹತೌ ಪ್ರಗಾಥಾವಿತ್ಯಾಗ್ನೇಯ್ಯಃ ಕಾಕುಭಃ ಪ್ರಗಾಥಃ ಪುರಉಷ್ಣಿಗ್ಬೃಹತ್ಯತಿಜಗತೀತಿ ಮಾರುತ್ಯೋಽನ್ತ್ಯಾಸ್ತಿಸ್ರೋ ವಾಸಾಂ ಲಿಂಗೋಕ್ತದೇವತಾಃ ಕಾಕುಭಃ ಪ್ರಗಾಥಃ ಪುರಉಷ್ಣಿಗ್ಬೃಹತೀತಿ ಪೌಷ್ಣ್ಯೋ ಬೃಹತೀ ಮಹಾಬೃಹತೀ ಯವಮಧ್ಯಾಂತ್ಯಾ-ನುಷ್ಟುಪ್ ದ್ಯಾವಾಭೂಮ್ಯೋರ್ವಾ ಪೃಶ್ನೇರ್ವಾ** ಎಂದು ಹೇಳಿರುವುದು. **ಯಜ್ಞಾಯಜ್ಞಾ ವಃ** ಎಂಬ ಈ ಸೂಕ್ತದ ಮೊದಲನೆಯ ಋಕ್ಕು ಬೃಹತೀಛಂದಸ್ಕವು. ಮೂರನೆಯ ಪಾದದಲ್ಲಿ ಹನ್ನೆರಡಕ್ಷರಗಳೂ ಉಳಿದ ಪಾದಗಳಲ್ಲಿ ಎಂಟೆಂಟು ಅಕ್ಷರಗಳೂ ಇದ್ದರೆ ಆ ಛಂದಸ್ಸು ಬೃಹತೀಛಂದಸ್ಸೆನಿಸುವುದು. ಒಂದು ಋಕ್ಕಿನಲ್ಲಿ ಐದು

ಪಾದಗಳಿದ್ದು ಅವುಗಳಲ್ಲಿ ನಾಲ್ಕು ಪಾದಗಳಲ್ಲಿ ಎಂಟೆಂಟು ಅಕ್ಷರಗಳೂ ಉಳಿದ ಒಂದು ಪಾದದಲ್ಲಿ ಹನ್ನೆರಡು ಅಕ್ಷರಗಳೂ ಇದ್ದರೆ ಅದು ಮಹಾಬೃಹತೀಛಂದಸ್ಸೆನಿಸುವುದು. ಈ ಸೂಕ್ತದ ಎಂಟನೆಯ ಋಕ್ಕು ಮಹಾಸತೋ ಬೃಹತೀಛಂದಸ್ಕವು. ಒಂದು ಋಕ್ಕಿನಲ್ಲಿ ಐದು ಪಾದಗಳಿದ್ದು ಅವುಗಳಲ್ಲಿ ಮೂರು ಪಾದಗಳಿಗೆ ಎಂಟೆಂಟು ಅಕ್ಷರಗಳೂ ಉಳಿದ ಎರಡು ಪಾದಗಳಿಗೆ ಹನ್ನೆರಡು ಹನ್ನೆರಡು ಅಕ್ಷರಗಳೂ ಇದ್ದಲ್ಲಿ ಅದು ಮಹಾಸತೋಬೃಹತೀ ಛಂದಸ್ಸೆನಿಸು ವುದು. ಒಂಭತ್ತನೆಯ ಋಕ್ಕು ಬೃಹತೀಛಂದಸ್ಕವು. ಹತ್ತನೆಯ ಋಕ್ಕು ಸತೋಬೃಹತೀಛಂದಸ್ಕವು. ಈ ಸೂಕ್ತದ ಮೊದಲಿನ ಹತ್ತು ಋಕ್ಕುಗಳೂ ಅಗ್ನಿದೇವತಾಕವು. ಹನ್ನೊಂದನೆಯ ಋಕ್ಕು ಕಕುಪ್‌ಛಂದಸ್ಕವು. ಒಂದು ಋಕ್ಕಿನಲ್ಲಿ ಮೂರು ಪಾದಗಳಿದ್ದು ಅವುಗಳಲ್ಲಿ ಮೊದಲಿನ ಮತ್ತು ಕೊನೆಯ ಪಾದಗಳಿಗೆ ಎಂಟೆಂಟು ಅಕ್ಷರಗಳೂ ಮಧ್ಯದ ಪಾದಕ್ಕೆ ಹನ್ನೆರಡು ಅಕ್ಷರಗಳೂ ಇದ್ದಲ್ಲಿ ಅದು ಕಕುಪ್‌ಛಂದಸ್ಸೆನಿಸುವುದು. ಹನ್ನೆರಡನೆಯ ಋಕ್ಕು ಸತೋಬೃಹತೀ ಛಂದಸ್ಕವು. ಹದಿಮೂರನೆಯದು ಪುರಉಷ್ಣಿಕ್ ಎಂಬ ಛಂದಸ್ಸಿನದು. ಒಂದು ಋಕ್ಕಿನಲ್ಲಿ ಮೂರು ಪಾದಗಳಿದ್ದು ಅವುಗಳಲ್ಲಿ ಮೊದಲನೆಯ ಪಾದವು ಜಗತೀಛಂದಸ್ಸಿನಂತೆ ಹನ್ನೆರಡು ಅಕ್ಷರಗಳುಳ್ಳದ್ದೂ ಎರಡು ಮತ್ತು ಮೂರನೆಯ ಪಾದಗಳು ಗಾಯತ್ರೀಛಂದಸ್ಸಿನಂತೆ ಎಂಟೆಂಟು ಅಕ್ಷರಗಳುಳ್ಳದ್ದೂ ಆಗಿದ್ದರೆ ಅದು ಪುರಉಷ್ಣಿಕ್‌ಛಂದಸ್ಸೆನಿಸುವುದು. ಹದಿನಾಲ್ಕನೆಯ ಋಕ್ಕು ಬೃಹತೀಛಂದಸ್ಕವು. ಹದಿನೈದನೆಯದು ಅತಿಜಗತೀ ಎಂಬ ಛಂದಸ್ಸಿನದು. ಒಂದು ಋಕ್ಕಿನಲ್ಲಿ ಐದು ಪಾದಗಳಿದ್ದು ಮೊದಲಿನ ಮೂರು ಪಾದಗಳಲ್ಲಿ ಹನ್ನೆರಡು ಹನ್ನೆರಡಕ್ಷರಗಳೂ ಕೊನೆಯ ಎರಡು ಪಾದಗಳಲ್ಲಿ ಎಂಟೆಂಟು ಅಕ್ಷರಗಳೂ ಒಟ್ಟು ಐವತ್ತೆರಡು ಅಕ್ಷರಗಳಿದ್ದಲ್ಲಿ ಅದು ಅತಿಜಗತೀಛಂದಸ್ಸೆನಿಸುವುದು. ಹನ್ನೊಂದನೆಯ ಋಕ್ಕಿನಿಂದ ಮುಂದಿನ ಐದು ಋಕ್ಕುಗಳೂ ಮರುದ್ದೇವತಾಕವು. ಹದಿಮೂರರಿಂದ ಮುಂದಿನ ಮೂರು ಋಕ್ಕುಗಳಿಗೆ ಲಿಂಗೋಕ್ತದೇವತೆಗಳು ಅಥವಾ ಇಂದ್ರಾದಿಗಳೇ ದೇವತೆಯು. ಹದಿನಾರನೆಯ ಋಕ್ಕು ಕಕುಪ್‌ಛಂದಸ್ಕವು. ಹದಿನೇಳನೆಯ ಋಕ್ಕು ಸತೋಬೃಹತೀಛಂದಸ್ಕವು. ಹದಿನೆಂಟನೆಯ ಋಕ್ಕು ಪುರಉಷ್ಣಿಕ್‌ಛಂದಸ್ಕವು. ಹತ್ತೊಂಭತ್ತ ನೆಯ ಋಕ್ಕು ಬೃಹತೀಛಂದಸ್ಕವು. ಹದಿನಾರನೆಯ ಋಕ್ಕಿನಿಂದ ಮುಂದಿನ ನಾಲ್ಕು ಋಕ್ಕುಗಳಿಗೆ ಪೂಷನು ದೇವತೆಯು. ಇಪ್ಪತ್ತನೆಯ ಋಕ್ಕು ಬೃಹತೀಛಂದಸ್ಕವು. ಇಪ್ಪತ್ತೊಂದನೆಯ ಋಕ್ಕು, ಯವಮಧ್ಯಾಮಹಾಬೃಹತೀ ಎಂಬ ಛಂದಸ್ಸಿನದು. ಒಂದು ಋಕ್ಕಿನಲ್ಲಿ ಐದು ಪಾದಗಳಿದ್ದು ಮೊದಲಿನ ಎರಡು ಪಾದಗಳಲ್ಲಿ ಎಂಟೆಂಟು ಅಕ್ಷರಗಳೂ, ಮೂರನೆಯ ಪಾದದಲ್ಲಿ ಹನ್ನೆರಡು ಅಕ್ಷರಗಳೂ ಕೊನೆಯ ಎರಡು ಪಾದಗಳಲ್ಲಿ ಎಂಟೆಂಟು ಅಕ್ಷರಗಳೂ ಇದ್ದಲ್ಲಿ ಅದು ಯವಮಧ್ಯಾಮಹಾಬೃಹತೀಛಂದಸ್ಸೆನಿಸುವುದು. ಇಪ್ಪತ್ತು ಮತ್ತು ಇಪ್ಪತ್ತೊಂದನೆಯ ಋಕ್ಕುಗಳಿಗೆ ಪೃಶ್ನಿಸೂಕ್ತವೆಂದು ಹೆಸರಿರುವುದರಿಂದ ಆ ಋಕ್ಕುಗಳಿಗೆ ಮರುದ್ದೇವತೆಗಳ ಮಾತೆಯಾದ ಪೃಶ್ನಿಯೇ ದೇವತೆಯು. ಇಪ್ಪತ್ತೆರಡನೆಯ ಋಕ್ಕು ಅನುಷ್ಟುಪ್‌ಛಂದಸ್ಕವು. ಈ ಋಕ್ಕಿಗೆ ಪೃಶ್ನಿ ಅಥವಾ ಭೂಮಿದೇವತೆಯು ದೇವತೆಯಾಗ ಬಹುದು. ಸೂಕ್ತವಿನಿಯೋಗವು ಲೈಂಗಿಕವು. ಅಗ್ನಿಮಾರುತಶಸ್ತ್ರಮಂತ್ರಪಠನಕಾಲದಲ್ಲಿ **ಯಜ್ಞಾಯಜ್ಞಾ ವಃ** ಎಂಬ ತೃಚವನ್ನು ಸ್ತೋತ್ರಿಯ ಪ್ರಗಾಥತೃಚವನ್ನಾಗಿ ಪಠಿಸಬೇಕೆಂದು ಆಶ್ವಲಾಯನ ಶ್ರೌತಸೂತ್ರದ— **ಯಜ್ಞಾ-ಯಜ್ಞಾ ವೋ ಅಗ್ನಯೇ ದೇವೋ ವೋ ದ್ರವಿಣೋದಾ ಇತಿ ಪ್ರಗಾಥೌ ಸ್ತೋತ್ರಿಯಾನುರೂಪೌ** ಎಂಬ ಸೂತ್ರದಿಂದ (ಆ. ೫-೨೦) ವಿವೃತವಾಗಿರುವುದು



## ಸೂಕ್ತ—೪೮

ಮಂಡಲ—೬ ॥ ಅನುವಾಕ—೪ ॥ ಸೂಕ್ತ—೪೮ ॥

ಅಷ್ಟಕ—೪ ॥ ಅಧ್ಯಾಯ—೮ ॥ ವರ್ಗ—೧, ೨, ೩, ೪ ॥

॥ ಸೂಕ್ತದಲ್ಲಿರುವ ಋಕ್ಸಂಖ್ಯೆ—೨೨ ॥

॥ ಋಷಿಃ—ಶಂಯುರ್ಬಾರ್ಹಸ್ಪತ್ಯಃ । ತೃಣಪಾಣಿಕಂ ಪೃಶ್ನಿಸೂಕ್ತಂ ॥

॥ ದೇವತಾ—೧-೧೦, ಅಗ್ನಿಃ । ೧೧, ೧೨, ೨೦, ೨೧. ಮರುತಃ । ೧೩-೧೫. ಮರುತೋ ಲಿಂಗೋಕ್ತದೇವತಾ ವಾ । ೧೬-೧೯. ಪೂಷಾ । ೨೨. ಪೃಶ್ನಿರ್ದ್ಯಾವಾಭೂಮೀ ವಾ ॥

॥ ಛಂದಃ—೧, ೩, ೫, ೯, ೧೪, ೧೯, ೨೦. ಬೃಹತೀ । ೨, ೪, ೧೦, ೧೨, ೧೭. ಸತೋಬೃಹತೀ । ೬, ೮. ಮಹಾಸತೋಬೃಹತೀ । ೭. ಮಹಾಬೃಹತೀ । ೧೧, ೧೬. ಕಕುಪ್. । ೧೩, ೧೮. ಪುರಉಷ್ಣಿಕ್ । ೧೫. ಅತಿಜಗತೀ । ೨೧. ಯವಮಧ್ಯಾ ಮಹಾಬೃಹತೀ । ೨೨. ಅನುಷ್ಟುಪ್ ॥

॥ ಸಂಹಿತಾಪಾಠಃ ॥

ಯಜ್ಞಾಯಜ್ಞಾ ವೋ ಅಗ್ನಯೇ ಗಿರಾಗಿರಾ ಚ ದಕ್ಷಸೇ ।
ಪ್ರಪ್ರ ವಯಮಮೃತಂ ಜಾತವೇದಸಂ ಪ್ರಿಯಂ ಮಿತ್ರಂ ನ ಶಂಸಿಷಂ ॥೧॥

॥ ಪದಪಾಠಃ ॥

ಯಜ್ಞಾಽಯಜ್ಞಾ । ವಃ । ಅಗ್ನಯೇ । ಗಿರಾಽಗಿರಾ । ಚ । ದಕ್ಷಸೇ ।
ಪ್ರಽಪ್ರ । ವಯಂ । ಅಮೃತಂ । ಜಾತಽವೇದಸಂ । ಪ್ರಿಯಂ । ಮಿತ್ರಂ । ನ । ಶಂಸಿಷಂ ॥ ೧ ॥

॥ ಸಾಯಣಭಾಷ್ಯಂ ॥

ಹೇ ಸ್ತೋತಾರೋ ವೋ ಯೂಯಂ ಯಜ್ಞಾ ಯಜ್ಞಾ ಯಜ್ಞೇ ಯಜ್ಞೇ ಸರ್ವೇಷು ಯಾಗೇಷು ದಕ್ಷಸೇ ಪ್ರವೃದ್ಧಾಯಾಗ್ನಯೇ ಗಿರಾ ಗಿರಾ ಸ್ತುತಿರೂಪಯಾ ವಾಚಾ ವಾಚಾ ಸ್ತೋತ್ರಂ ಕುರುತೇತಿ ಶೇಷಃ । ಚಶಬ್ದೋ ಭಿನ್ನಕ್ರಮೋ ವ ಇತ್ಯಸ್ಮಾತ್ಪರೋ ದ್ರಷ್ಟವ್ಯಃ । ಯೂಯಂ ಚ ಸ್ತೋತ್ರಂ ಕುರುತ । ವಯಮಪಿ ತಮಗ್ನಿಂ ಪ್ರ ಶಂಸಿಷಂ ॥ ಪ್ರಸಮುಪೋದಃ ಪಾದಪೂರಣ ಇತಿ ಪ್ರಶಬ್ದಸ್ಯ ದ್ವಿರುಕ್ತಿಃ ಪಾದಪೂರಣಾರ್ಥಾ । ವ್ಯತ್ಯಯೇನೈಕವಚನಂ । ಛಾಂದಸೋ ಲುಙ್ ॥ ಪ್ರಶಂಸಾಮ । ಕೀದೃಶಂ । ಅಮೃತಂ ಮರಣರಹಿತಂ ಜಾತವೇದಸಂ ಜಾತಾನಾಂ ವೇದಿತಾರಂ ಜಾತಪ್ರಜ್ಞಂ ಜಾತಧನಂ ವಾ ಮಿತ್ರಂ ನ ಸಖಿಭೂತಮಿವ ಪ್ರಿಯಮನುಕೂಲಂ ॥ ಯಜ್ಞಾ । ವ್ಯತ್ಯಯೇನ ಙ್ಸೇರಿತ್ಯಸ್ಯ ಡಾದೇಶಃ । ಅಗ್ನಯ ಇತಿ ಚ ಕರ್ಮಣಿ ಚತುರ್ಥೀ । ಕ್ರಿಯಾಗ್ರಹಣಮಪಿ ಕರ್ತವ್ಯಮಿತಿ ಕರ್ಮಣಃ ಸಂಪ್ರದಾನತ್ವಾತ್ । ಚಶಬ್ದಶ್ಚಣ್ಣಿತಿ ನಿಪಾತಶ್ಚೇದರ್ಥೇ ವರ್ತತೇ । ದಕ್ಷಸ ಇತಿ ಚ ದಕ್ಷೇರ್ವೃದ್ಧಿಕರ್ಮಣೋಽಂತರ್ಭಾವಿ-

**ತಣ್ಯರ್ಥಾಲ್ಲಟಿ ರೂಪಂ । ಚಣಾ ಯೋಗಾತ್ ನಿಪಾತ್ಯೈರ್ಯದ್ಯದಿಹಂತೇತಿ ನಿಘಾತಿಪ್ರತಿಷೇಧಃ ॥ ತತ್ರಾಯಮರ್ಥಃ । ಹೇ ಸ್ತೋತಸ್ತ್ವಂ ಯಜ್ಞೇ ಯಜ್ಞ ಇಮಮಗ್ನಿಂ ಗಿರಾ ಗಿರಾ ಸ್ತುತ್ಯಾ ದಕ್ಷಸೇ ಚ ವರ್ಧಯಸಿ ಚೇತ್ ವಯಮಪ್ಯಮೃತತ್ವಾದಿಗುಣಕಂ ತಂ ಪ್ರಶಂಸಾಮ ॥**

। ಪ್ರತಿಪದಾರ್ಥ ।

(ಎಲೈ ಸ್ತೋತೃಗಳೇ) **ವಃ**—ನೀವು । **ಯಜ್ಞಾ ಯಜ್ಞಾ**—ಪ್ರತಿಯೊಂದು ಯಾಗಗಳಲ್ಲಿಯೂ ಸಹ । **ದಕ್ಷಸೇ**—ಪ್ರಭೂತಶಕ್ತಿಯುಳ್ಳ । **ಅಗ್ನಯೇ**—ಅಗ್ನಿಯನ್ನುದ್ದೇಶಿಸಿ । **ಗಿರಾಗಿರಾ**—ಅನೇಕ ವಿಧವಾದ ಸ್ತುತಿಗಳಿಂದ ಪ್ರಶಂಸಿಸಿರಿ । **ವಯಂ ಚ**—ನಾವೂ ಸಹ । **ಅಮೃತಂ**—ಮರಣಧರ್ಮರಹಿತನೂ । **ಜಾತವೇದಸಂ**—ಜಾತಪ್ರಜ್ಞನೂ । **ಮಿತ್ರಂ ನ**—ಸ್ನೇಹಿತನಂತೆ । **ಪ್ರಿಯಂ**—ಹಿತಕಾರಿಯೂ ಆದ ಅಗ್ನಿಯನ್ನು । **ಪ್ರಶಂಸಿಷಂ**—ಪ್ರಶಂಸಿಸಿ ಪೂಜಿಸುತ್ತೇವೆ.

॥ ಭಾವಾರ್ಥ ॥

ಎಲೈ ಸ್ತೋತೃಗಳೇ, ನೀವು ಪ್ರಭೂತಶಕ್ತಿಯುಳ್ಳ ಅಗ್ನಿಯನ್ನುದ್ದೇಶಿಸಿ ಪ್ರತಿಯೊಂದು ಯಜ್ಞಗಳಲ್ಲಿಯೂ ಅನೇಕ ವಿಧವಾದ ಸ್ತುತಿಗಳಿಂದ ಪ್ರಶಂಸಿಸಿರಿ. ನಾವೂ ಸಹ ಮರಣಧರ್ಮರಹಿತನೂ, ಜಾತಪ್ರಜ್ಞನೂ, ಸುಹೃತ್ತಿನಂತೆ ಹಿತಕಾರಿಯೂ ಆದ ಅಗ್ನಿಯನ್ನು ಪ್ರಶಂಸಿಸಿ ಪೂಜಿಸುತ್ತೇವೆ.

## English Translation.

At every sacrifice (honour) the mighty Agni with your reiterated praise, whilst we golify him, the immortal, who knows, all things, our dear friend.

। ವಿಶೇಷವಿಷಯಗಳು ।

**ಯಜ್ಞಾ ಯಜ್ಞಾ** ಎಂಬ ಈ ಋಕ್ಕನ್ನು ಆಗ್ನಿಮಾರುತಶಸ್ತ್ರಮಂತ್ರಗಳಲ್ಲಿ ಸ್ತೋತ್ರಿಯಪ್ರಗಾಥಮಂತ್ರವನ್ನಾಗಿ ಪಠಿಸಬೇಕೆಂದು ಈ ಸೂಕ್ತದ ವಿನಿಯೋಗದಲ್ಲಿ ಹಿಂದೆಯೇ ಹೇಳಲಾಗಿದೆ.

ಐತರೇಯ ಬ್ರಾಹ್ಮಣದಲ್ಲಿ ಈ ವಿಷಯವಾಗಿ ಹೀಗೆ ಹೇಳಿದೆ—

> **ಯಜ್ಞಾಯಜ್ಞಾ ವೋ ಅಗ್ನಯೇ ದೇವೋ ವೋ ದ್ರವಿಣೋದಾ ಇತಿ ಮಧ್ಯೇ ಯೋನಿಂ ಚಾನುರೂಪಂ ಚ ಶಂಸತಿ ತದ್ಯನ್ಮಧ್ಯೇ ಯೋನಿಂ ಚಾನುರೂಪಂ ಚ ಶಂಸತಿ ತಸ್ಮಾನ್ಮಧ್ಯೇ ಯೋನಿರ್ಧೃತಾ । ಯದು ದ್ವೇ ಸೂಕ್ತೇ ಶಸ್ತ್ವಾ ಶಂಸತಿ ಪ್ರತಿಷ್ಠಯೋರೇವ ತದುಪರಿಷ್ಟಾತ್ಪ್ರಜನನಂ ದಧಾತಿ ಪ್ರಜಾತ್ಯೈ ಪ್ರಜಾಯತೇ ಪ್ರಜಯಾ ಪಶುಭಿರ್ಯ ಏವಂ ವೇದ ॥**
>
> (ಐ. ಬ್ರಾ. ೧೯-೩೫)

**ಹೋತೃವು ವೈಶ್ವಾನರಾಯ ಪೃಥುಪಾಜಸೇ** (ಋ. ಸಂ. ೩-೩) ಎಂದು ಅಗ್ನಿವೈಶ್ವಾನರಾತ್ಮಕವಾದ ಸೂಕ್ತವನ್ನು ಆಗ್ನಿಮಾರುತಶಸ್ತ್ರಮಂತ್ರಗಳ ಪ್ರಾರಂಭದಲ್ಲಿ ಪಠಿಸುವನು. ಅನಂತರ ಮರುದ್ದೇವತೆಗಳನ್ನುದ್ದೇಶಿಸಿ **ಪ್ರತ್ವಕ್ಷಸಃ ಪ್ರತವಸಃ** (ಋ. ಸಂ. ೧-೮೭) ಎಂಬ ಮರುದ್ದೇವತಾತ್ಮಕವಾದ ಸೂಕ್ತವನ್ನು ಪಠಿಸುವನು. ಶಸ್ತ್ರಮಂತ್ರಗಳಿಗಾಗಿ

ಈ ಎರಡು ಸೂಕ್ತಗಳನ್ನು ಪಠಿಸಿದಮೇಲೆ ಹೋತೃವು ಸ್ತೋತ್ರಿಯ ಮತ್ತು ಅನುರೂಪ ಪ್ರಗಾಥ ಮಂತ್ರಗಳನ್ನು ಪಠಿಸುವನು. ಇಲ್ಲಿ **ಯಜ್ಞಾಯಜ್ಞಾವೋ ಅಗ್ನಯೇ** ಎಂಬ ಪ್ರಸಕ್ತ ಋಕ್ಕೇ (ಋ. ಸಂ. ೬-೪೮-೧) ಸ್ತೋತ್ರಿಯ ಮಂತ್ರವು. ಇದು ಮೊದಲನೆಯ ಪ್ರಗಾಥ ಮಂತ್ರವು. ಇದಕ್ಕೆ ಅನುರೂಪವಾಗಿ ಪಠಿಸುವ **ದೇವೋ ವೋ ದ್ರವಿಣೋದಾ** (ಋ. ಸಂ. ೭-೧೬-೧೧) ಎಂಬ ಋಕ್ಕೇ ಅನುರೂಪಪ್ರಗಾಥಮಂತ್ರವು. ಇದು ಎರಡನೆಯದು. ಪ್ರಥಮಪ್ರಗಾಥವಾದ **ಯಜ್ಞಾಯಜ್ಞಾ** ಎಂಬ ತೃಚದಲ್ಲಿ ಮೂರು ಋಕ್ಕುಗಳಿರುವವು. ಇವುಗಳನ್ನು (ಸಾಮವೇದ ೩೫; ೭೦೩) ಸಾಮಗರು ಗಾನಮಾಡುವರು. ಇದಕ್ಕೆ ಪ್ರತಿಯಾಗಿ ಹೋತೃವರ್ಗದ ಋತ್ವಿಕ್ಕುಗಳು **ದೇವೋ ವೋ ದ್ರವಿಣೋದಾಃ** ಎಂಬ ಅನುರೂಪ ಮಂತ್ರಗಳನ್ನು ಪಠಿಸುವರು. ಈ ಎರಡು ಮಂತ್ರಗಳನ್ನು ಶಸ್ತ್ರಮಂತ್ರಗಳ ಮಧ್ಯದಲ್ಲಿ ಪಠಿಸಲು ಕಾರಣವೇನೆಂದರೆ ಸ್ತೋತ್ರಿಯ ಮಂತ್ರವಾದ **ಯಜ್ಞಾಯಜ್ಞಾ** ಎಂಬ ಋಕ್ಕು ಯೋನಿಯೆಂದು ಹೇಳಲ್ಪಡುವುದು. ಮೇಲೆ ಹೇಳಿದ **ವೈಶ್ವಾನರಾಯ** ಮತ್ತು **ಪ್ರತ್ವಕ್ಷಸಃ** ಎಂಬ ಎರಡು ಸೂಕ್ತಗಳೇ ಎರಡು ತೊಡೆಗಳು. ಸ್ತ್ರೀಯರ ಯೋನಿಪ್ರದೇಶವು ಎರಡು ತೊಡೆಗಳ ಮಧ್ಯದಲ್ಲಿ ಶರೀರದ ಮಧ್ಯಪ್ರದೇಶದಲ್ಲಿರುವುದರಿಂದ ಯೋನಿರೂಪವಾದ ಈ ಸ್ತೋತ್ರಿಯ ಮತ್ತು ಅನುರೂಪ ಮಂತ್ರಗಳನ್ನೂ ಶಸ್ತ್ರಮಂತ್ರಗಳ ಮಧ್ಯದಲ್ಲಿ ಎರಡು ಸೂಕ್ತಗಳ ಪಠನಾ ನಂತರ ಸೇರಿಸುವರು. ಹೀಗೆ ಮಾಡುವುದರಿಂದ ಯಜ್ಞಮಾಡುವ ಯಜಮಾನರಿಗೆ ಪ್ರಜೋತ್ಪತ್ತಿ ಯಾಗಲು ಸಹಾಯವಾಗುವುದು. ಈ ವಿಷಯವನ್ನು ಅರಿತಿರುವ ಪುರುಷನು ಸಹ ಪ್ರಜೋತ್ಪತ್ತಿಯಿಂದಲೂ ಪಶು ಸಂಪತ್ತಿನಿಂದಲೂ ಕೂಡಿ ಸುಖಿಸುವನು.

॥ ಸಂಹಿತಾಪಾಠಃ ॥

**ಊರ್ಜೋ ನಪಾತಂ ಸ ಹಿನಾಯಮಸ್ಮಯುರ್ದಾಶೇಮ ಹವ್ಯದಾತಯೇ ।**
**ಭುವದ್ವಾಜೇಷ್ವವಿತಾ ಭುವದ್ವೃಧ ಉತ ತ್ರಾತಾ ತನೂನಾಂ ॥ ೨ ॥**

॥ ಪದಪಾಠಃ ॥

ಊರ್ಜಃ । ನಪಾತಂ । ಸಃ । ಹಿನ । ಅಯಂ । ಅಸ್ಮಽಯುಃ । ದಾಶೇಮ । ಹವ್ಯಽದಾತಯೇ ।
ಭುವತ್ । ವಾಜೇಷು । ಅವಿತಾ । ಭುವತ್ । ವೃಧಃ । ಉತ । ತ್ರಾತಾ । ತನೂನಾಂ ॥ ೨ ॥

॥ ಸಾಯಣಭಾಷ್ಯಂ ॥

ಊರ್ಜೋಽನ್ನಸ್ಯ ಬಲಸ್ಯ ವಾ ನಪಾತಂ ಪುತ್ರಂ ಪ್ರ ಶಂಸಿಷಮಿತ್ಯನುಷಂಗಾತ್ ಪ್ರಶಂಸಾಮೀತ್ಯರ್ಥಃ । ಹಿನೇತಿ ನಿಪಾತದ್ವಯಸಮುದಾಯೋ ಹೀತ್ಯಸ್ಯಾರ್ಥೇ । ಸ ಖಲ್ವಯಮಗ್ನಿರಸ್ಮಯುರಸ್ಮಾನ್ಕಾಮಯಮಾನೋ ಭವತಿ । ವಯಂ ಚ ಹವ್ಯದಾತಯೇ ಹವ್ಯಾನಾಂ ಹವಿಷಾಂ ದೇವೇಭ್ಯೋ ದಾತ್ರೇ ತಸ್ಮಾ ಅಗ್ನಯೇ ದಾಶೇಮ । ಹವೀಂಷಿ ದದ್ಯಾಮ । ಸ ಚಾಗ್ನಿರ್ವಾಜೇಷು ಸಂಗ್ರಾಮೇಷ್ವವಿತಾ ರಕ್ಷಿತಾ ವೃಧೋ ವರ್ಧಕಶ್ಚಾಸ್ಮಾಕಂ ಭುವತ್ । ಭವತು । ಉತಾಪಿ ಚ ತನೂನಾಂ ತನಯೋನಾಮಸ್ಮತ್ಪುತ್ರಾಣಾಂ ಚ ತ್ರಾತಾ ರಕ್ಷಿತಾ ಭವತು ॥

॥ ಪ್ರತಿಪದಾರ್ಥ ॥

**ಊರ್ಜಃ**—ಶಕ್ತಿಗೆ । **ನಪಾತಂ**—ಪುತ್ರನಾದ ಅಗ್ನಿಯನ್ನು (ನಾವು ಸ್ತುತಿಸುತ್ತೇವೆ) ! **ಹಿ ನ**—ಖಂಡಿತವಾಗಿಯೂ । **ಸಃ ಅಯಂ**—ಅದೇ ಈ ಅಗ್ನಿಯು । **ಅಸ್ಮಯುಃ**—ನಮ್ಮನ್ನು ಅಪೇಕ್ಷಿಸುತ್ತಾನೆ. । **ಹವ್ಯದಾತಯೇ**—ದೇವತೆಗಳಿಗೆ ಹವಿಸ್ಸನ್ನು ಹಂಚುವ ಅಗ್ನಿಗೆ । **ದಾಶೇಮ**—ನಾವು ಹವಿಸ್ಸನ್ನು ಅರ್ಪಿಸೋಣ । (**ಸಃ**—ಅದೇ ಅಗ್ನಿಯು) । **ವಾಜೇಷು**—ಸಂಗ್ರಾಮಗಳಲ್ಲಿ । **ಅವಿತಾ**—ನಮ್ಮ ರಕ್ಷಕನಾಗಿಯೂ । **ವೃಧಃ**—ನಮ್ಮ ವೃದ್ಧಿಗೆ ಕಾರಣನಾಗಿಯೂ । **ಭುವತ್**—ಆಗಿರಲಿ । **ಉತ**—ಮತ್ತು । **ತನೂನಾಂ**—ನಮ್ಮ ಪುತ್ರ ಪೌತ್ರಾದಿಗಳ । **ತ್ರಾತಾ**—ರಕ್ಷಕನಾಗಿರಲಿ.

॥ ಭಾವಾರ್ಥ ॥

ಶಕ್ತಿಪುತ್ರನಾದ ಅಗ್ನಿಯನ್ನು ನಾವು ಸ್ತುತಿಸುತ್ತೇವೆ. ಅದೇ ಈ ಅಗ್ನಿಯು ದೇವಹಿತಕ್ಕಾಗಿ ನಮ್ಮನ್ನು ಖಂಡಿತವಾಗಿಯೂ ಅಪೇಕ್ಷಿಸುತ್ತಾನೆ. ದೇವತೆಗಳಿಗೆ ಹವಿಸ್ಸನ್ನು ಹಂಚುವ ಅಗ್ನಿಗೆ ನಾವು ಹವಿಸ್ಸನ್ನು ಅರ್ಪಿಸೋಣ. ಅದೇ ಅಗ್ನಿಯು ಸಂಗ್ರಾಮಗಳಲ್ಲಿ ನಮ್ಮ ರಕ್ಷಕನಾಗಿಯೂ ನಮ್ಮ ವೃದ್ಧಿಗೆ ಕಾರಣನಾಗಿಯೂ ಇರಲಿ. ಮತ್ತು ನಮ್ಮ ಪುತ್ರಪೌತ್ರಾದಿಗಳ ರಕ್ಷಕನೂ ಆಗಿರಲಿ.

## English Translation.

The son of strength, for he verily is propitious to us ; to whom let us offer oblations as to the conveyer of them (to the gods) : may he be our defender and of our offspring.

॥ ಸಂಹಿತಾಪಾಠಃ ॥

ವೃಷಾ ಹ್ಯಗ್ನೇ ಅಜರೋ ಮಹಾನ್ವಿಭಾಸ್ಯರ್ಚಿಷಾ ।
ಅಜಸ್ರೇಣ ಶೋಚಿಷಾ ಶೋಶುಚಚ್ಛುಚೇ ಸುದೀತಿಭಿಃ ಸು ದೀದಿಹಿ ॥ ೩ ॥

॥ ಪದಪಾಠಃ ॥

ವೃಷಾ । ಹಿ । ಅಗ್ನೇ । ಅಜರಃ । ಮಹಾನ್ । ವಿऽಭಾಸಿ । ಅರ್ಚಿಷಾ ।
ಅಜಸ್ರೇಣ । ಶೋಚಿಷಾ । ಶೋಶುಚತ್ । ಶುಚೇ । ಸುದೀತಿऽಭಿಃ । ಸು । ದೀದಿಹಿ ॥ ೩ ॥

॥ ಸಾಯಣಭಾಷ್ಯಂ ॥

**ಹೇ ಅಗ್ನೇ ವೃಷಾ ವರ್ಷಿತಾ ಕಾಮಾನಾಂ ವೃಷ್ಟೇಃ ಕರ್ತಾ ವಾಜರೋ ಜರಾರಹಿತೋ ಮಹಾನ್ ಗುಣೈರಧಿಕ ಏವಂಭೂತಸ್ತ್ವಮರ್ಚಿಷಾ ದೀಪ್ತ್ಯಾ ವಿಭಾಸಿ ಹಿ। ವಿಶೇಷೇಣ ಪ್ರಕಾಶಸೇ ಖಲು। ಹೇ ಶುಚೇ**

ದೀಪ್ತಾಗ್ನೇ ಅಜಸ್ರೇಣಾವಿಚ್ಛಿನ್ನೇನ ಶೋಚಿಷಾ ತೇಜಸಾ ಶೋಶುಚತ್ ಭೃಶಂ ದೀಪ್ಯಮಾನಸ್ತ್ವಂ ಸುದೀತಿಭಿಃ ಸುದೀಪ್ತಿಭಿಃ ಸು ದೀದಿಹಿ । ಸುಷ್ಠ್ವಸ್ಮಾನ್ದೀಪಯ । ಪ್ರಕಾಶಯ ॥

॥ ಪ್ರತಿಪದಾರ್ಥ ॥

**ಅಗ್ನೇ**—ಎಲೈ ಅಗ್ನಿಯೇ । **ವೃಷಾ** - ಕಾಮವರ್ಷಕನೂ । **ಅಜರಃ**—ಕ್ಷಯರಹಿತನೂ । **ಮಹಾನ್**—ಅತ್ಯಧಿಕವಾದ ಗುಣಗಳುಳ್ಳವನೂ ಆದ ನೀನು । **ಅರ್ಚಿಷಾ**—ನಿನ್ನ ಪ್ರಭೆಯಿಂದ । **ವಿಭಾಸಿ ಹಿ**—ಅಧಿಕವಾಗಿ ಪ್ರಕಾಶಿಸುತ್ತೀಯಲ್ಲವೇ । **ಶುಚೇ**—ಕಾಂತಿಯುತನಾದ ಎಲೈ ಅಗ್ನಿಯೇ । **ಅಜಸ್ರೇಣ**—ನಿರಂತರವಾದ । **ಶೋಚಿಷಾ**—ತೇಜಸ್ಸಿನಿಂದ । **ಶೋಶುಚತ್**—ಅತ್ಯಧಿಕವಾಗಿ ಬೆಳಗುವ ನೀನು । **ಸುದೀತಿಭಿಃ**—ಉತ್ತಮವಾದ ಪ್ರಭೆಯಿಂದ । **ಸು ದೀದಿಹಿ**—ಅಧಿಕವಾಗಿ ಜ್ವಲಿಸು ಮತ್ತು ನಿನ್ನ ಬೆಳಕನ್ನು ಸರ್ವತ್ರ ಹರಡು.

॥ ಭಾವಾರ್ಥ ॥

ಎಲೈ ಅಗ್ನಿಯೇ, ಕಾಮವರ್ಷಕನೂ, ಕ್ಷಯರಹಿತನೂ, ಅತ್ಯಧಿಕವಾದ ಗುಣಗಳುಳ್ಳವನೂ ಆದ ನೀನು ನಿನ್ನ ಪ್ರತಿಭೆಯಿಂದ ಅಧಿಕವಾಗಿ ಪ್ರಕಾಶಿಸುತ್ತೀಯಲ್ಲವೇ? ಕಾಂತಿಯುತನಾದ ಎಲೈಅಗ್ನಿಯೇ, ನಿರಂತರವಾದ ತೇಜಸ್ಸಿನಿಂದ ಅತ್ಯಧಿಕವಾಗಿ ಬೆಳಗುವ ನೀನು ಉತ್ತಮವಾದ ಪ್ರಭೆಯಿಂದ ಅಧಿಕವಾಗಿ ಜ್ವಲಿಸು ಮತ್ತು ನಿನ್ನ ಬೆಳಕನ್ನು ಸರ್ವತ್ರ ಹರಡು.

English Translation.

Agni, you are the showerer (of benefits), mighty, and exempt from decay, you shine with (great) splendour ; you are resplendent, brilliant (Agni), with unfading lustre : shine forth with glorious rays.

॥ ಸಂಹಿತಾಪಾಠಃ ॥

ಮಹೋ ದೇವಾನ್ಯಜಸಿ ಯಕ್ಷ್ಯಾನುಷಕ್ತವ ಕ್ರತ್ವೋತ ದಂಸನಾ ।
ಅರ್ವಾಚಃ ಸೀಂ ಕೃಣುಹ್ಯಗ್ನೇಽವಸೇ ರಾಸ್ವ ವಾಜೋತ ವಂಸ್ವ ॥ ೪ ॥

॥ ಪದಪಾಠಃ ॥

ಮಹಃ । ದೇವಾನ್ । ಯಜಸಿ । ಯಕ್ಷಿ । ಆನುಷಕ್ । ತವ । ಕ್ರತ್ವಾ । ಉತ । ದಂಸನಾ ।
ಅರ್ವಾಚಃ । ಸೀಂ । ಕೃಣುಹಿ । ಅಗ್ನೇ । ಅವಸೇ । ರಾಸ್ವ । ವಾಜಾ । ಉತ । ವಂಸ್ವ ॥ ೪ ॥

॥ ಸಾಯಣಭಾಷ್ಯಂ ॥

ಹೇ ಅಗ್ನೇ ತ್ವಂ ಮಹೋ ಮಹತೋ ದೇವಾನ್ಯಜಸಿ । ಯಜಮಾನಾನಾಂ ಯಜ್ಞೇ ಹವಿರ್ಭಿಃ ಪೂಜಯಸಿ । ಅತೋಽಸ್ಮಾಕಮಪಿ ಯಜ್ಞ ಆನುಷಕ್ ಅನುಷಕ್ತಂ ಸಂತತಂ ಯಥಾ ಭವತಿ ತಥಾ

**ಯಕ್ಷಿ । ತಾನ್ದೇವಾನ್ಯಜ । ತದರ್ಥಂ ತವ ಕ್ರತ್ವಾ ಪ್ರಜ್ಞಯೋತಾಪಿ ಚ ದಂಸನಾ ಕರ್ಮಣಾ ಚ । ಸೀಮಿತಿ ಪರಿಗ್ರಹಾರ್ಥೀಯಃ । ತಾನ್ ಸರ್ವಾನ್ದೇವಾನರ್ವಾಚೋಽಸ್ಮದಭಿಮುಖಾನ್ ಕೃಣುಹಿ ಕುರ್ವವಸೇಽಸ್ಮದ್ರಕ್ಷಣಾರ್ಥಂ । ತಥಾ ವಾಜಾ ವಾಜಾನ್ ಹವಿರ್ಲಕ್ಷಣಾನ್ಯನ್ನಾನಿ ರಾಸ್ವ । ತೇಭ್ಯೋ ದೇವೇಭ್ಯೋ ದೇಹಿ । ಉತಾಪಿ ಚ ತ್ವಮುಪಿ ವಂಸ್ವ । ತುಭ್ಯಂ ಪ್ರತ್ತಾನಿ ಹವೀಂಷಿ ಸಂಭಜಸ್ವ ॥**

॥ ಪ್ರತಿಪದಾರ್ಥ ॥

**ಅಗ್ನೇ**—ಎಲೈ ಅಗ್ನಿಯೇ । (**ತ್ವಂ**—ನೀನು) । **ಮಹಃ**—ಮಹಾತ್ಮರಾದ । **ದೇವಾನ್**—ದೇವತೆಗಳನ್ನು । **ಯಜಸಿ**—ಪೂಜಿಸುತ್ತೀಯೆ । **ಆನುಷಕ್**—ಅವಿಚ್ಛಿನ್ನವಾಗಿ । **ಯಕ್ಷಿ**—(ನಮ್ಮ ಯಜ್ಞಗಳಲ್ಲೂ ದೇವತೆಗಳನ್ನು) ಪೂಜಿಸು । **ತವ**—ನಿನ್ನ । **ಕ್ರತ್ವಾ**—ಪ್ರಜ್ಞೆಯಿಂದಲೂ । **ಉತ**—ಮತ್ತು । **ದಂಸನಾ**—ಕರ್ಮಗಳಿಂದಲೂ । **ಸೀಂ**—ಆ ಎಲ್ಲಾ ದೇವತೆಗಳನ್ನೂ । **ಅವಸೇ**—ನಮ್ಮ ರಕ್ಷಣಾರ್ಥವಾಗಿ । **ಅರ್ವಾಚಃ**—ನಮಗಭಿಮುಖರಾಗುವಂತೆ । **ಕೃಣುಹಿ**—ಮಾಡು । **ವಾಜಾನ್**—ಹವಿಸ್ಸಿನ ರೂಪದ ಅನ್ನಗಳನ್ನು । **ರಾಸ್ವ**—ಅವರಿಗರ್ಪಿಸು । **ಉತ**—ಮತ್ತು । **ವಂಸ್ವ**—ನೀನೂ ಭುಜಿಸು.

॥ ಭಾವಾರ್ಥ ॥

ಎಲೈ ಅಗ್ನಿಯೇ, ನೀನು ಮಹಾತ್ಮರಾದ ದೇವತೆಗಳನ್ನು ಪೂಜಿಸುತ್ತೀಯೆ. ಆದುದರಿಂದಲೇ, ನಮ್ಮ ಯಜ್ಞದಲ್ಲಿಯೂ ಅವಿಚ್ಛಿನ್ನವಾಗಿ ಅವರನ್ನು ಪೂಜಿಸು. ನಿನ್ನ ಪ್ರಜ್ಞೆಯಿಂದಲೂ ನಿನ್ನ ಕರ್ಮಗಳಿಂದಲೂ ಆ ಎಲ್ಲಾ ದೇವತೆಗಳನ್ನು ನಮ್ಮ ರಕ್ಷಣಾರ್ಥವಾಗಿ ನಮಗಭಿಮುಖರಾಗುವಂತೆ ಮಾಡು. ಹವಿಸ್ಸಿನ ರೂಪದ ಅನ್ನಗಳನ್ನು ಅವರಿಗರ್ಪಿಸು ಮತ್ತು ನೀವೂ ಅವನ್ನು ಭುಜಿಸು.

## English Translation.

You sacrifice to the mighty gods : sacrifice (for us) continually, for (sacrifice is perfected) by your wisdom and your acts : bring them down, Agni, for our salvation : present (to them) the sacrificial food, partake of it yourself.

॥ ಸಂಹಿತಾಪಾಠಃ ॥

ಯಮಾಪೋ ಅದ್ರಯೋ ವನಾ ಗರ್ಭಮೃತಸ್ಯ ಪಿಪ್ರತಿ ।
ಸಹಸಾ ಯೋ ಮಥಿತೋ ಜಾಯತೇ ನೃಭಿಃ ಪೃಥಿವ್ಯಾ ಅಧಿ ಸಾನವಿ ॥ ೫ ॥

॥ ಪದಪಾಠಃ ॥

ಯಂ । ಆಪಃ । ಅದ್ರಯಃ । ವನಾ । ಗರ್ಭಂ । ಋತಸ್ಯ । ಪಿಪ್ರತಿ ।
ಸಹಸಾ । ಯಃ । ಮಥಿತಃ । ಜಾಯತೇ । ನೃಽಭಿಃ । ಪೃಥಿವ್ಯಾಃ । ಅಧಿ । ಸಾನವಿ ॥ ೫ ॥

॥ ಸಾಯಣಭಾಷ್ಯಂ ॥

**ಆಪೋ ವಸತೀವರ್ಯಾಖ್ಯಾ ಅದ್ರಯೋ ಗ್ರಾವಾಣೋ ವನಾ ವನಾನಿ ಕಾಷ್ಠಾನಿ ಚ ಋತಸ್ಯ ಯಜ್ಞಸ್ಯೋದಕಸ್ಯ ವಾ ಗರ್ಭಂ ಗರ್ಭವದಂತರ್ವರ್ತಮಾನಂ ಯಮಗ್ನಿಂ ಪಿಪ್ರತಿ ಪೂರಯಂತಿ । ಯದ್ವಾ । ಆಪಃ ಸಮುದ್ರಿಯಾ ಅದ್ರಯೋ ಮೇಘಾ ವನಾನ್ಯರಣ್ಯಾನಿ ಚ ಋತಸ್ಯ ಗರ್ಭಂ ವಾಡವ-ವೈದ್ಯುತದಾವರೂಪೇಣ ವರ್ತಮಾನಂ ಯಮಗ್ನಿಂ ಪಿಪ್ರತಿ ಪೂರಯಂತಿ । ಯಶ್ಚಾಗ್ನಿರ್ನೃಭಿರ್ನೇತೃಭಿ-ರ್ಋತ್ವಿಗ್ಭಿಃ ಸಹಸಾ ಬಲೇನ ಮಥಿತಃ ಸನ್ ಪೃಥಿವ್ಯಾ ಅಧಿ ಭೂಮೇರುಪರಿ ಸಾನವಿ ಸಮುಚ್ಛ್ರಿತೇ ಉತ್ಕೃಷ್ಟೇ ದೇವಯಜನದೇಶೇ ಜಾಯತೇ ಪ್ರಾದುರ್ಭವತಿ ಸ ತ್ವಂ ವಂಸ್ವೇತ್ಯನ್ವಯಃ । ಯದ್ವಾ । ಯಃ ಪಪ್ರಾವಿತ್ಯನಯಾ ಸಂಬಂಧಃ ॥**

॥ ಪ್ರತಿಪದಾರ್ಥ ॥

**ಆಪಃ**—ಉದಕಗಳೂ । **ಅದ್ರಯಃ**—ಮೇಘಗಳೂ । **ವನಾ**—ವನಗಳೂ । **ಋತಸ್ಯ**—ಯಜ್ಞಕ್ಕೆ । **ಗರ್ಭಂ**—ಗರ್ಭರೂಪನಾದ । **ಯಂ**—ಯಾವ ಅಗ್ನಿಯನ್ನು । **ಪಿಪ್ರತಿ**—ಪೋಷಿಸುವುವೋ । **ಯಃ**—ಯಾವ ಅಗ್ನಿಯು । **ನೃಭಿಃ**—ಋತ್ವಿಕ್ಕುಗಳಿಂದ । **ಸಹಸಾ**—ಶಕ್ತಿಪೂರ್ವಕವಾಗಿ । **ಮಥಿತಃ**—ಮಥಿಸಲ್ಪಟ್ಟು ಪ್ರಜ್ವಲಿತನಾಗಿ । **ಪೃಥಿವ್ಯಾ ಅಧಿ**—ಪೃಥಿವಿಯ ಮೇಲೆ । **ಸಾನವಿ**—ಉನ್ನತವಾದ ಯಜ್ಞಪ್ರದೇಶದಲ್ಲಿ । **ಜಾಯಸೇ**—ಉತ್ಪನ್ನನಾಗುವನೋ (ಅಂತಹ ಅಗ್ನಿಯು ನಮ್ಮ ಹವಿಸ್ಸನ್ನು ಭುಜಿಸಲಿ).

॥ ಭಾವಾರ್ಥ ॥

ಉದಕಗಳೂ, ಮೇಘಗಳೂ, ವನಗಳೂ, ಯಜ್ಞಕ್ಕೆ ಗರ್ಭರೂಪನಾದ ಯಾವ ಅಗ್ನಿಯನ್ನು ಪೋಷಿಸುವುವೋ, ಯಾವ ಅಗ್ನಿಯು ಋತ್ವಿಕ್ಕುಗಳಿಂದ ಶಕ್ತಿಪೂರ್ವಕವಾಗಿ ಮಥಿಸಲ್ಪಟ್ಟು ಪ್ರಜ್ವಲಿತನಾಗಿ ಪೃಥಿವಿಯ ಮೇಲೆ ಉನ್ನತವಾದ ಯಜ್ಞವೇದಿಯಲ್ಲಿ ಉತ್ಪನ್ನನಾಗುವನೋ ಅಂತಹ ಅಗ್ನಿಯು ನಮ್ಮ ಹವಿಸ್ಸನ್ನು ಭುಜಿಸಲಿ.

English Translation.

(You are he) whom the waters, the mountains, the woods, nourish as the embryo of sacrifice : who, churned with strength by the performers (of the rite), are generated in the highest place of the earth.

॥ ಸಂಹಿತಾಪಾಠಃ ॥

**ಆ ಯಃ ಪಪ್ರೌ ಭಾನುನಾ ರೋದಸೀ ಉಭೇ ಧೂಮೇನ ಧಾವತೇ ದಿವಿ ।**
**ತಿರಸ್ತಮೋ ದದೃಶ ಊರ್ಮ್ಯಾಸ್ವಾ ಶ್ಯಾವಾಸ್ವರುಷೋ ವೃಷಾ ಶ್ಯಾವಾ**
**ಅರುಷೋ ವೃಷಾ ॥ ೬ ॥**

|| ಪದಪಾಠಃ ||

ಆ । ಯಃ । ಪಪ್ರೌ । ಭಾನುನಾ । ರೋದಸೀ ಇತಿ । ಉಭೇ ಇತಿ । ಧೂಮೇನ । ಧಾವತೇ । ದಿವಿ ।

ತಿರಃ । ತಮಃ । ದದೃಶೇ । ಊರ್ಮ್ಯಾಸು । ಆ । ಶ್ಯಾವಾಸು । ಅರುಷಃ । ವೃಷಾ । ಆ । ಶ್ಯಾವಾಃ ।

ಅರುಷಃ । ವೃಷಾ ॥ ೬ ॥

॥ ಸಾಯಣಭಾಷ್ಯಂ ॥

**ಯೋಽಗ್ನಿರ್ಭಾನುನಾ ದೀಪ್ತ್ಯೋಭೇ ರೋದಸೀ ದ್ಯಾವಾಪೃಥಿವ್ಯಾವಾ ಪಪ್ರೌ ಆಪೂರಯತಿ ಸ ಧೂಮೇನ ದಿವ್ಯಂತರಿಕ್ಷೇ ಧಾವತೇ । ಗಚ್ಛತಿ । ಧೂಮೋ ಹಿ ಮೇಘಾತ್ಮನಾ ಪರಿಣತಃ ಸನ್ ಅಂತರಿಕ್ಷೇ ಗಚ್ಛತಿ । ಕಾರ್ಯಕಾರಣಯೋರಭೇದವಿವಕ್ಷಯಾ ತದ್ಗಮನಮಗ್ನಾವುಪಚರ್ಯತೇ। ಅಪಿ ಚಾಯಮರುಷ ಆರೋಚಮಾನೋ ವೃಷಾ ವರ್ಷಿತಾ ಕಾಮಾನಾಮೇವಂಗುಣಕೋಽಗ್ನಿಃ ಶ್ಯಾವಾಸು ಶ್ಯಾವವರ್ಣಾಸು ಕೃಷ್ಣಾ ಸೂರ್ಮ್ಯಾಸು । ರಾತ್ರಿನಾಮ್ಯೈತತ್ । ನಿಶಾಸು ತಮೋಽಂಧಕಾರಂ ತಿರಸ್ಕೃತ್ಯಾ ಸಮಂತಾದ್ದದೃಶೇ । ದೃಶ್ಯತೇ । ಶ್ಯಾವಾಃ ಶ್ಯಾವವರ್ಣಾ ರಾತ್ರೀಶ್ಚಾ ತಿಷ್ಠತಿ । ಅರುಷಾ ವೃಷೇತಿ ಪುನರುಕ್ತಿರಾದರಾರ್ಥಾ ಪಾದಪೂರಣಾರ್ಥಾ ವಾ ॥**

॥ ಪ್ರತಿಪದಾರ್ಥ ॥

**ಯಃ**—ಯಾವ ಅಗ್ನಿಯು । **ಭಾನುನಾ**—ತನ್ನ ಕಾಂತಿಯಿಂದ । **ಉಭೇ ರೋದಸೀ**—ದ್ಯಾವಾ ಪೃಥಿವಿಗಳೆರಡನ್ನೂ । **ಆ ಪಪ್ರೌ**—ವ್ಯಾಪಿಸಿ ಸ್ಥಿತನಾಗಿದ್ದಾನೋ (ಅವನು) । **ಧೂಮೇನ**—ಧೂಮರೂಪದಲ್ಲಿ **ದಿವಿ**—ಅಂತರಿಕ್ಷದಲ್ಲಿ । **ಧಾವತೇ**—ಸಂಚರಿಸುತ್ತಾನೆ । **ಅರುಷಃ**—ಆಕರ್ಷಕವಾದ ವರ್ಣವುಳ್ಳವನೂ । **ವೃಷಾ**—ಕಾಮವರ್ಷಕನೂ ಆದ ಅಗ್ನಿಯು । **ಶ್ಯಾವಾಸು**—ಕೃಷ್ಣವರ್ಣವುಳ್ಳ । **ಊರ್ಮ್ಯಾಸು**—ರಾತ್ರಿಗಳಲ್ಲಿ । **ತಮಃ ತಿರಃ**—ಅಂಧಕಾರವನ್ನು ದೂರಕ್ಕೆ ತಳ್ಳಿ । **ಆ ದದೃಶೇ**—ಸುತ್ತಲೂ ಗೋಚರನಾಗುತ್ತಾನೆ । **ಅರುಷಃ**—ಆರೋಚಮಾನನೂ । **ವೃಷಾ**—ಕಾಮವರ್ಷಕನೂ ಆದ ಅಗ್ನಿಯು । **ಶ್ಯಾವಾಃ**—ಕೃಷ್ಣವರ್ಣವುಳ್ಳ ರಾತ್ರಿಗಳನ್ನು । **ಆ (ತಿಷ್ಠತಿ)**—ಆಕ್ರಮಿಸಿ ಸ್ಥಿತನಾಗುತ್ತಾನೆ.

|| ಭಾವಾರ್ಥ ||

ಯಾವ ಅಗ್ನಿಯು ತನ್ನ ಕಾಂತಿಯಿಂದ ದ್ಯಾವಾಪೃಥಿವಿಗಳೆರಡನ್ನೂ ವ್ಯಾಪಿಸಿ ಸ್ಥಿತನಾಗಿದ್ದಾನೋ ಅವನು ಧೂಮರೂಪದಲ್ಲಿ ಅಂತರಿಕ್ಷದಲ್ಲಿ ಸಂಚರಿಸುತ್ತಾನೆ. ಆಕರ್ಷಕವಾದ ವರ್ಣವುಳ್ಳವನೂ ಕಾಮವರ್ಷಕನೂ ಆದ ಅಗ್ನಿಯು ಕೃಷ್ಣವರ್ಣವುಳ್ಳ ರಾತ್ರಿಗಳಲ್ಲಿ ಅಂಧಕಾರವನ್ನು ದೂರಕ್ಕೆ ತಳ್ಳಿ ಸುತ್ತಲೂ ಗೋಚರನಾಗುತ್ತಾನೆ. ಆರೋಚಮಾನನೂ, ಕಾಮವರ್ಷಕನೂ, ಆದ ಅಗ್ನಿಯು ಕೃಷ್ಣವರ್ಣಗಳುಳ್ಳ ರಾತ್ರಿಗಳನ್ನು ಆಕ್ರಮಿಸಿ ಸ್ಥಿತನಾಗುತ್ತಾನೆ. (ಬೆಳಗುತ್ತಾನೆ)

## English Translation.

He who fills both heaven and earth with light, who mounts with sm ke into the sky, this radiant showerer (of benefits) is beheld in the dark

nights dispersing the gloom : this radiant showerer (of benefits) presides over the dark nights.

॥ ಸಂಹಿತಾಪಾಠಃ ॥

ಬೃಹದ್ಭಿರಗ್ನೇ ಅರ್ಚಿಭಿಃ ಶುಕ್ರೇಣ ದೇವ ಶೋಚಿಷಾ ।

ಭರದ್ವಾಜೇ ಸಮಿಧಾನೋ ಯವಿಷ್ಠ್ಯ ರೇವನ್ನಃ ಶುಕ್ರ ದೀದಿಹಿ ದ್ಯುಮತ್ಪಾವಕ ದೀದಿಹಿ ॥ ೭ ॥

॥ ಪದಪಾಠಃ ॥

ಬೃಹತ್ಽಭಿಃ । ಅಗ್ನೇ । ಅರ್ಚಿಽಭಿಃ । ಶುಕ್ರೇಣ । ದೇವ । ಶೋಚಿಷಾ ।

ಭರತ್ಽವಾಜೇ । ಸಂಽಇಧಾನಃ । ಯವಿಷ್ಠ್ಯ । ರೇವತ್ । ನಃ । ಶುಕ್ರ । ದೀದಿಹಿ । ದ್ಯುಮತ್ । ಪಾವಕ । ದೀದಿಹಿ ॥ ೭ ॥

॥ ಸಾಯಣಭಾಷ್ಯಂ ॥

ಹೇ ದೇವ ದಾನಾದಿಗುಣಯುಕ್ತ ಯವಿಷ್ಠ್ಯ ಯುವತಮ ಶುಕ್ರ ದೀಪ್ತಾಗ್ನೇ ಶುಕ್ರೇಣ ನಿರ್ಮಲೇನ ಶೋಚಿಷಾ ತೇಜಸಾ ಭರದ್ವಾಜೇಽಸ್ಮದ್ಬ್ರಾತರಿ ಸಮಿಧಾನಃ ಸಮಿಧ್ಯಮಾನಸ್ತ್ವಂ ಬೃಹದ್ಭಿರ್ಮಹದ್ಭಿರರ್ಚಿಭಿಸ್ತೇಜೋಭಿರ್ನೋಽಸ್ಮದರ್ಥಂ ರೇವದ್ಧನಯುಕ್ತಂ ಯಥಾ ಭವತಿ ತಥಾ ದೀದಿಹಿ । ದೀಪ್ಯಸ್ವ । ತಥಾ ಪಾವಕ ಹೇ ಶೋಧಕಾಗ್ನೇ ದ್ಯುಮತ್ ದ್ಯೋತಮಾನೇನ ಚ ಯುಕ್ತಂ ಯಥಾ ಭವತಿ ತಥಾ ದೀದಿಹಿ । ದೀಪ್ಯಸ್ವ ॥

॥ ಪ್ರತಿಪದಾರ್ಥ ॥

**ದೇವ**—ದೇವತಾತ್ಮನೂ । **ಯವಿಷ್ಠ್ಯ**—ಅತ್ಯಂತ ಯುವಕನೂ । **ಶುಕ್ರ**—ಕಾಂತಿಯುತನೂ ಆದ । **ಅಗ್ನೇ**—ಎಲೈ ಅಗ್ನಿಯೇ । **ಶುಕ್ರೇಣ**—ನಿರ್ಮಲವಾದ । **ಶೋಚಿಷಾ**—ಪ್ರಭೆಯೊಡನೆ । **ಭರದ್ವಾಜೇ**—ಭರದ್ವಾಜನಿಂದ । **ಸಮಿಧಾನಃ**—ಪ್ರಜ್ವಲಿತನಾದ ನೀನು । **ಬೃಹದ್ಭಿಃ**—ಮಹತ್ತಾದ । **ಅರ್ಚಿಭಿಃ**—ತೇಜಸ್ಸುಗಳೊಡನೆ । **ನಃ**—ನಮ್ಮ ಭಾಗಕ್ಕೆ । **ರೇವತ್**—ಧನಯುಕ್ತನೂ ಧನಪ್ರದನೂ ಆಗುವಂತೆ । **ದೀದಿಹಿ**—ಪ್ರಕಾಶಿಸು । **ಪಾವಕ**—ಶುದ್ಧಿಕಾರಕನಾದ ಎಲೈ ಅಗ್ನಿಯೇ । **ದ್ಯುಮತ್**—ಶೋಭಾಯುತವಾದ ಕಾಂತಿಯೊಡನೆ । **ದೀದಿಹಿ**—ಪ್ರಕಾಶಿಸು.

॥ ಭಾವಾರ್ಥ ॥

ದೇವತಾತ್ಮನೂ, ಅತ್ಯಂತ ಯುವಕನೂ, ಕಾಂತಿಯುತನೂ ಆದ ಎಲೈ ಅಗ್ನಿಯೇ, ನಿರ್ಮಲವಾದ ಪ್ರಭೆಯೊಡನೆ ಭರದ್ವಾಜನಿಂದ ಪ್ರಜ್ವಲಿತನಾದ ನೀನು ಮಹತ್ತಾದ ತೇಜಸ್ಸುಗಳೊಡನೆ ನಮ್ಮ ಭಾಗಕ್ಕೆ ಧನಯುಕ್ತನೂ ಧನಪ್ರಧನೂ ಆಗುವಂತೆ ಪ್ರಕಾಶಿಸು. ಶುದ್ಧಿಕಾರಕನಾದ ಎಲೈ ಅಗ್ನಿಯೇ, ಶೋಭಾಯುತವಾದ ಕಾಂತಿಯೊಡನೆ ಪ್ರಕಾಶಿಸು.

## English Translation.

Divine, resplendent Agni, youngest (of the gods), when kindled by Bharadwaja, shines with many flames, with pure lustre, (conferring) riches upon us ; shine, resplendent purifier.

॥ ಸಂಹಿತಾಪಾಠಃ ॥

ವಿಶ್ವಾಸಾಂ ಗೃಹಪತಿರ್ವಿಶಾಮಸಿ ತ್ವಮಗ್ನೇ ಮಾನುಷೀಣಾಂ ।
ಶತಂ ಪೂರ್ಭಿರ್ಯವಿಷ್ಠ ಪಾಹ್ಯಂಹಸಃ ಸಮೇದ್ಧಾರಂ ಶತಂ ಹಿಮಾಃ
ಸ್ತೋತೃಭ್ಯೋ ಯೇ ಚ ದದತಿ ॥ ೮ ॥

॥ ಪದಪಾಠಃ ॥

ವಿಶ್ವಾಸಾಂ । ಗೃಹऽಪತಿಃ । ವಿಶಾಂ । ಅಸಿ । ತ್ವಂ । ಅಗ್ನೇ । ಮಾನುಷೀಣಾಂ ।
ಶತಂ । ಪೂಃऽಭಿಃ । ಯವಿಷ್ಠ । ಪಾಹಿ । ಅಂಹಸಃ । ಸಂऽಇದ್ಧಾರಂ । ಶತಂ । ಹಿಮಾಃ । ಸ್ತೋತೃऽಭ್ಯಃ ।
ಯೇ । ಚ । ದದತಿ ॥ ೮ ॥

॥ ಸಾಯಣಭಾಷ್ಯಂ ॥

ಹೇ ಅಗ್ನೇ ತ್ವಂ ಮಾನುಷೀಣಾಂ ಮನೋರಪತ್ಯಭೂತಾನಾಂ ವಿಶ್ವಾಸಾಂ ಸರ್ವಾಸಾಂ ವಿಶಾಂ ಪ್ರಜಾನಾಂ ಗೃಹಪತಿರಸಿ । ಗೃಹಸ್ವಾಮೀ ಭವಸಿ । ಹೇ ಯವಿಷ್ಠ ಯುವತಮಾಗ್ನೇ ಅತಸ್ತ್ವಂ ಶತಂ ಹಿಮಾಃ ಶತಂ ಹೇಮಂತಾನ್ ಸಂವತ್ಸರಾನ್ ಸಮೇದ್ಧಾರಂ ತ್ವಾಂ ಸಮ್ಯಗಿದ್ಧಂ ಕೃತವಂತಂ ಮಾಂ ಶತಂ ಶತೇನ ಶತಸಂಖ್ಯಾಕೈಃ ಪೂರ್ಭಿಃ ಪಾಲಕೈರಂಹಸಃ ಪಾಪಾದಾಹಂತುಃ ಶತ್ರೋರ್ವಾ ಪಾಹಿ । ರಕ್ಷ । ಯೇ ಚ ಸ್ತೋತೃಭ್ಯೋ ದದತಿ ಧನಂ ತವ ಸಮಿಂಧನಸ್ಯ ಕರ್ತರಿ ಪ್ರಯಚ್ಛಂತಿ ತಾಂಶ್ಚ ಪಾಹಿ ॥

॥ ಪ್ರತಿಪದಾರ್ಥ ॥

**ಅಗ್ನೇ**—ಎಲೈ ಅಗ್ನಿಯೇ । **ತ್ವಂ**—ನೀನು । **ಮಾನುಷೀಣಾಂ**—ಮನುವಂಶೋತ್ಪನ್ನರಾದ । **ವಿಶ್ವಾಸಾಂ ವಿಶಾಂ**—ಸಮಸ್ತ ಪ್ರಜೆಗಳಿಗೂ । **ಗೃಹಪತಿಃ**—ಗೃಹಸ್ವಾಮಿಯಾಗಿ । **ಅಸಿ**—ಆಗಿದ್ದೀಯೆ । **ಯವಿಷ್ಠ**—ಅತ್ಯಂತ ಯುವಕನಾದ ಎಲೈ ಅಗ್ನಿಯೇ । **ಸಮೇದ್ಧಾರಂ**—ನಿನ್ನನ್ನು ಪ್ರಜ್ವಲಿತನನ್ನಾಗಿ ಮಾಡಿದ ನನ್ನನ್ನು । **ಶತಂ ಹಿಮಾಃ**—ನೂರು ಸಂವತ್ಸರಗಳವರೆಗೆ । **ಶತಂ**—ಶತಸಂಖ್ಯಾಕವಾದ । **ಪೂರ್ಭಿಃ**—ಪಾಲನೆಗಳೊಡನೆ । **ಅಂಹಸಃ**—ಪಾಪಗಳಿಂದ । **ಪಾಹಿ**—ರಕ್ಷಿಸು । **ಯೇ ಚ**—ಯಾರು ಯಾರು । **ಸ್ತೋತೃಭ್ಯಃ**—ನಿನ್ನ ಸ್ತುತಿಕರ್ತರಿಗೆ । **ದದತಿ**—ಧನವನ್ನು ಕೊಡುವರೋ (ಅವರನ್ನೂ ಸಲಹು).

॥ ಭಾವಾರ್ಥ ॥

ಎಲೈ ಅಗ್ನಿಯೇ, ನೀನು ಮನುವಂಶೋತ್ಪನ್ನರಾದ ಸಮಸ್ತ ಪ್ರಜೆಗಳಿಗೂ ಗೃಹಸ್ವಾಮಿಯಾಗಿ ಆಗಿದ್ದೀಯೆ. ಅತ್ಯಂತ ಯುವಕನಾದ ಎಲೈ ಅಗ್ನಿಯೇ, ನಿನ್ನನ್ನು ಪ್ರಜ್ವಲಿತನನ್ನಾಗಿ ಮಾಡಿದ ನನ್ನನ್ನು ನೂರು ಸಂವತ್ಸರಗಳು ಪೂರ್ತ ಶತಸಂಖ್ಯಾಕವಾದ ಪಾಲನೆಗಳೊಡನೆ ಕೂಡಿ ಪಾಪಗಳಿಂದ ರಕ್ಷಿಸು. ಯಾರು-ಯಾರು ನಿನ್ನ ಸ್ತುತಿಕರ್ತರಿಗೆ ಧನವನ್ನು ಕೊಡುವರೋ ಅವರನ್ನೂ ಸಲಹು.

English Translation.

You, Agni, are the lord of the dwelling and of all men the descendents of Manu: protect me, youngest (of the gods), when kindling you, with a hundred defences against iniquity: (grant me) a hundred winters, (as well as to those) who bestow gifts upon your worshippers.

॥ ಸಂಹಿತಾಪಾಠಃ ॥

ತ್ವಂ ನಶ್ಚಿತ್ರ ಊತ್ಯಾ ವಸೋ ರಾಧಾಂಸಿ ಚೋದಯ ।
ಅಸ್ಯ ರಾಯಸ್ತ್ವಮಗ್ನೇ ರಥೀರಸಿ ವಿದಾ ಗಾಧಂ ತುಚೇ ತು ನಃ ॥ ೯ ॥

॥ ಪದಪಾಠಃ ॥

ತ್ವಂ । ನ । ಚಿತ್ರಃ । ಊತ್ಯಾ । ವಸೋ ಇತಿ । ರಾಧಾಂಸಿ । ಚೋದಯ ।
ಅಸ್ಯ । ರಾಯಃ । ತ್ವಂ । ಅಗ್ನೇ । ರಥೀಃ । ಅಸಿ । ವಿದಾಃ । ಗಾಧಂ । ತುಚೇ । ತು । ನಃ ॥ ೯ ॥

॥ ಸಾಯಣಭಾಷ್ಯಂ ॥

ಹೇ ವಸೋ ವಾಸಕಾಗ್ನೇ ಚಿತ್ರೋ ದರ್ಶನೀಯಸ್ತ್ವಮೂತ್ಯಾ ರಕ್ಷಯಾ ಸಹ ರಾಧಾಂಸಿ ಧನಾನಿ ನೋಽಸ್ಮಭ್ಯಂ ಚೋದಯ । ಪ್ರೇರಯ । ಅಸ್ಯ ಸರ್ವತ್ರ ಲೋಕೇ ಪರಿದೃಶ್ಯಮಾನಸ್ಯ ರಾಯೋ ಧನಸ್ಯ ತ್ವಂ ರಥೀರಸಿ । ರಂಹಿತಾ ನೇತಾ ಭವಸಿ । ಅತಃ ಕಾರಣಾದಸ್ಮಭ್ಯಂ ಧನಾನಿ ಪ್ರೇರಯೇತ್ಯರ್ಥಃ । ಅಪಿ ಚ ನೋಽಸ್ಮಾಕಂ ತುಚೇ । ಅಪತ್ಯನಾಮೈತತ್ । ಅಪತ್ಯಾಯಾಪತನಹೇತುಭೂತಾಯ ಪುತ್ರಾಯ ಗಾಧಂ ಪ್ರತಿಷ್ಠಾಂ ತು ಕ್ಷಿಪ್ರಂ ವಿದಾಃ । ಲಂಭಯ ॥

॥ ಪ್ರತಿಪದಾರ್ಥ ॥

ವಸೋ—ವಸತಿದಾಯಕನಾದ । ಅಗ್ನೇ—ಎಲೈ ಅಗ್ನಿಯೇ । ಚಿತ್ರಃ—ಆಕರ್ಷಕವಾದ ರೂಪವುಳ್ಳ । ತ್ವಂ—ನೀನು । ಊತ್ಯಾ—ರಕ್ಷಣೆಗಳೊಡನೆ । ರಾಧಾಂಸಿ—ಧನಗಳನ್ನು । ನಃ—ನಮಗೆ । ಚೋದಯ—

ಪ್ರೇರಿಸು । **ಅಸ್ಯ**—ಪ್ರಸಿದ್ಧವಾದ । **ರಾಯಃ**—ಧನಕ್ಕೆ । **ತ್ವಂ**—ನೀನೇ । **ರಥೀಃ ಅಸಿ**—ನೇತೃವಾಗಿದ್ದೀಯೆ । **ನಃ**—ನಮ್ಮ । **ತುಚೇ**—ಪುತ್ರಪೌತ್ರಾದಿಗಳಿಗೆ । **ಗಾಧಂ**—ಶಾಶ್ವತವಾದ ಸ್ಥಿತಿಗತಿಗಳನ್ನು । **ತು**—ಶೀಘ್ರವಾಗಿ । **ವಿದಾಃ**—ಹೊಂದಿಸು.

॥ ಭಾವಾರ್ಥ ॥

ವಸತಿದಾಯಕನಾದ ಎಲೈ ಅಗ್ನಿಯೇ, ಆಕರ್ಷಕವಾದ ರೂಪವುಳ್ಳ ನೀನು ರಕ್ಷಣೆಗಳೊಡಗೂಡಿದ ಧನಗಳನ್ನು ನಮಗೆ ಪ್ರೇರಿಸು. ಏತಕ್ಕೆಂದರೆ, ಪ್ರಸಿದ್ಧವಾದ ಧನಕ್ಕೆಲ್ಲಾ ನೀನೇ ನೇತೃವಾಗಿದ್ದೀಯೆ. ನಮ್ಮ ಪುತ್ರಪೌತ್ರಾದಿಗಳಿಗೆ ಶಾಶ್ವತವಾದ ಸ್ಥಿತಿಗತಿಗಳನ್ನು ಶೀಘ್ರವಾಗಿ ಹೊಂದಿಸು.

English Translation.

Wonderful (Agni), giver of dwellings, encourage us by (your) protection, and (the gift of) riches, for you are the conveyer, Agni, of this wealth : quickly bestow permanence upon our progeny.

॥ ಸಂಹಿತಾಪಾಠಃ ॥

ಪರ್ಷಿ ತೋಕಂ ತನಯಂ ಪರ್ತೃಭಿಷ್ಟ್ವಮದಬ್ಧೈರಪ್ರಯುತ್ವಭಿಃ ।
ಅಗ್ನೇ ಹೇಳಾಂಸಿ ದೈವ್ಯಾ ಯುಯೋಧಿ ನೋಽದೇವಾನಿ ಹ್ವರಾಂಸಿ ಚ ॥

॥ ಪದಪಾಠಃ ॥

ಪರ್ಷಿ । ತೋಕಂ । ತನಯಂ । ಪರ್ತೃಽಭಿಃ । ತ್ವಂ । ಅದಬ್ಧೈಃ । ಅಪ್ರಯುತ್ವಽಭಿಃ ।
ಅಗ್ನೇ । ಹೇಳಾಂಸಿ । ದೈವ್ಯಾ । ಯುಯೋಧಿ । ನಃ । ಅದೇವಾನಿ । ಹ್ವರಾಂಸಿ । ಚ ॥ ೧೦ ॥

॥ ಸಾಯಣಭಾಷ್ಯಂ ॥

ಹೇ ಅಗ್ನೇ ತ್ವಮದಬ್ಧೈಃ ಕೇನಾಪ್ಯಹಿಂಸಿತೈರಪ್ರಯುತ್ವಭಿಃ । ಯೌತಿರತ್ರ ಪೃಥಗ್ಭಾವಾರ್ಥಃ । ಅಪೃಥಗ್ಭೂತೈಃ ಸಂಹತೈಃ ಪರ್ತೃಭಿಃ ಪಾಲನಸಾಧನೈಸ್ತೋಕಂ ಪುತ್ರಂ ತನಯಂ ಪೌತ್ರಂ ಚ ಪರ್ಷಿ । ಪಾಲಯ । ದೈವ್ಯಾ ದೇವಸಂಬಧೀನಿ ಚ ಹೇಳಾಂಸಿ ಕ್ರೋಧಾನ್ನೋಽಸ್ಮತ್ತೋ ಯುಯೋಧಿ । ಪೃಥಕ್ಕುರು। ಅದೇವಾನಿ ಮನುಷ್ಯಸಂಬಂಧೀನಿ ಚ ಹ್ವರಾಂಸಿ ಹಿಂಸನಾನಿ ಚಾಸ್ಮತ್ತಃ ಪೃಥಕ್ಕುರು ॥

॥ ಪ್ರತಿಪದಾರ್ಥ ॥

**ಅಗ್ನೇ**—ಎಲೈ ಅಗ್ನಿಯೇ । **ತ್ವಂ**—ನೀನು । **ಅದಬ್ಧೈಃ**—ಅಹಿಂಸಾತ್ಮಕವಾದವುಗಳೂ ಅಥವಾ ಯಾರಿಂದಲೂ ಹಿಂಸಿಸಲ್ಪಡದಿರುವುವೂ । **ಅಪ್ರಯುತ್ವಭಿಃ**—ಯಾವಾಗಲೂ ಒಟ್ಟುಗೂಡಿಕೊಂಡಿರುವುವೂ ಆದ ।

**ಪರ್ತೃಭಿಃ**—ರಕ್ಷಣೆಗಳೊಡನೆ। **ತೋಕಂ**—ನಮ್ಮ ಪುತ್ರನನ್ನೂ। **ತನಯಂ**—ಪೌತ್ರನನ್ನೂ। **ಪರ್ಷಿ**—ರಕ್ಷಿಸು। **ದೈವ್ಯಾಃ**—ದೇವಸಂಬಂಧಿಯಾದ। **ಹೇಳಾಂಸಿ**—ಕ್ರೋಧಗಳನ್ನು। **ನಃ**—ನಮ್ಮಿಂದ। **ಯುಯೋಧಿ**—ದೂರಮಾಡು। **ಅದೇವಾನಿ ಚ**—ಮನುಷ್ಯಸಂಬಂಧಿಯಾದ ಕ್ರೋಧಗಳನ್ನೂ ಸಹ। **ಹ್ವರಾಂಸಿ**—ನಮ್ಮಿಂದ ದೂರಮಾಡಿ ಓಡಿಸು.

॥ ಭಾವಾರ್ಥ ॥

ಎಲೈ ಅಗ್ನಿಯೇ, ನೀನು ಅಹಿಂಸಾತ್ಮಕವಾದವೂ ಮತ್ತು ಯಾರಿಂದಲೂ ಹಿಂಸಿಸಲ್ಪಡದಿರುವುವೂ, ಆದ ರಕ್ಷಣೆಗಳೊಡನೆ ನಮ್ಮ ಪುತ್ರನನ್ನೂ ಪೌತ್ರನನ್ನೂ ರಕ್ಷಿಸು. ದೇವಸಂಬಂಧಿಯಾದ ಕ್ರೋಧಗಳನ್ನು ನಮ್ಮಿಂದ ದೂರಮಾಡು. ಮಾನವರು ನಮ್ಮ ಮೇಲೆ ಕೋಪಿಸಿಕೊಂಡರೆ ಅದರ ಪ್ರಭಾವವು ನಮಗೆ ತಟ್ಟದಂತೆ ಮಾಡು.

## English Translation.

You protect with uninjurable, irremoveable defences (our) sons and grandsons : remove far from us celestial wrath and human malevolence.

॥ ಸಂಹಿತಾಪಾಠಃ ॥

**ಆ ಸಖಾಯಃ ಸಬರ್ದುಘಾಂ ಧೇನುಮಜಧ್ವಮುಪ ನವ್ಯಸಾ ವಚಃ ।**
**ಸೃಜಧ್ವಮನಪಸ್ಫುರಾಂ ॥ ೧೧ ॥**

॥ ಪದಪಾಠಃ ॥

ಆ । ಸಖಾಯಃ । ಸಬಃऽದುಘಾಂ । ಧೇನುಂ । ಅಜಧ್ವಂ । ಉಪ । ನವ್ಯಸಾ । ವಚಃ ।
ಸೃಜಧ್ವಂ । ಅನಪऽಸ್ಫುರಾಂ ॥ ೧೧ ॥

॥ ಸಾಯಣಭಾಷ್ಯಂ ॥

ಹೇ ಸಖಾಯಃ ಸಮಾನಖ್ಯಾನಾ ಅಧ್ವರ್ಯವಃ ಸಬರ್ದುಘಾಂ । ಸಬರಿತಿ ಪಯಸೋ ನಾಮ । ಅಮರಣಹೇತುಭೂತಸ್ಯ ಪಯಸೋ ದೋಗ್ಧ್ರೀಂ ಧೇನುಂ ಗಾಮಾಜಧ್ವಂ । ಅಭಿಗಚ್ಛತ । ಪ್ರಾಪ್ನುತ । ಕೇನ ಸಾಧನೇನ । ನವ್ಯಸಾ ನವೀಯಸಾ ನವತರೇಣ ವಚೋ ವಚಸಾಹ್ವಾನರೂಪೇಣ ಶಬ್ದೇನ । ತದನಂತರಮನಪಸ್ಫುರಾಂ । ಸ್ಫುರತಿರ್ವಧಕರ್ಮಾ । ಅನಪಬಾಧ್ಯಾಂ ತಾಂ ಧೇನುಮುಪ ಸೃಜಧ್ವಂ । ವತ್ಸೇನೋಪಸೃಷ್ಟಾಂ ಕುರುತ । ಮರುದ್ದೇವತ್ಯತ್ವಾತ್ ಮರುತಾಂ ಯಾಗಾಯ ಪಯೋ ದೋಗ್ಧುಮಿತಿ ಶೇಷಃ । ಅಥವಾ ಮರುತಾಂ ಮಾತಾ ಪೃಶ್ನ್ಯಾಖ್ಯಾ ಮಾಧ್ಯಮಿಕಾ ವಾಗ್ಧೇನುಃ । ಹೇ ಸಖಾಯಃ ಸ್ತೋತಾರಃ ಸಬರ್ದುಘಾಂ ಮರುಜ್ಜನಹೇತುಭೂತಸ್ಯ ಪಯಸೋ ದೋಗ್ಧ್ರೀಂ ಧೇನುಂ ಪೃಶ್ನಿಂ ನವ್ಯಸಾ ನವತರೇಣ ವಚಸಾ ಸ್ತೋತ್ರೇಣೋಪಾಜಧ್ವಂ ಉಪಾಗಚ್ಛತ । ಅನಪಸ್ಫುರಾಮನಪಬಾಧ-

ನೀಯಾಂ ತಾಂ ಸೃಜಧ್ವಂ । ಬಂಧನಾದ್ವಿಸೃಜತ । ಮುಂಚತ । ಈದೃಶೀ ಮಹತೀ ಧೇನುರ್ಮರುತಾಂ ಮಾತಾ ಕಿಮು ವಕ್ತವ್ಯಂ ತೇಷಾಂ ಮಾಹಾತ್ಮ್ಯಮಿತಿ ಮರುತ್ಸ್ತುತಿಃ ॥

॥ ಪ್ರತಿಪದಾರ್ಥ ॥

**ಸಖಾಯಃ**—ಸಖಿಭೂತರಾದ ಎಲೈ ಋತ್ವಿಕ್ಕುಗಳೇ । **ಸಬರ್ದುಘಾಂ**—ಪುಷ್ಕಲವಾದ ಕ್ಷೀರವನ್ನು ಕರೆಯತಕ್ಕ । **ಧೇನುಂ**—ಧೇನುವನ್ನು । **ನವ್ಯಸಾ**—ನೂತನವಾಗಿ ನಿರ್ಮಿತವಾದ । **ವಚಃ**—ಸ್ತುತಿ ವಾಕ್ಯಗಳೊಡನೆ । **ಆ ಅಜಧ್ವಂ**—ಸಮೀಪಿಸಿರಿ । **ಅನಪಸ್ಫುರಾಂ**—ಬಾಧಾರಹಿತವಾದ ಅದನ್ನು (ಬಂಧನದಿಂದ ಬಿಡಿಸಿರಿ) । **ಉಪ ಸೃಜಧ್ವಂ**—ವತ್ಸದೊಡನೆ ಸೇರಿಸಿರಿ.

॥ ಭಾವಾರ್ಥ ॥

ಸಖಿಭೂತರಾದ ಎಲೈ ಋತ್ವಿಕ್ಕುಗಳೇ, ಪುಷ್ಕಲವಾದ ಕ್ಷೀರವನ್ನು ಕರೆಯತಕ್ಕ ಧೇನುವನ್ನು ನೂತನವಾಗಿ ನಿರ್ಮಿತವಾದ ಸ್ತುತಿವಾಕ್ಯಗಳೊಡನೆ ಸಮೀಪಿಸಿರಿ. ಬಾಧಾರಹಿತವಾದ ಅದನ್ನು ವತ್ಸದೊಡನೆ ಸೇರಿಸಿರಿ.

## English Translation.

Approach, friends, the milk-yielding cow with a new song, and let her loose unharmed.

॥ ಸಂಹಿತಾಪಾಠಃ ॥

ಯಾ ಶರ್ಧಾಯ ಮಾರುತಾಯ ಸ್ವಭಾನವೇ ಶ್ರವೋಽಮೃತ್ಯು ಧುಕ್ಷತ ।
ಯಾ ಮೃಳೀಕೇ ಮರುತಾಂ ತುರಾಣಾಂ ಯಾ ಸುಮ್ನೈರೇವಯಾವರೀ ॥

॥ ಪದಪಾಠಃ ॥

ಯಾ । ಶರ್ಧಾಯ । ಮಾರುತಾಯ । ಸ್ವಽಭಾನವೇ । ಶ್ರವಃ । ಅಮೃತ್ಯು । ಧುಕ್ಷತ ।
ಯಾ । ಮೃಳೀಕೇ । ಮರುತಾಂ । ತುರಾಣಾಂ । ಯಾ । ಸುಮ್ನೈಃ । ಏವಽಯಾವರೀ ॥ ೧೨ ॥

॥ ಸಾಯಣಭಾಷ್ಯಂ ॥

ಯಾ ಧೇನುರಮೃತ್ಯ್ವಮರಣಹೇತು ಶ್ರವೋಽನ್ನಂ ಪಯೋಲಕ್ಷಣಂ ಮಾರುತಾಯ ಮರುತ್ಸಂಘಾಯ ಧುಕ್ಷತ ಅಧುಕ್ಷತ್ । ಕೀದೃಶಾಯ । ಶರ್ಧಾಯ ಪ್ರಸಹನಶೀಲಾಯ ಸ್ವಭಾನವೇ ಸ್ವಾಯತ್ತದೀಪ್ತಯೇ । ಯಾ ಚ ತುರಾಣಾಂ ಕ್ಷಿಪ್ರಕಾರಿಣಾಂ ಮರುತಾಂ ಮೃಳೀಕೇ ಸುಖೇ ತತ್ಪರಾ ವರ್ತತೇ । ಯಾ ಚ ಸುಮ್ನೈಃ ಸುಖೈರ್ಹೇತುಭೂತೈರೇವಯಾವರ್ಯೇವೈರ್ಗಂತೃಭಿರಶ್ವೈರ್ಮಧ್ಯಮ-ಸ್ಥಾನೈರುದಕೈರ್ವಾ ಸಹ ಯಾಂತ್ಯನ್ಯೇಷಾಮಪಿ ಸುಖಾರ್ಥಂ ವೃಷ್ಟಿಜಲೈಃ ಸಹಾಗಚ್ಛಂತೀ ತಾಂ ಧೇನುಮುಪಾಜಧ್ವಮಿತಿ ಪೂರ್ವತ್ರಾನ್ವಯಃ । ಅತ್ರಾಪಿ ಪೂರ್ವವನ್ಮರುತ್ಸ್ತುತಿರಧಿಗಂತವ್ಯಾ ॥

॥ ಪ್ರತಿಪದಾರ್ಥ ॥

**ಯಾ**—ಯಾವ ಧೇನುವು । **ಶರ್ಧಾಯ**—ಬಲವುಳ್ಳದ್ದೂ । **ಸ್ವಭಾನವೇ**—ಸ್ವಯಂಪ್ರಕಾಶಮಾನವಾದುದೂ ಆದ । **ಮಾರುತಾಯ**—ಮರುತ್ಸಂಘಕ್ಕೆ । **ಅಮೃತ್ಯು**—ನಾಶರಹಿತವಾದ । **ಶ್ರವಃ**—ಅನ್ನವನ್ನು । **ಧುಕ್ಷತ**—ಕರೆಯುವಳೋ (ಒದಗಿಸುವಳೋ) । **ಯಾ**—ಯಾರು । **ತುರಾಣಾಂ**—ವೇಗಗಾಮಿಗಳಾದ । **ಮರುತಾಂ**—ಮರುತ್ತುಗಳಿಗೆ । **ಮೃಳೀಕೇ**—ಸುಖಕಾರಕಳೋ । **ಯಾ**—ಯಾರು । **ಸುಮ್ನೈಃ**—ಸುಖಕರಗಳಾದ । **ಏವಯಾವರೀ**—ಅಶ್ವಗಳೊಡನೆ ಸಂಚರಿಸುವಳೋ (ಅಂತಹ ಧೇನುವನ್ನು ಸಮಾಪಿಸಿರಿ).

॥ ಭಾವಾರ್ಥ ॥

ಯಾವ ಧೇನುವು ಶಕ್ತಿಯುತವಾದುದೂ, ಸ್ವಯಂಪ್ರಕಾಶಮಾನವಾದುದೂ ಆದ ಮರುತ್ಸಂಘಕ್ಕೆ ನಾಶರಹಿತವಾದ ಅನ್ನವನ್ನು ಒದಗಿಸುವಳೋ, ಯಾರು ವೇಗಗಾಮಿಗಳಾದ ಮರುತ್ತುಗಳಿಗೆ ಸುಖಕಾರಕಳೋ, ಯಾರು ಸುಖಕರಗಳಾದ ಅಶ್ವಗಳೊಡನೆ ಸಂಚರಿಸುವಳೋ ಅಂತಹ ಧೇನುವನ್ನು (ಮರುದ್ದೇವತೆಗಳ ಮಾತೆಯನ್ನು) ಸಮಾಪಿಸಿರಿ.

## English Translation.

She who yields immortal food to the powerful, self-irradiating band of the Maruts, who (is anxious) for the gratification of the self-moving Maruts, who traverses the sky with (the passing waters), shedding delight.

॥ ಸಂಹಿತಾಪಾಠಃ ॥

ಭರದ್ವಾಜಾಯಾವ ಧುಕ್ಷತ ದ್ವಿತಾ ।
ಧೇನುಂ ಚ ವಿಶ್ವದೋಹಸಮಿಷಂ ಚ ವಿಶ್ವಭೋಜಸಂ ॥ ೧೩ ॥

॥ ಪದಪಾಠಃ ॥

ಭರತ್ऽವಾಜಾಯ । ಅವ । ಧುಕ್ಷತ । ದ್ವಿತಾ ।
ಧೇನುಂ । ಚ । ವಿಶ್ವऽದೋಹಸಂ । ಇಷಂ । ಚ । ವಿಶ್ವऽಭೋಜಸಂ ॥ ೧೩ ॥

॥ ಸಾಯಣಭಾಷ್ಯಂ ॥

ಹೇ ಮರುತೋ ಭರದ್ವಾಜಾಯಾಸ್ಮದ್ಬ್ರಾತ್ರೇ ದ್ವಿತಾ ದ್ವಿತಯಮವ ಧುಕ್ಷತ । ಕಿಂ ತದ್ದ್ವಿತಯಂ । ಧೇನುಂ ಚ ಗಾಂ ಚೇಷಂ ಚಾನ್ನಂ ಚ । ಕೀದೃಶೀಂ ಧೇನುಂ । ವಿಶ್ವದೋಹಸಂ ವಿಶ್ವಸ್ಯ ವ್ಯಾಪ್ತಸ್ಯ ಬಹುಲಸ್ಯ ದೋಗ್ಧ್ರೀಂ । ಕೀದೃಶಮನ್ನಂ । ವಿಶ್ವಭೋಜಸಂ ಸರ್ವೇಷಾಂ ಭೋಗಪರ್ಯಾಪ್ತಂ ॥

॥ ಪ್ರತಿಪದಾರ್ಥ ॥

(ಎಲೈ ಮರುತ್ತುಗಳೇ) **ಭರದ್ವಾಜಾಯ**—ಭರದ್ವಾಜಋಷಿಗಾಗಿ । **ವಿಶ್ವದೋಹಸಂ**—ವಿಶ್ವವ್ಯಾಪಕವಾಗುವಂತೆ ಕರೆಯುವ । **ಧೇನುಂ ಚ**—ಧೇನುವನ್ನೂ । **ವಿಶ್ವಭೋಜಸಂ**—ಸಮಸ್ತ ವಿಶ್ವಕ್ಕೂ ಭೋಗಸಾಧನವಾಗುವಂತಹ । **ಇಷಂ ಚ**—ಅನ್ನವನ್ನೂ । **ದ್ವಿತಾ**—ಈ ಎರಡು ವಿಧವಾದ ಅನ್ನಮೂಲಗಳನ್ನೂ । **ಅವಧುಕ್ಷತ**—ಪೂರ್ಣವಾಗಿ ಕರೆಯಿರಿ.

॥ ಭಾವಾರ್ಥ ॥

ಎಲೈ ಮರುತ್ತುಗಳೇ, ಭರದ್ವಾಜಋಷಿಗಾಗಿ ಎರಡು ವಿಧವಾದ ಅನ್ನಮೂಲಗಳನ್ನು ಕರೆಯಿರಿ. ಅವು ಯಾವುವೆಂದರೆ, ಮೊದಲನೆಯದಾಗಿ, ವಿಶ್ವವ್ಯಾಪಕವಾಗುವಂತೆ ಕರೆಯುವ ಧೇನು; ಎರಡನೆಯದಾಗಿ, ಸಮಸ್ತ ವಿಶ್ವಕ್ಕೂ ಭೋಗಸಾಧನವಾಗುವಂತಹ ಅನ್ನ. (ಇವೆರಡನ್ನೂ ಪೂರ್ಣವಾಗಿ ಕರೆಯಿರಿ).

English Translation.

Milk for Bharadwaja the twofold (blessing), the cow that gives milk to the universe, food that is sufficient for all.

॥ ಸಂಹಿತಾಪಾಠಃ ॥

ತಂ ವ ಇಂದ್ರಂ ನ ಸುಕ್ರತುಂ ವರುಣಮಿವ ಮಾಯಿನಂ ।
ಅರ್ಯಮಣಂ ನ ಮಂದ್ರಂ ಸೃಪ್ರಭೋಜಸಂ ವಿಷ್ಣುಂ ನ ಸ್ತುಷ ಆದಿಶೇ ॥

॥ ಪದಪಾಠಃ ॥

ತಂ । ವಃ । ಇಂದ್ರಂ । ನ । ಸುಽಕ್ರತುಂ । ವರುಣಂಽಇವ । ಮಾಯಿನಂ ।
ಅರ್ಯಮಣಂ । ನ । ಮಂದ್ರಂ । ಸೃಪ್ರಽಭೋಜಸಂ । ವಿಷ್ಣುಂ । ನ । ಸ್ತುಷೇ । ಆಽದಿಶೇ ॥ ೧೪ ॥

॥ ಸಾಯಣಭಾಷ್ಯಂ ॥

ಹೇ ಮರುದ್ಗಣ ತಂ ತಾದೃಶಂ ವಸ್ತ್ವಾಂ ಸ್ತುಷೇ । ಸ್ತೌಮಿ । ಕಿಮರ್ಥಂ । ಆದಿಶ ಆದೇಶನಾಯ ಧನಾನಾಮತಿಸರ್ಜನಾಯ ಪ್ರದಾನಾಯ । ಕೀದೃಶಂ ತ್ವಾಂ । ಇಂದ್ರಂ ನೇಂದ್ರಮಿವ ಸುಕ್ರತುಂ ಸುಕರ್ಮಾಣಂ ವರುಣಮಿವ ಮಾಯಿನಂ ಮಾಯಾವಂತಂ ಪ್ರಜ್ಞಾವಂತಮರ್ಯಮಣಂ ನಾರ್ಯಮಣಮಿವ ಮಂದ್ರಂ ಸ್ತುತ್ಯಂ ವಿಷ್ಣುಂ ನ ವಿಷ್ಣುಮಿವ ಸೃಪ್ರಭೋಜಸಂ ಪ್ರಸೃಪ್ತಧನಂ । ಯದಾ ತ್ವಸ್ಯಾ ಲಿಂಗೋಕ್ತದೇವತಾಸ್ತದಾನೀಂ ನೇವಶಬ್ದಾ ಚಶಬ್ದಾರ್ಥೇ । ದ್ರಷ್ಟವ್ಯಾ ॥

॥ ಪ್ರತಿಪದಾರ್ಥ ॥

(ಎಲೈ ಮರುದ್ಗಣವೇ) **ಇಂದ್ರಂ ನ**—ಇಂದ್ರನಂತೆ । **ಸುಕ್ರತುಂ**—ಉತ್ತಮವಾದ ಕರ್ಮಕರ್ತವಾದುದೂ । **ವರುಣಮಿವ**—ವರುಣನಂತೆ । **ಮಾಯಿನಂ**—ಪ್ರಜ್ಞಾಯುತವಾದುದೂ । **ಅರ್ಯಮಣಂ ನ**—ಅರ್ಯಮನಂತೆ ।

**ಮಂದ್ರಂ**—ಸ್ತುತ್ಯವಾದುದೂ | **ವಿಷ್ಣುಂ ನ**—ವಿಷ್ಣುವಿನಂತೆ | **ಸ್ಪಪ್ರಭೋಜಸಂ**—ಪ್ರಭೂತವಾದ ಧನವುಳ್ಳದ್ದೂ | **ತಂ**—ಪ್ರಸಿದ್ಧವಾದುದೂ ಆದ | **ವಂ**—ನಿಮ್ಮ ಮರುತ್ಸಮೂಹವನ್ನು | **ಆದಿಶೇ**—ಧನಪ್ರದಾನಾರ್ಥವಾಗಿ | **ಸ್ತುಷೇ**—ಸ್ತುತಿಸುತ್ತೇನೆ.

|| ಭಾವಾರ್ಥ ||

ಎಲೈ ಮರುದ್ಗಣವೇ, ಇಂದ್ರನಂತೆ ಉತ್ತಮವಾದ ಕರ್ಮವುಳ್ಳದ್ದೂ, ವರುಣನಂತೆ ಪ್ರಜ್ಞಾಯುತವಾದುದೂ, ಅರ್ಯಮನಂತೆ ಸ್ತುತ್ಯವಾದುದೂ, ವಿಷ್ಣುವಿನಂತೆ ಪ್ರಭೂತವಾದ ಧನವುಳ್ಳದ್ದೂ ಪ್ರಸಿದ್ಧವಾದುದೂ ಆದ ನಿಮ್ಮ ಮರುತ್ಸಮೂಹವನ್ನು ಧನಪ್ರದಾನಾರ್ಥವಾಗಿ ಸ್ತುತಿಸುತ್ತೇನೆ.

English Translation.

I praise you, the (company of Maruts), for the distribution of wealth; (the company that), like Indra, is the achiever of great deeds; sagacious like Varuna; adorable as Aryaman, and munificent as Vishnu.

|| ಸಂಹಿತಾಪಾಠಃ ||

ತ್ವೇಷಂ ಶರ್ಧೋ ನ ಮಾರುತಂ ತುವಿಷ್ವಣ್ಯನರ್ವಾಣಂ ಪೂಷಣಂ ಸಂ ಯಥಾ ಶತಾ |
ಸಂ ಸಹಸ್ರಾ ಕಾರಿಷಚ್ಚರ್ಷಣಿಭ್ಯ ಆँ ಆವಿರ್ಗೂಳ್ಹಾ ವಸೂ ಕರತ್ಸುವೇದಾ ನೋ ವಸೂ ಕರತ್ || ೧೫ ||

|| ಪದಪಾಠಃ ||

ತ್ವೇಷಂ | ಶರ್ಧಃ | ನ | ಮಾರುತಂ | ತುವಿಽಸ್ವನಿ | ಅನರ್ವಾಣಂ | ಪೂಷಣಂ | ಸಂ | ಯಥಾ | ಶತಾ |
ಸಂ | ಸಹಸ್ರಾ | ಕಾರಿಷತ್ | ಚರ್ಷಣಿಽಭ್ಯಃ | ಆ | ಆವಿಃ | ಗೂಳ್ಹಾ | ವಸು | ಕರತ್ | ಸುಽವೇದಾ | ನಃ | ವಸು | ಕರತ್ || ೧೫ ||

|| ಸಾಯಣಭಾಷ್ಯಂ ||

ನೇತಿ ಸಂಪ್ರತ್ಯರ್ಥೇ | ನ ಸಂಪ್ರತೀದಾನೀಂ ತ್ವೇಷಂ ದೀಪ್ತಂ ತುವಿಷ್ವಣಿ ಬಹುಸ್ವನಮನರ್ವಾಣಮಪ್ರತ್ಯೃತಂ ಶತ್ರುಭಿರನಭಿಗತಂ ಪೂಷಣಂ ಪೋಷಕಂ ಮಾರುತಂ ಮರುತ್ಸಂಘರೂಪಮಿಮಾದೃಶಂ ಶರ್ಧೋ ಬಲಂ ಸ್ತುಮೀತಿ ಶೇಷಃ | ಸ ಚ ಮರುದ್ಗಣೋ ಯಥಾ ಯೇನ ಪ್ರಕಾರೇಣ ಶತಾ

**ಶತಸಂಖ್ಯಾಕಾನಿ ಧನಾನಿ ಸಂ ಸಹೈವ ಚರ್ಷಣಿಭ್ಯೋ ಮನುಷ್ಯೇಭ್ಯೋಽಸ್ಮಭ್ಯಂ ಕಾರಿಷತ್ ಕುರ್ಯಾತ್ । ಆಕಾರಃ ಸಮುಚ್ಚಯೇ । ಯಥಾ ವಾ ಸಹಸ್ರಾ ಸಹಸ್ರಸಂಖ್ಯಾಕಾನಿ ಧನಾನಿ ಚ ಸಂ ಸಹೈವ ಕಾರಿಷತ್ ಕುರ್ಯಾತ್ ತಥಾ ಸ್ತೌಮೀತಿ ಪೂರ್ವತ್ರಾನ್ವಯಃ। ಅಪಿ ಚ ಸ ಮರುದ್ಗಣೋ ಗೂಳ್ಹಾ ಗೂಢಾನಿ ಸಂವೃತಾನಿ ವಸು ವಸೂನಿ ಧನಾನ್ಯಾವಿಷ್ಕರತ್ । ಅಸ್ಮಭ್ಯಮಾವಿಷ್ಕರೋತು । ತಥಾ ವಸು ವಸೂನಿ ಧನಾನಿ ಸುವೇದಾ ಸುಲಭಾನಿ ಚ ನೋಽಸ್ಮಾಕಂ ಕರತ್ । ಕರೋತು । ಯದಾ ತು ಲಿಂಗಾದಿಯಂ ಪೌಷ್ಣೀ ತದಾ ಮಾರುತಂ ಶರ್ಧ ಇವ ತ್ವೇಷಂ ಪೂಷಣಂ ಪೋಷಕಮೇತತ್ಸಂಜ್ಞಂ ದೇವಂ ಸ್ತೌಮೀತಿ ಯೋಜನೀಯಂ ॥**

॥ ಪ್ರತಿಪದಾರ್ಥ ॥

**ಯಥಾ**—ಯಾವ ಪ್ರಕಾರವಾಗಿ । **ಶತಾ**—ಶತಸಂಖ್ಯಾಕವಾದ ಧನಗಳು । **ಸಂ**—ಒಂದೇ ಕಾಲದಲ್ಲಿ । **ಚರ್ಷಣಿಭ್ಯಃ**—ಯಜಮಾನರಾದ ನಮಗಾಗಿ । **ಕಾರಿಷತ್**—ಉತ್ಪನ್ನವಾಗುವುವೋ । **ಸಹಸ್ರಾ**—ಸಹಸ್ರ ಸಂಖ್ಯಾಕವಾದ ಧನಗಳೂ । **ಸಂ**—ಒಂದೇ ಕಾಲದಲ್ಲಿ ಉತ್ಪನ್ನವಾಗುವುವೋ (ಆ ಉದ್ದಿಶ್ಯಕ್ಕಾಗಿ) । **ನ**—ಈಗ । **ತ್ವೇಷಂ**—ಪ್ರಭಾಯುತವಾದುದೂ । **ತುವಿಷ್ವಣಿ**—ಅಧಿಕವಾಗಿ ಶಬ್ದಮಾಡತಕ್ಕದೂ । **ಅನರ್ವಾಣಂ**—ಅಪ್ರತಿಹತವಾದುದೂ । **ಪೂಷಣಂ**—ಪೋಷಕವಾದುದೂ ಆದ । **ಮಾರುತಂ**—ಮರುತ್ಸಂಘದ । **ಶರ್ಧಃ**—ಬಲವನ್ನು (ಸ್ತುತಿಸುತ್ತೇನೆ) । (**ಸಃ**—ಅದೇ ಮರುತ್ಸಂಘವು) । **ಗೂಳ್ಹಾ**—ಗುಪ್ತವಾಗಿದ್ದ । **ವಸು**—ಧನಗಳನ್ನು । **ಆವಿಃ ಕರತ್**—ಪ್ರಕಾಶಪಡಿಸಿದೆ । **ನಃ**—ನಮಗೆ । **ವಸು**—ಧನಗಳನ್ನು । **ಸುವೇದಾ**—ಸುಲಭವಾಗಿ ತಿಳಿಯುವಂತೆ । **ಕರತ್**—ಸಹಾಯಮಾಡು.

॥ ಭಾವಾರ್ಥ ॥

ಯಾವ ಪ್ರಕಾರವಾಗಿ ಶತಸಂಖ್ಯಾಕವೂ, ಸಹಸ್ರಸಂಖ್ಯಾಕವೂ ಆದ ಧನಗಳು ಯಜಮಾನರಾದ ನಮಗಾಗಿ ಉತ್ಪನ್ನವಾಗುವುವೋ ಆ ಉದ್ದಿಶ್ಯಕ್ಕಾಗಿಯೇ, ಈಗ ಪ್ರಭಾಯುತವಾದುದೂ, ಅಧಿಕವಾಗಿ ಶಬ್ದಮಾಡತಕ್ಕದ್ದೂ, ಅಪ್ರತಿಹತವಾದುದೂ, ಪೋಷಕವಾದುದೂ ಆದ ಮರುತ್ಸಂಘದ ಬಲವನ್ನು ಸ್ತುತಿಸುತ್ತೇನೆ.

## English Translation

I now (glorify) the brilliant vigour of the company of the Maruts, loud-sounding, irresistible, cherishing, whereby hundreds and thousands (of treasures) are bestowed collectively upon men ; may that (company) make hidden wealth manifest ; may it render the wealth easily accessible to us.

॥ ಸಂಹಿತಾಪಾಠಃ ॥

ಆ ಮಾ ಪೂಷನ್ನುಪ ದ್ರವ ಶಂಸಿಷಂ ನು ತೇ ಅಪಿಕರ್ಣ ಆಘೃಣೇ ।

ಅಘಾ ಅರ್ಯೋ ಅರಾತಯಃ ॥ ೧೬ ॥

॥ ಪದಪಾಠಃ ॥

ಆ । ಮಾ । ಪೂಷನ್ । ಉಪ । ದ್ರವ । ಶಂಸಿಷಂ । ನು । ತೇ । ಅಪಿऽಕರ್ಣೇ । ಆಘೃಣೇ ।

ಅಘಾಃ । ಅರ್ಯಃ । ಅರಾತಯಃ ॥ ೧೬ ॥

॥ ಸಾಯಣಭಾಷ್ಯಂ ॥

**ಹೇ ಪೂಷನ್ ಮಾ ಮಾಮಾ ದ್ರವ ರಕ್ಷಣಾರ್ಥಮಭಿಗಚ್ಛ । ಹೇ ಆಘೃಣೇ ಆಗತದೀಪ್ತೇ ಅಘಾ ಆಹಂತ್ರೀರರ್ಯೋಽರೀರಭಿಗಂತ್ರೀರರಾತಯಃ ಶತ್ರುಭೂತಾಃ ಪ್ರಜಾ ಉಪ ದ್ರವ । ಬಾಧಸ್ವ ॥ ಉಪಪೂರ್ವೋ ದ್ರವತಿರ್ಬಾಧಾಯಾಂ ವರ್ತತೇ । ಯಥಾ ಪ್ರಜಾಂ ಪಶೂನ್ಯಜಮಾನಸ್ಯೋಪ ದೋದ್ರಾವ । ತೈ. ಸಂ ೧-೫-೧-೪ । ಇತಿ ॥ ಅಹಂ ಚ ತೇ ತವಾಪಿಕರ್ಣೇ ಕರ್ಣಾವಪಿಗತೇ ಸಮೀಪದೇಶೇ ಸ್ಥಿತಃ ಸನ್ ನು ಕ್ಷಿಪ್ರಂ ಶಂಸಿಷಂ । ಪ್ರಶಂಸಾಮಿ ॥**

॥ ಪ್ರತಿಪದಾರ್ಥ ॥

**ಪೂಷನ್**—ಪೋಷಕನಾದ ಎಲೈ ಪೂಷದೇವನೇ । **ಮಾ**—ನನಗಭಿಮುಖನಾಗಿ । **ಆ ದ್ರವ**—ರಕ್ಷಣಾರ್ಥವಾಗಿ ದಯಮಾಡು । **ಆಘೃಣೇ**—ಅತ್ಯಧಿಕವಾದ ದೀಪ್ತಿಯುಳ್ಳ ಎಲೈದೇವನೇ । **ಅಘಾಃ**—ಪಾಪಿಷ್ಠರೂ । **ಅರ್ಯಃ**—ಎದುರು ಬಿದ್ದು ಹಿಂಸಿಸುವವರೂ ಆದ । **ಅರಾತಯಃ**—ಶತ್ರುಗಳನ್ನು । **ಉಪ (ದ್ರವ)**—ಹಿಂಸಿಸಿ ಓಡಿಸು । **ತೇ**—ನಿನ್ನ । **ಅಪಿಕರ್ಣೇ**—ಕಿವಿಯ ಪಕ್ಕದಲ್ಲೇ ನಿಂತು । **ನು**—ಕ್ಷಿಪ್ರವಾಗಿ । **ಶಂಸಿಷಂ**—ಪ್ರಶಂಸಿಸುತ್ತೇನೆ.

॥ ಭಾವಾರ್ಥ ॥

ಜಗತ್ಪೋಷಕನಾದ ಎಲೈ ಪೂಷದೇವನೇ, ರಕ್ಷಣಾರ್ಥವಾಗಿ ನನಗೆದುರಾಗಿ ದಯಮಾಡು. ಅತ್ಯಧಿಕವಾದ ದೀಪ್ತಿಯುಳ್ಳ ಎಲೈದೇವನೇ, ಪಾಪಿಷ್ಠರೂ, ಎದುರು ಬಿದ್ದು ಹಿಂಸಿಸುವವರೂ ಆದ ಶತ್ರುಗಳನ್ನು ಹಿಂಸಿಸಿ ಓಡಿಸು. ನಿನ್ನ ಕಿವಿಯ ಪಕ್ಕದಲ್ಲೇ ನಿಂತು ಕ್ಷಿಪ್ರವಾಗಿ ನಿನ್ನನ್ನು ಪ್ರಶಂಸಿಸುತ್ತೇನೆ.

English Translation.

Hasten, Pushan, to me: (repel), bright deity, (all) deadly assailing foes: close at your side I repeat your praise.

॥ ಸಂಹಿತಾಪಾಠಃ ॥

ಮಾ ಕಾಕಂಬೀರಮುದ್ವೃಹೋ ವನಸ್ಪತಿಮಶಸ್ತೀರ್ವಿ ಹಿ ನೀನಶಃ ।

ಮೋತ ಸೂರೋ ಅಹ ಏವಾ ಚನ ಗ್ರೀವಾ ಆದಧತೇ ವೇಃ ॥ ೧೭ ॥

॥ ಪದಪಾಠಃ ॥

**ಮಾ । ಕಾಕಂಬೀರಂ । ಉತ್ । ವೃಹಃ । ವನಸ್ಪತಿಂ । ಅಶಸ್ತೀಃ । ವಿ । ಹಿ । ನೀನಶಃ ।**

**ಮಾ । ಉತ । ಸೂರಃ । ಅಹರಿತಿ । ಏವ । ಚನ । ಗ್ರೀವಾಃ । ಆऽದಧತೇ । ವೇರಿತಿ ವೇಃ ॥ ೧೭ ॥**

॥ ಸಾಯಣಭಾಷ್ಯಂ ॥

**ಋಷಿಃ ಪುತ್ರಪೌತ್ರಸಹಿತಮಾತ್ಮಾನಂ ಬಹುಪಕ್ಷ್ಯಾಶ್ರಯವನಸ್ಪತಿತ್ವೇನ ರೂಪಯನ್ ತಸ್ಯಾನುದ್ಧಾರಮಾಶಾಸ್ತೇ । ಹೇ ಪೂಷನ್ ಮಾ ಕಾಕಂಬೀರಂ ಕಾಕಾನಾಂ ಭರ್ತಾರಂ ವನಸ್ಪತಿಂ ವೃಕ್ಷಂ ಮೋದ್ವೃಹಃ । ಉದ್ಧರ । ಮಾ ಬಾಧಸ್ವ । ಪುತ್ರಪೌತ್ರಾದಿಭಿಃ ಸಖೀಭೂತೈರುಪೇತಮನ್ಯೈಶ್ಚ ಬಹುಭಿರಾಶ್ರಿತಂ ಮಾಂ ಮಾ ಹಿಂಸೀರಿತ್ಯರ್ಥಃ । ಹಿಶಬ್ದಶ್ಚಾರ್ಥೇ । ಅಶಸ್ತೀರಶಂಸನೀಯಾ ಅಶಂಸನೀಯಸ್ಯ ದುಃಖಸ್ಯ ಕೀರ್ತಯಿತ್ರೀರ್ವಾ ಶತ್ರುಭೂತಾಃ ಪ್ರಜಾ ವಿ ನೀನಶೋ ಹಿ । ವಿನಾಶಯ ಚ । ಉತಾಪಿ ಚ ಸೂರಃ ಪ್ರೇರಕಃ ಶತ್ರುರೇನ್ಯೈವಂ ಮಾಹಃ । ಅಸ್ಮಾನ್ಮಾ ಹಾರ್ಷೀತ್ ॥ ಏವಮಿತ್ಯಭಿಸಂಬಂಧಾದಾಖ್ಯಾತಸ್ಯೋದಾತ್ತವತ್ತ್ವಾಚ್ಛ್ರುತೋಽಪಿ ಯಥೇತ್ಯೇತದ್ವಾಕ್ಯೇಽಧ್ಯಾಹ್ರಿಯತೇ ॥ ಗ್ರೀವಾಃ । ಗಿರಂತ್ಯಂತರವಸ್ಥಾಪಯಂತಿ ಬಧ್ನಂತೀತಿ ಗ್ರೀವಾ ದಾಮಾನಿ । ಯಥಾ ವ್ಯಾಧಾ ವೇಃ ಪಕ್ಷಿಣೋ ಹರಣಾರ್ಥಂ ಗ್ರೀವಾ ದಾಮಾನಿ ಜಾಲರೂಪಾಣ್ಯಾದಧತೇ ಭೂಮ್ಯಾಂ ನಿದಧತೇ ತೈಶ್ಚ ನಿಹಿತೈಃ ಪಕ್ಷಿಣೋ ಹರಂತ್ಯೇವಮಸ್ಮಾನ್ ಬಂಧನೋಪಾಯೈಃ ಶತ್ರುರ್ವಾ ಹಾರ್ಷೀದಿತ್ಯರ್ಥಃ ॥**

॥ ಪ್ರತಿಪದಾರ್ಥ ॥

(ಎಲೈ ಪೂಷದೇವನೇ) **ಕಾಕಂಬೀರಂ**—ಕಾಗೆಗಳಿಗೆ ಪೋಷಕವಾಗಿರುವ । **ವನಸ್ಪತಿಂ**—ಈ ವೃಕ್ಷವನ್ನು । **ಮಾ ಉದ್ವೃಹಃ**—ಉರುಳಿಸಬೇಡ । **ಅಶಸ್ತಿಃ**—ಅಪ್ರಶಸ್ಯರಾದ ಶತ್ರುಪ್ರಜೆಗಳನ್ನು । **ವಿ ನೀನಶಃ ಹಿ**—ಪೂರ್ಣವಾಗಿ ನಾಶಮಾಡು । **ಉತ**—ಮತ್ತು । **ಗ್ರೀವಾಃ**—ಹಗ್ಗಗಳಿಂದ ಮಾಡಿದ ಬಲೆಗಳು । **ವೇಃ**—ಪಕ್ಷಿಗಳ ಗ್ರಹಣಕ್ಕಾಗಿ ಹರಡಲ್ಪಟ್ಟು । **ಆದಧತೇ**—ಯಾವ ರೀತಿ ಪಕ್ಷಿಗಳನ್ನು ಹಿಡಿಯುವುವೋ । **ಏವ ಚನ**—ಅದೇ ರೀತಿಯಲ್ಲಿ । **ಸೂರಃ**—ಉದ್ಯುಕ್ತನಾದ ಶತ್ರುವು । **ಮಾ**—ನನ್ನನ್ನು । **ಅಹಃ**—ಅಪಹರಿಸದಿರಲಿ.

॥ ಭಾವಾರ್ಥ ॥

ಎಲೈ ಪೂಷದೇವನೇ, ಕಾಕಾದಿ ಪಕ್ಷಿಗಳಿಗೆಲ್ಲಾ ಆಶ್ರಯವನ್ನು ನೀಡುವ ವೃಕ್ಷದಂತೆ ಪುತ್ರಪೌತ್ರಾದಿಗಳಿಗೆಲ್ಲಾ ಆಶ್ರಯದಾತನೂ ಪೋಷಕನೂ ಆಗಿರುವ ನನ್ನನ್ನು ವೃಕ್ಷವನ್ನುರುಳಿಸುವಂತೆ ಕೆಳಕ್ಕುರುಳಿಸಬೇಡ. ಅಪ್ರಶಸ್ಯರಾದ ಶತ್ರುಪ್ರಜೆಗಳನ್ನು ಪೂರ್ಣವಾಗಿ ನಾಶಮಾಡು. ಮತ್ತು ಹಗ್ಗಗಳಿಂದ ಮಾಡಿದ ಬಲೆಗಳು ಪಕ್ಷಿಗಳ ಗ್ರಹಣಕ್ಕಾಗಿ ಹರಡಲ್ಪಟ್ಟು ಯಾವ ರೀತಿ ಪಕ್ಷಿಗಳನ್ನು ಹಿಡಿಯುವುವೋ ಅದೇ ರೀತಿ ನನ್ನನ್ನು ಹಿಡಿಯಲು ಉದ್ಯುಕ್ತನಾದ ಶತ್ರುವು ನನ್ನನ್ನು ಅಪಹರಿಸದಿರಲಿ.

## English Translation.

Uproot not, Pushan, the forest lord, with its progeny of crows : utterly destroy those who are my revilers : let not the adversary ensnare me, as (fowlers) set snares for birds.

॥ ಸಂಹಿತಾಪಾಠಃ ॥

**ದೃತೇರಿವ ತೇಽವೃಕಮಸ್ತು ಸಖ್ಯಂ ।**

**ಅಚ್ಛಿದ್ರಸ್ಯ ದಧನ್ವತಃ ಸುಪೂರ್ಣಸ್ಯ ದಧನ್ವತಃ ॥ ೧೮ ॥**

॥ ಪದಪಾಠಃ ॥

**ದೃತೇಃಽಇವ । ತೇ । ಅವೃಕಂ । ಅಸ್ತು । ಸಖ್ಯಂ ।**

**ಅಚ್ಛಿದ್ರಸ್ಯ । ದಧನ್ಽವತಃ । ಸುಽಪೂರ್ಣಸ್ಯ । ದಧನ್ಽವತಃ ॥ ೧೮ ॥**

॥ ಸಾಯಣಭಾಷ್ಯಂ ॥

**ಹೇ ಪೂಷನ್ ತೇ ತವ ಸಖ್ಯಂ ಸಖಿತ್ವಮವೃಕಂ ಬಾಧಕರಹಿತಂ ಸರ್ವದೈಕರೂಪ್ಯೇಣ ವರ್ತಮಾನಮಸ್ಮಾಕಮಸ್ತು । ಸರ್ವದಾ ಭವತು । ದೃತೇರಿವ । ಯಥಾ ದೃತೇಸ್ತ್ವದೀಯಂ ಸಖ್ಯಮವಿಚ್ಛಿನ್ನಂ ತದ್ವತ್ । ಕೀದೃಶೋ ದೃತಿಃ । ಅಚ್ಛಿದ್ರಸ್ಯ ಛಿದ್ರರಹಿತಸ್ಯ ಸಂಶ್ಲಿಷ್ಟಸ್ಯ ದಧನ್ವತೋ ದಧಿವತಃ ಸುಪೂರ್ಣಸ್ಯ ದಧ್ನಾ ಸುಷ್ಠು ಪೂರಿತಸ್ಯ । ಪುನರ್ದಧನ್ವತ ಇತಿ ದಧ್ನೋಽಧಿಕತ್ವದ್ಯೋತನಾರ್ಥಃ । ಈದೃಶೋ ದೃತಿಃ ಸರ್ವದಾ ಪೂಷ್ಣೋ ರಥೇ ವರ್ತತೇ । ಸ ಇವ ವಯಮಪಿ ತವ ಸಖಾಯೋ ಭವೇಮೇತ್ಯೃಷಿರಾಶಾಸ್ತೇ ॥**

॥ ಪ್ರತಿಪದಾರ್ಥ ॥

(ಎಲೈ ಪೂಷದೇವನೇ) **ಅಚ್ಛಿದ್ರಸ್ಯ**—ಛೇದರಹಿತವಾದುದೂ । **ದಧನ್ವತಃ**—ದಧಿಯನ್ನು ಹೊಂದಿರುವುದೂ । **ಸುಪೂರ್ಣಸ್ಯ**—ದಧಿಯಿಂದ ಪೂರ್ಣವಾದುದೂ ಆದ । **ದೃತೇಃ ಇವ**—ನಿನ್ನ ಚೀಲವು ಭದ್ರವಾಗಿರುವಂತೆ । **ತೇ**—ನಿನ್ನೊಡನೆ । **ಸಖ್ಯಂ**—ನನ್ನ ಸಖಿತ್ವವು । **ಅವೃಕಂ**—ನಿರ್ವಿಘ್ನವಾಗಿಯೂ ಶಾಶ್ವತವಾಗಿಯೂ । **ಅಸ್ತು**—ಇರಲಿ.

॥ ಭಾವಾರ್ಥ ॥

ಎಲೈ ಪೂಷದೇವನೇ, ಒಡಕಿಲ್ಲದ್ದೂ ಅತ್ಯಧಿಕವಾಗಿ ದಧಿಯನ್ನು ಹೊಂದಿರುವುದೂ, ದಧಿಪೂರ್ಣವಾದುದೂ ಆದ ನಿನ್ನ ಚೀಲವು ಭದ್ರವಾಗಿರುವಂತೆ, ನನ್ನ ಸಖಿತ್ವವು ನಿನ್ನೊಡನೆ ನಿರ್ವಿಘ್ನವಾಗಿಯೂ ಶಾಶ್ವತವಾಗಿಯೂ ಇರಲಿ.

## English Translation.

May your frindship be unbroken, like (the surface) of a skin without a flaw, containing curds.

॥ ಸಂಹಿತಾಪಾಠಃ ॥

ಪರೋ ಹಿ ಮರ್ತ್ಯೈರಸಿ ಸಮೋ ದೇವೈರುತ ಶ್ರಿಯಾ ।
ಅಭಿ ಖ್ಯಃ ಪೂಷನ್ಪೃತನಾಸು ನಸ್ತ್ವಮವಾ ನೂನಂ ಯಥಾ ಪುರಾ ॥ ೧೯ ॥

॥ ಪದಪಾಠಃ ॥

ಪರಃ । ಹಿ । ಮರ್ತ್ಯೈಃ । ಅಸಿ । ಸಮಃ । ದೇವೈಃ । ಉತ । ಶ್ರಿಯಾ ।
ಅಭಿ । ಖ್ಯಃ । ಪೂಷನ್ । ಪೃತನಾಸು । ನಃ । ತ್ವಂ । ಅವ । ನೂನಂ । ಯಥಾ । ಪುರಾ ॥ ೧೯ ॥

॥ ಸಾಯಣಭಾಷ್ಯಂ ॥

ಹೇ ಪೂಷನ್ ಮರ್ತ್ಯೈರ್ಮರ್ತ್ಯೇಭ್ಯೋ ಮನುಷ್ಯೇಭ್ಯಃ ಪರಃ ಪರಸ್ತಾತ್ಸ್ಥಿತೋಽಸಿ । ಶ್ರಿಯಾ ಸಂಪದಾ ದೇವೈರುತ ಸರ್ವೈರ್ದೇವೈಶ್ಚ ಸಮಃ ಸಮಾನೋಽಸಿ । ಅತಸ್ತ್ವಂ ಪೃತನಾಸು ಸಂಗ್ರಾಮೇಷು ನೋಽಸ್ಮಾನಭಿ ಖ್ಯಃ । ಅಭಿಪಶ್ಯಾನುಗ್ರಹದೃಷ್ಟ್ಯಾ ವಿಲೋಕಯ । ಯಥಾ ಪುರಾ ಯೇನ ಪ್ರಕಾರೇಣ ಪೂರ್ವಕಾಲೀನಾನ್ಪುರುಷಾನ್ರರಕ್ಷಿಥ ಏವಂ ನೂನಮದ್ಯೇದಾನೀಮವ । ಅಸ್ಮಾನ್ರಕ್ಷ ॥

॥ ಪ್ರತಿಪದಾರ್ಥ ॥

**ಪೂಷನ್**—ಎಲೈ ಪೂಷದೇವನೇ ನೀನು । **ಮರ್ತ್ಯೈಃ**—ಮಾನವರಿಗಿಂತಲೂ । **ಪರಃ**—ಅತ್ಯಧಿಕನಾಗಿ । **ಅಸಿ ಹಿ**—ಆಗಿದ್ದೀಯೆ । **ಶ್ರಿಯಾ**—ನಿನ್ನ ಸಂಪತ್ತಿನಿಂದ । **ದೇವೈಃ ಉತ**—ಸಕಲ ದೇವತೆಗಳೊಂದಿಗೂ । **ಸಮಃ**—ಸಮನಾಗಿದ್ದೀಯೆ (ಆದುದರಿಂದ) । **ತ್ವಂ**—ನೀನು । **ಪೃತನಾಸು**—ಸಂಗ್ರಾಮಗಳಲ್ಲಿ । **ನಃ**—ನಮ್ಮನ್ನು । **ಅಭಿ ಖ್ಯಃ**—ಅನುಗ್ರಹ ದೃಷ್ಟಿಯಿಂದ ನೋಡು । **ಯಥಾ**—ಯಾವ ರೀತಿ । **ಪುರಾ**—ಹಿಂದೆಲ್ಲಾ ನಿನ್ನ ಪೂಜಕರನ್ನು ರಕ್ಷಿಸಿದೆಯೋ ಅದರಂತೆ । **ನೂನಂ**—ಈಗ । **ಅವ**—ನಮ್ಮನ್ನು ರಕ್ಷಿಸು.

॥ ಭಾವಾರ್ಥ ॥

ಎಲೈ ಪೂಷದೇವನೇ, ನೀನು ಮಾನವನಿಗಿಂತಲೂ ಅತ್ಯಧಿಕನಾಗಿ ಆಗಿದ್ದೀಯೆ. ನಿನ್ನ ಸಂಪತ್ತಿನಿಂದ ಸಕಲ ದೇವತೆಗಳೊಂದಿಗೂ ಸಮಾನನಾಗಿದ್ದೀಯೆ. ಆದುದರಿಂದ ನೀನು ಸಂಗ್ರಾಮಗಳಲ್ಲಿ ನಮ್ಮನ್ನು ಅನುಗ್ರಹ ದೃಷ್ಟಿಯಿಂದ ನೋಡು. ಹಿಂದೆಲ್ಲಾ ಯಾವ ರೀತಿ ನಿನ್ನ ಪೂಜಕರನ್ನು ರಕ್ಷಿಸಿದೆಯೋ, ಅದರಂತೆ ಈಗಲೂ ನಮ್ಮನ್ನು ರಕ್ಷಿಸು.

English Translation.

Supreme are you above mortals: equal in glory are you to the gods: therefore, Pushan, regard us (favourably) in battles: defend us at present as (you have defended) those of old.

॥ ಸಂಹಿತಾಪಾಠಃ ॥

ವಾಮೀ ವಾಮಸ್ಯ ಧೂತಯಃ ಪ್ರಣೀತಿರಸ್ತು ಸೂನೃತಾ ।
ದೇವಸ್ಯ ವಾ ಮರುತೋ ಮರ್ತ್ಯಸ್ಯ ವೇಜಾನಸ್ಯ ಪ್ರಯಜ್ಯವಃ ॥ ೧೦ ॥

॥ ಪದಪಾಠಃ ॥

ವಾಮೀ । ವಾಮಸ್ಯ । ಧೂತಯಃ । ಪ್ರಽನೀತಿಃ । ಅಸ್ತು । ಸೂನೃತಾ ।
ದೇವಸ್ಯ । ವಾ । ಮರುತಃ । ಮರ್ತ್ಯಸ್ಯ । ವಾ । ಈಜಾನಸ್ಯ । ಪ್ರಽಯಜ್ಯವಃ ॥ ೧೦ ॥

॥ ಸಾಯಣಭಾಷ್ಯಂ ॥

ಹೇ ಧೂತಯಃ ಕಂಪಯಿತಾರಃ ಪ್ರಯಜ್ಯವಃ ಪ್ರಕರ್ಷೇಣ ಯಷ್ಟವ್ಯಾ ಮರುತಃ ಸಾ ಸೂನೃತಾ ಪ್ರಿಯಸತ್ಯಾತ್ಮಿಕಾ ಮಾಧ್ಯಮಿಕಾ ಯುಷ್ಮದೀಯಾ ವಾಕ್ ಪ್ರಣೀತಿರಸ್ತು । ಅಸ್ಮದರ್ಥಂ ಧನಾನಾಂ ಪ್ರಣೇತ್ರೀ ಭವತು । ದೇವಸ್ಯ ವಾ ಮರ್ತ್ಯಸ್ಯ ಮನುಷ್ಯಸ್ಯ ವೇಜಾನಸ್ಯೇಷ್ಟವತ ಉಭಯವಿಧಸ್ಯ ಪುರುಷಸ್ಯ ವಾಮೀ ಪ್ರಶಸ್ತಾ ಯಾ ವಾಕ್ ವಾಮಸ್ಯ ವನನೀಯಸ್ಯ ಧನಸ್ಯ ಪ್ರಣೀತಿಃ ಪ್ರಣೇತ್ರೀ ಸಾ ಸೂನೃತೇತ್ಯನ್ವಯಃ । ಪ್ರಣೀತಿರಸ್ತ್ವಸ್ಮದರ್ಥಂ ॥

॥ ಪ್ರತಿಪದಾರ್ಥ ॥

**ಧೂತಯಃ**—ವೃಕ್ಷಾದಿಗಳನ್ನು ಕಂಪಿಸುವಂತೆ ಮಾಡುವವರೂ । **ಪ್ರಯಜ್ಯವಃ**—ಅತಿಶಯವಾದ ಪೂಜಾಯೋಗ್ಯರೂ ಆದ । **ಮರುತಃ**—ಎಲೈ ಮರುತ್ತುಗಳೇ । **ಸೂನೃತಾ**—ಪ್ರಿಯವೂ ಸತ್ಯಾತ್ಮಕವೂ ಆದ ಮಾಧ್ಯಮಿಕಾ ವಾಕ್ಕು । **ಪ್ರಣೀತಿಃ ಅಸ್ತು**—ನಮ್ಮ ವಿಷಯದಲ್ಲಿ ಸಂಪತ್ಪ್ರದರ್ಶಕವಾಗಿ ಆಗಲಿ । **ಈಜಾನಸ್ಯ**—ಪೂಜಾಕಾರಕನಾದ । **ದೇವಸ್ಯ ವಾ**— ದೇವತೆಗಾಗಲಿ । **ಮರ್ತ್ಯಸ್ಯ ವಾ**—ಮಾನವನಿಗಾಗಲಿ । **ವಾಮೀ**—ಪೂಜ್ಯವಾದ ಈ ವಾಕ್ಕು । **ವಾಮಸ್ಯ**—ಅಪೇಕ್ಷಿತವಾದ ಧನಕ್ಕೆ ಪ್ರದರ್ಶಕವಾಗಲಿ.

॥ ಭಾವಾರ್ಥ ॥

ವೃಕ್ಷಾದಿಗಳನ್ನು ಕಂಪಿಸುವಂತೆ ಮಾಡುವವರೂ, ಅತಿಶಯವಾದ ಪೂಜಾಯೋಗ್ಯರೂ ಆದ ಎಲೈ ಮರುತ್ತುಗಳೇ. ಪ್ರಿಯವೂ ಸತ್ಯಾತ್ಮಕವೂ ಆದ ನಿಮ್ಮ ಮಾಧ್ಯಮಿಕಾ ವಾಕ್ಕು ನಮಗೆ ಸಂಪತ್ಪ್ರದರ್ಶಕವಾಗಿರಲಿ. ಪೂಜಾಕಾರಕನಾದ ದೇವತೆಗಾಗಲಿ, ಮಾನವನಿಗಾಗಲಿ ಪೂಜ್ಯವಾದ ಈ ವಾಕ್ಕು ಅಪೇಕ್ಷಿತವಾದ ಧನಕ್ಕೆ ಪ್ರದರ್ಶಕವಾಗಲಿ.

## English Translation.

Maruts, agitators, especially to be adored, may your kind and true speech be our conductress; that pleasaut (speech which is the guide) to desirable (wealth) for both gods and sacrificing mortals.

॥ ಸಂಹಿತಾಪಾಠಃ ॥

ಸದ್ಯಶ್ಚಿದ್ಯಸ್ಯ ಚರ್ಕೃತಿಃ ಪರಿ ದ್ಯಾಂ ದೇವೋ ನೈತಿ ಸೂರ್ಯಃ ।
ತ್ವೇಷಂ ಶವೋ ದಧಿರೇ ನಾಮ ಯಜ್ಞಿಯಂ ಮರುತೋ ವೃತ್ರಹಂ ಶವೋ
ಜ್ಯೇಷ್ಠಂ ವೃತ್ರಹಂ ಶವಃ ॥ ೨೧ ॥

॥ ಪದಪಾಠಃ ॥

ಸದ್ಯಃ । ಚಿತ್ । ಯಸ್ಯ । ಚರ್ಕೃತಿಃ । ಪರಿ । ದ್ಯಾಂ । ದೇವಃ । ನ । ಏತಿ । ಸೂರ್ಯಃ ॥
ತ್ವೇಷಂ । ಶವಃ । ದಧಿರೇ । ನಾಮ । ಯಜ್ಞಿಯಂ । ಮರುತಃ । ವೃತ್ರಽಹಂ । ಶವಃ । ಜ್ಯೇಷ್ಠಂ ।
ವೃತ್ರಽಹಂ । ಶವಃ ॥ ೨೧ ॥

॥ ಸಾಯಣಭಾಷ್ಯಂ ॥

ಯಸ್ಯ ಚ ಮರುದ್ಗಣಸ್ಯ ಚರ್ಕೃತಿಃ ಕರ್ಮ ಸದ್ಯಶ್ಚಿತ್ಸದ್ಯ ಏವ ದ್ಯಾಂ ಪರ್ಯೇತಿ ಪರಿಗಚ್ಛತಿ ದಿವ್ಯಂತರಿಕ್ಷೇ ಪರಿತೋ ವರ್ತತೇ ದೇವೋ ನ ದೇವೋ ದ್ಯೋತಮಾನಃ ಸೂರ್ಯ ಇವ ತಾದೃಶಗಣಾತ್ಮಕಾ ಮರುತಸ್ತ್ವೇಷಂ ದೀಪ್ತಂ ನಾಮ ಶತ್ರೂಣಾಂ ನಮಯಿತೃ ಯಜ್ಞಿಯಂ ಯಜ್ಞಾರ್ಹಂ ಶವೋ ಬಲಂ ದಧಿರೇ। ಅಧಾರಯನ್ । ತಚ್ಚ ಶವೋ ಬಲಂ ವೃತ್ರಹಂ ವೃತ್ರಾದೇರಸುರಸ್ಯ ಹಂತೃ ಭವತಿ। ತಚ್ಚ ವೃತ್ರಹಂ ಶವೋ ಜ್ಯೇಷ್ಠಂ ಸರ್ವೇಭ್ಯಃ ಪ್ರಶಸ್ತತಮಂ ಭವತಿ ॥

॥ ಪ್ರತಿಪದಾರ್ಥ ॥

**ಯಸ್ಯ**—ಯಾವ ಮರುದ್ಗಣದ । **ಚರ್ಕೃತಿಃ**—ಉತ್ತಮವಾದ ಕರ್ಮವು । **ಸದ್ಯಶ್ಚಿತ್**—ಒಂದೇ ಸಮನೆ। **ದೇವಃ**—ಪ್ರಕಾಶಮಾನನಾದ। **ಸೂರ್ಯಃ ನ**—ಸೂರ್ಯನಂತೆ। **ದ್ಯಾಂ ಪರಿ**—ಅಂತರಿಕ್ಷದ ಸುತ್ತಲೂ। **ಏತಿ**—ವ್ಯಾಪಿಸುವುದೋ। **ಮರುತಃ**—ಅಂತಹ ಮರುತ್ತುಗಳು। **ತ್ವೇಷಂ**—ಕಾಂತಿಯುತವಾದುದೂ। **ನಾಮ**—ಶತ್ರುನಾಶಕವಾದುದೂ। **ಯಜ್ಞಿಯಂ**—ಪೂಜಾರ್ಹವಾದುದೂ ಆದ। **ಶವಃ**—ಬಲವನ್ನು। **ದಧಿರೇ**—ಹೊಂದಿದ್ದಾರೆ। **ಶವಃ**—ಅದೇ ಬಲವು। **ವೃತ್ರಹಂ**—ಶತ್ರುನಾಶಕವಾಗುತ್ತದೆ। **ವೃತ್ರಹಂ**—ಶತ್ರುನಾಶಕವಾದ। **ಶವಃ**—ಅದೇ ಬಲವು। **ಜ್ಯೇಷ್ಠಂ**—ಎಲ್ಲಕ್ಕಿಂತಲೂ ಅತಿ ಪ್ರಶಸ್ಯವಾಗಿರುತ್ತದೆ.

॥ ಭಾವಾರ್ಥ ॥

ಯಾವ ಮರುದ್ಗಣದ ಉತ್ತಮವಾದ ಕರ್ಮವು ಒಂದೇ ಸಮನೆ ಪ್ರಕಾಶಮಾನನಾದ ಸೂರ್ಯನಂತೆ ಅಂತರಿಕ್ಷದ ಸುತ್ತಲೂ ವ್ಯಾಪಿಸುವುದೋ ಅಂತಹ ಮರುತ್ತುಗಳು ಶಾಂತಿಯುತವಾದುದೂ ಶತ್ರುನಾಶಕವಾದುದೂ ಪೂಜಾರ್ಹವಾದುದೂ ಆದ ಬಲವನ್ನು ಹೊಂದಿದ್ದಾರೆ. ಅದೇ ಬಲವು ಶತ್ರುನಾಶಕವಾಗುತ್ತದೆ. ಶತ್ರುನಾಶಕವಾದ ಅದೇ ಬಲವು ಎಲ್ಲಕ್ಕಿಂತಲೂ ಅತಿ ಪ್ರಶಸ್ಯವಾಗಿರುತ್ತದೆ,

English Translation.

Whose functions spread quickly round the heavens, like (the light of) the divine sun, since the Maruts possess brilliant, foe-humiliating, and adorable, foe-destroying strength, most excellent foe-destroying strength.

॥ ಸಂಹಿತಾಪಾಠಃ ॥

ಸಕೃದ್ಧ ದ್ಯೌರಜಾಯತ ಸಕೃದ್ಭೂಮಿರಜಾಯತ ।
ಪೃಶ್ನ್ಯಾ ದುಗ್ಧಂ ಸಕೃತ್ಪಯಸ್ತದನ್ಯೋ ನಾನು ಜಾಯತೇ ॥ ೨೨ ॥

॥ ಪದಪಾಠಃ ॥

ಸಕೃತ್ । ಹ । ದ್ಯೌಃ । ಅಜಾಯತ । ಸಕೃತ್ । ಭೂಮಿಃ । ಅಜಾಯತ ।
ಪೃಶ್ನ್ಯಾಃ । ದುಗ್ಧಂ । ಸಕೃತ್ । ಪಯಃ । ತತ್ । ಅನ್ಯಃ । ನ । ಅನು । ಜಾಯತೇ ॥ ೨೨ ॥

॥ ಸಾಯಣಭಾಷ್ಯಂ ॥

ಸಕೃದ್ಧ ಸಕೃದೇವ ದ್ಯೌರಜಾಯತ । ಉದಪದ್ಯತ । ಸಕೃದುತ್ಪನ್ನೈವ ಸ್ಥಿತಾ ಭವತಿ । ನ ಪುನಸ್ತಸ್ಯಾಂ ನಷ್ಟಾಯಾಮನ್ಯಾ ತತ್ಸದೃಶೀ ದ್ಯೌರ್ಜಾಯತೇ । ಭೂಮಿಶ್ಚ ಸಕೃದೇವಾಜಾಯತ । ಪೃಶ್ನ್ಯಾ ಮರುತಾಂ ಮಾತುರ್ಗೋಃ ಪಯಶ್ಚ ಸಕೃದೇಕವಾರಮೇವ ದುಗ್ಧಂ ಯಸ್ಮಾತ್ಪಯಸೋ ಮರುತೋ ಜಜ್ಞಿರೇ । ಪೃಶ್ನಿಯೈ ವೈ ಪಯಸೋ ಮರುತೋ ಜಾತಾಃ । ತೈ. ಸಂ. ೨-೨-೧೧-೪ । ಇತಿ ತೈತ್ತಿರೀಯಕಂ । ಯಥಾ ದ್ಯಾವಾಪೃಥಿವ್ಯೌ ಸಕೃದೇವೋತ್ಪದ್ಯೇತೇ ಏವಂ ಪೃಶ್ನಿರಪಿ ಸಕೃದ್ದುಗ್ಧೈವ ಪಯಸಾ ಮರುತೋಽಜೀಜನತ್ । ತತ್ತತಃ ಪರಮನ್ಯಃ ಪದಾರ್ಥೋ ನಾನು ಜಾಯತೇ । ತತ್ಸದೃಶೋ ನೋತ್ಪದ್ಯತೇ ॥

॥ ಪ್ರತಿಪದಾರ್ಥ ॥

ದ್ಯೌಃ—ಅಂತರಿಕ್ಷವು । **ಸಕೃತ್ ಹ**—ಒಂದು ಸಲ ಮಾತ್ರ । **ಅಜಾಯತ**—ಉತ್ಪನ್ನವಾಯಿತು । **ಭೂಮಿಃ**—ಪೃಥ್ವಿಯೂ ಸಹ । **ಸಕೃತ್**—ಒಂದೇ ಸಲ । **ಅಜಾಯತ**—ಉತ್ಪನ್ನವಾಯಿತು । **ಪೃಶ್ನ್ಯಾಃ**—

ಪೃಶ್ನಿ ಸಂಜ್ಞಕಳಾದ ಗೋವಿನ | **ಪಯಃ**—ಕ್ಷೀರವು | **ಸಕೃತ್**—ಒಂದು ಸಲ ಮಾತ್ರ | **ದುಗ್ಧಂ**—ಕರೆಯಲ್ಪಟ್ಟಿತು | **ತತ್ ಅನ್ಯಃ**—ಇದಕ್ಕಿಂತ ಬೇರೆಯಾವುದೂ | **ನ ಅನು ಜಾಯತೇ**—ಈ ರೀತಿಯಾಗಿ ಉತ್ಪನ್ನವಾಗಲಿಲ್ಲ.

॥ ಭಾವಾರ್ಥ ॥

ಅಂತರಿಕ್ಷವು ಒಂದು ಸಲ ಮಾತ್ರ ಉತ್ಪನ್ನವಾಯಿತು. ಪೃಥ್ವಿಯೂ ಸಹ ಒಂದೇ ಸಲ ಉತ್ಪನ್ನವಾಯಿತು. ಪೃಶ್ನಿಸಂಜ್ಞಳಾದ ಗೋವಿನ ಕ್ಷೀರವೂ ಒಂದೇ ಸಲ ಕರೆಯಲ್ಪಟ್ಟಿತು. ಇದಕ್ಕಿಂತಲೂ ಬೇರೆ ಯಾವುದೂ ಸಹ ಈ ರೀತಿಯಾಗಿ ಉತ್ಪನ್ನವಾಗಲಿಲ್ಲ.

### English Translation.

Once, indeed, was the heaven generated; once was the earth born; once was the milk of Prisni drawn: other than that was not similarly generated.

## ನಲವತ್ತೊಂಭತ್ತನೆಯ ಸೂಕ್ತವು

॥ ಸಾಯಣಭಾಷ್ಯಂ ॥

**ಸ್ತುಷೇ ಜನಮಿತಿ ಪಂಚದಶರ್ಚಂ ಷಷ್ಠಂ ಸೂಕ್ತಂ ಭಾರದ್ವಾಜಸ್ಯ ಋಜಿಶ್ವನ ಆರ್ಷಂ ವೈಶ್ವದೇವಂ । ಅಂತ್ಯಾ ಷಟ್ಪಂಚಾಶದಕ್ಷರಾ ಶಕ್ವರೀ ಶಿಷ್ಟಾಸ್ತ್ರಿಷ್ಟುಭಃ । ತಥಾ ಚಾನುಕ್ರಾಂತಂ । ಸ್ತುಷೇ ಪಂಚೋನ ಋಜಿಶ್ವಾ ಹ ವೈಶ್ವದೇವಂ ಹ ಶಕ್ವರ್ಯಂತಮಿತಿ॥ ವ್ಯೂಳ್ಹೇ ದಶರಾತ್ರೇ ಪಂಚಮೇಽಹನೀದಂ ವೈಶ್ವದೇವನಿವಿದ್ಧಾನಂ । ಸೂತ್ರಿತಂ ಚ । ಋಭುರ್ವಿಭ್ವಾ ಸ್ತುಷೇ ಜನಮಿತಿ ವೈಶ್ವದೇವಂ । ಆ. ೮-೮ । ಇತಿ । ಆದ್ಯಾ ಮಹಾನಾಮ್ನಿವ್ರತೇ ಜಪ್ಯಾ ॥**

ಅನುವಾದವು—**ಸ್ತುಷೇ ಜನಂ** ಎಂಬ ಈ ಸೂಕ್ತವು ನಾಲ್ಕನೆಯ ಅನುವಾಕದಲ್ಲಿ ಆರನೆಯ ಸೂಕ್ತವು. ಇದರಲ್ಲಿ ಹದಿನೈದು ಋಕ್ಕುಗಳಿರುವವು. ಈ ಸೂಕ್ತಕ್ಕೆ ಭರದ್ವಾಜವಂಶೋತ್ಪನ್ನನಾದ ಋಜಿಶ್ವಾ ಎಂಬವನು ಋಷಿಯು. ವಿಶ್ವೇದೇವತೆಗಳು ದೇವತೆಯು. ಈ ಸೂಕ್ತದ ಕೊನೆಯ ಋಕ್ಕು ಐವತ್ತಾರು ಅಕ್ಷರಗಳುಳ್ಳ ಶಕ್ವರೀ ಎಂಬ ಛಂದಸ್ಸಿನದು. ಉಳಿದ ಋಕ್ಕುಗಳೆಲ್ಲಾ ತ್ರಿಷ್ಟುಪ್‌ಛಂದಸ್ಕವು. ಅನುಕ್ರಮಣಿಕೆಯಲ್ಲಿ—**ಸ್ತುಷೇ ಪಂಚೋನ ಋಜಿಶ್ವಾ ಹ ವೈಶ್ವದೇವಂ ಹ ಶಕ್ವರ್ಯಂತಂ** ಎಂದು ಹೇಳಿರುವುದು. ವ್ಯೂಳ್ಹವೆಂಬ ದಶರಾತ್ರ ಯಾಗದ ಐದನೆಯ ದಿವಸ ಈ ಸೂಕ್ತವನ್ನು ವೈಶ್ವದೇವ ಶಸ್ತ್ರಮಂತ್ರಗಳ ಮಧ್ಯದಲ್ಲಿ ನಿವಿದ್ಧಾನಸೂಕ್ತವನ್ನಾಗಿ ಪಠಿಸಬೇಕೆಂದು ಆಶ್ವಲಾಯನ ಶ್ರೌತಸೂತ್ರದ—**ಋಭುರ್ವಿಭ್ವಾ ಸ್ತುಷೇ ಜನಮಿತಿ ವೈಶ್ವದೇವಂ** ಎಂಬ ಸೂತ್ರದಿಂದ (ಆ. ೮-೮) ವಿವೃತವಾಗಿರುವುದು. ಮಹಾನಾಮ್ನಿವ್ರತದಲ್ಲಿಯೂ ಈ ಸೂಕ್ತವನ್ನು ಪಠಿಸಬೇಕು.

## ಸೂಕ್ತ—೪೯

ಮಂಡಲ—೬ ॥ ಅನುವಾಕ—೪ ॥ ಸೂಕ್ತ—೪೯ ॥
ಅಷ್ಟಕ—೪ ॥ ಅಧ್ಯಾಯ—೮ ॥ ವರ್ಗ– ೫, ೬, ೭ ॥
॥ ಸೂಕ್ತದಲ್ಲಿರುವ ಋಕ್ಸಂಖ್ಯೆ—೧೫ ॥
॥ ಋಷಿಃ— ಋಜಿಶ್ವಾ ॥
॥ ದೇವತಾ—ವಿಶ್ವೇದೇವಾಃ ॥
॥ ಛಂದಃ—೧–೧೪. ತ್ರಿಷ್ಟುಪ್ । ೧೫ ಶಕ್ವರೀ ॥

॥ ಸಂಹಿತಾಪಾಠಃ ॥

ಸ್ತುಷೇ ಜನಂ ಸುವ್ರತಂ ನವ್ಯಸೀಭಿರ್ಗೀರ್ಭಿರ್ಮಿತ್ರಾವರುಣಾ ಸುಮ್ನ-
ಯಂತಾ ।
ತ ಆ ಗಮಂತು ತ ಇಹ ಶ್ರುವಂತು ಸುಕ್ಷತ್ರಾಸೋ ವರುಣೋ ಮಿತ್ರೋ
ಅಗ್ನಿಃ ॥ ೧ ॥

॥ ಪದಪಾಠಃ ॥

ಸ್ತುಷೇ । ಜನಂ । ಸುऽವ್ರತಂ । ನವ್ಯಸೀಭಿಃ । ಗೀಃऽಭಿಃ । ಮಿತ್ರಾವರುಣಾ । ಸುಮ್ನऽಯಂತಾ ।
ತೇ । ಆ । ಗಮಂತು । ತೇ । ಇಹ । ಶ್ರುವಂತು । ಸುऽಕ್ಷತ್ರಾಸಃ । ವರುಣಃ । ಮಿತ್ರಃ । ಅಗ್ನಿಃ ॥ ೧ ॥

॥ ಸಾಯಣಭಾಷ್ಯಂ ॥

ಸುವ್ರತಂ ಸುಕರ್ಮಾಣಂ ಜನಂ ದೈವ್ಯಂ ಜನಂ ದೇವಸಂಘಂ ನವ್ಯಸೀಭಿರ್ನವತರಾಭಿರ್ಗೀರ್ಭಿಃ ಸ್ತುತಿಭಿಃ ಸ್ತುಷೇ । ಅಹಂ ಸ್ತುವೇ । ತಥಾ ಮಿತ್ರಾವರುಣಾ । ಮಿತ್ರಃ ಪ್ರಮೀತೇಸ್ತ್ರಾಯಕೋ ವರುಣಃ ಪಾಪಾನ್ನಿವಾರಯಿತಾ । ಏತಾವಪಿ ದೇವೌ ಸ್ತೌಮಿ । ಕೀದೃಶೌ । ಸುಮ್ನಯಂತಾ ಸುಮ್ನಂ ಸುಖಂ ಸ್ತೋತೄಣಾಮಿಚ್ಛಂತೌ । ಸುಕ್ಷತ್ರಾಸಃ ಶೋಭನಬಲಾಸ್ತೇ ವರುಣಾದಯಃ ಸರ್ವೇ ದೇವಾ ಇಹಾಸ್ಮಿನ್ಯಜ್ಞ ಆ ಗಮಂತು । ಆಗಚ್ಛಂತು । ತೇ ತಾದೃಶಾಃ ಶ್ರುವಂತು । ಅಸ್ಮದೀಯಾಃ ಸ್ತುತೀಃ ಶೃಣ್ವಂತು ಚ । ಅತ್ರ ಮಿತ್ರಾದೀನಾಂ ಪರಿಗಣನಮುಪಲಕ್ಷಣಂ । ಸೂಕ್ತಸ್ಯ ಸರ್ವದೇವತಾಪ್ರತಿಪಾದಕತ್ವಾತ್ । ಅತ ಏವ ಪೂರ್ವಂ ಜನಮಿತಿ ಸಾಮಾನ್ಯನಿರ್ದೇಶಃ ॥

॥ ಪ್ರತಿಪದಾರ್ಥ ॥

**ಸುಕ್ರತಂ**—ಉತ್ತಮವಾದ ಕರ್ಮವುಳ್ಳ । **ಜನಂ**—ದೇವ ಜನರನ್ನು । **ನವ್ಯಸೀಭಿಃ**—ನೂತನವಾದ । **ಗೀರ್ಭಿಃ**—ಸ್ತುತಿಗಳಿಂದ । **ಸ್ತುಷೇ**—ಸ್ತುತಿಸುತ್ತೇನೆ । **ಸುಮ್ನಯಂತಾ**—ಸುಖಕಾರಕವಾದ । **ಮಿತ್ರಾ ವರುಣಾ**—ಮಿತ್ರಾವರುಣರನ್ನು ಸ್ತುತಿಸುತ್ತೇನೆ । **ಸುಕ್ಷತ್ರಾಸಃ**—ಶ್ರೇಷ್ಠವಾದ ಬಲವುಳ್ಳ । **ತೇ**—ಆ

ವರುಣಾದಿಗಳು | **ಇಹ**—ಈ ಯಜ್ಞಪ್ರದೇಶಕ್ಕೆ | **ಆ ಗಮಂತು**—ದಯಮಾಡಲಿ | **ತೇ**—ಅವರೆಲ್ಲರೂ (ಎಂದರೆ) | **ವರುಣಃ**—ವರುಣನೂ | **ಮಿತ್ರಃ**—ಮಿತ್ರನೂ | **ಅಗ್ನಿಃ**—ಅಗ್ನಿಯೂ | **ಶ್ರುವಂತು**—ನಮ್ಮ ಪ್ರಾರ್ಥನೆಯನ್ನು ಕೇಳಲಿ.

|| ಭಾವಾರ್ಥ ||

ಉತ್ತಮವಾದ ಕರ್ಮವುಳ್ಳ ದೇವಜನವನ್ನು ನೂತನವಾದ ಸ್ತುತಿಗಳಿಂದ ಸ್ತುತಿಸುತ್ತೇನೆ. ಸುಖಕಾರಕರಾದ ಮಿತ್ರಾವರುಣರನ್ನೂ ಸ್ತುತಿಸುತ್ತೇನೆ. ಶ್ರೇಷ್ಠವಾದ ಬಲವುಳ್ಳ ಮಿತ್ರ, ವರುಣ ಮತ್ತು ಅಗ್ನಿಗಳು ಎಲ್ಲರೂ ಕೂಡಿಕೊಂಡು ನಮ್ಮ ಯಜ್ಞಕ್ಕೆ ಬರಲಿ. ಅವರೆಲ್ಲರೂ ನಮ್ಮ ಸ್ತುತಿಗಳನ್ನೂ ಪ್ರಾರ್ಥನೆಗಳನ್ನೂ ಕೇಳಲಿ.

English Translation.

I commend with new hymns the man observant of his duty, and the beneficent Mitra and Varuna: may they, the mighty ones, Varuna, Mitra, Agni, come to our rite, and listen (to our praises).

|| ಸಂಹಿತಾಪಾಠಃ ||

ವಿಶೋವಿಶ ಈಡ್ಯಮಧ್ವರೇಷ್ವದೃಪ್ತಕ್ರತುಮರತಿಂ ಯುವತ್ಯೋಃ |
ದಿವಃ ಶಿಶುಂ ಸಹಸಃ ಸೂನುಮಗ್ನಿಂ ಯಜ್ಞಸ್ಯ ಕೇತುಮರುಷಂ ಯಜಧ್ಯೈ ||

|| ಪದಪಾಠಃ ||

ವಿಶಃಽವಿಶಃ | ಈಡ್ಯಂ | ಅಧ್ವರೇಷು | ಅದೃಪ್ತಽಕ್ರತುಂ | ಅರತಿಂ | ಯುವತ್ಯೋಃ |
ದಿವಃ | ಶಿಶುಂ | ಸಹಸಃ | ಸೂನುಂ | ಅಗ್ನಿಂ | ಯಜ್ಞಸ್ಯ | ಕೇತುಂ | ಅರುಷಂ | ಯಜಧ್ಯೈ || ೨ ||

|| ಸಾಯಣಭಾಷ್ಯಂ ||

ವಿಶೋ ವಿಶಃ ಸರ್ವಸ್ಯಾಃ ಪ್ರಜಾಯಾ ಅಧ್ವರೇಷು ಯಜ್ಞೇಷ್ವೀಡ್ಯಮೃತ್ವಿಗ್ಭಿಃ ಸ್ತುತ್ಯಮದೃಪ್ತ-ಕ್ರತುಂ ದರ್ಪರಹಿತಕರ್ಮಾಣಮಮೂಢಪ್ರಜ್ಞಂ ವಾ ಯುವತ್ಯೋರ್ದ್ಯಾವಾಪೃಥಿವ್ಯೋರರತಿಮಭಿ-ಗಂತಾರಮರ್ಯಂ ಸ್ವಾಮಿನಂ ದಿವೋ ದ್ಯುಲೋಕಸ್ಯ ಶಿಶುಂ ಪುತ್ರಂ | ದಿವಸ್ಪರಿ ಪ್ರಥಮಂ ಜಜ್ಞೇ ಅಗ್ನಿಃ | ಋಗ್ವೇ ೧೦-೪೫-೧ | ಇತಿ ನಿಗಮಃ | ಯದ್ವಾ | ದಿವಃ ಸ್ತೋತುಃ ಪುತ್ರಭೂತಂ | ತಥಾಪಿ ನಿಗಮೋ ಭವತಿ | ತ್ವಂ ಪುತ್ರೋ ಭವಸಿ ಯಸ್ತೇಽವಿಧತ್ | ಋಗ್ವೇ. ೨-೧-೯ | ಇತಿ | ಸಹಸೋ ಬಲಸ್ಯ ಸೂನುಂ ಪುತ್ರಂ ಯಜ್ಞಸ್ಯ ಯಾಗಸ್ಯ ಕೇತುಂ ಪ್ರಜ್ಞಾಪಕಮರುಷಮಾರೋಚಮಾನಮೇವಂಗುಣಕಮಗ್ನಿಂ ಯಜಧ್ಯೈ ಯಷ್ಟುಂ | ಸ್ತುಷ ಇತ್ಯನುಷಜ್ಯತೇ | ಸ್ತುಷೇ | ಸ್ತುವೇ ||

॥ ಪ್ರತಿಪದಾರ್ಥ ॥

**ವಿಶೋವಿಶಃ**—ಪ್ರತಿಯೊಬ್ಬ ಯಜಮಾನನ । **ಅಧ್ವರೇಷು**—ಯಜ್ಞಗಳಲ್ಲಿಯೂ । **ಈಡ್ಯಂ**—ಸುತ್ಯನೂ । **ಅದೃಪ್ತಕ್ರತುಂ**—ದರ್ಪರಹಿತವಾದ ಕರ್ಮವುಳ್ಳವನೂ । **ಯುವತ್ಯೋಃ**—ತರುಣಿಯರಾದ ದ್ಯಾವಾಪೃಥಿವಿಗಳಿಗೆ । **ಅರತಿಂ**—ಸ್ವಾಮಿಯೂ । **ದಿವಃ**—ದ್ಯುಲೋಕದ । **ಶಿಶುಂ**—ಪುತ್ರನೂ । **ಸಹಸಃ**—ಶಕ್ತಿಗೆ । **ಸೂನುಂ**—ಪುತ್ರನೂ । **ಯಜ್ಞಸ್ಯ**—ಯಾಗಕ್ಕೆ । **ಕೇತುಂ**—ಪ್ರಜ್ಞಾಪಕನೂ । **ಅರುಷಂ**—ಆಕರ್ಷಕವಾದ ಹೊಂಬಣ್ಣವುಳ್ಳವನೂ ಆದ । **ಅಗ್ನಿಂ**—ಅಗ್ನಿಯನ್ನು । **ಯಜಧ್ಯೈ**—ಪೂಜಿಸಲು ಸ್ತುತಿಸುತ್ತೇನೆ.

॥ ಭಾವಾರ್ಥ ॥

ಪ್ರತಿಯೊಬ್ಬ ಯಜಮಾನನ ಯಜ್ಞಗಳಲ್ಲಿಯೂ ಸ್ತುತ್ಯನೂ, ದರ್ಪರಹಿತವಾದ ಕರ್ಮವುಳ್ಳವನೂ, ತರುಣಿಯರಾದ ದ್ಯಾವಾಪೃಥಿವಿಗಳಿಗೆ ಸ್ವಾಮಿಯೂ, ದ್ಯುಲೋಕದ ಪುತ್ರನೂ, ಶಕ್ತಿಸುತನೂ, ಯಾಗಕ್ಕೆ ಪ್ರಜ್ಞಾಪಕನೂ, ಆಕರ್ಷಕವಾದ ಹೊಂಬಣ್ಣವುಳ್ಳವನೂ ಆದ ಅಗ್ನಿಯನ್ನು ಪೂಜಿಸಲು ಸ್ತುತಿಸುತ್ತೇನೆ.

## English Translation.

(I incite the worshipper) to offer worship to Agni, who is to be adored at the sacrifices of every man; whose acts are free from arrogance; the lord of two youthful (brides, heaven and earth); the child of heaven, the son of strength, the brilliant symbol of sacrifice.

॥ ಸಂಹಿತಾಪಾಠಃ ॥

ಅರುಷಸ್ಯ ದುಹಿತರಾ ವಿರೂಪೇ ಸ್ತೃಭಿರನ್ಯಾ ಪಿಪಿಶೇ ಸೂರೋ ಅನ್ಯಾ ।
ಮಿಥಸ್ತುರಾ ವಿಚರಂತೀ ಪಾವಕೇ ಮನ್ಮ ಶ್ರುತಂ ನಕ್ಷತ ಋಚ್ಯಮಾನೇ ॥೩॥

॥ ಪದಪಾಠಃ ॥

ಅರುಷಸ್ಯ । ದುಹಿತರಾ । ವಿರೂಪೇ ಇತಿ ವಿऽರೂಪೇ । ಸ್ತೃऽಭಿಃ । ಅನ್ಯಾ । ಪಿಪಿಶೇ । ಸೂರಃ । ಅನ್ಯಾ ।
ಮಿಥಃऽತುರಾ । ವಿಚರಂತೀ ಇತಿ ವಿऽಚರಂತೀ । ಪಾವಕೇ ಇತಿ । ಮನ್ಮ । ಶ್ರುತಂ । ನಕ್ಷತಃ ।
ಋಚ್ಯಮಾನೇ ಇತಿ ॥ ೩ ॥

॥ ಸಾಯಣಭಾಷ್ಯಂ ॥

ಇಯಮಹೋರಾತ್ರಯೋಃ ಸ್ತುತಿಃ । ಅರುಷಸ್ಯಾರೋಚಮಾನಸ್ಯ ಸೂರ್ಯಸ್ಯ ದುಹಿತರಾ ದುಹಿತರೌ । ಸೂರ್ಯೇಣ ಹ್ಯಹೋರಾತ್ರಯೋರ್ವಿಭಾಗಃ ಕ್ರಿಯತೇ । ಅತಸ್ತದಧೀನಾತ್ಮಲಾಭತ್ವಾತ್ತಸ್ಯ ದುಹಿತರಾವಿತ್ಯುಚ್ಯೇತೇ । ವಿರೂಪೇ ಶುಕ್ಲಕೃಷ್ಣತಯಾ ನಾನಾರೂಪೇ । ತಯೋರನ್ಯೈಕಾ ರಾತ್ರಿಃ

**ಸ್ತೃಭಿರ್ನಕ್ಷತ್ರೈಃ ಪಿಪಿಶೇ । ಪಿಶ್ಯತೇ । ಸಂಶ್ಲಿಷ್ಯತೇ ॥ ಪಿಶ ಅವಯವ ಇತಿ ಧಾತುಃ ॥ ಅನ್ಯಾಹರಾತ್ಮಿಕಾ ದುಹಿತಾ ಸೂರಃ ಸೂರ್ಯೇಣ ಪಿಪಿಶೇ । ಸಂಶ್ಲಿಷ್ಯತೇ । ತೇ ಚ ನಕ್ಷತ್ರೈಃ ಸೂರ್ಯೇಣ ಚಾಲಂಕೃತೇ ಭವತ ಇತ್ಯರ್ಥಃ । ಮಿಥಸ್ತುರಾ ಪರಸ್ಪರಂ ಬಾಧಯಂತ್ಯೌ । ಅಹ್ನಾ ರಾತ್ರಿರ್ನಿವರ್ತ್ಯತೇ ರಾತ್ರ್ಯಾ ಚಾಹರಿತಿ ಪರಸ್ಪರಂ ಬಾಧಃ । ಅತ ಏವ ವಿಚರಂತೀ ವಿವಿಧಂ ಪೃಥಕ್ಚರಂತ್ಯೌ ಪಾವಕೇ ಸರ್ವಸ್ಯ ಶೋಧಯಿತ್ರ್ಯೌ । ಏವಂಭೂತೇ ಅಹಶ್ಚ ರಾತ್ರಿಶ್ಚ ಶುಚ್ಯಮಾನೇ ಅಸ್ಮಾಭಿಃ ಸ್ತೂಯಮಾನೇ ಸತ್ಯೌ ಶ್ರುತಂ ಶ್ರೋತವ್ಯಂ ಮನ್ಮ ಮನನೀಯಂ ಸ್ತೋತ್ರಮಸ್ಮತ್ಕೃತಂ ನಕ್ಷತಃ । ವ್ಯಾಪ್ನುತಾಂ ॥**

॥ ಪ್ರತಿಪದಾರ್ಥ ॥

**ವಿರೂಪೇ**—ಶುಕ್ಲಕೃಷ್ಣರೂಪವಾದ ನಾನಾ ವರ್ಣವುಳ್ಳವರೂ । **ಅರುಷಸ್ಯ**—ಹೊಂಬಣ್ಣವುಳ್ಳ ಸೂರ್ಯನ । **ದುಹಿತರಾ**—ಪುತ್ರಿಯರೂ ಆದ ಅಹೋರಾತ್ರಿಗಳಲ್ಲಿ । **ಅನ್ಯಾ**—ಒಬ್ಬಳಾದ ರಾತ್ರಿಯು । **ಸ್ತೃಭಿಃ**—ಪ್ರಕಾಶಮಾನವಾದ ನಕ್ಷತ್ರಗಳಿಂದ । **ಪಿಪಿಶೇ**—ಕಂಗೊಳಿಸುತ್ತಾಳೆ । **ಅನ್ಯಾ**—ಇನ್ನೊಬ್ಬಳಾದ ಅಹಸ್ಸು । **ಸೂರಃ**—ಸೂರ್ಯನೊಂದಿಗೆ ಹೊಂದಿಕೊಳ್ಳುತ್ತಾಳೆ । **ಮಿಥಸ್ತುರಾ**—ಪರಸ್ಪರ ಸ್ಥಿತಿಗೆ ಬಾಧಕಿಯರೂ । **ವಿಚರಂತೀ**—ಬೇರೆ ಬೇರೆ ವಿಧವಾಗಿ ಸಂಚರಿಸುವವರೂ । **ಪಾವಕೇ**—ಶುದ್ಧಿಕಾರಿಕೆಯರೂ । **ಶುಚ್ಯಮಾನೇ**—ನಮ್ಮಿಂದ ಸ್ತುತಿಸಲ್ಪಡುವವರೂ ಆದ ಅಹೋರಾತ್ರಗಳು । **ಶ್ರುತಂ**—ಪ್ರಸಿದ್ಧವಾದುದೂ । **ಮನ್ಮ**—ಧ್ಯಾನಾತ್ಮಕವಾದುದೂ ಆದ ನಮ್ಮ ಸ್ತೋತ್ರವನ್ನು । **ನಕ್ಷತಃ**—ವ್ಯಾಪಿಸಲಿ (ಕೇಳಿ ತೃಪ್ತಿ ಹೊಂದಲಿ).

॥ ಭಾವಾರ್ಥ ॥

ಶುಕ್ಲಕೃಷ್ಣರೂಪವಾದ ನಾನಾವರ್ಣವುಳ್ಳವರೂ, ಹೊಂಬಣ್ಣವುಳ್ಳ ಸೂರ್ಯನ ಪುತ್ರಿಯರೂ ಆದ ಅಹೋರಾತ್ರಗಳಲ್ಲಿ ಒಬ್ಬಳಾದ ರಾತ್ರಿಯು ಪ್ರಕಾಶಮಾನವಾದ ನಕ್ಷತ್ರಗಳಿಂದ ಶೋಭಿಸುತ್ತಾಳೆ. ಇನ್ನೊಬ್ಬಳಾದ ಅಹಸ್ಸು ಸೂರ್ಯನೊಂದಿಗೆ ಹೊಂದಿಕೊಳ್ಳುತ್ತಾಳೆ. ತಮ್ಮ ತಮ್ಮ ಸ್ಥಿತಿಗೆ ಪರಸ್ಪರ ಬಾಧಕಿಯರೂ, ಬೇರೆಬೇರೆ ವಿಧವಾಗಿ ಸಂಚರಿಸುವವರೂ, ಶುದ್ಧಿಕಾರಿಕೆಯರೂ, ನಮ್ಮಿಂದ ಸ್ತುತಿಸಲ್ಪಡುವವರೂ ಆದ ಅಹೋರಾತ್ರಗಳು ಪ್ರಸಿದ್ಧವಾದುದೂ, ಧ್ಯಾನಾತ್ಮಕವಾದುದೂ ಆದ ನಮ್ಮ ಸ್ತೋತ್ರವನ್ನು ಕೇಳಿ ತೃಪ್ತಿಯನ್ನು ಹೊಂದಲಿ

## English Translation.

May the two daughters of the radiant (sun) of various form, of whom one glitters with stars, the other (is bright) with the sun, mutually opposed, proceeding diversely, purifying (all things), and entitled to our laudation, be pleased by the praise they hear (from us).

॥ ಸಂಹಿತಾಪಾಠಃ ॥

ಪ್ರ ವಾಯುಮಚ್ಛಾ ಬೃಹತೀ ಮನೀಷಾ ಬೃಹದ್ರಯಿಂ ವಿಶ್ವವಾರಂ ರಥಪ್ರಾಂ ।

ದ್ಯುತದ್ಯಾಮಾ ನಿಯುತಃ ಪತ್ಯಮಾನಃ ಕವಿಃ ಕವಿಮಿಯಕ್ಷಸಿ ಪ್ರಯಜ್ಯೋ ॥

॥ ಪದಪಾಠಃ ॥

ಪ್ರ । ವಾಯುಂ । ಅಚ್ಛ । ಬೃಹತೀ । ಮನೀಷಾ । ಬೃಹತ್ऽರಯಿಂ । ವಿಶ್ವऽವಾರಂ । ರಥऽಪ್ರಾಂ ।

ದ್ಯುತತ್ऽಯಾಮಾ । ನಿऽಯುತಃ । ಪತ್ಯಮಾನಃ । ಕವಿಃ । ಕವಿಂ । ಇಯಕ್ಷಸಿ । ಪ್ರಯಜ್ಯೋ ಇತಿ ಪ್ರऽಯಜ್ಯೋ ॥ ೪ ॥

॥ ಸಾಯಣಭಾಷ್ಯಂ ॥

ಬೃಹತೀ ಮಹತೀ ಮನೀಷಾಸ್ಮದೀಯಾ ಸ್ತುತಿರ್ವಾಯುಮಚ್ಛಾಭಿಮುಖ್ಯೇನ ಪ್ರ ಗಚ್ಛತು ॥ ಉಪಸರ್ಗಶ್ರುತೇರ್ಯೋಗ್ಯಕ್ರಿಯಾಧ್ಯಾಹಾರಃ ॥ ಕೀದೃಶಂ ವಾಯುಂ । ಬೃಹದ್ರಯಿಂ ಮಹಾಧನಂ ವಿಶ್ವವಾರಂ ವಿಶ್ವೈರ್ವರಣೀಯಂ ಸಂಭಜನೀಯಂ ರಥಪ್ರಾಂ ರಥಸ್ಯಾತ್ಮೀಯಸ್ಯ ಪ್ರಾತಾರಂ ಪೂರಯಿತಾರಂ । ಯದ್ವಾ । ಸ್ತೋತೄಣಾಂ ರಥಂ ಧನೈಃ ಪೂರಯಿತಾರಂ । ಅಥ ಪ್ರತ್ಯಕ್ಷಸ್ತುತಿಃ । ಹೇ ಪ್ರಯಜ್ಯೋ ಪ್ರಕರ್ಷೇಣ ಯಷ್ಟವ್ಯ ವಾಯೋ ದ್ಯುತದ್ಯಾಮಾ ಪ್ರದೀಪ್ತಯಾನೋ ನಿಯುತ ಆತ್ಮೀಯರಥಯೋಜ್ಯಾ ವಡವಾಸ್ತಾಃ ಪತ್ಯಮಾನೋऽಭಿಪತನ್ನಭಿಗಚ್ಛನ್ । ಯದ್ವಾ । ಪತ್ಯತಿರೈಶ್ವರ್ಯಕರ್ಮಾ । ತಾಸಾಂ ವಡವಾನಾಮೀಶ್ವರಃ ಕವಿಃ ಕ್ರಾಂತದರ್ಶೀ । ಏವಂಭೂತಸ್ತ್ವಂ ಕವಿಂ ಮೇಧಾವಿನಂ ಸ್ತೋತಾರಮಿಯಕ್ಷಸಿ । ಧನೇನ ಪೂಜಯ ॥

॥ ಪ್ರತಿಪದಾರ್ಥ ॥

**ಬೃಹತೀ**—ಮಹದ್ಗುಣವುಳ್ಳ । **ಮನೀಷಾ**—ನಮ್ಮ ಸ್ತುತಿಯು । **ಬೃಹದ್ರಯಿಂ**—ಅತ್ಯಧಿಕವಾದ ಧನವುಳ್ಳವನೂ । **ವಿಶ್ವವಾರಂ**—ಸಮಸ್ತರಿಂದಲೂ ಅಪೇಕ್ಷಿತನೂ । **ರಥಪ್ರಾಂ**—ಸ್ತೋತೃವಿನ ರಥವನ್ನು ಧನದಿಂದ ತುಂಬುವವನೂ, ಆದ । **ವಾಯುಂ ಅಚ್ಛ**—ವಾಯುವಿಗೆ ಅಭಿಮುಖವಾಗಿ । **ಪ್ರ (ಗಚ್ಛತು)**—ಹೋಗಿ ಸೇರಲಿ । **ಪ್ರಯಜ್ಯೋ**—ಉತ್ತಮವಾದ ಪೂಜೆಗೆ ಯೋಗ್ಯನಾದ ಎಲೈವಾಯುವೇ । **ದ್ಯುತದ್ಯಾಮಾ**—ಕಾಂತಿಯುತವಾದ ಪ್ರಭೆಯುಳ್ಳವನೂ । **ಕವಿಃ**—ಕ್ರಾಂತಪ್ರಜ್ಞನೂ ಆದ ನೀನು । **ನಿಯುತಃ**—ನಿನ್ನ ಅಶ್ವಗಳನ್ನು । **ಪತ್ಯಮಾನಃ**—ಓಡಿಸುತ್ತಾ (ಬಂದು) । **ಕವಿಂ**—ಮೇಧಾವಿಯಾದ ಸ್ತುತಿಕರ್ತನನ್ನು । **ಇಯಕ್ಷಸಿ**—ಧನದಿಂದ ತೃಪ್ತಿಗೊಳಿಸು.

॥ ಭಾವಾರ್ಥ ॥

ಮಹದ್ಗುಣವುಳ್ಳ ನಮ್ಮ ಸ್ತುತಿಯು ಅತ್ಯಧಿಕವಾದ ಧನವುಳ್ಳವನೂ, ಸಮಸ್ತರಿಂದಲೂ ಅಪೇಕ್ಷಿತನೂ, ಸ್ತೋತೃವಿನ ರಥವನ್ನು ಧನದಿಂದ ತುಂಬುವವನೂ ಆದ ವಾಯುವಿಗೆ ಅಭಿಮುಖವಾಗಿ ಹೋಗಿ ಸೇರಲಿ. ಉತ್ತಮವಾದ ಪೂಜೆಗೆ ಯೋಗ್ಯನಾದ ಎಲೈ ವಾಯುವೇ, ಕಾಂತಿಯುತವಾದ ಪ್ರಭೆಯುಳ್ಳವನೂ, ಕ್ರಾಂತಪ್ರಜ್ಞನೂ ಆದ ನೀನು ನಿನ್ನ ಅಶ್ವಗಳನ್ನು ಓಡಿಸುತ್ತಾ ಬಂದು ಮೇಧಾವಿಯಾದ ಸ್ತುತಿಕರ್ತನನ್ನು ಧನದಿಂದ ತೃಪ್ತಿಗೊಳಿಸು.

## English Translation.

May our earnest praise proceed to the presence of Vayu, the possessor of vast riches, the desired of all, the filler of his chariot (with wealth for his worshippers): most adorable (Vayu) you are riding in a radiant car, and driving your Niyut (steeds); you, are far-seeing, show favour to the sage, (your adorer).

॥ ಸಂಹಿತಾಪಾಠಃ ॥

ಸ ನೋ ವಪುಶ್ಛದಯದಶ್ವಿನೋರ್ಯೋ ರಥೋ ವಿರುಕ್ಮಾನ್ಮನಸಾ ಯುಜಾನಃ ।
ಯೇನ ನರಾ ನಾಸತ್ಯೇಷಯಧ್ಯೈ ವರ್ತಿರ್ಯಾಥಸ್ತನಯಾಯ ತ್ಮನೇ ಚ ॥೫॥

॥ ಪದಪಾಠಃ ॥

ಸಃ । ನಃ । ವಪುಃ । ಛದಯತ್ । ಅಶ್ವಿನೋಃ । ಯಃ । ರಥಃ । ವಿರುಕ್ಮಾನ್ । ಮನಸಾ । ಯುಜಾನಃ ।
ಯೇನ । ನರಾ । ನಾಸತ್ಯಾ । ಇಷಯಧ್ಯೈ । ವರ್ತಿಃ । ಯಾಥಃ । ತನಯಾಯ । ತ್ಮನೇ । ಚ ॥ ೫ ॥

॥ ಸಾಯಣಭಾಷ್ಯಂ ॥

ಅಶ್ವಿನೋಃ ಸ್ವಭೂತಃ ಸ ರಥೋ ನೋ ಮದೀಯಂ ವಪುಃ ಶರೀರಂ ಛದಯತ್ । ಛಾದಯತು । ತೇಜಸಾಚ್ಛಾದಯತು । ಯೋ ರಥೋ ವಿರುಕ್ಮಾನ್ ವಿರೋಚನವಾನ್ ವಿಶೇಷೇಣ ದೀಪ್ಯಮಾನೋ ಮನಸಾ ಮನೋವ್ಯಾಪಾರಮಾತ್ರೇಣ ಯುಜಾನೋಽಶ್ವೈಃ ಸಂಪ್ರಯುಜ್ಯಮಾನೋ ಭವತಿ । ಹೇ ನರಾ ನೇತಾರೌ ಹೇ ನಾಸತ್ಯಾ ಸತ್ಯಸ್ವಭಾವಾ ಸತ್ಯಸ್ಯ ನೇತಾರೌ ನಾಸಿಕಾಪ್ರಭವೌ ವಾಶ್ವಿನಾ ಯೇನ ರಥೇನ ವರ್ತಿಃ ಸ್ತೋತೃಗೃಹಂ ತನಯಾಯ ಪುತ್ರಾಯ ತ್ಮನೇ ತತ್ಪಿತ್ರೇ ಸ್ತೋತ್ರೇ ಚೇಷಯಧ್ಯೈ ಕಾಮಾನ್ಪ್ರಾಪಯಿತುಂ ಯಾಥೋ ಗಚ್ಛಥಃ ಸ ರಥ ಇತಿ ಪೂರ್ವತ್ರಾನ್ವಯಃ ॥

॥ ಪ್ರತಿಪದಾರ್ಥ ॥

**ನರಾ**—ನೇತೃಗಳಾದ । **ನಾಸತ್ಯಾ**—ಎಲೈ ಅಶ್ವಿನೀ ದೇವತೆಗಳೇ । **ಯೇನ**—ಯಾವ ರಥದೊಡನೆ । **ತನಯಾಯ**—ಸ್ತೋತೃವಿನ ಪುತ್ರನಿಗೂ । **ತ್ಮನೇ ಚ**—ಸ್ತೋತೃವಿಗೂ ಸಹ । **ಇಷಯಧ್ಯೈ**—ಇಷ್ಟಾರ್ಥವನ್ನು ಪೂರ್ತಿಗೊಳಿಸಲು । **ವರ್ತಿಃ**—ಸ್ತೋತೃಗೃಹವನ್ನು ಕುರಿತು । **ಯಾಥಃ**—ಹೋಗುವಿರೋ । **ಅಶ್ವಿನೋಃ**—ಅಶ್ವಿನೀ ದೇವತೆಗಳಾದ ನಿಮ್ಮ । **ಯಃ ರಥಃ**—ಯಾವ ರಥವು । **ವಿರುಕ್ಮಾನ್**—ಅತ್ಯಧಿಕವಾಗಿ ಕಂಗೊಳಿ

ಸುತ್ತಾ । **ಮನಸಾ**—ಸ್ವಸಂಕಲ್ಪಮಾತ್ರದಿಂದಲೇ । **ಯುಜಾನಃ**—ಅಶ್ವಗಳೊಡನೆ ಸೇರಿಕೊಳ್ಳುವುದೋ । **ಸಃ**—ಅದೇ ರಥವು । **ಮೇ ವಪುಃ**—ನನ್ನ ಶರೀರವನ್ನು । **ಛದಯತ್**—ತನ್ನ ಕಾಂತಿಯಿಂದ ಆವರಿಸಲಿ.

॥ ಭಾವಾರ್ಥ ॥

ನೇತೃಗಳಾದ ಎಲೈ ಅಶ್ವಿನೀದೇವತೆಗಳೇ, ಯಾವ ರಥದೊಡನೆ ಸ್ತೋತೃವಿನ ಪುತ್ರನಿಗೂ ಸ್ತೋತೃವಿಗೂ ಸಹ ಇಷ್ಟಾರ್ಥವನ್ನು ಪೂರ್ತಿಗೊಳಿಸಲು ಸ್ತೋತೃಗೃಹವನ್ನು ಕುರಿತು ಹೋಗುವಿರೋ, ಅಶ್ವಿನೀದೇವತೆಗಳಿಂದ ನಿಮ್ಮ ಯಾವ ರಥವು ಅತ್ಯಧಿಕವಾಗಿ ಕಂಗೊಳಿಸುತ್ತಾ ಸ್ವಸಂಕಲ್ಪಮಾತ್ರದಿಂದಲೇ ಅಶ್ವಗಳೊಡನೆ ಸೇರಿಕೊಳ್ಳುವುದೋ ಅದೇ ರಥವು ನನ್ನ ಶರೀರವನ್ನು ತನ್ನ ಕಾಂತಿಯಿಂದ ಆವರಿಸಲಿ.

English Translation.

May that splendid car of the Aswins, which is harnessed at a thought, clothe my form (with radiance): that (car) with which, Nasatyas, leaders of (rites), you go to the dwelling (of the worshipper) to fulfil his desires for his posterity and himself.

॥ ಸಂಹಿತಾಪಾಠಃ ॥

ಪರ್ಜನ್ಯವಾತಾ ವೃಷಭಾ ಪೃಥಿವ್ಯಾಃ ಪುರೀಷಾಣಿ ಜಿನ್ವತಮಪ್ಯಾನಿ ।
ಸತ್ಯಶ್ರುತಃ ಕವಯೋ ಯಸ್ಯ ಗೀರ್ಭಿರ್ಜಗತಃ ಸ್ಥಾತರ್ಜಗದಾ ಕೃಣುಧ್ವಂ॥

॥ ಪದಪಾಠಃ ॥

ಪರ್ಜನ್ಯವಾತಾ । ವೃಷಭಾ । ಪೃಥಿವ್ಯಾಃ । ಪುರೀಷಾಣಿ । ಜಿನ್ವತಂ । ಅಪ್ಯಾನಿ ।
ಸತ್ಯಽಶ್ರುತಃ । ಕವಯಃ । ಯಸ್ಯ । ಗೀಃಽಭಿಃ । ಜಗತಃ । ಸ್ಥಾತಃ । ಜಗತ್ । ಆ । ಕೃಣುಧ್ವಂ ॥ ೬ ॥

॥ ಸಾಯಣಭಾಷ್ಯಂ ॥

ಹೇ ಪರ್ಜನ್ಯವಾತಾ ಪರ್ಜನ್ಯವಾಯೂ ವೃಷಭಾ ವೃಷ್ಟೇಃ ಕರ್ತಾರೌ ಪೃಥಿವ್ಯಾಃ। ಅಂತರಿಕ್ಷನಾಮೈತತ್ । ಅಂತರಿಕ್ಷಾದಪ್ಯಾನ್ಯಾಪ್ಸ್ವನ್ಯಾನಿ ಪುರೀಷಾಣಿ ಪೂರಕಾಣ್ಯುದಕಾನಿ ಜಿನ್ವತಂ । ಪ್ರೇರಯತಂ । ಉತ್ತರೋಽರ್ಧರ್ಚೋ ಮಾರುತಃ । ಹೇ ಸತ್ಯಶ್ರುತಃ ಸತ್ಯಸ್ಯ ಸ್ತೋತ್ರಸ್ಯ ಶ್ರೋತಾರಃ ಕವಯೋ ಮೇಧಾವಿನೋ ಮರುತೋ ಯಸ್ಯ ಸ್ತೋತುರ್ಗೀರ್ಭಿಃ ಸ್ತುತಿಭಿರ್ಯೂಯಂ ಸ್ತುತಾ ಭವಥ ತಸ್ಯ ಸ್ತೋತುರ್ಜಗತ್ಸ್ಥಾವರಜಂಗಮಾತ್ಮಕಂ ಸರ್ವಂ ಪ್ರಾಣಿಜಾತಮಾ ಕೃಣುಧ್ವಂ। ಆಭಿಮುಖ್ಯೇನ ಕುರುತ। ಹೇ ಜಗತಃ ಸ್ಥಾತಃ । ಗಣಾಭಿಪ್ರಾಯಮೇಕವಚನಂ । ಸ್ಥಾವರಜಂಗಮಾತ್ಮಕಸ್ಯ ಜಗತೋಽವಸ್ಥಾಪಕ ಹೇ ಮರುದ್ಗಣೇತಿ ಯೋಜ್ಯಂ ॥

॥ ಪ್ರತಿಪದಾರ್ಥ ॥

**ಪರ್ಜನ್ಯವಾತಾ**—ಎಲೈ ಪರ್ಜನ್ಯ ಮತ್ತು ವಾಯುದೇವತೆಗಳೇ । **ವೃಷಭಾ**—ವೃಷ್ಟಿಕಾರರಾದ ನೀವು । **ಪೃಥಿವ್ಯಾಃ**—ಅಂತರಿಕ್ಷದಿಂದ । **ಅಪ್ಯಾನಿ**—ಲಬ್ಧವಾಗತಕ್ಕ । **ಪುರೀಷಾಣಿ**—ಉದಕಗಳನ್ನು । **ಜಿನ್ವತಂ**—ಪ್ರೇರಿಸಿ ಸುರಿಸಿರಿ । **ಸತ್ಯಶ್ರುತಃ**—ಸತ್ಯಾತ್ಮಕವಾದ ಸ್ತುತಿಗಳನ್ನು ಕೇಳತಕ್ಕವರೂ । **ಜಗತಃ**—ಜಂಗಮಾತ್ಮಕವಾದ ಪ್ರಪಂಚಕ್ಕೆ । **ಸ್ಥಾತಃ**—ಸ್ಥಿತಿದಾಯಕರೂ । **ಕವಯಃ**—ಮೇಧಾವಿಗಳೂ ಆದ ಎಲೈ ಮರುತ್ತುಗಳೇ । **ಯಸ್ಯ**—ಯಾವ ಸ್ತೋತೃವಿನ । **ಗೀರ್ಭಿಃ**—ಸ್ತುತಿಗಳಿಂದ ನೀವು ಸಂತುಷ್ಟರಾಗುವಿರೋ ಅಂತಹ ಸ್ತೋತೃವಿನ । **ಜಗತ್**—ಸ್ಥಾವರಜಂಗಮಾತ್ಮಕವಾದ ಸಕಲ ಸಂಪತ್ತುಗಳನ್ನೂ । **ಆ ಕೃಣುಧ್ವಂ**—ವೃದ್ಧಿಯನ್ನು ಹೊಂದುವಂತೆ ಮಾಡಿರಿ.

॥ ಭಾವಾರ್ಥ ॥

ಎಲೈ ಪರ್ಜನ್ಯ ಮತ್ತು ವಾಯುದೇವತೆಗಳೇ. ವೃಷ್ಟಿಕಾರಕರಾದ ನೀವು ಅಂತರಿಕ್ಷದಿಂದ ಲಬ್ಧವಾಗತಕ್ಕ ಉದಕಗಳನ್ನು ಪ್ರೇರಿಸಿ ಸುರಿಸಿರಿ. ಸತ್ಯಾತ್ಮಕವಾದ ಸ್ತುತಿಗಳನ್ನು ಕೇಳತಕ್ಕವರೂ, ಜಂಗಮಾತ್ಮಕವಾದ ಪ್ರಪಂಚಕ್ಕೆ ಸ್ಥಿತಿದಾಯಕರೂ, ಮೇಧಾವಿಗಳೂ ಆದ ಎಲೈ ಮರುತ್ತುಗಳೇ, ಯಾವ ಸ್ತೋತೃವಿನ ಸ್ತುತಿಗಳಿಂದ ನೀವು ಸಂತುಷ್ಟರಾಗುವಿರೋ ಅಂತಹ ಸ್ತೋತೃವಿನ ಸ್ಥಾವರಜಂಗಮಾತ್ಮಕವಾದ ಸಕಲ ಸಂಪತ್ತುಗಳನ್ನೂ ವೃದ್ಧಿಯನ್ನು ಹೊಂದುವಂತೆ ಮಾಡಿರಿ.

English Translation.

Parjanya and Vata, showerers of rain, send from the firmament available waters : sage Maruts, hearers of truth, establishers of the world, multiply the moveable (wealth of him) by whose praises (you are propitiated).

॥ ಸಂಹಿತಾಪಾಠಃ ॥

ಪಾವೀರವೀ ಕನ್ಯಾ ಚಿತ್ರಾಯುಃ ಸರಸ್ವತೀ ವೀರಪತ್ನೀ ಧಿಯಂ ಧಾತ್ ।
ಗ್ನಾಭಿರಚ್ಛಿದ್ರಂ ಶರಣಂ ಸಜೋಷಾ ದುರಾಧರ್ಷಂ ಗೃಣತೇ ಶರ್ಮ
ಯಂಸತ್ ॥ ೭ ॥

॥ ಪದಪಾಠಃ ॥

ಪಾವೀರವೀ । ಕನ್ಯಾ । ಚಿತ್ರಽಆಯುಃ । ಸರಸ್ವತೀ । ವೀರಽಪತ್ನೀ । ಧಿಯಂ । ಧಾತ್ ।
ಗ್ನಾಭಿಃ । ಅಚ್ಛಿದ್ರಂ । ಶರಣಂ । ಸಽಜೋಷಾಃ । ದುಃಽಆಧರ್ಷಂ । ಗೃಣತೇ । ಶರ್ಮ । ಯಂಸತ್ ॥೭॥

॥ ಸಾಯಣಭಾಷ್ಯಂ ॥

ಅನ್ವಾರಂಭಣೀಯಾಯಾಂ ಸಾರಸ್ವತಸ್ಯ ಹವಿಷೋ ಯಾಜ್ಯಾ ಪಾವೀರವೀತ್ಯೇಷಾ । ಸೂತ್ರಿತಂ ಚ । ಪಾವೀರವೀ ಕನ್ಯಾ ಚಿತ್ರಾಯುಃ ಪೀಪಿವಾಂಸಂ ಸರಸ್ವತಃ । ಆ. ೨-೮ । ಇತಿ ॥ ಏಕಾದಶಿನೇ

ಸಾರಸ್ವತೇ ಪಶಾವೇಷೈವ ಪುರೋಡಾಶಸ್ಯ ಯಾಜ್ಯಾ । ಸೂತ್ರಿತಂ ಚ । ಪಾವೀರವೀ ಕನ್ಯಾ ಚಿತ್ರಾಯು- ರ್ಯಸ್ತೇ ಸ್ತನಃ ಶಶಯೋ ಯೋ ಮಯೋಭೂಃ । ಆ. ೩-೭ । ಇತಿ ॥ ಆಗ್ನಿಮಾರುತೇ ಶಸ್ತ್ರೇಽಪ್ಯೇಷಾ। ಸೂತ್ರಿತಂ ಚ । ರಾಕಾಮುಹಮಿತಿ ದ್ವೇ ಪಾವೀರವೀ ಕನ್ಯಾ ಚಿತ್ರಾಯುಃ । ಆ. ೫-೨೦ । ಇತಿ ॥

ಪಾವೀರವೀ ಶೋಧಯಿತ್ರೀ ಕನ್ಯಾ ಕಮನೀಯಾ ಚಿತ್ರಾಯುಶ್ಚಿತ್ರಗಮನಾ ಚಿತ್ರಾನ್ನಾ ವಾ ವೀರಪತ್ನೀ । ವೀರಃ ಪ್ರಜಾಪತಿಃ ಪತಿರ್ಯಸ್ಯಾಸ್ತಾದೃಶೀ । ಯದ್ವಾ । ವೀರಾಣಾಂ ಪಾಲಯಿತ್ರೀ । ಏವಂಭೂತಾ ಸರಸ್ವತೀ ಧಿಯಮಸ್ಮದೀಯಂ ಕರ್ಮ ಯಜ್ಞಾಖ್ಯಂ ಧಾತ್ । ದಧಾತು । ಧಾರಯತು । ದದಾತು ವಾ । ಶಬ್ದೇನ ಪ್ರತಿಪಾದಿತೋ ಹ್ಯರ್ಥೋಽನುಷ್ಠೀಯತೇ । ಅಪಿ ಚ ಗ್ನಾಭಿರ್ದೇವಪತ್ನೀಭಿಃ ಸಜೋಷಾಃ ಸಹ ಪ್ರೀಯಮಾಣಾ । ಯದ್ವಾ । ಗ್ನಾ ಗಾಯತ್ರ್ಯಾದೀನಿ ಛಂದಾಂಸಿ । ಛಂದಾಂಸಿ ವೈ ಗ್ನಾ ಇತಿ ಶ್ರುತೇಃ । ತೈಃ ಸಹ ಪ್ರೀಯಮಾಣಾ ಗೃಣತೇ ಸ್ತುವತೇ ಮಹ್ಯಮಚ್ಛಿದ್ರಂ ಛಿದ್ರರಹಿತಂ ದುರಾಧರ್ಷಂ ಶತ್ರುಭಿಃ ಶೀತವಾತಾದಿಭಿಶ್ಚ ಧರ್ಷಿತುಮಶಕ್ಯಂ ಶರಣಂ ಗೃಹಂ ಶರ್ಮ ಸುಖಂ ಚ ಯಂಸತ್ । ಪ್ರಯಚ್ಛತು ॥

॥ ಪ್ರತಿಪದಾರ್ಥ ॥

**ಪಾವೀರವೀ**—ಶುದ್ಧಿಕಾರಕಳೂ । **ಕನ್ಯಾ**—ಕಮನೀಯವಾದ ರೂಪವುಳ್ಳವಳೂ । **ಚಿತ್ರಾಯುಃ**—ಅನೇಕ ವಿಧವಾದ ಅನ್ನವುಳ್ಳವಳೂ । **ವೀರಪತ್ನೀ**—ವೀರರ ಪಾಲಕಳೂ ಆದ । **ಸರಸ್ವತೀ**—ಸರಸ್ವತೀ ದೇವಿಯು । **ಧಿಯಂ**—ನಮಗೆ ಕರ್ಮಬೋಧಕವಾದ ಬುದ್ಧಿಯನ್ನು । **ಧಾತ್**—ಅನುಗ್ರಹಿಸಲಿ । **ಗ್ನಾಭಿಃ**—ದೇವಪತ್ನಿಯರೊಡನೆ । **ಸಜೋಷಾ**—ಕೂಡಿಕೊಂಡಿರತಕ್ಕ ಅದೇ ಸರಸ್ವತಿಯು । **ಗೃಣತೇ**—ಸ್ತುತಿಕರ್ತನಾದ ನನಗೆ । **ಅಚ್ಛಿದ್ರಂ**—ಛಿದ್ರರಹಿತವಾದುದೂ । **ದುರಾಧರ್ಷಂ**—ಶತ್ರುಗಳಿಂದ ಅಪ್ರತಿಹತವಾದುದೂ ಆದ । **ಶರಣಂ**—ಗೃಹವನ್ನೂ । **ಶರ್ಮ**—ಸುಖವನ್ನೂ । **ಯಂಸತ್**—ಅನುಗ್ರಹಿಸಿ ಕೊಡಲಿ.

॥ ಭಾವಾರ್ಥ ॥

ಶುದ್ಧಿಕಾರಕಳೂ, ಕಮನೀಯವಾದ ರೂಪವುಳ್ಳವಳೂ, ಅನೇಕ ವಿಧವಾದ ಅನ್ನವುಳ್ಳವಳೂ, ವೀರರ ಪಾಲಕಳೂ ಆದ ಸರಸ್ವತೀದೇವಿಯು ನಮಗೆ ಕರ್ಮಬೋಧಕವಾದ ಬುದ್ಧಿಯನ್ನು ಅನುಗ್ರಹಿಸಲಿ. ದೇವ ಪತ್ನಿಯ ರೊಡನೆ ಕೂಡಿಕೊಂಡಿರತಕ್ಕ ಅದೇ ಸರಸ್ವತಿಯು ಸ್ತುತಿಕರ್ತನಾದ ನನಗೆ ಛಿದ್ರರಹಿತವಾದುದೂ ಶತ್ರುಗಳಿಂದ ಅಪ್ರತಿಹತವಾದುದೂ ಆದ ಗೃಹವನ್ನೂ ಸುಖವನ್ನೂ ಅನುಗ್ರಹಿಸಿ ಕೊಡಲಿ.

## English Translation.

May the purifying, amiable, graceful Saraswati, the bride of the hero, favour our pious rite: may she, together with the wives of the gods, well pleased, bestow upon him who praises her a habitation free from defects, and impenetrable (to wind and rain), and (grant him) felicity.

॥ ವಿಶೇಷವಿಷಯಗಳು ॥

ಅನ್ವಾರಂಭಣೀಯೇಷ್ಟಿಯಲ್ಲಿ ಸರಸ್ವತೀದೇವತೆಯನ್ನುದ್ದೇಶಿಸಿ ಮಾಡುವ ಹವಿಸ್ಸಿನ ಹೋಮದಲ್ಲಿ **ಪಾವೀ-ರವೀ** ಎಂಬ ಈ ಋಕ್ಕನ್ನು ಯಾಜ್ಯಾಮಂತ್ರವನ್ನಾಗಿ ಪಠಿಸಬೇಕೆಂದು ಆಶ್ವಲಾಯನ ಶ್ರೌತಸೂತ್ರದ—**ಪಾವೀರವೀ ಕನ್ಯಾ ಚಿತ್ರಾಯುಃ ಪೀಪಿವಾಂಸಂ ಸರಸ್ವತಃ** ಎಂಬ ಈ ಸೂತ್ರದಿಂದ (ಆ. ೨-೮) ವಿವೃತವಾಗಿರುವುದು. **ಏಕಾದಶಿನ್** ಎಂಬ ಇಷ್ಟಿಯಲ್ಲಿಯೂ ಸರಸ್ವತೀದೇವತಾಕವಾದ ಪಶುಹೋಮದಲ್ಲಿ ಈ ಋಕ್ಕನ್ನು ಪುರೋಡಾಶ ಹೋಮಮಾಡುವಾಗ ಯಾಜ್ಯಾಮಂತ್ರವನ್ನಾಗಿ ಪಠಿಸಬೇಕೆಂದು ಆಶ್ವಲಾಯನಶ್ರೌತಸೂತ್ರದ—**ಪಾವೀರವೀ ಕನ್ಯಾ ಚಿತ್ರಾಯುರ್ಯಸ್ತೇ ಸ್ತನಃ ಶಶಯೋ ಯೋ ಮಯೋಭೂಃ** ಎಂಬ ಸೂತ್ರದಿಂದ (ಆ. ೩-೭) ವಿವೃತ ವಾಗಿರುವುದು ಮತ್ತು ಆಗ್ನಿಮಾರುತ ಶಸ್ತ್ರಮಂತ್ರಗಳಲ್ಲಿಯೂ ಈ ಋಕ್ಕನ್ನು ಪಠಿಸಬೇಕೆಂದು ಆಶ್ವಲಾಯನ ಶ್ರೌತ ಸೂತ್ರದ—**ರಾಕಾಮಹಮಿತಿ ದ್ವೇ ಪಾವೀರವೀ ಕನ್ಯಾ ಚಿತ್ರಾಯುಃ** ಎಂಬ ಸೂತ್ರದಿಂದ (ಆ. ೫-೨೦) ವಿವೃತವಾಗಿರುವುದು.

॥ ಸಂಹಿತಾಪಾಠಃ ॥

**ಪಥಸ್ಪಥಃ ಪರಿಪತಿಂ ವಚಸ್ಯಾ ಕಾಮೇನ ಕೃತೋ ಅಭ್ಯಾನಳರ್ಕಂ ।**
**ಸನೋ ರಾಸಚ್ಛುರುಧಶ್ಚಂದ್ರಾಗ್ರಾ ಧಿಯಂಧಿಯಂ ಸೀಷಧಾತಿ ಪ್ರ ಪೂಷಾ ॥ ೮ ॥**

॥ ಪದಪಾಠಃ ॥

**ಪಥಃऽಪಥಃ । ಪರಿऽಪತಿಂ । ವಚಸ್ಯಾ । ಕಾಮೇನ । ಕೃತಃ । ಅಭಿ । ಆನಟ್ । ಅರ್ಕಂ ।**
**ಸಃ । ನಃ । ರಾಸತ್ । ಶುರುಧಃ । ಚಂದ್ರऽಅಗ್ರಾಃ । ಧಿಯಂऽಧಿಯಂ । ಸೀಸಧಾತಿ । ಪ್ರ । ಪೂಷಾ ॥ ೮ ॥**

॥ ಸಾಯಣಭಾಷ್ಯಂ ॥

ಏಕಾದಶಿನೇ ಪೌಷ್ಣೇ ಪಶೌ ಪಥಸ್ಪಥ ಇತಿ ಹವಿಷೋ ಯಾಜ್ಯಾ । ಸೂತ್ರಿತಂ ಚ । ಪಥಸ್ಪಥಃ ಪರಿಪತಿಂ ವಚಸ್ಯಾ ಬೃಹಸ್ಪತೇ ಯಾ ಪರಮಾ ಪರಾವದಿತಿ । ಆ ೩-೭ । ಇತಿ ॥

ಪಥಸ್ಪಥಃ ಸರ್ವಸ್ಯ ಮಾರ್ಗಸ್ಯ ಪರಿಪತಿಮಧಿಪತಿಮರ್ಕಮರ್ಚನೀಯಂ ಪೂಷಣಂ ಕಾಮೇನ ಕಾಮ್ಯಮಾನೇನ ಫಲೇನ ಕೃತೋ ವಶೀಕೃತಃ ಸ್ತೋತಾ ವಚಸ್ಯಾ ಸ್ತುತ್ಯಾಭ್ಯಾನಟ್ । ಅಭ್ಯಶ್ನುತಾಂ । ಪ್ರಾಪ್ನೋತು । ಸ ಚ ಪೂಷಾ ನೋऽಸ್ಮಭ್ಯಂ ಶುರುಧಃ ಶುಚೋ ರೋಧಯಿತ್ರೀರ್ಗಾಶ್ಚಂದ್ರಾಗ್ರಾಃ । ಚಂದ್ರಮಿತಿ ಹಿರಣ್ಯನಾಮ । ಹಿರಣ್ಯಪ್ರಮುಖಾ ಯದ್ವಾ ಸ್ವರ್ಣಶೃಂಗಾ ರಾಸತ್ । ದದಾತು ॥ ರಾ ದಾನೇ । ಅಸ್ಮಾಲ್ಲೋಟಿ ರೂಪಂ ॥ ತಥಾ ಧಿಯಂ ಧಿಯಂ ಸರ್ವಮಸ್ಮದೀಯಂ ಕರ್ಮ ಸ ಪೂಷಾ ಪ್ರ ಸೀಷಧಾತಿ । ಪ್ರಸಾಧಯತು ॥

॥ ಪ್ರತಿಪದಾರ್ಥ ॥

**ಪಥಸ್ಪಥಃ**—ಸಕಲ ಮಾರ್ಗಗಳಿಗೂ । **ಪರಿಪತಿಂ**—ಉತ್ತಮವಾದ ಪಾಲಕನೂ । **ಅರ್ಕಂ**—ಪೂಜ್ಯನೂ ಆದ ಪೂಷದೇವನನ್ನು । **ಕಾಮೇನ**—ಫಲಪ್ರಾಪ್ತಿಯ ಆಸೆಯಿಂದ । **ಕೃತಃ**—ತನ್ನ ವಶಮಾಡಿಕೊಂಡ ಸ್ತೋತೃವು । **ವಚಸ್ಯಾ**—ತನ್ನ ಸ್ತುತಿಯಿಂದ । **ಅಭ್ಯಾನಟ್**—ಸಮೀಪಿಸಿ ಅವನನ್ನು ಹೊಂದಲಿ । **ಸಃ ಪೂಷಾ**—ಅದೇ ಪೂಷದೇವನು । **ನಃ**—ನಮಗೆ । **ಚಂದ್ರಾಗ್ರಾಃ**—ಸುವರ್ಣಮಯವಾದ ಶೃಂಗಗಳುಳ್ಳ । **ಶುರುಧಃ**—ಗೋವುಗಳನ್ನು । **ರಾಸತ್**—ಕೊಡಲಿ । **ಧಿಯಂಧಿಯಂ**—ನಮ್ಮ ಸಕಲ ಕರ್ಮಗಳನ್ನೂ । **ಪ್ರಸೀಷಧಾತಿ**—ಪೂರ್ಣವಾಗಿ ಅಲಂಕರಿಸಲಿ (ಸಫಲಗೊಳಿಸಲಿ).

॥ ಭಾವಾರ್ಥ ॥

ಸಕಲ ಮಾರ್ಗಗಳಿಗೂ ಉತ್ತಮವಾದ ಪಾಲಕನೂ, ಪೂಜ್ಯನೂ ಆದ ಪೂಷದೇವನನ್ನು ಫಲಪ್ರಾಪ್ತಿಯ ಆಸೆಯಿಂದ ತನ್ನ ವಶಮಾಡಿಕೊಂಡ ಸ್ತೋತೃವು ತನ್ನ ಸ್ತುತಿಯಿಂದ ಸಮೀಪಿಸಿ ಅವನನ್ನು ಹೊಂದಲಿ. ಅದೇ ಪೂಷದೇವನು ನಮಗೆ ಸುವರ್ಣಮಯವಾದ ಶೃಂಗಗಳುಳ್ಳ ಗೋವುಗಳನ್ನು ಕೊಡಲಿ. ನಮ್ಮ ಸಕಲ ಕರ್ಮಗಳನ್ನೂ ಪೂರ್ಣವಾಗಿ ಅಲಂಕರಿಸಲಿ.

## English Translation.

May (the worshipper), influenced by the hope (of reward), approach with praise the adorable (Pushan), protector of all paths: may he bestow upon us cows with golden horns: may Pushan bring to perfection our every rite.

॥ ವಿಶೇಷವಿಷಯಗಳು ॥

**ಏಕಾದಶಿನ್** ಎಂಬ ಇಷ್ಟಿಯಲ್ಲಿ ಪೂಷದೇವತಾಕವಾದ ಪಶುಹೋಮದಲ್ಲಿ ಹವಿಸ್ಸನ್ನು ಹೋಮಮಾಡುವಾಗ **ಪಥಸ್ಪಥಃ** ಎಂಬ ಈ ಋಕ್ಕನ್ನು ಯಾಜ್ಯಾಮಂತ್ರವನ್ನಾಗಿ ಪಠಿಸಬೇಕೆಂದು ಆಶ್ವಲಾಯನಶ್ರೌತಸೂತ್ರದ **ಪಥಸ್ಪಥಃ ಪರಿಪತಿಂ ವಚಸ್ಯಾ ಬೃಹಸ್ಪತೇ ಯಾ ಪರಮಾ ಪರಾವದಿತಿ ದ್ವೇ** ಎಂಬ ಸೂತ್ರದಿಂದ (ಆ. ೩-೭) ವಿವೃತವಾಗಿರುವುದು.

ಈ ಋಕ್ಕಿಗೆ ಯಾಸ್ಕರು ನಿರ್ವಚನವನು ಹೇಳಿದಾರೆ—

> **ಪಥಸ್ಪಥೋಽಧಿಪತಿಂ ವಚನೇನ ಕಾಮೇನ ಕೃತೋಽಭ್ಯಾನಡರ್ಕಮಭ್ಯಾಪನ್ನೋಽರ್ಕಮಿತಿ ವಾ ಸ ನೋ ದದಾತು ಚಾಯನೀಯಾಗ್ರಾಣಿ ಧನಾನಿ ಕರ್ಮಕರ್ಮ ಚ ನಃ ಪ್ರಸಾಧಯತು ಪೂಷೇತಿ ॥**

(ನಿ. ೧೨-೧೮)

ಪೂಷನೆಂಬ ಈ ದೇವನು ಸಮಸ್ತಮಾರ್ಗಗಳಿಗೂ ಅಧಿಪತಿಯು, ಸಮಸ್ತರಿಂದಲೂ ಪೂಜನೀಯನು. ಇಂತಹ ದೇವನನ್ನು ಸ್ತೋತೃವು ತನ್ನ ಇಷ್ಟಾರ್ಥಗಳ ಪ್ರಾಪ್ತಿಗಾಗಿ ಸ್ತೋತ್ರದಿಂದ ಸಮೀಪಿಸಲಿ ಎಂದರೆ ಸ್ತುತಿಸಲಿ. ಆ ದೇವನು

ಪ್ರತಿಕರ್ಮದಲ್ಲಿಯೂ ಎಂದರೆ ಯಜ್ಞಯಾಗಾದಿ ಸಮಸ್ತಕರ್ಮಗಳಲ್ಲಿಯೂ ನಾನಾವಿಧವಾದವೂ, ಶ್ರೇಷ್ಠವಾದವೂ ಆದ ಧನಗಳನ್ನು ನಮಗೆ ಕೊಡಲಿ ಮತ್ತು ಅನುಗ್ರಹಿಸಲಿ ಎಂದು ನಿರ್ವಚನದ ಮುಖ್ಯಾಭಿಪ್ರಾಯವು.

|| ಸಂಹಿತಾಪಾಠಃ ||

ಪ್ರಥಮಭಾಜಂ ಯಶಸಂ ವಯೋಧಾಂ ಸುಪಾಣಿಂ ದೇವಂ ಸುಗಭಸ್ತಿ-
ಮೃಭ್ವಂ ।
ಹೋತಾ ಯಕ್ಷದ್ಯಜತಂ ಪಸ್ತ್ಯಾನಾಮಗ್ನಿಸ್ತ್ವಷ್ಟಾರಂ ಸುಹವಂ ವಿಭಾವಾ ||

|| ಪದಪಾಠಃ ||

ಪ್ರಥಮಽಭಾಜಂ । ಯಶಸಂ । ವಯಃಽಧಾಂ । ಸುಽಪಾಣಿಂ । ದೇವಂ । ಸುಽಗಭಸ್ತಿಂ । ಋಭ್ವಂ ।
ಹೋತಾ । ಯಕ್ಷತ್ । ಯಜತಂ । ಪಸ್ತ್ಯಾನಾಂ । ಅಗ್ನಿಃ । ತ್ವಷ್ಟಾರಂ । ಸುಽಹವಂ । ವಿಭಾಽವಾ || ೯ ||

|| ಸಾಯಣಭಾಷ್ಯಂ ||

ತ್ವಾಷ್ಟ್ರೇ ಪಶೌ ಪ್ರಥಮಭಾಜಮಿತಿ ಹವಿಷೋ ಯಾಜ್ಯಾ । ಸೂತ್ರಿತಂ ಚ । ಪ್ರಥಮಭಾಜಂ ಯಶಸಂ ವಯೋಧಾಂ ಸೋಮಾಪೂಷಣಾ ಜನನಾ ರಯೀಣಾಂ । ಆ. ೩-೮ । ಇತಿ ||

ಪ್ರಥಮಭಾಜಂ ಪ್ರಥಮ ಉತ್ಪತ್ತಿಕಾಲ ಏವ ವಿಭಕ್ತಾರಂ ಜಂತೂನಾಂ। ಯಾವಚ್ಛೋ ವೈ ರೇತಸಃ ಸಿಕ್ತಸ್ಯ ತ್ವಷ್ಟಾ ರೂಪಾಣಿ ವಿಕರೋತಿ ತಾವಚ್ಛೋ ವೈ ತತ್ಪ್ರಜಾಯತೆ । ತೈ. ಸಂ. ೧-೫-೯-೧ । ಇತಿ ಶ್ರುತೇಃ। ಯಶಸಂ ಯಶಸ್ವಿನಂ ವಯೋಧಾಂ ವಯಸೋಽನ್ನಸ್ಯ ಹವಿರ್ಲಕ್ಷಣಸ್ಯ ಧಾತಾರಂ ಧಾರಯಿತಾರಂ ಯದ್ವಾ ಸ್ತೋತೃಭ್ಯೋಽನ್ನಪ್ರದಂ ಸುಪಾಣಿಂ। ಹಸ್ತಸ್ಯ ಮಣಿಬಂಧಾದೂರ್ಧ್ವಪ್ರದೇಶಃ ಪಾಣಿಃ। ಶೋಭನಪಾಣಿಕಂ ದೇವಂ ದಾನಾದಿಗುಣಯುಕ್ತಂ ಸುಗಭಸ್ತಿಂ। ಗಭಸ್ತಿರಿತಿ ಬಾಹುನಾಮ। ಶೋಭನದೋರ್ದಂಡಮೃಭ್ವಮುರು ಭಾಸಮಾನಂ ಮಹಾಂತಂ ವಾ ಪಸ್ತ್ಯಾನಾಂ। ಪಸ್ತ್ಯಮಿತಿ ಗೃಹನಾಮ। ತತ್ಸ್ಥಾನಾಂ ಯಜತಂ ಯಷ್ಟವ್ಯಂ। ಗೃಹಸ್ಥೈರ್ಯಜನೀಯಮಿತ್ಯರ್ಥಃ। ಸುಹವಂ ಸುಖೇನ ಹ್ವಾತುಂ ಶಕ್ಯಂ। ಏವಂಭೂತಂ ತ್ವಷ್ಟಾರಂ ಹೋತಾ ದೇವಾನಾಮಾಹ್ವಾತಾ ವಿಭಾವಾ ದೀಪ್ಯಮಾನೋಽಗ್ನಿರ್ಯಕ್ಷತ್ । ಯಜತು । ಅನೇನ ಹವಿಷಾ ಯಜತು ||

|| ಪ್ರತಿಪದಾರ್ಥ ||

**ಪ್ರಥಮಭಾಜಂ**—ಉತ್ಪತ್ತಿಕಾಲದಲ್ಲಿಯೇ ಸಕಲ ಜಂತುಗಳ ವಿಭಾಗಗಳನ್ನೂ ಕಲ್ಪಿಸುವವನೂ। **ಯಶಸಂ**—ಕೀರ್ತಿದಾಯಕವಾದ ಕರ್ಮವುಳ್ಳವನೂ। **ವಯೋಧಾಂ**—ಅನ್ನದಾತನೂ। **ಸುಪಾಣಿಂ**—ಶ್ರೇಷ್ಠವಾದ ಪಾಣಿಗಳುಳ್ಳವನೂ। **ದೇವಂ**—ದೇವತಾತ್ಮನೂ। **ಸುಗಭಸ್ತಿಂ**—ಉತ್ತಮವಾದ ಬಾಹುಗಳುಳ್ಳವನೂ।

**ಋಭ್ವಂ**—ಅತಿಶಯವಾದ ಪ್ರಕಾಶವುಳ್ಳವನೂ । **ಪಸ್ತ್ಯಾನಾಂ**—ಗೃಹಸ್ಥರಾದ ಯಜಮಾನರಿಗೆಲ್ಲಾ । **ಯಜತಂ**—ಪೂಜ್ಯನೂ । **ಸುಹವಂ**—ಉತ್ತಮವಾದ ಆಹ್ವಾನವುಳ್ಳವನೂ ಆದ । **ತ್ವಷ್ಟಾರಂ**—ತ್ವಷ್ಟೃದೇವನನ್ನು । **ಹೋತಾ**—ದೇವತೆಗಳನ್ನು ಕರೆಯತಕ್ಕವನೂ । **ವಿಭಾವಾ**—ಅತಿಶಯವಾದ ಪ್ರಭೆಯುಳ್ಳವನೂ ಆದ । **ಅಗ್ನಿಃ**—ಅಗ್ನಿಯು । **ಯಕ್ಷತ್**—ಪೂಜಿಸಲಿ.

॥ ಭಾವಾರ್ಥ ॥

ಉತ್ಪತ್ತಿಕಾಲದಲ್ಲಿಯೇ ಸಕಲ ಜಂತುಗಳ ವಿಭಾಗಗಳನ್ನೂ ಕಲ್ಪಿಸುವವನೂ, ಕೀರ್ತಿದಾಯಕವಾದ ಕರ್ಮವುಳ್ಳವನೂ, ಅನ್ನದಾತನೂ, ಶ್ರೇಷ್ಠವಾದ ಪಾಣಿಗಳುಳ್ಳವನೂ, ಅತಿಶಯವಾದ ಪ್ರಕಾಶವುಳ್ಳವನೂ, ಗೃಹಸ್ಥರಿಂದ ಯಜಮಾನರಿಗೆಲ್ಲಾ ಪೂಜ್ಯನೂ, ಉತ್ತಮವಾದ ಆಹ್ವಾನವುಳ್ಳವನೂ ಆದ ತ್ವಷ್ಟೃದೇವನನ್ನು ಯಜ್ಞಕ್ಕೆಲ್ಲಾ ದಿವ್ಯ ಹೋತೃವೂ ಅತಿಶಯವಾದ ಪ್ರಭೆಯುಳ್ಳವನೂ ಆದ ಅಗ್ನಿಯು ಪೂಜಿಸಲಿ.

## English Translation.

May the illustrious Agni, the invoker of the gods, worship (with this oblation), Twashtri, the first divider (of forms), the renowned, the giver of food, the well-handed, the vast, the adored of householders, the readily invoked.

॥ ವಿಶೇಷವಿಷಯಗಳು ॥

ತ್ವಷ್ಟೃದೇವತಾಕವಾದ ಪಶುಯಾಗದಲ್ಲಿ ಹವಿಸ್ಸನ್ನು ಹೋಮಮಾಡುವಾಗ **ಪ್ರಥಮಭಾಜಂ** ಎಂಬ ಈ ಋಕ್ಕನ್ನು ಯಾಜ್ಯಾಮಂತ್ರವನ್ನಾಗಿ ಪಠಿಸಬೇಕೆಂದು ಅಶ್ವಲಾಯನಶ್ರೌತಸೂತ್ರದ—**ಪ್ರಥಮಭಾಜಂ ಯಶಸಂ ವಯೋಧಾಂ ಸೋಮಾಪೂಷಣಾ ಜನನಾ ರಯೀಣಾಮಿತಿ ಸೂಕ್ತಂ** ಎಂಬ ಸೂತ್ರದಿಂದ (ಆ. ೩-೮) ವಿವೃತವಾಗಿರುವುದು.

। ಸಂಹಿತಾಪಾಠಃ ।

ಭುವನಸ್ಯ ಪಿತರಂ ಗೀರ್ಭಿರಾಭೀ ರುದ್ರಂ ದಿವಾ ವರ್ಧಯಾ ರುದ್ರಮಕ್ತೌ ।
ಬೃಹಂತಮೃಷ್ವಮಜರಂ ಸುಷುಮ್ನಮೃಧಗ್ಘುವೇಮ ಕವಿನೇಷಿತಾಸಃ ॥ ೧೦ ॥

॥ ಪದಪಾಠಃ ॥

ಭುವನಸ್ಯ । ಪಿತರಂ । ಗೀಃಽಭಿಃ । ಆಭಿಃ । ರುದ್ರಂ । ದಿವಾ । ವರ್ಧಯ । ರುದ್ರಂ । ಅಕ್ತೌ ।
ಬೃಹಂತಂ । ಋಷ್ವಂ । ಅಜರಂ । ಸುಽಸುಮ್ನಂ । ಋಧಕ್ । ಹುವೇಮ । ಕವಿನಾ । ಇಷಿತಾಸಃ ॥ ೧೦ ॥

॥ ಸಾಯಣಭಾಷ್ಯಂ ॥

ಭುವನಸ್ಯ ಭೂತಜಾತಸ್ಯ ಪಿತರಂ ಪಾಲಯಿತಾರಂ ರುದ್ರಂ । ರುದ್ದುಃಖಂ । ತದ್ದ್ರಾವಯಿತಾರಮೀಶ್ವರಮಾಭಿರ್ಗೀರ್ಭಿಃ ಸ್ತುತಿಭಿರ್ದಿವಾಹನಿ ಹೇ ಸ್ತೋತರ್ವರ್ಧಯ । ಅಕ್ತೌ ರಾತ್ರ್ಯಾಂ ಚ ತಮೇವ ರುದ್ರಂ ಸ್ತುತಿಭಿರ್ವರ್ಧಯ । ವಯಂ ಚ ಕವಿನಾ ಪ್ರಾಜ್ಞೇನ ರುದ್ರೇಣೇಷಿತಾಸಃ ಪ್ರೇರಿತಾಃ ಸಂತೋ ಬೃಹಂತಂ ಮಹಾಂತಮೃಷ್ವಂ ದರ್ಶನೀಯಮಜರಂ ಜರಾರಹಿತಂ ಸುಷುಮ್ನಂ ಶೋಭನಸುಖಮೇವಂಗುಣವಿಶಿಷ್ಟಂ ರುದ್ರಮೃಧಕ್ ಋದ್ಧಂ ಸಮೃದ್ಧಂ ಯಥಾ ಭವತಿ ತಥಾ ಹುವೇಮ । ಸ್ತವಾಮ ॥

॥ ಪ್ರತಿಪದಾರ್ಥ ॥

(ಎಲೈ ಸ್ತೋತೃವೇ) । **ಭುವನಸ್ಯ**—ಸಕಲ ಭೂತಜಾತಗಳಿಗೂ । **ಪಿತರಂ**—ಪಾಲಕನಾದ । **ರುದ್ರಂ**—ರುದ್ರನನ್ನು । **ಆಭಿಃ ಗೀರ್ಭಿಃ**—ಈ ಸ್ತುತಿಗಳಿಂದ । **ದಿವಾ**—ಅಹಸ್ಸುಗಳಲ್ಲಿ । **ವರ್ಧಯ**—ವೃದ್ಧಿಯನ್ನು ಹೊಂದುವಂತೆ ಮಾಡು । **ಅಕ್ತೌ**—ರಾತ್ರಿಕಾಲಗಳಲ್ಲಿಯೂ । **ರುದ್ರಂ**—ಅದೇ ರುದ್ರನನ್ನು (ವೃದ್ಧಿಯನ್ನು ಹೊಂದುವಂತೆ ಮಾಡು) । **ಕವಿನಾ**—ಪ್ರಾಜ್ಞನಾದ ರುದ್ರನಿಂದಲೇ । **ಇಷಿತಾಸಃ**—ಪ್ರೇರಿತರಾಗಿ । **ಬೃಹಂತಂ**—ಮಹತ್ಸ್ವರೂಪವುಳ್ಳವನೂ । **ಋಷ್ವಂ**—ದರ್ಶನೀಯವಾದ ರೂಪವುಳ್ಳವನೂ । **ಅಜರಂ**—ಕ್ಷಯರಹಿತನೂ । **ಸುಷುಮ್ನಂ**—ಶ್ರೇಷ್ಠವಾದ ಗುಣಗಳುಳ್ಳವನೂ ಆದ ಅದೇ ರುದ್ರನನ್ನು । **ಋಧಕ್**—ಸಮೃದ್ಧನಾಗುವಂತೆ । **ಹುವೇಮ**—ನಾವು ಸ್ತುತಿಸೋಣ.

॥ ಭಾವಾರ್ಥ ॥

ಎಲೈ ಸ್ತೋತೃವೇ, ಸಕಲ ಭೂತಾಜಾತಗಳಿಗೂ ಪಾಲಕನಾದ ರುದ್ರನನ್ನು ಈ ಸ್ತುತಿಗಳಿಂದ ಅಹಸ್ಸುಗಳಲ್ಲಿ ವೃದ್ಧಿಯನ್ನು ಹೊಂದುವಂತೆ ಮಾಡು. ರಾತ್ರಿಕಾಲಗಳಲ್ಲಿಯೂ ವೃದ್ಧಿಯನ್ನು ಹೊಂದುವಂತೆ ಮಾಡು. ಪ್ರಾಜ್ಞನಾದ ರುದ್ರನಿಂದಲೇ ಪ್ರೇರಿತರಾಗಿ ಮಹತ್ಸ್ವರೂಪವುಳ್ಳವನೂ, ದರ್ಶನೀಯವಾದ ರೂಪವುಳ್ಳವನೂ, ಕ್ಷಯರಹಿತನೂ, ಶ್ರೇಷ್ಠವಾದ ಗುಣಗಳುಳ್ಳವನೂ ಆದ ಅದೇ ರುದ್ರನನ್ನು ಸಮೃದ್ಧವಾಗುವಂತೆ ನಾವು ಸ್ತುತಿಸೋಣ.

English Translation.

Exalt Rudra, the parent of the world, with these hymns by day ; (exalt) Rudra (with them) by night ; animated by the far-seeing, we invoke him, mighty, of pleasing aspect, undecaying, endowed with felicity, (the source of) prosperity.

॥ ಸಂಹಿತಾಪಾಠಃ ॥

ಆ ಯುವಾನಃ ಕವಯೋ ಯಜ್ಞಿಯಾಸೋ ಮರುತೋ ಗಂತ ಗೃಣತೋ ವರಸ್ಯಾಂ ।

ಅಚಿತ್ರಂ ಚಿದ್ಧಿ ಜಿನ್ವಥಾ ವೃಧಂತ ಇತ್ಥಾ ನಕ್ಷಂತೋ ನರೋ ಅಂಗಿರಸ್ವತ್॥

॥ ಪದಪಾಠಃ ॥

ಆ । ಯುವಾನಃ । ಕವಯಃ । ಯಜ್ಞಿಯಾಸಃ । ಮರುತಃ । ಗಂತ । ಗೃಣತಃ । ವರಸ್ಯಾಂ ।

ಅಚಿತ್ರಂ । ಚಿತ್ । ಹಿ । ಜಿನ್ವಥ । ವೃಧಂತಃ । ಇತ್ಥಾ । ನಕ್ಷಂತಃ । ನರಃ । ಅಂಗಿರಸ್ವತ್ ॥ ೧೧ ॥

॥ ಸಾಯಣಭಾಷ್ಯಂ ॥

**ಹೇ ಯುವಾನೋ ನಿತ್ಯತರುಣಾಃ ಕವಯಃ ಪ್ರಾಜ್ಞಾ ಯಜ್ಞಿಯಾಸೋ ಯಜ್ಞಾರ್ಹಾ ಏವಂಭೂತಾ ಹೇ ಮರುತೋ ಗೃಣತಃ ಸ್ತುವತೋ ವರಸ್ಯಾಂ ವರಣೀಯಾಂ ಸ್ತುತಿಂ ಪ್ರತ್ಯಾ ಗಂತ । ಆಗಚ್ಛತ । ಅಪಿ ಚ ಹೇ ನರೋ ನೇತಾರೋ ಮರುತ ಇತ್ಥೇತ್ಥಮನೇನ ಪ್ರಕಾರೇಣ ವೃಧಂತೋ ವರ್ಧಮಾನಾಃ । ಯದ್ವಾ । ಇತ್ಥಾಮುತ್ರಾಂತರಿಕ್ಷೇ ನಕ್ಷಂತೋ ವ್ಯಾಪ್ನುವಂತೋಽಂಗಿರಸ್ವತ್ । ಅಂಗಿರಸೋ ಗಮನಶೀಲಾ ರಶ್ಮಯಃ । ತೇ ಯಥಾ ಶೀಘ್ರಂ ನಭಸ್ತಲಂ ವ್ಯಾಪ್ನುವಂತಿ ತದ್ವತ್ । ಯದ್ವಾ । ಋಷಯ ಏವಾಂಗಿರಸಃ । ತದ್ವಚ್ಛೀಘ್ರಗಾಮಿನಃ । ಏವಂಭೂತಾ ಯೂಯಮಚಿತ್ರಂ ಚಿತ್ । ಓಷಧಿವನಸ್ಪತಿಭಿರ್ನಿ- ರ್ವಿಡೋ ದೇಶಶ್ಚಿತ್ರಂ । ತದ್ವಿಲಕ್ಷಣಮೋಷಧ್ಯಾದಿಭಿರ್ವಿಯುಕ್ತಮಪಿ ದೇಶಂ ಜಿನ್ವಥ । ವೃಷ್ಟ್ಯಾ ತರ್ಪಯಥ। ಹೀತಿ ಪೂರಣಃ ॥**

॥ ಪ್ರತಿಪದಾರ್ಥ ॥

**ಯುವಾನಃ**—ನಿತ್ಯತರುಣರೂ । **ಕವಯಃ**—ಪ್ರಾಜ್ಞರೂ । **ಯಜ್ಞಿಯಾಸಃ**—ಯಜ್ಞಾರ್ಹರೂ ಆದ । **ಮರುತಃ**—ಎಲೈ ಮರುತ್ತುಗಳೇ । **ಗೃಣತಃ**—ಸ್ತುತಿಕರ್ತನ । **ವರಸ್ಯಾಂ**—ಪೂಜ್ಯವಾದ ಸ್ತುತಿಗಭಿ ಮುಖವಾಗಿ । **ಆ ಗಂತ**—ದಯಮಾಡಿರಿ । **ನರಃ**—ನೇತೃಗಳಾದ ಎಲೈ ಮರುತ್ತುಗಳೇ । **ಇತ್ಥಾ**—ಈ ಪ್ರಕಾರವಾಗಿ । **ವೃಧನ್ತಃ**—ವೃದ್ಧಿಯನ್ನು ಹೊಂದುವ ನೀವು । **ನಕ್ಷಂತಃ**—ಸಕಲ ಪ್ರದೇಶಗಳನ್ನೂ ವ್ಯಾಪಿಸು ತ್ತಲೂ । **ಅಂಗಿರಸ್ವತ್**—ರಶ್ಮಿಗಳಂತೆ ವೇಗಗಾಮಿಗಳಾಗಿಯೂ ಇದ್ದು । **ಅಚಿತ್ರಂ ಚಿತ್**—ಓಷಧ್ಯಾದಿರಹಿತ ವಾದ ಪ್ರದೇಶಗಳನ್ನೂ ಸಹ । **ಜಿನ್ವಥ ಹಿ**—ವೃಷ್ಟಿಯಿಂದ ಸಂತೋಷಪಡಿಸಿರಿ.

॥ ಭಾವಾರ್ಥ ॥

ನಿತ್ಯ ತರುಣರೂ, ಪ್ರಾಜ್ಞರೂ, ಯಜ್ಞಾರ್ಹರೂ ಆದ ಎಲೈ ಮರುತ್ತುಗಳೇ, ಸ್ತುತಿಕರ್ತನ ಪೂಜ್ಯವಾದ ಸ್ತುತಿಗಭಿಮುಖವಾಗಿ ದಯಮಾಡಿರಿ. ನೇತೃಗಳಾದ ಎಲೈ ಮರುತ್ತುಗಳೇ, ಈ ಪ್ರಕಾರವಾಗಿ ವೃದ್ಧಿಯನ್ನು ಹೊಂದುವ ನೀವು ಸಕಲ ಪ್ರದೇಶಗಳನ್ನೂ ವ್ಯಾಪಿಸುತ್ತಲೂ, ರಶ್ಮಿಗಳಂತೆ ವೇಗಗಾಮಿಗಳಾಗಿಯೂ ಇದ್ದು ಓಷಧ್ಯಾದಿರಹಿತವಾದ ಪ್ರದೇಶಗಳನ್ನೂ ಸಹ ವೃಷ್ಟಿಯಿಂದ ಸಂತೋಷಪಡಿಸಿರಿ.

## English Translation.

Ever youthful, wise, and adorable Muruts, come to the praise of your adorer : thus augmenting, leaders (of rites), and spreading (through the firmament), like rays (of light) refresh the scanty woods (with rain).

॥ ಸಂಹಿತಾಪಾಠಃ ॥

ಪ್ರ ವೀರಾಯ ಪ್ರ ತವಸೇ ತುರಾಯಾಜಾ ಯೂಥೇವ ಪಶುರಕ್ಷಿರಸ್ತಂ ।
ಸ ಪಿಸ್ಪೃಶತಿ ತನ್ವಿ ಶ್ರುತಸ್ಯ ಸ್ತೃಭಿರ್ನ ನಾಕಂ ವಚನಸ್ಯ ವಿಪಃ ॥ ೧೨ ॥

॥ ಪದಪಾಠಃ ॥

ಪ್ರ । ವೀರಾಯ । ಪ್ರ । ತವಸೇ । ತುರಾಯ । ಅಜ । ಯೂಥಾऽಇವ । ಪಶುऽರಕ್ಷಿಃ । ಅಸ್ತಂ ।
ಸಃ । ಪಿಸ್ಪೃಶತಿ । ತನ್ವಿ । ಶ್ರುತಸ್ಯ । ಸ್ತೃऽಭಿಃ । ನ । ನಾಕಂ । ವಚನಸ್ಯ । ವಿಪಃ ॥ ೧೨ ॥

॥ ಸಾಯಣಭಾಷ್ಯಂ ॥

ವೀರಾಯ ವಿಕ್ರಾಂತಾಯ ವಿವಿಧಂ ಶತ್ರೂಣಾವಿೀರಕಾಯ ವಾ ಮರುದ್ಗಣಾಯ ಪ್ರಾಜ । ಹೇ ಸ್ತೋತಃ ಸ್ತುತಿಂ ಪ್ರಗಮಯ । ತಥಾ ತವಸೇ ಬಲಿನೇ ತುರಾಯ ಕ್ಷಿಪ್ರಗಮನಾಯ ಚ ತಸ್ಮೈ ಗಣಾಯ ಪ್ರಾಜ । ತತ್ರ ದೃಷ್ಟಾಂತಃ । ಪಶುರಕ್ಷಿಃ ಪಶುಪಾಲಕೋ ಯೂಥೇವ । ಸ ಯಥಾ ಗೋಯೂಥಾನಿ ಸಾಯಂಕಾಲೇऽಸ್ತಂ ಗೃಹಂ ಶೀಘ್ರಂ ಗಮಯತಿ ತದ್ವತ್ ಶೀಘ್ರಂ ಸ್ತುತಿಂ ಪ್ರೇರಯೇತ್ಯರ್ಥಃ । ಸ ಚ ಮರುದ್ಗಣೋ ವಚನಸ್ಯ ವಕ್ತುರ್ವಿಪೋ ವಿಪ್ರಸ್ಯ ಮೇಧಾವಿನಃ ಸ್ತೋತುಃ ಶ್ರುತಸ್ಯ ॥ ಕ್ರಿಯಾಗ್ರಹಣಮಪಿ ಕರ್ತವ್ಯಮಿತಿ ಕರ್ಮಣಃ ಸಂಪ್ರದಾನತ್ವಾಚ್ಚತುರ್ಥ್ಯರ್ಥೇ ಷಷ್ಠೀ ॥ ಶ್ರುತಂ ಶ್ರೋತವ್ಯಂ ಸ್ತೋತ್ರಂ ತನ್ವ್ಯಾತ್ಮೀಯೇ ಶರೀರೇ ಪಿಸ್ಪೃಶತಿ । ಸ್ಪರ್ಶಯತು । ಸಂಶ್ಲೇಷಯತು । ತತ್ಸ್ತೋತ್ರಂ ಹೃದ್ಗತಂ ಭವತ್ವಿತ್ಯರ್ಥಃ । ಸ್ಪರ್ಶನೇ ದೃಷ್ಟಾಂತಃ । ಸ್ತೃಭಿರ್ನ ನಾಕಂ । ಯಥಾ ನಕ್ಷತ್ರೈರ್ನಾಕಮಂತರಿಕ್ಷಂ ಸ್ಪರ್ಶಯತಿ ಸಂಶ್ಲೇಷಯತಿ ತದ್ವತ್ ॥

॥ ಪ್ರತಿಪದಾರ್ಥ ॥

(ಎಲೈ ಸ್ತುತಿಕರ್ತನೇ) **ವೀರಾಯ**—ಪರಾಕ್ರಮಿಗಳಾದ ಮರುತ್ತುಗಳ ಸಂಘಕ್ಕೆ । **ಪ್ರ ಅಜ**—ಸ್ತುತಿಯನ್ನು ಅರ್ಪಿಸು । **ತವಸೇ**—ಬಲಶಾಲಿಯಾದುದೂ । **ತುರಾಯ**—ವೇಗಗಾಮಿಯಾದುದೂ ಆದ ಮರುತ್ಸಂಘಕ್ಕೆ । **ಪಶುರಕ್ಷಿಃ**—ಪಶುಪಾಲಕನು । **ಅಸ್ತಂ**—ಕೊಟ್ಟಿಗೆಗೆ । **ಯೂಥೇವ**—ಪಶುಗಳನ್ನು ಕಳುಹುವಂತೆ । **ಪ್ರ (ಅಜ)**—ಸ್ತುತಿಗಳನ್ನು ಶೀಘ್ರವಾಗಿ ಅರ್ಪಿಸು । **ನಾಕಂ**—ಅಂತರಿಕ್ಷವು । **ಸ್ತೃಭಿಃ ನ**—ನಕ್ಷತ್ರಗಳಿಂದ

ವ್ಯಾಪ್ತವಾಗಿ ಕಂಗೊಳಿಸುವಂತೆ । **ಸಃ**—ಅದೇ ಮರುದ್ಗಣವು । **ವಚನಸ್ಯ**—ಸ್ತುತಿಪಾಠಕನೂ । **ವಿಪಃ**—ಮೇಧಾವಿಯೂ ಆದ ಸ್ತುತಿಕರ್ತನ । **ಶ್ರುತಸ್ಯ**—ಪ್ರಶಸ್ಯವಾದ ಸ್ತೋತ್ರವನ್ನು । **ತನ್ವಿ**—ತನ್ನ ಶರೀರಾದ್ಯಂತವಾಗಿ । **ವಿಸ್ಪೃಶತಿ**—ಸ್ಪರ್ಶಿಸಿ ಪೂರ್ಣವಾಗಿ ಸಂತೋಷಪಡಲಿ.

॥ ಭಾವಾರ್ಥ ॥

ಎಲೈ ಸ್ತುತಿಕರ್ತನೇ, ಪರಾಕ್ರಮಿಗಳಾದ ಮರುತ್ತುಗಳ ಸಂಘಕ್ಕೆ ಸ್ತುತಿಯನ್ನರ್ಪಿಸು. ಬಲಶಾಲಿಯಾದುದೂ, ವೇಗಗಾಮಿಯಾದುದೂ ಆದ ಮರುತ್ಸಂಘಕ್ಕೆ ಪಶುಪಾಲಕನು ಕೊಟ್ಟಿಗೆಗೆ ಪಶುಗಳನ್ನು ಕಳುಹುವಂತೆ ಸ್ತುತಿಗಳನ್ನು ಶೀಘ್ರವಾಗಿ ಅರ್ಪಿಸು. ಅಂತರಿಕ್ಷವು ನಕ್ಷತ್ರಗಳಿಂದ ವ್ಯಾಪ್ತವಾಗಿ ಕಂಗೊಳಿಸುವಂತೆ ಅದೇ ಮರುದ್ಗಣವು ಸ್ತುತಿ ಪಾಠಕನೂ ಮೇಧಾವಿಯೂ ಆದ ಸ್ತುತಿಕರ್ತನ ಪ್ರಶಸ್ಯವಾದ ಸ್ತೋತ್ರವನ್ನು ತನ್ನ ಶರೀರಾದ್ಯಂತವಾಗಿ ಸ್ಪರ್ಶಿಸಿ ಪೂರ್ಣವಾಗಿ ಸಂತೋಷಪಡಲಿ.

## English Translation.

Offer adoration to the valiant, powerful, swift-moving (company of the Maruts), as the herdsman (drives his) herd to their stall ; may that company appropriate to its own body the praises of the pious worshipper, as the firmament (is studded) with stars.

॥ ಸಂಹಿತಾಪಾಠಃ ॥

ಯೋ ರಜಾಂಸಿ ವಿಮಮೇ ಪಾರ್ಥಿವಾನಿ ತ್ರಿಶ್ಚಿದ್ವಿಷ್ಣುರ್ಮನವೇ ಬಾಧಿತಾಯ ।
ತಸ್ಯ ತೇ ಶರ್ಮನ್ನುಪದದ್ಯಮಾನೇ ರಾಯಾ ಮದೇಮ ತನ್ವಾ೩ ತನಾ ಚ ॥

॥ ಪದಪಾಠಃ ॥

ಯಃ । ರಜಾಂಸಿ । ವಿಽಮಮೇ । ಪಾರ್ಥಿವಾನಿ । ತ್ರಿಃ । ಚಿತ್ । ವಿಷ್ಣುಃ । ಮನವೇ । ಬಾಧಿತಾಯ ।
ತಸ್ಯ । ತೇ । ಶರ್ಮನ್ । ಉಪಽದದ್ಯಮಾನೇ । ರಾಯಾ । ಮದೇಮ । ತನ್ವಾ । ತನಾ । ಚ ॥ ೧೩ ॥

॥ ಸಾಯಣಭಾಷ್ಯಂ ॥

ಯೋ ವಿಷ್ಣುರ್ಬಾಧಿತಾಯಾಸುರೈರ್ಹಿಂಸಿತಾಯ ಮನವೇ ಪ್ರಜಾಪತಯೇ ತದರ್ಥಂ ಪಾರ್ಥಿವಾನಿ ಪೃಥಿವ್ಯಾ ಸಂಬದ್ಧಾನಿ ರಜಾಂಸಿ ಲೋಕಾನ್ ತ್ರೀಽಲ್ಲೋಕಾನಿತಿ ಯಾವತ್ । ತ್ರಿರ್ವಿಮಮೇ । ಚಿದಿತ್ಯವಧಾರಣೇ । ತ್ರಿಭಿರೇವ ವಿಕ್ರಮಣೈಃ ಪರಿಮಿತವಾನ್ ಹೇ ವಿಷ್ಣೋ ತಸ್ಯ ತಾದೃಶಸ್ಯ ತೇ ತವ ॥ ತೃತೀಯಾರ್ಥೇ ಷಷ್ಠೀ ॥ ಈದೃಶೇನ ತ್ವಯೋಪದದ್ಯಮಾನೇಽಸ್ಮಭ್ಯಂ ದೀಯಮಾನೇ ಶರ್ಮನ್ ಶರ್ಮಣಿ

**ಗೃಹೇ ಸುಖೇ ವಾ ವರ್ತಮಾನಾಃ ಸಂತೋ ವಯಂ ರಾಯಾ ಧನೇನ ತನ್ವಾ ರೋಗಾದಿರಹಿತೇನ ಶರೀರೇಣ ಚ ತನಾ ತನಯೇನ ಪುತ್ರೇಣ ಚ ಮದೇಮ । ಮೋದೇಮ । ಹೃಷ್ಟಾ ಭವೇಮ ॥**

॥ ಪ್ರತಿಪದಾರ್ಥ ॥

(ಎಲೈ ವಿಷ್ಣುವೇ) । **ಯಃ ವಿಷ್ಣುಃ**—ಸರ್ವವ್ಯಾಪಕನಾದ ಯಾವ ನೀನು । **ಬಾಧಿತಾಯ**—ಅಸುರನಿಂದ ಹಿಂಸಿಸಲ್ಪಟ್ಟ । **ಮನವೇ**—ಮನುವಿಗಾಗಿ । **ಪಾರ್ಥಿವಾನಿ**—ಪೃಥ್ವಿಯೊಡನೆ ಸಂಬಂಧಿಸಿದ । **ರಜಾಂಸಿ**—ಲೋಕಗಳನ್ನೆಲ್ಲಾ । **ತ್ರಿಃ ವಿಮಮೇ ಚಿತ್**—ಮೂರು ಭಾಗವಾಗಿ ನಿಷ್ಕರ್ಷಿಸಿದೆಯೋ । **ತಸ್ಯ ತೇ**—ಅಂತಹ ನಿನ್ನಿಂದ । **ಉಪದದ್ಯಮಾನೇ**—ನಮಗೆ ಕೊಡಲ್ಪಡುವ । **ಶರ್ಮನ್**—ಗೃಹಗಳಲ್ಲಿರತಕ್ಕ ನಾವು । **ರಾಯಾ**—ಧನದೊಂದಿಗೂ । **ತನ್ವಾ**—ರೋಗಾದಿರಹಿತವಾದ ಶರೀರಗಳೊಂದಿಗೂ । **ತನಾ ಚ**—ಪುತ್ರಪೌತ್ರಾದಿಗಳೊಂದಿಗೂ ಸಹ । **ಮದೇಮ**—ಹರ್ಷವನ್ನು ಹೊಂದುವಂತಾಗಲಿ.

॥ ಭಾವಾರ್ಥ ॥

ಎಲೈ ವಿಷ್ಣುವೇ, ಸರ್ವವ್ಯಾಪಕನಾದ ಯಾವ ನೀನು ಅಸುರನಿಂದ ಹಿಂಸಿಸಲ್ಪಟ್ಟ ಮನುವಿಗಾಗಿ ಪೃಥ್ವಿಯೊಡನೆ ಸಂಬಂಧಿಸಿದ ಲೋಕಗಳನ್ನೆಲ್ಲಾ ಮೂರು ಭಾಗವಾಗಿ ನಿಷ್ಕರ್ಷಿಸಿದೆಯೋ ಅಂತಹ ನಿನ್ನಿಂದ ನಮಗೆ ಕೊಡಲ್ಪಡುವ ಗೃಹಗಳಲ್ಲಿರತಕ್ಕ ನಾವು ಧನದೊಂದಿಗೂ ರೋಗಾದಿರಹಿತವಾದ ಶರೀರಗಳೊಂದಿಗೂ ಪುತ್ರಪೌತ್ರಾದಿಗಳೊಂದಿಗೂ ಸಹ ಹರ್ಷವನ್ನು ಹೊಂದುವಂತಾಗಲಿ.

## English Translation.

May we be happy in home, in riches, in person, in children, bestowed upon us by you, Vishnu, who with three (steps) made the terrestrial regions for Manu when harrassed (by the Asuras).

॥ ಸಂಹಿತಾಪಾಠಃ ॥

ತನ್ನೋಽಹಿರ್ಬುಧ್ನ್ಯೋ ಅದ್ಭಿರರ್ಕೈಸ್ತತ್ಪರ್ವತಸ್ತತ್ಸವಿತಾ ಚನೋ ಧಾತ್ ।
ತದೋಷಧೀಭಿರಭಿ ರಾತಿಷಾಚೋ ಭಗಃ ಪುರಂಧಿರ್ಜಿನ್ವತು ಪ್ರ ರಾಯೇ ॥

॥ ಪದಪಾಠಃ ॥

ತತ್ । ನಃ । ಅಹಿಃ । ಬುಧ್ನ್ಯಃ । ಅತ್ಽಭಿಃ । ಅರ್ಕೈಃ । ತತ್ । ಪರ್ವತಃ । ತತ್ । ಸವಿತಾ । ಚನಃ । ಧಾತ್ ।

ತತ್ । ಓಷಧೀಭಿಃ । ಅಭಿ । ರಾತಿಽಸಾಚಃ । ಭಗಃ । ಪುರಂಽಧಿಃ । ಜಿನ್ವತು । ಪ್ರ । ರಾಯೇ ॥ ೧೪ ॥

‖ ಸಾಯಣಭಾಷ್ಯಂ ‖

ಬುಧ್ನ್ಯಃ । ಬುಧ್ನಮಂತರಿಕ್ಷಂ । ತತ್ರ ಭವೋಽಹಿಃ । ಏತ್ಯಂತರಿಕ್ಷ ಇತ್ಯಹಿಃ । ಉಕ್ತಂ ಚ । ಅಹಿರಯನಾದೇತ್ಯಂತರಿಕ್ಷೇ । ನಿ. ೨-೧೭ । ಇತಿ । ಏತತ್ಪದದ್ವಯಾಭಿಧೇಯೋ ದೇವೋಽರ್ಕೈರರ್ಚನಸಾಧನೈರ್ಮಂತ್ರೈಃ ಸ್ತೂಯಮಾನಃ ಸನ್ ನೋಽಸ್ಮಭ್ಯಂ ತತ್ ಲೋಕೇ ಪ್ರಸಿದ್ಧಂ ಚನೋಽನ್ನಮದ್ಭಿರುದಕೈಃ ಸಾರ್ಧಂ ಧಾತ್ । ದಧಾತು । ವಿದಧಾತು । ಪ್ರಯಚ್ಛತು । ಪರ್ವತಃ ಪೂರಯಿತಾ ‖ ಪರ್ವ ಪೂರಣ ಇತಿ ಧಾತುಃ ‖ ಯದ್ವಾ । ಪರ್ವವದ್ವಜ್ರಂ ಪರ್ವತಃ । ತದ್ವಾನ್ । ಪರ್ವತಸ್ಯ ಗಿರೇಃ ಶತ್ರುರಿತಿ ವಾ ಪರ್ವತಃ । ಸ ಚ ತಚ್ಚನೋ ದಧಾತು । ತಥಾ ಸವಿತಾ ಪ್ರೇರಕೋ ದೇವಶ್ಚ ತಚ್ಚನೋ ದಧಾತು । ಅಪಿ ಚ ರಾತಿಷಾಚಃ । ರಾತಿಂ ದಾನಂ ಸಚಂತೇ ಸೇವಂತ ಇತಿ ರಾತಿಷಾಚೋ ವಿಶ್ವೇ ದೇವಾಃ । ತೇ ಚೌಷಧೀಭಿಃ । ಓಷಃ ಪಾಕ ಆಸು ಧೀಯತ ಇತ್ಯೋಷಧಯಸ್ತಿಲಮಾಷಾದ್ಯಾಃ । ತಾಭಿಃ ಸಾರ್ಧಂ ತದನ್ನಮಭಿ ಪ್ರಯಚ್ಛಂತು । ತಥಾ ಪುರಂಧಿರ್ಬಹುಧೀರ್ಬಹುಪ್ರಜ್ಞೋ ವಾ ಬಹುಕರ್ಮಾ ವಾ ಭಗೋ ಭಜನೀಯ ಏತತ್ಸಂಜ್ಞೋ ದೇವಶ್ಚ ರಾಯೇ ಧನಾರ್ಥಂ ಪ್ರ ಜಿನ್ವತು । ಅಸ್ಮಾನ್ಪ್ರೇರಯತು ‖

। ಪ್ರತಿಪದಾರ್ಥ ।

**ಅಹಿರ್ಬುಧ್ನ್ಯಃ**—ಅಹಿರ್ಬುಧ್ನ್ಯದೇವನು । **ಅರ್ಕೈಃ**—ನಮ್ಮ ಸ್ತುತಿಗಳಿಂದ ಪ್ರಶಂಸಿತನಾಗಿ । **ನಃ**—ನಮಗೆ । **ತತ್**—ಪ್ರಸಿದ್ಧವಾದ । **ಚನಃ**—ಅನ್ನವನ್ನು । **ಅದ್ಭಿಃ**—ಉದಕಗಳೊಡನೆ । **ಧಾತ್**—ಕೊಡಲಿ । **ಪರ್ವತಃ**—ಪರ್ವತದೇವನೂ । **ತತ್**—ಆ ಅನ್ನವನ್ನು ಕೊಡಲಿ । **ಸವಿತಾ**—ಸವಿತೃದೇವನೂ । **ತತ್**—ಆ ಅನ್ನವನ್ನು ಕೊಡಲಿ । **ರಾತಿಷಾಚಃ**—ಉದಾರವಾಗಿ ದಾನಮಾಡುವ ಎಲ್ಲಾ ದೇವತೆಗಳೂ । **ಓಷಧೀಭಿಃ**—ಓಷಧಿವನಸ್ಪತ್ಯಾದಿಗಳೊಡಗೂಡಿದ । **ತತ್**—ಆ ಅನ್ನವನ್ನು । **ಅಭಿ**—ನಮಗೆ ಅನುಗ್ರಹಿಸಲಿ । **ಪುರಂಧಿಃ**—ಅಧಿಕ ಪ್ರಜ್ಞೆಯುಳ್ಳ । **ಭಗಃ**—ಭಗದೇವನು । **ರಾಯೇ**—ಧನಾರ್ಥವಾಗಿ । **ಪ್ರ ಜಿನ್ವತು**—ನಮ್ಮನ್ನು ಪ್ರೇರಿಸಲಿ.

‖ ಭಾವಾರ್ಥ ‖

ಅಹಿರ್ಬುಧ್ನ್ಯದೇವನು ನಮ್ಮ ಸ್ತುತಿಗಳಿಂದ ಪ್ರಶಂಸಿತನಾಗಿ ನಮಗೆ ಪ್ರಸಿದ್ಧವಾದ ಅನ್ನವನ್ನು ಉದಕಗಳೊಡನೆ ಕೊಡಲಿ. ಪರ್ವತದೇವನೂ ಆ ಅನ್ನವನ್ನು ಕೊಡಲಿ. ಸವಿತೃದೇವನೂ ಅದನ್ನು ಅನುಗ್ರಹಿಸಲಿ. ಉದಾರವಾಗಿ ದಾನಮಾಡುವ ಎಲ್ಲಾ ದೇವತೆಗಳೂ ಓಷಧಿವನಸ್ಪತ್ಯಾದಿಗಳೊಡಗೂಡಿದ ಆ ಅನ್ನವನ್ನು ನಮಗೆ ಕೊಡಲಿ. ಅಧಿಕ ಪ್ರಜ್ಞೆಯುಳ್ಳ ಭಗದೇವನು ಧನಾರ್ಥವಾಗಿ ನಮ್ಮನ್ನು ಪ್ರೇರಿಸಲಿ

English Translation.

May Ahirbudhnya (propitiated) by (our) hymns, and Parvata and Savitri give us food with water: may the bountiful (gods supply us), in addition, with vegetable (grains); and may the all-wise Bhaga be propitious (to us) for (acquirement of) riches.

॥ ಸಂಹಿತಾಪಾಠಃ ॥

ನೂನೋ ರಯಿಂ ರಥ್ಯಂ ಚರ್ಷಣಿಪ್ರಾಂ ಪುರುವೀರಂ ಮಹ ಋತಸ್ಯ
ಗೋಪಾಂ ।
ಕ್ಷಯಂ ದಾತಾಜರಂ ಯೇನ ಜನಾನ್ತ್ಸ್ಪೃಧೋ ಅದೇವೀರಭಿ ಚ ಕ್ರಮಾ-
ಮ ವಿಶ ಆದೇವೀರಭ್ಯಶ್ನವಾಮ ॥ ೧೫ ॥

॥ ಪದಪಾಠಃ ॥

ನು । ನಃ । ರಯಿಂ । ರಥ್ಯಂ । ಚರ್ಷಣಿಽಪ್ರಾಂ । ಪುರುಽವೀರಂ । ಮಹಃ । ಋತಸ್ಯ । ಗೋಪಾಂ ।
ಕ್ಷಯಂ । ದಾತ । ಅಜರಂ । ಯೇನ । ಜನಾನ್ । ಸ್ಪೃಧಃ । ಅದೇವೀಃ । ಅಭಿ । ಚ । ಕ್ರಮಾಮ । ವಿಶಃ ।
ಆಽದೇವೀಃ । ಅಭಿ । ಅಶ್ನವಾಮ ॥ ೧೫ ॥

॥ ಸಾಯಣಭಾಷ್ಯಂ ॥

ಹೇ ಸರ್ವೇ ದೇವಾ ನೋಽಸ್ಮಭ್ಯಂ ರಯಿಂ ಧನಂ ಕ್ಷಯಂ ಗೃಹಂ ಚ ದಾತ । ಪ್ರಯಚ್ಛತ । ಕೀದೃಶಂ ರಯಿಂ । ರಥ್ಯಂ ರಥಸಂಬಂಧಿನಂ । ರಥಯುಕ್ತಮಿತ್ಯರ್ಥಃ । ಚರ್ಷಣಿಪ್ರಾಂ । ಚರ್ಷಣಯೋ ಮನುಷ್ಯಾಃ । ತೇಷಾಂ ಪೂರಯಿತಾರಂ ಪುರುವೀರಂ । ವೀರ್ಯಾಜ್ಜಾಯಂತ ಇತಿ ವೀರಾಃ ಪುತ್ರಾದಯಃ । ಬಹುಭಿರ್ವೀರೈರುಪೇತಂ । ಮಹೋ ಮಹತ ಋತಸ್ಯ ಯಜ್ಞಸ್ಯ ಗೋಪಾಂ ರಕ್ಷಕಂ । ದಕ್ಷಿಣಾರೂಪೇಣ ಧನೇನ ಹಿ ಯಜ್ಞೋ ರಕ್ಷ್ಯತೇ । ಮೃತೋ ಯಜ್ಞಸ್ತ್ವದಕ್ಷಿಣ ಇತಿ ವಚನಾತ್ । ಕೀದೃಶಂ ಕ್ಷಯಂ । ಅಜರಂ ಜರಾರಹಿತಂ । ಯೇನ ರಯಿಣಾ ಕ್ಷಯೇಣ ಚ ಜನಾನ್ ಶತ್ರೂನ್ ಸ್ಪೃಧಃ ಸ್ಪರ್ಧಮಾನಾ ಅದೇವೀರದೇವಸಂಬಂಧಿನೀರಾಸುರೀಃ ಸೇನಾಶ್ಚಾಭಿ ಕ್ರಮಾಮ ಅಭಿಭವೇಮ । ತಥಾದೇವೀಃ । ಆಗತಾ ದೇವಾ ಯಾಸು ಹವಿಃಸ್ವೀಕಾರಾರ್ಥಂ ತಾ ಆದೇವ್ಯಃ । ತಾದೃಶೀಶ್ಚ ವಿಶಃ ಪ್ರಜಾ ಯಜ್ಞಾನು-ಷ್ಠಾಯಿನೀರ್ಯೇನ ಧನೇನ ಗೃಹೇಣ ಚಾಭ್ಯಶ್ನವಾಮ ಅಭಿಪ್ರಾಪ್ನವಾಮ ತಾದೃಶಂ ಧನಂ ಗೃಹಂ ಚ ದಾತೇತ್ಯನ್ವಯಃ ॥

॥ ಪ್ರತಿಪದಾರ್ಥ ॥

(ಎಲೈ ವಿಶ್ವೇದೇವತೆಗಳೇ) । **ಯೇನ**—ಯಾವ ಸಂಪತ್ತಿನಿಂದ । **ಜನಾನ್**—ನಮ್ಮ ಶತ್ರುಜನಗಳನ್ನೂ । **ಸ್ಪೃಧಃ**—ನಮ್ಮೊಡನೆ ಹೋರಾಡುವ । **ಅದೇವೀಃ ಚ**—ಅಸುರಜನರನ್ನೂ । **ಅಭಿ ಕ್ರಮಾಮ**—ಸೋಲಿಸಲು ಸಮರ್ಥರಾಗುವೆವೋ । (**ತಥಾ**—ಹಾಗೆಯೇ) । **ಆದೇವೀಃ**--ಹವಿರಾದಿಗಳಿಂದ ದೇವತೆಗಳನ್ನು ಪೂಜಿಸುವ । **ವಿಶಃ**—ಪ್ರಜೆಗಳನ್ನೆಲ್ಲಾ । **ಅಭ್ಯಶ್ನವಾಮ**—ತೃಪ್ತಿಗೊಳಿಸುವೆವೋ (ಅಂತಹ) । **ರಥ್ಯಂ**—ರಥಯುಕ್ತವಾದುದೂ ।

**ಚರ್ಷಣಿಪ್ರಾಂ**—ನಮ್ಮ ಪ್ರಜೆಗಳನ್ನೆಲ್ಲಾ ಪೋಷಿಸುವುದೂ । **ಪುರುವೀರಂ**—ಅಧಿಕವಾದ ವೀರರಿಂದ ಕೂಡಿದುದೂ । **ಮಹಃ**—ಮಹತ್ತಾದ । **ಋತಸ್ಯ**—ಯಜ್ಞಕ್ಕೆ । **ಗೋಪಾಂ**—ರಕ್ಷಕವಾದುದೂ । **ಅಜರಂ**—ಕ್ಷಯರಹಿತವಾದುದೂ ಆದ । **ರಯಿಂ**—ಧನವನ್ನೂ । **ಕ್ಷಯಂ**—ಗೃಹವನ್ನೂ । **ನಃ**—ನಮಗೆ । **ನು**—ಖಂಡಿತವಾಗಿ । **ದಾತ**—ಕೊಡಿರಿ.

॥ ಭಾವಾರ್ಥ ॥

ಎಲೈ ವಿಶ್ವೇದೇವತೆಗಳೇ, ಯಾವ ಸಂಪತ್ತಿನಿಂದ ನಮ್ಮ ಶತ್ರುಜನಗಳನ್ನೂ, ನಮ್ಮೊಡನೆ ಹೋರಾಡುವ ಅಸುರಜನರನ್ನೂ ಸೋಲಿಸಲು ಸಮರ್ಥರಾಗುವೆವೋ, ಹಾಗೆಯೇ, ಹವಿರಾದಿಗಳಿಂದ ದೇವತೆಗಳನ್ನು ಪೂಜಿಸುವ ಪ್ರಜೆಗಳನ್ನು ತೃಪ್ತಿಪಡಿಸುವೆವೋ ಅಂತಹ ರಥಯುಕ್ತವಾದುದೂ, ನಮ್ಮ ಪ್ರಜೆಗಳನ್ನೆಲ್ಲಾ ಪೋಷಿಸುವುದೂ, ಅಧಿಕವಾದ ವೀರರಿಂದ ಕೂಡಿದುದೂ ಮಹತ್ತಾದ ಯಜ್ಞಕ್ಕೆ ರಕ್ಷಕವಾದುದೂ, ಕ್ಷಯರಹಿತವಾದುದೂ ಆದ ಧನವನ್ನೂ, ಗೃಹವನ್ನೂ ನಮಗೆ ಖಂಡಿತವಾಗಿ ಕೊಡಿರಿ.

English Translation.

Grant us, (universal gods), riches, comprehending chariots, numerous dependants, many male offspring, (wealth) the giver of efficiency to the solemn rite, and a dwelling free from decay, wherewith we may overcome malevolent man and unrighteous (spirits), and afford support to those people who are devoted to the gods.



# ಐವತ್ತನೆಯ ಸೂಕ್ತವು

॥ ಸಾಯಣಭಾಷ್ಯಂ ॥

**ಪಂಚಮೇಽನುವಾಕೇ ದ್ವಾದಶ ಸೂಕ್ತಾನಿ । ತತ್ರ ಹುವೇ ವ ಇತಿ ಪಂಚದಶರ್ಚಂ ಪ್ರಥಮಂ ಸೂಕ್ತಮೃಜಿಶ್ವನ ಆರ್ಷಂ ಬಹುದೇವತಾಕಂ ತ್ರೈಷ್ಟುಭಂ । ಹುವೇ ವ ಇತ್ಯನುಕ್ರಾಂತಂ ॥ ಗತಃ ಸೂಕ್ತವಿನಿಯೋಗಃ ॥**

ಅನುವಾದವು—ಆರನೆಯ ಮಂಡಲದ ಐದನೆಯ ಅನುವಾಕದಲ್ಲಿ ಹನ್ನೆರಡು ಸೂಕ್ತಗಳಿರುವುವು. ಅವುಗಳಲ್ಲಿ **ಹುವೇ ವಃ** ಎಂಬ ಈ ಸೂಕ್ತವು ಮೊದಲನೆಯದು. ಇದರಲ್ಲಿ ಹದಿನೈದು ಋಕ್ಕುಗಳಿರುವವು. ಈ ಸೂಕ್ತಕ್ಕೆ ಋಜಿಶ್ವಾ ಎಂಬುವನು ಋಷಿಯು. ವಿಶ್ವೇದೇವತೆಗಳು ದೇವತೆಯು. ತ್ರಿಷ್ಟುಪ್ ಛಂದಸ್ಸು. ಅನುಕ್ರಮಣಿಕೆಯಲ್ಲಿ—**ಹುವೇ ವಃ** ಎಂದು ಮೊದಲಾಗಿ ಹೇಳಿರುವುದು. ಸೂಕ್ತವಿನಿಯೋಗವನ್ನು ಹಿಂದೆಯೇ ಹೇಳಲಾಗಿದೆ.

## ಸೂಕ್ತ—೫೦

ಮಂಡಲ—೬ ॥ ಅನುವಾಕ—೫ ॥ ಸೂಕ್ತ—೫೦ ॥
ಅಷ್ಟಕ—೪ ॥ ಅಧ್ಯಾಯ—೮ ॥ ವರ್ಗ—೮, ೯, ೧೦ ॥
॥ ಸೂಕ್ತದಲ್ಲಿರುವ ಋಕ್ಸಂಖ್ಯೆ—೧೫ ॥
॥ ಋಷಿಃ—ಋಜಿಶ್ವಾ ॥
॥ ದೇವತಾ—ವಿಶ್ವೇದೇವಾಃ ॥
॥ ಛಂದಃ—ತ್ರಿಷ್ಟುಪ್ ।

॥ ಸಂಹಿತಾಪಾಠಃ ॥

ಹುವೇ ವೋ ದೇವೀಮದಿತಿಂ ನಮೋಭಿರ್ಮೃಳೀಕಾಯ ವರುಣಂ ಮಿತ್ರ-
ಮಗ್ನಿಂ ।
ಅಭಿಕ್ಷದಾಮರ್ಯಮಣಂ ಸುಶೇವಂ ತ್ರಾತೄನ್ದೇವಾನ್ತ್ಸವಿತಾರಂ ಭಗಂ ಚ ॥

॥ ಪದಪಾಠಃ ॥

ಹುವೇ । ವಃ । ದೇವೀಂ । ಅದಿತಿಂ । ನಮಃऽಭಿಃ । ಮೃಳೀಕಾಯ । ವರುಣಂ । ಮಿತ್ರಂ । ಅಗ್ನಿಂ ।
ಅಭಿऽಕ್ಷದಾಂ । ಅರ್ಯಮಣಂ । ಸುऽಶೇವಂ । ತ್ರಾತೄನ್ । ದೇವಾನ್ । ಸವಿತಾರಂ । ಭಗಂ । ಚ ॥ ೧ ॥

॥ ಸಾಯಣಭಾಷ್ಯಂ ॥

ಹೇ ದೇವಾ ವೋ ಯುಷ್ಮಾಕಂ ಮಾತರಂ ದೇವೀಂ ದ್ಯೋತಮಾನಾಮದಿತಿಮಖಂಡನೀಯಾಮ-ದೀನಾಂ ವಾ ಏತತ್ಸಂಜ್ಞಾಂ ದೇವತಾಂ ಮೃಳೀಕಾಯ ಸುಖಾರ್ಥಂ ನಮೋಭಿರ್ನಮಸ್ಕಾರೈಃ ಸ್ತೋತ್ರೈರ್ವಾ ಹುವೇ । ಹ್ವಯಾಮಿ । ಸ್ತೌಮಿ । ತಥಾ ವರುಣಂ ವಾರಕಂ ಮಿತ್ರಂ ಪ್ರಮೀತೇಸ್ತ್ರಾಯಕಂ ದೇವಮಗ್ನಿಂ ಚೈತಾಂಶ್ಚ ದೇವಾನ್ನಮೋಭಿರ್ಹುವೇ । ತಥಾಭಿಕ್ಷದಾಂ । ಕ್ಷದಿರ್ಹಿಂಸಾಕರ್ಮಾ । ಅಭಿಕ್ಷತ್ತಾರಂ ಶತ್ರೂಣಾಂ ಹಿಂಸಿತಾರಂ ಸುಶೇವಂ ಸುಸುಖಮರ್ಯಮಣಂ ಚ ನಮೋಭಿರ್ಹುವೇ । ಸವಿತಾರಂ ಭಗಂ ಚ ನಮೋಭಿರ್ಹುವೇ । ಕಿಂ ಬಹುನಾ ತ್ರಾತೄನ್ ಪಾಲಯಿತೄನ್ ಸರ್ವಾನ್ದೇವಾನ್ನಮೋಭಿಃ ಸ್ತೋತ್ರೈರ್ಹುವೇ । ಸ್ತೌಮಿ ॥

॥ ಪ್ರತಿಪದಾರ್ಥ ॥

(ಎಲೈ ದೇವತೆಗಳೇ) **ವಃ**—ನಿಮಗೆ (ಮಾತೃವೂ) । **ದೇವೀಂ**—ಪೂಜ್ಯಳೂ ಆದ । **ಅದಿತಿಂ**—ಅದಿತಿದೇವಿಯನ್ನೂ । **ವರುಣಂ**—ವರುಣದೇವನನ್ನೂ । **ಮಿತ್ರಂ**—ಮಿತ್ರನನ್ನೂ । **ಅಗ್ನಿಂ**—ಅಗ್ನಿಯನ್ನೂ । **ಮೃಳೀಕಾಯ** - ನಮ್ಮ ಸುಖನಿಮಿತ್ತವಾಗಿ । **ನಮೋಭಿಃ**—ನಮಸ್ಕಾರಪೂರ್ವಕವಾದ ಸ್ತುತಿಗಳಿಂದ । **ಹುವೇ**—ಪ್ರಾರ್ಥಿಸಿ ಕರೆಯುತ್ತೇನೆ । **ಅಭಿಕ್ಷದಾಂ**—ಶತ್ರುಹಿಂಸಕನಾದವನೂ । **ಸುಶೇವಂ**—ಅತ್ಯಂತ ಸುಖಕರನೂ ಆದ ।

**ಅರ್ಯಮಣಂ**—ಅರ್ಯಮದೇವನನ್ನೂ । **ಸವಿತಾರಂ**—ಸವಿತೃವನ್ನೂ । **ಭಗಂ**—ಭಗನನ್ನೂ । **ತ್ರಾತ್ೄನ್**—ನಮ್ಮ ರಕ್ಷಕರಾದ । **ದೇವಾನ್ ಚ**—ಇತರ ಸಕಲ ದೇವತೆಗಳನ್ನೂ ಕೂಡ (ಪ್ರಾರ್ಥಿಸಿ ಕರೆಯುತ್ತೇನೆ).

॥ ಭಾವಾರ್ಥ ॥

ಎಲೈ ದೇವತೆಗಳೇ, ನಿಮಗೆ ಮಾತೃರೂಪಳೂ, ಪೂಜ್ಯಳೂ ಆದ ಅದಿತಿದೇವಿಯನ್ನೂ ವರುಣನನ್ನೂ, ಮಿತ್ರನನ್ನೂ, ಅಗ್ನಿಯನ್ನೂ ಶತ್ರುಹಿಂಸಕನೂ ಮತ್ತು ಅತ್ಯಂತ ಸುಖಕರನೂ ಆದ ಅರ್ಯಮದೇವನನ್ನೂ, ಸವಿತೃವನ್ನೂ ಮತ್ತು ಭಗನನ್ನೂ ಸಹ ನಮ್ಮ ಸುಖನಿಮಿತ್ತವಾಗಿ ನಮಸ್ಕಾರಪೂರ್ವಕವಾದ ಸ್ತುತಿಗಳಿಂದ ಪ್ರಾರ್ಥಿಸಿ ಕರೆಯುತ್ತೇನೆ. ಅವರಂತೆಯೇ, ನಮ್ಮ ರಕ್ಷಕರಾದ ಇತರ ಸಕಲ ದೇವತೆಗಳನ್ನೂ ಪ್ರಾರ್ಥಿಸಿ ಕರೆಯುತ್ತೇನೆ.

English Translation.

I invoke with adorations, for the sake of felicity, the divine Aditi and Varuna, Mitra and Agni, Aryaman, overthrower of foes, worthy of devotion, Savitri and Bhaga, and (all) protecting divinities.

॥ ಸಂಹಿತಾಪಾಠಃ ॥

ಸುಜ್ಯೋತಿಷಃ ಸೂರ್ಯ ದಕ್ಷಪಿತೄನನಾಗಾಸ್ತ್ವೇ ಸುಮಹೋ ವೀಹಿ
ದೇವಾನ್ ।
ದ್ವಿಜನ್ಮಾನೋ ಯ ಋತಸಾಪಃ ಸತ್ಯಾಃ ಸ್ವರ್ವಂತೋ ಯಜತಾ ಅಗ್ನಿ-
ಜಿಹ್ವಾಃ ॥ ೨ ॥

॥ ಪದಪಾಠಃ ॥

ಸುಽಜ್ಯೋತಿಷಃ । ಸೂರ್ಯ । ದಕ್ಷಽಪಿತೄನ್ । ಅನಾಗಾಃಽತ್ವೇ । ಸುಽಮಹಃ । ವೀಹಿ । ದೇವಾನ್ ।
ದ್ವಿಽಜನ್ಮಾನಃ । ಯೇ । ಋತಽಸಾಪಃ । ಸತ್ಯಾಃ । ಸ್ವಃಽವಂತಃ । ಯಜತಾಃ । ಅಗ್ನಿಽಜಿಹ್ವಾಃ ॥ ೨ ॥

॥ ಸಾಯಣಭಾಷ್ಯಂ ॥

ಹೇ ಸುಮಹಃ ಶೋಭನದೀಪ್ತೇ ಸೂರ್ಯ ಸರ್ವಸ್ಯ ಪ್ರೇರಕ ದಕ್ಷಪಿತೄನ್ । ದಕ್ಷಃ ಪಿತಾಮಹೋ ಯೇಷಾಂ ತೇ ದಕ್ಷಪಿತರಃ । ಪಿತೃಶಬ್ದೋ ಹಿ ಸಾಮಾನ್ಯೇನ ಪೂರ್ವಪುರುಷತ್ವಮಾತ್ರಂ ಬ್ರೂತೇ । ಯಥಾಹಂ ಪಿತೄನ್ತ್ಸುವಿದತ್ರಾँ ಅವಿತ್ಸಿ । ಋಗ್ವೇ. ೧೦-೧೫-೩ । ಇತಿ । ಏಷಾಂ ದಕ್ಷಪಿತೃತ್ವಂ ಚಾದಿತಿರ್ಹ್ಯಜನಿಷ್ಟೇತಿ । ಋಗ್ವೇ. ೧೦ ೭೨-೫ । ಮಂತ್ರಾದವಗಮ್ಯತೇ । ಈದೃಶಾನ್ ಸುಜ್ಯೋತಿಷಃ ಶೋಭನಜ್ಯೋತಿಷ್ಕಾನ್ದೇವಾನನಾಗಾಸ್ತ್ವೇಽನಪರಾಧತ್ವೇ ವೀಹಿ । ಕಾಮಯಸ್ವ । ಯಥಾಸ್ಮಾಕಮಪ-ರಾಧಂ ತೇ ನ ಕುರ್ವಂತಿ ತಥಾ ಕುರ್ಯಾ ಇತ್ಯರ್ಥಃ । ಯೇ ದೇವಾ ದ್ವಿಜನ್ಮಾನೋ ದ್ವಯೋರ್ಲೋಕ-

ಯೋಜಾ೯ಯಮಾನಾಃ ಪ್ರಾದುರ್ಭವಂತ ಋತಸಾಪ ಋತಂ ಯಜ್ಞಂ ಸ್ಪೃಶಂತಃ ಸತ್ಯಾ ಅವಿತಥಾಃ ಸತ್ಯವಾದೀನೋ ವಾ ಸ್ವರ್ವಂತೋ ಧನವಂತೋ ಯಜತಾ ಯಷ್ಟವ್ಯಾ ಅಗ್ನಿಜಿಹ್ವಾಃ। ಅಗ್ನಿರ್ಜಿಹ್ವಾಸ್ಥಾ-ನೀಯೋ ಯೇಷಾಂ ತೇ। ಏವಂಭೂತಾ ಯೇ ದೇವಾಃ ಸಂತಿ ತಾನ್ದೇವಾನ್ವೀಹೀತ್ಯನ್ವಯಃ ॥

॥ ಪ್ರತಿಪದಾರ್ಥ ॥

**ಸುಮಹಃ**—ಅತ್ಯಧಿಕವಾದ ಕಾಂತಿಯುಳ್ಳ। **ಸೂರ್ಯ**—ಎಲೈ ಸೂರ್ಯನೇ। **ಯೇ**—ಯಾವ ದೇವತೆಗಳು। **ದ್ವಿಜನ್ಮಾನಃ**—ಎರಡು ಲೋಕಗಳಲ್ಲಿಯೂ ಉತ್ಪನ್ನವುಳ್ಳವರೂ। **ಋತಸಾಪಃ**—ಯಜ್ಞಸ್ಪರ್ಶವುಳ್ಳವರೂ। **ಸತ್ಯಾಃ**—ಸತ್ಯಸ್ವರೂಪವುಳ್ಳವರೂ। **ಸ್ವರ್ವಂತಃ**—ಧನವಂತರೂ। **ಯಜತಾಃ**—ಪೂಜ್ಯರೂ। **ಅಗ್ನಿಜಿಹ್ವಾಃ**—ಅಗ್ನಿಯೇ ನಾಲಿಗೆಯಾಗಿ ಉಳ್ಳವರೂ ಆಗಿರುವರೋ ಅಂತಹ। **ದಕ್ಷಪಿತ್ರ್ಯಾನ್**—ದಕ್ಷನೇ ಪಿತೃವಾಗಿ ಉಳ್ಳವರೂ। **ಸುಜ್ಯೋತಿಷಃ**—ಅತ್ಯಧಿಕವಾದ ಪ್ರಕಾಶವುಳ್ಳವರೂ ಆದ। **ದೇವಾನ್**—ದೇವತೆಗಳನ್ನು। **ಅನಾಗಾಸ್ತ್ವೇ**--ಹಿಂಸಾರಹಿತರಾಗಿರುವಂತೆ। **ವೀಹಿ**—ಪ್ರೇರಿಸು.

॥ ಭಾವಾರ್ಥ ॥

ಅತ್ಯಧಿಕವಾದ ಕಾಂತಿಯುಳ್ಳ ಎಲೈ ಸೂರ್ಯನೇ, ಯಾವ ದೇವತೆಗಳು ಎರಡು ಲೋಕಗಳಲ್ಲಿಯೂ ಉತ್ಪನ್ನವುಳ್ಳವರೂ, ಯಜ್ಞಸ್ಪರ್ಶವುಳ್ಳವರೂ, ಸತ್ಯಸ್ವರೂಪವುಳ್ಳವರೂ, ಧನವಂತರೂ, ಪೂಜ್ಯರೂ, ಅಗ್ನಿಯೇ ಜಿಹ್ವೆಯಾಗಿ ಉಳ್ಳವರೂ ಆಗಿರುವರೋ ಅಂತಹ ದಕ್ಷನೇ ಪಿತೃವಾಗಿ ಉಳ್ಳವರೂ ಅತ್ಯಧಿಕವಾದ ಪ್ರಕಾಶವುಳ್ಳವರೂ ಆದ ದೇವತೆಗಳನ್ನು ನಮ್ಮ ವಿಷಯದಲ್ಲಿ ಹಿಂಸಾರಹಿತರಾಗಿರುವಂತೆ ಪ್ರೇರಿಸು.

## English Translation.

Radiant Surya, render the deities, who have Daksha for their progenitor, void of offence towards us ; they who are twice born, desirous of sacrifice, observant of truth, possessors of wealth, deserving of worship whose tongue is Agni·

। ಸಂಹಿತಾಪಾಠಃ ।

ಉತ ದ್ಯಾವಾಪೃಥಿವೀ ಕ್ಷತ್ರಮುರು ಬೃಹದ್ರೋದಸೀ ಶರಣಂ ಸುಷುಮ್ನೇ॥
ಮಹಸ್ಕರಥೋ ವರಿವೋ ಯಥಾ ನೋಽಸ್ಮೇ ಕ್ಷಯಾಯ ಧಿಷಣೇ ಅನೇಹಃ॥

। ಪದಪಾಠಃ ।

ಉತ । ದ್ಯಾವಾಪೃಥಿವೀ ಇತಿ । ಕ್ಷತ್ರಂ । ಉರು । ಬೃಹತ್ । ರೋದಸೀ ಇತಿ । ಶರಣಂ । ಸುಸುಮ್ನೇ ಇತಿ ಸುऽಸುಮ್ನೇ ।
ಮಹಃ । ಕರಥಃ । ವರಿವಃ । ಯಥಾ । ನಃ । ಅಸ್ಮೇ ಇತಿ । ಕ್ಷಯಾಯ । ಧಿಷಣೇ ಇತಿ । ಅನೇಹಃ ॥ ೩ ॥

॥ ಸಾಯಣಭಾಷ್ಯಂ ॥

**ಉತಾಪಿ ಚ ಹೇ ದ್ಯಾವಾಪೃಥಿವೀ ದ್ಯಾವಾಪೃಥಿವ್ಯಾವುರು ವಿಸ್ತೀರ್ಣಂ ಕ್ಷತ್ರಂ ಬಲಂ ಕರಥಃ। ಕುರುತಂ। ತಥಾ ರೋದಸೀ ದ್ಯಾವಾಪೃಥಿವ್ಯೌ ಸುಸುಮ್ನೇ ಸುಸುಖೇ ಯುವಾಂ ಬೃಹನ್ಮಹಚ್ಛರಣಂ ಗೃಹಂ ಚ ಕರಥಃ। ಕುರುತಂ। ಮಹೋ ಮಹದ್ವರಿವೋ ಧನಂ ನೋಽಸ್ಮಾಕಂ ಯಥಾ ಸ್ಯಾತ್ತಥಾ ಕುರುತಮಿತ್ಯರ್ಥಃ। ಅಪಿ ಚ ಹೇ ಧಿಷಣೇ ಧಾರಯಿತ್ರ್ಯೌ ದ್ಯಾವಾಪೃಥಿವ್ಯಾವನೇಹಃ ಪಾಪರಾಹಿತ್ಯಂ ಚಾಸ್ಮೇ ಅಸ್ಮಾಕಂ ಕ್ಷಯಾಯ ನಿವಾಸಾರ್ಥಂ ಕುರುತಂ ॥**

॥ ಪ್ರತಿಪದಾರ್ಥ ॥

**ಉತ**—ಅಲ್ಲದೇ । **ದ್ಯಾವಾಪೃಥಿವೀ**—ಎಲೈ ದ್ಯಾವಾಪೃಥಿವಿಗಳೇ । **ಉರು**—ಅತ್ಯಧಿಕವಾದ । **ಕ್ಷತ್ರಂ**—ಬಲವನ್ನು । **ಕರಥಃ**—ಉಂಟುಮಾಡಿರಿ । **ಸುಸುಮ್ನೇ**—ಸುಖಸಾಧಕೆಯರಾದ । **ರೋದಸೀ**—ಎಲೈ ದ್ಯಾವಾಪೃಥಿಗಳೇ । **ಬೃಹತ್**—ದೊಡ್ಡದಾದ । **ಶರಣಂ**—ಗೃಹವನ್ನು (ನಮಗಾಗಿ ನಿರ್ಮಿಸಿರಿ) । **ಮಹಃ**—ಪ್ರಭೂತವಾದ । **ವರಿವಃ**—ಧನವು । **ನಃ**—ನಮಗೆ । **ಯಥಾ**—ಯಾವ ರೀತಿ ಲಭಿಸುವುದೋ ಹಾಗೆ ಅನುಗ್ರಹಿಸಿರಿ । **ಧಿಷಣೇ**—ಜಗದ್ಧಾರಿಕೆಯರಾದ ಎಲೈ ದ್ಯಾವಾಪೃಥಿವಿಗಳೇ । **ಅಸ್ಮೇ**—ನಮಗೆ । **ಕ್ಷಯಾಯ**—ವಾಸಸ್ಥಾನದ ನಿಮಿತ್ತವಾಗಿ । **ಅನೇಹಃ**—ಪಾಪರಾಹಿತ್ಯವನ್ನೂ ಉಂಟುಮಾಡಿರಿ.

॥ ಭಾವಾರ್ಥ ॥

ಸುಖಸಾಧಿಕೆಯರಾದ ಎಲೈ ದ್ಯಾವಾಪೃಥಿವಿಗಳೇ, ನಮಗೆ ಅತ್ಯಧಿಕವಾದ ಬಲವನ್ನುಂಟುಮಾಡಿರಿ. ನನುಗಾಗಿ ದೊಡ್ಡಗೃಹವನ್ನು ನಿರ್ಮಿಸಿ. ನಮಗೆ ಪ್ರಭೂತವಾದ ಧನವು ಲಭಿಸುವ ರೀತಿಯಲ್ಲಿ ಅನುಗ್ರಹಿಸಿರಿ. ಜಗದ್ಧಾರಿಕೆಯರಾದ ಎಲೈ ದ್ಯಾವಾಪೃಥಿವಿಗಳೇ, ನಮಗೆ ವಾಸಸ್ಥಾನದ ನಿಮಿತ್ತವಾಗಿ ಪಾಪರಾಹಿತ್ಯವನ್ನು ಉಂಟುಮಾಡಿರಿ.

## English Translation.

Or bestow, Heaven and Earth, vast strength : give us, Earth and Heaven, a spacious habitation for our comfort : so arrange, that infinite wealth may be ours ; remove, beneficent deities, inquity from our abode.

॥ ಸಂಹಿತಾಪಾಠಃ ॥

ಆ ನೋ ರುದ್ರಸ್ಯ ಸೂನವೋ ನಮಂತಾಮದ್ಯಾ ಹೂತಾಸೋ ವಸವೋಽ-
ಧೃಷ್ಟಾಃ ।
ಯದೀಮರ್ಭೇ ಮಹತಿ ವಾ ಹಿತಾಸೋ ಬಾಧೇ ಮರುತೋ ಅಹ್ವಾಮ
ದೇವಾನ್ ॥ ೪ ॥

॥ ಪದಪಾಠಃ ॥

ಆ । ನಃ । ರುದ್ರಸ್ಯ । ಸೂನವಃ । ನಮಂತಾಂ । ಅದ್ಯ । ಹೂತಾಸಃ । ವಸವಃ । ಅಧೃಷ್ಟಾಃ ।

ಯತ್ । ಈಂ । ಅರ್ಭೇ । ಮಹತಿ । ವಾ । ಹಿತಾಸಃ । ಬಾಧೇ । ಮರುತಃ । ಅಹ್ವಾಮ । ದೇವಾನ್ ॥೪॥

॥ ಸಾಯಣಭಾಷ್ಯಂ ॥

ರುದ್ರಸ್ಯ ಸೂನವಃ ಪುತ್ರಾ ಮರುತೋಽದ್ಯಾಸ್ಮಿನ್ಕಾಲೇ ಹೂತಾಸ ಆಹೂತಾಃ ಸಂತೋ ನೋಽಸ್ಮಾನ್ಪ್ರತ್ಯಾ ನಮಂತಾಂ । ಆನತಾ ಭವಂತು । ಆಗಚ್ಛಂತು । ಕೀದೃಶಾಃ । ವಸವೋ ವಾಸಯಿತಾರೋಽಧೃಷ್ಟಾ ಅನ್ಯೈರಹಿಂಸಿತಾಃ । ಯದ್ಯದೇಮೇನಾನ್ಮರುತೋ ದೇವಾನರ್ಭೇಽಲ್ಪೇ ಮಹತಿ ಪ್ರಭೂತೇ ವಾ ಬಾಧೇ ಸಂಗ್ರಾಮೇ ಹಿತಾಸೋ ನಿಹಿತಾಃ ಸ್ಥಿತಾಃ ಸಂತೋ ವಯಮಹ್ವಾಮ ಆಹ್ವಯಾಮ ತೇದಾನೀಮದ್ಯೇತ್ಯನ್ವಯಃ ॥

॥ ಪ್ರತಿಪದಾರ್ಥ ॥

**ಯತ್**—ಯಾವಾಗ ! **ದೇವಾನ್**—ದೇವತಾತ್ಮರಾದ । **ಈಂ ಮರುತಃ**—ಈ ಮರುತ್ತುಗಳನ್ನು । **ಅರ್ಭೇ**—ಅಲ್ಪವಾದುದಾಗಲಿ । **ವಾ**—ಅಥವಾ । **ಮಹತಿ**—ಬೃಹತ್ತಾದುವಾಗಲಿ ಆದ । **ಬಾಧೇ**—ಯುದ್ಧದಲ್ಲಿ । **ಹಿತಾಸಃ**—ಉದ್ಯುಕ್ತರಾದ ನಾವು । **ಅಹ್ವಾಮ**—ಸಹಾಯಕ್ಕಾಗಿ ಕರೆಯುವೆವೋ । **ಅದ್ಯ**—ಆ ಇದೇ ಕಾಲದಲ್ಲಿ । **ವಸವಃ**—ವಸತಿದಾಯಕರೂ । **ಅಧೃಷ್ಟಾಃ**—ಶತ್ರುಗಳಿಂದ ಅಪ್ರತಿಹತರೂ । **ರುದ್ರಸ್ಯ**—ರುದ್ರನ । **ಸೂನವಃ**—ಪುತ್ರರೂ ಆದ ಮರುತ್ತುಗಳು । **ಹೂತಾಸಃ**—ನಮ್ಮಿಂದ ಕರೆಯಲ್ಪಟ್ಟವರಾಗಿ । **ನಃ**—ನಮಗಭಿಮುಖವಾಗಿ । **ಆ ನಮಂತಾಂ**—ಕೆಳಗಿಳಿದು ಬರಲಿ.

॥ ಭಾವಾರ್ಥ ॥

ಅಲ್ಪವಾದುದಾಗಲಿ ಅಥವಾ ಬೃಹತ್ತಾದುದಾಗಲಿ ಆದ ಸಂಗ್ರಾಮದಲ್ಲಿ ಉದ್ಯುಕ್ತರಾದ ನಾವು ಯಾವಾಗ ದೇವತಾತ್ಮರಾದ ಈ ಮರುದ್ದೇವತೆಗಳನ್ನು ಸಹಾಯಕ್ಕಾಗಿ ಪ್ರಾರ್ಥಿಸುವೆವೋ ಆ ಕಾಲದಲ್ಲಿ ವಸತಿದಾಯಕರೂ ಶತ್ರುಗಳಿಂದ ಅಪ್ರತಿಹತರೂ ರುದ್ರನ ಪುತ್ರರೂ ಆದ ಮರುತ್ತುಗಳು ನಮ್ಮಿಂದ ಕರೆಯಲ್ಪಟ್ಟವರಾಗಿ ನಮಗಭಿಮುಖವಾಗಿ ಕೆಳಗಿಳಿದು ಬರಲಿ.

English Translation.

May the sons of Rudra, givers of dwellings, the unsubdued, invoked on the occasion, stoop down to us, inasmuch as we call upon the divine Maruts that they may be our helpers in difficulty, great or small.

॥ ಸಂಹಿತಾಪಾಠಃ ॥

ಮಿಮ್ಯಕ್ಷ ಯೇಷು ರೋದಸೀ ನು ದೇವೀ ಸಿಷಕ್ತಿ ಪೂಷಾ ಅಭ್ಯರ್ಧಯಜ್ವಾ ।

ಶ್ರುತ್ವಾ ಹವಂ ಮರುತೋ ಯದ್ಧ ಯಾಥ ಭೂಮಾ ರೇಜಂತೇ ಅಧ್ವನಿ

ಪ್ರವಿಕ್ತೇ ॥ ೫ ॥

॥ ಪದಪಾಠಃ ॥

ಮಿಮ್ಯಕ್ಷ । ಯೇಷು । ರೋದಸೀ । ನು । ದೇವೀ । ಸಿಸಕ್ತಿ । ಪೂಷಾ । ಅಭ್ಯರ್ಧ್ಽಯಜ್ವಾ ।

ಶ್ರುತ್ವಾ । ಹವಂ । ಮರುತಃ । ಯತ್ । ಹ । ಯಾಥ । ಭೂಮ । ರೇಜಂತೇ । ಅಧ್ವನಿ । ಪ್ರಽವಿಕ್ತೇ ॥೫॥

॥ ಸಾಯಣಭಾಷ್ಯಂ ॥

ಯೇಷು ಮರುತ್ಸು ರೋದಸೀ ರುದ್ರಸ್ಯ ಪತ್ನೀ ದೇವೀ ದ್ಯೋತಮಾನಾ ಮಾಧ್ಯಮಿಕಾ ವಾಕ್ ಮಿಮ್ಯಕ್ಷ ನು ಕ್ಷಿಪ್ರಂ ಸಂಗಚ್ಛತೇ । ತಥಾಭ್ಯರ್ಧಯಜ್ವಾ ಸ್ತೋತೄನಭ್ಯರ್ಧಯನ್ ಸಮೃದ್ಧಾನ್ಕುರ್ವನ್ಯೋ ಯಜತಿ ಧನೇನ ಪೂಜಯತಿ ತಾದೃಶಃ ಪೂಷಾ ಪೋಷಕೋ ದೇವಶ್ಚ ಸಿಸಕ್ತಿ ಯಾನ್ಮರುತಃ ಸೇವತೇ । ಅಭ್ಯರ್ಧಯಜ್ವಾಭ್ಯರ್ಧಯನ್ಯಜತಿ । ನಿ. ೬-೬ । ಇತಿ ಯಾಸ್ಕಃ । ಹೇ ಮರುತಸ್ತೇ ಯೂಯಂ ಹವಮಸ್ಮದೀಯಮಾಹ್ವಾನಂ ಶ್ರುತ್ವಾ ಯದ್ಧ ಯದಾ ಖಲು ಯಾಥ ಆಗಚ್ಛಥ ತದಾನೀಮಧ್ವನಿ ಮಾರ್ಗೇ ಪ್ರವಿಕ್ತೇ ಗಮನಾರ್ಥಂ ಪೃಥಕ್ಕೃತೇ ಸತಿ ತತ್ರ ವಿದ್ಯಮಾನಾನಿ ಭೂಮ ಭೂತಜಾತಾನಿ ರೇಜಂತೇ । ಕಂಪಂತೇ । ತಥಾ ಚ ಮಂತ್ರಾಂತರಂ । ಪ್ರ ವೇಪಯಂತಿ ಪರ್ವತಾನ್ವಿ ವಿಂಚಂತಿ ವನಸ್ಪತೀನ್ । ಋಗ್ವೇ. ೧-೩೯-೫ । ಇತಿ ॥

॥ ಪ್ರತಿಪದಾರ್ಥ ॥

**ಮರುತಃ**—ಎಲೈ ಮರುತ್ತುಗಳೇ । **ಯೇಷು**—ಯಾವ ನಿಮ್ಮಲ್ಲಿ । **ರೋದಸೀ**—ರುದ್ರಪತ್ನಿಯೂ । **ದೇವೀ**—ಪ್ರಕಾಶಮಾನಳೂ ಆದ ಮಾಧ್ಯಮಿಕಾವಾಗ್ದೇವಿಯು । **ನು**—ಒಂದಿಗೆ । **ಮಿಮ್ಯಕ್ಷ**—ಸೇರಿಕೊಂಡಿರುವಳೋ (ಹಾಗೆಯೇ) । **ಅಭ್ಯರ್ಧಯಜ್ವಾ**—ಸ್ತೋತೃಗಳನ್ನು ಧನದಾನದಿಂದ ಪ್ರವೃದ್ಧರಾಗುವಂತೆ ಮಾಡುವ । **ಪೂಷಾ**—ಪೂಷದೇವನು । **ಸಿಸಕ್ತಿ**—ಯಾವ ನಿಮ್ಮನ್ನು ಸೇವಿಸುವನೋ (ಅಂತಹ ನೀವು) । **ಹವಂ**—ನಮ್ಮ ಆಹ್ವಾನವನ್ನು । **ಶ್ರುತ್ವಾ**—ಕೇಳಿ । **ಯದ್ಧ**—ಯಾವಾಗ । **ಯಾಥ**—ಬರುವಿರೋ (ಆಗ) । **ಪ್ರವಿಕ್ತೇ**—ನಿಮ್ಮ ಸಂಚಾರಕ್ಕಾಗಿ ವಿಭಾಗಿಸಲ್ಪಟ್ಟು ಸಜ್ಜಿತವಾದ । **ಅಧ್ವನಿ**—ಮಾರ್ಗದಲ್ಲಿ । **ಭೂಮ**—ಸಕಲ ಭೂತಜಾತಗಳೂ । **ರೇಜಂತೇ**—ನಡಗುತ್ತವೆ.

॥ ಭಾವಾರ್ಥ ॥

ಎಲೈ ಮರುತ್ತುಗಳೇ, ಯಾವ ನಿಮ್ಮಲ್ಲಿ ರುದ್ರಪತ್ನಿಯೂ, ಪ್ರಕಾಶಮಾನಳೂ ಆದ ಮಾಧ್ಯಮಿಕಾ ವಾಗ್ದೇವಿಯು ಒಂದಿಗೆ ಕೂಡಿಕೊಂಡಿರುವಳೋ ಹಾಗೆಯೇ, ಸ್ತೋತೃಗಳನ್ನು ಧನದಾನದಿಂದ ಪ್ರವೃದ್ಧರಾಗುವಂತೆ ಮಾಡುವ ಪೂಷದೇವನು ಯಾವ ನಿಮ್ಮನ್ನು ಸೇವಿಸುವನೋ ಅಂತಹ ನೀವು ನಮ್ಮ ಆಹ್ವಾನವನ್ನು ಕೇಳಿ ಯಾವಾಗ ಬರುವಿರೋ ಆಗ ನಿಮ್ಮ ಸಂಚಾರಕ್ಕಾಗಿ ಸಿದ್ಧವಾಗಿರುವ ಮಾರ್ಗದಲ್ಲಿರುವ ಸಕಲ ಭೂತಜಾತಗಳೂ ಭಯದಿಂದ ಕಂಪಿಸುತ್ತವೆ.

English Translation.

With whom the divine Heaven and Earth are associated ; whom Pushan, the rewarder (of his worshippers) with prosperity, honours : when Maruts, having heard our invocation, you come hither, then on your several paths all beings tremble.

|| ವಿಶೇಷವಿಷಯಗಳು ||

ಈ ಋಕ್ಕಿನಲ್ಲಿರುವ **ಅಭ್ಯರ್ಧಯಜ್ವಾ** ಎಂಬ ಶಬ್ದಕ್ಕೆ ಯಾಸ್ಕರು ನಿರ್ವಚನವನ್ನು ಹೇಳಿದಾರೆ ಮತ್ತು ಈ ಋಕ್ಕನ್ನೇ ಉದಾಹರಣೆಯಾಗಿ ತೆಗೆದುಕೊಂಡು ಅರ್ಥವಿವರಣೆಮಾಡಿದಾರೆ—

**ಅಭ್ಯರ್ಧಯಜ್ವಾಭ್ಯರ್ಧಯನ್ಯಜತಿ । ಸಿಷಕ್ತಿ ಪೂಷಾ ಅಭ್ಯರ್ಧಯಜ್ವಾ ಇತ್ಯಪಿ ನಿಗಮೋ ಭವತಿ ॥** (ನಿ. ೬-೬)

ಈ ನಿರ್ವಚನಕ್ಕೆ ದುರ್ಗಾಚಾರ್ಯರು ವ್ಯಾಖ್ಯಾನಮಾಡುತ್ತಾ— **ಅಭ್ಯರ್ಧಯಜ್ವಾ ಇತ್ಯೇನವಗತಂ । ಅಭ್ಯರ್ಧಯನ್ ಅಭಿವರ್ಧಯನ್ ಯೋ ಯಜತಿ । ಅಭ್ಯರ್ಧ್ಯತಿರತ್ರ ದಾನಾರ್ಥಃ ।** ಅಭಿವೃದ್ಧಿಯನ್ನು ಹೊಂದುವ ಧನಾದಿಗಳನ್ನು ತನ್ನನ್ನು ಸ್ತೋತ್ರಮಾಡುವ ಪುರುಷನಿಗೆ ಕೊಡುವವನು ಅಥವಾ ತನ್ನನ್ನು ಸ್ತೋತ್ರಮಾಡುವವನಿಗೆ ಧನಾದಿಸಮೃದ್ಧಿಯನ್ನುಂಟುಮಾಡಿ ಅವನು ಅಭಿವೃದ್ಧಿಯಾಗುವಂತೆ ಮಾಡುವವನು ಎಂದು ಪೂಷದೇವನ ಗುಣ ಪ್ರಶಂಸೆಯು ಇಲ್ಲಿ ಉಕ್ತವಾಗಿದೆ. **ಅಭ್ಯರ್ಧಯತಿರತ್ರ ದಾನಾರ್ಥಃ । ಅಭ್ಯರ್ಧ್ಯಯನ್** ಎಂಬ ಶಬ್ದಕ್ಕೆ ಇಲ್ಲಿ ಕೊಡುವುದೆಂದರ್ಥವು. ಏನನ್ನು ಕೊಡುವುದು ಎಂದರೆ ಸೋತ್ರಮಾಡುವವನಿಗೆ ಇಷ್ಟವಾದ ವಸ್ತುಗಳನ್ನಾಗಲಿ, ಅಪೇಕ್ಷಣೀಯವಾದ ಧನಾದಿಗಳನ್ನಾಗಲಿ ಕೊಡುವುದೆಂದಭಿಪ್ರಾಯವು. ಈ ಶಬ್ದದ ಅರ್ಥವನ್ನು ವಿಶದಪಡಿಸುವುದಕ್ಕಾಗಿ ಈ ಋಕ್ಕನ್ನೇ ಉದಾಹರಣೆಯಾಗಿ ಕೊಟ್ಟಿರುವರು

**ಯದ್ಧ ಯಾಥ ಪ್ರವಿಕ್ತೇ ಅಧ್ವನಿ ಭೂಮಾ ರೇಜಂತೇ**—ಎಲೈ ಮರುದ್ದೇವತೆಗಳೇ, ನಿಮಗಾಗಿ ಸಂಚಾರಕ್ಕಾಗಿ ಪ್ರತ್ಯೇಕವಾಗಿ ನಿರ್ದಿಷ್ಟವಾಗಿರುವ ಮಾರ್ಗದಲ್ಲಿ ನೀವು ಬರುವಾಗ ಎಂದರೆ ಸಂಚರಿಸುವಾಗ (ರಭಸದಿಂದ ಬೀಸುವಾಗ) ಸಮಸ್ತ ಭೂತಜಾತಗಳೂ ಎಂದರೆ ಪ್ರಾಣಿಗಳೂ ಭಯದಿಂದ ನಡಗುತ್ತವೆ ಎಂದು ಮರುದ್ದೇವತೆಗಳ ಅಸಾಧಾರಣ ಶಕ್ತಿಸಾಮರ್ಥ್ಯಗಳನ್ನು ವರ್ಣಿಸಿ ಈ ವಿಷಯದಲ್ಲಿ—**ಪ್ರ ವೇಪಯಂತಿ ಪರ್ವತಾನ್ ವಿ ವಿಂಚಂತಿ ವನಸ್ಪತೀನ್** (ಋ. ಸಂ. ೧-೩೯-೫) ಮರುದ್ದೇವತೆಗಳು ರಭಸದಿಂದ ಸಂಚರಿಸುವಾಗ ಅಚಲವೆಂದು ಪ್ರಸಿದ್ಧವಾದ ಪರ್ವತಗಳನ್ನೂ ನಡಗುವಂತೆ ಮಾಡುವರು. ವನದಲ್ಲಿರುವ ದೊಡ್ಡ ದೊಡ್ಡ ವೃಕ್ಷಗಳನ್ನೂ ಬುಡಸಹಿತ ಉರುಳಿಸುವರು ಎಂದು ಅರ್ಥವಿರುವ ಶ್ರುತಿವಾಕ್ಯವನ್ನು ಉದಾಹರಣೆಯಾಗಿ ಕೊಟ್ಟು ಭಾಷ್ಯಕಾರರು ಅರ್ಥವನ್ನು ವಿವರಿಸಿರುವರು.

॥ ಸಂಹಿತಾಪಾಠಃ ॥

ಅಭಿ ತ್ಯಂ ವೀರಂ ಗಿರ್ವಣಸಮರ್ಚೇಂದ್ರಂ ಬ್ರಹ್ಮಣಾ ಜರಿತರ್ನವೇನ ।

ಶ್ರವದಿದ್ಧವಮುಪ ಚ ಸ್ತವಾನೋ ರಾಸದ್ವಾಜಾಁ ಉಪ ಮಹೋ ಗೃಣಾನಃ॥

॥ ಪದಪಾಠಃ ॥

ಅಭಿ । ತ್ಯಂ । ವೀರಂ । ಗಿರ್ವಣಸಂ । ಅರ್ಚ । ಇಂದ್ರಂ । ಬ್ರಹ್ಮಣಾ । ಜರಿತಃ । ನವೇನ ।

ಶ್ರವತ್ । ಇತ್ । ಹವಂ । ಉಪ । ಚ । ಸ್ತುವಾನಃ । ರಾಸತ್ । ವಾಜಾನ್ । ಉಪ । ಮಹಃ । ಗೃಣಾನಃ ॥

॥ ಸಾಯಣಭಾಷ್ಯಂ ॥

ಹೇ ಜರಿತಃ ಸ್ತೋತಸ್ತ್ಯಂ ತಂ ಪ್ರಸಿದ್ಧಂ ವೀರಂ ವೀರ್ಯವಂತಂ ವಿಶೇಷೇಣ ಶತ್ರೂಣಾಮೀರಕಂ ವಾ ಗಿರ್ವಣಸಂ ಗಿರಾಂ ಸಂಭಕ್ತಾರಮೇವಂವಿಧಮಿಂದ್ರಂ ನವೇನಾಭಿನವೇನ ಶೋಭನೇನ ಬ್ರಹ್ಮಣಾ ಸ್ತೋತ್ರೇಣಾಭ್ಯರ್ಚ । ಅಭಿಷ್ಟುಹಿ । ಸ ಚ ಸ್ತುವಾನಃ ಸ್ತೂಯಮಾನಃ ಸನ್ ಹವಮಸ್ಮದೀಯಂ ಸ್ತೋತ್ರ-ಮುಪ ಶ್ರವದಿತ್ । ಉಪಶೃಣುಯಾದೇವ । ಅಪಿ ಚ ಗೃಣಾನಃ ಸ್ತೂಯಮಾನ ಇಂದ್ರೋ ಮಹೋ ಮಹತಃ ಪ್ರಭೂತಾನ್ವಾಜಾನನ್ನಾನಿ ಚೋಪ ರಾಸತ್ । ಪ್ರದೇಯಾತ್ । ಯತ ಏವಮತಃ ಸ್ತುಹೀತ್ಯರ್ಥಃ ॥

॥ ಪ್ರತಿಪದಾರ್ಥ ॥

**ಜರಿತಃ**—ಎಲೈ ಸ್ತೋತೃವೇ । **ತ್ಯಂ**—ಪ್ರಸಿದ್ಧನೂ । **ವೀರಂ**—ಪರಾಕ್ರಮಿಯೂ । **ಗಿರ್ವಣಸಂ**—ಸ್ತುತಿಯಿಂದ ಪ್ರೀತನಾಗುವವನೂ ಆದ । **ಇಂದ್ರಂ**—ಇಂದ್ರನನ್ನು । **ನವೇನ**—ನೂತನವಾದ । **ಬ್ರಹ್ಮಣಾ**—ಸ್ತುತಿಯಿಂದ । **ಅಭ್ಯರ್ಚ**—ಪೂಜಿಸು । **ಸ್ತುವಾನಃ**—ಪ್ರಶಂಸಿತನಾದ ಅದೇ ಇಂದ್ರನು । **ಹವಂ**—ನಮ್ಮ ಸ್ತೋತ್ರವನ್ನು । **ಉಪ ಶ್ರವದಿತ್**—ಕೇಳಿಯೇ ಕೇಳುತ್ತಾನೆ । **ಗೃಣಾನಃ**—ನಮ್ಮಿಂದ ಸ್ತುತನಾಗುವ ಇಂದ್ರನು । **ಮಹಃ**—ಪ್ರಭೂತವಾದ । **ವಾಜಾನ್ ಚ**—ಅನ್ನಗಳನ್ನೂ । **ಉಪ ರಾಸತ್**—ಅನುಗ್ರಹಿಸಿ ಕೊಡಲಿ.

॥ ಭಾವಾರ್ಥ ॥

ಎಲೈ ಸ್ತೋತೃವೇ, ಪ್ರಸಿದ್ಧನೂ, ಪರಾಕ್ರಮಿಯೂ, ಸ್ತುತಿಯಿಂದ ಪ್ರೀತನಾಗುವನೂ ಆದ ಇಂದ್ರನನ್ನು ನೂತನವಾದ ಸ್ತುತಿಯಿಂದ ಪೂಜಿಸು. ಪ್ರಶಂಸಿತನಾದ ಅದೇ ಇಂದ್ರನು ನಮ್ಮ ಸ್ತೋತ್ರಗಳನ್ನು ಕೇಳಿಯೇ ಕೇಳುತ್ತಾನೆ. ನಮ್ಮಿಂದ ಸ್ತುತನಾಗುವ ಇಂದ್ರನು ನಮಗೆ ಪ್ರಭೂತವಾದ ಅನ್ನಗಳನ್ನೂ ದಯಪಾಲಿಸಲಿ.

## English Translation

Praise, worshipper, with a new hymn, that hero, Indra, who is deserving of praise : may he, so glorified, hear our invocation : may he, so lauded, bestow upon us abundant food.

॥ ಸಂಹಿತಾಪಾಠಃ ॥

ಓಮಾನಮಾಪೋ ಮಾನುಷೀರಮೃಕ್ತಂ ಧಾತ ತೋಕಾಯ ತನಯಾಯ ಶಂ ಯೋಃ ॥

ಯೂಯಂ ಹಿ ಷ್ಠಾ ಭಿಷಜೋ ಮಾತೃತಮಾ ವಿಶ್ವಸ್ಯ ಸ್ಥಾತುರ್ಜಗತೋ
ಜನಿತ್ರೀಃ ॥ ೭ ॥

॥ ಪದಪಾಠಃ ॥

ಓಮಾನಂ । ಆಪಃ । ಮಾನುಷೀಃ । ಅಮೃಕ್ತಂ । ಧಾತ । ತೋಕಾಯ । ತನಯಾಯ । ಶಂ । ಯೋಃ ।
ಯೂಯಂ । ಹಿ । ಸ್ಥ । ಭಿಷಜಃ । ಮಾತೃಽತಮಾಃ । ವಿಶ್ವಸ್ಯ । ಸ್ಥಾತುಃ । ಜಗತಃ । ಜನಿತ್ರೀಃ ॥ ೭ ॥

। ಸಾಯಣಭಾಷ್ಯಂ ।

ಹೇ ಆಪೋ ಮಾನುಷೀರ್ಮನುಷ್ಯಹಿತಾ ಯೂಯಮಮೃಕ್ತಮಹಿಂಸಿತಮೋಮಾನಂ । ಅವತಿ ರಕ್ಷತೀತ್ಯೋಮಾ ರಕ್ಷಕಮನ್ನಂ । ತೋಕಾಯ ಪುತ್ರಾಯ ತನಯಾಯ ತತ್ಪುತ್ರಾಯ ಚ ಧಾತ । ಧತ್ತ । ಪ್ರಯಚ್ಛತ । ತಥಾ। ಶಂ ಶಮನಮುಪದ್ರವಾಣಾಂ ಯೋರ್ಯಾವನಂ ಪೃಥಕ್ಕರಣಂ ಚ ಪೃಥಕ್ಕರ್ತವ್ಯಾನಾಂ ಧತ್ತ । ಪ್ರಯಚ್ಛತ । ಕುತ ಇತ್ಯತ ಆಹ । ಹಿ ಯಸ್ಮಾದ್ಯೂಯಂ ಮಾತೃತಮಾ ಮಾತೃಭ್ಯೋಽಪ್ಯಧಿಕಾ ಭಿಷಜಃ ಸ್ಥ ಭವಥ ತಸ್ಮಾದ್ಧಾತೇತ್ಯನ್ವಯಃ । ಕಥಂ ಮಾತೃಭ್ಯೋಽಪ್ಯಧಿಕಂ ಭೈಷಜ್ಯಮಸ್ತೀತ್ಯತ ಆಹ । ವಿಶ್ವಸ್ಯ ಸರ್ವಸ್ಯ ಸ್ಥಾತುಃ ಸ್ಥಾವರಸ್ಯ ಜಗತೋ ಜಂಗಮಸ್ಯ ಜನಿತ್ರೀರ್ಜನಯಿತ್ರ್ಯೋ ಭವಥ । ಅತೋ ಯೂಯಂ ಭಿಷಜಃ ಸ್ಥ ॥

॥ ಪ್ರತಿಪದಾರ್ಥ ॥

**ಆಪಃ**—ಎಲೈ ಅಬ್ದೇವತೆಗಳೇ । **ಮಾನುಷೀಃ**—ಮಾನವರಿಗೆ ಹಿತಕಾರಿಗಳಾದ ನೀವು । **ಅಮೃಕ್ತಂ**—ಅಹಿಂಸಿತವಾದುದೂ । **ಓಮಾನಂ**—ರಕ್ಷಕವಾದುದೂ ಆದ ಅನ್ನವನ್ನು । **ತೋಕಾಯ**—ನಮ್ಮ ಪುತ್ರನಿಗೂ । **ತನಯಾಯ**—ತತ್ಪುತ್ರನಿಗೂ । **ಧಾತ**—ಕೊಡಿರಿ । **ಶಂ**—ಸುಖವನ್ನೂ । **ಯೋಃ**—ದುಃಖರಾಹಿತ್ಯವನ್ನೂ । (ಉಂಟುಮಾಡಿರಿ) । **ಯೂಯಂ**—ನೀವು । **ಮಾತೃತಮಾಃ**—ಜನ್ಮದಾತೆಯಾದ ಮಾತೃವಿಗಿಂತಲೂ ಉತ್ತಮರಾದ । **ಭಿಷಜಃ**—ನಮ್ಮ ಆರೋಗ್ಯಪೋಷಕರಾಗಿ । **ಸ್ಥ**—ಆಗಿದ್ದೀರಿ । **ಹಿ**—ಏತಕ್ಕೆಂದರೆ । **ವಿಶ್ವಸ್ಯ**—ಸಮಸ್ತವಾದ । **ಸ್ಥಾತುಃ**—ಸ್ಥಾವರಾತ್ಮಕವೂ । **ಜಗತಃ**—ಜಂಗಮಾತ್ಮಕವೂ ಆದ ಲೋಕಗಳಿಗೆಲ್ಲಾ । **ಜನಿತ್ರೀಃ**—ಮಾತೆಯರಾಗಿದ್ದೀರಿ.

॥ ಭಾವಾರ್ಥ ॥

ಎಲೈ ಉದಕಾಭಿಮಾನಿದೇವತೆಗಳೇ, ಮಾನವರಿಗೆ ಹಿತಕಾರಿಗಳಾದ ನೀವು ಅಹಿಂಸಿತವಾದುದೂ, ರಕ್ಷಕವಾದುದೂ ಆದ ಅನ್ನವನ್ನು ನಮ್ಮ ಪುತ್ರನಿಗೂ ತತ್ಪುತ್ರನಿಗೂ ಕೊಡಿರಿ. ಸುಖವನ್ನೂ ದುಃಖರಾಹಿತ್ಯವನ್ನೂ ಉಂಟುಮಾಡಿರಿ. ಜನ್ಮದಾತೆಯಾದ ಮಾತೃವಿಗಿಂತಲೂ ನೀವೇ ಉತ್ತಮರಾದ ಆರೋಗ್ಯಪೋಷಕರಾಗಿದ್ದೀರಿ. ಏತಕ್ಕೆಂದರೆ ಸಮಸ್ತವಾದ ಸ್ಥಾವರವೂ ಜಂಗಮವೂ ಆದ ವಿಶ್ವಕ್ಕೆಲ್ಲಾ ನೀವೇ ಮಾತೆಯರಾಗಿದ್ದೀರಿ.

## English Translation.

Waters, friendly to mankind, grant uninterrupted (life)-preserving (food) for (the perpetuation of our) sons and grandsons : grant us security and the removal (of all evil), for you are more then meternal physicians ; you are the parents of the stationary and moveable universe.

॥ ಸಂಹಿತಾಪಾಠಃ ॥

ಆ ನೋ ದೇವಃ ಸವಿತಾ ತ್ರಾಯಮಾಣೋ ಹಿರಣ್ಯಪಾಣಿರ್ಯಜತೋ ಜಗಮ್ಯಾತ್ ।

ಯೋ ದತ್ರವಾँ ಉಷಸೋ ನ ಪ್ರತೀಕಂ ವ್ಯೂರ್ಣುತೇ ದಾಶುಷೇ ವಾರ್ಯಾಣಿ ॥ ೮ ॥

॥ ಪದಪಾಠಃ ॥

ಆ । ನಃ । ದೇವಃ । ಸವಿತಾ । ತ್ರಾಯಮಾಣಃ । ಹಿರಣ್ಯಽಪಾಣಿಃ । ಯಜತಃ । ಜಗಮ್ಯಾತ್ ।

ಯಃ । ದತ್ರಽವಾನ್ । ಉಷಸಃ । ನ । ಪ್ರತೀಕಂ । ವಿಽಊರ್ಣುತೇ । ದಾಶುಷೇ । ವಾರ್ಯಾಣಿ ॥ ೮ ॥

॥ ಸಾಯಣಭಾಷ್ಯಂ ॥

ತ್ರಾಯಮಾಣೋ ರಕ್ಷನ್ ಹಿರಣ್ಯಪಾಣಿಃ ಸುವರ್ಣಹಸ್ತೋ ಹಿತರಮಣೀಯಪಾಣಿರ್ವಾ ಯಜತೋ ಯಷ್ಟವ್ಯ ಏವಂಭೂತಃ ಸವಿತಾ ಪ್ರೇರತೋ ದೇವೋ ನೋಽಸ್ಮಾನಾ ಜಗಮ್ಯಾತ್ । ಆಗಚ್ಛತು । ಯೋ ದೇವೋ ದತ್ರವಾನ್ಧನವಾನುಷಸೋ ನ ಪ್ರತೀಕಮುಷಸಃ ಪ್ರಮುಖಮಿವ ದಾಶುಷೇ ಹವೀಂಷಿ ದತ್ತವತೇ ಯಜಮಾನಾಯ ವಾರ್ಯಾಣಿ ವರಣೀಯಾನಿ ಧನಾನಿ ವ್ಯೂರ್ಣುತೇ ವಿವೃಣೋತಿ ಪ್ರಕಾಶಯತಿ ಸ ಸವಿತೇತ್ಯನ್ವಯಃ ॥

॥ ಪ್ರತಿಪದಾರ್ಥ ॥

**ಯಃ**—ಯಾವ ಸವಿತೃವು । **ದತ್ರವಾನ್**—ಧನವಂತನಾಗಿ । **ಉಷಸಃ**—ಉಷೋದೇವಿಯ । **ಪ್ರತೀಕಂ ನ**—ದಿವ್ಯಸ್ವರೂಪದಂತೆ । **ದಾಶುಷೇ**—ಹವಿಸ್ಸನ್ನರ್ಪಿಸುವ ಯಜಮಾನನಿಗೆ । **ವಾರ್ಯಾಣಿ**—ಅಪೇಕ್ಷಿತಗಳಾದ ಧನಗಳನ್ನು । **ವ್ಯೂರ್ಣುತೇ**—ಪ್ರಕಾಶಪಡಿಸುವನೋ (ಅಂತಹ) । **ತ್ರಾಯಮಾಣಃ**—ರಕ್ಷಕನೂ । **ಹಿರಣ್ಯಪಾಣಿಃ**—ಸುವರ್ಣರೂಪವಾದ ಪಾಣಿಯುಳ್ಳವನೂ । **ಯಜತಃ**—ಪೂಜ್ಯನೂ । **ದೇವಃ**—ದೇವತಾತ್ಮನೂ ಆದ । **ಸವಿತಾ**—ಸವಿತೃದೇವನು । **ನಃ**—ನಮಗಭಿಮುಖವಾಗಿ । **ಆ ಜಗಮ್ಯಾತ್**—ದಯಮಾಡಲಿ.

॥ ಭಾವಾರ್ಥ ॥

ಯಾವ ಧನವಂತನಾದ ಸವಿತೃವು ದಿವ್ಯಸ್ವರೂಪವುಳ್ಳ ಉಷೋದೇವಿಯಂತೆ ಹವಿಸ್ಸನ್ನರ್ಪಿಸುವ ಯಜಮಾನನಿಗೆ ಅಪೇಕ್ಷಿತವಾದ ಧನಗಳನ್ನು ಪ್ರಕಾಶಪಡಿಸುವನೋ ಅಂತಹ ರಕ್ಷಕನೂ, ಸುವರ್ಣರೂಪವಾದ ಪಾಣಿಯುಳ್ಳವನೂ, ಪೂಜ್ಯನೂ ದೇವತಾತ್ಮನೂ ಆದ ಸವಿತೃದೇವನು ನಮಗಭಿಮುಖವಾಗಿ ದಯಮಾಡಲಿ.

English Translation.

May the adorable, golden-handed Savitri, the preserver, come to us; he, the munificent, who, like the opening of the dawn, displays desirable (riches) to the offerer of the oblation.

॥ ಸಂಹಿತಾಪಾಠಃ ॥

ಉತ ತ್ವಂ ಸೂನೋ ಸಹಸೋ ನೋ ಅದ್ಯಾ ದೇವಾँ ಅಸ್ಮಿನ್ನಧ್ವರೇ ವವೃತ್ಯಾಃ ।
ಸ್ಯಾಮಹಂ ತೇ ಸದಮಿದ್ರಾತೌ ತವ ಸ್ಯಾಮಗ್ನೇಽವಸಾ ಸುವೀರಃ ॥ ೯ ॥

॥ ಪದಪಾಠಃ ॥

ಉತ । ತ್ವಂ । ಸೂನೋ ಇತಿ । ಸಹಸಃ । ನಃ । ಅದ್ಯ । ಆ । ದೇವಾನ್ । ಅಸ್ಮಿನ್ । ಅಧ್ವರೇ । ವವೃತ್ಯಾಃ ।
ಸ್ಯಾಂ । ಅಹಂ । ತೇ । ಸದಂ । ಇತ್ । ರಾತೌ । ತವ । ಸ್ಯಾಂ । ಅಗ್ನೇ । ಅವಸಾ । ಸುಽವೀರಃ ॥ ೯ ॥

॥ ಸಾಯಣಭಾಷ್ಯಂ ॥

ಉತಾಪಿ ಚ ಹೇ ಸಹಸಃ ಸೂನೋ ಬಲಸ್ಯ ಪುತ್ರಾಗ್ನೇ ತ್ವಮದ್ಯಾಸ್ಮಿನ್ಕಾಲೇ ನೋಽಸ್ಮದೀಯೇಽಸ್ಮಿನ್ನಧ್ವರೇ ಯಾಗೇ ದೇವಾನ್ಯಷ್ಟವ್ಯಾನಿಂದ್ರಾದೀನಾ ವವೃತ್ಯಾಃ । ಆವರ್ತಯ । ಆಗಮಯ । ಅಪಿ ಚಾಹಂ ತೇ ತವ ರಾತೌ ಧನಸ್ಯ ದಾನೇ ಸದಮಿತ್ಸರ್ವದೈವ ವರ್ತಮಾನಃ ಸ್ಯಾಂ ಭವೇಯಂ । ತಥಾ ಹೇ ಅಗ್ನೇ ತವಾವಸಾ ತ್ವದೀಯೇನ ರಕ್ಷಣೇನ ಸುವೀರಃ ಶೋಭನೈರ್ವೀರೈಃ ಪುತ್ರಪೌತ್ರಾದಿಭಿರುಪೇತಶ್ಚ ಸ್ಯಾಂ । ಭವೇಯಂ ॥

॥ ಪ್ರತಿಪದಾರ್ಥ ॥

ಉತ—ಮತ್ತು । ಸಹಸಃ ಸೂನೋ—ಶಕ್ತಿಪುತ್ರನಾದ ಎಲೈ ಅಗ್ನಿಯೇ । ತ್ವಂ—ನೀನು । ಅದ್ಯ—ಈ ಯಾಗ ಕಾಲದಲ್ಲಿ । ನಃ—ನಮ್ಮ । ಅಸ್ಮಿನ್ ಅಧ್ವರೇ—ಈ ಯಾಗಕ್ಕೆ । ದೇವಾನ್—ದೇವತೆಗಳನ್ನು । ಆ ವವೃತ್ಯಾಃ—ಬರಮಾಡು । ಅಹಂ - ನಾನು । ತೇ—ನಿನ್ನ । ರಾತೌ—ಧನ ದಾನಕ್ಕೆ । ಸದಮಿತ್—

ಸರ್ವದಾ । **ಸ್ಯಾಂ**—ಪಾತ್ರನಾಗಿರುವಂತಾಗಲಿ । **ಅಗ್ನೇ**—ಎಲೈ ಅಗ್ನಿಯೇ । **ತವ**—ನಿನ್ನ । **ಅವಸಾ**—ರಕ್ಷಣೆಯಿಂದ । **ಸುವೀರಃ**—ಉತ್ತಮವಾದ ಪುತ್ರಪೌತ್ರಾದಿಗಳುಳ್ಳವನಾಗಿ । **ಸ್ಯಾಂ**—ನಾನು ಇರುವಂತಾಗಲಿ.

। ಭಾವಾರ್ಥ ॥

ಶಕ್ತಿಪುತ್ರನಾದ ಎಲೈ ಅಗ್ನಿಯೇ, ನೀನು ನಮ್ಮಿಂದ ನೆರವೇರಿಸಲ್ಪಡುವ ಈ ಯಾಗ ಕಾಲದಲ್ಲಿ ನಮ್ಮ ಯಾಗಕ್ಕೆ ದೇವತೆಗಳನ್ನು ಬರಮಾಡು. ನಾನು ನಿನ್ನ ಧನ ದಾನಕ್ಕೆ ಸರ್ವದಾ ಪಾತ್ರನಾಗಿರುವಂತಾಗಲಿ. ಎಲೈ ಅಗ್ನಿಯೇ, ನಿನ್ನ ರಕ್ಷಣೆಯಿಂದ ನಾನು ಉತ್ತಮರಾದ ಪುತ್ರಪೌತ್ರಾದಿಗಳನ್ನು ಹೊಂದಿ ಸುಖವಾಗಿರುವಂತೆ ಅನುಗ್ರಹಿಸು.

## English Translation.

And you, son of strength, bring back to-day the deities to this our sacrifice : may I be ever in (the enjoyment of) your bounty : may I through your protection, Agni, be blessed with excellent male descendants.

॥ ಸಂಹಿತಾಪಾಠಃ ॥

ಉತ ತ್ಯಾ ಮೇ ಹವಮಾ ಜಗ್ಮ್ಯಾತಂ ನಾಸತ್ಯಾ ಧೀಭಿರ್ಯುವಮಂಗ ವಿಪ್ರಾ ।
ಅತ್ರಿಂ ನ ಮಹಸ್ತಮಸೋಽಮುಮುಕ್ತಂ ತೂರ್ವತಂ ನರಾ ದುರಿತಾದಭೀಕೇ ॥ ೧೦ ॥

॥ ಪದಪಾಠಃ ॥

ಉತ । ತ್ಯಾ । ಮೇ । ಹವಂ । ಆ । ಜಗ್ಮ್ಯಾತಂ । ನಾಸತ್ಯಾ । ಧೀಭಿಃ । ಯುವಂ । ಅಂಗ । ವಿಪ್ರಾ । ಅತ್ರಿಂ । ನ । ಮಹಃ । ತಮಸಃ । ಅಮುಮುಕ್ತಂ । ತೂರ್ವತಂ । ನರಾ । ದುಃಽಇತಾತ್ । ಅಭೀಕೇ ॥೧೦॥

॥ ಸಾಯಣಭಾಷ್ಯಂ ॥

ಉತಾಪಿ ಚ ಹೇ ವಿಪ್ರಾ ಪ್ರಾಜ್ಞೌ ನಾಸತ್ಯಾ ಸತ್ಯಸ್ವಭಾವೌ ಸತ್ಯಸ್ಯ ನೇತಾರೌ ವಾ ಹೇ ಅಶ್ವಿನೌ ತ್ಯಾ ತೌ ಪ್ರಸಿದ್ಧೌ ಯುವಂ ಯುವಾಂ ಧೀಭಿಃ ಪರಿಚರಣೈಃ ಕರ್ಮಭಿರುಪೇತಂ ಮೇ ಮದೀಯಂ ಹವಂ ಸ್ತೋತ್ರಮಂಗ ಕ್ಷಿಪ್ರಮಾ ಜಗ್ಮ್ಯಾತಂ । ಆಗಚ್ಛತಂ । ಆಗತ್ಯ ಚ ಮಹೋ ಮಹತಸ್ತಮಸೋಽಸುರಕೃತಾದಂಧಕಾರಾದತ್ರಿಂ ನ ಯಥಾತ್ರಿಮೃಷಿಮಮುಮುಕ್ತಂ ಮೋಚಿತವಂತೌ ಸ್ಥಃ ಹೇ ನರಾ ನೇತಾರಾವಶ್ವಿನೌ ತಥಾಸ್ಮಾನಪ್ಯಭೀಕೇಽಭ್ಯಕ್ತೇ ಪ್ರಾಪ್ತೇ ಸಂಗ್ರಾಮೇ ದುರಿತಾದ್ದುಃಖಾತ್ ಶತ್ರುಕೃತಾತ್ತೂರ್ವತಂ । ಅಸ್ಮಾಂಸ್ತಾರಯತಂ ॥

॥ಪ್ರತಿಪದಾರ್ಥ ॥

**ಉತ**—ಮತ್ತು । **ವಿಪ್ರಾ**—ಪ್ರಾಜ್ಞರಾದ । **ನಾಸತ್ಯಾ**—ಎಲೈ ಅಶ್ವಿನೀ ದೇವತೆಗಳೇ । **ತ್ಯಾ**—ಪ್ರಸಿದ್ಧರಾದ । **ಯುವಂ**—ನೀವು । **ಧೀಭಿಃ**—ನಿಮ್ಮ ಪೂಜಾಕರ್ಮಗಳೊಡನೆ ಯುಕ್ತನಾದ । **ಮೇ**—ನನ್ನ । **ಹವಂ**—ಸ್ತುತಿಯನ್ನು ಆಲಿಸಿ । **ಅಂಗ**—ಕ್ಷಿಪ್ರವಾಗಿ । **ಆ ಜಗ್ಮ್ಯತಂ**—ದಯಮಾಡಿರಿ । **ಅತ್ರಿಂ ನ**—ಅತ್ರಿಋಷಿಯನ್ನು ಕತ್ತಲಿನಿಂದ ಬಿಡಿಸಿದಂತೆ । **ಮಹಃ**—ಮಹತ್ತಾದ । **ತಮಸಃ**—ಅಂಧಕಾರದಿಂದ । **ಅಮುಮುಕ್ತಂ**—ನಮ್ಮನ್ನು ಬಿಡುಗಡೆಮಾಡಿರಿ । **ನರಾ**—ನೇತೃಗಳಾದ ಎಲೈ ಅಶ್ವಿನೀ ದೇವತೆಗಳೇ । **ಅಭೀಕೇ**—ಸಂಗ್ರಾಮದಲ್ಲಿ । **ದುರಿತಾತ್**—ಶತ್ರುಕೃತವಾದ ದುಃಖದಿಂದ । **ತೊರ್ವತಂ**—ರಕ್ಷಿಸಿರಿ.

॥ ಭಾವಾರ್ಥ ॥

ಪ್ರಾಜ್ಞರಾದ ಎಲೈ ಅಶ್ವಿನೀದೇವತೆಗಳೇ, ಪ್ರಸಿದ್ಧರಾದ ನೀವು ನಿಮ್ಮ ಪೂಜಾಕರ್ಮಗಳೊಡನೆ ಯುಕ್ತನಾದ ನನ್ನ ಸ್ತುತಿಯನ್ನು ಆಲಿಸಿ ಕ್ಷಿಪ್ರವಾಗಿ ದಯಮಾಡಿರಿ. ಅತ್ರಿಋಷಿಯನ್ನು ಕತ್ತಲಿನಿಂದ ಬಿಡಿಸಿದಂತೆ ಮಹತ್ತಾದ ಅಂಧಕಾರದಿಂದ ನಮ್ಮನ್ನು ಬಿಡುಗಡೆಮಾಡಿರಿ. ನೇತೃಗಳಾದ ಎಲೈ ಅಶ್ವಿನೀದೇವತೆಗಳೇ, ಸಂಗ್ರಾಮದಲ್ಲಿ ಶತ್ರುಕೃತವಾದ ದುಃಖದಿಂದ ನಮ್ಮನ್ನು ರಕ್ಷಿಸಿರಿ.

## English Translation.

Wise Nasatyas, come quickly to my invocation (united) with holy acts: (extricate us) from thick darkness, as you did extricate Atri: protect us, leaders (of rites), from danger in battle.

॥ ಸಂಹಿತಾಪಾಠಃ ॥

ತೇ ನೋ ರಾಯೋ ದ್ಯುಮತೋ ವಾಜವತೋ ದಾತಾರೋ ಭೂತ ನೃವತಃ ಪುರುಕ್ಷೋಃ ।

ದಶಸ್ಯಂತೋ ದಿವ್ಯಾಃ ಪಾರ್ಥಿವಾಸೋ ಗೋಜಾತಾ ಅಪ್ಯಾ ಮೃಳತಾ ಚ ದೇವಾಃ ॥ ೧೧ ॥

॥ ಪದಪಾಠಃ ॥

ತೇ । ನಃ । ರಾಯಃ । ದ್ಯುಽಮತಃ । ವಾಜಽವತಃ । ದಾತಾರಃ । ಭೂತ । ನೃಽವತಃ । ಪುರುಽಕ್ಷೋಃ ।

ದಶಸ್ಯಂತಃ । ದಿವ್ಯಾಃ । ಪಾರ್ಥಿವಾಸಃ । ಗೋಽಜಾತಾಃ । ಅಪ್ಯಾಃ । ಮೃಳತ । ಚ । ದೇವಾಃ ॥ ೧೧ ॥

॥ ಸಾಯಣಭಾಷ್ಯಂ ॥

ಹೇ ದೇವಾಸ್ತೇ ಯೂಯಂ ದ್ಯುಮತೋ ದೀಪ್ತಿಮತೋ ವಾಜವತೋ ಬಲಯುಕ್ತಸ್ಯ ನೃವತೋ ನೃಭಿಃ ಪುತ್ರಾದಿಭಿರುಪೇತಸ್ಯ ಪುರುಕ್ಷೋರ್ಬಹುಭಿಃ ಕೀರ್ತನೀಯಸ್ಯ ರಾಯೋ ಧನಸ್ಯ ನೋಽಸ್ಮಭ್ಯಂ ದಾತಾರೋ ಭೂತ । ಭವತ । ಅಪಿ ಚ ದಶಸ್ಯಂತಃ ಕಾಮಾನ್ಪ್ರಯಚ್ಛಂತೋ ದಿವ್ಯಾ ದಿವಿ ಭವಾ ಆದಿತ್ಯಾಃ ಪಾರ್ಥಿವಾಸಃ ಪೃಥಿವ್ಯಾಂ ಭವಾ ವಸವೋ ಗೋಜಾತಾಃ । ಗೌಃ ಪೃಶ್ನಿರ್ಮಾಧ್ಯಮಿಕಾ ವಾಕ್ । ತತ ಉತ್ಪನ್ನಾ ಮರುತೋಽಪ್ಯಾ ಅಪ್ಸ್ವಂತರಿಕ್ಷೇ ಭವಾ ರುದ್ರಾಶ್ಚ ತೇ ಸರ್ವೇ ಯೂಯ-ಮಸ್ಮಾನ್ಮೃಳತ । ಸುಖಯತ ॥

॥ ಪ್ರತಿಪದಾರ್ಥ ॥

**ದೇವಾಃ**—ಎಲೈ ದೇವತೆಗಳೇ । **ತೇ**—ನೀವು । ನಃ – ನಮಗೆ । **ದ್ಯುಮತಃ**—ಕಾಂತಿಯುತವಾದುದೂ । **ವಾಜವತಃ**—ಶಕ್ತಿಯುತವಾದುದೂ । **ನೃವತಃ**—ಪುತ್ರಾದಿಗಳಿಂದ ಕೂಡಿದುದೂ । **ಪುರುಕ್ಷೋಃ**—ಅನೇಕರಿಂದ ಪ್ರಶಂಸಿತವಾದುದೂ ಆದ । **ರಾಯಃ**—ಧನದ । **ದಾತಾರಃ**—ದಾತೃಗಳಾಗಿ । **ಭೂತ**—ಆಗಿರಿ । **ದಶಸ್ಯಂತಃ**—ಇಷ್ಟಾರ್ಥಪ್ರದರಾದ । **ದಿವ್ಯಾಃ**—ದ್ಯುಲೋಕಸ್ಥರಾದ ಆದಿತ್ಯರೂ । **ಪಾರ್ಥಿವಾಸಃ**—ಪೃಥಿವೀಸ್ಥರಾದ ವಸುಗಳೂ । **ಗೋಜಾತಾಃ**—ಪೃಶ್ನಿಪುತ್ರರಾದ ಮರುತ್ತುಗಳೂ । **ಅಪ್ಯಾಃ ಚ**—ಅಂತರಿಕ್ಷಸ್ಥರಾದ ರುದ್ರರೂ । **ಮೃಳತ**—ನಮ್ಮನ್ನು ಸುಖಪಡಿಸಲಿ.

॥ ಭಾವಾರ್ಥ ॥

ಎಲೈ ದೇವತೆಗಳೇ, ನೀವು ನಮಗೆ ಕಾಂತಿಯುತವಾದುದೂ, ಶಕ್ತಿಯುತವಾದುದೂ, ಪುತ್ರಾದಿಗಳಿಂದ ಕೂಡಿದುದೂ, ಅನೇಕರಿಂದ ಪ್ರಶಂಸಿತವಾದುದೂ ಆದ ಧನದ ದಾತೃಗಳಾಗಿರಿ. ಇಷ್ಟಾರ್ಥಪ್ರದರಾಗಿ ದ್ಯುಲೋಕಸ್ಥರಾದ ಆದಿತ್ಯರೂ, ಪೃಥಿವೀಸ್ಥರಾದ ವಸುಗಳೂ, ಪೃಶ್ನಿಪುತ್ರರಾದ ಮರುತ್ತುಗಳೂ, ಅಂತರಿಕ್ಷಸ್ಥರಾದ ರುದ್ರರೂ ನಮ್ಮನ್ನು ಸುಖಪಡಿಸಲಿ.

English Translation.

Be unto us, gods, the donors of splendid, invigorating riches, comprising male descendants, and celebrated by many : celestial Adityas, terrestrial Vasus, offspring of Prishni, children of the waters, granting our desires, make us happy.

॥ ಸಂಹಿತಾಪಾಠಃ ॥

ತೇ ನೋ ರುದ್ರಃ ಸರಸ್ವತೀ ಸಜೋಷಾ ಮೀಳ್ಹುಷ್ಮಂತೋ ವಿಷ್ಣುರ್ಮೃಳಂತು
ವಾಯುಃ ।

ಋಭುಕ್ಷಾ ವಾಜೋ ದೈವ್ಯೋ ವಿಧಾತಾ ಪರ್ಜನ್ಯಾವಾತಾ ಪಿಪ್ಯತಾಮಿಷಂ
ನಃ ॥ ೧೨ ॥

॥ ಪದಪಾಠಃ ॥

ತೇ । ನಃ । ರುದ್ರಃ । ಸರಸ್ವತೀ । ಸ॒ಽಜೋಷಾಃ । ಮೀಳ್ಹುಷ್ಮಂತಃ । ವಿಷ್ಣುಃ । ಮೃಳಂತು । ವಾಯುಃ । ಋಭುಕ್ಷಾಃ । ವಾಜಃ । ದೈವ್ಯಃ । ವಿ॒ಽಧಾತಾ । ಪರ್ಜನ್ಯಾವಾತಾ । ಪಿಪ್ಯತಾಂ । ಇಷಂ । ನಃ ॥ ೧೨ ॥

॥ ಸಾಯಣಭಾಷ್ಯಂ ॥

ಮೀಳ್ಹುಷ್ಮಂತೋ ವರ್ಷಣವಂತಸ್ತೇ ದೇವಾ ನೋಽಸ್ಮಾನ್ಮೃಳಂತು । ಮೃಳಯಂತು । ಸುಖಯಂತು । ಕೇ ತ ಇತಿ ಚೇದುಚ್ಯತೇ । ರುದ್ರಃ ಸರಸ್ವತೀ ಚ ಸಜೋಷಾಃ ಸಹ ಪ್ರೀಯಮಾಣಾ ವಿಷ್ಣುರ್ವಾಯುಶ್ಚ ಋಭುಕ್ಷಾಃ । ಋಭುರ್ವಿಭ್ವಾ ವಾಜ ಇತಿ ತ್ರಯಃ ಸೌಧನ್ವನಾಃ । ತೇಷಾಮಾದ್ಯ ಋಭುಶ್ಚ ವಾಜೋಽಂತಿಮಶ್ಚ । ಉಪಲಕ್ಷಣಮೇತತ್ । ವಿಭ್ವಾ ಚ । ದೈವ್ಯೋ ದೇವೇಭ್ಯೋ ಹಿತೋ ವಿಧಾತಾ ಪ್ರಜಾಪತಿಶ್ಚ । ಅಪಿ ಚ ಪರ್ಜನ್ಯಾವಾತಾ ಪರ್ಜನ್ಯಶ್ಚ ವಾಯುಶ್ಚೋಭೌ ನೋಽಸ್ಮಭ್ಯ-ಮಿಷಮನ್ನಂ ಪಿಪ್ಯತಾಂ । ವರ್ಧಯತಾಂ ॥

॥ ಪ್ರತಿಪದಾರ್ಥ ॥

**ಮೀಳ್ಹುಷ್ಮಂತಃ**—ವೃಷ್ಟಿಕಾರಕರೂ। **ತೇ**—ಪ್ರಸಿದ್ಧರೂ ಆದ। **ರುದ್ರಃ**—ರುದ್ರನೂ। **ಸರಸ್ವತೀ**—ಸರಸ್ವತಿಯೂ। **ಸಜೋಷಾಃ**—ಜೊತೆಯಲ್ಲಿ ತುಷ್ಟಿಯನ್ನು ಹೊಂದುವ। **ವಿಷ್ಣುಃ**—ವಿಷ್ಣುವೂ। **ವಾಯುಃ**—ವಾಯುವೂ। **ಋಭುಕ್ಷಾಃ**—ಋಭುಕ್ಷನೂ। **ವಾಜಃ**—ವಾಜನೂ (ವಿಭ್ವನೂ)। **ನಃ**—ನಮ್ಮನ್ನು। **ಮೃಳಂತು**—ಸುಖಪಡಿಸಲಿ। **ದೈವ್ಯಃ**—ದೇವತೆಗಳಿಗೆ ಹಿತಕಾರಕನಾದ। **ವಿಧಾತಾ**—ಪ್ರಜಾಪತಿಯೂ। **ಪರ್ಜನ್ಯಾವಾತಾ**—ಪರ್ಜನ್ಯ ಮತ್ತು ವಾಯುದೇವನೂ। **ನಃ**—ನಮಗೆ। **ಇಷಂ**—ಅನ್ನವನ್ನು। **ಪಿಪ್ಯತಾಂ**—ವೃದ್ಧಿಪಡಿಸಲಿ.

॥ ಭಾವಾರ್ಥ ॥

ಜೊತೆಯಲ್ಲಿಯೇ ತುಷ್ಟಿಯನ್ನು ಹೊಂದುವವರೂ, ವೃಷ್ಟಿಕಾರಕರೂ ಪ್ರಸಿದ್ಧರೂ ಆದ ರುದ್ರನೂ, ಸರಸ್ವತಿಯೂ, ವಿಷ್ಣುವೂ, ವಾಯುವೂ, ಋಭು, ವಾಜ ಮತ್ತು ವಿಭ್ವರೂ, ನಮ್ಮನ್ನು ಸುಖಪಡಿಸಲಿ. ದೇವತೆಗಳಿಗೆ ಹಿತಕಾರಕನಾದ ಪ್ರಜಾಪತಿಯೂ, ಪರ್ಜನ್ಯ ಮತ್ತು ವಾಯುದೇವನೂ ನಮ್ಮ ಅನ್ನವನ್ನು ವೃದ್ಧಿಪಡಿಸಲಿ.

## English Translation.

May Rudra and Saraswati, alike well pleased, and Vishnu and Vayu, make us happy, sending rain; and Ribhukshin, and Vaja, and the divine Vidhatri: and may Parjanya and Vata grant us abundant food.

॥ ಸಂಹಿತಾಪಾಠಃ ॥

ಉತ ಸ್ಯ ದೇವಃ ಸವಿತಾ ಭಗೋ ನೋಽಪಾಂ ನಪಾದವತು ದಾನು ಪಪ್ರಿಃ ।
ತ್ವಷ್ಟಾ ದೇವೇಭಿರ್ಜನಿಭಿಃ ಸಜೋಷಾ ದ್ಯೌರ್ದೇವೇಭಿಃ ಪೃಥಿವೀ ಸಮುದ್ರೈಃ ॥

॥ ಪದಪಾಠಃ ॥

ಉತ । ಸ್ಯಃ । ದೇವಃ । ಸವಿತಾ । ಭಗಃ । ನಃ । ಅಪಾಂ । ನಪಾತ್ । ಅವತು । ದಾನು । ಪಪ್ರಿಃ ।
ತ್ವಷ್ಟಾ । ದೇವೇಭಿಃ । ಜನಿಽಭಿಃ । ಸ್ಽಜೋಷಾಃ । ದ್ಯೌಃ । ದೇವೇಭಿಃ । ಪೃಥಿವೀ । ಸಮುದ್ರೈಃ ॥ ೧೩ ॥

॥ ಸಾಯಣಭಾಷ್ಯಂ ॥

**ಉತಾಪಿ ಚ ಸ್ಯ ಸ ಯಃ ಪ್ರೇರಕತಯಾ ಸರ್ವತ್ರ ಪ್ರಖ್ಯಾತಃ ಸ ಸವಿತಾ ದೇವೋ ಭಗಶ್ಚಾಪಾಂ ನಪಾಚ್ಚಾಪಾಂ ಮೇಘಸ್ಥಾನಾಂ ಪುತ್ರೋ ಮಾಧ್ಯಮಿಕೋಽಗ್ನಿಃ ಸ ಚ ನೋಽಸ್ಮಾನವತು । ರಕ್ಷತು । ಕೀದೃಶೋಽಪಾಂ ನಪಾತ್ । ದಾನು ದಾತವ್ಯಂ ಧನಂ ಪಪ್ರಿಃ ಪ್ರಾತಾ ಪೂರಯಿತಾ ॥ ಪ್ರಾ ಪೂರಣ ಇತ್ಯಸ್ಮಾದಾದೃಗಮಹನ ಇತಿ ಕಿನೋ ಲಿಡ್ವದ್ಭಾವಾನ್ನ ಲೋಕಾವ್ಯಯೇತಿ ಷಷ್ಠೀಪ್ರತಿಷೇಧಃ ॥ ತಥಾ ದೇವೇಭಿರ್ದೇವೈರ್ಜನಿಭಿಸ್ತತ್ಪತ್ನೀಭಿಶ್ಚ ಸಜೋಷಾಃ ಸಹಪ್ರೀತಿಸ್ತ್ವಷ್ಟಾ ಚ ದೇವೇಭಿರ್ದೇವೈಃ ಸಹ ಪ್ರೀಯಮಾಣಾ ದ್ಯೌಶ್ಚ ಸಮುದ್ರೈಃ ಸಹ ಪ್ರೀಯಮಾಣಾ ಪೃಥಿವೀ ಚೈತಾಶ್ಚ ಸರ್ವಾ ದೇವತಾ ಅಸ್ಮಾನವಂತು ॥**

॥ ಪ್ರತಿಪದಾರ್ಥ ॥

**ಉತ**—ಮತ್ತು । **ಸ್ಯಃ**—ಪ್ರಸಿದ್ಧನೂ । **ದೇವಃ**—ದೇವತಾತ್ಮನೂ ಆದ । **ಸವಿತಾ**—ಸವಿತೃದೇವನೂ । **ಭಗಃ**—ಭಗನೂ । **ದಾನು**—ಕೊಡಬೇಕಾದ ಧನವನ್ನು । **ಪಪ್ರಿಃ**—ತುಂಬಿಕೊಡತಕ್ಕ । **ಅಪಾಂ ನಪಾತ್**—ಅಂತರಿಕ್ಷಸ್ಥನಾದ ಅಗ್ನಿಯೂ । **ನಃ**—ನಮ್ಮನ್ನು । **ಅವತು**—ರಕ್ಷಿಸಲಿ । **ದೇವೇಭಿಃ**—ದೇವತೆಗಳೊಡನೆಯೂ । **ಜನಿಭಿಃ**—ತತ್ಪತ್ನಿಯರೊಡನೆಯೂ । **ಸಜೋಷಾಃ**—ಕೂಡಿಕೊಂಡಿರತಕ್ಕ । **ತ್ವಷ್ಟಾ**—ತ್ವಷ್ಟೃವೂ । **ದೇವೇಭಿಃ**—ದೇವತೆಗಳೊಡಗೂಡಿರುವ । **ದ್ಯೌಃ**—ದ್ಯುಲೋಕವೂ । **ಸಮುದ್ರೈಃ**—ಸಮುದ್ರಗಳೊಡಗೂಡಿರುವ । **ಪೃಥಿವೀ**—ಪೃಥಿವಿಯೂ (ನಮ್ಮನ್ನು ರಕ್ಷಿಸಲಿ).

॥ ಭಾವಾರ್ಥ ॥

ಪ್ರಸಿದ್ಧನೂ ದೇವತಾತ್ಮನೂ ಆದ ಸವಿತೃವೂ, ಭಗನೂ, ಅಂತರಿಕ್ಷಸ್ಥನಾದ ದಾತವ್ಯವಾದ ಧನವನ್ನು ತುಂಬಿ ಕೊಡತಕ್ಕ ಅಗ್ನಿಯೂ ನಮ್ಮನ್ನು ರಕ್ಷಿಸಲಿ. ದೇವತೆಗಳೊಡನೆಯೂ ತತ್ಪತ್ನಿಯರೊಡನೆಯೂ ಕೂಡಿರುವ ತ್ವಷ್ಟೃವೂ, ದೇವತೆಗಳೊಡಗೂಡಿರುವ ದ್ಯುಲೋಕವೂ. ಸಮುದ್ರಗಳೊಡಗೂಡಿರುವ ಪೃಥಿವಿಯೂ ನಮ್ಮನ್ನು ರಕ್ಷಿಸಲಿ.

## English Translation.

And may the divinie Savitri and Bhaga, and the grandson of the waters, (Agni), the prodigal of gifts preserve us ; and may Twashtri with the gods, and Earth with the seas, (preserve us).

॥ ಸಂಹಿತಾಪಾಠಃ ॥

ಉತ ನೋಽಹಿರ್ಬುಧ್ನ್ಯಃ ಶೃಣೋತ್ವಜ ಏಕಪಾತ್ಪೃಥಿವೀ ಸಮುದ್ರಃ ।
ವಿಶ್ವೇ ದೇವಾ ಋತಾವೃಧೋ ಹುವಾನಾಃ ಸ್ತುತಾ ಮಂತ್ರಾಃ ಕವಿಶಸ್ತಾ
ಅವಂತು ॥ ೧೪ ॥

॥ ಪದಪಾಠಃ ॥

ಉತ । ನಃ । ಅಹಿಃ । ಬುಧ್ನ್ಯಃ । ಶೃಣೋತು । ಅಜಃ । ಏಕಽಪಾತ್ । ಪೃಥಿವೀ । ಸಮುದ್ರಃ ।
ವಿಶ್ವೇ । ದೇವಾಃ । ಋತಽವೃಧಃ । ಹುವಾನಾಃ । ಸ್ತುತಾಃ । ಮಂತ್ರಾಃ । ಕವಿಽಶಸ್ತಾಃ । ಅವಂತು ॥೧೪॥

॥ ಸಾಯಣಭಾಷ್ಯಂ ॥

ಆಗ್ನಿಮಾರುತ ಉತ ನೋಽಹಿರಿತ್ಯೇಷಾ । ಸೂತ್ರಿತಂ ಚ । ಉತ ನೋಽಹಿರ್ಬುಧ್ನ್ಯಃ ಶೃಣೋತು ದೇವಾನಾಂ ಪತ್ನೀರುಶತೀರವಂತು ನಃ । ಆ. ೫–೨೦ । ಇತಿ ॥

ಉತಾಪಿ ಚಾಹಿರ್ಬುಧ್ನ್ಯೋ ನೋಽಸ್ಮಾಕಂ ಸ್ತೋತ್ರಂ ಶೃಣೋತು । ಅಜೋ ಜನ್ಮರಹಿತಃ । ಏಕೋಽಸಹಾಯ ಏವ ಪದ್ಯತೇ ಗಚ್ಛತೀತ್ಯೇಕಪಾತ್ । ಏತತ್ಪದದ್ವಯಾಭಿಧೇಯೋ ದೇವಶ್ಚ ಪೃಥಿವೀ ಸಮುದ್ರಶ್ಚಾಸ್ಮದೀಯಂ ಸ್ತೋತ್ರಂ ಶೃಣೋತು । ಅಪಿ ಚ ಋತಾವೃಧ ಋತಸ್ಯ ಯಜ್ಞಸ್ಯ ಸತ್ಯಸ್ಯ ವಾ ವರ್ಧಯಿತಾರೋ ಹುವಾನಾ ಅಸ್ಮಾಭಿರಾಹೂಯಮಾನಾಃ ಪೂರ್ವೈರ್ಋಷಿಭಿಶ್ಚ ಸ್ತೋತ್ರೈಃ ಸ್ತುತಾ ಮಂತ್ರಾ ಮಂತ್ರಣೀಯಾ ಗುಪ್ತಂ ಭಾಷಿತವ್ಯಾ ಮಂತ್ರಪ್ರತಿಪಾದ್ಯಾ ವಾ ಕವಿಶಸ್ತಾಃ ಕವಿಭಿರ್ಮೇಧಾವಿಭಿರ್ಋಷಿಭಿಃ ಶಸ್ತ್ರೈಃ ಶಂಸಿತಾ ಈದೃಶಾ ವಿಶ್ವೇ ದೇವಾ ಅವಂತು । ಅಸ್ಮಾನ್ರಕ್ಷಂತು ॥

॥ ಪ್ರತಿಪದಾರ್ಥ ॥

**ಉತ**—ಮತ್ತು । **ಅಹಿರ್ಬುಧ್ನ್ಯಃ**—ಅಹಿರ್ಬುಧ್ನ್ಯದೇವನೂ । **ಅಜ ಏಕಪಾತ್**—ಅಜ ಏಕಪಾತ್ ಎಂಬ ಸಂಜ್ಞೆಯುಳ್ಳ ದೇವನೂ । **ಪೃಥಿವೀ**—ಪೃಥಿವಿಯೂ । **ಸಮುದ್ರಃ**—ಸಮುದ್ರಾಧಿದೇವತೆಯೂ । **ನಃ**—ನಮ್ಮ ಸ್ತೋತ್ರವನ್ನು । **ಶೃಣೋತು**—ಕೇಳಲಿ । **ಋತಾವೃಧಃ**—ಯಜ್ಞವರ್ಧಕರೂ । **ಹುವಾನಾಃ**—

ನಮ್ಮಿಂದ ಕರೆಯಲ್ಪಡುವವರೂ। **ಸ್ತುತಾಃ**—ನಮ್ಮಿಂದ ಸ್ತುತಿಸಲ್ಪಡುವವರೂ। **ಮಂತ್ರಾಃ**—ನಮ್ಮ ಧ್ಯಾನಾರ್ಹರೂ। **ಕವಿಶಸ್ತಾಃ**—ಪ್ರಾಜ್ಞರಿಂದ ಪ್ರಶಂಸಿಸಲ್ಪಡುವವರೂ ಆದ। **ವಿಶ್ವೇದೇ ದೇವಾಃ**—ವಿಶ್ವೇದೇವತೆಗಳೆಲ್ಲರೂ। **ಅವಂತು**—ನಮ್ಮನ್ನು ರಕ್ಷಿಸಲಿ.

॥ ಭಾವಾರ್ಥ ॥

ಅಹಿರ್ಬುಧ್ನ್ಯ, ಅಜ ಏಕಪಾತ್, ಪೃಥಿವೀ, ಸಮುದ್ರಾಧಿದೇವತೆ ಇವರೆಲ್ಲರೂ ನಮ್ಮ ಸ್ತೋತ್ರವನ್ನು ಕೇಳಲಿ. ಯಜ್ಞವರ್ಧಕರೂ, ನಮ್ಮಿಂದ ಕರೆಯಲ್ಪಡುವವರೂ, ನಮ್ಮ ಸ್ತುತಿಗೂ ಧ್ಯಾನಕ್ಕೂ ಅರ್ಹರೂ, ಪ್ರಾಜ್ಞರ ಪ್ರಶಂಸೆಗೆ ಪಾತ್ರರೂ ಆದ ವಿಶ್ವೇದೇವತೆಗಳೆಲ್ಲರೂ ನಮ್ಮನ್ನು ರಕ್ಷಿಸಲಿ.

## English Translation.

May Ahirbudhnya, Aja-ekapad, and Earth and Ocean, hear us : may the universal gods, who are exalted by sacrifie, they who are invoked and praised (by us), to whom mystical prayers are addressed, and who have been glorified by (ancient) sages, preserve us.

॥ ವಿಶೇಷವಿಷಯಗಳು ॥

ಅಗ್ನಿಮಾರುತಶಸ್ತ್ರಮಂತ್ರಗಳನ್ನು ಪಠಿಸುವಾಗ **ಉತ ನೋಽಹಿಃ** ಎಂಬ ಈ ಋಕ್ಕನ್ನು ಸೇರಿಸಿ ಪಠಿಸಬೇಕೆಂದು ಆಶ್ವಲಾಯನ ಶ್ರೌತಸೂತ್ರದ—**ಉತ ನೋಽಹಿರ್ಬುಧ್ನ್ಯಃ ಶೃಣೋತು ದೇವಾನಾಂ ಪತ್ನೀರುಶತೀರವಂತು ನಃ** ಎಂಬ ಸೂತ್ರದಿಂದ (ಆ. ೫-೨೦) ವಿವೃತವಾಗಿರುವುದು.

**ಅಹಿರ್ಬುಧ್ನ್ಯಃ** :—ಈ ದೇವತೆಯ ವಿಷಯದಲ್ಲಿ ಋ.ಸಂ. ಭಾಗ ೫ ಪುಟ 588 ಮತ್ತು ಭಾಗ ೧೪ ಪುಟ 142-143ರಲ್ಲಿ ಬರೆದಿರುವುದನ್ನು ನೋಡಿ.

**ಅಜ ಏಕಪಾತ್**—ಈ ದೇವತೆಯ ವಿಷಯದಲ್ಲಿ ಋ. ಸಂ. ಭಾಗ ೫ ಪುಟ 588 ಮತ್ತು ಭಾಗ ೧೫ ಪುಟ 174ರಲ್ಲಿ ಬರೆದಿರುವುದನ್ನು ನೋಡಿ.

॥ ಸಂಹಿತಾಪಾಠಃ ॥

ಏವಾ ನಪಾತೋ ಮಮ ತಸ್ಯ ಧೀಭಿರ್ಭರದ್ವಾಜಾ ಅಭ್ಯರ್ಚಂತ್ಯರ್ಕೈಃ ।
ಗ್ನಾ ಹುತಾಸೋ ವಸವೋಽಧೃಷ್ಟಾ ವಿಶ್ವೇ ಸ್ತುತಾಸೋ ಭೂತಾ ಯಜತ್ರಾಃ॥

॥ ಪದಪಾಠಃ ॥

ಏವ । ನಪಾತಃ । ಮಮ । ತಸ್ಯ । ಧೀಭಿಃ । ಭರತ್ऽವಾಜಾಃ । ಅಭಿ । ಅರ್ಚಂತಿ । ಅರ್ಕೈಃ ।
ಗ್ನಾಃ । ಹುತಾಸಃ । ವಸವಃ । ಅಧೃಷ್ಟಾಃ । ವಿಶ್ವೇ । ಸ್ತುತಾಸಃ । ಭೂತ । ಯಜತ್ರಾಃ ॥ ೧೫ ॥

॥ ಸಾಯಣಭಾಷ್ಯಂ ॥

ಏವ್ನೈವಂ ಯೋಽಹಂ ದೇವಾನ್ ಸ್ತುತವಾನ್ ತಸ್ಯ ಮಮ ಋಜಿಶ್ವನೋ ನಪಾತಃ ಪುತ್ರಾ ಭರದ್ವಾಜಾ ಭರದ್ವಾಜಗೋತ್ರಜಾಃ ಸುಹೋತ್ರಾದಯೋ ಧೀಭಿಃ ಸ್ತೋತ್ರೈರರ್ಕೈರರ್ಚನಸಾಧನೈರಭ್ಯ-ರ್ಚಂತಿ । ಅಭಿಷ್ಟುವಂತಿ । ಹೇ ಯಜತ್ರಾ ಯಷ್ಟವ್ಯಾ ದೇವಾ ಹುತಾಸಃ ಪುರೋಡಾಶಾದಿಭಿರ್ಹವಿರ್ಭಿ-ರ್ಹುತಾಸ್ತರ್ಪಿತಾ ವಸವೋ ನಿವಾಸಯಿತಾರೋಽಧೃಷ್ಟಾಃ ಕೈರಪ್ಯಹಿಂಸಿತಾ ಏವಂಭೂತಾ ವಿಶ್ವೇ ತೇ ಸರ್ವೇ ಯೂಯಂ ಗ್ನಾ ದೇವಪತ್ನ್ಯಶ್ಚ ಸ್ತುತಾಸೋ ಭೂತ । ತೈಃ ಸುಹೋತ್ರಾದಿಭಿಃ ಸ್ತುತಾ ಭವತ ॥

॥ ಪ್ರತಿಪದಾರ್ಥ ॥

**ಏವ**— ಈ ಪ್ರಕಾರವಾಗಿ ನಿಮ್ಮನ್ನು ಸ್ತುತಿಸಿದ । **ತಸ್ಯ ಮಮ**— ಋಜಿಶ್ವನಾಮಕನಾದ ನನ್ನ । **ನಪಾತಃ**—ಪುತ್ರರಾದ । **ಭರದ್ವಾಜಾಃ**—ಭರದ್ವಾಜವಂಶದವರು । **ಧೀಭಿಃ**—ಸ್ತುತಿಗಳಿಂದಲೂ । **ಅರ್ಕೈಃ**—ಪೂಜಾಸಾಧನಗಳಿಂದಲೂ । **ಅಭ್ಯರ್ಚಂತಿ**—ನಿಮ್ಮನ್ನು ಸ್ತುತಿಸಿ ಪೂಜಿಸುತ್ತಾರೆ । **ಯಜತ್ರಾಃ**—ಪೂಜಾರ್ಹರೂ । **ಹುತಾಸಃ**—ಪುರೋಡಾಶಾದಿಗಳನ್ನು ಅರ್ಪಿಸಲ್ಪಡುವವರೂ । **ವಸವಃ**—ವಸತಿದಾಯಕರೂ । **ಅಧೃಷ್ಟಾಃ**—ಅಪ್ರತಿಹತರೂ ಆದ । **ವಿಶ್ವೇ**—ಸಕಲ ದೇವತೆಗಳೂ । **ಗ್ನಾಃ**—ದೇವಪತ್ನಿಯರೂ । **ಸ್ತುತಾಸಃ**—ನಮ್ಮಿಂದ ಸ್ತುತಿಸಲ್ಪಟ್ಟವರಾಗಿ । **ಭೂತ**—ಆಗಿರಿ

॥ ಭಾವಾರ್ಥ ॥

ಮೇಲೆ ಕಂಡಂತೆ ನಿಮ್ಮನ್ನು ಸ್ತುತಿಸಿದ ಋಜಿಶ್ವನಾಮಕನಾದ ನನ್ನ ಪುತ್ರರಾದ ಭರದ್ವಾಜಗೋತ್ರಜರು ಸ್ತುತಿಗಳಿಂದಲೂ ಪೂಜಾಸಾಧನಗಳಿಂದಲೂ ನಿಮ್ಮನ್ನು ಸ್ತುತಿಸಿ ಪೂಜಿಸುತ್ತಾರೆ. ಪೂಜಾರ್ಹರೂ ಪುರೋಡಾಶಾದಿಗಳನ್ನು ಅರ್ಪಿಸಲ್ಪಡುವವರೂ, ವಸತಿದಾಯಕರೂ ಅಪ್ರತಿಹತರೂ ಆದ ಸಕಲ ದೇವತೆಗಳೂ, ಸಕಲದೇವಪತ್ನಿಯರೂ ಸಹ ನಮ್ಮಿಂದ ಸ್ತುತರಾಗಲಿ.

English Translation.

Thus do my sons, of the race of Bharadwaja, worship the gods with sacred rites and holy hymns ; and so, adorable (deities), may you, who are worshipped and glorified, the givers of dwellings, the invincible, universal gods, ever be adored, (together with your) wives.

## ಐವತ್ತೊಂದನೆಯ ಸೂಕ್ತವು

॥ ಸಾಯಣಭಾಷ್ಯಂ ॥

ಉದು ತ್ಯದಿತಿ ಷೋಡಶರ್ಚಂ ದ್ವಿತೀಯಂ ಸೂಕ್ತಮೃಜಿಶ್ವನ ಆರ್ಷಂ ವೈಶ್ವದೇವಂ । ತ್ರಯೋ-ದಶ್ಯಾದ್ಯಾಸ್ತಿಸ್ರ ಉಷ್ಣಿಹಃ ಷೋಡಶ್ಯನುಷ್ಟುಪ್ ಶಿಷ್ಟಾಸ್ತ್ರಿಷ್ಟುಭಃ । ತಥಾ ಚಾನುಕ್ರಾಂತಂ । ಉದು ತ್ಯತ್ಷೋಳಶ ತ್ರ್ಯುಷ್ಣಿಗನುಷ್ಟುಬಂತಮಿತಿ ॥ ಗತಃ ಸೂಕ್ತವಿನಿಯೋಗಃ ॥

ಅನುವಾದವು---**ಉದು ತ್ಯತ್** ಎಂಬ ಈ ಸೂಕ್ತವು ಐದನೆಯ ಅನುವಾಕದಲ್ಲಿ ಎರಡನೆಯ ಸೂಕ್ತವು. ಇದರಲ್ಲಿ ಹದಿನಾರು ಋಕ್ಕುಗಳಿರುವುವು. ಈ ಸೂಕ್ತಕ್ಕೆ ಋಜಿಶ್ವಾ ಎಂಬುವನು ಋಷಿಯು; ವಿಶ್ವೇದೇವತೆಗಳು ದೇವತೆಯು ; ಈ ಸೂಕ್ತದ ಹದಿಮೂರನೆಯ ಋಕ್ಕಿನಿಂದ ಮುಂದಿನ ಮೂರು ಋಕ್ಕುಗಳು **ಉಷ್ಣಿಕ್** ಎಂಬ ಛಂದಸ್ಸಿನವು. ಹದಿನಾರನೆಯದು ಅನುಷ್ಟುಪ್ ಛಂದಸ್ಕವು. ಉಳಿದ ಋಕ್ಕುಗಳು ತ್ರಿಷ್ಟುಪ್‌ಛಂದಸ್ಕವು. ಅನುಕ್ರಮಣಿಕೆಯಲ್ಲಿ—**ಉದು ತ್ಯತ್ಷೋಳಶ ತ್ರ್ಯುಷ್ಣಿಗನುಷ್ಟುಬಂತಂ** ಎಂದು ಹೇಳಿರುವುದು. ಸೂಕ್ತವಿನಿಯೋಗವನ್ನು ಹಿಂದೆಯೇ ಹೇಳಲಾಗಿದೆ.

## ಸೂಕ್ತ—೫೧

ಮಂಡಲ—೬ ॥ ಅನುವಾಕ—೫ ॥ ಸೂಕ್ತ—೫೧ ॥
ಅಷ್ಟಕ—೪ ॥ ಅಧ್ಯಾಯ—೮ ॥ ವರ್ಗ—೧೧, ೧೨, ೧೩ ॥

॥ ಸೂಕ್ತದಲ್ಲಿರುವ ಋಕ್ಸಂಖ್ಯೆ—೧೬ ॥
॥ ಋಷಿಃ—ಋಜಿಶ್ವಾ ॥
॥ ದೇವತಾ—ವಿಶ್ವೇದೇವಾಃ ॥
॥ ಛಂದಃ—೧-೧೨ ತ್ರಿಷ್ಟುಪ್ । ೧೩-೧೫. ಉಷ್ಣಿಕ್ । ೧೬ ಅನುಷ್ಟುಪ್ ॥

॥ ಸಂಹಿತಾಪಾಠಃ ॥

ಉದು ತ್ಯಚ್ಚಕ್ಷುರ್ಮಹಿ ಮಿತ್ರಯೋರಾँ ಏತಿ ಪ್ರಿಯಂ ವರುಣಯೋರದಬ್ಧಂ ।
ಋತಸ್ಯ ಶುಚಿ ದರ್ಶತಮನೀಕಂ ರುಕ್ಮೋ ನ ದಿವ ಉದಿತಾ ವ್ಯದ್ಯೌತ್ ॥೧॥

॥ ಪದಪಾಠಃ ॥

ಉತ್ । ಊಂ ಇತಿ । ತ್ಯತ್ । ಚಕ್ಷುಃ । ಮಹಿ । ಮಿತ್ರಯೋಃ । ಆ । ಏತಿ । ಪ್ರಿಯಂ । ವರುಣಯೋಃ ಅದಬ್ಧಂ ।
ಋತಸ್ಯ । ಶುಚಿ । ದರ್ಶತಂ । ಅನೀಕಂ । ರುಕ್ಮಃ । ನ । ದಿವಃ । ಉತ್ಽಇತಾ । ವಿ । ಅದ್ಯೌತ್ ॥ ೧ ॥

॥ ಸಾಯಣಭಾಷ್ಯಂ ॥

ತ್ಯತ್ತತ್ಪ್ರಸಿದ್ಧಂ ಚಕ್ಷುಃ ಪ್ರಕಾಶಕಂ ಮಹಿ ಮಹದ್ವಿಸ್ತೃತಂ ಮಿತ್ರಯೋರ್ವರುಣಯೋಃ ಪ್ರಿಯಂ। ಮಿತ್ರಶಬ್ದೋ ವರುಣಶಬ್ದಶ್ಚೇತರೇತರಯೋಗಾನ್ಮಿತ್ರಾವರುಣಾವುಭಾವಪ್ಯಾಚಷ್ಟೇ। ಮಿತ್ರಾವರುಣಯೋಃ ಪ್ರಿಯಮದಬ್ಧಂ ರಕ್ಷೋಭಿರಹಿಂಸಿತಂ ಶುಚಿ ಶುದ್ಧಂ ನಿರ್ಮಲಂ ದರ್ಶತಂ ದರ್ಶನೀಯಂ । ಏವಂಭೂತಮೃತಸ್ಯಾದಿತ್ಯಸ್ಯಾನೀಕಂ ತೇಜ ಆ ಸರ್ವೇಷಾಮಭಿಮುಖಮುದೇತಿ। ಉದ್ಗಚ್ಛತಿ। ಉದಿತೋದಿತಾ ಸೂರ್ಯಸ್ಯೋದಯೇ ಸತ್ಯುದಿತಂ ತತ್ತೇಜೋ ದಿವೋಽಂತರಿಕ್ಷಸ್ಯ ರುಕ್ಮೋ ನ ಭೂಷಣಮಿವ ವ್ಯದ್ಯೌತ್ । ವಿದ್ಯೋತತೇ। ಪ್ರಕಾಶತೇ ॥

॥ ಪ್ರತಿಪದಾರ್ಥ ॥

**ಋತಸ್ಯ**—ಆದಿತ್ಯನ | **ತ್ಯತ್ ಉ**—ಪ್ರಸಿದ್ಧವಾದುದೂ | **ಚಕ್ಷುಃ**—ಪ್ರಕಾಶಮಾನವಾದುದೂ | **ಮಹಿ**—ಅತಿ ವಿಸ್ತೃತವಾದುದೂ | **ಮಿತ್ರಯೋಃ ವರುಣಯೋಃ**—ಮಿತ್ರಾವರುಣರಿಬ್ಬರಿಗೂ | **ಪ್ರಿಯಂ**—ಹಿತಕರವಾದುದೂ | **ಅದಬ್ಧಂ**—ಶತ್ರುಗಳಿಂದ ಅಹಿಂಸಿತವಾದುದೂ | **ಶುಚಿ**—ಶುದ್ಧವಾದುದೂ | **ದರ್ಶತಂ**—ನೋಟಕ್ಕೆ ಆಕರ್ಷಕವಾದುದೂ ಆದ | **ಅನೀಕಂ**—ತೇಜಸ್ಸು | **ಆ ಉತ್ ಏತಿ**—ಎಲ್ಲರ ಅಭಿಮುಖವಾಗಿಯೂ ಆವಿರ್ಭವಿಸಿ ಉದಯಿಸುತ್ತದೆ | **ಉದಿತಾ**—ಸೂರ್ಯೋದಯವಾದೊಡನೆಯೇ ಪ್ರಕಾಶಿಸುವ ಆ ತೇಜಸ್ಸು | **ರುಕ್ಮೋ ನ**—ಅಂತರಿಕ್ಷಕ್ಕೆಲ್ಲಾ ಭೂಷಣವಾಗಿರುವಂತೆ | **ವಿ ಅದ್ಯೌತ್**—ಪ್ರಕಾಶಿಸುತ್ತದೆ.

॥ ಭಾವಾರ್ಥ ॥

ಪ್ರಸಿದ್ಧವಾದುದೂ, ಪ್ರಕಾಶಮಾನವಾದುದೂ, ಅತಿ ವಿಸ್ತೃತವಾದುದೂ, ಮಿತ್ರಾ ವರುಣರಿಬ್ಬರಿಗೂ ಹಿತಕರವಾದುದೂ, ಶತ್ರುಗಳಿಂದ ಅಹಿಂಸಿತವಾದುದೂ, ಶುದ್ಧವಾದುದೂ, ನೋಟಕ್ಕೆ ಆಕರ್ಷಕವಾದುದೂ ಆದ ಆದಿತ್ಯನ ತೇಜಸ್ಸುಎಲ್ಲರ ಅಭಿಮುಖವಾಗಿಯೂ ಆವಿರ್ಭವಿಸುತ್ತದೆ. ಸೂರ್ಯೋದಯವಾದೊಡನೆಯೇ ಪ್ರಕಾಶಿಸುವ ಆ ತೇಜಸ್ಸು, ಅಂತರಿಕ್ಷಕ್ಕೆಲ್ಲಾ ಭೂಷಣವಾಗಿರುವಂತೆ ಪ್ರಕಾಶಿಸುತ್ತದೆ.

## English Translation.

The expansive, illuminating, unobstructive, pure, and beautiful radiance of the sun, grateful to Mitra and Varuna, having risen, shines like the ornament of the sky.

॥ ಸಂಹಿತಾಪಾಠಃ ॥

ವೇದ ಯಸ್ತ್ರೀಣಿ ವಿದಥಾನ್ಯೇಷಾಂ ದೇವಾನಾಂ ಜನ್ಮ ಸನುತರಾ ಚ ವಿಪ್ರಃ।
ಋಜು ಮರ್ತೇಷು ವೃಜಿನಾ ಚ ಪಶ್ಯನ್ನಭಿ ಚಷ್ಟೇ ಸೂರೋ ಅರ್ಯ ಏವಾನ್ ॥ ೨ ॥

॥ ಪದಪಾಠಃ ॥

ವೇದ । ಯಃ । ತ್ರೀಣಿ । ವಿದಥಾನಿ । ಏಷಾಂ । ದೇವಾನಾಂ । ಜನ್ಮ । ಸನುತಃ । ಆ । ಚ । ವಿಪ್ರಃ ।
ಋಜು । ಮರ್ತೇಷು । ವೃಜಿನಾ । ಚ । ಪಶ್ಯನ್ । ಅಭಿ । ಚಷ್ಟೇ । ಸೂರಃ । ಅರ್ಯಃ । ಏವಾನ್ ॥೨॥

॥ ಸಾಯಣಭಾಷ್ಯಂ ॥

ಯಃ ಸೂರ್ಯಸ್ತ್ರೀಣಿ ತ್ರಿಸಂಖ್ಯಾನಿ ವಿದಥಾನಿ ವೇದಿತವ್ಯಾನಿ ಸ್ಥಾನಾನಿ ತ್ರೀಲ್ಲೋಕಾನ್ವೇದ ವೇತ್ತಿ ಜಾನಾತಿ । ಏಷಾಮೇತಲ್ಲೋಕತ್ರಯವರ್ತಿನಾಂ ದೇವಾನಾಂ ವಸುರುದ್ರಾದಿತ್ಯಾತ್ಮನಾಂ ಸನುತಃ ।

**ಅಂತರ್ಹಿತನಾಮ್ನೈತತ್ । ಅಂತರ್ಹಿತಮುಪ್ರಜ್ಞಾಯಮಾನಂ ಜನ್ಮ ಜನನಂ ಚ ಯೋ ವಿಪ್ರೋ ಮೇಧಾವೀ ಸೂರ್ಯೋ ವೇತ್ತಿ । ಆಕಾರಃ ಪೂರಕಃ । ಸ ಸೂರಃ ಸೂರ್ಯೋ ಮರ್ತೇಷು ಮನುಷ್ಯೇಷು ವಿದ್ಯಮಾನಾನ್ಯೃಜ್ನ್ಯೃಜೂನಿ ಶೋಭನಾನಿ ಕರ್ಮಾಣಿ ವೃಜಿನಾ ವೃಜಿನಾನ್ಯಶೋಭನಾನಿ ಕರ್ಮಾಣಿ ಚ ಪಶ್ಯನ್ ಸಾಕ್ಷಿತಯಾ ಜಾನನ್ ಅಭಿ ಚಷ್ಟೇ ! ಅಭಿತಃ ಸರ್ವಂ ಜಗತ್ಪ್ರಕಾಶಯತಿ । ತಥಾರ್ಯಃ ಸ್ವಾಮಿಾ ಭೂಕ್ತ್ವೈವಾನ್ ಪ್ರಾಪ್ತವ್ಯಾನ್ ಕಾಮಾಂಶ್ಚ ಮನುಷ್ಯೇಷು ಪ್ರಕಾಶಯತಿ ॥**

॥ ಪ್ರತಿಪದಾರ್ಥ ॥

**ವಿಪ್ರಃ**—ಮೇಧಾವಿಯಾದ । **ಯಃ**—ಯಾವ ಸೂರ್ಯನು । **ತ್ರೀಣಿ ವಿದಥಾನಿ**—ಪೃಥಿವ್ಯಾದಿ ಮೂರು ಲೋಕಗಳನ್ನೂ । **ವೇದ**—ಅರಿಯುವನೋ । **(ಯಃ**—ಯಾರು) । **ಏಷಾಂ**—ಈ ಮೂರು ಲೋಕಗಳಲ್ಲಿರುವ । **ದೇವಾನಾಂ**—ವಸುರುದ್ರಾದಿತ್ಯರೂಪರಾದ ಎಲ್ಲಾ ದೇವತೆಗಳ । **ಸನುತಃ**—ರಹಸ್ಯಾತ್ಮಕವಾದ । **ಜನ್ಮ ಚ**—ಉತ್ಪತ್ತಿಯ ಸ್ವರೂಪವನ್ನೂ ಕೂಡ (ಅರಿಯುವನೋ ಅಂತಹ) । **ಸೂರಃ**—ಸೂರ್ಯನು । **ಮರ್ತೇಷು**—ಮಾನವರಲ್ಲಿ ನೆರವೇರತಕ್ಕ । **ಋಜು**—ಉತ್ತಮವಾದ ಯಜ್ಞಾದಿಕರ್ಮಗಳನ್ನೂ । **ವೃಜಿನಾ ಚ**—ಪಾಪ ಕರ್ಮಗಳನ್ನೂ ಸಹ । **ಪಶ್ಯನ್**—ಸ್ವತಃ ನೋಡುತ್ತಾ । **ಅಭಿ ಚಷ್ಟೇ**—ಜಗತ್ತನ್ನು ಪ್ರಕಾಶಗೊಳಿಸುತ್ತಾನೆ । **ಅರ್ಯಃ**—ಲೋಕಕ್ಕೆಲ್ಲಾ ಸ್ವಾಮಿಯಾಗಿ । **ಏವಾನ್**—ಮಾನವರಿಗೆ ಅಪೇಕ್ಷಿತವಾದ ಸಕಲ ಕಾಮವಸ್ತುಗಳನ್ನೂ ಪ್ರಕಾಶಗೊಳಿಸುತ್ತಾನೆ.

॥ ಭಾವಾರ್ಥ ॥

ಮೇಧಾವಿಯಾದ ಯಾವ ಸೂರ್ಯನು ಪೃಥಿವ್ಯಂತರಿಕ್ಷಾದಿ ಮೂರು ಲೋಕಗಳನ್ನೂ ಅರಿಯುವನೋ, ಯಾರು ಈ ಮೂರು ಲೋಕಗಳಲ್ಲಿರುವ ವಸುರುದ್ರಾದಿತ್ಯರೂಪರಾದ ಎಲ್ಲಾ ದೇವತೆಗಳ ರಹಸ್ಯಾತ್ಮಕವಾದ ಉತ್ಪತ್ತಿಯ ಸ್ವರೂಪವನ್ನೂ ಅರಿಯುವನೋ ಅಂತಹ ಸೂರ್ಯನು ಮಾನವರಲ್ಲಿ ನೆರವೇರತಕ್ಕ ಉತ್ತಮವಾದ ಯಜ್ಞಾದಿಕರ್ಮಗಳನ್ನೂ ಪಾಪಕರ್ಮಗಳನ್ನೂ ಸ್ವತಃ ನೋಡುತ್ತಾ ಜಗತ್ತನ್ನು ಪ್ರಕಾಶಗೊಳಿಸುತ್ತಾನೆ. ಲೋಕಕ್ಕೆಲ್ಲಾ ಸ್ವಾಮಿಯಾಗಿ ಮಾನವರಿಗೆ ಅಪೇಕ್ಷಿತವಾದ ಸಕಲ ಕಾಮವಸ್ತುಗಳನ್ನೂ ಪ್ರಕಾಶಗೊಳಿಸುತ್ತಾನೆ.

## English Translation.

He who knows the three cognizable (worlds) ; the sage (who knows) the mysterious birth of the divinities (abiding in them) ; he who is beholding the god and evil acts of mortals, he, the sun, the lord, makes manifest their intentions.

॥ ಸಂಹಿತಾಪಾಠಃ ॥

**ಸ್ತುಷ ಉ ವೋ ಮಹ ಋತಸ್ಯ ಗೋಪಾನದಿತಿಂ ಮಿತ್ರಂ ವರುಣಂ ಸುಜಾತಾನ್ ।**

**ಅರ್ಯಮಣಂ ಭಗಮದಬ್ಧಧೀತೀನಚ್ಛಾ ವೋಚೇ ಸಧನ್ಯಃ ಪಾವಕಾನ್ ॥**

॥ ಪದಪಾಠಃ ॥

ಸ್ತುಷೇ । ಊಂ ಇತಿ । ವಃ । ಮಹಃ । ಋತಸ್ಯ । ಗೋಪಾನ್ । ಅದಿತಿಂ । ಮಿತ್ರಂ । ವರುಣಂ । ಸುऽ-ಜಾತಾನ್ ।

ಅರ್ಯಮಣಂ । ಭಗಂ । ಅದಬ್ಧऽಧೀತೀನ್ । ಅಚ್ಛ । ವೋಚೇ । ಸऽಧನ್ಯಃ । ಪಾವಕಾನ್ ॥ ೩ ॥

॥ ಸಾಯಣಭಾಷ್ಯಂ ॥

ಹೇ ದೇವಾ ಮಹೋ ಮಹತ ಋತಸ್ಯ ಯಜ್ಞಸ್ಯ ಗೋಪಾನ್ ರಕ್ಷಕಾನ್ವೋ ಯುಷ್ಮಾನ್ ಸ್ತುಷೇ । ಸ್ತುವೇ । ಉ ಇತಿ ಪೂರಣಃ । ತಾನೇವ ದೇವಾನಾಹ । ಅದಿತಿಮದೀನಾಂ ದೇವಮಾತರಂ ಮಿತ್ರಂ ವರುಣಂ ಚೈತಾನ್ ಸುಜಾತಾನ್ ಶೋಭನಜನನಾನರ್ಯಮಣಂ ಭಗಂ ಚಾದಬ್ಧಧೀತೀನಹಿಂಸಿತ-ಕರ್ಮಣಃ ಸಧನ್ಯೋ ಧನಸಹಿತಾನ್ ಪಾವಕಾನ್ ವಿಶ್ವಸ್ಯ ಶೋಧಕಾನ್ । ಈದೃಶಾನ್ ಸರ್ವಾನ್ದೇವಾನಚ್ಛ ವೋಚೇ । ಅಭಿಪ್ರಬ್ರವೀಮಿತ್ಯರ್ಥಃ ॥

॥ ಪ್ರತಿಪದಾರ್ಥ ॥

(ಎಲೈ ದೇವತೆಗಳೇ) **ಮಹಃ**—ಮಹತ್ತಾದ । **ಋತಸ್ಯ**—ಯಜ್ಞಕ್ಕೆ । **ಗೋಪಾನ್**—ರಕ್ಷಕರಾದ । **ವಃ**—ನಿಮ್ಮನ್ನು । **ಸ್ತುಷೇ**—ಸ್ತುತಿಸುತ್ತೇನೆ । **ಅದಿತಿಂ**—ಅದಿತಿಯನ್ನೂ । **ಮಿತ್ರಂ**— ಮಿತ್ರನನ್ನೂ । **ವರುಣಂ**—ವರುಣನನ್ನೂ । **ಅರ್ಯಮಣಂ**—ಅರ್ಯಮದೇವನನ್ನೂ । **ಭಗಂ ಚ**—ಭಗನನ್ನೂ । **ಸುಜಾತಾನ್**—ಉತ್ತಮವಾದ ಜನ್ಮವುಳ್ಳವರೂ । **ಅದಬ್ಧಧೀತೀನ್**— ಅಹಿಂಸಿತವಾದ ಕರ್ಮವುಳ್ಳವರೂ । **ಸಧನ್ಯಃ**—ಧನ ಸಹಿತರಾದವರೂ । **ಪಾವಕಾನ್**—ಶುದ್ಧಿಕಾರಕರೂ ಆದ ಈ ಸಕಲ ದೇವತೆಗಳನ್ನೂ । **ಅಚ್ಛ**—ಅತಿಶಯವಾಗಿ । **ವೋಚೇ**—ಪ್ರಶಂಸಿಸುತ್ತೇನೆ.

॥ ಭಾವಾರ್ಥ ॥

ಎಲೈ ದೇವತೆಗಳೇ, ಮಹತ್ತಾದ ಯಜ್ಞಕ್ಕೆ ರಕ್ಷಕರೂ, ಉತ್ತಮವಾದ ಜನ್ಮವುಳ್ಳವರೂ, ಅಹಿಂಸಿತವಾದ ಕರ್ಮವುಳ್ಳವರೂ, ಧನಸಹಿತರೂ, ಶುದ್ಧಿಕಾರಕರೂ ಆದ ಅದಿತಿ, ಮಿತ್ರ, ವರುಣ, ಅರ್ಯಮ, ಭಗ ಇತ್ಯಾದಿ ಸಕಲ ದೇವತೆಗಳನ್ನೂ ಅತಿಶಯವಾಗಿ ಪ್ರಶಂಸಿಸುತ್ತೇನೆ.

## English Translation.

I praise you, protectors of the solemn srcrifice, the well-born Aditi, Mitra and Varuna, and Aryaman and Bhaga : I celebrate the gods whose acts are unimpeded, the bestowers of wealth, the dispensers of purity ;

॥ ಸಂಹಿತಾಪಾಠಃ ॥

ರಿಶಾದಸಃ ಸತ್ಪತೀಁರದಬ್ಧಾನ್ಮಹೋ ರಾಜ್ಞಃ ಸುವಸನಸ್ಯ ದಾತೄನ್ ।
ಯೂನಃ ಸುಕ್ಷತ್ರಾನ್‌ಕ್ಷಯತೋ ದಿವೋ ನೄನಾದಿತ್ಯಾನ್ಯಾಮ್ಯದಿತಿಂ ದುವೋಯು ॥ ೪ ॥

॥ ಪದಪಾಠಃ ॥

ರಿಶಾದಸಃ । ಸತ್ಽಪತೀನ್ । ಅದಬ್ಧಾನ್ । ಮಹಃ । ರಾಜ್ಞಃ । ಸುಽವಸನಸ್ಯ । ದಾತೄನ್ ।
ಯೂನಃ । ಸುಽಕ್ಷತ್ರಾನ್ । ಕ್ಷಯತಃ । ದಿವಃ । ನೄನ್ । ಆದಿತ್ಯಾನ್ । ಯಾಮಿ । ಅದಿತಿಂ । ದುವಃಽಯು ॥

॥ ಸಾಯಣಭಾಷ್ಯಂ ॥

ರಿಶಾದಸೋ ರಿಶತಾಂ ಹಿಂಸಕಾನಾಮಸಿತೄನ್ ಕ್ಷೇಪ್ತೄನ್ ಯದ್ವಾ ರಿಶಾನಾಂ ಹಿಂಸಕಾನಾಮತ್ತೄನ್ ಭಕ್ಷಯಿತೄನ್ ಸತ್ಪತೀನ್ ಸತಾಂ ಪಾಲಯಿತೄನದಬ್ಧಾನಹಿಂಸಿತಾನ್ಮಹೋ ಮಹತೋ ರಾಜ್ಞೋ ರಾಜಮಾನಾನೀಶ್ವರಾನ್ವಾ ಸುವಸನಸ್ಯ ಶೋಭನನಿವಾಸಸ್ಯ ದಾತೄನ್ ಯೂನೋ ನಿತ್ಯತರುಣಾನ್ ಸುಕ್ಷತ್ರಾನ್ ಶೋಭನಧನಾನ್ ಶೋಭನಬಲಾನ್ವಾ ಕ್ಷಯತಃ ಸರ್ವತ್ರ ನಿವಸತಃ । ಯದ್ವಾ । ಕ್ಷಯತಿರೈಶ್ವರ್ಯಕರ್ಮಾ । ಈಶಾನಾನ್ ದಿವೋ ದ್ಯುಲೋಕಸ್ಯ ನೄನ್ನೇತೄನಾದಿತ್ಯಾನದಿತೇಃ ಪುತ್ರಾನ್ । ಈದೃಶಾನ್ ಸರ್ವಾನ್ದೇವಾನ್ದುವೋಯು ॥ ಲುಪ್ತವಿಭಕ್ತಿಕಮೇತತ್ ॥ ದುವೋಯುಂ ದುವೋಽಸ್ಮದೀಯಂ ಪರಿಚರಣಂ ಕಾಮಯಮಾನಾಮದಿತಿಂ ದೇವಮಾತರಂ ಚ ಯಾಮಿ । ಪ್ರಾಪ್ನೋಮಿ । ಯದ್ವಾ । ಯಾಮಿ । ಯಾಚಾಮಿ ॥

॥ ಪ್ರತಿಪದಾರ್ಥ ॥

**ರಿಶಾದಸಃ**—ಹಿಂಸಕರಾದ ಶತ್ರುಗಳನ್ನು ಚದುರಿಸುವವರೂ । **ಸತ್ಪತೀನ್**—ಸಜ್ಜನರ ಪಾಲಕರೂ । **ಅದಬ್ಧಾನ್**—ಅಹಿಂಸಿತರೂ । **ಮಹಃ**—ಮಹತ್ಸ್ವರೂಪವುಳ್ಳವರೂ । **ರಾಜ್ಞಃ**—ಪ್ರಕಾಶಮಾನರೂ । **ಸುವಸನಸ್ಯ**—ಉತ್ತಮವಾದ ನಿವಾಸಸ್ಥಾನಕ್ಕೆ । **ದಾತೄನ್**—ಪ್ರದಾತರೂ । **ಯೂನಃ**—ನಿತ್ಯತರುಣರೂ । **ಸುಕ್ಷತ್ರಾನ್**—ಶ್ರೇಷ್ಠವಾದ ಬಲವುಳ್ಳವರೂ । **ಕ್ಷಯತಃ**—ಸರ್ವತ್ರವ್ಯಾಪಿಸಿ ವಾಸಿಸತಕ್ಕವರೂ । **ದಿವಃ**—ದ್ಯುಲೋಕದ । **ನೄನ್**—ನೇತೃಗಳೂ ಆದ । **ಆದಿತ್ಯಾನ್**—ಅದಿತಿಪುತ್ರರಾದ ದೇವತೆಗಳನ್ನೂ । **ದುವೋಯು**—ನಮ್ಮ ಪೂಜಾಕರ್ಮವನ್ನಪೇಕ್ಷಿಸುವ । **ಅದಿತಿಂ**—ಅದಿತಿಯನ್ನೂ ! **ಯಾಮಿ**—ಸಮೀಪಿಸಿ ಪ್ರಾರ್ಥಿಸುತ್ತೇನೆ

॥ ಭಾವಾರ್ಥ ॥

ಹಿಂಸಕರಾದ ಶತ್ರುಗಳನ್ನು ಚದುರಿಸುವವರೂ, ಸಜ್ಜನರ ಪಾಲಕರೂ, ಅಹಿಂಸಿತರೂ, ಮಹತ್ಸ್ವರೂಪವುಳ್ಳವರೂ, ಪ್ರಕಾಶಮಾನರೂ, ಉತ್ತಮವಾದ ನಿವಾಸಸ್ಥಾನಕ್ಕೆ ಪ್ರದಾತರೂ, ನಿತ್ಯತರುಣರೂ, ಶ್ರೇಷ್ಠವಾದ ಬಲವುಳ್ಳವರೂ, ಸರ್ವತ್ರವ್ಯಾಪಿಸಿ ವಾಸಿಸತಕ್ಕವರೂ, ದ್ಯುಲೋಕದ ನೇತೃಗಳೂ ಆದ ಅದಿತಿಪುತ್ರರಾದ ದೇವತೆಗಳನ್ನೂ ನಮ್ಮ ಪೂಜಾಕರ್ಮವನ್ನಪೇಕ್ಷಿಸುವ ಅದಿತಿಯನ್ನೂ ಸಮೀಪಿಸಿ ಪ್ರಾರ್ಥಿಸುತ್ತೇನೆ.

## English Translation.

The scatterers of the malevolent, the defenders of the virtuous, the irresistible, the mighty lords, the donors of good dwellings, ever young, very powerful, omnipresent, leaders of heaven, the sons of Aditi : I have recourse to Aditi, who is gratified by my adoration.

॥ ಸಂಹಿತಾಪಾಠಃ ॥

ದ್ಯೌಷ್ಪಿತಃ ಪೃಥಿವಿ ಮಾತರಧ್ರುಗಗ್ನೇ ಭ್ರಾತರ್ವಸವೋ ಮೃಳತಾ ನಃ ।
ವಿಶ್ವ ಆದಿತ್ಯಾ ಅದಿತೇ ಸಜೋಷಾ ಅಸ್ಮಭ್ಯಂ ಶರ್ಮ ಬಹುಲಂ ವಿ ಯಂತ ॥

॥ ಪದಪಾಠಃ ॥

ದ್ಯೌಃ । ಪಿತರಿತಿ । ಪೃಥಿವಿ । ಮಾತಃ । ಅಧ್ರುಕ್ । ಅಗ್ನೇ । ಭ್ರಾತಃ । ವಸವಃ । ಮೃಳತ । ನಃ ।
ವಿಶ್ವೇ । ಆದಿತ್ಯಾಃ । ಅದಿತೇ । ಸಽಜೋಷಾಃ । ಅಸ್ಮಭ್ಯಂ । ಶರ್ಮ । ಬಹುಲಂ । ವಿ । ಯಂತ ॥ ೫ ॥

॥ ಸಾಯಣಭಾಷ್ಯಂ ॥

ಹೇ ಪಿತಃ ಪಿತೃಸ್ಥಾನೀಯ ದ್ಯೌರ್ದ್ಯುಲೋಕ ಹೇ ಮಾತರ್ಮಾತೃಸ್ಥಾನೀಯೇಽಧ್ರುಗದ್ರೋಗ್ಧ್ರಿ ಪೃಥಿವಿ ಹೇ ಭ್ರಾತರ್ಭ್ರಾತೃಸ್ಥಾನೀಯಾಗ್ನೇ ಹೇ ವಸವೋ ವಾಸಯಿತಾರೋ ದೇವಾಸ್ತೇ ಸರ್ವೇ ಯೂಯಂ ನೋಽಸ್ಮಾನ್ಮೃಳತ । ಸುಖಯತ । ಹೇ ವಿಶ್ವ ಆದಿತ್ಯಾಃ ಸರ್ವೇಽದಿತಿಪುತ್ರಾ ದೇವಾ ಹೇ ಅದಿತೇ ಯೂಯಂ ಸಜೋಷಾಃ ಸಂಗತಾ ಭೂತ್ವಾಸ್ಮಭ್ಯಂ ಬಹುಲಮಧಿಕಂ ಶರ್ಮ ಸುಖಂ ವಿಸ್ತೃತಂ ವಾ ಗೃಹಂ ವಿ ಯಂತ । ಪ್ರಯಚ್ಛತ ॥

॥ ಪ್ರತಿಪದಾರ್ಥ ॥

**ಪಿತಃ**—ಪಿತೃರೂಪನಾದ । **ದ್ಯೌಃ**—ಎಲೈ ದ್ಯುಲೋಕಾಧಿದೇವತೆಯೇ । **ಮಾತಃ**—ಮಾತೃರೂಪಳೂ । **ಅಧ್ರುಕ್**—(ನಿನ್ನ ಪುತ್ರರಿಗೆ) ದ್ರೋಹವನ್ನಾಚರಿಸದವಳೂ ಆದ । **ಪೃಥಿವಿ**—ಎಲೈ ಪೃಥ್ವಿಯೇ । **ಭ್ರಾತಃ**—ಸಹೋದರಪ್ರಾಯನಾದ । **ಅಗ್ನೇ**—ಎಲೈ ಅಗ್ನಿಯೇ । **ವಸವಃ**—ವಸುಸಂಜ್ಞಕರಾದ ಎಲೈ ದೇವತೆಗಳೇ, (ನೀವೆಲ್ಲರೂ ಸಹ) । **ನಃ**—ನಮ್ಮನ್ನು । **ಮೃಳತ**—ಸುಖಪಡಿಸಿರಿ । **ವಿಶ್ವೇ ಆದಿತ್ಯಾಃ**—ಅದಿತಿಪುತ್ರರಾದ ಎಲೈ ಸಕಲ ದೇವತೆಗಳೇ । **ಅದಿತೇ**—ಎಲೈ ಅದಿತಿದೇವಿಯೇ । **ಸಜೋಷಾಃ**—ನೀವೆಲ್ಲರೂ ಒಟ್ಟುಗೂಡಿ ಕೊಂಡು । **ಅಸ್ಮಭ್ಯಂ**—ನಮಗೆ । **ಬಹುಲಂ**—ಅತ್ಯಧಿಕವಾದ । **ಶರ್ಮ**—ಸುಖವನ್ನು । **ವಿ ಯಂತ**—ಒದಗಿಸಿ ಕೊಡಿರಿ.

॥ ಭಾವಾರ್ಥ ॥

ಪಿತೃರೂಪನಾದ ಎಲೈ ದ್ಯುಲೋಕಾಧಿದೇವತೆಯೇ, ಮಾತೃರೂಪಳೂ, ನಿನ್ನ ಪುತ್ರರಿಗೆ ದ್ರೋಹವನ್ನಾಚರಿಸದವಳೂ ಆದ ಎಲೈ ಪೃಥ್ವಿಯೇ, ಸಹೋದರಪ್ರಾಯನಾದ ಎಲೈ ಅಗ್ನಿಯೇ, ವಸುಸಂಜ್ಞಕರಾದ ಎಲೈ ದೇವತೆಗಳೇ, ನೀವೆಲ್ಲರೂ ಸಹ ನಮ್ಮನ್ನು ಸುಖಪಡಿಸಿರಿ. ಅದಿತಿಪುತ್ರರಾದ ಎಲೈ ಸಕಲ ದೇವತೆಗಳೇ, ಎಲೈ ಅದಿತಿದೇವಿಯೇ, ನೀವೆಲ್ಲರೂ ಒಟ್ಟುಗೂಡಿಕೊಂಡು ನಮಗೆ ಅತ್ಯಧಿಕವಾದ ಸುಖವನ್ನು ಒದಗಿಸಿ ಕೊಡಿರಿ.

## English Translation.

Father heaven, innocent mother Earth, brother Agni, and you, Vasus, grant us happiness : all you sons of Aditi, and you Aditi, alike well-pleased, bestow upon us ample felicity.

॥ ಸಂಹಿತಾಪಾಠಃ ॥

ಮಾ ನೋ ವೃಕಾಯ ವೃಕ್ಯೇ ಸಮಸ್ಮಾ ಅಘಾಯತೇ ರೀರಧತಾ ಯಜತ್ರಾಃ ।
ಯೂಯಂ ಹಿ ಷ್ಠಾ ರಥ್ಯೋ ನಸ್ತನೂನಾಂ ಯೂಯಂ ದಕ್ಷಸ್ಯ ವಚಸೋ
ಬಭೂವ ॥ ೬ ॥

॥ ಪದಪಾಠಃ ॥

ಮಾ । ನಃ । ವೃಕಾಯ । ವೃಕ್ಯೇ । ಸಮಸ್ಮೈ । ಅಘಽಯತೇ । ರೀರಧತ । ಯಜತ್ರಾಃ ।
ಯೂಯಂ । ಹಿ । ಸ್ಥ । ರಥ್ಯಃ । ನಃ । ತನೂನಾಂ । ಯೂಯಂ । ದಕ್ಷಸ್ಯ । ವಚಸಃ । ಬಭೂವ ॥ ೬ ॥

॥ ಸಾಯಣಭಾಷ್ಯಂ ॥

ಹೇ ಯಜತ್ರಾ ಯಷ್ಟವ್ಯಾ ದೇವಾ ನೋಽಸ್ಮಾನ್ವೃಕಾಯ ಹಿಂಸಕಾಯ ಸ್ತೇನಾಯ ವೃಕ್ಯೇ ತಸ್ಯ ಸ್ತ್ರಿಯೈ ಚ ಮಾ ರೀರಧತ । ಮಾ ವಶಂ ನೈಷ್ಟ । ಮಾ ವಶೀಕುರುತ । ಯದ್ವಾ । ವೃಕೋಽರಣ್ಯಶ್ವಾ ತಸ್ಯ ಸ್ತ್ರೀ ವೃಕೀ । ಅಪಿ ಚ ಸಮಸ್ಮೈ ಸರ್ವಸ್ಮಾ ಅಘಾಯತೇಽಘಮನರ್ಥಮಸ್ಮಾಕಮಿಚ್ಛತೇ ಶತ್ರು-ಜನಾಯಾಸ್ಮಾನ್ಮಾ ವಶಂ ನಯತ । ಯೂಯಂ ಹಿ ಯೂಯಂ ಖಲು ನೋಽಸ್ಮಾಕಂ ತನೂನಾಂ ಶರೀರಾಣಾಂ ರಥ್ಯೋ ನೇತಾರಃ ಸ್ಥ । ಭವಥ । ಯೂಯಮೇವ ದಕ್ಷಸ್ಯಾಸ್ಮದೀಯಸ್ಯ ಬಲಸ್ಯ ವಚಸೋ ವಾಕ್ಯಸ್ಯ ಚ ನೇತಾರೋ ಬಭೂವ । ಅತಃ ಕಾರಣಾದಸ್ಮಾನ್ಮಾ ರೀರಧತೇತ್ಯನ್ವಯಃ ॥

॥ ಪ್ರತಿಪದಾರ್ಥ ॥

ಯಜತ್ರಾಃ—ಯಜ್ಞಾರ್ಹರಾದ ಎಲೈ ದೇವತೆಗಳೇ । ನಃ—ನಮ್ಮನ್ನು । ವೃಕಾಯ—ಹಿಂಸಕನಾದ ಚೋರನಿಗಾಗಲಿ । ವೃಕ್ಯೈ—ದುಷ್ಟಳಾದ ಅವನ ಪತ್ನಿಗಾಗಲಿ । ಮಾ ರೀರಧತ—ವಶರಾಗುವಂತೆ ಮಾಡ

ಬೇಡಿರಿ । **ಸಮಸ್ಮೈ**—ಯಾವ ವಿಧವಾದ । **ಅಘಾಯತೇ**—ಪಾಪಕರ್ಮಿಗಳಿಗೂ ಕೂಡ (ನಮ್ಮನ್ನು ವಶವಾಗುವಂತೆ ಮಾಡಬೇಡಿರಿ) । **ಯೂಯಂ ಹಿ**—ನೀವೇನೇ । **ನಃ**—ನಮ್ಮ । **ತನೂನಾಂ**—ಶರೀರಗಳಿಗೆ । **ರಥ್ಯಃ**—ನಿಯಾಮಕರೂ ರಕ್ಷಕರೂ । **ಸ್ಥ**—ಆಗಿದ್ದೀರಿ । **ಯೂಯಂ**—ನೀವೇನೇ । **ದಕ್ಷಸ್ಯ**—ನಮ್ಮ ಬಲಕ್ಕೂ । **ವಚಸಃ**—ನಮ್ಮ ವಾಕ್ಕುಗಳಿಗೂ (ನಿಯಾಮಕರಾಗಿ) । **ಬಭೂವ**—ಆಗಿದ್ದೀರಿ.

॥ ಭಾವಾರ್ಥ ॥

ಯಜ್ಞಾರ್ಹರಾದ ಎಲೈ ದೇವತೆಗಳೇ, ನಮ್ಮನ್ನು ಹಿಂಸಕನಾದ ಚೋರನಿಗಾಗಲಿ, ದುಷ್ಟಳಾದ ಅವನ ಪತ್ನಿಗಾಗಲಿ, ವಶರಾಗುವಂತೆ ಮಾಡಬೇಡಿರಿ. ಯಾವ ವಿಧವಾದ ಪಾಪಕರ್ಮಿಗಳಿಗೂ ಕೂಡ ನಮ್ಮನ್ನು ವಶರಾಗುವಂತೆ ಮಾಡಬೇಡಿರಿ. ನೀವೇ ನಮ್ಮ ಶರೀರಗಳಿಗೆ ನಿಯಾಮಕರೂ ರಕ್ಷಕರೂ ಆಗಿದ್ದೀರಿ. ನೀವೇ ನಮ್ಮ ಬಲಕ್ಕೂ ವಾಕ್ಕುಗಳಿಗೂ ನಿಯಾಮಕರಾಗಿ ಆಗಿದ್ದೀರಿ.

## English Translation.

Subject us not, adorable (deities), to the robber or his wife ; nor to any one designing us harm ; for you are the regulators of our persons, of our strength, of our speech.

॥ ಸಂಹಿತಾಪಾಠಃ ॥

ಮಾ ವ ಏನೋ ಅನ್ಯಕೃತಂ ಭುಜೇಮ ಮಾ ತತ್ಕರ್ಮ ವಸವೋ ಯಚ್ಚ-
ಯಧ್ವೇ ।
ವಿಶ್ವಸ್ಯ ಹಿ ಕ್ಷಯಥ ವಿಶ್ವದೇವಾಃ ಸ್ವಯಂ ರಿಪುಸ್ತನ್ವಂ ರೀರಿಷೀಷ್ಟ ॥ ೭ ॥

॥ ಪದಪಾಠಃ ॥

ಮಾ । ವಃ । ಏನಃ । ಅನ್ಯಽಕೃತಂ । ಭುಜೇಮ । ಮಾ । ತತ್ । ಕರ್ಮ । ವಸವಃ । ಯತ್ । ಚಯಧ್ವೇ ।
ವಿಶ್ವಸ್ಯ । ಹಿ । ಕ್ಷಯಥ । ವಿಶ್ವಽದೇವಾಃ । ಸ್ವಯಂ । ರಿಪುಃ । ತನ್ವಂ । ರಿರಿಷೀಷ್ಟ ॥ ೭ ॥

॥ ಸಾಯಣಭಾಷ್ಯಂ ॥

ಹೇ ದೇವಾ ವೋ ಯುಷ್ಮಾಕಂ ಸ್ವಭೂತಾ ವಯಮನ್ಯಕೃತಮನ್ಯೈಃ ಶತ್ರುಭಿಃ ಕೃತಮುತ್ಪಾದಿತಮೇನಃ ಪಾಪಂ ಮಾ ಭುಜೇಮ । ಮಾ ಭುಂಕ್ಷ್ಮಹಿ । ಹೇ ವಸವೋ ವಾಸಯಿತಾರೋ ದೇವಾ ಯದ್ಯೇನ ಕೃತೇನ ಪಾಪೇನ ಚಯಧ್ವೇ ಅಸ್ಮಾನ್ಬಾಧಧ್ವೇ ॥ ಚಯತಿರ್ಹಿಂಸಾಕರ್ಮಾ ॥ ತಚ್ಚ ಪಾಪಂ ಮಾ ಕರ್ಮ । ಮಾ ಕಾರ್ಷ್ಮ ॥ ಕರೋತೇರ್ಮಾಙಿ ಲುಙಿ ಮಂತ್ರೇ ಘಸೇತಿ ಚ್ಲೇರ್ಲುಕ್ ॥ ಹೇ ವಿಶ್ವದೇವಾಃ

ಸರ್ವೇ ದೇವಾ ವಿಶ್ವಸ್ಯ ಸರ್ವಸ್ಯ ಜಗತೋ ಯೂಯಂ ಹಿ ಕ್ಷಯಥ। ಈಶ್ವರಾ ಭವಥ। ಅತಃ ಕಾರಣಾದಸ್ಮದೀಯೋ ರಿಪುಃ ಶತ್ರುಸ್ತನ್ವಂ ಸ್ವಶರೀರಂ ಸ್ವಯಮೇವ ರಿರಿಷೀಷ್ಟ। ಹಿಂಸ್ಯಾತ್। ಯಥೈವಂ ಭವತಿ ತಥಾ ಕುರುತೇತಿ ಭಾವಃ ॥

॥ ಪ್ರತಿಪದಾರ್ಥ ॥

(ಎಲೈ ದೇವತೆಗಳೇ) **ವಃ**—ನಿಮಗೆ ಸೇರಿದ ನಾವು। **ಅನ್ಯಕೃತಂ**—ಶತ್ರುಗಳಿಂದ ಮಾಡಲ್ಪಟ್ಟ। **ಏನಃ**—ಪಾಪಫಲವನ್ನು। **ಮಾ ಭುಜೇಮ**—ಅನುಭವಿಸದಿರುವಂತಾಗಲಿ। **ವಸವಃ**—ವಸುಸಂಜ್ಞಕರಾದ ಎಲೈ ದೇವತೆಗಳೇ। **ಯತ್**—ಯಾವ ಪಾಪದಿಂದ। **ಚಯಧ್ವೇ**—ನೀವು ನಮ್ಮನ್ನು ಶಿಕ್ಷಿಸಬಹುದೋ। **ತತ್**—ಅಂತಹ ಪಾಪವನ್ನು। **ಮಾ ಕರ್ಮ**—ನಾವು ಮಾಡದಿರುವಂತಾಗಲಿ। **ವಿಶ್ವದೇವಾಃ**—ಎಲೈ ವಿಶ್ವೇದೇವತೆಗಳೇ। **(ಯೂಯಂ)** ಹಿ—ನೀವೇನೇ। **ವಿಶ್ವಸ್ಯ**—ಸಕಲ ಜಗತ್ತಿಗೂ। **ಕ್ಷಯಥ**—ಈಶ್ವರರಾಗಿದ್ದೀರಿ। **ರಿಪುಃ**—ನಮ್ಮ ಶತ್ರುವು। **ತನ್ವಂ**—ತನ್ನ ಶರೀರವನ್ನು। **ಸ್ವಯಂ**—ತಾನಾಗಿಯೇ। **ರಿರಿಷೀಷ್ಟ**—ಹಿಂಸಿಸಿಕೊಳ್ಳುವಂತಾಗಲಿ.

॥ ಭಾವಾರ್ಥ ॥

ಎಲೈ ದೇವತೆಗಳೇ, ನಿಮ್ಮ ರಕ್ಷಣೆಗೆ ಸೇರಿದ ನಾವು ನಮ್ಮ ಶತ್ರುಗಳಿಂದ ಮಾಡಲ್ಪಟ್ಟ ಪಾಪಫಲವನ್ನು ಅನುಭವಿಸದಿರುವಂತಾಗಲಿ. ವಸುಸಂಜ್ಞಕರಾದ ಎಲೈ ದೇವತೆಗಳೇ, ನಾವು ಯಾವ ಪಾಪವನ್ನು ಮಾಡುವುದರಿಂದ ನೀವು ನಮ್ಮನ್ನು ಶಿಕ್ಷಿಸಬಹುದೋ ಅಂತಹ ಪಾಪವನ್ನು ನಾವು ಮಾಡದಿರುವಂತಾಗಲಿ. ಎಲೈ ವಿಶ್ವೇದೇವತೆಗಳೇ, ನೀವೇ ಸಕಲ ಜಗತ್ತಿಗೂ ಈಶ್ವರರಾಗಿದ್ದೀರಿ. ನಮ್ಮ ಶತ್ರುವು ತನ್ನ ಶರೀರವನ್ನು ತಾನಾಗಿಯೇ ಹಿಂಸಿಸಿಕೊಳ್ಳುವಂತಾಗಲಿ.

English Translation.

Let us not suffer for the sin committed by another : let us not do that which, Vasus, you prohibit : you rule, universal gods, over the universe : (so provide that) my enemy may inflict injury on his own person.

॥ ಸಂಹಿತಾಪಾಠಃ ॥

ನಮ ಇದುಗ್ರಂ ನಮ ಆ ವಿವಾಸೇ ನಮೋ ದಾಧಾರ ಪೃಥಿವೀಮುತ ದ್ಯಾಂ।
ನಮೋ ದೇವೇಭ್ಯೋ ನಮ ಈಶ ಏಷಾಂ ಕೃತಂ ಚಿದೇನೋ ನಮಸಾ ವಿವಾಸೇ ॥ ೮ ॥

॥ ಪದಪಾಠಃ ॥

ನಮಃ। ಇತ್। ಉಗ್ರಂ। ನಮಃ। ಆ। ವಿವಾಸೇ। ನಮಃ। ದಾಧಾರ। ಪೃಥಿವೀಂ। ಉತ। ದ್ಯಾಂ।
ನಮಃ। ದೇವೇಭ್ಯಃ। ನಮಃ। ಈಶೇ। ಏಷಾಂ। ಕೃತಂ। ಚಿತ್। ಏನಃ। ನಮಸಾ। ಆ। ವಿವಾಸೇ ॥

|| ಸಾಯಣಭಾಷ್ಯಂ ||

ಆಸ್ತಾಂ ತಾವದ್ದೇವಾನಾಂ ಮಾಹಾತ್ಮ್ಯಂ ತದೀಯೋ ನಮಸ್ಕಾರೋಽಪೀತ್ಥಂಮಹಾಭಾಗ ಇತಿ ಬ್ರುವಾಣಃ ಕೈಮುತಿಕನ್ಯಾಯೇನ ದೇವಾನ್ ಸ್ತೌತಿ । ನಮ ಇತ್ ನಮಸ್ಕಾರ ಏವೋಗ್ರಮುದ್ಗೂರ್ಣಬಲಂ ಸರ್ವೋತ್ಕೃಷ್ಟಂ । ತೇನ ಹಿ ಸರ್ವಂ ಲಭ್ಯತೇ । ಅತೋ ನಮೋ ನಮಸ್ಕಾರಮಾ ವಿವಾಸೇ । ಪರಿಚರಾಮಿ । ನಮೋ ನಮಸ್ಕಾರ ಏವ ಪೃಥಿವೀಮುತ ದ್ಯಾಂ ದ್ಯುಲೋಕಂ ಚ ದಾಧಾರ । ಧಾರಯತಿ । ದ್ಯಾವಾಪೃಥಿವ್ಯೌ ಪ್ರಾಣಿಭಿರ್ನಮಸ್ಕ್ರಿಯಮಾಣೇ ಸತ್ಯೌ ತದುಪಭೋಗಾಯ ಚಿರಕಾಲಮವತಿಷ್ಠೇತೇ । ಅತೋ ದೇವೇಭ್ಯ ಈದೃಶಂ ನಮಃ ಕರೋಮಿ । ಏಷಾಂ ದೇವಾನಾಂ ನಮೋ ನಮಸ್ಕಾರ ಈಶೇ । ಈಷ್ಟೇ । ಅತಸ್ತೇನ ತೇ ವಶೀಕೃತಾಃ । ಕೃತಂ ಚಿತ್ಕೃತಮಪ್ಯಾಚರಿತಮಪ್ಯೇನಃ ಪಾಪಂ ನಮಸಾ ನಮಸ್ಕಾರೇಣಾ ವಿವಾಸೇ । ವಿವಾಸೋ ವರ್ಜನಂ । ವರ್ಜಯಾಮಿ । ವಿನಾಶಯಾಮಿ ॥

॥ ಪ್ರತಿಪದಾರ್ಥ ॥

**ನಮ ಇತ್**—(ದೇವತೆಗಳಿಗರ್ಪಿಸಿದ) ನಮಸ್ಕಾರವೇ । **ಉಗ್ರಂ**—ಅತ್ಯಧಿಕವಾದ ಪ್ರಭಾವವುಳ್ಳದ್ದಾಗಿದೆ । **ನಮಃ**—ಆ ನಮಸ್ಕಾರವನ್ನೇ । **ಆ ವಿವಾಸೇ**—ಆಶ್ರಯಿಸಿ ಪೂಜಿಸುತ್ತೇನೆ । **ನಮಃ**—ಆ ನಮಸ್ಕಾರ ರೂಪವಾದ ಕರ್ಮವೇ । **ಪೃಥಿವೀಂ**—ಪೃಥಿವಿಯನ್ನೂ । **ಉತ**—ಮತ್ತು । **ದ್ಯಾಂ**—ದ್ಯುಲೋಕವನ್ನೂ । **ದಾಧಾರ**—ಧರಿಸುತ್ತದೆ । (**ಅತಃ**—ಆದುದರಿಂದ) । **ದೇವೇಭ್ಯಃ**—ದೇವತೆಗಳಿಗೆ । **ನಮಃ**—ನಮಸ್ಕಾರವನ್ನರ್ಪಿಸುತ್ತೇನೆ । **ಏಷಾಂ**—ಈ ದೇವತೆಗಳಿಗರ್ಪಿಸಿದ । **ನಮಃ**—ನಮಸ್ಕಾರವೇ । **ಈಶೇ**—ಲೋಕವನ್ನೆಲ್ಲಾ ಆಳುತ್ತದೆ । **ಕೃತಂ ಚಿತ್**—ಅಜ್ಞಾನದಿಂದ ಮಾಡಿದ । **ಏನಃ**—ಪಾಪವನ್ನೂ । **ನಮಸಾ**—ನಮಸ್ಕಾರ ರೂಪವಾದ ಕ್ರಿಯೆಯಿಂದಲೇ । **ಆ ವಿವಾಸೇ**—ನಾಶವಾಗುವಂತೆ ಮಾಡಬಲ್ಲೆನು.

|| ಭಾವಾರ್ಥ ॥

ದೇವತೆಗಳಿಗರ್ಪಿಸಿದ ನಮಸ್ಕಾರವೇ ಅತ್ಯಧಿಕವಾದ ಪ್ರಭಾವವುಳ್ಳದ್ದಾಗಿದೆ. ಆ ನಮಸ್ಕಾರವನ್ನೇ ಆಶ್ರಯಿಸಿ ಪೂಜಿಸುತ್ತೇನೆ. ಆ ನಮಸ್ಕಾರರೂಪವಾದ ಕರ್ಮವೇ ಪೃಥ್ವಿಯನ್ನೂ ದ್ಯುಲೋಕವನ್ನೂ ಧರಿಸುತ್ತದೆ. ಆದುದರಿಂದಲೇ ದೇವತೆಗಳಿಗೆ ನಮಸ್ಕಾರವನ್ನರ್ಪಿಸುತ್ತೇನೆ. ಈ ದೇವತೆಗಳಿಗರ್ಪಿಸಿದ ನಮಸ್ಕಾರವೇ ಲೋಕವನ್ನೆಲ್ಲಾ ಆಳುತ್ತದೆ. ಅಜ್ಞಾನದಿಂದ ಕೂಡಿದ ಪಾಪವನ್ನೂ ನಮಸ್ಕಾರರೂಪವಾದ ಕ್ರಿಯೆಯಿಂದಲೇ ನಾಶವಾಗುವಂತೆ ಮಾಡಬಲ್ಲೆನು.

## English Translation.

Reverence be to the potent (company of universal gods): I offer (them) reverence: reverence sustains both earth and heaven: reverence be to the gods: reverence is sovereign over them: I expiate by reverence whatever sin may have been committed.

॥ ಸಂಹಿತಾಪಾಠಃ ॥

ಋತಸ್ಯ ವೋ ರಥ್ಯಃ ಪೂತದಕ್ಷಾನೃತಸ್ಯ ಪಸ್ತ್ಯಸದೋ ಅದಬ್ಧಾನ್ ।
ತಾಁ ಆ ನಮೋಭಿರುರುಚಕ್ಷಸೋ ನೄನ್ವಿಶ್ವಾನ್ವ ಆ ನಮೇ ಮಹೋ
ಯಜತ್ರಾಃ ॥ ೯ ॥

॥ ಪದಪಾಠಃ ॥

ಋತಸ್ಯ । ವಃ । ರಥ್ಯಃ । ಪೂತಽದಕ್ಷಾನ್ । ಋತಸ್ಯ । ಪಸ್ತ್ಯಽಸದಃ । ಅದಬ್ಧಾನ್ ।
ತಾನ್ । ಆ । ನಮಃಽಭಿಃ । ಉರುಽಚಕ್ಷಸಃ । ನೄನ್ । ವಿಶ್ವಾನ್ । ವಃ । ಆ । ನಮೇ । ಮಹಃ ।
ಯಜತ್ರಾಃ ॥ ೯ ॥

॥ ಸಾಯಣಭಾಷ್ಯಂ ॥

ಹೇ ಯಜತ್ರಾ ಯಷ್ಟವ್ಯಾ ದೇವಾ ವೋ ಯುಷ್ಮದೀಯಸ್ಯ ಋತಸ್ಯ ಯಜ್ಞಸ್ಯ ರಥ್ಯೋ ರಂಹಿತೄನ್ನೇತೄನ್ ಪೂತದಕ್ಷಾನ್ ಶುದ್ಧಬಲಾನೃತಸ್ಯ ಯಜ್ಞಸ್ಯ ಪಸ್ತ್ಯಸದೋ ಯಜ್ಞಸಂಬಂಧಿನಿ ಪಸ್ತ್ಯೇ ದೇವಯಜನಲಕ್ಷಣೇ ಗೃಹೇ ಸೀದತೋ ನಿಷಣ್ಣಾನದಬ್ಧಾನ್ರಕ್ಷಃಪ್ರಭೃತಿಭಿರಹಿಂಸಿತಾನುರುಚಕ್ಷಸೋ ಬಹುದ್ರಷ್ಟೄನ್ನೄನ್ನೇತೄನ್ಮಹೋ ಮಹತಸ್ತಾನ್ವಿಶ್ವಾನ್ ಸರ್ವಾನ್ ವೋ ಯುಷ್ಮಾನಾಭಿಮುಖ್ಯೇನ ಕ್ರಿಯಮಾಣೈರ್ನಮೋಭಿರ್ನಮಸ್ಕಾರೈರಾ ನಮೇ । ಆನತೋಽಸ್ಮಿ ॥

॥ ಪ್ರತಿಪದಾರ್ಥ ॥

**ಯಜತ್ರಾಃ**—ಯಜ್ಞಾರ್ಹರಾದ ಎಲೈ ದೇವತೆಗಳೇ । **ವಃ**—ನಿಮ್ಮನ್ನು ಆರಾಧಿಸತಕ್ಕ । **ಋತಸ್ಯ**—ಯಜ್ಞಕ್ಕೆ । **ರಥ್ಯಃ**—ನೇತೃಗಳಾದವರೂ । **ಪೂತದಕ್ಷಾನ್**—ಶುದ್ಧವಾದ ಬಲವುಳ್ಳವರೂ । **ಋತಸ್ಯ**—ಯಜ್ಞದ । **ಪಸ್ತ್ಯಸದಃ**—ಗೃಹದಲ್ಲಿ ಕುಳಿತಿರುವವರೂ । **ಅದಬ್ಧಾನ್**—ಅಹಿಂಸಿತರೂ । **ಉರುಚಕ್ಷಸಃ**—ದೀರ್ಘದೃಷ್ಟಿಯುಳ್ಳವರೂ । **ನೄನ್**—ನೇತೃಗಳೂ । **ಮಹಃ**—ಮಹತ್ಸ್ವರೂಪವುಳ್ಳವರೂ ಆದ । **ತಾನ್ ವಿಶ್ವಾನ್ ವಃ**—ನಿಮ್ಮೆಲ್ಲರನ್ನೂ । **ಆ ನಮೋಭಿಃ**—ಸಕಲ ನಮಸ್ಕಾರ ಕ್ರಿಯೆಗಳಿಂದಲೂ । **ಆ ನಮೇ**—ಸತ್ಕರಿಸಿ ಪೂಜಿಸುತ್ತೇನೆ.

॥ ಭಾವಾರ್ಥ ॥

ಯಜ್ಞಾರ್ಹರಾದ ಎಲೈ ದೇವತೆಗಳೇ, ನಿಮ್ಮನ್ನು ಆರಾಧಿಸತಕ್ಕ ಯಜ್ಞಕ್ಕೆ ನೇತೃಗಳಾದವರೂ, ಶುದ್ಧವಾದ ಬಲವುಳ್ಳವರೂ, ಯಜ್ಞಗೃಹದಲ್ಲಿ ಸ್ಥಿತರಾಗಿರುವವರೂ, ಅಹಿಂಸಿತರೂ, ದೀರ್ಘದೃಷ್ಟಿಯುಳ್ಳವರೂ, ನೇತೃಗಳೂ, ಮಹತ್ಸ್ವರೂಪವುಳ್ಳವರೂ ಆದ ನಿಮ್ಮೆಲ್ಲರನ್ನೂ ಸಕಲ ನಮಸ್ಕಾರಕ್ರಿಯೆಗಳಿಂದಲೂ ಸತ್ಕರಿಸಿ ಪೂಜಿಸುತ್ತೇನೆ.

## English Translation.

Adorable (deities), I venerate with reverential salutations all you who are mighty, the regulators of your sacrifice, of pure vigour, dwellers in the chamber of worship, unsubdued, far-seeing, leaders (of rites).

॥ ಸಂಹಿತಾಪಾಠಃ ॥

ತೇ ಹಿ ಶ್ರೇಷ್ಠವರ್ಚಸಸ್ತ ಉ ನಸ್ತಿರೋ ವಿಶ್ವಾನಿ ದುರಿತಾ ನಯಂತಿ ।
ಸುಕ್ಷತ್ರಾಸೋ ವರುಣೋ ಮಿತ್ರೋ ಅಗ್ನಿರ್‌ಋತಧೀತಯೋ ವಕ್ಮರಾಜಸತ್ಯಾಃ ॥ ೧೦ ॥

॥ ಪದಪಾಠಃ ॥

ತೇ । ಹಿ । ಶ್ರೇಷ್ಠಽವರ್ಚಸಃ । ತೇ । ಊಂ ಇತಿ । ನಃ । ತಿರಃ । ವಿಶ್ವಾನಿ । ದುಃಽಇತಾ । ನಯಂತಿ ।
ಸುಽಕ್ಷತ್ರಾಸಃ । ವರುಣಃ । ಮಿತ್ರಃ । ಅಗ್ನಿಃ । ಋತಽಧೀತಯಃ । ವಕ್ಮರಾಜಽಸತ್ಯಾಃ ॥ ೧೦ ॥

॥ ಸಾಯಣಭಾಷ್ಯಂ ॥

ಯೇ ದೇವಾ ವಕ್ಷ್ಯಮಾಣಗುಣಾಸ್ತೇ ಹಿ ತೇ ಖಲು ಶ್ರೇಷ್ಠವರ್ಚಸಃ ಪ್ರಶಸ್ಯತಮದೀಪ್ತಯೋ ಭವಂತಿ । ಅತಸ್ತ ಉ ತ ಏವ ನೋಽಸ್ಮಾಕಂ ವಿಶ್ವಾನಿ ಸರ್ವಾಣಿ ದುರಿತಾ ಪಾಪಾನಿ ತಿರಸ್ತಿರೋಹಿತಾನಿ ಯಥಾ ಭವಂತಿ ತಥಾ ನಯಂತಿ । ನಯಂತು । ವಿನಾಶಯಂತ್ವಿತ್ಯರ್ಥಃ । ಯೇ ವರುಣಾದಯೋ ದೇವಾಃ ಸುಕ್ಷತ್ರಾಸಃ ಶೋಭನಬಲಾಃ ಶೋಭನಧನಾ ವಾ ಋತಧೀತಯಃ ಸತ್ಯಕರ್ಮಾಣೋ ವಕ್ಮರಾಜಸತ್ಯಾಃ । ವಕ್ಮ ವಚನಂ ಸ್ತೋತ್ರಂ । ತಸ್ಯ ರಾಜಾನ ಈಶಾನಾ ವಕ್ಮರಾಜಾನಃ ಸ್ತೋತಾರಃ । ತೇಷು ಸತ್ಯಾ ಅವಿತಥಾಃ । ಏವಂಭೂತಾ ತೇ ಹೀತ್ಯನ್ವಯಃ ॥

॥ ಪ್ರತಿಪದಾರ್ಥ ॥

**ಸುಕ್ಷತ್ರಾಸಃ**—ಉತ್ತಮವಾದ ಬಲವುಳ್ಳವರೂ । **ಋತಧೀತಯಃ**—ಸತ್ಯಾತ್ಮಕವಾದ ಕರ್ಮವುಳ್ಳವರೂ । **ವಕ್ಮ ರಾಜಸತ್ಯಾಃ**—ಸ್ತುತಿಗಳಿಗೆಲ್ಲಾ ಒಡೆಯರಾದವರೂ ಆದ । **ವರುಣಃ, ಮಿತ್ರಃ, ಅಗ್ನಿಃ**—ವರುಣ, ಮಿತ್ರ ಮತ್ತು ಅಗ್ನಿರೂಪರಾದ । **ತೇ ಹಿ**—ಆ ದೇವತೆಗಳೇ । **ಶ್ರೇಷ್ಠವರ್ಚಸಃ**—ಉತ್ತಮವಾದ ಕಾಂತಿಯುಳ್ಳವರಾಗಿದ್ದಾರೆ । **ತೇ ಉ**—ಅದೇ ದೇವತೆಗಳೇ । **ನಃ**—ನಮ್ಮ । **ವಿಶ್ವಾನಿ**—ಸಮಸ್ತವಾದ । **ದುರಿತಾ**—ಪಾಪಗಳನ್ನೂ । **ತಿರಃ ನಯಂತಿ**—ನಾಶಮಾಡುತ್ತಾರೆ.

॥ ಭಾವಾರ್ಥ ॥

ಉತ್ತಮವಾದ ಬಲವುಳ್ಳವರೂ, ಸತ್ಯಾತ್ಮಕವಾದ ಕರ್ಮವುಳ್ಳವರೂ, ಸ್ತುತಿಗಳಿಗೆಲ್ಲಾ ಒಡೆಯರೂ ಆದ ವರುಣ, ಮಿತ್ರ ಮತ್ತು ಅಗ್ನಿರೂಪವಾದ ಆ ದೇವತೆಗಳೇ ಉತ್ತಮವಾದ ಕಾಂತಿಯುಳ್ಳವರಾಗಿದ್ದಾರೆ. ಅದೇ ದೇವತೆಗಳೇ ನಮ್ಮ ಸಮಸ್ತವಾದ ಪಾಪಗಳನ್ನೂ ನಾಶಮಾಡುತ್ತಾರೆ.

### English Translation.

May they, exceeding in splendour, so guide us, that all iniquities may disappear : they, the very powerful Varuna, Mitra, Agni, practisers of truth, and faithful to those who are prominent in (their) praise.

॥ ಸಂಹಿತಾಪಾಠಃ ॥

ತೇ ನ ಇಂದ್ರಃ ಪೃಥಿವೀ ಕ್ಷಾಮ ವರ್ಧನ್ಪೂಷಾ ಭಗೋ ಅದಿತಿಃ ಪಂಚ ಜನಾಃ ।

ಸುಶರ್ಮಾಣಃ ಸ್ವವಸಃ ಸುನೀಥಾ ಭವಂತು ನಃ ಸುತ್ರಾತ್ರಾಸಃ ಸುಗೋಪಾಃ ॥

॥ ಪದಪಾಠಃ ॥

ತೇ । ನಃ । ಇಂದ್ರಃ । ಪೃಥಿವೀ । ಕ್ಷಾಮ । ವರ್ಧನ್ । ಪೂಷಾ । ಭಗಃ । ಅದಿತಿಃ । ಪಂಚ । ಜನಾಃ ।

ಸುऽಶರ್ಮಾಣಃ । ಸುऽಅವಸಃ । ಸುऽನೀಥಾಃ । ಭವಂತು । ನಃ । ಸುऽತ್ರಾತ್ರಾಸಃ । ಸುऽಗೋಪಾಃ ॥೧೧॥

॥ ಸಾಯಣಭಾಷ್ಯಂ ॥

ತೇ ದೇವಾ ನೋಽಸ್ಮಾಕಂ ಕ್ಷಾಮ ನಿವಾಸಭೂಮಿಂ ವರ್ಧನ್ । ವರ್ಧಯಂತು । ಕೇ ತೇ । ಇಂದ್ರಃ ಪೃಥಿವೀ ಚ ಪೂಷಾ ಚ ಭಗಶ್ಚಾದಿತಿರದೀನಾ ದೇವಮಾತಾ ಚ ಪಂಚ ಜನಾ ದೇವಮನುಷ್ಯಾಣಾಂ ಗಂಧರ್ವಾಪ್ಸರಸಾಂ । ಐ. ಬ್ರಾ. ೩–೩೧ । ಇತ್ಯಾದಿಬ್ರಾಹ್ಮಣೋಕ್ತಾ ದೇವಮನುಷ್ಯಾದಯಶ್ಚ ತೇ ಚ ನೋಽಸ್ಮದರ್ಥಂ ಸುಶರ್ಮಾಣಃ ಸುಸುಖಾಃ ಸ್ವವಸಃ ಶೋಭನಾನ್ನಾಃ ಸುನೀಥಾಃ ಸುಪ್ರಾಪಣಾಶ್ಚ ಭವಂತು । ಅಸ್ಮಭ್ಯಂ ಶೋಭನಸುಖಾದಿಕಂ ಪ್ರಯಚ್ಛಂತ್ವಿತಿ ಭಾವಃ । ತಥಾ ಸುತ್ರಾತ್ರಾಸಃ ಸುಷ್ಠು ತ್ರಾತಾರಃ ಸುಗೋಪಾಃ ಶೋಭನಗೋಪಾಯಿತಾರಶ್ಚ ಭವಂತು । ಉಪಸ್ಥಿತೇಭ್ಯಃ ಶತ್ರುಭ್ಯೋ ರಕ್ಷಣಂ ತ್ರಾಣಂ । ತೇಷಾಮುತ್ಪತ್ತಿನಿರೋಧೇನ ರಕ್ಷಣಂ ಗೋಪನಂ ॥

॥ ಪ್ರತಿಪದಾರ್ಥ ॥

**ತೇ**—ಸಕಲ ದೇವತೆಗಳೂ । **ನಃ**—ನಮ್ಮ । **ಕ್ಷಾಮ**—ವಾಸಸ್ಥಾನಗಳನ್ನು । **ವರ್ಧನ್**—ವೃದ್ಧಿಯಾಗುವಂತೆ ಮಾಡಲಿ । **ಇಂದ್ರಃ**—ಇಂದ್ರನೂ । **ಪೃಥಿವೀ**—ಪೃಥಿವಿಯೂ । **ಪೂಷಾ**—ಪೂಷದೇವನೂ । **ಭಗಃ**—ಭಗನೂ । **ಅದಿತಿಃ**—ಅದಿತಿಯೂ । **ಪಂಚ ಜನಾಃ**—ದೇವಗಂಧರ್ವಾದಿಪಂಚಜನರೂ । **ನಃ**—ನಮ್ಮ ಹಿತಕ್ಕಾಗಿ । **ಸುಶರ್ಮಾಣಃ**—ಉತ್ತಮವಾದ ಸುಖಯುಕ್ತರಾಗಿಯೂ । **ಸ್ವವಸಃ**—ಉತ್ತಮವಾದ

ಅನ್ನಯುಕ್ತರಾಗಿಯೂ । **ಸುನೀಥಾಃ**— ಶ್ರೇಷ್ಠವಾದ ಮಾರ್ಗದರ್ಶಕರಾಗಿಯೂ । **ಭವಂತು**—ಆಗಿರಲಿ । **ಸುತ್ರಾತ್ರಾಸಃ**—ಉತ್ತಮವಾದ ರಕ್ಷಕರಾಗಿಯೂ । **ಸುಗೋಪಾಃ**—ಶ್ರೇಷ್ಠವಾದ ಆಶ್ರಯದಾತರಾಗಿಯೂ ಆಗಿರಲಿ.

॥ ಭಾವಾರ್ಥ ॥

ಸಕಲ ದೇವತೆಗಳೂ ನಮ್ಮ ವಾಸಸ್ಥಾನಗಳನ್ನು ವೃದ್ಧಿಯಾಗುವಂತೆ ಮಾಡಲಿ. ಇಂದ್ರನೂ, ಪೃಥಿವಿಯೂ, ಪೂಷನೂ, ಭಗನೂ, ಅದಿತಿಯೂ, ದೇವಗಂಧರ್ವಾದಿಪಂಚಜನರೂ, ನಮ್ಮ ಹಿತಕ್ಕಾಗಿ ಉತ್ತಮವಾದ ಸುಖಯುಕ್ತರಾಗಿಯೂ ಉತ್ತಮವಾದ ಅನ್ನಯುಕ್ತರಾಗಿಯೂ, ಶ್ರೇಷ್ಠವಾದ ಮಾರ್ಗದರ್ಶಕರಾಗಿಯೂ ಆಗಿರಲಿ. ಉತ್ತಮವಾದ ರಕ್ಷಕರಾಗಿಯೂ, ಶ್ರೇಷ್ಠರಾದ ಆಶ್ರಯದಾತರಾಗಿಯೂ ಆಗಿರಲಿ.

## English Translation

May they, Indra, Earth, Pushan, Bhaga, Aditi, and the five orders of beings, give increase to our habitations : may they be to us granters of happiness, bestowers of food, guides to good, our gracious defenders end preservers.

॥ ಸಂಹಿತಾಪಾಠಃ ॥

ನೂ ಸದ್ಮಾನಂ ದಿವ್ಯಂ ನಂಶಿ ದೇವಾ ಭಾರದ್ವಾಜಃ ಸುಮತಿಂ ಯಾತಿ ಹೋತಾ ।
ಆಸಾನೇಭಿರ್ಯಜಮಾನೋ ಮಿಯೇಧೈರ್ದೇವಾನಾಂ ಜನ್ಮ ವಸೂಯುರ್ವವಂದ ॥ ೧೨ ॥

॥ ಪದಪಾಠಃ ॥

ನು । ಸದ್ಮಾನಂ । ದಿವ್ಯಂ । ನಂಶಿ । ದೇವಾಃ । ಭಾರತ್ऽವಾಜಃ । ಸುऽಮತಿಂ । ಯಾತಿ । ಹೋತಾ । ಆಸಾನೇಭಿಃ । ಯಜಮಾನಃ । ಮಿಯೇಧೈಃ । ದೇವಾನಾಂ । ಜನ್ಮ । ವಸುऽಯುಃ । ವವಂದ ॥ ೧೨ ॥

। ಸಾಯಣಭಾಷ್ಯಂ ।

ಅನಯಾ ಋಷಿರಾತ್ಮಾನಂ ಪರೋಕ್ಷವದಾಹ । ಹೇ ದೇವಾ ಭಾರದ್ವಾಜೋ ಭರದ್ವಾಜಗೋತ್ರಜೋ ಹೋತಾ ಸ್ತೋತಾಯಮೃಷಿರ್ದಿವ್ಯಂ ದಿವಿ ಭವಂ ಸದ್ಮಾನಂ ಸದನಂ ಸ್ಥಾನಂ ನು ಕ್ಷಿಪ್ರಂ ನಂಶಿ । ವ್ಯಾಪ್ನೋತು । ತಥಾ ಸುಮತಿಂ ಶೋಭನಾಂ ಮತಿಂ ಯುಷ್ಮದೀಯಾಮನುಗ್ರಹಬುದ್ಧಿಂ ಚ ಯಾತಿ । ಯಾಚತೇ । ಯಾತಿರ್ಯಾಚ್ಞಾಕರ್ಮಾ । ತದರ್ಥಮಾಸಾನೇಭಿರಾಸೀನೈಃ ಸತ್ರಾಸನಂ

ಕುರ್ವದ್ಭಿರ್ಮಿಯೇಧ್ಯೈರ್ಮೇಧ್ಯೈರ್ಮೇಧಾರ್ಹೈರನ್ಯಯಜಮಾನೈಃ ಸಾರ್ಧಂ ಯಜಮಾನೋ ಯಾಗಂ ಕುರ್ವನ್ನಯಮೃಷಿರ್ವಸೂಯುರ್ವಸೂನಿ ಧನಾನ್ಯಾತ್ಮನ ಇಚ್ಛನ್ ದೇವಾನಾಂ ಜನ್ಮ ಜನಂ ಸಂಘಂ ವವಂದ । ವಂದತೇ । ಸ್ತೌತಿ ॥

॥ ಪ್ರತಿಪದಾರ್ಥ ॥

**ದೇವಾಃ**—ಎಲೈ ದೇವತೆಗಳೇ । **ಭಾರದ್ವಾಜಃ**—ಭರದ್ವಾಜ ಗೋತ್ರೋತ್ಪನ್ನನೂ । **ಹೋತಾ**—ದೇವತೆಗಳನ್ನು ಸ್ತುತಿಸಿ ಕರೆಯುವವನೂ ಆದ ಈ ಋಷಿಯು । **ದಿವ್ಯಂ**—ದ್ಯುಲೋಕಸ್ಥವಾದ । **ಸದ್ಮಾನಂ**—ಸದನವನ್ನು । **ನು**—ಶೀಘ್ರವಾಗಿ । **ನಂಶಿ**—ಹೊಂದಲಿ । **ಸುಮತಿಂ**—ಉತ್ತಮವಾದ ನಿಮ್ಮ ಅನುಗ್ರಹ ಬುದ್ಧಿಯನ್ನೂ । **ಯಾತಿ**—ಪ್ರಾರ್ಥಿಸುತ್ತಾನೆ । **ಆಸನೇಭಿಃ**—ಯಜ್ಞವೇದಿಯಲ್ಲಿ ಕುಳಿತಿರುವವರೂ । **ಮಿಯೇಧ್ಯೈಃ**—ಯಜ್ಞಕರ್ಮಕ್ಕೆ ಅರ್ಹರೂ ಆದ ಇತರ ಯಜಮಾನರೊಡನಿರುವ । **ಯಜಮಾನಃ**—ಯಜ್ಞಕರ್ತನಾದ ಈ ಋಷಿಯು । **ವಸೂಯುಃ**—ಧನೇಚ್ಛೆಯುಳ್ಳವನಾಗಿ । **ದೇವಾನಾಂ**—ದೇವತೆಗಳ । **ಜನ್ಮ**—ಸಂಘವನ್ನು । **ವವಂದ**—ನಮಸ್ಕರಿಸುತ್ತಾನೆ.

॥ ಭಾವಾರ್ಥ ॥

ಎಲೈ ದೇವತೆಗಳೇ, ಭರದ್ವಾಜ ಗೋತ್ರೋತ್ಪನ್ನನೂ, ದೇವತೆಗಳನ್ನು ಸ್ತುತಿಸಿ ಕರೆಯುವವನೂ ಆದ ಈ ಋಷಿಯು ದ್ಯುಲೋಕಸ್ಥವಾದ ಸದನವನ್ನು ಶೀಘ್ರವಾಗಿ ಹೊಂದಲಿ. ಅವನು ಉತ್ತಮವಾದ ನಿಮ್ಮ ಅನುಗ್ರಹ ಬುದ್ಧಿಯನ್ನೂ ಪ್ರಾರ್ಥಿಸುತ್ತಾನೆ. ಯಜ್ಞವೇದಿಯಲ್ಲಿ ಕುಳಿತಿರುವವರೂ ಯಜ್ಞಕರ್ಮಕ್ಕೆ ಅರ್ಹರೂ ಆದ ಇತರ ಯಜಮಾನರೊಡನಿರುವ ಯಜ್ಞಕರ್ತನಾದ ಈ ಋಷಿಯು ಧನೇಚ್ಛೆಯುಳ್ಳವನಾಗಿ ದೇವತೆಗಳ ಸಂಘಕ್ಕೆ ನಮಸ್ಕಾರವನ್ನರ್ಪಿಸುತ್ತಾನೆ.

## English Translation.

May the presenter of the oblation, Bharadwaja, quickly obtain, gods, a celestial abode, as he solicits your good-will : the institutor of the ceremony, together with pious associates, desirous of riches, glorifies the assembly of the gods.

॥ ಸಂಹಿತಾಪಾಠಃ ॥

ಅಪ ತ್ಯಂ ವೃಜಿನಂ ರಿಪುಂ ಸ್ತೇನಮಗ್ನೇ ದುರಾಧ್ಯಂ ।
ದವಿಷ್ಠಮಸ್ಯ ಸತ್ಪತೇ ಕೃಧೀ ಸುಗಂ ॥ ೧೩ ॥

॥ ಪದಪಾಠಃ ॥

ಅಪ । ತ್ಯಂ । ವೃಜಿನಂ । ರಿಪುಂ । ಸ್ತೇನಂ । ಅಗ್ನೇ । ದುಃऽಆಧ್ಯಂ ।
ದವಿಷ್ಠಂ । ಅಸ್ಯ । ಸತ್ऽಪತೇ । ಕೃಧಿ । ಸುऽಗಂ ॥ ೧೩ ॥

॥ ಸಾಯಣಭಾಷ್ಯಂ ॥

ದಶರಾತ್ರಸ್ಯ ಚತುರ್ಥೇಽಹನಿ ಪ್ರಉಗಶಸ್ತ್ರೇಽಪ ತ್ಯಂ ವೃಜಿನಮಿತ್ಯೇಷಾ । ವೈಶ್ವದೇವಸ್ತೃಚಃ । ಸೂತ್ರಿತಂ ಚ । ಅಪ ತ್ಯಂ ವೃಜಿನಂ ರಿಪುಮಂಬಿತಮೋ ನದೀತಮ ಇತ್ಯಾನುಷ್ಟುಭಂ ಪ್ರಉಗಂ । ಆ. ೭-೧೦ । ಇತಿ ॥

ಹೇ ಅಗ್ನೇ ತ್ವಂ ತ್ಯಂ ತಂ ಪ್ರಸಿದ್ಧಂ ವೃಜಿನಂ ಕುಟಿಲಂ ರಿಪುಂ ಪಾಪಕಾರಿಣಂ ದುರಾಧ್ಯಂ ದುಃಖಸ್ಯಾಧ್ಯಾತಾರಂ ದುಷ್ಟಾಭಿಪ್ರಾಯಮೇವಂಭೂತಂ ಸ್ತೇನಂ ಹಿಂಸಕಂ ದವಿಷ್ಠಂ ದೂರತಮಮಪಾಸ್ಯ। ಅಪಕ್ಷಿಪ ॥ ಅಸು ಕ್ಷೇಪಣ ಇತಿ ಧಾತುಃ ॥ ಹೇ ಸತ್ಪತೇ ಸತಾಂ ಪಾಲಯಿತರಗ್ನೇ ಅಸ್ಮಾಕಂ ಸುಗಂ ಶೋಭನೇನ ಗಂತವ್ಯಂ ಸುಖಂ ಕೃಧಿ । ಕುರು । ಅತ್ರ ಸರ್ವದೇವಾತ್ಮಕಸ್ಯಾಗ್ನೇಃ ಸ್ತವನಾದ್ವೈಶ್ವದೇವತ್ವಂ॥

॥ ಪ್ರತಿಪದಾರ್ಥ ॥

ಅಗ್ನೇ—ಎಲೈ ಅಗ್ನಿಯೇ । ತ್ಯಂ—ಪ್ರಸಿದ್ಧನೂ । ವೃಜಿನಂ—ಪಾಪಸ್ವಭಾವದವನೂ । ದುರಾಧ್ಯಂ—ದುಃಖಕಾರಕನೂ । ಸ್ತೇನಂ—ಚೋರನೂ ಆದ । ರಿಪುಂ—ಶತ್ರುವನ್ನು । ದವಿಷ್ಠಂ—ಅತ್ಯಂತ ದೂರ ಪ್ರದೇಶಕ್ಕೆ । ಅಪಾಸ್ಯ—ಓಡಿಸಿ ಬಿಡು । ಸತ್ಪತೇ—ಸಜ್ಜನರ ಪಾಲಕನಾದ ಎಲೈ ಅಗ್ನಿಯೇ । ಸುಗಂ—ನಮಗೆ ಉತ್ತಮವಾದ ಸುಖಸಾಧನವನ್ನು । ಕೃಧಿ—ಉಂಟುಮಾಡು.

॥ ಭಾವಾರ್ಥ ॥

ಎಲೈ ಅಗ್ನಿಯೇ, ಪ್ರಸಿದ್ಧನೂ, ಪಾಪಸ್ವಭಾವದವನೂ, ದುಃಖಕಾರಕನೂ, ಚೋರನೂ ಆದ ಶತ್ರುವನ್ನು ಅತ್ಯಂತ ದೂರ ಪ್ರದೇಶಕ್ಕೆ ಓಡಿಸಿ ಬಿಡು. ಸಜ್ಜನರ ಪಾಲಕನಾದ ಎಲೈ ಅಗ್ನಿಯೇ, ನಮಗೆ ಉತ್ತಮವಾದ ಸುಖ ಸಾಧನವನ್ನುಂಟುಮಾಡು.

English Translation.

Drive away, Agni, to a distance the wicked, felonious, malignant enemy : grant us felicity, protector of the virtuous.

॥ ವಿಶೇಷವಿಷಯಗಳು ॥

ದಶರಾತ್ರವೆಂಬ ಯಾಗದ ನಾಲ್ಕನೆಯ ದಿವಸ ಪ್ರಉಗ ಶಸ್ತ್ರಮಂತ್ರಪಠನಕಾಲದಲ್ಲಿ ಅಪ ತ್ಯಂ, ವೃಜಿನಂ ಎಂಬ ಮೊದಲಾಗುವ ಮೂರು ಋಕ್ಕುಗಳನ್ನು ವೈಶ್ವದೇವತೃಚವನ್ನಾಗಿ ಪಠಿಸಬೇಕೆಂದು ಆಶ್ವಲಾಯನ ಶ್ರೌತಸೂತ್ರದ ಅಪ ತ್ಯಂ ವೃಜಿನಂ ರಿಪುಮಂಬಿತಮೋ ನದೀತಮ ಇನ್ಯಾನುಷ್ಟುಭಂ ಪ್ರಉಗಂ ಎಂಬ ಸೂತ್ರದಿಂದ (ಆ. ೭-೧೧) ವಿವೃತವಾಗಿರುವುದು.

॥ ಸಂಹಿತಾಪಾಠಃ ॥

ಗ್ರಾವಾಣಃ ಸೋಮ ನೋ ಹಿ ಕಂ ಸಖಿತ್ವನಾಯ ವಾವಶುಃ ।

ಜಹೀ ನ್ಯ೧ತ್ರಿಣಂ ಪಣಿಂ ವೃಕೋ ಹಿ ಷಃ ॥ ೧೪ ॥

॥ ಪದಪಾಠಃ ॥

ಗ್ರಾವಾಣಃ । ಸೋಮ । ನಃ । ಹಿ । ಕಂ । ಸಖಿಽತ್ವನಾಯ । ವಾವಶುಃ ।

ಜಹಿ । ನಿ । ಅತ್ರಿಣಂ । ಪಣಿಂ । ವೃಕಃ । ಹಿ । ಸಃ ॥ ೧೪ ॥

॥ ಸಾಯಣಭಾಷ್ಯಂ ॥

ಹೇ ಸೋಮ ನೋಽಸ್ಮದೀಯಾ ಇಮೇ ಗ್ರಾವಾಣೋಽಭಿಷವಾರ್ಥಾಃ ಪಾಷಾಣಾಸ್ತವ ಸಖಿತ್ವನಾಯ ಸಖ್ಯಾರ್ಥಂ ವಾವಶುಃ । ಕಾಮಯಂತೇ । ಕಮಿತಿ ಪೂರಕಃ । ಹಿ ಯಸ್ಮಾದರ್ಥೇ । ಯಸ್ಮಾದೇವಂ ತಸ್ಮಾತ್ತ್ವಂ ಪಣಿಂ ವಣಿಜಮದಾತಾರಮತ್ರಿಣಮದನಶೀಲಂ ರಾಕ್ಷಸಾದಿಕಂ ನಿ ಜಹಿ । ವಿನಾಶಯ । ಸ ಪಣಿರ್ವೃಕೋ ಹಿ । ಆದಾನಪರಃ ಖಲು । ಸರ್ವದಾಸ್ಮತ್ತೋಽಪಹರಣಶೀಲಃ । ಅತಸ್ತ್ವಂ ಜಹೀತ್ಯರ್ಥಃ ॥ ವೃಕ ವೃಕ ಆದಾನ ಇತಿ ಧಾತುಃ ॥

॥ ಪ್ರತಿಪದಾರ್ಥ ॥

**ಸೋಮ**—ಎಲೈ ಸೋಮದೇವನೇ । **ನಃ**—ನಮ್ಮ । **ಗ್ರಾವಾಣಃ**—ಈ ರಸವನ್ನು ಹಿಂಡುವ ಕಲ್ಲುಗಳು । **ಸಖಿತ್ವನಾಯ**—ನಿನ್ನೊಡನೆ ಸಖಿತ್ವವನ್ನು ಸಂಪಾದಿಸಲು । **ವಾವಶುಃ ಕಮ್**—ಅಪೇಕ್ಷಿಸುತ್ತಲೇ ಇವೆ. । **ಹಿ**—ಆದುದರಿಂದ । **ಪಣಿಂ**—ದಾನಶೀಲನಲ್ಲದವನೂ । **ಅತ್ರಿಣಂ**—ಹಿಂಸಕನೂ ಆದ ಶತ್ರುವನ್ನು । **ನಿ ಜಹಿ**—ಪೂರ್ಣವಾಗಿ ನಾಶಮಾಡು । **ಸ ಹಿ**—ಅದೇ ಪಣಿಯು । **ವೃಕಃ**—ಸರ್ವಭಕ್ಷಕನಾದ ತೋಳನಂತಿದ್ದಾನೆ

॥ ಭಾವಾರ್ಥ ॥

ಎಲೈ ಸೋಮದೇವನೆ, ನಮ್ಮ ಈ ರಸವನ್ನು ಹಿಂಡುವ ಕಲ್ಲುಗಳು ನಿನ್ನೊಡನೆ ಸಖಿತ್ವವನ್ನು ಸಂಪಾದಿಸಲು ಅಪೇಕ್ಷಿಸುತ್ತಲೇ ಇವೆ. ಆದುದರಿಂದ ದಾನಶೀಲನಲ್ಲದವನೂ, ಸರ್ವಭಕ್ಷಕನೂ ಆದ ಪಣಿಯನ್ನು ಪೂರ್ಣವಾಗಿ ನಾಶಮಾಡು. ಅವನು ಕ್ರೂರಿಯಾದ ತೋಳನಂತಿದ್ದಾನೆ.

## English Translation.

These our grinding stones are anxious, Soma, for your friendship : destroy the voracious Pani, for verily he is a wolf.

॥ ಸಂಹಿತಾಪಾಠಃ ॥

ಯೂಯಂ ಹಿ ಷ್ಠಾ ಸುದಾನವ ಇಂದ್ರಜ್ಯೇಷ್ಠಾ ಅಭಿದ್ಯವಃ ।

ಕರ್ತಾ ನೋ ಅಧ್ವನ್ನಾ ಸುಗಂ ಗೋಪಾ ಅಮಾ ॥ ೧೫ ॥

|| ಪದಪಾಠಃ ||

ಯೂಯಂ । ಹಿ । ಸ್ಥ । ಸುऽದಾನವಃ । ಇಂದ್ರಽಜ್ಯೇಷ್ಠಾಃ । ಅಭಿಽದ್ಯವಃ ।

ಕರ್ತ । ನಃ । ಅಧ್ವನ್ । ಆ । ಸುಽಗಂ । ಗೋಪಾಃ । ಅಮಾ ॥ ೧೫ ॥

। ಸಾಯಣಭಾಷ್ಯಂ ॥

**ಹೇ ಸುದಾನವಃ ಶೋಭನದಾನಾ ದೇವಾ ಯೂಯಂ ಹಿ ಷ್ಠ । ಯೂಯಂ ಖಲು ಪ್ರಭವಥ । ಸಮೃದ್ಧಾಃ ಸ್ಥ । ಇಂದ್ರಜ್ಯೇಷ್ಠಾಃ । ಇಂದ್ರೋ ಜ್ಯೇಷ್ಠೋ ಮುಖ್ಯೋ ಯೇಷಾಂ ತೇ । ಅಭಿದ್ಯವೋಽಭಿಗತದೀಪ್ತಯಸ್ತೇ ಯೂಯಮಧ್ವನ್ನಧ್ವನಿ ಮಾರ್ಗೇ ನೋಽಸ್ಮಾಕಮಮಾ ಸಹೈವ ಗೋಪಾ ಗೋಪಾಯಿತಾರೋ ರಕ್ಷಿತಾರಃ ಸಂತಃ ಸುಗಂ ಸುಖಂ । ಆಕಾರಃ ಸಮುಚ್ಚಯೇ । ಸುಖಂ ಚ ಕರ್ತ । ಕುರುತ ॥**

|| ಪ್ರತಿಪದಾರ್ಥ ||

**ಸುದಾನವಃ**—ಉತ್ತಮವಾದ ದಾನಕರ್ಮವುಳ್ಳ ಎಲೈ ದೇವತೆಗಳೇ । **ಯೂಯಂ ಹಿ ಷ್ಠ**—ನೀವೇ ಸರ್ವಪ್ರಭುಗಳಾಗಿದ್ದೀರಿ । **ಇಂದ್ರಜ್ಯೇಷ್ಠಾಃ**—ಇಂದ್ರನನ್ನೇ ನಾಯಕನನ್ನಾಗಿ ಉಳ್ಳವರೂ । **ಅಭಿದ್ಯವಃ**—ವಿಸ್ತೃತವಾದ ಪ್ರಕಾಶವುಳ್ಳವರೂ ಆದ ನೀವು । **ಅಧ್ವನ್**—ನಮ್ಮ ಮಾರ್ಗಗಳಲ್ಲಿ । **ನಃ—**ನಮ್ಮ । **ಆ ಅಮಾ—**ಜೊತೆಯಲ್ಲಿದ್ದು । **ಗೋಪಾಃ**—ನಮ್ಮ ರಕ್ಷಕರಾಗಿ । **ಸುಗಂ**—ಸುಖವನ್ನು । **ಕರ್ತ**—ಉಂಟುಮಾಡಿರಿ.

। ಭಾವಾರ್ಥ ।

ಉತ್ತಮವಾದ ದಾನಕರ್ಮಗಳುಳ್ಳ ಎಲೈ ದೇವತೆಗಳೇ, ನೀವೇ ಸರ್ವಪ್ರಭುಗಳಾಗಿದ್ದೀರಿ. ಇಂದ್ರನನ್ನೇ ಮುಖಂಡನಾಗಿ ಉಳ್ಳವರೂ, ವಿಸ್ತೃತವಾದ ಪ್ರಕಾಶವುಳ್ಳವರೂ ಆದ ನೀವು ನಮ್ಮ ಮಾರ್ಗಗಳಲ್ಲಿ ನಮ್ಮ ಜೊತೆಯಲ್ಲಿದ್ದು ನಮ್ಮ ರಕ್ಷಕರಾಗಿ ನಮಗೆ ಸುಖವನ್ನುಂಟುಮಾಡಿರಿ.

English Translation.

You are manificent and illustrious, gods, with Indra for your chief : be with us, protectors, on the road, and grant us happiness.

|| ಸಂಹಿತಾಪಾಠಃ ||

ಅಪಿ ಪಂಥಾಮಗನ್ಮಹಿ ಸ್ವಸ್ತಿಗಾಮನೇಹಸಂ ।

ಯೇನ ವಿಶ್ವಾಃ ಪರಿ ದ್ವಿಷೋ ವೃಣಕ್ತಿ ವಿಂದತೇ ವಸು ॥ ೧೬ ॥

॥ ಪದಪಾಠಃ ॥

ಅಪಿ । ಪಂಥಾಂ । ಅಗನ್ಮಹಿ । ಸ್ವಸ್ತಿಽಗಾಂ । ಅನೇಹಸಂ ।

ಯೇನ । ವಿಶ್ವಾಃ । ಪರಿ । ದ್ವಿಷಃ । ವೃಣಕ್ತಿ । ವಿಂದತೇ । ವಸು ॥ ೧೬ ॥

॥ ಸಾಯಣಭಾಷ್ಯಂ ॥

ಪ್ರವಾಸಾದಾಗಮನೇಽಪಿ ಪಂಥಾಮಿತ್ಯೇಷಾ ಯಜಮಾನೇನ ಜಪ್ಯಾ । ಸೂತ್ರಿತಂ ಚ । ಅಪಿ ಪಂಥಾಮಗನ್ಮಹೀತಿ ಪ್ರತ್ಯೇತ್ಯ ಸಮಿತ್ಪಾಣಿಃ । ಆ. ೨-೫ । ಇತಿ ॥

ಪಂಥಾಂ ಪಂಥಾನಂ ಮಾರ್ಗಮಪ್ಯಗನ್ಮಹಿ । ಅಪಿಗತಾಃ ಪ್ರಾಪ್ತಾಃ ಸ್ಮಃ । ಕೀದೃಶಂ । ಸ್ವಸ್ತಿಗಾಂ ಸುಖೇನ ಗಂತವ್ಯಮನೇಹಸಂ ಪಾಪರಹಿತಂ । ಯೇನ ಪಥಾ ಗಚ್ಛನ್ ವಿಶ್ವಾಃ ಸರ್ವಾ ದ್ವಿಷೋ ದ್ವೇಷ್ಟ್ರೀಃ ಪ್ರಜಾಃ ಪರಿ ವೃಣಕ್ತಿ ಪರಿವರ್ಜಯತಿ ಬಾಧತೇ ವಸು ಧನಂ ಚ ವಿಂದತೇ ಲಭತೇ ತಾದೃಶಂ ಪಂಥಾನಮಿತ್ಯರ್ಥಃ ॥

॥ ಪ್ರತಿಪದಾರ್ಥ ॥

**ಯೇನ**—ಯಾವ ಮಾರ್ಗದಲ್ಲಿ ಸಂಚರಿಸುವಾಗ (ಪುರುಷನು) । **ವಿಶ್ವಾಃ**—ಸಮಸ್ತವಾದ । **ದ್ವಿಷಃ**—ಶತ್ರುಪ್ರಜೆಗಳನ್ನು । **ಪರಿ ವೃಣಕ್ತಿ**—ತಪ್ಪಿಸಿಕೊಳ್ಳುವನೋ (ಮತ್ತು) । **ವಸು**—ಧನವನ್ನು । **ವಿಂದತೇ**—ಹೊಂದುವನೋ ಅಂತಹ । **ಸ್ವಸ್ತಿಗಾಂ**—ಕಲ್ಯಾಣಸಾಧಕವಾದುದೂ । **ಅನೇಹಸಂ**—ಪಾಪರಹಿತವಾದುದೂ ಆದ । **ಪಂಥಾಂ**—ಮಾರ್ಗವನ್ನು । **ಅಪಿ ಅಗನ್ಮಹಿ**—ಅನುಸರಿಸಿ ಬಂದಿದ್ದೇವೆ.

॥ ಭಾವಾರ್ಥ ॥

ಯಾವ ಮಾರ್ಗದಲ್ಲಿ ಸಂಚರಿಸುತ್ತಾ ಪುರುಷನು ಸಮಸ್ತವಾದ ಶತ್ರುಪ್ರಜೆಗಳನ್ನು ತಪ್ಪಿಸಿಕೊಳ್ಳುವನೋ ಅಂತಹ ಕಲ್ಯಾಣಸಾಧಕವಾದುದೂ ಪಾಪರಹಿತವಾದುದೂ ಆದ ಮಾರ್ಗವನ್ನೇ ಅನುಸರಿಸಿ ಬಂದಿದ್ದೇವೆ.

## English Translation.

We have travelled along the road prosperously traversed and free from evil, and by which (a man) avoids adversaries and acquires wealth.

॥ ವಿಶೇಷವಿಷಯಗಳು ॥

ಯಾವುದಾದರೂ ಸ್ಥಳಾಂತರಕ್ಕೆ ಪ್ರವಾಸ ಹೋಗಿ ಹಿಂದಕ್ಕೆ ಬಂದ ನಂತರ **ಅಪಿ ಪಂಥಾಂ** ಎಂಬ ಈ ಋಕ್ಕನ್ನು ಜಪಿಸಬೇಕೆಂದು ಆಶ್ವಲಾಯನ ಶ್ರೌತಸೂತ್ರದ—**ಅಪಿ ಪಂಥಾಮಗನ್ಮ ಹೀತಿ ಪ್ರತ್ಯೇತ್ಯ ಸಮಿತ್ಪಾಣಿಃ** ಎಂಬ ಸೂತ್ರದಿಂದ (ಆ. ೨-೫) ವಿದಿತವಾಗಿರುದು.



# ಐವತ್ತೆರಡನೆಯ ಸೂಕ್ತವು

॥ ಸಾಯಣಭಾಷ್ಯಂ ॥

**ನ ತದ್ದಿವೇತಿ ಸಪ್ತದಶರ್ಚಂ ತೃತೀಯಂ ಸೂಕ್ತಮೃಜಿಶ್ವನ ಆರ್ಷಂ ವೈಶ್ವದೇವಂ। ಆದಿತಃ ಷಟ್ ತ್ರಿಷ್ಟುಭಃ ಸಪ್ತಮ್ಯಾದ್ಯಾಃ ಷಟ್ ಗಾಯತ್ರ್ಯಸ್ತ್ರಯೋದಶೀ ತ್ರಿಷ್ಟುಪ್ ಚತುರ್ದಶೀ ಜಗತೀ ಶಿಷ್ಟಾಸ್ತಿಸ್ರಸ್ತ್ರಿಷ್ಟುಭಃ। ತಥಾ ಚಾನುಕ್ರಾಂತಂ। ನ ತತ್ತ್ರ್ಯೂನಾ ಸಪ್ತಮ್ಯಾದ್ಯಾಃ ಷಡ್ಗಾಯತ್ರ್ಯಶ್ಚತುರ್ದಶೀ ಜಗತೀತಿ ॥ ಗತೋ ವಿನಿಯೋಗಃ ॥**

ಅನುವಾದವು—**ನ ತದ್ದಿವಾ** ಎಂಬ ಈ ಸೂಕ್ತವು ಐದನೆಯ ಅನುವಾಕದಲ್ಲಿ ಮೂರನೆಯ ಸೂಕ್ತವು. ಇದರಲ್ಲಿ ಹದಿನೇಳು ಋಕ್ಕುಗಳಿರುವವು. ಈ ಸೂಕ್ತಕ್ಕೆ ಋಜಿಶ್ವಾ ಎಂಬವನು ಋಷಿಯು; ವಿಶ್ವೇದೇವತೆಗಳು ದೇವತೆಯು; ಈ ಸೂಕ್ತದ ಮೊದಲಿನ ಆರು ಋಕ್ಕುಗಳು ತ್ರಿಷ್ಟುಪ್‌ಛಂದಸ್ಕವು. ಏಳರಿಂದ ಮುಂದಿನ ಆರು ಋಕ್ಕುಗಳು ಗಾಯತ್ರೀಛಂದಸ್ಕವು. ಹದಿಮೂರನೆಯ ಋಕ್ಕು ತ್ರಿಷ್ಟುಪ್ ಛಂದಸ್ಕವು ಹದಿನಾಲ್ಕನೆಯದು ಜಗತೀಛಂದಸ್ಕವು. ಉಳಿದ ಋಕ್ಕುಗಳು ತ್ರಿಷ್ಟುಪ್‌ಛಂದಸ್ಕವು. ಅನುಕ್ರಮಣಿಕೆಯಲ್ಲಿ—**ನ ತತ್ತ್ರ್ಯೂನಾ ಸಪ್ತಮ್ಯಾದ್ಯಾಃ ಷಡ್ಗಾಯತ್ರ್ಯಶ್ಚತುರ್ದಶೀ ಜಗತೀ** ಎಂದು ಹೇಳಿರುವುದು. ವಿನಿಯೋಗವನ್ನು ಹಿಂದೆಯೇ ಹೇಳಲಾಗಿದೆ.

## ಸೂಕ್ತ—೫೨

ಮಂಡಲ—೬ ॥ ಅನುವಾಕ—೫ ॥ ಸೂಕ್ತ—೫೨ ॥
ಅಷ್ಟಕ—೪ ॥ ಅಧ್ಯಾಯ—೮ ॥ ವರ್ಗ—೧೪, ೧೫, ೧೬ ॥

॥ ಸೂಕ್ತದಲ್ಲಿರುವ ಋಕ್ಸಂಖ್ಯೆ—೧೭ ॥
॥ ಋಷಿಃ—ಋಜಿಶ್ವಾ ॥
॥ ದೇವತಾ—ವಿಶ್ವೇದೇವಾಃ ॥
॥ ಛಂದಃ—೧-೬, ೧೩, ೧೫, ೧೭. ತ್ರಿಷ್ಟುಪ್ । ೭-೧೨. ಗಾಯತ್ರೀ । ೧೪. ಜಗತೀ ॥

॥ ಸಂಹಿತಾಪಾಠಃ ॥

ನ ತದ್ದಿವಾ ನ ಪೃಥಿವ್ಯಾನು ಮನ್ಯೇ ನ ಯಜ್ಞೇನ ನೋತ ಶಮೀಭಿರಾಭಿಃ ।
ಉಬ್ಜಂತು ತಂ ಸುಭ್ವ೧ಃ ಪರ್ವತಾಸೋ ನಿ ಹೀಯತಾಮತಿಯಾಜಸ್ಯ ಯಷ್ಟಾ ॥ ೧ ॥

॥ ಪದಪಾಠಃ ॥

ನ । ತತ್ । ದಿವಾ । ನ । ಪೃಥಿವ್ಯಾ । ಅನು । ಮನ್ಯೇ । ನ । ಯಜ್ಞೇನ । ನ । ಉತ । ಶಮೀಭಿಃ । ಆಭಿಃ ।
ಉಬ್ಜಂತು । ತಂ । ಸುಽಭ್ವಃ । ಪರ್ವತಾಸಃ । ನಿ । ಹೀಯತಾಂ । ಅತಿಽಯಾಜಸ್ಯ । ಯಷ್ಟಾ ॥ ೧ ॥

॥ ಸಾಯಣಭಾಷ್ಯಂ ॥

**ಅತಿಯಾಜೋ ನಾಮ ಕಶ್ಚಿದೃಷಿರಸ್ಮಾದೃಜಿಶ್ವನ ಉತ್ಕೃಷ್ಟಃ ಸ್ಯಾಮಹಮಿತಿ ಬುದ್ಧ್ಯಾ ದೇವಾನ್ಯಿಯಕ್ಷುರಾಸ । ಋಷಿಸ್ತದೀಯಂ ಯಜನಂ ನಿರಾಚಷ್ಟಾದ್ಯಯಾ ॥ ನ ತದತಿಯಾಜಸ್ಯ ಋಷೇಸ್ತದ್ಯಜನಂ ದಿವಾ ದ್ಯುಲೋಕೇನ ತತ್ರತ್ಯೇನ ದೇವಗಣೇನ ಯುಕ್ತಮಿತ್ಯಹಂ ನಾನು ಮನ್ಯೇ । ಅನುಮತಿಂ ನ ಕರೋಮಿ । ನ ಚ ಪೃಥಿವ್ಯಾ ಪಾರ್ಥಿವೇನಾಪಿ ದೇವಗಣೇನ ಯುಕ್ತಮಿತಿ ನಾನು ಮನ್ಯೇ। ನ ಚ ಯಜ್ಞೇನ ಮಯಾನುಷ್ಠಿತೇನ ಸದೃಶಂ ತದಿತ್ಯಹಂ ನಾನು ಮನ್ಯೇ । ಉತಾಪಿ ಚಾಭಿಃ ಶಮೀಭಿರನ್ಯೈರಪಿ ಮಯಾ ಕೃತೈರೇಭಿಃ ಕರ್ಮಭಿಃ ಸದೃಶಮಿತ್ಯಪಿ ನಾಸು ಮನ್ಯೇ । ಮಯಾ ವಶೀಕೃತಾ ದೇವಾಸ್ತದೀಯಂ ಯಜನಂ ನಾಂಗೀಕುರ್ವಂತಿ ಸ ಚಾನಭಿಜ್ಞತ್ವಾತ್ಸಮ್ಯಗ್ಯಷ್ಟುಮಪಿ ನ ಶಕ್ನೋತೀತಿ ಭಾವಃ । ಅಪಿ ಚ ತಮೃಷಿಂ ಸುಭ್ವಃ ಸುಷ್ಠು ಭವಂತಃ ಪರ್ವತಾಸಃ ಪರ್ವತಾ ಇಂದ್ರೇಣ ಪ್ರಹಿತಾಃ ಸಂತ ಉಬ್ಜಂತು । ಹಿಂಸಂತು ॥ ಉಬ್ಜಿರ್ಹಿಂಸಾಕರ್ಮಾ ॥ ತಥಾ ತಸ್ಯಾತಿಯಾಜಸ್ಯ ಋಜಿಶ್ವನೋऽಪ್ಯತಿಶಯೇನಾಹಂ ದೇವಾನ್ಯಜಾಮೀತಿ ಬುದ್ಧ್ಯಾ ಯುಕ್ತಸ್ಯ ಋಷೇರ್ಯೋ ಯಷ್ಟಾ ಯಾಜಕಃ ಸ ನಿ ಹೀಯತಾಂ । ನಿತರಾಂ ಹೀನೋ ಭವತು ॥**

॥ ಪ್ರತಿಪದಾರ್ಥ ॥

**ತತ್**—ಅತಿಯಾಜ ಋಷಿಯಿಂದ ಕೃತವಾದ ಯಜ್ಞಕರ್ಮವು। **ದಿವಾ**— ದ್ಯುಲೋಸ್ಥರಾದ ದೇವತೆಗಳೊಂದಿಗೆ ಸೇರಿಕೊಳ್ಳಲು ಯೋಗ್ಯವಾದುದೆಂದು । **ನ ಅನು ಮನ್ಯೇ**—ನಾನು ಒಪ್ಪುವುದಿಲ್ಲ। **ಪೃಥಿವ್ಯಾ**—ಪೃಥಿವೀಸ್ಥರಾದ ದೇವತೆಗಳನ್ನು ಸಮೀಪಿಸಲು ಯೋಗ್ಯವಾದುದೆಂದೂ । **ನ**—ನಾನು ಒಪ್ಪುವುಧಿಲ್ಲ। **ಯಜ್ಞೇನ**—ನಾನು ಆಚರಿಸುವ ಯಜ್ಞಕ್ಕೆ ಸಮಾನವಾದುದೆಂದೂ । **ನ**—ನಾನು ಅಂಗೀಕರಿಸುವುದಿಲ್ಲ। **ಉತ**—ಮತ್ತು । **ಆಭಿಃ ಶಮೀಭಿಃ**—ನನ್ನಿಂದ ಕೃತವಾದ ಇತರ ಕರ್ಮಗಳಿಗೆ ಸಮಾನವಾದುದೆಂದೂ । **ನ**—ನಾನು ಒಪ್ಪುವುದಿಲ್ಲ। **ತಂ**—ಆ ಅತಿಯಾಜ ಋಷಿಯನ್ನು । **ಸುಭ್ವಃ**—ಅತಿಶಯವಾದ ಸ್ಥಾನದಲ್ಲಿರುವವರೂ। **ಪರ್ವತಾಸಃ**—ಇಂದ್ರನೊಡನಿರುವವರೂ ಆದ ದೇವತೆಗಳು। **ಉಬ್ಜಂತು**—ಹಿಂಸಿಸಲಿ। **ಅತಿಯಾಜಸ್ಯ**—ಅತಿಯಾಜನ ಪ್ರತಿನಿಧಿಯಾಗಿರುವ। **ಯಷ್ಟಾ**—ಯಜ್ಞಕರ್ತನು। **ನಿ ಹೀಯತಾಂ**—ಪೂರ್ಣವಾಗಿ ನಾಶವಾಗಲಿ.

॥ ಭಾವಾರ್ಥ ॥

ಅತಿಯಾಜ ಋಷಿಯಿಂದ ಕೃತವಾದ ಯಜ್ಞಕರ್ಮವು ದ್ಯುಲೋಕಸ್ಥರಾದ ದೇವತೆಗಳೊಂದಿಗೆ ಸೇರಲು ಯೋಗ್ಯವಾದುದೆಂದು ನಾನು ಒಪ್ಪುವುದಿಲ್ಲ. ಪೃಥಿವೀಸ್ಥರಾದ ದೇವತೆಗಳನ್ನು ಸಮೀಪಿಸಲು ಯೋಗ್ಯವಾದುದೆಂದೂ ನಾನು ಒಪ್ಪುವುದಿಲ್ಲ. ಅದು ನಾನು ಆಚರಿಸುವ ಯಜ್ಞಕ್ಕೆ ಖಂಡಿತವಾಗಿಯೂ ಸಮಾನವಾದುದಲ್ಲ. ನನ್ನಿಂದ ಕೃತವಾದ ಇತರ ಕರ್ಮಗಳಿಗೆ ಸಮಾನವಾದುದೆಂದೂ ಒಪ್ಪಲಾರೆ. ಅತಿಶಯವಾದ ಸ್ಥಾನದಲ್ಲಿರುವವರೂ, ಇಂದ್ರನೊಡನಿರುವವರೂ ಆದ ದೇವತೆಗಳು ಆ ಅತಿಯಾಜ ಋಷಿಯನ್ನು ಹಿಂಸಿಸಲಿ- ಅತಿಯಾಜನ ಪ್ರತಿನಿಧಿಯಾಗಿರುವ ಯಜ್ಞಕರ್ತನು ಪೂರ್ಣವಾದ ನಾಶವನ್ನು ಹೊಂದಲಿ.

## English Translation.

I do not regard it as worthy (of the gods) of heaven, or (of those) of earth, as (fit to be compared) with the sacrifice (I offer), or with these (our) sacred rites: let, then, the mighty mountains overwhelm him; let the employer of Atiyaja be ever degraded.

|| ವಿಶೇಷವಿಷಯಗಳು ||

ಪೂರ್ವದಲ್ಲಿ ಅತಿಯಾಜನೆಂಬ ಒಬ್ಬ ಋಷಿಯು ಈ ಸೂಕ್ತದ ದ್ರಷ್ಟೃವಾದ ಋಜಿಶ್ವ ಎಂಬ ಋಷಿಗಿಂತಲೂ ಶ್ರೇಷ್ಠನಾಗಿ ಆಗಬೇಕೆಂದು ಬಯಸಿ ಆದಕ್ಕಾಗಿ ದೇವತೆಗಳನ್ನು ಯಜ್ಞಾದಿಗಳಿಂದ ಆರಾಧಿಸಬೇಕೆಂದು ಪ್ರಯತ್ನಿಸಿದನು. ಅದನ್ನು ತಿಳಿದು ಋಜಿಶ್ವನು ಆ ಅತಿಯಾಜನ ಮೇಲೆ ಕೋಪಗೊಂಡು ಅವನನ್ನೂ ಅವನ ಯಜ್ಞಕರ್ಮವನ್ನೂ ನಿಂದಿಸುವನು. ಆ ವಿಷಯವನ್ನೇ ಈ ಋಕ್ಕಿನಲ್ಲಿ ಹೇಳಲಾಗಿದೆ.

|| ಸಂಹಿತಾಪಾಠಃ ||

ಅತಿ ವಾ ಯೋ ಮರುತೋ ಮನ್ಯತೇ ನೋ ಬ್ರಹ್ಮ ವಾ ಯಃ ಕ್ರಿಯಮಾಣಂ ನಿನಿತ್ಸಾತ್ ।
ತಪೂಂಷಿ ತಸ್ಮೈ ವೃಜಿನಾನಿ ಸಂತು ಬ್ರಹ್ಮದ್ವಿಷಮಭಿ ತಂ ಶೋಚತು ದ್ಯೌಃ ||

|| ಪದಪಾಠಃ ||

ಅತಿ । ವಾ । ಯಃ । ಮರುತಃ । ಮನ್ಯತೇ । ನಃ । ಬ್ರಹ್ಮ । ವಾ । ಯಃ । ಕ್ರಿಯಮಾಣಂ । ನಿನಿತ್ಸಾತ್ ।
ತಪೂಂಷಿ । ತಸ್ಮೈ । ವೃಜನಾನಿ । ಸಂತು । ಬ್ರಹ್ಮऽದ್ವಿಷಂ । ಅಭಿ । ತಂ । ಶೋಚತು । ದ್ಯೌಃ || ೨ ||

|| ಸಾಯಣಭಾಷ್ಯಂ ||

ಹೇ ಮರುತೋ ಯಃ ಪುರುಷೋ ನೋಽಸ್ಮಾನತಿ ಮನ್ಯತೇ ಅತೀತ್ಯ ಸ್ವಸ್ಯಾಧಿಕ್ಯಂ ಮನ್ಯತೇ ಅಸ್ಮತ್ತೋಽಪಿ ಸ್ವಯಮಧಿಕ ಇತಿ ಬುಧ್ಯತೇ । ಅಸ್ಮಾಭಿಃ ಕ್ರಿಯಮಾಣಂ ಬ್ರಹ್ಮ ಸ್ತೋತ್ರಂ ವಾ ಯೋ ನಿನಿತ್ಸಾತ್ ನಿಂದಿತುಮಿಚ್ಛೇತ್ ತಸ್ಮೈ ಪುರುಷಾಯ ತಪೂಂಷಿ ತೇಜಾಂಸಿ ವೃಜಿನಾನಿ ಬಾಧಕಾನಿ ಸಂತು । ಭವಂತು । ಬ್ರಹ್ಮದ್ವಿಷಂ ತಂ ಶತ್ರುಂ ದ್ಯೌರಾದಿತ್ಯಶ್ಚಾಭಿಶೋಚತು । ಅಭಿತಪತು । ಅಭಿದಹತು ||

|| ಪ್ರತಿಪದಾರ್ಥ ||

**ಮರುತಃ**—ಎಲೈ ಮರುತ್ತುಗಳೇ, । **ಯಃ**—ಯಾವ ಪುರುಷನು । **ನಃ**—ನಮನ್ನು । **ಅತಿ ಮನ್ಯತೇ**—ತಿರಸ್ಕರಿಸಿ ನಮಗಿಂತಲೂ ತಾನೇ ಅಧಿಕನೆಂದು ತಿಳಿಯುವನೋ । **ಕ್ರಿಯಮಾಣಂ**—ನಮ್ಮಿಂದ ನೆರವೇರಿಸಲ್ಪಡುವ

**ಬ್ರಹ್ಮ ವಾ**—ಸ್ತೋತ್ರವನ್ನೂ | **ಯಃ**—ಯಾವ ಪುರುಷನು | **ನಿನಿತ್ಸಾತ್**—ದೂಷಿಸುವನೋ | **ತಸ್ಮೈ**—ಆ ಪುರುಷನಿಗೆ | **ತಪೂಂಷಿ**—ನಿಮ್ಮ ತೇಜಸ್ಸುಗಳು | **ವೃಜಿನಾನಿ**—ಹಿಂಸಾಕಾರಕಗಳಾಗಿ | **ಸಂತು**—ಆಗಿರಲಿ | **ಬ್ರಹ್ಮದ್ವಿಷಂ**—ನಮ್ಮ ಸ್ತೋತ್ರಾದಿಗಳನ್ನು ದ್ವೇಷಿಸುವ | **ತಂ**—ಆ ಶತ್ರುವನ್ನು | **ದ್ಯೌಃ**—ಆದಿತ್ಯನು | **ಅಭಿ ಶೋಚತು**—ಕ್ಷಯಿಸುವಂತೆ ಮಾಡಲಿ.

|| ಭಾವಾರ್ಥ ||

ಎಲೈ ಮರುತ್ತುಗಳೇ, ಯಾವ ಪುರುಷನು ನಮ್ಮನ್ನು ತಿರಸ್ಕರಿಸಿ ನಮಗಿಂತಲೂ ತಾನೇ ಅಧಿಕನೆಂದು ತಿಳಿಯುವನೋ, ನಮ್ಮಿಂದ ನೆರವೇರಿಸಲ್ಪಡುವ ಸ್ತೋತ್ರವನ್ನೂ ಯಾವನು ದೂಷಿಸುವನೋ ಆ ಪುರುಷನ ಭಾಗಕ್ಕೆ ನಿಮ್ಮ ತೇಜಸ್ಸುಗಳು ಹಿಂಸಾಕಾರಕವಾಗಲಿ. ನಮ್ಮ ಸ್ತೋತ್ರಾದಿಗಳನ್ನು ದ್ವೇಷಿಸುವ ಆ ಶತ್ರುವನ್ನು ಆದಿತ್ಯನು ಕ್ಷಯಿಸುವಂತೆ ಮಾಡಲಿ.

English Translation.

Maruts, may the energies of that man be enfeebld : may heaven consume that impious adversary who thinks himself superior to us, and who pretends to depreciate the worhip that we offer.

|| ಸಂಹಿತಾಪಾಠಃ ||

ಕಿಮಂಗ ತ್ವಾ ಬ್ರಹ್ಮಣಃ ಸೋಮ ಗೋಪಾಂ ಕಿಮಂಗ ತ್ವಾಹುರಭಿ-
ಶಸ್ತಿಪಾಂ ನಃ |
ಕಿಮಂಗ ನಃ ಪಶ್ಯಸಿ ನಿದ್ಯಮಾನಾನ್ಬ್ರಹ್ಮದ್ವಿಷೇ ತಪುಷಿಂ ಹೇತಿಮಸ್ಯ || ೩ ||

|| ಪದಪಾಠಃ ||

ಕಿಂ | ಅಂಗ | ತ್ವಾ | ಬ್ರಹ್ಮಣಃ | ಸೋಮ | ಗೋಪಾಂ | ಕಿಂ | ಅಂಗ | ತ್ವಾ | ಆಹುಃ | ಅಭಿಶಸ್ತಿऽಪಾಂ | ನಃ |

ಕಿಂ | ಅಂಗ | ನಃ | ಪಶ್ಯಸಿ | ನಿದ್ಯಮಾನಾನ್ | ಬ್ರಹ್ಮದ್ವಿಷೇ | ತಪುಷಿಂ | ಹೇತಿಂ | ಅಸ್ಯ || ೩ ||

|| ಸಾಯಣಭಾಷ್ಯಂ ||

ಕಿಮಂಗೇತಿ ಪ್ರಸಿದ್ಧಿದ್ಯೋತಕೌ ನಿಪಾತೌ | ಹೇ ಸೋಮ ತ್ವಾ ತ್ವಾಂ ಖಲು ಬ್ರಹ್ಮಣೋ ಮಂತ್ರಸ್ಯ ಕರ್ಮಣೋ ವಾ ಬ್ರಹ್ಮಜಾತೇರ್ವಾ ಗೋಪಾಂ ಗೋಪಾಯಿತಾರಮಾಹುಃ | ಕಥಯಂತಿ ಪುರಾವಿದಃ | ತಥಾ ನೋऽಸ್ಮಾಕಮಭಿಶಸ್ತಿಪಾಮಭಿಶಂಸಕೇಭ್ಯಃ ಪಾಲಯಿತಾರಂ ತ್ವಾಮೇವ ಖಲ್ವಾಹುಃ | ಯದ್ವಾ | ಅಂಗೇತ್ಯಭಿಮುಖೀಕರಣೇ | ಅಂಗ ಹೇ ಸೋಮ ಕಿಂಕಾರಣಂ ತ್ವಾಂ ಬ್ರಹ್ಮಣೋ ಗೋಪಾ-

ಮಾಹುಃ । ಕಿಂಕಾರಣಂ ವಾ ತ್ವಾಮಸ್ಮಾಕಮಭಿಶಸ್ತಿಪಾಮಾಹುಃ । ನಿದ್ಯಮಾನಾತ್ ಪರೈರ್ದೂಷ್ಯಮಾ-ಣಾನ್ನೋಽಸ್ಮಾನಂಗ ಹೇ ಸೋಮ ಕಿಂಕಾರಣಂ ಪಶ್ಯಸಿ । ತ್ವಾಮೇವ ಸರ್ವೇ ಬ್ರಹ್ಮಣೋ ರಕ್ಷಕಂ ಶತ್ರುಭ್ಯಃ ಪಾಲಕಂ ಚ ಕಥಯಂತಿ ಅತೋಽಸ್ಮಾಸು ಪರೈರ್ನಿಂದ್ಯಮಾನೇಷ್ವೌದಾಸೀನ್ಯಂ ತವಾನುಚಿತಂ । ಅತೋ ಬ್ರಹ್ಮದ್ವಿಷೇ ಬ್ರಾಹ್ಮಣದ್ವೇಷ್ಟ್ರೇ ತಸ್ಮೈ ತಪುಷಿಂ ತಾಪಕಂ ಹೇತಿಮಾಯುಧಮಸ್ಯ । ಕ್ಷಿಪ । ಪ್ರೇರಯ ॥

॥ ಪ್ರತಿಪದಾರ್ಥ ॥

**ಅಂಗ ಸೋಮ**—ಎಲೈ ಸೋಮದೇವನೇ। **ತ್ವಾ**—ನಿನ್ನನ್ನು। **ಬ್ರಹ್ಮಣಃ**—ಮಂತ್ರಕ್ಕೆ ಅಥವಾ ಕರ್ಮಕ್ಕೆ। **ಗೋಪಾಂ**—ರಕ್ಷಕನೆಂಬುದಾಗಿ । **ಕಿಂ ಆಹುಃ**—ಏತಕ್ಕೆ ಹೇಳಿದ್ದಾರೆ । **ನಃ**—ನಮಗೆ । **ಅಭಿಶಸ್ತಿಪಾಂ**—ಶತ್ರುಗಳಿಂದಲೂ ರಕ್ಷಿಸುವವನೆಂದೂ । **ಕಿಂ**—ಏತಕ್ಕೆ ನಿನ್ನನ್ನು ಸ್ತುತಿಸಿದ್ದಾರೆ । **ಅಂಗ**—ಎಲೈ ಸೋಮನೇ । **ನಿದ್ಯಮಾನಾನ್**—ಶತ್ರುಗಳಿಂದ ದೂಷಿಸಲ್ಪಡುವ । **ನಃ**—ನಮ್ಮನ್ನು । **ಕಿಂ**—ಏತಕ್ಕಾಗಿ । **ಪಶ್ಯಸಿ**—(ಉದಾಸೀನನಾಗಿ) ನೋಡುತ್ತೀಯೆ । **ಅಂಗ**—ಎಲೈ ಸೋಮನೇ। **ಬ್ರಹ್ಮದ್ವಿಷೇ**—ಸ್ತುತಿಕರ್ತನನ್ನು ಅಥವಾ ಬ್ರಾಹ್ಮಣನನ್ನು ದ್ವೇಷಿಸುವವನ ಮೇಲೆ । **ತಪುಷಿಂ**—ದಹಿಸತಕ್ಕ। **ಹೇತಿಂ**—ಆಯುಧವನ್ನು। **ಅಸ್ಯ**—ಪ್ರಯೋಗಿಸು.

॥ ಭಾವಾರ್ಥ ॥

ಎಲೈ ಸೋಮದೇವನೇ, ನಿನ್ನನ್ನು ಸ್ತುತಿಕರ್ತರು ಮಂತ್ರಗಳಿಗೂ ಕರ್ಮಕ್ಕೂ ರಕ್ಷಕನೆಂಬುದಾಗಿ ಏತಕ್ಕೆ ಹೇಳಿದ್ದಾರೆ? ನಮ್ಮನ್ನು ಶತ್ರುಗಳಿಂದ ರಕ್ಷಿಸುವವನೆಂದೂ ನಿನ್ನನ್ನು ಏತಕ್ಕೆ ಸ್ತುತಿಸಿದ್ದಾರೆ ? ಎಲೈ ಸೋಮನೇ, ಶತ್ರುಗಳಿಂದ ದೂಷಿಸಲ್ಪಡುವ ನಮ್ಮನ್ನು ಏತಕ್ಕೆ ಉದಾಸೀನನಾಗಿ ನೋಡುತ್ತೀಯೆ? ಎಲೈ ಸೋಮನೇ, ಸ್ತುತಿ ಕರ್ತನನ್ನು ಅಥವಾ ಬ್ರಾಹ್ಮಣನನ್ನು ದ್ವೇಷಿಸುವ ಶತ್ರುವಿನ ಮೇಲೆ ದಹಿಸತಕ್ಕ ಆಯುಧವನ್ನು ಪ್ರಯೋಗಿಸು.

## English Translation.

Why have they called you, Soma, the protector of pious prayer ? why (have they called you) our defender against calumny ? why do you behold us subjected to reproach ? cast your destroying weapon upon the adversary of the Brahman.

॥ ಸಂಹಿತಾಪಾಠಃ ॥

ಅವಂತು ಮಾಮುಷಸೋ ಜಾಯಮಾನಾ ಅವಂತು ಮಾ ಸಿಂಧವಃ
ಪಿನ್ವಮಾನಾಃ ।
ಅವಂತು ಮಾ ಪರ್ವತಾಸೋ ಧ್ರುವಾಸೋಽವಂತು ಮಾ ಪಿತರೋ
ದೇವಹೂತೌ ॥ ೪ ॥

॥ ಪದಪಾಠಃ ॥

ಅವಂತು । ಮಾಂ । ಉಷಸಃ । ಜಾಯಮಾನಾಃ । ಅವಂತು । ಮಾ । ಸಿಂಧವಃ । ಪಿನ್ವಮಾನಾಃ ।

ಅವಂತು । ಮಾ । ಪರ್ವತಾಸಃ । ಧ್ರುವಾಸಃ । ಅವಂತು । ಮಾ । ಪಿತರಃ । ದೇವಽಹೂತೌ ॥ ೪ ॥

॥ ಸಾಯಣಭಾಷ್ಯಂ ॥

ಜಾಯಮಾನಾಃ ಪ್ರಾದುರ್ಭವಂತ್ಯ ಉಷಸೋ ಮಾಮವಂತು । ರಕ್ಷಂತು । ತಥಾ ಪಿನ್ವಮಾನಾ ವರ್ಧಮಾನಾಃ ಸಿಂಧವಃ ಸ್ಯಂದನಶೀಲಾ ನದ್ಯಶ್ಚ ಮಾ ಮಾಮವಂತು । ತಥಾ ಧ್ರುವಾಸೋ ನಿಶ್ಚಲಾಃ ಪರ್ವತಾಸಃ ಪರ್ವತಾಶ್ಚ ಮಾ ಮಾಮವಂತು । ತಥಾ ದೇವಹೂತೌ । ದೇವಾನಾಂ ಹೂತಿರಾಹ್ವಾನಮಸ್ಮಿನ್ನಿತಿ ದೇವಹೂತಿರ್ಯಾಗಃ । ತತ್ರ ವಿದ್ಯಮಾನಾಃ ಪಿತರಃ ಪಿತೃದೇವತಾಶ್ಚ ಮಾಮವಂತು ॥

॥ ಪ್ರತಿಪದಾರ್ಥ ॥

**ಜಾಯಮಾನಾಃ**— ಪ್ರತಿದಿನವೂ ಉತ್ಪನ್ನವಾಗತಕ್ಕ । **ಉಷಸಃ**— ಉಷೋದೇವತೆಗಳು । **ಮಾಂ**— ನನ್ನನ್ನು । **ಅವಂತು**—ರಕ್ಷಿಸಲಿ । **ಪಿನ್ವಮಾನಾಃ**—ವೃದ್ಧಿಯನ್ನು ಹೊಂದತಕ್ಕ । **ಸಿಂಧವಃ**—ನದಿಗಳೂ । **ಮಾ**—ನನ್ನನ್ನು । **ಅವಂತು**—ರಕ್ಷಿಸಲಿ । **ಧ್ರುವಾಸಃ**—ನಿಶ್ಚಲವಾದ । **ಪರ್ವತಾಸಃ**—ಪರ್ವತಗಳೂ । **ಮಾ**—ನನ್ನನ್ನು । **ಅವಂತು**—ರಕ್ಷಿಸಲಿ । **ದೇವಹೂತೌ**—ದೇವತೆಗಳನ್ನು ಆರಾಧಿಸುವ ಯಜ್ಞಪ್ರದೇಶದಲ್ಲಿರುವ । **ಪಿತರಃ**—ಪಿತೃದೇವತೆಗಳು । **ಮಾ ಅವಂತು**—ನನ್ನನ್ನು ರಕ್ಷಿಸಲಿ.

॥ ಭಾವಾರ್ಥ ॥

ಪ್ರತಿದಿನವೂ ಉತ್ಪನ್ನವಾಗತಕ್ಕ ಉಷೋದೇವತೆಗಳು ನನ್ನನ್ನು ರಕ್ಷಿಸಲಿ. ವೃದ್ಧಿಯನ್ನು ಹೊಂದತಕ್ಕ ನದಿಗಳೂ ನನ್ನನ್ನು ರಕ್ಷಿಸಲಿ. ನಿಶ್ಚಲವಾದ ಪರ್ವತಗಳೂ, ದೇವತೆಗಳನ್ನೂ ಆರಾಧಿಸುವ ಯಜ್ಞಪ್ರದೇಶದಲ್ಲಿರುವ ಪಿತೃದೇವತೆಗಳೂ ನನ್ನನ್ನು ರಕ್ಷಿಸಲಿ.

## English Translation.

May the opening dawns preserve me: may the swelling rivers preserve me; may the firm-set mountains preserve me: may the progenitors (present) at the invocation of the gods preserve me.

॥ ಸಂಹಿತಾಪಾಠಃ ॥

ವಿಶ್ವದಾನೀಂ ಸುಮನಸಃ ಸ್ಯಾಮ ಪಶ್ಯೇಮ ನು ಸೂರ್ಯಮುಚ್ಚರಂತಂ ।
ತಥಾ ಕರದ್ವಸುಪತಿರ್ವಸೂನಾಂ ದೇವಾಁ ಓಹಾನೋಽವಸಾಗಮಿಷ್ಠಃ ॥ ೫ ॥

॥ ಪದಪಾಠಃ ॥

ವಿಶ್ವऽದಾನೀಂ । ಸುऽಮನಸಃ । ಸ್ಯಾಮ । ಪಶ್ಯೇಮ । ನು । ಸೂರ್ಯಂ । ಉತ್ऽಚರಂತಂ ।

ತಥಾ । ಕರತ್ । ವಸುऽಪತಿಃ । ವಸೂನಾಂ । ದೇವಾನ್ । ಓಹಾನಃ । ಅವಸಾ । ಆऽಗಮಿಷ್ಠಃ ॥ ೫ ॥

॥ ಸಾಯಣಭಾಷ್ಯಂ ॥

**ಹೇ ದೇವಾ ವಿಶ್ವದಾನೀಂ ಸರ್ವದಾ ವಯಂ ಸುಮನಸಃ ಸ್ಯಾಮ । ಶೋಭನಮನಸ್ಕಾ ಭವೇಮ । ನುಶಬ್ದಃ ಸಮುಚ್ಚಯೇ । ಉಚ್ಚರಂತಮುದ್ಯಂತಂ ಸೂರ್ಯಂ ಸರ್ವದಾ ಪಶ್ಯೇಮ ಚ । ವಸೂನಾಂ ವಸುಪತಿರುತ್ಕೃಷ್ಟಧನಾಧಿಪತಿರಗ್ನಿರ್ದೇವಾನವಸಾಸ್ಮದೀಯೇನ ಹವಿಷೌಹಾನೋ ವಹನ್ ಪ್ರಾಪಯನ್ ಆಗಾಮಿಷ್ಠ ಆಗಂತೃತಮ ಏವಂಗುಣವಿಶಿಷ್ಟಃ ಸನ್ ತಥಾ ಕರತ್ । ಅಸ್ಮಾನ್ ತಥಾವಿಧಾನುಕ್ತಪ್ರಕಾರಾನ್ಕರೋತು ॥**

॥ ಪ್ರತಿಪದಾರ್ಥ ॥

(ಎಲೈ ದೇವತೆಗಳೇ) **ವಿಶ್ವದಾನೀಂ**—ಸರ್ವಕಾಲಗಳಲ್ಲಿಯೂ । (**ವಯಂ**—ನಾವು) । **ಸುಮನಸಃ**—ಉತ್ತಮವಾದ ಮನಸ್ಸುಳ್ಳವರಾಗಿ । **ಸ್ಯಾಮ**—ಇರುವಂತಾಗಲಿ । **ಉಚ್ಚರಂತಂ**—ಪ್ರತಿದಿನವೂ ಉದಯಿಸತಕ್ಕ । **ಸೂರ್ಯಂ ನು**—ಸೂರ್ಯನನ್ನೂ । **ಪಶ್ಯೇಮ**—ನೋಡುವಂತಾಗಲಿ । **ವಸೂನಾಂ**—ಧನಗಳಿಗೆಲ್ಲಾ । **ವಸುಪತಿಃ**—ಉತ್ತಮವಾದ ಪ್ರಭುವಾದ ಅಗ್ನಿಯು । **ದೇವಾನ್**—ದೇವತೆಗಳಿಗೆಲ್ಲಾ । **ಅವಸಾ**—ನಮ್ಮ ಹವಿಸ್ಸುಗಳಿಂದ । **ಓಹಾನಃ**—ತುಷ್ಟಿಯನ್ನು ವಹಿಸುತ್ತಾ । **ಆಗಮಿಷ್ಠಃ**—ಆಹ್ವಾನಕ್ಕನುಗುಣವಾಗಿ ದಯಮಾಡುತ್ತಾ । **ತಥಾ ಕರತ್**—ನಮ್ಮ ಅಭೀಷ್ಟದಂತೆ ಮಾಡಲಿ.

॥ ಭಾವಾರ್ಥ ॥

ಎಲೈ ದೇವತೆಗಳೇ, ಸರ್ವಕಾಲಗಳಲ್ಲಿಯೂ ನಾವು ಉತ್ತಮವಾದ ಮನಸ್ಸುಳ್ಳರಾಗಿ ಇರುವಂತಾಗಲಿ, ಪ್ರತಿದಿನವೂ ಉದಯಿಸತಕ್ಕ ಸೂರ್ಯನನ್ನೂ ನೋಡುವಂತಾಗಲಿ, ಧನಗಳಿಗೆಲ್ಲಾ ಉತ್ತಮವಾದ ಪತಿಯಾದ ಅಗ್ನಿಯು ದೇವತೆಗಳಿಗೆಲ್ಲಾ ನಮ್ಮ ಹವಿಸ್ಸುಗಳಿಂದ ತುಷ್ಟಿಯನ್ನು ವಹಿಸುತ್ತಲೂ ನಮ್ಮ ಆಹ್ವಾನಕ್ಕನುಗುಣವಾಗಿ ದಯಮಾಡುತ್ತಲೂ ನಮ್ಮ ಅಭೀಷ್ಟವನ್ನು ನೆರವೇರಿಸಲಿ.

English Translation.

May we at all seasons be possessed of sound minds : may we ever behold the raising sun : such may the affluent lord of riches, (Agni), render us, ever most ready to come (at our invocation), charged with our oblation to the gods.

॥ ಸಂಹಿತಾಪಾಠಃ ॥

ಇಂದ್ರೋ ನೇದಿಷ್ಠಮವಸಾಗಮಿಷ್ಠಃ ಸರಸ್ವತೀ ಸಿಂಧುಭಿಃ ಪಿನ್ವಮಾನಾ ।
ಪರ್ಜನ್ಯೋ ನ ಓಷಧೀಭಿರ್ಮಯೋಭುರಗ್ನಿಃ ಸುಶಂಸಃ ಸುಹವಃ ಪಿತೇವ ॥

॥ ಪದಪಾಠಃ ॥

ಇಂದ್ರಃ । ನೇದಿಷ್ಠಂ । ಅವಸಾ । ಆऽಗಮಿಷ್ಠಃ । ಸರಸ್ವತೀ । ಸಿಂಧುऽಭಿಃ । ಪಿನ್ವಮಾನಾ ।
ಪರ್ಜನ್ಯಃ । ನಃ । ಓಷಧೀಭಿಃ । ಮಯಃऽಭುಃ । ಅಗ್ನಿಃ । ಸುऽಶಂಸಃ । ಸುऽಹವಃ । ಪಿತಾऽಇವ ॥ ೬ ॥

॥ ಸಾಯಣಭಾಷ್ಯಂ ॥

**ಅಯಮಿಂದ್ರೋ ನೇದಿಷ್ಠಮಂತಿಕತಮಂ ಯಥಾ ಭವತಿ ತಥಾವಸಾ ರಕ್ಷಣೇನ ಸಾರ್ಧಮಾಗಮಿಷ್ಠ ಆಗಂತೃತಮೋऽಸ್ತು । ಸಿಂಧುಭಿಃ ಸ್ಯಂದನೈರುದಕೈಃ ಪಿನ್ವಮಾನಾ ನದೀರೂಪಾ ಸರಸ್ವತೀ ಚಾಗಂತೃತಮಾ ಭವತು । ಓಷಧೀಭಿಃ ಸಾರ್ಧಂ ಪರ್ಜನ್ಯಶ್ಚ ನೋऽಸ್ಮಾಕಂ ಮಯೋಭುಃ ಸುಖಸ್ಯ ಭಾವಯಿತಾ ಭವತು । ಅಗ್ನಿಶ್ಚ ಪಿತೇವ ಪುತ್ರಸ್ಯ ಜನಕ ಇವ ಸುಶಂಸಃ ಸುಖೇನ ಶಂಸನೀಯಃ ಸುಹವಃ ಸುಖೇನಾಹ್ವಾತವ್ಯಶ್ಚ ಭವತು ॥**

॥ ಪ್ರತಿಪದಾರ್ಥ ॥

**ಇಂದ್ರಃ**—ಇಂದ್ರನು । **ನೇದಿಷ್ಠಂ**—ನಮಗೆ ಅತ್ಯಂತ ಸಮೀಪದಲ್ಲಿರುವಂತೆ । **ಅವಸಾ**—ತನ್ನ ರಕ್ಷಣೆಯೊಂದಿಗೆ । **ಆಗಮಿಷ್ಠಃ**—ಬರುವವನಾಗಲಿ । **ಸಿಂಧುಭಿಃ**—ಪ್ರವಹಿಸುವ ಉದಕಗಳೊಂದಿಗೆ । **ಪಿನ್ವಮಾನಾ**—ವೃದ್ಧಿಯನ್ನು ಹೊಂದತಕ್ಕ । **ಸರಸ್ವತೀ**—ಸರಸ್ವತಿನದಿಯೂ ದಯಮಾಡಲಿ । **ಓಷಧೀಭಿಃ**—ಓಷಧಿಗಳ ಮೂಲಕವಾಗಿ । **ಪರ್ಜನ್ಯಃ**—ಪರ್ಜನ್ಯನು । **ನಃ**—ನಮಗೆ । **ಮಯೋಭುಃ**—ಸುಖದಾಯಕನಾಗಲಿ । **ಅಗ್ನಿಃ**—ಅಗ್ನಿಯು । **ಪಿತೇವ**—ಪುತ್ರನಿಗೆ ಪಿತೃವು ಪ್ರಶಸ್ಯನಾಗಿರುವಂತೆ । **ಸುಶಂಸಃ**—ಉತ್ತಮವಾದ ಪ್ರಶಂಸೆಗೆ ಪಾತ್ರನಾಗಿಯೂ । **ಸುಹವಃ**—ಉತ್ತಮವಾದ ಆಹ್ವಾನಕ್ಕೆ ಪಾತ್ರನಾಗಿಯೂ ಇರಲಿ.

॥ ಭಾವಾರ್ಥ ॥

ಇಂದ್ರನು ನಮಗೆ ಅತ್ಯಂತ ಸಮೀಪದಲ್ಲಿರುವಂತೆ ತನ್ನ ರಕ್ಷಣೆಯೊಂದಿಗೆ ಬರುವವನಾಗಲಿ. ಪ್ರವಹಿಸುವ ಉದಕಗಳೊಂದಿಗೆ ವೃದ್ಧಿಯನ್ನು ಹೊಂದತಕ್ಕ ಸರಸ್ವತಿಯೂ ದಯಮಾಡಲಿ. ಓಷಧಿಗಳ ಮೂಲಕವಾಗಿ ಪರ್ಜನ್ಯನ ನಮಗೆ ಸುಖದಾಯಕನಾಗಲಿ. ಪುತ್ರನಿಗೆ ಪಿತೃವು ಪ್ರಶಸ್ಯನಾಗಿರುವಂತೆ ಅಗ್ನಿಯು ನಮ್ಮ ಉತ್ತಮವಾದ ಪ್ರಶಂಸೆಗೆ ಪಾತ್ರನಾಗಿಯೂ, ಉತ್ತಮವಾದ ಆಹ್ವಾನಕ್ಕೆ ಪಾತ್ರನಾಗಿಯೂ ಇರಲಿ,

## English Translation.

May Indra be most prompt to come nigh for our protection, and Saraswati dwelling with (tributary) rivers: may Parjanya, with the plants,

be a giver of happiness; and may Agni, worthily praised and earnestly invoked, (be to us) like a father.

॥ ಸಂಹಿತಾಪಾಠಃ ॥

ವಿಶ್ವೇ ದೇವಾಸ ಆಗತ ಶೃಣುತಾ ಮ ಇಮಂ ಹವಂ।
ಏದಂ ಬರ್ಹಿರ್ನಿ ಷೀದತ ॥ ೭ ॥

॥ ಪದಪಾಠಃ ॥

ವಿಶ್ವೇ । ದೇವಾಸಃ । ಆ । ಗತ । ಶೃಣುತ । ನಃ । ಇಮಂ । ಹವಂ ।
ಆ । ಇದಂ । ಬರ್ಹಿಃ । ನಿ । ಸೀದತ ॥ ೭ ॥

॥ ಸಾಯಣಭಾಷ್ಯಂ ॥

ಆಗ್ರಯಣೇ ವೈಶ್ವದೇವಸ್ಯ ಚರೋರ್ವಿಶ್ವೇ ದೇವಾಸ ಆ ಗತೇತ್ಯನುವಾಕ್ಯಾ। ಸೂತ್ರಿತಂ ಚ। ವಿಶ್ವೇ ದೇವಾಸಃ ಆ ಗತ ಯೇ ಕೇ ಚ ಜ್ಮಾ ಮಹಿನೋ ಅಹಿಮಾಯಾಃ । ಆ. ೨-೯ । ಇತಿ ॥

ಹೇ ವಿಶ್ವೇ ದೇವಾಸಃ ಸರ್ವೇ ದೇವಾ ಆ ಗತ । ಆಗಚ್ಛತ । ಆಗತ್ಯ ಚ ನೋ ಮದೀಯಮಿಮಂ ಹವಮಿದಮಾಹ್ವಾನಂ ಶೃಣುತ। ಶ್ರುತ್ವಾ ಚೇದಮಾಸ್ತೀರ್ಣಂ ಬರ್ಹಿರಾ ನಿ ಷೀದತ। ಆಸ್ತೀರ್ಣೇ ಬರ್ಹಿಷಿ ನಿಷಣ್ಣಾ ಭವತ ॥

॥ ಪ್ರತಿಪದಾರ್ಥ ॥

ವಿಶ್ವೇ ದೇವಾಸಃ—ಎಲೈ ವಿಶ್ವೇದೇವತೆಗಳೇ। ಆ ಗತ—ದಯಮಾಡಿರಿ। ನಃ—ನನ್ನ। ಇಮಂ ಹವಂ—ಈ ಆಹ್ವಾನವನ್ನು। ಶೃಣುತ—ಕೇಳಿರಿ। ಇದಂ—ಇಲ್ಲಿ ವಿಸ್ತೃತವಾಗಿ ಹರಡಿರುವ। ಬರ್ಹಿಃ—ದರ್ಭಾಸನದ ಮೇಲೆ। ಆ ನಿ ಷೀದತ—ಕುಳಿತು ಕೊಳ್ಳಿರಿ.

॥ ಭಾವಾರ್ಥ ॥

ಎಲೈ ವಿಶ್ವೇದೇವತೆಗಳೇ, ನೀವೆಲ್ಲರೂ ಇಲ್ಲಿಗೆ ದಯಮಾಡಿ ನಮ್ಮ ಆಹ್ವಾನವನ್ನು ಕೇಳಿರಿ. ಇಲ್ಲಿ ವಿಸ್ತೃತವಾಗಿ ಹರಡಿರುವ ದರ್ಭಾಸನದ ಮೇಲೆ ಕುಳಿತುಕೊಳ್ಳಿರಿ.

## English Translation.

Come, universal gods, hear this my invocation: sit down upon this sacred grass.

॥ ವಿಶೇಷವಿಷಯಗಳು ॥

ಆಗ್ರಯಣೇಷ್ಟಿಯಲ್ಲಿ ವಿಶ್ವೇದೇವತೆಗಳನ್ನು ಉದ್ದೇಶಿಸಿ ಮಾಡುವ ಚರುಹೋಮದಲ್ಲಿ ವಿಶ್ವೇ ದೇವಾಸ ಆ ಗತ ಎಂಬ ಈ ಋಕ್ಕನ್ನು ಅನುವಾಕ್ಯಾಮಂತ್ರವನ್ನಾಗಿ ಪಠಿಸಬೇಕೆಂದು ಆಶ್ವಲಾಯನಶ್ರೌತಸೂತ್ರದ—ವಿಶ್ವೇ

**ದೇವಾಸ ಆ ಗತ ಯೇ ಕೇ ಚ ಜ್ಮಾ ಮಹಿನೋ ಅಹಿಮಾಯಾಃ** ಎಂಬ ಸೂತ್ರದಿಂದ ( ಅ. ೨-೯) ವಿವೃತವಾಗಿರುವುದು.

॥ ಸಂಹಿತಾಪಾಠಃ ॥

## ಯೋ ವೋ ದೇವಾ ಘೃತಸ್ನುನಾ ಹವ್ಯೇನ ಪ್ರತಿಭೂಷತಿ ।

## ತಂ ವಿಶ್ವ ಉಪ ಗಚ್ಛಥ ॥ ೮ ॥

॥ ಪದಪಾಠಃ ॥

**ಯಃ । ವಃ । ದೇವಾಃ । ಘೃತSಸ್ನುನಾ । ಹವ್ಯೇನ । ಪ್ರತಿSಭೂಷತಿ ।**

**ತಂ । ವಿಶ್ವೇ । ಉಪ । ಗಚ್ಛಥ ॥ ೮ ॥**

॥ ಸಾಯಣಭಾಷ್ಯಂ ॥

**ಹೇ ದೇವಾ ವೋ ಯುಷ್ಮಾನ್ಯೋ ಜನೋ ಘೃತಸ್ನುನಾ ಘೃತಪ್ರಕ್ಷರಣೇನ ಹವ್ಯೇನ ಹವಿಷಾ ಪ್ರತಿಭೂಷತಿ ಪರಿಚರತಿ ತಂ ಜನಂ ವಿಶ್ವೇ ಸರ್ವೇ ಯೂಯಮುಪ ಗಚ್ಛಥ । ಉಪಗತಾ ಭವಥ ॥**

॥ ಪ್ರತಿಪದಾರ್ಥ ॥

**ದೇವಾಃ**—ಎಲೈ ದೇವತೆಗಳೇ । **ವಃ**—ನಿಮ್ಮೆಲ್ಲರನ್ನೂ । **ಯಃ**—ಯಾವ ಯಜಮಾನನು । **ಘೃತಸ್ನುನಾ**—ಸ್ರವಿಸುವ ಘೃತದೊಡನೆ ಕೂಡಿದ । **ಹವ್ಯೇನ**—ಹವಿಸ್ಸುಗಳಿಂದ । **ಪ್ರತಿಭೂಷತಿ**—ಅಲಂಕರಿಸುವನೋ । **ತಂ**—ಆ ಯಜಮಾನನನ್ನು । **ವಿಶ್ವೇ**– ನೀವೆಲ್ಲರೂ । **ಉಪ ಗಚ್ಛಥ**—ಸಮೀಪಿಸಿ ಅನುಗ್ರಹಿಸಿರಿ.

॥ ಭಾವಾರ್ಥ ॥

ಎಲೈ ದೇವತೆಗಳೇ, ನಿಮ್ಮೆಲ್ಲರನ್ನೂ ಯಾವ ಯಜಮಾನನು ಸ್ರವಿಸುವ ಘೃತದೊಡನೆ ಕೂಡಿದ ಹವಿಸ್ಸುಗಳಿಂದ ಅಲಂಕರಿಸಿ ಪೂಜಿಸುವನೋ ಆ ಯಜಮಾನನನ್ನು ನೀವೆಲ್ಲರೂ ಸಮೀಪಿಸಿ ಅನುಗ್ರಹಿಸಿರಿ.

### English Translation.

Come, gods, to him who honours you with the butter-dripping oblation.

॥ ಸಂಹಿತಾಪಾಠಃ ॥

## ಉಪ ನಃ ಸೂನವೋ ಗಿರಃ ಶೃಣ್ವಂತ್ವಮೃತಸ್ಯ ಯೇ ।

## ಸುಮೃಳೀಕಾ ಭವಂತು ನಃ ॥ ೯ ॥

॥ ಪದಪಾಠಃ ॥

ಉಪ । ನಃ । ಸೂನವಃ । ಗಿರಃ । ಶೃಣ್ವಂತು । ಅಮೃತಸ್ಯ । ಯೇ ।
ಸುಽಮೃಳೀಕಾಃ । ಭವಂತು । ನಃ ॥ ೯ ॥

॥ ಸಾಯಣಭಾಷ್ಯಂ ॥

ಅಮೃತಸ್ಯ ಮರಣರಹಿತಸ್ಯ ಪ್ರಜಾಪತೇರ್ಯೇ ಸೂನವಃ ಪುತ್ರಾಃ ತೇ ದೇವಾ ನೋಽಸ್ಮಾಕಂ ಗಿರಃ ಸ್ತುತೀರುಪ ಶೃಣ್ವಂತು । ನೋಽಸ್ಮಾಕಂ ಸುಮೃಳೀಕಾಃ ಸುಷ್ಠು ಮೃಡಯಿತಾರಃ ಸುಖಯಿತಾರಶ್ಚ ಭವಂತು ॥

॥ ಪ್ರತಿಪದಾರ್ಥ ॥

(ಎಲೈ ದೇವತೆಗಳೇ) **ಅಮೃತಸ್ಯ**— ಮರಣಧರ್ಮರಹಿತನಾದ ಪ್ರಜಾಪತಿಗೆ । **ಯೇ**— ಯಾವ ನೀವೆಲ್ಲರೂ । **ಸೂನವಃ**— ಪುತ್ರರಾಗಿದ್ದೀರೋ (ಆ ನೀವೆಲ್ಲರೂ) । **ನಃ**— ನಮ್ಮ । **ಗಿರಃ**— ಸ್ತುತಿಗಳನ್ನು । **ಉಪ ಶೃಣ್ವಂತು**— ಕೇಳಿರಿ । **ನಃ**— ನಮಗೆ । **ಸುಮೃಳೀಕಾಃ**— ಉತ್ತಮವಾದ ಸುಖಕಾರಕರಾಗಿ । **ಭವಂತು**— ಆಗಿರಿ.

॥ ಭಾವಾರ್ಥ ॥

ಎಲೈ ದೇವತೆಗಳೇ, ಮರಣಧರ್ಮರಹಿತನಾದ ಪ್ರಜಾಪತಿಗೆ ಪುತ್ರರಾಗಿರುವ ನೀವೆಲ್ಲರೂ ನಮ್ಮ ಸ್ತುತಿಗಳನ್ನು ಕೇಳಿರಿ. ನಮಗೆ ಉತ್ತಮವಾದ ಸುಖಕಾರಕರಾಗಿರಿ.

## English Translation.

May the sons of the immortal hear our praises, and be to us the givers of felicity.

॥ ಸಂಹಿತಾಪಾಠಃ ॥

ವಿಶ್ವೇ ದೇವಾ ಋತಾವೃಧ ಋತುಭಿರ್ಹವನಶ್ರುತಃ ।
ಜುಷಂತಾಂ ಯುಜ್ಯಂ ಪಯಃ ॥ ೧೦ ॥

॥ ಪದಪಾಠಃ ॥

ವಿಶ್ವೇ । ದೇವಾಃ । ಋತಽವೃಧಃ । ಋತುಽಭಿಃ । ಹವನಽಶ್ರುತಃ ।
ಜುಷಂತಾಂ । ಯುಜ್ಯಂ । ಪಯಃ ॥ ೧೦ ॥

॥ ಸಾಯಣಭಾಷ್ಯಂ ॥

ಋತಾವೃಧ ಋತಸ್ಯ ಯಜ್ಞಸ್ಯ ವರ್ಧಕಾ ಋತುಭಿಃ ಕಾಲವಿಶೇಷೈರ್ಹವನಶ್ರುತೋ ಹವನಸ್ಯ ಸ್ತೋತ್ರಸ್ಯ ಶ್ರೋತಾರಸ್ತಸ್ಮಿಂಸ್ತಸ್ಮಿನ್ಯಾಗಕಾಲೇ ಸ್ತೂಯಮಾನಾ ಈದೃಶಾ ವಿಶ್ವೇ ಸರ್ವೇ ದೇವಾ ಯುಜ್ಯಂ ಯೋಗ್ಯಂ ಪಯ ಆಮಿಕ್ಷಾರೂಪಂ ಜುಷಂತಾಂ । ಸೇವಂತಾಂ । ಶ್ರೂಯತೇ ಹಿ । ತಪ್ತೇ ಪಯಸಿ ದಧ್ಯಾನಯತಿ ಸಾ ವೈಶ್ವದೇವ್ಯಾಮಿಕ್ಷೇತಿ ॥

॥ ಪ್ರತಿಪದಾರ್ಥ ॥

**ಋತಾವೃಧಃ**— ಯಜ್ಞವನ್ನು ವೃದ್ಧಿಯಾಗುವಂತೆ ಮಾಡತಕ್ಕವರೂ । **ಋತುಭಿಃ**—ಆಯಾ ಕಾಲ ವಿಶೇಷಗಳಲ್ಲಿ । **ಹವನಶ್ರುತಃ**—ಯಜಮಾನರ ಸ್ತುತಿಗಳನ್ನು ಕೇಳತಕ್ಕವರೂ ಆದ । **ವಿಶ್ವೇ ದೇವಾಃ**—ವಿಶ್ವೇದೇವತೆಗಳೆಲ್ಲರೂ । **ಯುಜ್ಯಂ**—ಅವರು ಸೇವಿಸಲು ಯೋಗ್ಯವಾದ । **ಪಯಃ**—ಹವಿಸ್ಸಿನರೂಪದ ಕ್ಷೀರವನ್ನು । **ಜುಷಂತಾಂ**—ಸೇವಿಸಲಿ.

॥ ಭಾವಾರ್ಥ ॥

ಯಜ್ಞವನ್ನು ವೃದ್ಧಿಯಾಗುವಂತೆ ಮಾಡತಕ್ಕವರೂ, ಆಯಾ ಕಾಲ ವಿಶೇಷಗಳಲ್ಲಿ ಯಜಮಾನನ ಸ್ತುತಿಗಳನ್ನು ಕೇಳತಕ್ಕವರೂ ಆದ ವಿಶ್ವೇದೇವತೆಗಳೆಲ್ಲರೂ ಅವರು ಸೇವಿಸಲು ಯೋಗ್ಯವಾದ ಹವಿಸ್ಸಿನ ರೂಪದ ಕ್ಷೀರವನ್ನು ಸೇವಿಸಲಿ.

## English Translation.

Universal gods, augmenters of sacrifice, listening to praises (uttered) at due seasons, accept your appropriate milk-offering.

॥ ಸಂಹಿತಾಪಾಠಃ ॥

ಸ್ತೋತ್ರಮಿಂದ್ರೋ ಮರುದ್ಗಣಸ್ತ್ವಷ್ಟೃಮಾನ್ಮಿತ್ರೋ ಅರ್ಯಮಾ ।
ಇಮಾ ಹವ್ಯಾ ಜುಷಂತ ನಃ ॥ ೧೧ ॥

॥ ಪದಪಾಠಃ ॥

ಸ್ತೋತ್ರಂ । ಇಂದ್ರಃ । ಮರುತ್ऽಗಣಃ । ತ್ವಷ್ಟೃऽಮಾನ್ । ಮಿತ್ರಃ । ಅರ್ಯಮಾ ।
ಇಮಾ । ಹವ್ಯಾ । ಜುಷಂತ । ನಃ ॥ ೧೧ ॥

॥ ಸಾಯಣಭಾಷ್ಯಂ ॥

ಮರುದ್ಗಣೋ ಮರುತೋ ಗಣಭೂತಾಃ ಪರಿಜನಭೂತಾ ಯಸ್ಯ ತಾದೃಶ ಇಂದ್ರಸ್ತ್ವಷ್ಟೃಮಾನ್ ತ್ವಷ್ಟೃಸಹಿತೋ ಮಿತ್ರೋಽರ್ಯಮಾ ಚ ನೋಽಸ್ಮಾಕಂ ಸ್ತೋತ್ರಮಿಮಾ ಹವ್ಯೇಮಾನಿ ಹವೀಂಷಿ ಚ ಜುಷಂತೆ । ಸೇವಂತಾಂ ॥

॥ ಪ್ರತಿಪದಾರ್ಥ ॥

**ಮರುದ್ಗಣಃ**—ಮರುತ್ತುಗಳ ಸಂಘಗಳೊಡನೆ ಕೂಡಿದವನೂ । **ತ್ವಷ್ಟೃಮಾನ್**—ತ್ವಷ್ಟೃವಿನೊಡ ನಿರುವವನೂ ಆದ । **ಇಂದ್ರಃ**—ಇಂದ್ರನೂ । **ಮಿತ್ರಃ**—ಮಿತ್ರನೂ । **ಅರ್ಯಮಾ**—ಅರ್ಯಮನೂ । **ನಃ**—ನಮ್ಮ । **ಸ್ತೋತ್ರಂ**—ಸ್ತೋತ್ರವನ್ನೂ । **ಇಮಾ ಹವ್ಯಾ**—ಈಗ ಅರ್ಪಿಸಿದ ಹವಿಸ್ಸುಗಳನ್ನೂ । **ಜುಷಂತ**—ಸೇವಿಸಲಿ.

॥ ಭಾವಾರ್ಥ ॥

ಮರುತ್ತುಗಳ ಸಂಘಗಳೊಡನೆ ಕೂಡಿದವನೂ, ತ್ವಷ್ಟೃವಿನೊಡನೆ ಇರುವವನೂ ಆದ ಇಂದ್ರನೂ, ಮಿತ್ರನೂ, ಅರ್ಯಮನೂ ನಮ್ಮ ಸ್ತೋತ್ರವನ್ನೂ ಈಗ ಅರ್ಪಿಸಿದ ಹವಿಸ್ಸುಗಳನ್ನೂ ಸೇವಿಸಲಿ.

English Translation.

Indra, with he company of the Maruts, Mitra, with Twashtri and Aryaman, accept our praise and these our oblations.

॥ ಸಂಹಿತಾಪಾಠಃ ॥

ಇಮಂ ನೋ ಅಗ್ನೇ ಅಧ್ವರಂ ಹೋತರ್ವಯುನಶೋ ಯಜ ।

ಚಿಕಿತ್ವಾನ್ದೈವ್ಯಂ ಜನಂ ॥ ೧೨ ॥

॥ ಪದಪಾಠಃ ॥

ಇಮಂ । ನಃ । ಅಗ್ನೇ । ಅಧ್ವರಂ । ಹೋತಃ । ವಯುನಽಶಃ । ಯಜ ।

ಚಿಕಿತ್ವಾನ್ । ದೈವ್ಯಂ । ಜನಂ ॥ ೧೨ ॥

॥ ಸಾಯಣಭಾಷ್ಯಂ ॥

**ಹೇ ಹೋತರ್ದೇವಾನಾಮಾಹ್ವಾತರಗ್ನೇ ದೈವ್ಯಂ ದೇವಸಂಬಂಧಿನಂ ಜನಂ ಸಂಘಂ ಯಜನೀಯಂ ಚಿಕಿತ್ವಾನ್ ಜಾನಂಸ್ತ್ವಂ ನೋಽಸ್ಮದೀಯಮಿಮಮಧ್ವರಂ ಹಿಂಸಾರಹಿತಂ ಯಜ್ಞಂ ವಯುನಶೋ ಜ್ಞಾನಕ್ರಮೇಣ ಯಥಾನುಪೂರ್ವ್ಯಾ ದೇವಾ ಬುದ್ಧಿಸ್ಥಾಃ ತಥಾ ಯಜ । ಯಾಗಂ ಕುರು ॥**

॥ ಪ್ರತಿಪದಾರ್ಥ ॥

**ಹೋತಃ**—ದೇವತೆಗಳನ್ನು ಯಜ್ಞಕ್ಕೆ ಕರೆಯತಕ್ಕ । **ಅಗ್ನೇ**—ಎಲೈ ಅಗ್ನಿಯೇ । **ದೈವ್ಯಂ**—ದೇವತೆಗಳ ಗುಂಪಿಗೆ ಸೇರಿದ । **ಜನಂ**—ದೇವಜನರನ್ನು । **ಚಿಕಿತ್ವಾನ್**—ಪೂರ್ಣವಾಗಿ ಅರಿತ ನೀನು । **ನಃ**—ನಮ್ಮ । **ಇಮಂ ಅಧ್ವರಂ**—ಈ ಯಜ್ಞದಲ್ಲಿ । **ವಯುನಶಃ**—ಆಯಾ ದೇವತೆಗಳ ಯೋಗ್ಯತಾನುಸಾರವಾಗಿ । **ಯಜ**—ಯಾಗವನ್ನು ಮಾಡು.

॥ ಭಾವಾರ್ಥ ॥

ದೇವತೆಗಳನ್ನು ಯಜ್ಞಕ್ಕೆ ಕರೆಯತಕ್ಕ ಎಲೈ ಅಗ್ನಿಯೇ, ದೇವತೆಗಳ ಗುಂಪಿಗೆ ಸೇರಿದ ದೇವಜನವನ್ನು ಪೂರ್ಣವಾಗಿ ಅರಿತ ನೀನು ನಮ್ಮ ಈ ಯಜ್ಞದಲ್ಲಿ ಆಯಾ ದೇವತೆಗಳ ಯೋಗ್ಯತಾನುಸಾರವಾಗಿ ಯಾಗವನ್ನು ಮಾಡು.

English Translation.

Agni, invoker of the gods, cognizant (which of) the divine assembly (is to be honoured), offer this our sacrifice according to the proper order.

॥ ಸಂಹಿತಾಪಾಠಃ ॥

ವಿಶ್ವೇ ದೇವಾಃ ಶೃಣುತೇಮಂ ಹವಂ ಮೇ ಯೇ ಅಂತರಿಕ್ಷೇ ಯ ಉಪ ದ್ಯವಿ ಷ್ಠ ।
ಯೇ ಅಗ್ನಿಜಿಹ್ವಾ ಉತ ವಾ ಯಜತ್ರಾ ಆಸದ್ಯಾಸ್ಮಿನ್ಬರ್ಹಿಷಿ ಮಾದ-
ಯಧ್ವಂ ॥ ೧೩ ॥

॥ ಪದಪಾಠಃ ॥

ವಿಶ್ವೇ । ದೇವಾಃ । ಶೃಣುತ । ಇಮಂ । ಹವಂ । ಮೇ । ಯೇ । ಅಂತರಿಕ್ಷೇ । ಯೇ । ಉಪ । ದ್ಯವಿ । ಸ್ಥ ।
ಯೇ । ಅಗ್ನಿಽಜಿಹ್ವಾಃ । ಉತ । ವಾ । ಯಜತ್ರಾಃ । ಆಽಸದ್ಯ । ಅಸ್ಮಿನ್ । ಬರ್ಹಿಷಿ । ಮಾದಯಧ್ವಂ ॥

॥ ಸಾಯಣಭಾಷ್ಯಂ ॥

ವೈಶ್ವದೇವಶಸ್ತ್ರಸ್ಯ ವಿಶ್ವೇ ದೇವಾ ಇತಿ ಯಾಜ್ಯಾ । ಸೂತ್ರಿತಂ ಚ । ಅಶ್ರುತ್ಯೈ ತ್ವೇತಿ ಶಸ್ತ್ವಾ ಜಪೇದ್ವಿಶ್ವೇ ದೇವಾಃ ಶೃಣುತೇಮಂ ಹವಂ ಮ ಇತಿ ಯಾಜ್ಯಾ । ಆ. ೫-೧೮ । ಇತಿ ॥ ವೈಶ್ವದೇವೇ ಪಶಾವೇಷೈವ ಯಾಜ್ಯಾ । ಸೂತ್ರಿತಂ ಚ । ವಿಶ್ವೇ ದೇವಾಃ ಶೃಣುತೇಮಂ ಹವಂ ಮೇ ಯೇ ಕೇ ಚ ಜ್ಮಾ ಮಹಿನೋ ಅಹಿಮಾಯಾಃ । ಆ. ೩-೭ । ಇತಿ ॥

ಹೇ ವಿಶ್ವೇ ದೇವಾ ಮೇ ಮದೀಯಮಿಮಂ ಹವಮಾಹ್ವಾನಂ ಶೃಣುತ । ಯೇ ಯೂಯಮಂತರಿಕ್ಷೇ ಸ್ಥ ಅಂತರಿಕ್ಷಲೋಕೇ ವರ್ತಮಾನಾ ಭವಥ । ಯೇ ಚೋಪ ತತ್ಸಮೀಪಸ್ಥೇ ಭೂಲೋಕೇ ಭವಥ । ಯೇ ಚ ದ್ಯವಿ ದ್ಯುಲೋಕೇ ಸ್ಥ । ಯೇ ಚಾಗ್ನಿಜಿಹ್ವಾಃ । ಅಗ್ನಿರ್ಜಿಹ್ವಾಸ್ಥಾನೀಯೋ ಯೇಷಾಂ । ಯದ್ವಾ । ಅಗ್ನೇರ್ಜಿಹ್ವಾ । ತಯಾ ಪೋಷ್ಯಮಾಣತ್ವಾದಗ್ನಿಜಿಹ್ವಾ ಇತ್ಯುಚ್ಯಂತೇ । ಉತ ವಾಪಿ ವಾ

**ಯೇ ಯಜತ್ರಾ ಯಜನೀಯಾಃ ತೇ ಸರ್ವೇ ಯೂಯಮಾಸ್ತೀರ್ಣೇsಸ್ಮಿನ್ಬರ್ಹಿಷ್ಯಾಸದ್ಯೋಪವಿಶ್ಯ ಮಾದಯಧ್ವಂ । ಸೋಮೇನಾತ್ಮಾನಂ ತರ್ಪಯಥ ॥**

॥ ಪ್ರತಿಪದಾರ್ಥ ॥

**ವಿಶ್ವೇ ದೇವಾಃ**—ಎಲೈ ವಿಶ್ವೇದೇವತೆಗಳೇ । **ಯೇ**—ಯಾವ ನೀವು । **ಅಂತರಿಕ್ಷೇ ಸ್ಥ**—ಅಂತರಿಕ್ಷದಲ್ಲಿರುವಿರೋ । **ಯೇ**—ಯಾವ ನೀವು । **ಉಪ**—ಸಮೀಪವಾದ ಭೂಲೋಕದಲ್ಲಿರುವಿರೋ (ಅಲ್ಲದೇ) । **ದ್ಯವಿ**—ದ್ಯುಲೋಕದಲ್ಲಿರುವಿರೋ । **ಯೇ**—ಯಾವ ನೀವು । **ಅಗ್ನಿಜಿಹ್ವಾಃ**—ನಿಮ್ಮ ಸೋಮಪಾನಕ್ಕೆ ಅಗ್ನಿಯೇ ಜಿಹ್ವೆಯಾಗಿ ಉಳ್ಳವರಾಗಿರುವಿರೋ ಅಂತಹ ನೀವೆಲ್ಲರೂ । **ಮೇ**—ನನ್ನ । **ಇಮಂ ಹವಂ**—ಈ ಆಹ್ವಾನವನ್ನು । **ಶೃಣುತ**—ಕೇಳಿರಿ । **ಉತ ವಾ**—ಅದೂ ಅಲ್ಲದೇ । **ಯಜತ್ರಾಃ**—ಯಜ್ಞಾರ್ಹರಾದ ನೀವೆಲ್ಲರೂ । **ಅಸ್ಮಿನ್ ಬರ್ಹಿಷಿ**—ವಿಸ್ತೃತವಾಗಿ ಹರಡಿದ ಈ ದರ್ಭಾಸನದ ಮೇಲೆ । **ಆಸದ್ಯ**—ಕುಳಿತುಕೊಂಡು । **ಮಾದಯಧ್ವಂ**—ಸೋಮಪಾನರೂಪವಾದ ತೃಪ್ತಿಯನ್ನು ಪಡೆಯಿರಿ.

॥ ಭಾವಾರ್ಥ ॥

ಎಲೈ ವಿಶ್ವೇದೇವತೆಗಳೇ, ನಿಮ್ಮಲ್ಲಿ ಯಾರು ಯಾರು ಅಂತರಿಕ್ಷದಲ್ಲಿರುವಿರೋ, ಯಾರು ಸಮೀಪ ಪ್ರದೇಶವಾದ ಪೃಥ್ವಿಯಲ್ಲಿರುವಿರೋ, ಯಾರು ದ್ಯುಲೋಕದಲ್ಲಿರುವಿರೋ, ಯಾವ ನೀವು ನಿಮ್ಮ ಸೋಮಪಾನಕ್ಕೆ ಅಗ್ನಿಯೇ ಜಿಹ್ವೆಯಾಗಿ ಉಳ್ಳವರಾಗಿರುವಿರೋ ಅಂತಹ ನೀವೆಲ್ಲರೂ ನನ್ನ ಈ ಆಹ್ವಾನವನ್ನು ಕೇಳಿರಿ. ಅದೂ ಅಲ್ಲದೇ ಯಜ್ಞಾರ್ಹರಾದ ನಾವೆಲ್ಲರೂ ವಿಸ್ತೃತವಾಗಿ ಹರಡಿದ ಈ ದರ್ಭಾಸನದ ಮೇಲೆ ಕುಳಿತುಕೊಂಡು ಸೋಮಪಾನರೂಪವಾದ ತೃಪ್ತಿಯನ್ನು ಪಡೆಯಿರಿ.

## English Translation.

Universal gods, hear this my invocation, whether you be in the firmament or in the heaven : you who (receive oblations) by the tongue of Agni, or are to be (otherwise) worshipped : seated on this sacred grass, be exhilarated (by the Soma).

॥ ವಿಶೇಷವಿಷಯಗಳು ॥

ವೈಶ್ವದೇವ ಶಸ್ತ್ರಮಂತ್ರಗಳಲ್ಲಿ ವಿಶ್ವೇ ದೇವಾಃ ಎಂಬ ಈ ಋಕ್ಕನ್ನು ಯಾಜ್ಯಾಮಂತ್ರವನ್ನಾಗಿ ಪಠಿಸಬೇಕೆಂದು ಆಶ್ವಲಾಯನ ಶ್ರೌತಸೂತ್ರದ—**ಆಶ್ರುತ್ಯೈ ತ್ಯೇತಿ ಶಸ್ತ್ವಾ ಜಪೇದ್ವಿಶ್ವೇ ದೇವಾಃ ಶೃಣುತೇಮಂ ಹವಂ ಮ ಇತಿ ಯಾಜ್ಯಾ** ಎಂಬ ಸೂತ್ರದಿಂದ (ಅ. ೫-೧೮) ವಿವೃತವಾಗಿರುವುದು. ಮತ್ತು ವಿಶ್ವೇದೇವತೆಗಳನ್ನುದ್ದೇಶಿಸಿ ಮಾಡುವ ಪಶು ಹೋಮದಲ್ಲಿ ಈ ಋಕ್ಕನ್ನೇ ಯಾಜ್ಯಾಮಂತ್ರವನ್ನಾಗಿ ಪಠಿಸಬೇಕೆಂದು ಆಶ್ವಲಾಯನ ಶ್ರೌತಸೂತ್ರದ—**ವಿಶ್ವೇ ದೇವಾಃ ಶೃಣುತೇಮಂ ಹವಂ ಮೇ ಯೇ ಕೇ ಚ ಜ್ಮಾ ಮಹಿನೋ ಅಹಿಮಾಯಾಃ** ಎಂಬ ಸೂತ್ರದಿಂದ (ಅ, ३-೭) ವಿವೃತವಾಗಿರುವುದು.

॥ ಸಂಹಿತಾಪಾಠಃ ॥

ವಿಶ್ವೇ ದೇವಾ ಮಮ ಶೃಣ್ವಂತು ಯಜ್ಞಿಯಾ ಉಭೇ ರೋದಸೀ ಅಪಾಂ
ನಪಾಚ್ಚ ಮನ್ಮ ।
ಮಾ ವೋ ವಚಾಂಸಿ ಪರಿಚಕ್ಷ್ಯಾಣಿ ವೋಚಂ ಸುಮ್ನೇಷ್ವಿದ್ವೋ ಅಂತಮಾ
ಮದೇಮ ॥ ೧೪ ॥

॥ ಪದಪಾಠಃ ॥

ವಿಶ್ವೇ । ದೇವಾಃ । ಮಮ । ಶೃಣ್ವಂತು । ಯಜ್ಞಿಯಾಃ । ಉಭೇ ಇತಿ । ರೋದಸೀ ಇತಿ । ಅಪಾಂ ।
ನಪಾತ್ । ಚ । ಮನ್ಮ ।
ಮಾ । ವಃ । ವಚಾಂಸಿ । ಪರಿऽಚಕ್ಷ್ಯಾಣಿ । ವೋಚಂ । ಸುಮ್ನೇಷು । ಇತ್ । ವಃ । ಅಂತಮಾಃ । ಮದೇಮ ॥

॥ ಸಾಯಣಭಾಷ್ಯಂ ॥

ಯಜ್ಞಿಯಾ ಯಜ್ಞಾರ್ಹಾ ವಿಶ್ವೇ ದೇವಾ ಮಮ ಮದೀಯಂ ಮನ್ಮ ಮನನೀಯಂ ಸ್ತೋತ್ರಂ ಶೃಣ್ವಂತು । ಚಿತ್ತೇಽವಧಾರಯಂತು । ತಥೋಭೇ ರೋದಸೀ ದ್ಯಾವಾಪೃಥಿವ್ಯಾವಪಾಂ ನಪಾತ್ ಮಧ್ಯಮಸ್ಥಾನೋಽಗ್ನಿಶ್ಚಾಸ್ಮದೀಯಂ ಸ್ತೋತ್ರಂ ಶೃಣ್ವಂತು । ಅಥ ಪ್ರತ್ಯಕ್ಷಕೃತಃ । ಹೇ ದೇವಾ ವೋ ಯುಷ್ಮಭ್ಯಂ ಪರಿಚಕ್ಷ್ಯಾಣಿ ವರ್ಜನೀಯಾನಿ ವಚಾಂಸಿ ಸ್ತೋತ್ರಾಣಿ ಮಾ ವೋಚಂ । ಮಾ ಬ್ರವೀಮಿ । ಅಪಿ ತು ಸಮೀಚೀನಾನಿ । ಅತೋ ವೋ ಯುಷ್ಮಾಕಮಂತಮಾ ಅಂತಿಕತಮಾಃ ಸಂತೋ ವಯಂ ಸುಮ್ನೇಷ್ವಿತ್ ಯುಷ್ಮಾಭಿರ್ದತ್ತೇಷು ಸುಖೇಷ್ವೇವ ವರ್ತಮಾನಾ ಮದೇಮ । ಮೋದೇಮ ॥

॥ ಪ್ರತಿಪದಾರ್ಥ ॥

**ಯಜ್ಞಿಯಾಃ**—ಯಜ್ಞಾರ್ಹರಾದ । **ವಿಶ್ವೇ ದೇವಾಃ**—ವಿಶ್ವೇದೇವತೆಗಳೆಲ್ಲರೂ । **ಮಮ**—ನನ್ನ । **ಮನ್ಮ**—ಧ್ಯಾನಾತ್ಮಕವಾದ ಈ ಸ್ತೋತ್ರವನ್ನು । **ಶೃಣ್ವಂತು**—ಕೇಳಲಿ । **ಉಭೇ ರೋದಸೀ**—ದ್ಯಾವಾಪೃಥಿವಿಗಳಿಬ್ಬರೂ । **ಅಪಾಂ ನಪಾತ್ ಚ**—ಅಪಾಂನಪಾತ್ ಸಂಜ್ಞಕನಾದ ಅಂತರಿಕ್ಷಾಗ್ನಿಯೂ (ನಮ್ಮ ಸ್ತುತಿಯನ್ನು ಕೇಳಲಿ) । (ಎಲೈ ದೇವತೆಗಳೇ) **ವಃ**—ನಿಮ್ಮನ್ನುದ್ದೇಶಿಸಿ । **ಪರಿಚಕ್ಷ್ಯಾಣಿ**—ತಿರಸ್ಕಾರಾರ್ಹವಾದ । **ವಚಾಂಸಿ**—ಸ್ತೋತ್ರಗಳನ್ನು । **ಮಾ ವೋಚಂ**—ನಾನು ಪಠಿಸಲಾರೆನು । **ವಃ**—ನಿಮಗೆ । **ಅಂತಮಾಃ**—ಅತ್ಯಂತ ಸಮೀಪದಲ್ಲಿರುವ ನಾವು । **ಸುಮ್ನೇಷ್ವಿತ್**—ಅತ್ಯಂತ ಸುಖದಲ್ಲಿಯೇ ಇದ್ದು । **ಮದೇಮ**—ಹರ್ಷವನ್ನನುಭವಿಸುವಂತಾಗಲಿ.

॥ ಭಾವಾರ್ಥ ॥

ಯಜ್ಞಾರ್ಹರಾದ ವಿಶ್ವೇದೇವತೆಗಳೆಲ್ಲರೂ ಧ್ಯಾನಾತ್ಮಕವಾದ ನನ್ನ ಈ ಸ್ತೋತ್ರವನ್ನು ಕೇಳಲಿ. ದ್ಯಾವಾ ಪೃಥಿವಿಗಳೂ, ಅಪಾಂನಪಾತ್ ಸಂಜ್ಞಕನಾದ ಅಂತರಿಕ್ಷಾಗ್ನಿಯೂ ನನ್ನ ಸ್ತುತಿಯನ್ನು ಕೇಳಲಿ. ಎಲೈ ದೇವತೆಗಳೇ, ನಿಮ್ಮನ್ನುದ್ದೇಶಿಸಿ ತಿರಸ್ಕಾರಾರ್ಹವಾದ ಸ್ತೋತ್ರಗಳನ್ನು ನಾನು ಪಠಿಸಲಾರೆನು. ನಿಮಗೆ ಅತ್ಯಂತ ಸಮೀಪದಲ್ಲಿರುವ ನಾವು ಅತ್ಯಂತ ಸುಖದಲ್ಲಿಯೇ ಇದ್ದು ಹರ್ಷವನ್ನನುಭವಿಸುವಂತಾಗಲಿ.

English Translation.

May the adorable, universal deities, and both heaven and Eath, and the graandson of the waters, hear my praise : let me not utter words to be disregarded, but let us (brought) most nigh unto you, rejoice in the happiness (you bestow).

॥ ಸಂಹಿತಾಪಾಠಃ ॥

ಯೇ ಕೇ ಚ ಜ್ಮಾ ಮಹಿನೋ ಅಹಿಮಾಯಾ ದಿವೋ ಜಜ್ಞಿರೇ ಅಪಾಂ ಸಧಸ್ಥೇ ।

ತೇ ಅಸ್ಮಭ್ಯಮಿಷಯೇ ವಿಶ್ವಮಾಯುಃ ಕ್ಷಪ ಉಸ್ರಾ ವರಿವಸ್ಯಂತು ದೇವಾಃ॥

॥ ಪದಪಾಠಃ ॥

ಯೇ । ಕೇ । ಚ । ಜ್ಮಾ । ಮಹಿನಃ । ಅಹಿಽಮಾಯಾಃ । ದಿವಃ । ಜಜ್ಞಿರೇ । ಅಪಾಂ । ಸಧಽಸ್ಥೇ ।

ತೇ । ಅಸ್ಮಭ್ಯಂ । ಇಷಯೇ । ವಿಶ್ವಂ । ಆಯುಃ । ಕ್ಷಪಃ । ಉಸ್ರಾಃ । ವರಿವಸ್ಯಂತು । ದೇವಾಃ ॥ ೧೫ ॥

॥ ಸಾಯಣಭಾಷ್ಯಂ ॥

ಆಗ್ರಯಣೇ ವೈಶ್ವದೇವಸ್ಯ ಯೇ ಕೇ ಚ ಜ್ಮೇತಿ ಯಾಜ್ಯಾ । ಸೂತ್ರಿತಂ ಚ । ವಿಶ್ವೇ ದೇವಾಸ ಆ ಗತ ಯೇ ಕೇ ಚ ಜ್ಮಾ ಮಹಿನೋ ಅಹಿಮಾಯಾಃ । ಆ. ೨-೯ । ಇತಿ ॥ ವೈಶ್ವದೇವಪುರೋಡಾಶಸ್ಯೈಷೈವ ಯಾಜ್ಯಾ । ಸೂತ್ರಮುದಾಹೃತಂ ॥

ಮಹಿನೋ ಮಹಾಂತೋಽಹಿಮಾಯಾಃ । ಮಾಯಾ ಪ್ರಜ್ಞಾನಾಮ । ಆಹಂತೃಪ್ರಜ್ಞಾಃ । ಏವಂಭೂತಾ ಯೇ ಕೇ ಚನ ದೇವಾ ಜ್ಮಾ । ಪೃಥಿವೀನಾಮೈತತ್ । ಜ್ಮಾಯಾಂ ಪೃಥಿವ್ಯಾಂ ಜಜ್ಞಿರೇ ಪ್ರಾದುರ್ಬಭೂವುಃ । ಯೇ ಕೇ ಚನ ದಿವೋ ದ್ಯುಲೋಕಾಜ್ಜಜ್ಞಿರೇ । ಯೇ ಕೇ ಚನಾಪಾಂ ಸಧಸ್ಥೇ ಸಹಾಂತರಿಕ್ಷೇ ಜಜ್ಞಿರೇ ತೇ ಸರ್ವೇ ದೇವಾ ಅಸ್ಮಭ್ಯಮಿಷಯೇ । ಇಷ್ಯತ ಇತೀಷಿಃ ಪುತ್ರಾದಿಃ । ತಸ್ಯೈ

**ಚ ವಿಶ್ವಂ ಸರ್ವಮಾಯುರನ್ನಂ ಜೀವನಂ ವಾ ಕ್ಷಪಃ ಸರ್ವಾ ರಾತ್ರೀರುಸ್ರಾಃ ಸರ್ವಾಣ್ಯಹಾನಿ ಚ ಸರ್ವದಾ ನೈರಂತರ್ಯೇಣ ವರಿವಸ್ಯಂತು । ಪ್ರಯಚ್ಛಂತು ॥**

॥ ಪ್ರತಿಪದಾರ್ಥ ॥

**ಮಹಿನಃ**—ಮಹದ್ಗುಣಗಳುಳ್ಳವರೂ । **ಅಹಿಮಾಯಾಃ**— ಉಪಲಬ್ಧವಾದ ಪ್ರಜ್ಞೆಯುಳ್ಳವರೂ ಆದ । **ಯೇ ಕೇ ಚ**—ಯಾವ ಯಾವ ದೇವತೆಗಳು । **ಜ್ಮಾ**—ಪೃಥಿವಿಯಲ್ಲಿ । **ಜಜ್ಞಿರೇ**—ಉತ್ಪನ್ನರಾಗಿದ್ದಾರೋ । **ದಿವಃ**—ಯಾರು ದ್ಯುಲೋಕದಿಂದ ಆವಿರ್ಭೂತರಾಗಿದ್ದಾರೋ । **ಅಪಾಂ ಸಧಸ್ಥೇ**—ಯಾರು ಅಂತರಿಕ್ಷದಲ್ಲಿ ಉತ್ಪನ್ನರಾಗಿದ್ದಾರೋ । **ತೇ ದೇವಾಃ**—ಆ ಸಕಲ ದೇವತೆಗಳೂ । **ಅಸ್ಮಭ್ಯಂ**—ನಮ್ಮ । **ಇಷಯೇ**—ಪುತ್ರಾದಿಗಳಿಗೆ । **ವಿಶ್ವಂ**—ಸಮಸ್ತವಾದ । **ಆಯುಃ**—ಜೀವನವನ್ನೂ । **ಕ್ಷಪಾಃ**—ಸಕಲ ರಾತ್ರಿಗಳಲ್ಲೂ । **ಉಸ್ರಾಃ**—ಅಹಸ್ಸುಗಳಲ್ಲಿಯೂ । **ವರಿವಸ್ಯಂತು**—ಅನುಗ್ರಹಿಸಿಕೊಡಲಿ

॥ ಭಾವಾರ್ಥ ॥

ಮಹದ್ಗುಣಗಳುಳ್ಳವರೂ, ಉಪಲಬ್ಧವಾದ ಪ್ರಜ್ಞೆಯುಳ್ಳವರೂ ಆದ ಯಾವ ಯಾವ ದೇವತೆಗಳು ಪೃಥ್ವಿಯಲ್ಲಿ ಉತ್ಪನ್ನರಾಗಿರುವರೋ, ಯಾರು ಯಾರು ದ್ಯುಲೋಕದಿಂದ ಆವಿರ್ಭೂತರಾಗಿದ್ದಾರೆಯೋ, ಯಾರು ಅಂತರಿಕ್ಷದಲ್ಲಿ ಉತ್ಪನ್ನರಾಗಿದ್ದಾರೆಯೋ ಆ ಸಕಲ ದೇವತೆಗಳೂ ಸಹ ನಮ್ಮ ಪುತ್ರಾದಿಗಳಿಗೆ ಸಕಲ ವಿಧವಾದ ಆಯುರ್ದಾಯಕವಾದ ಜೀವನವನ್ನೂ ಸಕಲ ರಾತ್ರಿಗಳಲ್ಲೂ ಮತ್ತು ಅಹಸ್ಸುಗಳಲ್ಲಿಯೂ ಅನುಗ್ರಹಿಸಿ ಕೊಡಲಿ.

## English Translation.

May those mighty deities, having power to destroy, whether they have been manifested upon earth or in heaven, or in the abode of the waters, bestow upon us and our posterity, abundant sustenance both by night and day.

॥ ವಿಶೇಷವಿಷಯಗಳು ॥

ಆಗ್ರಯಣೇಷ್ಟಿಯಲ್ಲಿ ವಿಶ್ವೇದೇವತೆಗಳನ್ನುದ್ದೇಶಿಸಿ ಮಾಡುವ ಹೋಮದಲ್ಲಿ **ಯೇ ಕೇ ಚ ಜ್ಮಾ** ಎಂಬ ಋಕ್ಕನ್ನು ಯಾಜ್ಯಾಮಂತ್ರವನ್ನಾಗಿ ಪಠಿಸಬೇಕೆಂದು ಆಶ್ವಲಾಯನಶ್ರೌತಸೂತ್ರದ—ವಿಶ್ವೇ **ದೇವಾಸ ಆ ಗತ ಯೇ ಕೇ ಚ ಜ್ಮಾ ಮಹಿನೋ ಅಹಿಮಾಯಾಃ** ಎಂಬ ಸೂತ್ರದಿಂದ (ಆ. ೨-೯) ವಿವೃತವಾಗಿರುವುದು. ವಿಶ್ವೇದೇವತೆಗಳನ್ನುದ್ದೇಶಿಸಿ ಮಾಡುವ ಪುರೋಡಾಶಹೋಮದಲ್ಲಿಯೂ ಸಹ ಈ ಋಕ್ಕನ್ನೇ ಯಾಜ್ಯಾಮಂತ್ರವನ್ನಾಗಿ ಪಠಿಸಬೇಕು. ಸೂತ್ರವನ್ನು ಹಿಂದೆಯೇ ಹೇಳಲಾಗಿದೆ.

॥ ಸಂಹಿತಾಪಾಠಃ ॥

ಅಗ್ನೀಪರ್ಜನ್ಯಾವವತಂ ಧಿಯಂ ಮೇಽಸ್ಮಿನ್ಹವೇ ಸುಹವಾ ಸುಷ್ಟುತಿಂ ನಃ ।

ಇಳಾಮನ್ಯೋ ಜನಯದ್ಗರ್ಭಮನ್ಯಃ ಪ್ರಜಾವತೀರಿಷ ಆ ಧತ್ತಮಸ್ಮೇ ॥೧೬॥

॥ ಪದಪಾಠಃ ॥

**ಅಗ್ನೀಪರ್ಜನ್ಯೌ । ಅವತಂ । ಧಿಯಂ । ಮೇ । ಅಸ್ಮಿನ್ । ಹವೇ । ಸುಽಹವಾ । ಸುಽಸ್ತುತಿಂ । ನಃ ।**
**ಇಳಾಂ । ಅನ್ಯಃ । ಜನಯತ್ । ಗರ್ಭಂ । ಅನ್ಯಃ । ಪ್ರಜಾಽವತೀಃ । ಇಷಃ । ಆ । ಧತ್ತಂ । ಅಸ್ಮೇ ಇತಿ॥**

॥ ಸಾಯಣಭಾಷ್ಯಂ ॥

**ಹೇ ಅಗ್ನೀಪರ್ಜನ್ಯೌ ಮೇ ಮದೀಯಂ ಧಿಯಂ ಕರ್ಮ ಯಜ್ಞಲಕ್ಷಣಮವತಂ । ಗಚ್ಛತಂ ರಕ್ಷತಂ ವಾ । ಹೇ ಸುಹವಾ ಸುಖೇನ ಹ್ವಾತುಂ ಶಕ್ಯಾವಸ್ಮಿನ್ಹವೇ ಯಜ್ಞೇ ನೋಽಸ್ಮದೀಯಾಂ ಸುಷ್ಟುತಿಂ ಶೋಭನಾಂ ಸ್ತುತಿಂ ಚ ರಕ್ಷತಂ । ಯದ್ವಾ । ಅನುವೃತ್ತೋಽವತಿಃ ಶ್ರವಣಾರ್ಥಃ । ಅವತಂ । ಶೃಣುತಂ । ಯುವಯೋರ್ಮಧ್ಯೇಽನ್ಯಃ ಪರ್ಜನ್ಯ ಇಳಾಮನ್ನಂ ಜನಯತ್ । ಜನಯತಿ । ವೃಷ್ಟ್ಯಾ ಹ್ಯೋಷಧಿವನಸ್ಪತಯೋ ಜಾಯಂತೇ ತೇಭ್ಯಶ್ಚಾನ್ನಂ ಜಾಯತೇ । ಅನ್ಯೋಽಗ್ನಿರ್ಗರ್ಭಂ ಜನಯತಿ । ಪುರುಷೇಣ ಭುಕ್ತಮನ್ನಂ ಜಾಠರೇಣಾಗ್ನಿನಾ ಪಕ್ವಂ ಸತ್ ರೇತೋರೂಪೇಣ ಪರಿಣಮತೇ ತದೇವ ಯೋಷಿತ್ಸು ಗರ್ಭೋ ಭವತಿ । ಅತೋ ಯುವಾಂ ಪ್ರಜಾವತೀಃ ಪ್ರಜಾಭಿರ್ಯುಕ್ತಾ ಇಷೋಽನ್ನಾನ್ಯಸ್ಮೇ ಅಸ್ಮಾಸ್ವಾ ಧತ್ತಂ । ಅವಸ್ಥಾಪಯತಂ ॥**

॥ ಪ್ರತಿಪದಾರ್ಥ ॥

**ಅಗ್ನೀಪರ್ಜನ್ಯೌ**—ಎಲೈ ಅಗ್ನಿ ಮತ್ತು ಪರ್ಜನ್ಯದೇವತೆಗಳೇ । **ಮೇ**—ನನ್ನ । **ಧಿಯಂ**—ಯಜ್ಞಕ್ರಿಯೆಯನ್ನು । **ಅವತಂ**—ರಕ್ಷಿಸಿರಿ । **ಸುಹವಾ**—ಉತ್ತಮವಾದ ಆಹ್ವಾನಕ್ಕೆ ಸುಲಭರಾದ ಎಲೈ ದೇವತೆಗಳೇ । **ಅಸ್ಮಿನ್ ಹವೇ**—ನಮ್ಮ ಈ ಯಜ್ಞಾರ್ಥವಾದ ಆಹ್ವಾನದಲ್ಲಿ । **ನಃ ಸುಷ್ಟುತಿಂ**—ನಮ್ಮ ಉತ್ತಮವಾದ ಸ್ತುತಿಯನ್ನು ರಕ್ಷಿಸಿರಿ । **ಅನ್ಯಃ**—ನಿಮ್ಮಲ್ಲಿ ಒಬ್ಬನಾದ ಪರ್ಜನ್ಯನು । **ಇಳಾಂ**—ಅನ್ನವನ್ನು । **ಜನಯತ್**—ಉತ್ಪನ್ನ ಮಾಡುತ್ತಾನೆ । **ಅನ್ಯಃ**—ಇನ್ನೊಬ್ಬನಾದ ಅಗ್ನಿಯು । **ಗರ್ಭಂ**—ಅನ್ನರಸದ ಫಲವಾದ ಗರ್ಭವನ್ನು ಉತ್ಪನ್ನ ಮಾಡುತ್ತಾನೆ । (ಎಲೈ ಅಗ್ನಿ ಮತ್ತು ಪರ್ಜನ್ಯ ದೇವತೆಗಳೇ) **ಪ್ರಜಾವತೀಃ**—ಪ್ರಜೆಗಳಿಂದ ಕೂಡಿದ । **ಇಷಃ**—ಅನ್ನಗಳನ್ನು । **ಅಸ್ಮೇ**—ನಮ್ಮಲ್ಲಿ । **ಆ ಧತ್ತಂ**—ತುಂಬಿಡಿರಿ.

। ಭಾವಾರ್ಥ ॥

ಎಲೈ ಅಗ್ನಿ ಮತ್ತು ಪರ್ಜನ್ಯದೇವತೆಗಳೇ, ನನ್ನ ಯಜ್ಞಕ್ರಿಯೆಯನ್ನು ರಕ್ಷಿಸಿರಿ. ಉತ್ತಮವಾದ ಆಹ್ವಾನಕ್ಕೆ ಸುಲಭರಾದ ಎಲೈ ದೇವತೆಗಳೇ, ನಮ್ಮ ಈ ಯಜ್ಞಾರ್ಥವಾದ ಆಹ್ವಾನದಲ್ಲಿ ನಮ್ಮ ಉತ್ತಮವಾದ ಸ್ತುತಿಯನ್ನು ರಕ್ಷಿಸಿರಿ. ನಿಮ್ಮಲ್ಲಿ ಒಬ್ಬನಾದ ಪರ್ಜನ್ಯನು ಅನ್ನವನ್ನು ಉತ್ಪನ್ನಮಾಡುತ್ತಾನೆ. ಎಲೈ ಅಗ್ನಿ ಮತ್ತು ಪರ್ಜನ್ಯದೇವತೆಗಳೇ, ಪ್ರಜೆಗಳಿಂದ ಕೂಡಿದ ಅನ್ನವನ್ನು ನಮ್ಮಲ್ಲಿ ತುಂಬಿಡಿರಿ.

## English Translation.

Agni and Parjanya, prosper my pious acts : (accept), you who are reverently invoked, our praise at this sacrifice : one of you generates food, the other posterity : grant us, therefore, food productive of descedants.

॥ ಸಂಹಿತಾಪಾಠಃ ॥

ಸ್ತೀರ್ಣೇ ಬರ್ಹಿಷಿ ಸಮಿಧಾನೇ ಅಗ್ನೌ ಸೂಕ್ತೇನ ಮಹಾ ನಮಸಾ ವಿವಾಸೇ।
ಅಸ್ಮಿನ್ನೋ ಅದ್ಯ ವಿದಥೇ ಯಜತ್ರಾ ವಿಶ್ವೇ ದೇವಾ ಹವಿಷಿ ಮಾದಯಧ್ವಂ॥

॥ ಪದಪಾಠಃ ॥

ಸ್ತೀರ್ಣೇ । ಬರ್ಹಿಷಿ । ಸಂऽಇಧಾನೇ । ಅಗ್ನೌ । ಸುऽಉಕ್ತೇನ । ಮಹಾ । ನಮಸಾ । ಆ । ವಿವಾಸೇ ।
ಅಸ್ಮಿನ್ । ನಃ । ಅದ್ಯ । ವಿದಥೇ । ಯಜತ್ರಾಃ । ವಿಶ್ವೇ । ದೇವಾಃ । ಹವಿಷಿ । ಮಾದಯಧ್ವಂ ॥ ೧೭ ॥

॥ ಸಾಯಣಭಾಷ್ಯಂ ॥

ಹೇ ವಿಶ್ವೇ ದೇವಾ ಬರ್ಹಿಷಿ ದರ್ಭಪುಂಜೇ ವೇದ್ಯಾಂ ಸ್ತೀರ್ಣೇ ಸತ್ಯಗ್ನೌ ಚ ಸಮಿಧಾನೇ ಸಮಿದ್ಧೇ ಸತ್ಯನೇನ ಸೂಕ್ತೇನ ಸ್ತೋತ್ರೇಣ ಚ ಮಹಾ ಮಹತಾ ನಮಸಾ ನಮಸ್ಕಾರೇಣ ಚಾ ವಿವಾಸೇ । ಪರ್ಯಚರಂ । ಹೇ ಯಜತ್ರಾ ಯಜನೀಯಾ ವಿಶ್ವೇ ದೇವಾ ಅದ್ಯಾಸ್ಮಿನ್ದಿನೇ ನೋऽಸ್ಮದೀಯೇऽಸ್ಮಿನ್ವಿದಥೇ ಯಜ್ಞೇ ಹವಿಷಿ ॥ ತೃತೀಯಾರ್ಥೇ ಸಪ್ತಮೀ ॥ ಹವಿಷಾಸ್ಮಾಭಿರ್ದತ್ತೇನ ಮಾದಯಧ್ವಂ । ತೃಪ್ಯಧ್ವಂ ॥

॥ ಪ್ರತಿಪದಾರ್ಥ ॥

(ಎಲೈ ವಿಶ್ವೇದೇವತೆಗಳೇ) **ಬರ್ಹಿಷಿ**—ದರ್ಭಾಸನವು । **ಸ್ತೀರ್ಣೇ**—ಹರಡಿರುವಾಗಲೂ । **ಅಗ್ನೌ**—ಅಗ್ನಿಯು । **ಸಮಿಧಾನೇ**—ಪ್ರಜ್ವಲಿತನಾದಾಗಲೂ ಸಹ । **ಸೂಕ್ತೇನ**—ಸ್ತೋತ್ರದಿಂದಲೂ । **ಮಹಾ**—ಮಹತ್ತಾದ । **ನಮಸಾ**—ನಮಸ್ಕಾರದಿಂದಲೂ । **ಆ ವಿವಾಸೇ**—ನಿಮ್ಮನ್ನು ಪಚರಿಸಿ ಪೂಜಿಸುತ್ತೇನೆ । **ಯಜತ್ರಾಃ**—ಯಜ್ಞಾರ್ಹರಾದ । **ವಿಶ್ವೇ ದೇವಾಃ**—ಎಲೈ ವಿಶ್ವೇದೇವತೆಗಳೇ । **ಅದ್ಯ**—ಇಂದು । **ನಃ**—ನಮ್ಮ । **ಅಸ್ಮಿನ್ ವಿದಥೇ**—ಈ ಯಜ್ಞದಲ್ಲಿ ಅರ್ಪಿಸಿದ । **ಹವಿಷಿ**—ಹವಿಸ್ಸುಗಳಿಂದ । **ಮಾದಯಧ್ವಂ**—ಹರ್ಷವನ್ನು ಹೊಂದಿರಿ.

॥ ಭಾವಾರ್ಥ ॥

ಎಲೈ ವಿಶ್ವೇದೇವತೆಗಳೇ, ದರ್ಭಾಸನವನ್ನು ಹರಡಿ ಅಗ್ನಿಯು ಪ್ರಜ್ವಲಿತನಾದಾಗ ಸ್ತೋತ್ರದಿಂದಲೂ, ನಮಸ್ಕಾರದಿಂದಲೂ ನಿಮ್ಮನ್ನು ಪಚರಿಸಿ ಪೂಜಿಸುತ್ತೇನೆ. ಯಜ್ಞಾರ್ಹರಾದ ಎಲೈ ವಿಶ್ವೇದೇವತೆಗಳೇ, ಇಂದು ನಮ್ಮ ಈ ಯಜ್ಞದಲ್ಲಿ ಅರ್ಪಿಸಿದ ಹವಿಸ್ಸುಗಳಿಂದ ಹರ್ಷವನ್ನು ಹೊಂದಿರಿ.

## English Translation.

When the sacred grass is strewn ; when the fire is kindled, and when I worship (you) with a hymn, and with profound veneration, then, adorable universal gods, rejoice in the oblation (offered) to-day at this our sacrifice.



# ಐವತ್ತಮೂರನೆಯ ಸೂಕ್ತವು

॥ ಸಾಯಣಭಾಷ್ಯಂ ॥

**ವಯಮು ತ್ವೇತಿ ದಶರ್ಚಂ ಚತುರ್ಥಂ ಸೂಕ್ತಂ ಭರದ್ವಾಜಸ್ಯಾರ್ಷಂ ಪೌಷ್ಣಂ। ಯಾಂ ಪೂಷನ್ನಿತ್ಯನುಷ್ಟುಪ್ ಶಿಷ್ಟಾ ಗಾಯತ್ರ್ಯಃ। ತಥಾ ಚಾನುಕ್ರಾಂತಂ। ವಯಂ ದಶ ಪೌಷ್ಣಂ ತದ್ಗಾಯತ್ರಂ ನ್ವೈ ಯಾಂ ಪೂಷನ್ನನುಷ್ಟುಬಿತಿ ॥ ಅರ್ಥಾರ್ಥಿಭಿಃ ಪ್ರವಸದ್ಭಿರೇತಜ್ಜಪ್ಯಂ। ಸೂತ್ರಿತಂ ಚ। ವಯಮು ತ್ವಾ ಪಥಸ್ಪತ ಇತ್ಯರ್ಥಚರ್ಯಾಂ ಚರಿಷ್ಯನ್। ಆ. ಗೃ. ೩-೭-೮। ಇತಿ। ಜಪೇದಿತಿ ಶೇಷಃ ॥**

ಅನುವಾದವು—**ವಯಮು ತ್ವಾ** ಎಂಬ ಈ ಸೂಕ್ತವು ಐದನೆಯ ಅನುವಾಕದಲ್ಲಿ ನಾಲ್ಕನೆಯ ಸೂಕ್ತವು. ಇದರಲ್ಲಿ ಹತ್ತು ಋಕ್ಕುಗಳಿರುವವು. ಈ ಸೂಕ್ತಕ್ಕೆ ಭರದ್ವಾಜನು ಋಷಿಯು; ಪೂಷನು ದೇವತೆಯು; ಈ ಸೂಕ್ತದ **ಯಾಂ ಪೂಷನ್** ಎಂಬ ಎಂಟನೆಯ ಋಕ್ಕು ಅನುಷ್ಟುಪ್‌ಛಂದಸ್ಕವು. ಉಳಿದ ಋಕ್ಕುಗಳೆಲ್ಲಾ ಗಾಯತ್ರೀ ಛಂದಸ್ಕವು. ಅನುಕ್ರಮಣಿಕೆಯಲ್ಲಿ—**ವಯಂ ದಶ ಪೌಷ್ಣಂ ತದ್ಗಾಯತ್ರಂ ನ್ವೈ ಯಾಂ ಪೂಷನ್ನನುಷ್ಟುಪ್** ಎಂದು ಹೇಳಿರುವುದು. ಧನಾರ್ಥಿಗಳಾಗಿ ಪ್ರವಾಸಮಾಡುವವರು ಈ ಸೂಕ್ತವನ್ನು ಜಪಿಸಬೇಕೆಂದು ಆಶ್ವಲಾಯನ ಗೃಹ್ಯಸೂತ್ರದ—**ವಯಮು ತ್ವಾ ಪಥಸ್ಪತೇ ಇತ್ಯರ್ಥಚರ್ಯಾ ಚರಿಷ್ಯನ್** ಎಂಬ ಸೂತ್ರದಿಂದ(ಆ. ಗೃ. ೩-೭-೮) ವಿವೃತವಾಗಿರುವುದು.

## ಸೂಕ್ತ—೫೩

ಮಂಡಲ—೬ ॥ ಅನುವಾಕ—೫ ॥ ಸೂಕ್ತ—೫೩ ॥
ಅಷ್ಟಕ—೪ ॥ ಅಧ್ಯಾಯ—೮ ॥ ವರ್ಗ—೧೭, ೧೮ ॥

॥ ಸೂಕ್ತದಲ್ಲಿರುವ ಋಕ್ಸಂಖ್ಯೆ—೧೦ ॥
॥ ಋಷಿಃ— ಭರದ್ವಾಜೋ ಬಾರ್ಹಸ್ಪತ್ಯಃ ॥
॥ ದೇವತಾ— ಪೂಷಾ ॥
॥ ಛಂದಃ—೧-೭ ೯-೧೦. ಗಾಯತ್ರೀ। ೮. ತ್ರಿಷ್ಟುಪ್ ॥

॥ ಸಂಹಿತಾಪಾಠಃ ॥

ವಯಮು ತ್ವಾ ಪಥಸ್ಪತೇ ರಥಂ ನ ವಾಜಸಾತಯೇ।
ಧಿಯೇ ಪೂಷನ್ನಯುಜ್ಮಹಿ ॥ ೧ ॥

॥ ಪದಪಾಠಃ ॥

ವಯಂ। ಊಂ ಇತಿ। ತ್ವಾ। ಪಥಃ। ಪತೇ। ರಥಂ। ನ। ವಾಜ್ಯಸಾತಯೇ।
ಧಿಯೇ। ಪೂಷನ್। ಅಯುಜ್ಮಹಿ ॥ ೧ ॥

॥ ಸಾಯಣಭಾಷ್ಯಂ ॥

**ಹೇ ಪಥಸ್ಪತೇ ಮಾರ್ಗಸ್ಯ ಪಾಲಯಿತಃ ಪೂಷನ್ ಧಿಯೇ ಕರ್ಮಾರ್ಥಂ ವಾಜಸಾತಯೇಽನ್ನಸ್ಯ ಲಾಭಾಯ ಚ ವಯಂ ರಥಂ ನ ಯುದ್ಧೇ ರಥಮಿವ ತ್ವಾ ತ್ವಾಮಯುಜ್ಮಹಿ । ಯುಂಜ್ಮಹಿ । ಅಸ್ಮದಭಿಮುಖಂ ಕುರ್ಮಃ ॥ ಉ ಇತಿ ಪೂರಕಃ ॥**

॥ ಪ್ರತಿಪದಾರ್ಥ ॥

**ಪಥಸ್ಪತೇ**—ಮಾರ್ಗಗಳಿಗೆ ರಕ್ಷಕನಾದ । **ಪೂಷನ್**—ಎಲೈ ಪೂಷದೇವನೇ । **ಧಿಯೇ**—ನಮ್ಮ ಕರ್ಮಸಂರಕ್ಷಣಾರ್ಥವಾಗಿಯೂ । **ವಾಜಸಾತಯೇ**—ನಮ್ಮ ಅನ್ನ ಲಾಭಾರ್ಥವಾಗಿಯೂ । **ವಯಂ**—ನಾವು । **ರಥಂ ನ**—ಯುದ್ಧದಲ್ಲಿ ರಥವನ್ನೇ ಆಶ್ರಯಿಸುವಂತೆ । **ತ್ವಾ ಉ**—ನಿನ್ನನ್ನೇ । **ಅಯುಜ್ಮಹಿ**—ಆಶ್ರಯಿಸಿ ನಮ್ಮೊಂದಿಗೆ ಸೇರಿಕೊಳ್ಳುವಂತೆ ಮಾಡುತ್ತೇವೆ.

॥ ಭಾವಾರ್ಥ ॥

ಮಾರ್ಗಗಳಿಗೆಲ್ಲಾ ರಕ್ಷಕನಾದ ಎಲೈ ಪೂಷದೇವನೇ, ನಮ್ಮ ಕರ್ಮಸಂರಕ್ಷಣಾರ್ಥವಾಗಿಯೂ ನಮಗೆ ಅನ್ನ ಲಾಭಾರ್ಥವಾಗಿಯೂ ಸಹ ಯುದ್ಧದಲ್ಲಿ ಯೋಧನು ರಥವನ್ನೇ ಪೂರ್ಣವಾಗಿ ಆಶ್ರಯಿಸಿ ಐಕ್ಯಮಾಡಿಕೊಳ್ಳುವಂತೆ ನಾವು ಪೂರ್ಣವಾಗಿ ನಿನ್ನನ್ನೇ ಆಶ್ರಯಿಸಿ ನಮ್ಮೊಂದಿಗೆ ಐಕ್ಯನಾಗುವಂತೆ ಮಾಡುತ್ತೇವೆ.

English Translation.

Pushan, lord of paths, we attach you to us like a chariot, for (the sake of) bringing food, and of (accomplishing our) solemnity.

॥ ಸಂಹಿತಾಪಾಠಃ ॥

ಅಭಿ ನೋ ನರ್ಯಂ ವಸು ವೀರಂ ಪ್ರಯತದಕ್ಷಿಣಂ ।
ವಾಮಂ ಗೃಹಪತಿಂ ನಯ । ೨ ॥

॥ ಪದಪಾಠಃ ॥

ಅಭಿ । ನಃ । ನರ್ಯಂ । ವಸು । ವೀರಂ । ಪ್ರಯತऽದಕ್ಷಿಣಂ ।
ವಾಮಂ । ಗೃಹऽಪತಿಂ । ನಯ ॥ ೨ ॥

॥ ಸಾಯಣಭಾಷ್ಯಂ ॥

**ಹೇ ಪೂಷನ್ ನರ್ಯಂ ನೃಭ್ಯೋ ಹಿತಂ ವಸು ಧನಮಭಿ ಪ್ರಾಪ್ತುಂ ವೀರಂ ದಾರಿದ್ರ್ಯಸ್ಯ ವಿಶೇಷೇಣೇರಯಿತಾರಂ ಗಮಯಿತಾರಂ ಪ್ರಯತದಕ್ಷಿಣಂ ಪೂರ್ವಮನ್ಯೇಭ್ಯೋಽಪಿ ದತ್ತಧನಂ । ಯದ್ವಾ । ಪ್ರಯತಂ ಶುದ್ಧಂ ದಕ್ಷಿಣಂ ಧನಂ ಯಸ್ಯ ತಾದೃಶಂ । ವಾಮಂ ವನನೀಯಮೇವಂವಿಧಂ ಗೃಹಪತಿಂ ಗೃಹಸ್ಥಂ ನೋಽಸ್ಮಾನ್ನಯ । ಪ್ರಾಪಯ ॥**

॥ ಪ್ರತಿಪದಾರ್ಥ ॥

(ಎಲೈ ಪೂಷದೇವನೇ) **ನರ್ಯಂ**—ಮಾನವರಿಗೆ ಹಿತಕರವಾದ। **ವಸು**—ಧನವನ್ನು । **ಅಭಿ (ಪ್ರಾಪ್ತುಂ)**—ಹೊಂದುವುದಕ್ಕಾಗಿ । **ವೀರಂ**—ದಾರಿದ್ರ್ಯವನ್ನು ನಾಶಮಾಡುವ ಶಕ್ತಿಯುಳ್ಳವನೂ । **ಪ್ರಯತದಕ್ಷಿಣಂ**—ದಾನಾರ್ಹವಾದ ಧನವುಳ್ಳವನೂ । **ವಾಮಂ**—ಆಕರ್ಷಕವಾದ ಗುಣಗಳುಳ್ಳವನೂ ಆದ। **ಗೃಹಪತಿಂ**—ಗೃಹ ಸ್ವಾಮಿಯಲ್ಲಿಗೆ । **ನಃ**—ನಮ್ಮನ್ನು । **ನಯ**—ಕರೆದುಕೊಂಡು ಹೋಗಿ ಸೇರಿಸು.

॥ ಭಾವಾರ್ಥ ॥

ಎಲೈ ಪೂಷದೇವನೇ, ಮಾನವರಿಗೆಲ್ಲಾ ಹಿತಕರವಾದ ಧನವನ್ನು ಹೊಂದುವುದಕ್ಕಾಗಿ, ದಾರಿದ್ರ್ಯವನ್ನು ನಾಶಮಾಡುವ ಶಕ್ತಿಯುಳ್ಳವನೂ, ದಾನಾರ್ಹವಾದ ಧನವುಳ್ಳವನೂ ಆಕರ್ಷಕವಾದ ಗುಣಗಳುಳ್ಳವನೂ ಆದ ಗೃಹ ಸ್ವಾಮಿಯಲ್ಲಿಗೆ ನಮ್ಮನ್ನು ಕರೆದುಕೊಂಡು ಹೋಗಿ ಸೇರಿಸು

English Translation.

Conduct us to a gracious householder, friendly to man, liberal in (bestowing) wealth, the giver of pious donations.

॥ ಸಂಹಿತಾಪಾಠಃ ॥

ಅದಿತ್ಸಂತಂ ಚಿದಾಘೃಣೇ ಪೂಷನ್ದಾನಾಯ ಚೋದಯ ।

ಪಣೇಶ್ಚಿದ್ವಿ ಮ್ರದಾ ಮನಃ ॥ ೩ ॥

॥ ಪದಪಾಠಃ ॥

**ಅದಿತ್ಸಂತಂ । ಚಿತ್ । ಆಘೃಣೇ । ಪೂಷನ್ । ದಾನಾಯ । ಚೋದಯ ।**

**ಪಣೇಃ । ಚಿತ್ । ವಿ । ಮ್ರದ । ಮನಃ ॥ ೩ ॥**

॥ ಸಾಯಣಭಾಷ್ಯಂ ॥

**ಹೇ ಆಘೃಣ ಆಗತದೀಪ್ತೇ ಪೂಷನ್ ಅದಿತ್ಸಂತಂ ಚಿತ್ ದಾತುಮನಿಚ್ಛಂತಮಪಿ ಪುರುಷಂ ದಾನಾಯಾಸ್ಮದ್ದಾನಾರ್ಥಂ ಚೋದಯ। ಪ್ರೇರಯ। ಪಣೇಶ್ಚಿದ್ವಣಿಜೋಽಪಿ ವಾರ್ಧುಷಿಕಸ್ಯ ಲುಬ್ಧಸ್ಯಾಪಿ ಮನೋ ಹೃದಯಂ ವಿ ಮ್ರದ। ದಾನಾರ್ಥಂ ಮೃದೂಕುರು ॥**

॥ ಪ್ರತಿಪದಾರ್ಥ ॥

**ಆಘೃಣೇ**—ಅತ್ಯಧಿಕವಾದ ಪ್ರಭಾಯುತನಾದ। **ಪೂಷನ್**—ಎಲೈ ಪೂಷದೇವನೇ। **ಅದಿತ್ಸಂತಂ ಚಿತ್**—ದಾನಮಾಡುವ ಸ್ವಭಾವವಿಲ್ಲದ ಜಿಪುಣನನ್ನೂ ಸಹ । **ದಾನಾಯ**—ದಾನಮಾಡಿ ಲೋಕೋಪಕಾರಿ

ಯಾಗುವಂತೆ । **ಚೋದಯ**—ಪ್ರೇರಿಸು । **ಪಣೇಶ್ಚಿತ್ ಮನಃ**—ಕಠಿನ ಹೃದಯವುಳ್ಳ ಪಣಿಯ (ಲುಬ್ಧನ) ಮನಸ್ಸನ್ನೂ । **ವಿ ಮ್ರದ**—ದಯೆಯಿಂದ ಮೃದುವಾಗುವಂತೆ ಮಾಡು.

॥ ಭಾವಾರ್ಥ ॥

ಅತ್ಯಧಿಕವಾದ ಪ್ರಭಾಯುತನಾದ ಎಲೈ ಪೂಷದೇವನೇ, ದಾನಮಾಡುವ ಸ್ವಭಾವವಿಲ್ಲದ ಜಿಪುಣನನ್ನೂ ಸಹ ದಾನಮಾಡಿ ಲೋಕೋಪಕಾರಿಯಾಗುವಂತೆ ಪ್ರೇರಿಸು. ಕಠಿಣಹೃದಯವುಳ್ಳ ಪಣಿಯ (ಜಿಪುಣನ) ಮನಸ್ಸನ್ನೂ ದಯೆಯಿಂದ ಮೃದುವಾಗುವಂತೆ ಮಾಡು.

English Translation.

Resplendent Pushan, instigate the niggard to iiberality, soften the heart of the miser.

॥ ಸಂಹಿತಾಪಾಠಃ ॥

ವಿ ಪಥೋ ವಾಜಸಾತಯೇ ಚಿನುಹಿ ವಿ ಮೃಧೋ ಜಹಿ ।
ಸಾಧಂತಾಮುಗ್ರ ನೋ ಧಿಯಃ ॥ ೪ ॥

॥ ಪದಪಾಠಃ ॥

ವಿ । ಪಥಃ । ವಾಜऽಸಾತಯೇ । ಚಿನುಹಿ । ವಿ । ಮೃಧಃ । ಜಹಿ ।
ಸಾಧಂತಾಂ । ಉಗ್ರ । ನಃ । ಧಿಯಃ ॥ ೪ ॥

॥ ಸಾಯಣಭಾಷ್ಯಂ ॥

ಹೇ ಉಗ್ರೋದ್ಗೂರ್ಣಬಲ ಪೂಷನ್ ಪಥೋ ಮಾರ್ಗಾನ್ ವಾಜಸಾತಯೇऽನ್ನಲಾಭಾಯ ವಿ ಚಿನುಹಿ । ಶೋಧಿತಾನ್ಕುರು । ಯೈಃ ಪಥಿಭಿರ್ಗತಾ ಧನಂ ಲಭೇಮಹಿ ತಾದೃಶಾನ್ಪಥಃ ಪೃಥಕ್ಕುರ್ವಿತ್ಯರ್ಥಃ । ಮೃಧೋ ಬಾಧಕಾನ್ ತಸ್ಕರಾದೀಂಶ್ಚ ವಿ ಜಹಿ । ಬಾಧಸ್ವ । ತಥಾ ನೋऽಸ್ಮಾಕಂ ಧಿಯಃ ಕರ್ಮಾಣ್ಯನ್ನಲಾಭಾರ್ಥಂ ಕ್ರಿಯಮಾಣಾನಿ ಸಾಧಂತಾಂ । ಸಿಧ್ಯಂತು । ಸಫಲಾನಿ ಭವಂತು ॥

॥ ಪ್ರತಿಪದಾರ್ಥ ॥

**ಉಗ್ರ**—ಅತ್ಯಧಿಕವೂ ಶತ್ರುಭಯಂಕರವೂ ಆದ ಶಕ್ತಿಯುಳ್ಳ ಎಲೈ ಪೂಷದೇವನೇ । **ವಾಜಸಾತಯೇ**—ನಮಗೆ ಸುಲಭವಾಗಿ ಅನ್ನವು ಸಿಗುವುದಕ್ಕಾಗಿ । **ಪಥಃ**—ನಮ್ಮ ಮಾರ್ಗಗಳನ್ನು । **ವಿ ಚಿನುಹಿ**—ತಸ್ಕರಾದಿಗಳಿಲ್ಲದೇ ಶುದ್ಧವಾಗಿರುವಂತೆ ಮಾಡು । **ಮೃಧಃ**—ಹಿಂಸಕರಾದ ತಸ್ಕರಾದಿಗಳನ್ನು । **ವಿ ಜಹಿ**—ಸೋಲಿಸಿ ನಾಶಪಡಿಸು । **ನಃ**—ನಮ್ಮ । **ಧಿಯಃ**—ಅನ್ನಾರ್ಥವಾಗಿ ಕೃತವಾದ ಕರ್ಮಗಳು । **ಸಾಧಂತಾಂ**—ಇಷ್ಟಾರ್ಥ ಸಿದ್ಧಿಯನ್ನು ಪಡೆಯಲಿ.

॥ ಭಾವಾರ್ಥ ॥

ಅತ್ಯಧಿಕವೂ ಶತ್ರುಭಯಂಕರವೂ ಆದ ಶಕ್ತಿಯುಳ್ಳ ಎಲೈ ಪೂಷದೇವನೇ, ನಮಗೆ ಸುಲಭವಾಗಿ ಅನ್ನವು ಸಿಗುವುದಕ್ಕಾಗಿ ನಮ್ಮ ಮಾರ್ಗಗಳನ್ನು ತಸ್ಕರಾದಿಗಳಿಲ್ಲದೇ ಶುದ್ಧವಾಗಿರುವಂತೆ ಮಾಡು. ಹಿಂಸಕರಾದ ತಸ್ಕರಾದಿಗಳನ್ನು ಸೋಲಿಸಿ ನಾಶಪಡಿಸು. ನಮಗೆ ಅನ್ನಲಾಭಕ್ಕಾಗಿ ಕೃತವಾದ ಕರ್ಮಗಳು ಅವುಗಳ ಇಷ್ಟಾರ್ಥಸಿದ್ಧಿಯನ್ನು ಪಡೆಯಲಿ.

## English Translation.

Fierce Pushan, select (fit) roads for the passage of provisions : drive away all obstructors, (thieves, or the like), so that our holy rites may be accomplished.

॥ ಸಂಹಿತಾಪಾಠಃ ॥

**ಪರಿ ತೃಂಧಿ ಪಣೀನಾಮಾರಯಾ ಹೃದಯಾ ಕವೇ ।**

**ಅಥೇಮಸ್ಮಭ್ಯಂ ರಂಧಯ ॥ ೫ ॥**

॥ ಪದಪಾಠಃ ॥

**ಪರಿ । ತೃಂಧಿ । ಪಣೀನಾಂ । ಆರಯಾ । ಹೃದಯಾ । ಕವೇ ।**

**ಅಥ । ಈಂ । ಅಸ್ಮಭ್ಯಂ । ರಂಧಯ ॥ ೫ ॥**

॥ ಸಾಯಣಭಾಷ್ಯಂ ॥

**ಹೇ ಕವೇ ಪ್ರಾಜ್ಞ ಪೂಷನ್ ಪಣೀನಾಂ ವಣಿಜಾಂ ಲುಬ್ಧಾನಾಂ ಹೃದಯಾ ಹೃದಯಾನಿ ಕಠಿನಾನ್ಯಾರಯಾ । ಸೂಕ್ಷ್ಮಲೋಹಾಗ್ರೋ ದಂಡಃ ಪ್ರತೋದ ಇತ್ಯಾರೇತಿ ಚಾಖ್ಯಾಯತೇ । ತಯಾ ಪರಿ ತೃಂಧಿ । ಪರಿವಿಧ್ಯ । ಹೃದ್ಗತಂ ಕಾಠಿನ್ಯಮಪನಯೇತ್ಯರ್ಥಃ । ಅಥಾನಂತರಮೀಮೇನಾನ್ಪಣೀನಸ್ಮಭ್ಯಂ ರಂಧಯ । ವಶೀಕುರು ॥**

॥ ಪ್ರತಿಪದಾರ್ಥ ॥

**ಕವೇ**— ಪ್ರಾಜ್ಞನಾದ ಎಲೈ ಪೂಷದೇವನೇ । **ಪಣೀನಾಂ**— ದಾನ ಮಾಡುವ ಸ್ವಭಾವವಿಲ್ಲದೇ ಲೋಭಿಗಳಾದ ಪಣಿಗಳ । **ಹೃದಯಾ**— ಹೃದಯಸ್ಥವಾದ ಕಾಠಿಣ್ಯವನ್ನು । **ಆರಯಾ**— ತೀವ್ರ ಶಕ್ತಿಯುಳ್ಳ ಅಂಕುಶದಿಂದ । **ಪರಿ ತೃಂಧಿ**— ನಾಶಪಡಿಸಿ (ಅವರ ಹೃದಯವು ಮೃದುವಾಗುವಂತೆ ಮಾಡು) । **ಅಥ**— ಅನಂತರ । **ಈಂ**— ಇಂತಹ ಪಣಿಗಳನ್ನು । **ಅಸ್ಮಭ್ಯಂ**— ನಮಗೆ । **ರಂಧಯ**— ವಶರಾಗಿ ನಮ್ಮ ಪ್ರಾರ್ಥನೆಗಳನ್ನು ಈಡೇರಿಸುವಂತೆ ಮಾಡು.

॥ ಭಾವಾರ್ಥ ॥

ಪ್ರಾಜ್ಞನಾದ ಎಲೈ ಪೂಷದೇವನೇ, ದಾನಸ್ವಭಾವವಿಲ್ಲದೇ ಲೋಭಿಗಳಾದ ಪಣಿಗಳ ಹೃದಯಸ್ಥವಾದ ಕಾಠಿಣ್ಯವನ್ನು ತೀವ್ರ ಶಕ್ತಿಯುಳ್ಳ ಅಂಕುಶದಿಂದ ನಾಶಪಡಿಸಿ ಅವರ ಹೃದಯವು ಮೃದುವಾಗುವಂತೆ ಮಾಡು. ಅನಂತರ ಇಂತಹ ಪಣಿಗಳನ್ನು ನಮಗೆ ವಶರಾಗಿ ನಮಗೆ ಸಹಾಯಕರಾಗುವಂತೆ ಮಾಡು.

English Translation.

Piercc with a goad the hearts of the avaricious, wise Pushan, and so render them complacent towards us.

। ಸಂಹಿತಾಪಾಠಃ ।

ವಿ ಪೂ॒ಷನ್ನಾರ॑ಯಾ ತುದ ಪ॒ಣೇರಿ॑ಚ್ಛ ಹೃ॒ದಿ ಪ್ರಿ॒ಯಂ ।

ಅಥೇ॑ಮ॒ಸ್ಮಭ್ಯಂ॑ ರಂಧಯ ॥ ೬ ॥

॥ ಪದಪಾಠಃ ॥

ವಿ । ಪೂ॒ಷ॒ನ್ । ಆರ॑ಯಾ । ತು॒ದ॒ । ಪ॒ಣೇಃ । ಇ॒ಚ್ಛ॒ । ಹೃ॒ದಿ । ಪ್ರಿ॒ಯಂ ।

ಅಥ॑ । ಈ॒ಂ । ಅ॒ಸ್ಮಭ್ಯಂ॑ । ರಂ॒ಧ॒ಯ॒ ॥ ೬ ॥

॥ ಸಾಯಣಭಾಷ್ಯಂ ॥

**ಹೇ ಪೂಷನ್ ಆರಯಾ ಪ್ರತೋದೇನ ಪಣೇರ್ವಣಿಜೋ ಹೃದಯಂ ವಿ ತುದ । ವಿವಿಧ್ಯ । ತಸ್ಯ ಪಣೇರ್ಹೃದಿ ಹೃದಯೇ ಪ್ರಿಯಮಸ್ಮಭ್ಯಮನುಕೂಲಂ ಧನಮಿಚ್ಛ । ದಾತವ್ಯಮಿತೀಚ್ಛಾಂ ಜನಯ । ಅಥಾನಂತರಮಸ್ಮಭ್ಯಮಿಮಾನೇನಾನ್ರಂಧಯ । ವಶೀಕುರು ॥**

॥ ಪ್ರತಿಪದಾರ್ಥ ॥

**ಪೂಷನ್**—ಎಲೈ ಪೂಷದೇವನೇ । **ಆರಯಾ**—ತೀವ್ರಶಕ್ತಿಯುಳ್ಳ ನಿನ್ನ ಅಂಕುಶದಿಂದ । **ಪಣೇಃ**—ಪಣಿಯ ಹೃದಯವನ್ನು । **ವಿ ತುದ**—ಹಿಂಸಿಸು । **ಹೃದಿ**—ಅದೇ ಹೃದಯದಲ್ಲಿ । **ಪ್ರಿಯಂ**—ನಮಗೆ ಹಿತವನ್ನುಂಟುಮಾಡಬೇಕೆಂಬ । **ಇಚ್ಛ**—ಅಪೇಕ್ಷೆಯನ್ನು ಉತ್ಪನ್ನ ಮಾಡು । **ಅಥ**—ಅನಂತರ । **ಈಂ**—ಇದೇ ಪಣಿಗಳನ್ನು । **ಅಸ್ಮಭ್ಯಂ**—ನಮಗೆ । **ರಂಧಯ**—ವಶಪಡಿಸಿ ನಮಗೆ ಸಹಾಯಮಾಡುವಂತೆ ಪ್ರೇರಿಸು.

॥ ಭಾವಾರ್ಥ ॥

ಎಲೈ ಪೂಷದೇವನೆ, ತೀವ್ರವಾದ ಶಕ್ತಿಯುಳ್ಳ ನಿನ್ನ ಅಂಕುಶದಿಂದ ಪಣಿಯ ಹೃದಯವನ್ನು ಹಿಂಸಿಸು. ಅದೇ ಹೃದಯದಲ್ಲಿ ನಮಗೆ ಹಿತವನ್ನುಂಟುಮಾಡಬೇಕೆಂಬ ಅಪೇಕ್ಷೆಯನ್ನು ಉತ್ಪನ್ನಮಾಡು. ಅನಂತರ ಇದೇ ಪಣಿಗಳನ್ನು ನಮಗೆ ವಶಪಡಿಸಿ ನಮಗೆ ಸಹಾಯಮಾಡುವಂತೆ ಪ್ರೇರಿಸು.

## English Translation.

Pierce with a goad. Pushan, the heart of the avaricious ; generate generosity in his heart, and so render him complacent towards us.

॥ ಸಂಹಿತಾಪಾಠಃ ॥

ಆ ರಿಖ ಕಿಕಿರಾ ಕೃಣು ಪಣೀನಾಂ ಹೃದಯಾ ಕವೇ।
ಅಥೇಮಸ್ಮಭ್ಯಂ ರಂಧಯ ॥ ೭ ॥

॥ ಪದಪಾಠಃ ॥

ಆ । ರಿಖ । ಕಿಕಿರಾ । ಕೃಣು । ಪಣೀನಾಂ । ಹೃದಯಾ । ಕವೇ ।
ಅಥ । ಈಂ । ಅಸ್ಮಭ್ಯಂ । ರಂಧಯ ॥ ೭ ॥

॥ ಸಾಯಣಭಾಷ್ಯಂ ॥

**ಹೇ ಕವೇ ಪ್ರಾಜ್ಞ ಪೂಷನ್ ಪಣೀನಾಂ ವಣಿಜಾಂ ಹೃದಯಾ ಹೃದಯಾನ್ಯಾ ರಿಖ । ಆಲಿಖ । ಆಲಿಖ್ಯ ಚ ಕಿಕಿರಾ ಕೀರ್ಣಾನಿ ಪ್ರಶಿಥಿಲಾನಿ ಕೃಣು । ಕುರು । ಮೃದೂನಿ ಕುರ್ವಿತ್ಯರ್ಥಃ । ಅನ್ಯದ್ಗತಂ ॥**

॥ ಪ್ರತಿಪದಾರ್ಥ ॥

**ಕವೇ**—ಪ್ರಾಜ್ಞನಾದ ಎಲೈ ಪೂಷದೇವನೇ । **ಪಣೀನಾಂ**—ಪಣಿಗಳ । **ಹೃದಯಾ**—ಕಠಿನವಾದ ಹೃದಯಗಳನ್ನು । **ಆ ರಿಖ**—ಸಾಣೆ ಹಿಡಿಯುವಂತೆ ಉಜ್ಜು । **ಕಿಕಿರಾ**—ಅವು ಕಾಠಿಣ್ಯವನ್ನು ಬಿಟ್ಟು ಮೃದುವಾಗಿರುವಂತೆ । **ಕೃಣು**—ಮಾಡು । **ಅಥ**—ಅನಂತರ । **ಈಂ**—ಇದೇ ಪಣಿಗಳನ್ನು । **ಅಸ್ಮಭ್ಯಂ**—ನಮಗೆ । **ರಂಧಯ**—ವಶವಾಗುವಂತೆ ಮಾಡು.

॥ ಭಾವಾರ್ಥ ॥

ಪ್ರಾಜ್ಞನಾದ ಎಲೈ ಪೂಷದೇವನೇ, ಪಣಿಗಳ ಕಠಿಣವಾದ ಹೃದಯಗಳನ್ನು ಸಾಣೆ ಹಿಡಿಯುವಂತೆ ಉಜ್ಜು. ಅವು ತಮ್ಮ ಕಾಠಿಣ್ಯವನ್ನು ಬಿಟ್ಟು ಮೃದುವಾಗಿರುವಂತೆ ಮಾಡು. ಲೋಭಿಗಳಾದ ಇದೇ ಪಣಿಗಳು ನಮ್ಮ ಪ್ರಾರ್ಥನೆಗೆ ವಶರಾಗಿ ನಮ್ಮ ಇಷ್ಟಾರ್ಥಗಳನ್ನು ನೆರವೇರಿಸುವಂತೆ ಮಾಡು.

## English Translation.

Abrade, wise Pushan the hearts of the avaricious ; relax (their hardness), and so render them complacent towards us.

॥ ಸಂಹಿತಾಪಾಠಃ ॥

ಯಾಂ ಪೂಷನ್ಬ್ರಹ್ಮಚೋದನೀಮಾರಾಂ ಬಿಭರ್ಷ್ಯಾಘೃಣೇ ।
ತಯಾ ಸಮಸ್ಯ ಹೃದಯಮಾ ರಿಖ ಕಿಕಿರಾ ಕೃಣು ॥ ೮ ॥

॥ ಪದಪಾಠಃ ॥

ಯಾಂ । ಪೂಷನ್ । ಬ್ರಹ್ಮಽಚೋದನೀಂ । ಆರಾಂ । ಬಿಭರ್ಷಿ । ಆಘೃಣೇ ।
ತಯಾ । ಸಮಸ್ಯ । ಹೃದಯಂ । ಆ । ರಿಖ । ಕಿಕಿರಾ । ಕೃಣು ॥ ೮ ॥

॥ ಸಾಯಣಭಾಷ್ಯಂ ॥

ಹೇ ಆಘೃಣ ಆಗತದೀಪ್ತೇ ಪೂಷನ್ ಬ್ರಹ್ಮಚೋದನೀಂ ಬ್ರಹ್ಮಣೋಽನ್ನಸ್ಯ ಪ್ರೇರಯಿತ್ರೀಂ ಯಾಮಾರಾಂ ಬಿಭರ್ಷಿ ಹಸ್ತೇ ಧಾರಯಸಿ ತಯಾ ಸಮಸ್ಯ ಸರ್ವಸ್ಯ ಲುಬ್ಧಜನಸ್ಯ ಹೃದಯಮಾ ರಿಖ । ಆಲಿಖ । ಕಿಕಿರಾ ಕಿಕಿರಾಣಿ ಕೀರ್ಣಾನಿ ಪ್ರಶಿಥಿಲಾನಿ ಚ ಕೃಣು । ಕುರು ॥

॥ ಪ್ರತಿಪದಾರ್ಥ ॥

**ಆಘೃಣೇ**—ಅತ್ಯಧಿಕವಾದ ಪ್ರಭಾಯುತನಾದ । **ಪೂಷನ್**—ಎಲೈ ಪೂಷದೇವನೇ । **ಬ್ರಹ್ಮಚೋದನೀಂ**—ಅನ್ನಪ್ರೇರಕವಾದ । **ಯಾಂ**—ಯಾವ । **ಆರಾಂ**—ಅಂಕುಶವನ್ನು । **ಬಿಭರ್ಷಿ**—ನೀನು ಹೊಂದಿರುವೆಯೋ । **ತಯಾ**—ಅದರಿಂದ । **ಸಮಸ್ಯ**—ಸಕಲವಾದ ಲೋಭಿಜನದ । **ಹೃದಯಂ**—ಹೃದಯವನ್ನೂ । **ಆ ರಿಖ**—ಅವು ಮೃದುವಾಗುವಂತೆ ಉಜ್ಜು । **ಕಿಕಿರಾ**—ಅವು ಮಾರ್ದವನನ್ನು ಹೊಂದುವಂತೆ । **ಕೃಣು**—ಮಾಡು.

॥ ಭಾವಾರ್ಥ ॥

ಅತ್ಯಧಿಕವಾದ ಪ್ರಭಾಯುತನಾದ ಎಲೈ ಪೂಷದೇವನೇ, ಅನ್ನಪ್ರೇರಕವಾದ ಯಾವ ಅಂಕುಶವನ್ನು ನೀನು ಹೊಂದಿರುವೆಯೋ ಅದೇ ಅಂಕುಶದಿಂದ ಸಕಲವಾದ ಲೋಭಿಜನದ ಹೃದಯವನ್ನೂ ಉಜ್ಜಿ ಅವು ಮಾರ್ದವವನ್ನು ಹೊಂದುವಂತೆ ಮಾಡಿ, ನಮ್ಮ ಮೇಲೆ ಅವು ದಯೆಯಿಡುವಂತೆ ಮಾಡು.

## English Translation.

Resplendent Pushan, with that food-propelling goad which you bear, abrade the heart of every miser and render it relaxed.

॥ ಸಂಹಿತಾಪಾಠಃ ॥

ಯಾ ತೇ ಅಷ್ಟ್ರಾ ಗೋಓಪಶಾಘೃಣೇ ಪಶುಸಾಧನೀ ।
ತಸ್ಯಾಸ್ತೇ ಸುಮ್ನಮೀಮಹೇ ॥ ೯ ॥

॥ ಪದಪಾಠಃ ॥

ಯಾ । ತೇ । ಅಷ್ಟ್ರಾ । ಗೋಽಓಪಶಾ । ಆಘೃಣೇ । ಪಶುಽಸಾಧನೀ ।
ತಸ್ಯಾಃ । ತೇ । ಸುಮ್ನಂ । ಈಮಹೇ ॥ ೯ ॥

॥ ಸಾಯಣಭಾಷ್ಯಂ ॥

ಹೇ ಆಘೃಣ ಆಗತದೀಪ್ತೇ ಪೂಷನ್ ತೇ ತ್ವದೀಯಾ ಯಾಷ್ಟ್ರಾ ಗೋಓಪಶಾ । ಉಪಶೇರತೆ ಇತ್ಯೋಪಶಾಃ । ಗಾವ ಓಪಶಾ ಯಸ್ಯಾಸ್ತಾದೃಶೀ । ಅತ ಏವ ಪಶುಸಾಧನೀ ಪಶೂನಾಂ ಸಾಧಯಿತ್ರೀ ಭವತಿ ತೇ ತ್ವದೀಯಾಯಾಸ್ತಸ್ಯಾಃ ಸಂಬಂಧಿ ಸುಮ್ನಂ ಸುಖಮೀಮಹೇ । ಯಾಚಾಮಹೇ ॥

॥ ಪ್ರತಿಪದಾರ್ಥ ॥

**ಆಘೃಣೇ**—ಅತ್ಯದ್ಭುತವಾದ ಪ್ರಭೆಯುಳ್ಳ ಎಲೈ ಪೂಷದೇವನೇ । **ಗೋಓಪಶಾ**—ಗೋವುಗಳಿಗೆ ಆಶ್ರಯವನ್ನು ನೀಡತಕ್ಕದ್ದೂ । **ಪಶುಸಾಧನೀ**—ಪಶುಗಳಿಗೆ ಮಾರ್ಗದರ್ಶಕವಾಗಿ ರಕ್ಷಕವಾಗಿರುವುದೂ ಆದ । **ತೇ**—ನಿನ್ನ । **ಯಾ ಅಷ್ಟ್ರಾ**—ಯಾವ ಅಂಕುಶವಿರುವುದೋ । **ತಸ್ಯಾಃ**—ನಿನ್ನ ಅದೇ ಅಂಕುಶದಿಂದ ಲಬ್ಧವಾಗತಕ್ಕ । **ಸುಮ್ನಂ**—ಸುಖವನ್ನು । **ಈಮಹೇ**—ಯಾಚಿಸುತ್ತೇವೆ.

॥ ಭಾವಾರ್ಥ ॥

ಅತ್ಯದ್ಭುತವಾದ ಪ್ರಭೆಯುಳ್ಳ ಎಲೈ ಪೂಷದೇವನೇ, ಗೋವುಗಳಿಗೆ ಆಶ್ರಯವನ್ನು ನೀಡತಕ್ಕದ್ದೂ, ಪಶುಗಳಿಗೆ ಮಾರ್ಗದರ್ಶಕವಾಗಿ ರಕ್ಷಕವಾಗಿರುವುದೂ ಆದ ನಿನ್ನ ಯಾವ ಅಂಕುಶವಿರುವುದೋ ಅದೇ ಅಂಕುಶದಿಂದ ಲಬ್ಧವಾಗತಕ್ಕ ಸುಖವನ್ನು ನಾವು ಯಾಚಿಸುತ್ತೇವೆ.

English Translation.

Resplendent Pushan, we ask of you the service of that your weapon, which is the guide of cows, the director of cattle.

॥ ಸಂಹಿತಾಪಾಠಃ ॥

ಉತ ನೋ ಗೋಷಣಿಂ ಧಿಯಮಶ್ವಸಾಂ ವಾಜಸಾಮುತ ।
ನೃವತ್ಕೃಣುಹಿ ವೀತಯೇ ॥ ೧೦ ॥

॥ ಪದಪಾಠಃ ॥

ಉತ । ನಃ । ಗೋಽಸನಿಂ । ಧಿಯಂ । ಅಶ್ವಽಸಾಂ । ವಾಜಽಸಾಂ । ಉತ ।

ನೃಽವತ್ । ಕೃಣುಹಿ । ವೀತಯೇ ॥ ೧೦ ॥

॥ ಸಾಯಣಭಾಷ್ಯಂ ॥

**ಉತಾಪಿ ಚ ಹೇ ಪೂಷನ್ ಗೋಷಣಿಂ ಗವಾಂ ಸನಿತ್ರೀಮಶ್ವಸಾಮಶ್ವಾನಾಂ ಸನಿತ್ರೀಂ ವಾಜಸಾಂ ವಾಜಾನಾಮನ್ನಾನಾಂ ಸನಿತ್ರೀಮುತಾಪಿ ಚ ನೃವತ್ ನೃವತೀಂ ಯದ್ವಾ ನೃಣಾಂ ವನಿತ್ರೀಂ ದಾತ್ರೀಮೇವಂಭೂತಾಂ ಧಿಯಂ ಬುದ್ಧಿಂ ಕರ್ಮ ವಾ ನೋಽಸ್ಮಾಕಂ ವೀತಯೇ ಖಾದನಾಯೋಪಭೋಗಾರ್ಥಂ ಕೃಣುಹಿ ಕುರು ॥**

॥ ಪ್ರತಿಪದಾರ್ಥ ॥

(ಎಲೈ ಪೂಷದೇವನೇ) **ಉತ**—ಮತ್ತು । **ಗೋಷಣಿಂ**—ಗೋವುಗಳನ್ನು ವೃದ್ಧಿಪಡಿಸತಕ್ಕದ್ದೂ । **ಅಶ್ವಸಾಂ**—ಅಶ್ವಲಾಭಕ್ಕೆ ಸಾಧಕವಾದುದೂ । **ವಾಜಸಾಂ**—ಅನ್ನಪೋಷಕವಾದುದೂ । **ಉತ**—ಮತ್ತು । **ನೃವತ್**—ಪುತ್ರಪೌತ್ರಾದಿಗಳಿಗೆ ಸಾಧಕವಾದುದೂ ಆದ । **ಧಿಯಂ**—ನಮ್ಮ ಕರ್ಮವನ್ನು । **ನಃ**—ನಮ್ಮ । **ವೀತಯೇ**—ಭೋಗಯೋಗ್ಯವಾದುದನ್ನಾಗಿ । **ಕೃಣುಹಿ**—ಮಾಡು.

॥ ಭಾವಾರ್ಥ ॥

ಎಲೈ ಪೂಷದೇವನೇ, ಗೋವುಗಳನ್ನು ವೃದ್ಧಿಪಡಿಸತಕ್ಕದ್ದೂ, ಅಶ್ವಲಾಭಕ್ಕೆ ಸಾಧಕವಾದುದೂ, ಅನ್ನಪೋಷಕವಾದುದೂ ಆದ ನಮ್ಮ ಕರ್ಮವನ್ನು ನಮ್ಮ ಭೋಗಯೋಗ್ಯವಾದುದನ್ನಾಗಿ ಮಾಡು.

English Translation.

Make our pious worship productive of cows, of houses, of food, of dependants, for our enjoyment.



# ಐವತ್ತನಾಲ್ಕನೆಯ ಸೂಕ್ತವು

॥ ಸಾಯಣಭಾಷ್ಯಂ ॥

**ಸಂ ಪೂಷನ್ನಿತಿ ದಶರ್ಚಂ ಪಂಚಮಂ ಸೂಕ್ತಂ ಭರದ್ವಾಜಸ್ಯಾರ್ಷಂ ಪೌಷ್ಣಂ ಗಾಯತ್ರಂ । ಸಂ ಪೂಷನ್ನಿತ್ಯನುಕ್ರಾಂತಂ ॥ ನಷ್ಟಧನಮನ್ವಿಚ್ಛತಾ ಪುರುಷೇಣೈತಜ್ಜಪ್ಯಂ । ಸೂತ್ರಿತಂ ಚ । ಸಂ ಪೂಷನ್ನಿದುಷೇತಿ ನಷ್ಟಮಧಿಜಿಗಮಿಷನ್ಮೂಳ್ಹೋ ವಾ । ಆ. ಗೃ. ೩-೭-೯ । ಇತಿ ॥**

ಅನುವಾದವು—**ಸಂ ಪೂಷನ್** ಎಂಬ ಈ ಸೂಕ್ತವು ಐದನೆಯ ಅನುವಾಕದಲ್ಲಿ ಐದನೆಯ ಸೂಕ್ತವು. ಇದರಲ್ಲಿ ಹತ್ತು ಋಕ್ಕುಗಳಿರುವವು. ಈ ಸೂಕ್ತಕ್ಕೆ ಭರದ್ವಾಜನು ಋಷಿಯು; ಪೂಷನು ದೇವತೆಯು; ಗಾಯತ್ರೀ ಛಂದಸ್ಸು. ಅನುಕ್ರಮಣಿಕೆಯಲ್ಲಿ—**ಸಂ ಪೂಷನ್** ಎಂದು ಮೊದಲಾಗಿ ಹೇಳಿರುವುದು. ಕಳೆದುಹೋದ ಧನವನ್ನು ಹುಡುಕುವ ಪುರುಷನು ಈ ಸೂಕ್ತವನ್ನು ಜಪಿಸಬೇಕೆಂದು ಆಶ್ವಲಾಯನಗೃಹ್ಯಸೂತ್ರದ—**ಸಂ ಪೂಷನ್ವಿದುಷೇತಿ ನಷ್ಟಮಧಿಜಿಗಮಿಷುಸ್ಮೂಳ್ಹೋ ವಾ** ಎಂಬ ಸೂತ್ರದಿಂದ (ಆ. ಗೃ. ೩-೭-೯) ವಿವೃತವಾಗಿರುವುದು.

## ಸೂಕ್ತ—೫೪

ಮಂಡಲ—೬ ‖ ಅನುವಾಕ—೫ ‖ ಸೂಕ್ತ—೫೪ ‖
ಅಷ್ಟಕ—೪ ‖ ಅಧ್ಯಾಯ—೮ ‖ ವರ್ಗ—೧೯, ೨೦ ‖

‖ **ಸೂಕ್ತದಲ್ಲಿರುವ ಋಕ್ಸಂಖ್ಯೆ—೧೦** ‖
‖ **ಋಷಿಃ—ಭರದ್ವಾಜೋ ಬಾರ್ಹಸ್ಪತ್ಯಃ** ‖
‖ **ದೇವತಾ—ಪೂಷಾ** ‖
‖ **ಛಂದಃ—ಗಾಯತ್ರೀ** ‖

‖ **ಸಂಹಿತಾಪಾಠಃ** ‖

**ಸಂ ಪೂಷನ್ವಿದುಷಾ ನಯ ಯೋ ಅಂಜಸಾನುಶಾಸತಿ ।**
**ಯ ಏವೇದಮಿತಿ ಬ್ರವತ್ ‖ ೧ ‖**

‖ **ಪದಪಾಠಃ** ‖

**ಸಂ । ಪೂಷನ್ । ವಿದುಷಾ । ನಯ । ಯಃ । ಅಂಜಸಾ । ಅನುಽಶಾಸತಿ ।**
**ಯಃ । ಏವ । ಇದಂ । ಇತಿ । ಬ್ರವತ್ ‖ ೧ ‖**

‖ **ಸಾಯಣಭಾಷ್ಯಂ** ‖

**ಹೇ ಪೂಷನ್ ಪೋಷಕ ದೇವ ವಿದುಷಾ ಜಾನತಾ ತೇನ ಜನೇನ ಸಂ ನಯ ಅಸ್ಮಾನ್ ಸಂಗಮಯ ಯೋ ವಿದ್ವಾನಂಜಸಾ ಋಜುಮಾರ್ಗೇಣಾನುಶಾಸತಿ ಅನುಶಾಸ್ತಿ ನಷ್ಟದ್ರವ್ಯಪ್ರಾಪ್ತ್ಯುಪಾಯಮುಪದಿಶತಿ । ಯಶ್ಚೈವೈವಮಿದಂ ನಷ್ಟಂ ಭವದೀಯಂ ಧನಮಿತಿ ಬ್ರವತ್ ಬ್ರವೀತಿ । ನಷ್ಟಂ ಧನಂ ದರ್ಶಯತೀತ್ಯರ್ಥಃ । ತೇನ ವಿದುಷೇತ್ಯನ್ವಯಃ ‖**

‖ **ಪ್ರತಿಪದಾರ್ಥ** ‖

**ಪೂಷನ್**—ಜಗತ್ಪೋಷಕನಾದ ಎಲೈ ಪೂಷನೇ । **ಯಃ**—ಯಾವ ಪ್ರಾಜ್ಞನು । **ಅಂಜಸಾ**—ಶ್ರೇಷ್ಠವಾದ ಋಜುಮಾರ್ಗದಲ್ಲಿ ನಡೆಯುತ್ತಾ । **ಅನುಶಾಸತಿ**—ನಮಗೂ ಅದೇ ಋಜುಮಾರ್ಗವನ್ನು ಉಪದೇಶಿಸು

ವನೋ | **ಯಃ**—ಯಾವ ಪ್ರಾಜ್ಞನು | **ಏವ**—ಇದೇ ರೀತಿಯಲ್ಲಿ | **ಇದಂ**—ಈ ಕಾರ್ಯವು ಆಚರಿಸಲ್ಪಡಬೇಕು | **ಇತಿ**—ಹೀಗೆಂಬುದಾಗಿ | **ಬ್ರವತ್**—ಹೇಳುವನೋ | **(ತೇನ) ವಿದುಷಾ**—ಅಂತಹ ವಿವೇಕಜ್ಞಾನವುಳ್ಳ ಪುರುಷ ನೊಡನೆ | **ಸಂ ನಯ**—ನಮ್ಮನ್ನು ಸೇರಿಸು.

॥ ಭಾವಾರ್ಥ ॥

ಜಗತ್ಪೋಷಕನಾದ ಎಲೈ ಪೂಷದೇವನೇ, ಯಾವ ಪ್ರಾಜ್ಞನು ಶ್ರೇಷ್ಠವಾದ ಋಜುಮಾರ್ಗದಲ್ಲಿ ನಡೆಯುತ್ತಾ ನಮಗೂ ಅದೇ ಋಜುಮಾರ್ಗವನ್ನುಪದೇಶಿಸುವನೋ, ಯಾವ ಪ್ರಾಜ್ಞನು "ಇದೇ ರೀತಿಯಲ್ಲಿ ಇಂತಹ ಕಾರ್ಯವು ಆಚರಿಸಲ್ಪಡಬೇಕು" ಎಂದು ಕಾರ್ಯಾಕಾರ್ಯಗಳ ವಿವೇಕವನ್ನು ತಿಳಿಸುವನೋ ಅಂತಹ ವಿವೇಕಜ್ಞಾನವುಳ್ಳ ಪುರುಷ ನೊಂದಿಗೆ ನಮ್ಮನ್ನು ಸೇರಿಸು.

English Translation.

Bring us, Pushan, into communication with a wise man who may rightly direct us, who may even say, this is so.

॥ ಸಂಹಿತಾಪಾಠಃ ॥

ಸಮು ಪೂಷ್ಣಾ ಗಮೇಮಹಿ ಯೋ ಗೃಹಾँ ಅಭಿಶಾಸತಿ ।
ಇಮ ಏವೇತಿ ಚ ಬ್ರವತ್ ॥ ೨ ॥

॥ ಪದಪಾಠಃ ॥

ಸಂ । ಊಂ ಇತಿ । ಪೂಷ್ಣಾ । ಗಮೇಮಹಿ । ಯಃ । ಗೃಹಾನ್ । ಅಭಿಽಶಾಸತಿ ।
ಇಮೇ । ಏವ । ಇತಿ । ಚ । ಬ್ರವತ್ ॥ ೨ ॥

॥ ಸಾಯಣಭಾಷ್ಯಂ ॥

ಪೂಷ್ಣಾನುಗೃಹೀತಾ ವಯಂ ಸಂ ಗಮೇಮಹಿ ತೇನ ಜನೇನ ಸಂಗಚ್ಛೇಮಹಿ ಯೋ ಜನೋ ಗೃಹಾನ್ ಯೇಷು ಗೃಹೇಷ್ವಸ್ಮದೀಯಾ ನಷ್ಟಾಃ ಪಶವಸ್ತಿಷ್ಠಂತಿ ತಾನ್ ಗೃಹಾನಭಿಶಾಸತಿ ಅಭಿಶಾಸ್ತಿ ಆಭಿಮುಖ್ಯೇನ ಬೋಧಯತಿ । ಯಶ್ಚೇಮೇ ತ್ವದೀಯಾ ನಷ್ಟಾಃ ಪಶವ ಏವ್ಯೆವಂ ತಿಷ್ಠಂತೀತಿ ಚ ಬ್ರವತ್ ಬ್ರೂಯಾತ್ ॥

॥ ಪ್ರತಿಪದಾರ್ಥ ॥

ಯಃ—ಯಾವ ವಿವೇಕಿಯು | **ಗೃಹಾನ್**—ನಮ್ಮ ಪಶುಗಳನ್ನು ಮರೆಸಿಟ್ಟಿರುವ ಗೃಹಗಳನ್ನು | **ಅಭಿಶಾಸತಿ**—ನಮಗೆ ತೋರಿಸಿ ಕೊಡುವನೋ | (**ಯಃ**—ಯಾರು) | **ಇಮೇ**—ನಿನ್ನ ಪಶುಗಳು | **ಏವ**—ಅಪಹರಿಸಲ್ಪಟ್ಟು ಈ ರೀತಿ ನಿಂತಿವೆ | **ಇತಿ**—ಎಂಬುದಾಗಿ | **ಬ್ರವತ್**—ಹೇಳುವನೋ ಅಂತಹ ವಿವೇಕ

ಜ್ಞಾನವುಳ್ಳ ಪುರುಷನೊಂದಿಗೆ । **ಪೂಷ್ಣಾ**—ಪೂಷದೇವನಿಂದ ಅನುಗೃಹೀತರಾದ ನಾವು । **ಸಂಗಮೇಮಹಿ**—ಸೇರಿಕೊಳ್ಳುವಂತಾಗಲಿ.

॥ ಭಾವಾರ್ಥ ॥

ಯಾವ ವಿವೇಕಿಯು ನಮ್ಮ ಪಶುಗಳನ್ನು ಮರೆಸಿಟ್ಟಿರುವ ಗೃಹಗಳನ್ನು ನಮಗೆ ತೋರಿಸಿಕೊಡುವನೋ, ಯಾರು "ನಿನ್ನ ಪಶುಗಳು ಅಪಹರಿಸಲ್ಪಟ್ಟು ಈ ರೀತಿ ನಿಂತಿವೆ" ಎಂದು ತಿಳಿಸುವನೋ ಅಂತಹ ವಿವೇಕಜ್ಞಾನವುಳ್ಳ ಪುರುಷನೊಂದಿಗೆ ಪೂಷದೇವನಿಂದ ಅನುಗೃಹೀತರಾದ ನಾವು ಸೇರಿಕೊಳ್ಳುವಂತಾಗಲಿ.

English Translation.

May we, by the favour of Pushan, come in communication with (the man) who may direct us to the houses (where our goods are sacreted), and may say, verily these are they.

॥ ಸಂಹಿತಾಪಾಠಃ ॥

**ಪೂಷ್ಣಶ್ಚಕ್ರಂ ನ ರಿಷ್ಯತಿ ನ ಕೋಶೋಽವ ಪದ್ಯತೇ ।**
**ನೋ ಅಸ್ಯ ವ್ಯಥತೇ ಪವಿಃ ॥ ೩ ॥**

॥ ಪದಪಾಠಃ ॥

**ಪೂಷ್ಣಃ । ಚಕ್ರಂ । ನ । ರಿಷ್ಯತಿ । ನ । ಕೋಶಃ । ಅವ । ಪದ್ಯತೇ ।**
**ನೋ ಇತಿ । ಅಸ್ಯ । ವ್ಯಥತೇ । ಪವಿಃ ॥ ೩ ॥**

॥ ಸಾಯಣಭಾಷ್ಯಂ ॥

**ಪೂಷ್ಣಃ ಪೋಷಕಸ್ಯ ದೇವಸ್ಯ ಚಕ್ರಮಾಯುಧಂ ನ ರಿಷ್ಯತಿ । ನ ವಿನಶ್ಯತಿ । ಅಸ್ಯ ಚಕ್ರಸ್ಯ ಕೋಶಶ್ಚ ನಾವ ಪದ್ಯತೇ । ನ ಹೀಯತೇ । ಅಸ್ಯ ಪವಿರ್ಧಾರಾ ಚ ನೋ ನೈವ ವ್ಯಥತೇ । ಕುಂಠೀಭವತಿ । ತೇನ ಚಕ್ರೇಣ ಚೋರಾನ್ಹತ್ವಾಸ್ಮದೀಯಂ ಧನಂ ಪ್ರಕಾಶಯೇತಿ ಭಾವಃ ॥**

॥ ಪ್ರತಿಪದಾರ್ಥ ॥

**ಪೂಷ್ಣಃ**—ಜಗತ್ಪೋಷಕನಾದ ಪೂಷದೇವನ । **ಚಕ್ರಂ**—ಚಕ್ರಸಂಜ್ಞಕವಾದ ಆಯುಧವು । **ನ ರಿಷ್ಯತಿ**—ನಾಶವಾಗುವುದಿಲ್ಲ । **ಕೋಶಃ**—ಆ ಆಯುಧದ ಕೋಶವೂ । **ನ ಅವ ಪದ್ಯತೇ**—ನಾಶವನ್ನು ಹೊಂದುವುದಿಲ್ಲ । **ಅಸ್ಯ**—ಈ ಪೂಷದೇವನ । **ಪವಿಃ**—ಆಯುಧದ ಅಲಗು । **ನೋ ವ್ಯಥತೇ**—ಕುಂಠಿತವಾಗುವುದಿಲ್ಲ (ಮೊಂಡಾಗುವುದಿಲ್ಲ).

|| ಭಾವಾರ್ಥ ||

ಜಗತ್ಪೋಷಕನಾದ ಪೂಷದೇವನ ಚಕ್ರಸಂಜ್ಞಕವಾದ ಆಯುಧವು ನಾಶವಾಗುವುದಿಲ್ಲ. ಆ ಆಯುಧವನ್ನಿಡುವ ಕೋಶವೂ ನಾಶವನ್ನು ಹೊಂದುವುದಿಲ್ಲ. ಈ ಪೂಷದೇವನ ಆಯುಧದ ಅಲಗು ಕುಂಠಿತವಾಗುವುದಿಲ್ಲ. (ಮೊಂಡಾಗುವುದಿಲ್ಲ)

**English Translation.**

The discus of Pushan does not destory ; its sheath is not discarded, its edge harms not us.

|| ಸಂಹಿತಾಪಾಠಃ ||

**ಯೋ ಅಸ್ಮೈ ಹವಿಷಾವಿಧನ್ನ ತಂ ಪೂಷಾಪಿ ಮೃಷ್ಯತೇ ।**

**ಪ್ರಥಮೋ ವಿಂದತೇ ವಸು ॥ ೪ ॥**

॥ ಪದಪಾಠಃ ॥

**ಯಃ । ಅಸ್ಮೈ । ಹವಿಷಾ । ಅವಿಧತ್ । ನ । ತಂ । ಪೂಷಾ । ಅಪಿ । ಮೃಷ್ಯತೇ ।**

**ಪ್ರಥಮಃ । ವಿಂದತೇ । ವಸು ॥ ೪ ॥**

॥ ಸಾಯಣಭಾಷ್ಯಂ ॥

**ಯೋ ಯಜಮಾನೋಽಸ್ಮೈ ಪೂಷ್ಣೇ ಹವಿಷಾ ಚರುಪುರೋಡಾಶಾದಿನಾವಿಧತ್ ಪರಿಚರತಿ ತಂ ಯಜಮಾನಂ ಪೂಷಾ ನಾಪಿ ಮೃಷ್ಯತೇ । ಅಪಿಶಬ್ದ ಈಷದರ್ಥೇ । ಈಷದಪಿ ನ ಹಿನಸ್ತಿ । ಸ ಚ ಪ್ರಥಮೋ ಮುಖ್ಯಃ ಸನ್ ವಸು ಧನಂ ವಿಂದತೇ । ಲಭತೇ ॥**

॥ ಪ್ರತಿಪದಾರ್ಥ ॥

**ಯಃ**—ಯಾವ ಯಜಮಾನನು । **ಅಸ್ಮೈ**—ಈ ಪೂಷದೇವನಿಗೆ । **ಹವಿಷಾ**—ಹವಿಸ್ಸುಗಳನ್ನು ಅರ್ಪಿಸುವುದರಿಂದ । **ಅವಿಧತ್**—ಪೂಜೆಯನ್ನರ್ಪಿಸುವನೋ । **ತಂ**—ಆ ಯಜಮಾನನನ್ನು । **ಪೂಷಾ**—ಪೂಷದೇವನು । **ನ ಅಪಿ ಮೃಷ್ಯತೇ**—ನಾಶಪಡಿಸುವುದಿಲ್ಲ । (**ಸಃ**—ಅದೇ ಯಜಮಾನನು) । **ಪ್ರಥಮಃ**—ಎಲ್ಲರಿಗಿಂತಲೂ ಅತಿಮುಖ್ಯನಾಗಿ । **ವಸು**—ಧನವನ್ನು । **ವಿಂದತೇ**—ಹೊಂದುತ್ತಾನೆ.

॥ ಭಾವಾರ್ಥ ॥

ಯಾವ ಯಜಮಾನನು ಈ ಪೂಷದೇವನಿಗೆ ಹವಿಸ್ಸುಗಳನ್ನು ಅರ್ಪಿಸುವುದರ ಮೂಲಕ ಪೂಜೆಯನ್ನರ್ಪಿಸುವನೋ, ಆ ಯಜಮಾನನನ್ನು ಪೂಷದೇವನು ನಾಶಪಡಿಸುವುದಿಲ್ಲ. ಅದೇ ಯಜಮಾನನು ಎಲ್ಲರಿಗಿಂತಲೂ ಅತಿ ಮುಖ್ಯನಾಗಿ ಧನವನ್ನು ಹೊಂದುತ್ತಾನೆ.

## English Translation.

Pushan inflicts not the least injury on the man who propitiates him by oblations : he is the the first who acquires wealth.

॥ ಸಂಹಿತಾಪಾಠಃ ॥

ಪೂಷಾ ಗಾ ಅನ್ವೇತು ನಃ ಪೂಷಾ ರಕ್ಷತ್ವರ್ವತಃ ।

ಪೂಷಾ ವಾಜಂ ಸನೋತು ನಃ ॥ ೫ ॥

॥ ಪದಪಾಠಃ ॥

ಪೂಷಾ । ಗಾಃ । ಅನು । ಏತು । ನಃ । ಪೂಷಾ । ರಕ್ಷತು । ಅರ್ವತಃ ।

ಪೂಷಾ । ವಾಜಂ । ಸನೋತು । ನಃ ॥ ೫ ॥

॥ ಸಾಯಣಭಾಷ್ಯಂ ॥

ಪೂಷಾ ಪೋಷಕೋ ದೇವೋ ನೋಽಸ್ಮದೀಯಾ ಗಾ ಅನ್ವೇತು । ರಕ್ಷಣಾರ್ಥಮನುಗಚ್ಛತು । ಸ ಚ ಪೂಷಾರ್ವತೋಽಶ್ವಾನ್ರಕ್ಷತು ಚೋರೇಭ್ಯಃ । ತಥಾ ವಾಜಮನ್ನಂ ಚ ನೋಽಸ್ಮಭ್ಯಂ ಪೂಷಾ ಸನೋತು । ಪ್ರಯಚ್ಛತು ॥

॥ ಪ್ರತಿಪದಾರ್ಥ ॥

**ಪೂಷಾ**—ಜಗತ್ಪೋಷಕನಾದ ಪೂಷದೇವನು । **ನಃ**—ನಮ್ಮ । **ಗಾಃ**—ಗೋವುಗಳನ್ನು । **ಅನ್ವೇತು**—ರಕ್ಷಣಾರ್ಥವಾಗಿ ಅನುಸರಿಸಲಿ । **ಪೂಷಾ**—ಅದೇ ಪೂಷದೇವನು । **ಅರ್ವತಃ**—ನಮ್ಮ ಅಶ್ವಗಳನ್ನು **ರಕ್ಷತು**—ರಕ್ಷಿಸಲಿ । **ಪೂಷಾ**—ಪೂಷದೇವನು । **ನಃ**—ನಮಗೆ । **ವಾಜಂ**—ಅನ್ನವನ್ನು । **ಸನೋತು**—ಒದಗಿಸಿಕೊಡಲಿ.

॥ ಭಾವಾರ್ಥ ॥

ಜಗತ್ಪೋಷಕನಾದ ಪೂಷದೇವನು ನಮ್ಮ ಗೋವುಗಳನ್ನು ರಕ್ಷಣಾರ್ಥವಾಗಿ ಅನುಸರಿಸಲಿ. ಅದೇ ಪೂಷದೇವನು ನಮ್ಮ ಅಶ್ವಗಳನ್ನು ರಕ್ಷಿಸಲಿ. ಪೂಷದೇವನು ನಮಗೆ ಅನ್ನವನ್ನು ಒದಗಿಸಿಕೊಡಲಿ.

## English Translation.

May Pushan come to (guard) our cattle, may Pushan protect our houses : may Pushan give us food.

॥ ಸಂಹಿತಾಪಾಠಃ ॥

ಪೂಷನ್ನನು ಪ್ರ ಗಾ ಇಹಿ ಯಜಮಾನಸ್ಯ ಸುನ್ವತಃ ।

ಅಸ್ಮಾಕಂ ಸ್ತುವತಾಮುತ ॥ ೬ ॥

॥ ಪದಪಾಠಃ ॥

ಪೂಷನ್ । ಅನು । ಪ್ರ । ಗಾಃ । ಇಹಿ । ಯಜಮಾನಸ್ಯ । ಸುನ್ವತಃ ।

ಅಸ್ಮಾಕಂ । ಸ್ತುವತಾಂ । ಉತ ॥ ೬ ॥

॥ ಸಾಯಣಭಾಷ್ಯಂ ॥

ಹೇ ಪೂಷನ್ ಸುನ್ವತಃ ಸೋಮಾಭಿಷವಂ ಕುರ್ವತೋ ಯಜಮಾನಸ್ಯ ಗಾಃ ಪಶೂನನು ಪ್ರೇಹಿ । ರಕ್ಷಣಾರ್ಥಮನುಗಚ್ಛ । ಉತಾಪಿ ಚ ಸ್ತುವತಾಂ ತ್ವದ್ವಿಷಯಂ ಸ್ತೋತ್ರಂ ಕುರ್ವತಾಮಸ್ಮಾಕಂ ಗಾಶ್ಚಾನುಗಚ್ಛ ॥

॥ ಪ್ರತಿಪದಾರ್ಥ ॥

**ಪೂಷನ್**—ಎಲೈ ಪೂಷದೇವನೇ । **ಸುನ್ವತಃ**—(ನಿನಗರ್ಪಿಸುವುದಕ್ಕಾಗಿ) ಸೋಮರಸವನ್ನು ಹಿಂಡುವ । **ಯಜಮಾನಸ್ಯ**—ಯಜಮಾನನ । **ಗಾಃ**—ಗೋವುಗಳನ್ನು । **ಅನು ಪ್ರ ಇಹಿ**—ರಕ್ಷಣಾರ್ಥವಾಗಿ ಅನುಸರಿಸು । **ಉತ**—ಮತ್ತು । **ಸ್ತುವತಾಂ**—ನಿನ್ನನ್ನು ಸ್ತುತಿಸುವ । **ಅಸ್ಮಾಕಂ**—ನಮ್ಮ ರಕ್ಷಣಾರ್ಥವಾಗಿಯೂ ಅನುಸರಿಸು.

॥ ಭಾವಾರ್ಥ ॥

ಎಲೈ ಪೂಷದೇವನೇ, ನಿನಗರ್ಪಿಸುವುದಕ್ಕಾಗಿ ಸೋಮರಸವನ್ನು ಹಿಂಡುವ ಯಜಮಾನನ ಗೋವುಗಳನ್ನು ರಕ್ಷಣಾರ್ಥವಾಗಿ ಅನುಸರಿಸು ಮತ್ತು ನಿನ್ನನ್ನು ಸ್ತುತಿಸುವ ನಮ್ಮ ರಕ್ಷಣಾರ್ಥವಾಗಿಯೂ ಅನುಸರಿಸು.

## English Translation

Come, Pushan, to (guard) the cattle of of the institutor of the rite presenting libations, and also of us repeating (your) praises

॥ ಸಂಹಿತಾಪಾಠಃ ॥

ಮಾಕಿರ್ನೇಶನ್ಮಾಕೀಂ ರಿಷನ್ಮಾಕೀಂ ಸಂ ಶಾರಿ ಕೇವಟೇ ।

ಅಥಾರಿಷ್ಟಾಭಿರಾ ಗಹಿ ॥ ೭ ॥

॥ ಪದಪಾಠಃ ॥

**ಮಾಕಿಃ । ನೇಶತ್ । ಮಾಕೀಂ । ರಿಷತ್ । ಮಾಕೀಂ । ಸಂ । ಶಾರಿ । ಕೇವಟೇ ।**

**ಅಥ । ಅರಿಷ್ಟಾಭಿಃ । ಆ । ಗಹಿ ॥ ೭ ॥**

॥ ಸಾಯಣಭಾಷ್ಯಂ ॥

**ಹೇ ಪೂಷನ್ ಅಸ್ಮದೀಯಂ ಗೋಧನಂ ಮಾಕಿರ್ನೇಶತ್ । ಮಾ ನಶ್ಯತು । ಮಾಕಿರ್ಮಾಕೀಮಿತ್ಯೇತೌ ಪ್ರತಿಷೇಧಮಾತ್ರೇ ವರ್ತೇತೇ । ಮಾಕೀಂ ರಿಷತ್ । ಮಾ ವ್ಯಾಘ್ರಾದಿಭಿರ್ಹಿಂಸ್ಯತಾಂ । ಮಾಕೀಂ ಮಾ ಚ ಕೇವಟೇ ಕೂಪೇ ಸಂ ಶಾರಿ । ಸಂಶೀರ್ಣಂ ಭೂತ್ । ಕೂಪಪಾತೇನಾಪಿ ಹಿಂಸಿತಂ ಮಾ ಭವತು । ಅಥೈವಂ ಸತ್ಯರಿಷ್ಟಾಭಿರಹಿಂಸಿತಾಭಿರ್ಗೋಭಿಃ ಸಹಾ ಗಹಿ । ಸಾಯಂಕಾಲ ಆಗಚ್ಛ ॥**

॥ ಪ್ರತಿಪದಾರ್ಥ ॥

(ಎಲೈ ಪೂಷದೇವನೇ) **ಮಾಕಿರ್ನೇಶತ್**—ನಮ್ಮ ಗೋಸಂಪತ್ತು ನಾಶವಾಗದಿರಲಿ । **ಮಾಕೀಂ ರಿಷತ್**—ವ್ಯಾಘ್ರಾದಿಗಳಿಂದ ಹಿಂಸಿತವಾಗದಿರಲಿ । **ಕೇವಟೇ**—ಬಾವಿಗಳಲ್ಲಿ । **ಮಾಕೀಂ ಸಂ ಶಾರಿ**—ಜಾರಿ ಬೀಳದಿರಲಿ । **ಅಥ**—ಇವುಗಳ ರಕ್ಷಣಾನಂತರ । **ಅರಿಷ್ಟಾಭಿಃ**—ಅಹಿಂಸಿತವಾದ ಈ ಗೋವುಗಳೊಡನೆ । **ಆ ಗಹಿ**—ಸಂಧ್ಯಾಕಾಲದಲ್ಲಿ ದಯಮಾಡು.

॥ ಭಾವಾರ್ಥ ॥

ಎಲೈ ಪೂಷದೇವನೇ, ನಮ್ಮ ಗೋಸಂಪತ್ತು ನಾಶವಾಗದಿರಲಿ. ವ್ಯಾಘ್ರಾದಿಗಳಿಂದ ಹಿಂಸಿತವಾಗದಿರಲಿ. ಬಾವಿಗಳಲ್ಲಿ ಜಾರಿ ಬೀಳದಿರಲಿ. ಇವುಗಳ ರಕ್ಷಣಾನಂತರ ಅಹಿಂಸಿತವಾದ ಗೋವುಗಳೊಡನೆ ಸಂಧ್ಯಾಕಾಲದಲ್ಲಿ ದಯಮಾಡು.

English Translation.

Let not, Pushan, our cattle perish; let them not be injured; let them not be hurt by falling into a well ; come, therefore, along with them unharmed.

॥ ಸಂಹಿತಾಪಾಠಃ ॥

ಶೃಣ್ವಂತಂ ಪೂಷಣಂ ವಯಮಿರ್ಯಮನಷ್ಟವೇದಸಂ ।

ಈಶಾನಂ ರಾಯ ಈಮಹೇ ॥ ೮ ॥

॥ ಪದಪಾಠಃ ॥

**ಶೃಣ್ವಂತಂ । ಪೂಷಣಂ । ವಯಂ । ಇರ್ಯಂ । ಅನಷ್ಟಽವೇದಸಂ ।**

**ಈಶಾನಂ । ರಾಯಃ । ಈಮಹೇ ॥ ೮ ॥**

॥ ಸಾಯಣಭಾಷ್ಯಂ ॥

ಅಸ್ಮತ್ಸ್ತೋತ್ರಾಣಿ ಶೃಣ್ವಂತಮಿರ್ಯಂ ದಾರಿದ್ರ್ಯಸ್ಯ ಪ್ರೇರಕಮನಷ್ಟವೇದಸಮವಿನಷ್ಟಧನ-ಮೀಶಾನಂ ಸರ್ವಸ್ಯೇಶ್ವರಮೇವಂವಿಧಂ ಪೂಷಣಂ ದೇವಂ ವಯಂ ರಾಯೋ ಧನಾನೀಮಹೇ ಯಾಚಾಮಹೇ ॥

॥ ಪ್ರತಿಪದಾರ್ಥ ॥

**ಶೃಣ್ವಂತಂ**—ನಮ್ಮ ಸ್ತುತಿಗಳನ್ನು ಕೇಳುವವನೂ । **ಇರ್ಯಂ**—ದಾರಿದ್ರ್ಯನಾಶಕನೂ । **ಅನಷ್ಟವೇದಸಂ**—ನಾಶರಹಿತವಾದ ಧನವುಳ್ಳವನೂ । **ಈಶಾನಂ**—ಸಕಲರಿಗೂ ಪ್ರಭುವಾದವನೂ ಆದ । **ಪೂಷಣಂ**—ಪೂಷದೇವನನ್ನೂ । **ವಯಂ**—ನಾವು । **ರಾಯಃ**—ಧನಾರ್ಥವಾಗಿ । **ಈಮಹೇ**—ಯಾಚಿಸುತ್ತೇವೆ.

॥ ಭಾವಾರ್ಥ ॥

ನಮ್ಮ ಸ್ತುತಿಗಳನ್ನು ಕೇಳುವವನೂ, ದಾರಿದ್ರ್ಯನಾಶಕನೂ, ನಾಶರಹಿತವಾದ ಧನವುಳ್ಳವನೂ, ಸಕಲರಿಗೂ ಪ್ರಭುವಾದವನೂ ಆದ ಪೂಷದೇವನನ್ನು ನಾವು ಧನಾರ್ಥವಾಗಿ ಯಾಚಿಸುತ್ತೇವೆ.

## English Translation.

We solicit riches of Pushan, who hears (our eulogies); who is the averter (of poverty); the preserver of that which is not lost, the ruler (over all).

॥ ಸಂಹಿತಾಪಾಠಃ ॥

**ಪೂಷನ್ತವ ವ್ರತೇ ವಯಂ ನ ರಿಷ್ಯೇಮ ಕದಾ ಚನ ।**
**ಸ್ತೋತಾರಸ್ತ ಇಹ ಸ್ಮಸಿ ॥ ೯ ॥**

॥ ಪದಪಾಠಃ ॥

ಪೂಷನ್ । ತವ । ವ್ರತೇ । ವಯಂ । ನ । ರಿಷ್ಯೇಮ । ಕದಾ । ಚನ ।
ಸ್ತೋತಾರಃ । ತೇ । ಇಹ । ಸ್ಮಸಿ ॥ ೯ ॥

॥ ಸಾಯಣಭಾಷ್ಯಂ ॥

ಚಾತುರ್ಮಾಸ್ಯೇಷು ವೈಶ್ವದೇವೇ ಪರ್ವಣಿ ಪೌಷ್ಣಸ್ಯ ಹವಿಷಃ ಪೂಷನ್ತವ ವ್ರತ ಇತ್ಯೇಷಾನು-ವಾಕ್ಯಾ । ಸೂತ್ರಿತಂ ಚ । ವಾಮಮದ್ಯ ಸವಿತರ್ವಾಮಮು ಶ್ವಃ ಪೂಷನ್ತವ ವ್ರತೇ ವಯಂ । ಆ. ೨-೧೬ । ಇತಿ ॥

ಹೇ ಪೂಷನ್ಪೋಷಕ ತವ ತ್ವದೀಯೇ ವ್ರತೇ ಕರ್ಮಣಿ ವರ್ತಮಾನಾ ವಯಂ ಕದಾ ಚನ ಕದಾಚಿದಪಿ ನ ರಿಷ್ಯೇಮ । ಹಿಂಸಿತಾ ನ ಭವೇಮ । ತಾದೃಶಾಶ್ಚ ವಯಮಿಹಾಸ್ಮಿನ್ಕರ್ಮಣಿ ತೇ ತವ ಸ್ತೋತಾರಃ ಸ್ಮಸಿ । ಸ್ಮಃ । ಭವಾಮಃ ॥

॥ ಪ್ರತಿಪದಾರ್ಥ ॥

**ಪೂಷನ್**— ಪೋಷಕನಾದ ಎಲೈ ಪೂಷದೇವನೇ । **ತವ**— ನಿನ್ನ । **ವ್ರತೇ**— ಪೂಜಾಕರ್ಮದಲ್ಲಿ ನಿರತರಾದ । **ವಯಂ**— ನಾವು । **ಕದಾ ಚನ**— ಯಾವಾಗಲೂ । **ನ ರಿಷ್ಯೇಮ**— ಹಿಂಸಿತರಾಗದೇ ಇರುವಂತಾಗಲಿ । **ಇಹ**— ಈ ಯಜ್ಞಕರ್ಮದಲ್ಲಿ । **ತೇ**— ನಿನ್ನ । **ಸ್ತೋತಾರಃ ಸ್ಮಸಿ**— ಸ್ತುತಿಕರ್ತರಾಗಿರುವೆವಲ್ಲವೆ ?

॥ ಭಾವಾರ್ಥ ॥

ಪೋಷಕನಾದ ಎಲೈ ಪೂಷದೇವನೇ, ನಿನ್ನ ಪೂಜಾಕರ್ಮದಲ್ಲಿ ನಿರತರಾದ ನಾವು ಯಾವಾಗಲೂ ಹಿಂಸೆಗೆ ಒಳಗಾಗದೇ ಇರುವಂತಾಗಲಿ. ಈ ಯಜ್ಞಕರ್ಮದಲ್ಲಿ ನಾವು ನಿನ್ನ ಸ್ತುತಿಕರ್ತರಾಗಿದ್ದೇವಲ್ಲವೆ?

English Translation.

May we never suffer detriment when engaged, Pushan, in your worship : we are at this time your adorers.

॥ ವಿಶೇಷವಿಷಯಗಳು ॥

ಚಾತುರ್ಮಾಸ್ಯವೆಂಬ ಯಾಗದಲ್ಲಿ ವೈಶ್ವದೇವಪರ್ವದಲ್ಲಿ ಪೂಷದೇವತೆಯನ್ನುದ್ದೇಶಿಸಿ ಮಾಡಿದ ಹವಿರ್ಹೋಮದಲ್ಲಿ **ಪೂಷನ್ ತವ** ಎಂಬ ಈ ಋಕ್ಕನ್ನು ಅನುವಾಕ್ಯಮಂತ್ರವನ್ನಾಗಿ ಪಠಿಸಬೇಕೆಂದು ಆಶ್ವಲಾಯನ ಶ್ರೌತಸೂತ್ರದ— **ವಾಮಮದ್ಯ ಸವಿತರ್ವಾಮಮು ಶ್ವಃ ಪೂಷನ್ತವ ವ್ರತೇ ವಯಂ** ಎಂಬ ಸೂತ್ರದಿಂದ (ಆ. ೨-೧೬) ವಿವೃತವಾಗಿರುವುದು.

॥ ಸಂಹಿತಾಪಾಠಃ ॥

## ಪರಿ ಪೂಷಾ ಪರಸ್ತಾದ್ಧಸ್ತಂ ದಧಾತು ದಕ್ಷಿಣಂ ।
## ಪುನರ್ನೋ ನಷ್ಟಮಾಜತು ॥ ೧೦ ॥

॥ ಪದಪಾಠಃ ॥

**ಪರಿ । ಪೂಷಾ । ಪರಸ್ತಾತ್ । ಹಸ್ತಂ । ದಧಾತು । ದಕ್ಷಿಣಂ ।**

**ಪುನಃ । ನಃ । ನಷ್ಟಂ । ಆ । ಅಜತು ॥ ೧೦ ॥**

॥ ಸಾಯಣಭಾಷ್ಯಂ ॥

**ಪೂಷೋ ಪೋಷಕೋ ದೇವಃ ಪರಸ್ತಾತ್ಪರಸ್ಮಿನ್ದೇಶೇ ಸುಸಂಚಾರಾದನ್ಯಸ್ಮಿನ್ ಚೋರವ್ಯಾಘ್ರಾದಿಭಿರುಷಿತೇ ದೇಶೇ ಗಚ್ಛತೋ ಗೋಧನಸ್ಯ ನಿವಾರಣಾಯ ಸ್ವಕೀಯಂ ದಕ್ಷಿಣಂ ಹಸ್ತಂ ಪರಿ ದಧಾತು । ಪರಿಧಾನಂ ನಿವಾರಕಂ ಕರೋತು । ನೋಽಸ್ಮದೀಯಂ ನಷ್ಟಂ ಚ ಗೋಧನಂ ಪುನರಾಜತು । ಆಗಚ್ಛತು । ಆಗಮಯತು ॥**

॥ ಪ್ರತಿಪದಾರ್ಥ ॥

**ಪೂಷಾ**—ಪೂಷದೇವನು । **ಪರಸ್ತಾತ್**—ವ್ಯಾಘ್ರಾದಿಗಳಿಂದ ಭರಿತವಾದ ಅರಣ್ಯಾದಿ ಪ್ರದೇಶಗಳಲ್ಲಿ ಸಂಚರಿಸುವ ನಮ್ಮ ಗೋವುಗಳ ಮೇಲೆ । **ದಕ್ಷಿಣಂ ಹಸ್ತಂ**—ತನ್ನ ಬಲಗೈಯನ್ನು । **ಪರಿ ದಧಾತು**—(ಆ ಗೋವುಗಳು ಅರಕ್ಷಿತವಾದ ಪ್ರದೇಶಕ್ಕೆ ಹೋಗದಿರುವಂತೆ) ಅವುಗಳ ಮೇಲಿಡಲಿ । **ನಃ**—ನಮ್ಮ । **ನಷ್ಟಂ**—ಅಪಹೃತವಾದ ಗೋಸಂಪತ್ತನ್ನು । **ಪುನಃ**—ತಿರುಗಿಯೂ । **ಆಜತು**—ನಮಗೆ ತಂದು ಸೇರಿಸಲಿ.

॥ ಭಾವಾರ್ಥ ॥

ಪೂಷದೇವನು ವ್ಯಾಘ್ರಾದಿಗಳಿಂದ ಭರಿತವಾದ ಅರಣ್ಯಾದಿಪ್ರದೇಶಗಳಲ್ಲಿ ಸಂಚರಿಸುವ ನಮ್ಮ ಗೋವುಗಳ ಮೇಲೆ ಅವು ಅರಕ್ಷಿತವಾದ ಪ್ರದೇಶಗಳಿಗೆ ಹೋಗುವದನ್ನು ತಡೆಯಲು ತನ್ನ ಬಲಗೈಯನ್ನಿಡಲಿ. ನಮ್ಮ ಅಪಹೃತವಾದ ಗೋಸಂಪತ್ತನ್ನು ತಿರುಗಿಯೂ ನಮಗೆ ತಂದು ಸೇರಿಸಲಿ.

English Translation.

May Pushan put forth his right hand (to restrain our cattle) from going astray : may he bring again to us that which has been lost.



# ಐವತ್ತೈದನೆಯ ಸೂಕ್ತವು

॥ ಸಾಯಣಭಾಷ್ಯಂ ॥

**ಏಹಿ ವಾಮಿತಿ ಷಡೃಚಂ ಷಷ್ಠಂ ಸೂಕ್ತಂ ಭರದ್ವಾಜಸ್ಯಾರ್ಷಂ ಗಾಯತ್ರಂ ಪೌಷ್ಣಂ। ಅನುಕ್ರಮ್ಯತೇ ಚ । ಏಹಿ ವಾಂ ಷಡಿತಿ ॥ ಗತೋ ವಿನಿಯೋಗಃ ॥**

ಅನುವಾದವು—**ಏಹಿ ವಾಂ** ಎಂಬ ಈ ಸೂಕ್ತವು ಐದನೆಯ ಅನುವಾಕದಲ್ಲಿ ಆರನೆಯ ಸೂಕ್ತವು. ಇದರಲ್ಲಿ ಆರು ಋಕ್ಕುಗಳಿರುವವು. ಈ ಸೂಕ್ತಕ್ಕೆ ಭರದ್ವಾಜನು ಋಷಿಯು; ಪೂಷನು ದೇವತೆಯು; ಗಾಯತ್ರೀ ಛಂದಸ್ಸು. ಅನುಕ್ರಮಣಿಕೆಯಲ್ಲಿ—**ಏಹಿ ವಾಂ ಷಟ್** ಎಂದು ಹೇಳಿರುವುದು. ವಿನಿಯೋಗವನ್ನು ಹಿಂದೆಯೇ ಹೇಳಲಾಗಿದೆ.

## ಸೂಕ್ತ—೫೫

ಮಂಡಲ—೬ ॥ ಅನುವಾಕ—೫ ॥ ಸೂಕ್ತ—೫೫ ॥
ಅಷ್ಟಕ—೪ ॥ ಅಧ್ಯಾಯ—೮ ॥ ವರ್ಗ—೨೧ ॥
॥ ಸೂಕ್ತದಲ್ಲಿರುವ ಋಕ್ಸಂಖ್ಯೆ—೬ ॥
॥ ಋಷಿಃ—ಭರದ್ವಾಜೋ ಬಾರ್ಹಸ್ಪತ್ಯಃ ॥
॥ ದೇವತಾ—ಪೂಷಾ ॥
॥ ಛಂದಃ—ಗಾಯತ್ರೀ ॥

॥ ಸಂಹಿತಾಪಾಠಃ ॥

ಏಹಿ ವಾಂ ವಿಮುಚೋ ನಪಾದಾಘೃಣೇ ಸಂ ಸಚಾವಹೈ ।

ರಥೀರ್ಋತಸ್ಯ ನೋ ಭವ ॥ ೧ ॥

॥ ಪದಪಾಠಃ ॥

ಆ । ಇಹಿ । ವಾಂ । ವಿऽಮುಚಃ । ನಪಾತ್ । ಆಘೃಣೇ । ಸಂ । ಸಚಾವಹೈ ।

ರಥೀಃ । ಋತಸ್ಯ । ನಃ । ಭವ ॥ ೧ ॥

॥ ಸಾಯಣಭಾಷ್ಯಂ ॥

ಹೇ ವಿಮುಚೋ ನಪಾತ್ । ವಿಮುಂಚತಿ ಸೃಷ್ಟಿಕಾಲೇ ಸ್ವಸಕಾಶಾತ್ಸರ್ವಾಃ ಪ್ರಜಾ ವಿಸೃಜತೀತಿ ವಿಮುಕ್ ಪ್ರಜಾಪತಿಃ । ತಸ್ಯ ಪುತ್ರಾಘೃಣ ಆಗತದೀಪ್ತೇ ಪೂಷನ್ ವಾಂ । ವಾತಿ ಗಚ್ಛತಿ ಸ್ತುತಿಂ ಪ್ರಾಪ್ನೋತೀತಿ ವಾ ಸ್ತೋತಾ ॥ ವಾ ಗತಿಗಂಧನಯೋರಿತ್ಯಸ್ಮಾದಾತೋ ಮನಿನ್ನಿತಿ ವಿಚ್ ॥ ವಾಂ ಗಂತಾರಂ ಸ್ತೋತಾರಂ ಮಾಮೇಹಿ । ಆಗಚ್ಛ । ಆವಾಂ ಚ ಸಂ ಸಚಾವಹೈ । ಸಮುಯೊವ । ಸಂಗಚ್ಛಾವಹೈ । ತಾದೃಶಸ್ತ್ವಂ ನೋऽಸ್ಮಾಕಮೃತಸ್ಯ ಯಜ್ಞಸ್ಯ ರಥೀ ರಂಹಿತಾ ನೇತಾ ಭವ । ತಥಾ ಸತಿ ತತ್ರತ್ಯಂ ಹವಿಸ್ತ್ವಯಾಪಿ ಲಭ್ಯತ ಇತ್ಯರ್ಥಃ ॥

॥ ಪ್ರತಿಪದಾರ್ಥ ॥

**ವಿಮುಚಃ**—ಸೃಷ್ಟಿಕಾಲದಲ್ಲಿ ಸಕಲ ಭೂತಗಳನ್ನೂ ಸೃಷ್ಟಿಸತಕ್ಕ ಪ್ರಜಾಪತಿಯ । **ನಪಾತ್**—ಪುತ್ರರೂಪನೂ । **ಆಘೃಣೇ**—ಅದ್ಭುತವಾದ ಪ್ರಕಾಶವುಳ್ಳವನೂ ಆದ ಎಲೈ ಪೂಷದೇವನೇ । **ವಾಂ**—ನಿನ್ನ ಸ್ತುತಿಕರ್ತನಾದ ನನ್ನ ಸಮೀಪಕ್ಕೆ । **ಏಹಿ**—ದಯಮಾಡು । (**ಆವಾಂ**—ನಾವಿಬ್ಬರೂ) । **ಸಂ ಸಚಾವಹೈ**—ಸೇರಿಕೊಂಡು ಒಟ್ಟಿಗಿರೋಣ । **ನಃ**—ನಮ್ಮ । **ಋತಸ್ಯ**—ಯಜ್ಞಕ್ಕೆ । **ರಥೀಃ**—ನೇತೃವಾಗಿ । **ಭವ**—ಆಗಿರು.

॥ ಭಾವಾರ್ಥ ॥

ತನ್ನಲ್ಲಿ ಅಡಗಿದ್ದ ಸಕಲ ಭೂತಗಳನ್ನೂ ಸೃಷ್ಟಿಕಾಲದಲ್ಲಿ ಪ್ರಕಾಶಕ್ಕೆ ಬಿಡತಕ್ಕ ಪ್ರಜಾಪತಿಗೆ ಪುತ್ರರೂಪನೂ, ಅದ್ಭುತವಾದ ಪ್ರಕಾಶವುಳ್ಳವನೂ ಆದ ಎಲೈ ಪೂಷದೇವನೇ, ನಿನ್ನ ಸ್ತುತಿಕರ್ತನಾದ ನನ್ನ ಸಮೀಪಕ್ಕೆ ದಯಮಾಡು. ನಾವಿಬ್ಬರೂ ಸೇರಿಕೊಂಡು ಒಟ್ಟಿಗಿರೋಣ. ನೀನು ನಮ್ಮ ಯಜ್ಞಕ್ಕೆ ನೇತೃವಾಗಿರು.

## English Translation.

Come illustrious grandson of Prajapati to (me, your) worshipper : let us be associated : become the conveyer of our sacrifice.

|| ವಿಶೇಷವಿಷಯಗಳು ||

**ಆಘೃಣೇ**—ಈ ಶಬ್ದಕ್ಕೆ ಯಾಸ್ಕರು—

**ಆಘೃಣಿರಾಗತಹೃಣಿಃ ಆಘೃಣೇ ಸಂ ಸಚಾವಹೈ । ಆಗತಹೃಣೇ ಸಂ ಸೇವಾವಹೈ ॥**

(ನಿ. ೫-೯)

ಎಂದು ನಿರ್ವಚನವನ್ನು ಹೇಳಿದಾರೆ. ಇದಕ್ಕೆ ದುರ್ಗಾಚಾರ್ಯರು ವ್ಯಾಖ್ಯಾನಮಾಡುವಾಗ **ಆಗತದೀಪ್ತಿರಾಗತ-ಕ್ರೋಧೋ ವಾಭಿಧೇಯಃ ।** ಜಾಜ್ವಲ್ಯಮಾನವಾದ ಪ್ರಕಾಶವುಳ್ಳವನು ಅಥವಾ ಕ್ರೋಧವುಳ್ಳವನು ಎಂದು ಅರ್ಥ ವಿವರಣೆಮಾಡಿದಾರೆ. **ಆಘೃಣಿ** ಶಬ್ದವು **ಹರಃ ಹೃಣಿಃ** ಮೊದಲಾದ ದೀಪ್ತಿವಾಚಕನಾಮಗಳಲ್ಲಿಯೂ, **ಹೇಳಃ ಹರಃ ಹೃಣಿಃ** ಮೊದಲಾದ ಕ್ರೋಧವಾಚಕನಾಮಗಳಲ್ಲಿಯೂ ಪಠಿತವಾಗಿದ್ದರೂ ಇಲ್ಲಿ **ಆಘೃಣಿ** ಶಬ್ದಕ್ಕೆ **ದೀಪ್ತಿ** ಎಂದರೆ ಪ್ರಕಾಶವುಳ್ಳವನು ಎಂಬರ್ಥವೇ ಸಮಂಜಸವಾಗಿರುವುದು.

॥ ಸಂಹಿತಾಪಾಠಃ ॥

ರಥೀತಮಂ ಕಪರ್ದಿನಮೀಶಾನಂ ರಾಧಸೋ ಮಹಃ ।

ರಾಯಃ ಸಖಾಯಮೀಮಹೇ ॥ ೨ ॥

॥ ಪದಪಾಠಃ ॥

ರಥಿಽತಮಂ । ಕಪರ್ದಿನಂ । ಈಶಾನಂ । ರಾಧಸಃ । ಮಹಃ ।

ರಾಯಃ । ಸಖಾಯಂ । ಈಮಹೇ ॥ ೨ ॥

॥ ಸಾಯಣಭಾಷ್ಯಂ ॥

**ರಥೀತಮಮತಿಶಯೇನ ರಥಿನಂ । ಯದ್ವಾ । ಅತಿಶಯೇನ ರಂಹಿತಾರಂ ನೇತಾರಂ ಕಪರ್ದಿನಂ । ಕಪರ್ದಶ್ಚೂಡಾ । ತದ್ವಂತಂ । ರಾಧ್ನೋತ್ಯನೇನೇತಿ ರಾಧೋ ಧನಂ । ಮಹೋ ಮಹತೋ ರಾಧಸೋ ಧನಸ್ಯೇಶಾನಂ ಸ್ವಾಮಿನಂ ಸಖಾಯಮಸ್ಮಾಕಂ ಮಿತ್ರಮೇವಂವಿಧಂ ಪೂಷಣಂ ರಾಯೋ ಧನಾನೀಮಹೇ । ಯಾಚಾಮಹೇ ॥**

॥ ಪ್ರತಿಪದಾರ್ಥ ॥

**ರಥೀತಮಂ**—ಅತ್ಯತಿಶಯವಾದ ನೇತೃವಾದವನೂ । **ಕಪರ್ದಿನಂ**—ಆಕರ್ಷಕವಾದ ಶಿಖೆಯುಳ್ಳವನೂ । **ಮಹಃ**—ಮಹತ್ತಾದ । **ರಾಧಸಃ**—ಧನಕ್ಕೆ । **ಈಶಾನಂ**—ಒಡೆಯನೂ । **ಸಖಾಯಂ**—ನಮಗೆ ಮಿತ್ರ ಭೂತನೂ ಆದ ಪೂಷದೇವನನ್ನು । **ರಾಯಃ**—ಧನಾರ್ಥವಾಗಿ । **ಈಮಹೇ**—ಯಾಚಿಸುತ್ತೇವೆ.

॥ ಭಾವಾರ್ಥ ॥

ಅತ್ಯತಿಶಯವಾದ ನೇತೃವಾದವನೂ, ಆಕರ್ಷಕವಾದ ಶಿಖೆಯುಳ್ಳವನೂ ಮಹತ್ತಾದ ಧನಕ್ಕೆ ಒಡೆಯನೂ ನಮಗೆ ಮಿತ್ರಭೂತನೂ ಆದ ಪೂಷದೇವನನ್ನು ನಾವು ಧನಾರ್ಥವಾಗಿ ಯಾಚಿಸುತ್ತೇವೆ.

## English Translation.

We solicit riches of our friend, (Pushan), the chief of charioteers, the wearer of a braid (of hair), the lord of infinite wealth.

॥ ಸಂಹಿತಾಪಾಠಃ ॥

ರಾಯೋ ಧಾರಾಸ್ಯಾಘೃಣೇ ವಸೋ ರಾಶಿರಜಾಶ್ವ ।
ಧೀವತೋಧೀವತಃ ಸಖಾ ॥ ೩ ॥

॥ ಪದಪಾಠಃ ॥

ರಾಯಃ । ಧಾರಾ । ಅಸಿ । ಆಘೃಣೇ । ವಸೋಃ । ರಾಶಿಃ । ಅಜऽಅಶ್ವ ।
ಧೀವತಃऽಧೀವತಃ । ಸಖಾ ॥ ೩ ॥

॥ ಸಾಯಣಭಾಷ್ಯಂ ॥

ಹೇ ಆಘೃಣ ಆಗತದೀಪ್ತೇ ಪೂಷನ್ ರಾಯೋ ಧನಸ್ಯ ಧಾರಾಸಿ । ಪ್ರವಾಹೋ ಭವಸಿ । ಸ್ತೋತೃಭ್ಯೋ ಬಹು ಧನಂ ನೈರಂತರ್ಯೇಣ ಪ್ರಯಚ್ಛಸೀತ್ಯರ್ಥಃ । ಅಜಾಶ್ವ । ಅಜಾಶ್ಛಾಗಾ ಏವಾಶ್ವಾ ಅಶ್ವಕಾರ್ಯಾಪನ್ನಾ ಯಸ್ಯ ತಾದೃಶ ಪೂಷನ್ ವಸೋರ್ವಸುನೋ ಧನಸ್ಯ ರಾಶಿಃ ಸಂಘಶ್ಚ ಭವಸಿ । ಧನಸಂಘಶ್ಚ ತ್ವಯ್ಯೇವ ನಿವಸತೀತ್ಯರ್ಥಃ । ಧೀವತೋ ಧೀವತಃ ಸರ್ವಸ್ಯ ಸ್ತೋತ್ರವತಃ ಪುರುಷಸ್ಯ ಸಖಾ ಮಿತ್ರಭೂತಶ್ಚ ಭವಸಿ ॥

॥ ಪ್ರತಿಪದಾರ್ಥ ॥

**ಆಘೃಣೇ**—ಪ್ರಭಾಯುತನಾದ ಎಲೈ ಪೂಷದೇವನೇ । **ರಾಯಃ**—ಧನಕ್ಕೆಲ್ಲಾ । **ಧಾರಾ ಅಸಿ**—ನೀನೇ ಪ್ರವಾಹರೂಪನಾಗಿದ್ದೀಯೆ । **ಅಜಾಶ್ವ**—ಅಜರೂಪವುಳ್ಳ ಅಶ್ವವುಳ್ಳ ಎಲೈ ಪೂಷನೇ । **ವಸೋಃ**—ಧನಕ್ಕೆ । **ರಾಶಿಃ**—ರಾಶಿರೂಪನಾಗಿದ್ದೀಯೆ । **ಧೀವತೋಧೀವತಃ**—ಸಕಲ ವಿಧವಾದ ಸ್ತೋತೃಗಳಿಗೂ । **ಸಖಾ**—ಮಿತ್ರನಾಗಿದ್ದೀಯೆ.

॥ ಭಾವಾರ್ಥ ॥

ಪ್ರಭಾಯುತನಾದ ಎಲೈ ಪೂಷದೇವನೇ, ಧನಕ್ಕೆಲ್ಲಾ ನೀನೇ ಪ್ರವಾಹರೂಪನಾಗಿದ್ದೀಯೆ. . ಅಜರೂಪವಾದ ಅಶ್ವವುಳ್ಳ ಎಲೈ ಪೂಷನೇ, ಧನಕ್ಕೆಲ್ಲಾ ನೀನೇ ರಾಶಿರೂಪನಾಗಿದ್ದೀಯೆ. ಸಕಲ ವಿಧವಾದ ಸ್ತೋತೃಗಳಿಗೂ ನೀನೇ ಮಿತ್ರನಾಗಿದ್ದೀಯೆ.

## English Translation.

Illustrious Pushan, you are a torrent of riches: you, who have a goat for your steed, are a heap of wealth; the friend of every worshipper.

॥ ಸಂಹಿತಾಪಾಠಃ ॥

ಪೂಷಣಂ ನ್ವ೧ಜಾಶ್ವಮುಪ ಸ್ತೋಷಾಮ ವಾಜಿನಂ ।

ಸ್ವಸುರ್ಯೋ ಜಾರ ಉಚ್ಯತೇ ॥ ೪ ॥

॥ ಪದಪಾಠಃ ॥

ಪೂಷಣಂ । ನು । ಅಜಽಅಶ್ವಂ । ಉಪ । ಸ್ತೋಷಾಮ । ವಾಜಿನಂ ।

ಸ್ವಸುಃ । ಯಃ । ಜಾರಃ । ಉಚ್ಯತೇ ॥ ೪ ॥

॥ ಸಾಯಣಭಾಷ್ಯಂ ॥

**ಅಜಾಶ್ವಂ ಛಾಗವಾಹನಂ ವಾಜಿನಮನ್ನವಂತಂ ಬಲವಂತಂ ವಾ ಪೂಷಣಂ ಪೋಷಕಂ ದೇವಂ ನು ಅದ್ಯೋಪ ಸ್ತೋಷಾಮ । ಉಪಸ್ತುವಾಮ । ಯಃ ಪೂಷಾ ಸ್ವಸುರುಷಸೋ ಜಾರ ಉಪಪತಿರಿತ್ಯುಚ್ಯತೇ ತಂ ಪೂಷಣಮಿತ್ಯನ್ವಯಃ ॥**

॥ ಪ್ರತಿಪದಾರ್ಥ ॥

**ಯಃ**—ಯಾವ ಪೂಷದೇವನು । **ಸ್ವಸುಃ**—ತನ್ನ ಸಹೋದರಿಯಾದ ಉಷಸ್ಸಿಗೆ । **ಜಾರಃ**—ಉಪಪತಿ ಯೆಂದು । **ಉಚ್ಯತೇ**—ಪ್ರಸಿದ್ಧನಾಗಿದ್ದಾನೆಯೋ ಅಂತಹ । **ಅಜಾಶ್ವಂ**—ಅಜರೂಪವಾದ ವಾಹನವುಳ್ಳವನೂ । **ವಾಜಿನಂ**—ಶಕ್ತಿಯುತನೂ । **ಪೂಷಣಂ**—ಪೋಷಕನೂ ಆದ ಪೂಷದೇವನನ್ನು । **ನು**—ಈಗ । **ಉಪ ಸ್ತೋಷಾಮ**—ಸ್ತುತಿಸಿ ಪೂಜಿಸೋಣ.

॥ ಭಾವಾರ್ಥ ॥

ಯಾವ ಪೂಷದೇವನು ತನ್ನ ಸಹೋದರಿಯಾದ ಉಷಸ್ಸಿಗೆ ಉಪಪತಿಯೆಂದು ಪ್ರಸಿದ್ಧನಾಗಿದ್ದಾನೆಯೋ ಅಂತಹ ಅಜರೂಪವಾದ ವಾಹನವುಳ್ಳವನೂ, ಶಕ್ತಿಯುತನೂ, ಪೋಷಕನೂ ಆದ ಪೂಷದೇವನನ್ನು ಈಗ ಸ್ತುತಿಸಿ ಪೂಜಿಸೋಣ.

## English Translation.

We glorify Pushan, the rider of the goat, the giver of food, him who is called the gallant of his sister.

॥ ಸಂಹಿತಾಪಾಠಃ ॥

ಮಾತುರ್ದಿಧಿಷುಮಬ್ರವಂ ಸ್ವಸುರ್ಜಾರಃ ಶೃಣೋತು ನಃ ।

ಭ್ರಾತೇಂದ್ರಸ್ಯ ಸಖಾ ಮಮ ॥ ೫ ॥

॥ ಪದಪಾಠಃ ॥

ಮಾತುಃ । ದಿಧಿಷುಂ । ಅಬ್ರವಂ । ಸ್ವಸುಃ । ಜಾರಃ । ಶೃಣೋತು । ನಃ ।
ಭ್ರಾತಾ । ಇಂದ್ರಸ್ಯ । ಸಖಾ । ಮಮ ॥ ೫ ॥

॥ ಸಾಯಣಭಾಷ್ಯಂ ॥

**ಮಾತುರ್ನಿರ್ಮಾತ್ರ್ಯಾ ರಾತ್ರೇರ್ದಿಧಿಷುಂ ಪತಿಂ ಪೂಷಣಮಬ್ರವಂ । ಸ್ತೌಮಿ । ಸ್ವಸುರುಷಸೋ ಜಾರಶ್ಚ ಪೂಷಾ ನೋಽಸ್ಮಾಕಂ ಸ್ತೋತ್ರಾಣಿ ಶೃಣೋತು । ಇಂದ್ರಸ್ಯ ಭ್ರಾತಾ ಸಹಜಾತಃ ಪೂಷಾ ಮಮ ಸ್ತೋತುಃ ಸಖಾ ಮಿತ್ರಭೂತೋಽಸ್ತು ॥**

॥ ಪ್ರತಿಪದಾರ್ಥ ॥

**ಮಾತುಃ**—ಜಗನ್ನಿರ್ಮಾತ್ರಿಯಾದ ರಾತ್ರಿಗೆ । **ದಿಧಿಷುಂ**—ಪತಿಯಾದ ಪೂಷನನ್ನು । **ಅಬ್ರವಂ**—ಸ್ತುತಿಸುತ್ತೇನೆ । **ಸ್ವಸುಃ**—ಸಹೋದರಿಯಾದ ಉಷಸ್ಸಿಗೆ । **ಜಾರಃ**—ಉಪಪತಿಯಾದ ಪೂಷನು । **ನಃ**—ನಮ್ಮ ಸ್ತೋತ್ರಗಳನ್ನು । **ಶೃಣೋತು**—ಕೇಳಲಿ । **ಇಂದ್ರಸ್ಯ**—ಇಂದ್ರನಿಗೆ । **ಭ್ರಾತಾ**—ಸಹೋದರನಾದ ಪೂಷನು । **ಮಮ**—ಸ್ತೋತೃವಾದ ನನಗೆ । **ಸಖಾ**—ಮಿತ್ರನಾಗಿರಲಿ.

॥ ಭಾವಾರ್ಥ ॥

ಜಗನ್ನಿರ್ಮಾತ್ರಿಯೊದ ರಾತ್ರಿಗೆ ಪತಿಯಾದ ಪೂಷನನ್ನು ನಾನು ಸ್ತುತಿಸುತ್ತೇನೆ. ಸಹೋದರಿಯಾದ ಉಷಸ್ಸಿಗೆ ಉಪಪತಿಯಾದ ಪೂಷನು ನಮ್ಮ ಸ್ತೋತ್ರಗಳನ್ನು ಕೇಳಲಿ. ಇಂದ್ರನಿಗೆ ಸಹೋದರನಾದ ಪೂಷನು ಸ್ತೋತೃವಾದ ನನಗೆ ಮಿತ್ರನಾಗಿರಲಿ.

English Translation.

I glorify Pushan, the husband of his mother: may the gallant of his sister hear us; may the brother of Indra be our friend.

॥ ಸಂಹಿತಾಪಾಠಃ ॥

ಆಜಾಸಃ ಪೂಷಣಂ ರಥೇ ನಿಶೃಂಭಾಸ್ತೇ ಜನಶ್ರಿಯಂ ।
ದೇವಂ ವಹಂತು ಬಿಭ್ರತಃ ॥ ೬ ॥

॥ ಪದಪಾಠಃ ॥

ಆ । ಅಜಾಸಃ । ಪೂಷಣಂ । ರಥೇ । ನಿಽಶೃಂಭಾಃ । ತೇ । ಜನಽಶ್ರಿಯಂ ।
ದೇವಂ । ವಹಂತು । ಬಿಭ್ರತಃ ॥ ೬ ॥

॥ ಸಾಯಣಭಾಷ್ಯಂ ॥

**ಅಜಾಸೋಽಜಾಶ್ಛಾಗಾ ನಿಶೃಂಭಾ ನಿಶ್ರಥ್ಯ ಸಂಬಧ್ಯ ಹರ್ತಾರಸ್ತೇ ಪೂಷ್ಣೋ ವಾಹನತಯಾ ಪ್ರಸಿದ್ಧಾಶ್ಛಾಗಾ ಜನಶ್ರಿಯಂ। ಜನಂ ಸ್ತೋತೃಸಂಘಂ ಶ್ರಯತಿ ಗಚ್ಛತೀತಿ ಜನಶ್ರೀಃ। ತಂ ಪೂಷಣಂ ದೇವಂ ರಥೇ ಬಿಭ್ರತೋ ಧಾರಯಂತ ಆ ವಹಂತು। ಆನಯಂತು ॥**

। ಪ್ರತಿಪದಾರ್ಥ ।

**ಅಜಾಸಃ**—ಅಜರೂಪವಾದವೂ। **ನಿಶೃಂಭಾಃ**—ಒಟ್ಟಿಗೆ ರಥವನ್ನು ಎಳೆಯುವುವೂ ಆದ। **ತೇ**—ಪೂಷನ ವಾಹನಗಳು। **ಜನಶ್ರಿಯಂ**—ಸ್ತೋತೃವಿನ ಸಮೀಪಕ್ಕೆ ಬರತಕ್ಕ। **ಪೂಷಣಂ ದೇವಂ**—ಪೂಷದೇವನನ್ನು। **ರಥೇ**—ರಥದಲ್ಲಿ। **ಬಿಭ್ರತಃ**—ವಹಿಸಿಕೊಂಡು। **ಆ ವಹಂತು**—ಕರೆತರಲಿ.

। ಭಾವಾರ್ಥ ।

ಅಜರೂಪವಾದವೂ, ಒಟ್ಟಿಗೆ ರಥವನ್ನು ಎಳೆಯುವುವೂ ಆದ ಪೂಷನ ವಾಹನಗಳು ಸ್ತೋತೃವಿನ ಸಮೀಪಕ್ಕೆ ಬರತಕ್ಕ ಪೂಷದೇವನನ್ನು ರಥದಲ್ಲಿ ಕುಳ್ಳಿರಿಸಿ ವಹಿಸಿಕೊಂಡು ಬರಲಿ.

English Translation.

May the harnessed goats, drawing the deity in his car bring hither Pushan, the benefactor of man.



# ಐವತ್ತಾರನೆಯ ಸೂಕ್ತವು

। ಸಾಯಣಭಾಷ್ಯಂ ।

**ಯ ಏನಮಿತಿ ಷಳೃಚಂ ಸಪ್ತಮಂ ಸೂಕ್ತಂ ಭರದ್ವಾಜಸ್ಯಾರ್ಷಂ ಪೌಷ್ಣಂ। ಅಂತ್ಯಾನುಷ್ಟುಬಾದೌ ಪಂಚ ಗಾಯತ್ರ್ಯಃ। ತಥಾ ಚಾನುಕ್ರಾಂತಂ। ಯ ಏನಮಂತ್ಯಾನುಷ್ಟುಬಿತಿ ॥ ಗತೋ ವಿನಿಯೋಗಃ ॥**

ಅನುವಾದವು—**ಯ ಏನಂ** ಎಂಬ ಈ ಸೂಕ್ತವು ಐದನೆಯ ಅನುವಾಕದಲ್ಲಿ ಏಳನೆಯ ಸೂಕ್ತವು. ಇದರಲ್ಲಿ ಆರು ಋಕ್ಕುಗಳಿರುವವು. ಈ ಸೂಕ್ತಕ್ಕೆ ಭರದ್ವಾಜನು ಋಷಿಯು; ಪೂಷನು ದೇವತೆಯು; ಈ ಸೂಕ್ತದ ಕೊನೆಯ ಋಕ್ಕು ಅನುಷ್ಟುಪ್‌ಛಂದಸ್ಕವು. ಸೂಕ್ತದ ಮೊದಲಿನ ಐದು ಋಕ್ಕುಗಳು ಗಾಯತ್ರೀಛಂದಸ್ಕವು. ಅನುಕ್ರಮಣಿಕೆಯಲ್ಲಿ—**ಯ ಏನಮಂತ್ಯಾನುಷ್ಟುಪ್** ಎಂದು ಹೇಳಿರುವುದು. ಸೂಕ್ತವಿನಿಯೋಗವನ್ನು ಹಿಂದೆಯೇ ಹೇಳಲಾಗಿದೆ.

## ಸೂಕ್ತ—೫೬

ಮಂಡಲ—೬ ‖ ಅನುವಾಕ—೫ ‖ ಸೂಕ್ತ—೫೬ ‖
ಅಷ್ಟಕ—೪ ‖ ಅಧ್ಯಾಯ—೮ ‖ ವರ್ಗ—೨೨ ‖
‖ ಸೂಕ್ತದಲ್ಲಿರುವ ಋಕ್ಸಂಖ್ಯೆ—೬ ‖
‖ ಋಷಿಃ—ಭರದ್ವಾಜೋ ಬಾರ್ಹಸ್ಪತ್ಯಃ ‖
‖ ದೇವತಾ—ಪೂಷಾ ‖
‖ ಛಂದಃ—೧-೫. ಗಾಯತ್ರೀ । ೬. ಅನುಷ್ಟುಪ್ ‖

‖ ಸಂಹಿತಾಪಾಠಃ ‖

ಯ ಏನಮಾದಿದೇಶತಿ ಕರಂಭಾದಿತಿ ಪೂಷಣಂ ।
ನ ತೇನ ದೇವ ಆದಿಶೇ ‖ ೧ ‖

‖ ಪದಪಾಠಃ ‖

ಯಃ । ಏನಂ । ಆऽದಿದೇಶತಿ । ಕರಂಭऽಅತ್ । ಇತಿ । ಪೂಷಣಂ ।
ನ । ತೇನ । ದೇವಃ । ಆऽದಿಶೇ ‖ ೧ ‖

‖ ಸಾಯಣಭಾಷ್ಯಂ ‖

**ಯಃ ಸ್ತೋತೈನಂ ಪೂಷಣಂ ಪೋಷಕಂ ಕರಂಭಾತ್ಕರಂಭಾಣಾಂ ಘೃತಮಿಶ್ರಾಣಾಂ ಯವಸಕ್ತೂನಾಮತ್ತೇತ್ಯಾದಿದೇಶತಿ ಅಭಿಷ್ಟೌತಿ ತೇನ ಪುರುಷೇಣಾನ್ಯೋ ದೇವೋ ನಾದಿಶೇ। ಆದೇಷ್ಟವ್ಯಃ ಸ್ತೋತವ್ಯೋ ನ ಭವತಿ। ಪೂಷ್ಣ ಏವ ಸರ್ವಸ್ಯಾಭಿಮತಸ್ಯ ಧನಸ್ಯ ಲಾಭಾತ್ ದೇವತಾಂತರಂ ನ ಸ್ತೌತೀತ್ಯರ್ಥಃ ‖**

‖ ಪ್ರತಿಪದಾರ್ಥ ‖

**ಯಃ**—ಯಾವ ಸ್ತುತಿಕರ್ತನು । **ಏನಂ ಪೂಷಣಂ**—ಈ ಪೂಷದೇವನನ್ನುದ್ದೇಶಿಸಿ । **ಕರಂಭಾತ್**—ಘೃತಮಿಶ್ರವಾದ ಯವಸವನ್ನು ಭಕ್ಷಿಸುವವನು । **ಇತಿ**—ಎಂದು । **ಆದಿದೇಶತಿ**—ಪ್ರಶಂಸಿಸಿ ಪ್ರಕಟಿಸುವನೋ । **ತೇನ**—ಅದೇ ಸ್ತುತಿಕರ್ತನಿಂದ । **ದೇವಃ**—ಪೂಷನಲ್ಲದೇ ಬೇರೆ ಇನ್ನಾವ ದೇವತೆಯೂ । **ನ ಆದಿಶೇ**—ಖಂಡಿತವಾಗಿಯೂ ನಿರ್ದೇಶಿಸಲ್ಪಡುವುದಿಲ್ಲ.

‖ ಭಾವಾರ್ಥ ‖

ಯಾವ ಸ್ತುತಿಕರ್ತನು ಈ ಪೂಷದೇವನನ್ನುದ್ದೇಶಿಸಿ "**ಈ ದೇವನೇ ಕರಂಭಭಕ್ಷಕನು**" ಎಂದು ಪ್ರಶಂಸಿಸಿ ಪ್ರಕಟಿಸುವನೋ ಆ ಸ್ತುತಿಕರ್ತನಿಂದ ಪೂಷನಲ್ಲದೇ ಬೇರೆ ಇನ್ನಾವ ದೇವತೆಯೂ ನಿರ್ದೇಶಿಸಲ್ಪಡುವುದಿಲ್ಲ.

English Translation.

No (other) deity is indicated by him who declares the offering of mixed meal and butter to be intended for Pushan.

॥ ಸಂಹಿತಾಪಾಠಃ ॥

ಉತ ಘಾ ಸ ರಥೀತಮಃ ಸಖ್ಯಾ ಸತ್ಪತಿರ್ಯುಜಾ ।

ಇಂದ್ರೋ ವೃತ್ರಾಣಿ ಜಿಘ್ನತೇ ॥ ೨ ॥

॥ ಪದಪಾಠಃ ॥

ಉತ । ಘ । ಸಃ । ರಥಿಽತಮಃ । ಸಖ್ಯಾ । ಸತ್ಽಪತಿಃ । ಯುಜಾ ।

ಇಂದ್ರಃ । ವೃತ್ರಾಣಿ । ಜಿಘ್ನತೇ ॥ ೨ ॥

॥ ಸಾಯಣಭಾಷ್ಯಂ ॥

**ಉತ ಘಾಪಿ ಚ ಸ ಯಃ ಶತ್ರೂಣಾಂ ಹಂತೃತ್ವೇನ ಪ್ರಸಿದ್ಧಸ್ತಾದೃಶೋ ರಥೀತಮೋಽತಿಶಯೇನ ರಥೀ ಮಹಾರಥಃ ಸತ್ಪತಿಃ ಸತಾಂ ಪಾಲಯಿತೈವಂಗುಣ ಇಂದ್ರಃ ಸಖ್ಯಾ ಮಿತ್ರಭೂತೇನ ಪೂಷ್ಣಾ ಯುಜಾ ಸಹಾಯಭೂತೇನ ಯುಕ್ತಃ ಸನ್ ವೃತ್ರಾಣಿ ಶತ್ರೂನ್ ಜಿಘ್ನತೇ । ಹಂತಿ । ಇಂದ್ರಸ್ಯಾಪ್ಯಯಮೇವ ಸಾಹಾಯ್ಯಕಾರೀತ್ಯರ್ಥಃ ॥**

॥ ಪ್ರತಿಪದಾರ್ಥ ॥

**ಉತ ಘ**—ಮತ್ತು । **ಸಃ**—ಶತ್ರುಸಂಹಾರಕನೆಂದು ಪ್ರಸಿದ್ಧನೂ । **ರಥೀತಮಃ**—ರಥಿಕರಲ್ಲಿ ಅತ್ಯಂತ ಶ್ರೇಷ್ಠನಾದವನೂ । **ಸತ್ಪತಿಃ**—ಸಜ್ಜನರ ರಕ್ಷಕನೂ ಆದ । **ಇಂದ್ರಃ**—ಇಂದ್ರನು, । **ಸಖ್ಯಾ**—ತನಗೆ ಸ್ನೇಹಿತನೂ, । **ಯುಜಾ**—ಯುದ್ಧಾದಿಗಳಲ್ಲಿ ತನಗೆ ಸಹಾಯವಮಾಡುವವನೂ ಆದ ಪೂಷನೊಂದಿಗೆ ಯುಕ್ತನಾಗಿ । **ವೃತ್ರಾಣಿ**—ಶತ್ರುಗಳನ್ನು । **ಜಿಘ್ನತೇ**—ಕೊಲ್ಲುತ್ತಾನೆ ।

॥ ಭಾವಾರ್ಥ ॥

ಮತ್ತು ಶತ್ರುನಾಶಕನೆಂದು ಪ್ರಸಿದ್ಧನೂ, ಮಹಾರಥನೂ, ಸಜ್ಜನರ ರಕ್ಷಕನೂ ಆದ ಇಂದ್ರನು, ತನಗೆ ಸ್ನೇಹಿತನೂ, ಯುದ್ಧಾದಿಗಳಲ್ಲಿ ತನ್ನೊಡನಿದ್ದು ಸಹಾಯವಮಾಡುವವನೂ ಆದ ಪೂಷದೇವನೊಂದಿಗೆ ಕೂಡಿಕೊಂಡು ಶತ್ರುಗಳನ್ನು ಕೊಲ್ಲುತ್ತಾನೆ.

English Translation.

He, the chief of charioteers, the protector of the virtuous, Indra, destroys his foes, with his friend Pushan for his ally.

|| ಸಂಹಿತಾಪಾಠಃ ||

ಉತಾದಃ ಪರುಷೇ ಗವಿ ಸೂರಶ್ಚಕ್ರಂ ಹಿರಣ್ಯಯಂ ।
ನ್ಯೈರಯದ್ರಥೀತಮಃ ॥ ೩ ॥

|| ಪದಪಾಠಃ ||

ಉತ । ಅದಃ । ಪರುಷೇ । ಗವಿ । ಸೂರಃ । ಚಕ್ರಂ । ಹಿರಣ್ಯಯಂ ॥
ನಿ । ಐರಯತ್ । ರಥಿऽತಮಃ ॥ ೩ ॥

|| ಸಾಯಣಭಾಷ್ಯಂ ||

ಉತಾಪಿ ಚ ಸೂರಃ ಪ್ರೇರಕೋ ರಥೀತಮೋऽತಿಶಯೇನ ರಥೀ ನೇತೃತಮೋ ವಾ ಪೂಷಾ ಪರುಷೇ ಪರುಷ್ಮತಿ ಪರ್ವವತಿ ಭಾಸ್ವತಿ ವಾ ಗವಿ । ಗಚ್ಛತೀತಿ ಗೌರಾದಿತ್ಯಃ । ತಸ್ಮಿನ್ ಹಿರಣ್ಯಯಂ ಹಿರಣ್ಮಯಂ ಸುವರ್ಣನಿರ್ಮಿತಮದಸ್ತದ್ರಥಸ್ಯ ಚಕ್ರಂ ನ್ಯೈರಯತ್ । ನಿತರಾಂ ಪ್ರೇರಯತಿ ಸ್ಮ ॥

|| ಪ್ರತಿಪದಾರ್ಥ ||

**ಉತ**—ಮತ್ತು । **ಸೂರಃ**—ಪ್ರೇರಕನೂ । **ರಥೀತಮಃ**—ಅತಿಶಯವಾದ ನೇತೃವೂ ಆದ ಪೂಷದೇವನು । **ಪರುಷೇ**—ಪ್ರಭಾಯುತನಾದ । **ಗವಿ**—ಆದಿತ್ಯನಲ್ಲಿ । **ಹಿರಣ್ಯಯಂ**—ಸುವರ್ಣ ನಿರ್ಮಿತವಾದ । **ಅದಃ ಚಕ್ರಂ**—ರಥದ ಚಕ್ರವನ್ನು । **ನ್ಯೈರಯತ್**—ಯೋಜಿಸುತ್ತಾನೆ.

। ಭಾವಾರ್ಥ ||

ಸರ್ವಪ್ರೇರಕನೂ, ಅತಿಶಯವಾದ ನೇತೃವೂ ಆದ ಪೂಷದೇವನು ಪ್ರಭಾಯುತನಾದ ಆದಿತ್ಯನಲ್ಲಿ ಸುವರ್ಣ ನಿರ್ಮಿತವಾದ ರಥ ಚಕ್ರವನ್ನು ಯೋಜಿಸುತ್ತಾನೆ.

## English Translation.

He, the impeller, the chief of charioteers, (Pushan), ever urges on that golden wheel (of his car) for the radiant sun.

|| ವಿಶೇಷವಿಷಯಗಳು ||

**ಗವಿ**—ಆದಿತ್ಯನಲ್ಲಿ, ಗೋಶಬ್ದಕ್ಕೆ ಆದಿತ್ಯನೆಂಬ ಅರ್ಥವಿರುವ ವಿಷಯದಲ್ಲಿ ಯಾಸ್ಕರು—

**ಆದಿತ್ಯೋऽಪಿ ಗೌರುಚ್ಯತೇ । ಉತಾದಃ ಪರುಷೇ ಗವಿ । ಪರ್ವವತಿ ಭಾಸ್ವತೀತ್ಯೌಪಮನ್ಯವಃ ॥**

(ನಿ. ೨-೬)

ಎಂದು ನಿರ್ವಚನವನ್ನು ಹೇಳಿದಾರೆ. ಆದಿತ್ಯನಿಗೂ ಗೌಃ ಎಂದು ಹೆಸರು. ಏಕೆಂದರೆ **ಗಮನಶೀಲೇ ಮುಹೂರ್ತಮಪ್ಯನವಸ್ಥಾಯಿನಿ** ಎಂದರೆ ಒಂದು ಕ್ಷಣಕಾಲವೂ ಸಹ ನಿಂತಲ್ಲಿ ನಿಲ್ಲದೆ ಯಾವಾಗಲೂ ಸಂಚಾರ ಸ್ವಭಾವವುಳ್ಳವನಾದ್ದರಿಂದ **ಗವಿ** ಎಂದರೆ ಸೂರ್ಯನಲ್ಲಿ ಎಂದರ್ಥವು. ತೇಜಸ್ಸಮೂಹದಿಂದ ಬೆಳಗುತ್ತಿರುವವನಾದ್ದರಿಂದ ಗೌಃ ಎಂದರೆ (ಗೌಃ ಎಂದರೆ ರಶ್ಮಿಯೆಂದೂ ಅರ್ಥವು) ಸೂರ್ಯನು ಅಥವಾ ಆದಿತ್ಯನೆಂದು ಔಪಮನ್ಯವೆಂಬ ಆಚಾರ್ಯರ ಮತವೆಂದು ಯಾಸ್ಕರು ವಿವರಿಸಿರುವರು.

॥ ಸಂಹಿತಾಪಾಠಃ ॥

ಯದದ್ಯ ತ್ವಾ ಪುರುಷ್ಟುತ ಬ್ರವಾಮ ದಸ್ರ ಮಂತುಮಃ ।
ತತ್ಸು ನೋ ಮನ್ಮ ಸಾಧಯ ॥ ೪ ॥

॥ ಪದಪಾಠಃ ॥

**ಯತ್ । ಅದ್ಯ । ತ್ವಾ । ಪುರುऽಸ್ತುತ । ಬ್ರವಾಮ । ದಸ್ರ । ಮಂತುऽಮಃ ।**
**ತತ್ । ಸು । ನಃ । ಮನ್ಮ । ಸಾಧಯ ॥ ೪ ॥**

॥ ಸಾಯಣಭಾಷ್ಯಂ ॥

**ಹೇ ಪುರುಷ್ಟುತ ಬಹುಭಿರ್ಯಜಮಾನೈಃ ಸ್ತುತ ದಸ್ರ ದರ್ಶನೀಯ ಮಂತುಮೋ ಜ್ಞಾನವಾನ್ ಪೂಷನ್ ಅದ್ಯೇದಾನೀಂ ಯದುದ್ದಿಶ್ಯ ತ್ವಾ ತ್ವಾಂ ಬ್ರವಾಮ ಸ್ತವಾಮ ನೋऽಸ್ಮಾಕಂ ಮನ್ಮ ಮನನೀಯಂ ತದ್ಧನಂ ಸು ಸಾಧಯ ಉತ್ಪಾದಯ ॥**

॥ ಪ್ರತಿಪದಾರ್ಥ ॥

**ಪುರುಷ್ಟುತ**—ಅನೇಕ ಯಜಮಾನರಿಂದ ಸ್ತುತಿಸಲ್ಪಡತಕ್ಕವನೂ । **ದಸ್ರ**—ಆಕರ್ಷಕವಾದ ರೂಪವುಳ್ಳವನೂ । **ಮಂತುಮಃ**—ಅಧಿಕವಾದ ಜ್ಞಾನವುಳ್ಳವನೂ ಆದ ಎಲೈ ಪೂಷದೇವನೇ । **ಅದ್ಯ**—ಈ ಯಾಗಕಾಲದಲ್ಲಿ । **ಯತ್**—ಯಾವ ಧನದ ನಿಮಿತ್ತವಾಗಿ । **ತ್ವಾ**—ನಿನ್ನನ್ನು । **ಬ್ರವಾಮ**—ಸ್ತುತಿಸುವೆವೋ । **ಮನ್ಮ**—ನಮ್ಮ ಧ್ಯಾನಕ್ಕೆ ಪಾತ್ರವಾದ । **ತತ್**—ಅದೇ ಧನವನ್ನು । ನಃ—ನಮಗಾಗಿ । **ಸು ಸಾಧಯ**—ಅತಿಶಯವಾಗಿ ಉತ್ಪನ್ನ ಮಾಡು.

॥ ಭಾವಾರ್ಥ ॥

ಅನೇಕ ಯಜಮಾನರಿಂದ ಸ್ತುತಿಸಲ್ಪಡತಕ್ಕವನೂ ಆಕರ್ಷಕವಾದ ರೂಪವುಳ್ಳವನೂ ಅಧಿಕವಾದ ಜ್ಞಾನವುಳ್ಳವನೂ ಆದ ಎಲೈ ಪೂಷದೇವನೇ, ಈ ಯಾಗಕಾಲದಲ್ಲಿ ಯಾವ ಧನದ ನಿಮಿತ್ತವಾಗಿ ನಿನ್ನನ್ನು ಸ್ತುತಿಸುವೆವೋ ನಮ್ಮ ಧ್ಯಾನಕ್ಕೆ ಪಾತ್ರವಾದ ಆದೇ ಧನವನ್ನು ನಮಗಾಗಿ ಉತ್ಪನ್ನ ಮಾಡು. ನಮಗೆ ಒದಗಿಸು.

## English Translation.

Since, intelligent Pushan, of goodly aspect, the praised of many, we celebrate you to-day, therefore grant us the desired wealth.

॥ ಸಂಹಿತಾಪಾಠಃ ॥

ಇಮಂ ಚ ನೋ ಗವೇಷಣಂ ಸಾತಯೇ ಸೀಷಧೋ ಗಣಂ ।
ಆರಾತ್ಪೂಷನ್ನಸಿ ಶ್ರುತಃ ॥ ೫ ॥

॥ ಪದಪಾಠಃ ॥

ಇಮಂ । ಚ । ನಃ । ಗೋಽಏಷಣಂ । ಸಾತಯೇ । ಸೀಸಧಃ । ಗಣಂ ।
ಆರಾತ್ । ಪೂಷನ್ । ಅಸಿ । ಶ್ರುತಃ ॥ ೫ ॥

॥ ಸಾಯಣಭಾಷ್ಯಂ ॥

**ಹೇ ಪೂಷನ್ ನೋಽಸ್ಮಾಕಂ ಸಾತಯೇ ಲಾಭಾಯೇಮಂ ಚ ಗಣಂ ಮನುಷ್ಯಸಂಘಂ ಗವೇಷಣಂ ಗವಾಮೇಷಯಿತಾರಂ ಸೀಷಧಃ । ಸಾಧಯ । ಹೇ ಪೂಷನ್ ಆರಾತ್ ದೂರದೇಶೇಽಪಿ ತ್ವಂ ಶ್ರುತೋ ವಿಶ್ರುತಃ ಪ್ರಖ್ಯಾತೋಽಸಿ । ಭವಸಿ ॥**

॥ ಪ್ರತಿಪದಾರ್ಥ ॥

(ಎಲೈ ಪೂಷದೇವನೇ) **ಸಾತಯೇ**—ಗೋಲಾಭಾರ್ಥವಾಗಿ । **ಗವೇಷಣಂ**—ಗೋವುಗಳನ್ನು ಹುಡುಕುತ್ತಿರುವ । **ನಃ**—ನಮ್ಮ । **ಇಮಂ ಚ ಗಣಂ**—ಈ ಯಜಮಾನಸಂಘವನ್ನು । **ಸೀಷಧಃ**—ತೃಪ್ತಿಪಡಿಸು । **ಪೂಷನ್**—ಎಲೈ ಪೂಷದೇವನೇ । **ಆರಾತ್**—ಅತಿ ದೂರ ಪ್ರದೇಶಗಳಲ್ಲಿಯೂ ಸಹ । (**ತ್ವಂ**--ನೀನು) । **ಶ್ರುತಃ**—ಪ್ರಖ್ಯಾತನಾಗಿ । **ಅಸಿ**—ಆಗಿದ್ದೀಯೆ.

॥ ಭಾವಾರ್ಥ ॥

ಎಲೈ ಪೂಷದೇವನೇ, ಗೋಲಾಭಾರ್ಥವಾಗಿ ಗೋವುಗಳನ್ನು ಹುಡುಕುತ್ತಿರುವ ನಮ್ಮ ಈ ಯಜಮಾನ ಸಂಘವನ್ನು ತೃಪ್ತಿಪಡಿಸು. ಎಲೈ ಪೂಷದೇವನೇ, ಅತಿ ದೂರ ಪ್ರದೇಶಗಳಲ್ಲಿಯೂ ಸಹ ನೀನು ಪ್ರಖ್ಯಾತನಾಗಿದ್ದೀಯೆ.

## English Translation.

Gratify this our assembly, desirous of cattle by their acquistion : you, Pushan, are renowned afar.

ಆ ತೇ ಸ್ವಸ್ತಿಮೀಮಹ ಆರೇಅಘಾಮುಪಾವಸುಂ ।
ಅದ್ಯಾ ಚ ಸರ್ವತಾತಯೇ ಶ್ವಶ್ಚ ಸರ್ವತಾತಯೇ ॥ ೬ ॥

॥ ಪದಪಾಠಃ ॥

ಆ । ತೇ । ಸ್ವಸ್ತಿಂ । ಈಮಹೇ । ಆರೇಽಅಘಾಂ । ಉಪಽವಸುಂ ।
ಅದ್ಯ । ಚ । ಸರ್ವಽತಾತಯೇ । ಶ್ವಃ । ಚ । ಸರ್ವಽತಾತಯೇ ॥ ೬ ॥

॥ ಸಾಯಣಭಾಷ್ಯಂ ॥

**ಹೇ ಪೂಷನ್ ತೇ ತ್ವದೀಯಾಂ ತ್ವಯಾ ದೇಯಾಂ ಸ್ವಸ್ತಿಂ ಕಲ್ಯಾಣೀಂ ರಕ್ಷಾಮಾರೇಅಘಾಂ । ಆರೇ ದೂರೇಽಘಂ ಪಾಪಂ ಯಸ್ಯಾಸ್ತಾದೃಶೀಂ । ಉಪಾವಸುಮುಪಗತಧನಾಂ । ಈದೃಶೀಂ ಸ್ವಸ್ತಿಮದ್ಯ ಚಾಸ್ಮಿಂಶ್ಚ ಕಾಲೇ ಸರ್ವತಾತಯೇ । ಸರ್ವೈರೃತ್ವಿಗ್ಭಿಸ್ತಾಯತ ಇತಿ ಸರ್ವತಾತಿರ್ಯಜ್ಞಃ । ತದರ್ಥಂ । ಯದ್ವಾ । ಸರ್ವೇಷಾಂ ಭೋಗಾನಾಂ ವಿಸ್ತಾರಾಯ । ಶ್ವಶ್ಚ ಪರಸ್ಮಿನ್ನಪಿ ದಿನೇ ಸರ್ವತಾತಯೇ ಸರ್ವದಾ ಸರ್ವತಾತ್ಯರ್ಥಮೀಮಹೇ । ಅಭಿಯಾಚಾಮಹೇ ॥**

॥ ಪ್ರತಿಪದಾರ್ಥ ॥

(ಎಲೈ ಪೂಷದೇವನೇ) **ಅದ್ಯ ಚ**—ಪ್ರಕೃತದಲ್ಲಿ (ಇಂದು) ನೆರವೇರತಕ್ಕ । **ಸರ್ವತಾತಯೇ**—ಯಜ್ಞಾರ್ಥವಾಗಿಯೂ । **ಶ್ವಶ್ಚ**—ಮುಂದಿನ ದಿನಗಳಲ್ಲಿ ನೆರವೇರುವ । **ಸರ್ವತಾತಯೇ**—ಯಜ್ಞಾರ್ಥವಾಗಿಯೂ । **ತೇ**—ನಿನ್ನಿಂದ ಅನುಗ್ರಹೀತವಾಗತಕ್ಕದ್ದೂ । **ಆರೇಅಘಾಂ**—ಪಾಪರಹಿತವಾದುದೂ ಆದ । **ಉಪಾವಸುಂ**—ಧನಪ್ರದವಾಗಿರತಕ್ಕದ್ದೂ ಆದ । **ಸ್ವಸ್ತಿಂ**—ಕಲ್ಯಾಣವನ್ನು । **ಆ ಈಮಹೇ**—ಅಧಿಕವಾಗಿ ಬೇಡುತ್ತೇವೆ.

॥ ಭಾವಾರ್ಥ ॥

ಎಲೈ ಪೂಷದೇವನೇ, ಇಂದು ನೆರವೇರತಕ್ಕ ಯಜ್ಞವೂ ಮುಂದಿನ ದಿನಗಳಲ್ಲಿ ನೆರವೇರುವ ಯಜ್ಞಗಳೂ ನಿರ್ವಿಘ್ನವಾಗಿ ನೆರವೇರಲು ಪಾಪರಹಿತವಾದುದೂ ಧನಪ್ರದವಾದುದೂ ನಿನ್ನಿಂದ ಅನುಗ್ರಹೀತವಾಗುವುದೂ ಆದ ಕಲ್ಯಾಣವನ್ನು ಅಧಿಕವಾಗಿ ಬೇಡುತ್ತೇವೆ.

## English Translation.

We deserve of you well-being, remote from evil, approximate to wealth, both for the sake of general sacrifice to-day, for the sake of general sacrifice to-morrow.



# ಐವತ್ತೇಳನೆಯ ಸೂಕ್ತವು

॥ ಸಾಯಣಭಾಷ್ಯಂ ॥

**ಇಂದ್ರಾ ನು ಪೂಷಣೇತಿ ಷಳೃಚಮಷ್ಟಮಂ ಸೂಕ್ತಂ ಭರದ್ವಾಜಸ್ಯಾರ್ಷಂ ಗಾಯತ್ರಮೈಂದ್ರಾಪೌಷ್ಣಂ। ಅನುಕ್ರಾಂತಂ ಚ। ಇಂದ್ರಾ ನ್ವೈಂದ್ರಂ ಚೇತಿ॥ ಗತೋ ವಿನಿಯೋಗಃ॥**

ಅನುವಾದವು—**ಇಂದ್ರಾ ನು ಪೂಷಣಾ** ಎಂಬ ಈ ಸೂಕ್ತವು ಐದನೆಯ ಅನುವಾಕದಲ್ಲಿ ಎಂಟನೆಯ ಸೂಕ್ತವು. ಇದರಲ್ಲಿ ಆರು ಋಕ್ಕುಗಳಿರುವುವು. ಈ ಸೂಕ್ತಕ್ಕೆ ಭರದ್ವಾಜನು ಋಷಿಯು; ಇಂದ್ರ ಮತ್ತು ಪೂಷನ್ ದೇವತೆಗಳು; ಗಾಯತ್ರೀ ಛಂದಸ್ಸು. ಅನುಕ್ರಮಣಿಕೆಯಲ್ಲಿ—**ಇಂದ್ರಾ ನ್ವೈಂದ್ರಂ ಚ** ಎಂದು ಹೇಳಿರುವುದು. ವಿನಿಯೋಗವನ್ನು ಹಿಂದೆಯೇ ಹೇಳಲಾಗಿದೆ.

## ಸೂಕ್ತ—೫೭

ಮಂಡಲ—೬ ॥ ಅನುವಾಕ—೫ ॥ ಸೂಕ್ತ—೫೭ ॥
ಅಷ್ಟಕ—೪ ॥ ಅಧ್ಯಾಯ—೮ ॥ ವರ್ಗ—೨೩ ॥
॥ ಸೂಕ್ತದಲ್ಲಿರುವ ಋಕ್ಸಂಖ್ಯೆ—೬ ॥
॥ ಋಷಿಃ— ಭರದ್ವಾಜೋ ಬಾರ್ಹಸ್ಪತ್ಯಃ ॥
॥ ದೇವತಾ—ಇಂದ್ರಾಪೂಷಣೌ ॥
॥ ಛಂದಃ—ಗಾಯತ್ರೀ ॥

ಇಂದ್ರಾ ನು ಪೂಷಣಾ ವಯಂ ಸಖ್ಯಾಯ ಸ್ವಸ್ತಯೇ ।
ಹುವೇಮ ವಾಜಸಾತಯೇ ॥ ೧ ॥

॥ ಪದಪಾಠಃ ॥

ಇಂದ್ರಾ । ನು । ಪೂಷಣಾ । ವಯಂ । ಸಖ್ಯಾಯ । ಸ್ವಸ್ತಯೇ ।
ಹುವೇಮ । ವಾಜ॑ऽಸಾತಯೇ ॥ ೧ ॥

॥ ಸಾಯಣಭಾಷ್ಯಂ ॥

**ಇತರೇತರಯೋಗಾದಿಂದ್ರಪೂಷಭ್ಯಾಬ್ದಯೋರುಭಯತ್ರ ದ್ವಿವಚನಂ। ಇಂದ್ರಾಪೂಷಣೌ ದೇವೌ ನು ಅದ್ಯ ಚ ವಯಂ ಸ್ವಸ್ತಯೇ ಸಖ್ಯಾಯ ಶೋಭನಾಯ ಸಖಿತ್ವಾಯ ವಾಜಸಾತಯೇ ವಾಜಸ್ಯಾನ್ನಸ್ಯ ಬಲಸ್ಯ ವಾ ಸಾತಯೇ ಸಂಭಜನಾಯ ಚ ಹುವೇಮ। ಆಹ್ವಯಾಮ। ಸ್ತವಾಮ॥**

॥ ಪ್ರತಿಪದಾರ್ಥ ॥

**ಇಂದ್ರಾಪೂಷಣಾ**—ಇಂದ್ರ ಮತ್ತು ಪೂಷದೇವತೆಗಳನ್ನು । **ನು**—ಈಗ । **ವಯಂ**—ನಾವು । **ಸ್ವಸ್ತಯೇ**— ನಮ್ಮ ಕಲ್ಯಾಣಾರ್ಥವಾಗಿಯೂ । **ಸಖ್ಯಾಯ**—ಮಿತ್ರತ್ವದ ಸಂಪಾದನೆಗಾಗಿಯೂ । **ವಾಜಸಾತಯೇ**—ಅನ್ನ ಲಾಭಾರ್ಥವಾಗಿಯೂ । **ಹುವೇಮ**—ಪ್ರಾರ್ಥಿಸಿ ಕರೆಯುತ್ತೇವೆ.

॥ ಭಾವಾರ್ಥ ॥

ಈಗ ನಾವು ನಮ್ಮ ಕಲ್ಯಾಣಾರ್ಥವಾಗಿಯೂ, ಅವರೊಡನೆ ಮಿತ್ರತ್ವದ ಸಂಪಾದನೆಗಾಗಿಯೂ, ಅನ್ನ ಲಾಭಾರ್ಥವಾಗಿಯೂ ಇಂದ್ರ ಮತ್ತು ಪೂಷದೇವತೆಗಳನ್ನು ಪ್ರಾರ್ಥಿಸಿ ಕರೆಯುತ್ತೇವೆ.

**English Translation.**

We invoke you, Indra and Pushan, for your friendship, for our well-being, and for the obtaining of food.

॥ ಸಂಹಿತಾಪಾಠಃ ॥

ಸೋಮಮನ್ಯ ಉಪಾಸದತ್ಪಾತವೇ ಚಮ್ವೋಃ ಸುತಂ ।
ಕರಂಭಮನ್ಯ ಇಚ್ಛತಿ ॥ ೨ ॥

॥ ಪದಪಾಠಃ ॥

ಸೋಮಂ । ಅನ್ಯಃ । ಉಪ । ಅಸದತ್ । ಪಾತವೇ । ಚಮ್ವೋಃ । ಸುತಂ ।
ಕರಂಭಂ । ಅನ್ಯಃ । ಇಚ್ಛತಿ ॥ ೨ ॥

॥ ಸಾಯಣಭಾಷ್ಯಂ ॥

**ಚಮ್ವೋರಧಿಷವಣಫಲಕಯೋಃ ಸುತಮಭಿಷುತಂ ಸೋಮಮನ್ಯೋಽನಯೋರೇಕತರ ಇಂದ್ರಃ ಪಾತವೇ ಪಾತುಮುಪಾಸದತ್ । ಉಪಸೀದತಿ । ಉಪಗಚ್ಛತಿ । ಅನ್ಯ ಏಕತರಃ ಪೂಷಾ ಕರಂಭಂ ಘೃತಸಿಕ್ತಂ ಸಕ್ತ್ವಾತ್ಮಕಂ ಹವಿರ್ಭಕ್ಷಯಿತುಮಿಚ್ಛತಿ ॥**

॥ ಪ್ರತಿಪದಾರ್ಥ ॥

**ಅನ್ಯಃ**—ಇಂದ್ರ ಮತ್ತು ಪೂಷ ಇವರಿಬ್ಬರಲ್ಲಿ ಒಬ್ಬನಾದ ಇಂದ್ರನು । **ಚಮ್ವೋಃ**—ಹಿಂಡುವ ಹಲಗೆಗಳಿಂದ । **ಸುತಂ**—ಹಿಂಡಲ್ಪಟ್ಟ । **ಸೋಮಂ**—ಸೋಮರಸವನ್ನು । **ಪಾತವೇ**—ಪಾನಮಾಡಲು । **ಉಪಾಸದತ್**—ಕುಳಿತುಕೊಳ್ಳುತ್ತಾನೆ । **ಅನ್ಯಃ**—ಇನ್ನೊಬ್ಬನಾದ ಪೂಷನು । **ಕರಂಭಂ**—ಘೃತಮಿಶ್ರವಾದುದೂ ಸತ್ತು ರೂಪವಾದುದೂ ಆದ ಹವಿಸ್ಸನ್ನು । **ಇಚ್ಛತಿ**—ಭಕ್ಷಿಸಲಪೇಕ್ಷಿಸುತ್ತಾನೆ.

॥ ಭಾವಾರ್ಥ ॥

ಇಂದ್ರ ಮತ್ತು ಪೂಷ ಇವರಿಬ್ಬರಲ್ಲಿ ಒಬ್ಬನಾದ ಇಂದ್ರನು ಸೋಮರಸವನ್ನು ಹಿಂಡುವ ಹಲಗೆಗಳಿಂದ ಹಿಂಡಲ್ಪಟ್ಟ ಸೋಮರಸವನ್ನು ಪಾನಮಾಡಲು ಕುಳಿತುಕೊಳ್ಳುತ್ತಾನೆ. ಇನ್ನೊಬ್ಬನಾದ ಪೂಷನು ಘೃತಮಿಶ್ರವಾದುದೂ, ಸಕ್ತುರೂಪವಾದುದೂ ಆದ ಹವಿಸ್ಸನ್ನು ಭಕ್ಷಿಸಲಪೇಕ್ಷಿಸುತ್ತಾನೆ.

English Translation.

One (of you) approaches to drink the Soma poured out into ladles, the other desires the buttered meal.

॥ ಸಂಹಿತಾಪಾಠಃ ॥

ಅಜಾ ಅನ್ಯಸ್ಯ ವಹ್ನಯೋ ಹರೀ ಅನ್ಯಸ್ಯ ಸಂಭೃತಾ ।
ತಾಭ್ಯಾಂ ವೃತ್ರಾಣಿ ಜಿಘ್ನತೇ ॥ ೩ ॥

॥ ಪದಪಾಠಃ ॥

ಅಜಾಃ । ಅನ್ಯಸ್ಯ । ವಹ್ನಯಃ । ಹರೀ ಇತಿ । ಅನ್ಯಸ್ಯ । ಸಂऽಭೃತಾ ।
ತಾಭ್ಯಾಂ । ವೃತ್ರಾಣಿ । ಜಿಘ್ನತೇ ॥ ೩ ॥

॥ ಸಾಯಣಭಾಷ್ಯಂ ॥

ಅನಯೋರಿಂದ್ರಾಪೂಷ್ಣೋರನ್ಯಸ್ಯೈಕಸ್ಯ ಪೂಷ್ಣೋऽಜಾಶ್ಛಾಗಾ ವಹ್ನಯೋ ವಾಹಕಾ ಅಶ್ವಾಃ । ಅನ್ಯಸ್ಯಾಪರಸ್ಯೇಂದ್ರಸ್ಯ ಸಂಭೃತಾ ಸಂಭೃತೌ ಸಮ್ಯಕ್ ಪುಷ್ಟೌ ಹರೀ ಏತತ್ಸಂಜ್ಞಾವಶ್ವೌ ವಾಹಕೌ । ಸ ಚೇಂದ್ರಸ್ತಾಭ್ಯಾಂ ವೃತ್ರಾಣಿ ಶತ್ರೂನ್ ಜಿಘ್ನತೇ । ಹಂತಿ ॥

॥ ಪ್ರತಿಪದಾರ್ಥ ॥

**ಅನ್ಯಸ್ಯ**—(ಇಂದ್ರ ಮತ್ತು ಪೂಷ ಇವರಿಬ್ಬರಲ್ಲಿ ಒಬ್ಬನಾದ) ಪೂಷನಿಗೆ । **ವಹ್ನಯಃ**—ವಾಹನಗಳು । **ಅಜಾಃ**—ಆಡುಗಳಾಗಿವೆ । **ಅನ್ಯಸ್ಯ**—ಇನ್ನೊಬ್ಬನಾದ ಇಂದ್ರನಿಗೆ । **ಸಂಭೃತಾ**—ಪುಷ್ಟವಾಗಿ ಬೆಳೆದ । **ಹರೀ**—ಹರೀ ನಾಮಕಗಳಾದ ಅಶ್ವಗಳೇವಾಹನವು । **ತಾಭ್ಯಾಂ**—ಅವರಿಬ್ಬರಲ್ಲಿ । (**ಇಂದ್ರಃ**—ಇಂದ್ರನು) । **ವೃತ್ರಾಣಿ**—ಶತ್ರುಗಳನ್ನೆಲ್ಲಾ । **ಜಿಘ್ನತೇ**—ಕೊಲ್ಲುತ್ತಾನೆ.

॥ ಭಾವಾರ್ಥ ॥

ಇಂದ್ರ ಮತ್ತು ಪೂಷ ಇವರಿಬ್ಬರಲ್ಲಿ ಪೂಷನಿಗೆ ಅಜರೂಪವಾದ ವಾಹನಗಳಿವೆ. ಇನ್ನೊಬ್ಬನಾದ ಇಂದ್ರನಿಗೆ ಪುಷ್ಟವಾಗಿ ಬೆಳೆದ ಹರಿನಾಮುಕಗಳಾದ ಅಶ್ವಗಳೇ ವಾಹನವು. ಅವರಿಬ್ಬರಲ್ಲಿ ಇಂದ್ರನು ಶತ್ರುಗಳನ್ನೆಲ್ಲಾ ಕೊಲ್ಲುತ್ತಾನೆ.

## English Translation.

Goats are the bearers of the one, two well-fed horses, of the other, and with them he destroys his foes.

|| ಸಂಹಿತಾಪಾಠಃ ||

ಯದಿಂದ್ರೋ ಅನಯದ್ರಿತೋ ಮಹೀರಪೋ ವೃಷಂತಮಃ ।
ತತ್ರ ಪೂಷಾ ಭವತ್ಸಚಾ ॥ ೪ ॥

|| ಪದಪಾಠಃ ||

ಯತ್ । ಇಂದ್ರಃ । ಅನಯತ್ । ರಿತಃ । ಮಹೀಃ । ಅಪಃ । ವೃಷನ್ಽತಮಃ ।
ತತ್ರ । ಪೂಷಾ । ಅಭವತ್ । ಸಚಾ ॥ ೪ ॥

|| ಸಾಯಣಭಾಷ್ಯಂ ||

**ಯದ್ಯದಾ ವೃಷಂತಮೋಽತಿಶಯೇನ ವರ್ಷಿತೇಂದ್ರೋ ರಿತೋ ಗಂತ್ರೀರ್ಮಹೀರ್ಮಹತೀರಪೋ ವೃಷ್ಟ್ಯುದಕಾನ್ಯನಯತ್ ಇಮಂ ಲೋಕಂ ಪ್ರಾಪಯತಿ ತತ್ರ ತದಾನೀಂ ಪೂಷಾ ಪೋಷಕೋ ದೇವಃ ಸಚಾಭವತ್ । ಅಸ್ಯೇಂದ್ರಸ್ಯ ಸಹಾಯೋ ಭವತಿ ॥**

|| ಪ್ರತಿಪದಾರ್ಥ ||

**ಯತ್**—ಯಾವಾಗ । **ವೃಷಂತಮಃ**—ಅತಿಶಯವಾಗಿ ವೃಷ್ಟಿಯನ್ನು ಸುರಿಸುವ । **ಇಂದ್ರಃ**—ಇಂದ್ರನು । **ರಿತಃ**—ಪ್ರವಹಿಸುವುವೂ । **ಮಹೀಃ**—ಮಹತ್ತ್ವಭಾವವುಳ್ಳವೂ ಆದ । **ಅಪಃ**—ಉದಕಗಳನ್ನು । **ಅನಯತ್**—ಈ ಲೋಕಕ್ಕೆ ಸೇರಿಸುವನೋ । **ತತ್ರ**—ಆ ಕಾಲದಲ್ಲಿ । **ಪೂಷಾ**—ಪೂಷದೇವನು । **ಸಚಾ**—ಅವನೊಡನೆ । **ಅಭವತ್**—ಇರುತ್ತಾನೆ.

|| ಭಾವಾರ್ಥ ||

ಅತಿಶಯವಾಗಿ ವೃಷ್ಟಿಯನ್ನು ಸುರಿಸುವ ಇಂದ್ರನು ಯಾವಾಗ ಪ್ರವಹಿಸುವುವೂ ಮಹತ್ತ್ವಭಾವವುಳ್ಳವೂ ಆದ ಉದಕಗಳನ್ನು ಈ ಲೋಕಕ್ಕೆ ಸುರಿಸುವನೋ ಆ ಕಾಲದಲ್ಲಿ ಪೂಷದೇವನು ಅವನೊಡನೆ ಇರುತ್ತಾನೆ.

## English Translation.

When the showerer Indra sends down the falling and mighty waters, there is Pushan along with him.

॥ ಸಂಹಿತಾಪಾಠಃ ॥

ತಾಂ ಪೂಷ್ಣಃ ಸುಮತಿಂ ವಯಂ ವೃಕ್ಷಸ್ಯ ಪ್ರ ವಯಾಮಿವ ।
ಇಂದ್ರಸ್ಯ ಚಾ ರಭಾಮಹೇ ॥ ೫ ॥

॥ ಪದಪಾಠಃ ॥

ತಾಂ । ಪೂಷ್ಣಃ । ಸುऽಮತಿಂ । ವಯಂ । ವೃಕ್ಷಸ್ಯ । ಪ್ರ । ವಯಾಂऽಇವ ।
ಇಂದ್ರಸ್ಯ । ಚ । ಆ । ರಭಾಮಹೇ ॥ ೫ ॥

॥ ಸಾಯಣಭಾಷ್ಯಂ ॥

ಪೂಷ್ಣಃ ಪೋಷಕಸ್ಯ ದೇವಸ್ಯೇಂದ್ರಸ್ಯ ಚ ತಾಂ ಪ್ರಸಿದ್ಧಾಂ ಸುಮತಿಂ ಕಲ್ಯಾಣೀಂ ಮತಿಮನುಗ್ರಹಬುದ್ಧಿಂ ವೃಕ್ಷಸ್ಯ ಮಹೀರುಹಸ್ಯ ಪ್ರ ವಯಾಂ ಪ್ರಕೃಷ್ಟಾಂ ದೃಢಾಂ ಶಾಖಾಮಿವ ವಯಮಾ ರಭಾಮಹೇ ಅವಲಂಬಾಮಹೇ । ಆಶ್ರಯಾಮ ಇತ್ಯರ್ಥಃ ॥

॥ ಪ್ರತಿಪದಾರ್ಥ ॥

**ವೃಕ್ಷಸ್ಯ**— ಮಹಾವೃಕ್ಷದ । **ಪ್ರ ವಯಾಂ ಇವ**— ದೃಢವಾದ ಕೊಂಬೆಯನ್ನು ಆಶ್ರಯಿಸುವಂತೆ । **ವಯಂ**—ನಾವು । **ಪೂಷ್ಣಃ**—ಪೂಷದೇವನ । **ಚ**—ಮತ್ತು । **ಇಂದ್ರಸ್ಯ**—ಇಂದ್ರನ । **ತಾಂ**—ಪ್ರಸಿದ್ಧವಾದ । **ಸುಮತಿಂ**—ಅನುಗ್ರಹಾತ್ಮವಾದ ಬುದ್ಧಿಯನ್ನು । **ರಭಾಮಹೇ**—ಆಶ್ರಯಿಸುತ್ತೇವೆ.

॥ ಭಾವಾರ್ಥ ॥

ಪ್ರವಾಹಾದ್ಯಾಪತ್ತುಗಳಿಗೆ ಸಿಕ್ಕಿರುವ ಪುರುಷನು ಮಹಾವೃಕ್ಷದ ದೃಢವಾದ ಕೊಂಬೆಯನ್ನು ಆಶ್ರಯಿಸುವಂತೆ ನಾವು ಪೂಷದೇವನ ಮತ್ತು ಇಂದ್ರನ ಪ್ರಸಿದ್ಧವಾದ ಅನುಗ್ರಹಾತ್ಮಕವಾದ ಬುದ್ಧಿಯನ್ನು ಆಶ್ರಯಿಸುತ್ತೇವೆ.

English Translation.

We depend upon the good-will of Pushan, and of Indra, as (we cling) to the branches of a tree.

॥ ಸಂಹಿತಾಪಾಠಃ ॥

ಉತ್ಪೂಷಣಂ ಯುವಾಮಹೇಽಭೀಶೂರಿವ ಸಾರಥಿಃ ।
ಮಹ್ಯಾ ಇಂದ್ರಂ ಸ್ವಸ್ತಯೇ ॥ ೬ ॥

॥ ಪದಪಾಠಃ ॥

**ಉತ್** । ಪೂಷಣಂ । ಯುವಾಮಹೇ । ಅಭೀಶೂನ್ऽಇವ । ಸಾರಥಿಃ ।

ಮಹ್ಯೈ । ಇಂದ್ರಂ । ಸ್ವಸ್ತಯೇ ॥ ೬ ॥

॥ ಸಾಯಣಭಾಷ್ಯಂ ॥

ಪೂಷಣಂ ಪೋಷಕಂ ದೇವಮಿಂದ್ರಂ ಚ ಮಹ್ಯೈ ಮಹತ್ಯೈ ಸ್ವಸ್ತಯೇ ರಕ್ಷಾರ್ಥಮುದ್ಯುವಾಮಹೇ । ಉದ್ಯೋಜಯಾಮಃ । ಉದ್ಯೋಜನಮಾಕರ್ಷಣಂ । ತತ್ರ ದೃಷ್ಟಾಂತಃ । ಸಾರಥಿಃ ಸೂತೋಽಭೀಶೂನಿವ । ಅಭೀಶೂನ್ರಶ್ಮೀನಶ್ವಬಂಧನಾರ್ಥಾನ್ಯಥಾಕರ್ಷತಿ ತದ್ವತ್ ॥

॥ ಪ್ರತಿಪದಾರ್ಥ ॥

**ಸಾರಥಿಃ**—ರಥವನ್ನು ಹೊಡೆಯುವವನು । **ಅಭೀಶೂನಿವ**—ಲಗಾಮುಗಳನ್ನು ಹಿಡಿದೆಳೆದುಕೊಳ್ಳುವಂತೆ । (ವಯಂ—ನಾವು)। **ಪೂಷಣಂ**—ಪೂಷದೇವನನ್ನೂ । **ಇಂದ್ರಂ**—ಇಂದ್ರನನ್ನೂ । **ಮಹ್ಯೈ**—ಮಹತ್ತಾದ । **ಸ್ವಸ್ತಯೇ**—ಕಲ್ಯಾಣಾರ್ಥವಾಗಿ । **ಉದ್ಯುವಾಮಹೇ**—ನಮ್ಮ ಕಡೆಗೆ ಆಕರ್ಷಿಸಿ ಬರಮಾಡಿಕೊಳ್ಳುತ್ತೇವೆ.

॥ ಭಾವಾರ್ಥ ॥

ರಥವನ್ನು ಹೊಡೆಯುವವನು ಲಗಾಮುಗಳನ್ನು (ಹಗ್ಗ) ತನ್ನ ಕಡೆಗೆ ಹಿಡಿದೆಳೆದುಕೊಳ್ಳುವಂತೆ ನಾವು ಪೂಷನನ್ನೂ ಇಂದ್ರನನ್ನೂ ಮಹತ್ತಾದ ಕಲ್ಯಾಣಾರ್ಥವಾಗಿ ನಮ್ಮ ಕಡೆಗೆ ಆಕರ್ಷಿಸಿ ಬರಮಾಡಿಕೊಳ್ಳುತ್ತೇವೆ.

English Translation.

We draw to us, for our great welfare, Pushan and Indra, as a charioteer (pulls tight) his reins.



## ಐವತ್ತೆಂಟನೆಯ ಸೂಕ್ತವು

॥ ಸಾಯಣಭಾಷ್ಯಂ ॥

ಶುಕ್ರಂ ತೆ ಇತಿ ಚತುರ್ಋಚಂ ನವಮಂ ಸೂಕ್ತಂ ಭರದ್ವಾಜಸ್ಯಾರ್ಷಂ ಪೌಷ್ಣಂ । ದ್ವಿತೀಯಾ ಜಗತೀ ಶಿಷ್ಟಾಸ್ತ್ರಿಷ್ಟುಭಃ । ತಥಾ ಚಾನುಕ್ರಾಂತಂ । ಶುಕ್ರಂ ಚತುಷ್ಕಂ ದ್ವಿತೀಯಾ ಜಗತೀತಿ ॥ ವೈಶ್ವದೇವೇ ಪರ್ವಣಿ ವೈಶ್ವದೇವಸ್ಯ ಹವಿಷಃ ಶುಕ್ರಂ ತೆ ಇತಿ ಯಾಜ್ಯಾ । ಸೂತ್ರಿತಂ ಚ । ಶುಕ್ರಂ ತೇ ಅನ್ಯದ್ಯಜತಂ ತೇ ಅನ್ಯದಿಹೇಹ ವಃ ಸ್ವತವಸಃ । ಅ. ೨-೧೬ । ಇತಿ ॥ ಏಕಾದಶಿನಸ್ಯ ಪೌಷ್ಣಸ್ಯ ಪಶೋರ್ವಪಾಯಾ ಏಷೈವ ಯಾಜ್ಯಾ । ಸೂತ್ರಿತಂ ಚ । ಶುಕ್ರಂ ತೇ ಅನ್ಯದ್ಯಜತಂ ತೇ ಅನ್ಯತ್ಪ್ರಪಥೇ ಪಥಾಮಜನಿಷ್ಟ ಪೂಷಾ । ಅ. ೩-೭ । ಇತಿ ॥ ಅಮಾಭಿಷ್ಟವೇಽಪ್ಯೇಷಾ । ಸೂತ್ರಿತಂ ಚ । ಶುಕ್ರಂ ತೇ ಅನ್ಯದ್ಯಜತಂ ತೇ ಅನ್ಯದಪಶ್ಯಂ ಗೋಪಾಮನಿಪದ್ಯಮಾನಂ । ಅ. ೪-೬ । ಇತಿ ॥

ಅನುವಾದವು—**ಶುಕ್ರಂ ತೇ**—ಎಂಬ ಈ ಸೂಕ್ತವು ಐದನೆಯ ಅನುವಾಕದಲ್ಲಿ ಒಂಭತ್ತನೆಯ ಸೂಕ್ತವು. ಇದರಲ್ಲಿ ನಾಲ್ಕು ಋಕ್ಕುಗಳಿರುವುವು. ಈ ಸೂಕ್ತಕ್ಕೆ ಭರದ್ವಾಜನು ಋಷಿಯು ; ಪೂಷನು ದೇವತೆಯು ; ಈ ಸೂಕ್ತದ ಎರಡನೆಯ ಋಕ್ಕು ಜಗತೀಛಂದಸ್ಕವು. ಉಳಿದ ಋಕ್ಕುಗಳು ತ್ರಿಷ್ಟುಪ್‌ಛಂದಸ್ಕವು. ಅನುಕ್ರಮಣಿಕೆಯಲ್ಲಿ–**ಶುಕ್ರಂ ಚತುಷ್ಕಂ ದ್ವಿತೀಯಾ ಜಗತೀ** ಎಂದು ಹೇಳಿರುವುದು. ವಿಶ್ವೇದೇವತೆಗಳ ಸಂಬಂಧವಾದ ಪರ್ವೇಷ್ಟಿಯಲ್ಲಿ ಪೂಷದೇವನನ್ನುದ್ದೇಶಿಸಿ ಮಾಡುವ ಹವಿರ್ಹೋಮದಲ್ಲಿ **ಶುಕ್ರಂ ತೇ** ಎಂಬ ಋಕ್ಕನ್ನು ಯಾಜ್ಯಾಮಂತ್ರವನ್ನಾಗಿ ಪಠಿಸಬೇಕೆಂದು ಆಶ್ವಲಾಯನಶ್ರೌತಸೂತ್ರದ—**ಶುಕ್ರಂ ತೇ ಅನ್ಯದ್ಯಜತಂ ತೇ ಅನ್ಯದಿಹೇಹ ವಃ ಸ್ವತವಸಃ** ಎಂಬ ಸೂತ್ರದಿಂದ (ಆ ೨-೧೬) ವಿವೃತವಾಗಿರುವುದು. ಏಕಾದಶಿನ್ ಎಂಬ ಇಷ್ಟಿಯದಿನದಲ್ಲಿ ಪೂಷದೇವನನ್ನುದ್ದೇಶಿಸಿ ಮಾಡುವ ಪಶುಹೋಮದಲ್ಲಿ ಈ ಋಕ್ಕನ್ನು ವಪಾ ಹೋಮದಲ್ಲಿ ಯಾಜ್ಯಾ ಮಂತ್ರವನ್ನಾಗಿ ಪಠಿಸಬೇಕೆಂದು ಆಶ್ವಲಾಯನಶ್ರೌತಸೂತ್ರದ—**ಶುಕ್ರಂ ತೇ ಅನ್ಯದ್ಯಜತಂ ತೇ ಅನ್ಯತ್ಪ್ರಪಥೇ ಪಥಾಮಜನಿಷ್ಟ ಪೂಷಾ** ಎಂಬ ಸೂತ್ರದಿಂದ (ಆ. ೩-೭) ವಿವೃತವಾಗಿರುವುದು. ಮತ್ತು ಪ್ರವರ್ಗ್ಯವೆಂಬ ಯಾಗದಲ್ಲಿ ಅಭಿಷ್ಟವ ಮಂತ್ರಗಳಲ್ಲಿಯೂ ಈ ಋಕ್ಕಿನ ವಿನಿಯೋಗವಿರುವುದೆಂದು ಆಶ್ವಲಾಯನಶ್ರೌತ ಸೂತ್ರದ—**ಶುಕ್ರಂ ತೇ ಅನ್ಯದ್ಯಜತಂ ತೇ ಅನ್ಯದಪಶ್ಯಂ ಗೋಪಾಮನಿಪದ್ಯಮಾನಂ** ಎಂಬ ಸೂತ್ರದಿಂದ (ಆ. ೪-೬) ವಿವೃತವಾಗಿರುವುದು.

## ಸೂಕ್ತ—೫೮

ಮಂಡಲ—೬ ॥ ಅನುವಾಕ—೫ ॥ ಸೂಕ್ತ—೫೮ ॥
ಅಷ್ಟಕ—೪ ॥ ಅಧ್ಯಾಯ—೮ ॥ ವರ್ಗ—೨೪ ॥

॥ **ಸೂಕ್ತದಲ್ಲಿರುವ ಋಕ್ಸಂಖ್ಯೆ—೪** ॥
॥ ಋಷಿಃ—**ಭರದ್ವಾಜೋ ಬಾರ್ಹಸ್ಪತ್ಯಃ** ॥
॥ ದೇವತಾ—**ಪೂಷಾ** ॥
॥ ಛಂದಃ—೧, ೩, ೪. ತ್ರಿಷ್ಟುಪ್ ॥ ೨. **ಜಗತೀ** ॥

॥ **ಸಂಹಿತಾಪಾಠಃ** ॥

ಶುಕ್ರಂ ತೇ ಅನ್ಯದ್ಯಜತಂ ತೇ ಅನ್ಯದ್ವಿಷುರೂಪೇ ಅಹನೀ ದ್ಯೌರಿವಾಸಿ ।
ವಿಶ್ವಾ ಹಿ ಮಾಯಾ ಅವಸಿ ಸ್ವಧಾವೋ ಭದ್ರಾ ತೇ ಪೂಷನ್ನಿಹ ರಾತಿರಸ್ತು ॥

॥ ಪದಪಾಠಃ ॥

**ಶುಕ್ರಂ । ತೇ । ಅನ್ಯತ್ । ಯಜತಂ । ತೇ । ಅನ್ಯತ್ । ವಿಷುರೂಪೇ ಇತಿ ವಿಷುऽರೂಪೇ । ಅಹನೀ ಇತಿ । ದ್ಯೌಃऽಇವ । ಅಸಿ ।**
**ವಿಶ್ವಾಃ । ಹಿ । ಮಾಯಾಃ । ಅವಸಿ । ಸ್ವಧಾऽವಃ । ಭದ್ರಾ । ತೇ । ಪೂಷನ್ । ಇಹ । ರಾತಿಃ । ಅಸ್ತು ॥೧॥**

! ಸಾಯಣಭಾಷ್ಯಂ ।

ಹೇ ಪೂಷನ್ ತೇ ತವ ಶುಕ್ರಂ ಶುಕ್ಲವರ್ಣಮನ್ಯದೇಕಮಹರ್ಭವತಿ ವಾಸರಾತ್ಮಕಂ । ತಥಾ ತೇ ತವ ಸಂಬಂಧಿ ಯಜತಂ। ಯಜಿರತ್ರ ಸಂಗತಿಕರಣೇ ವರ್ತತೇ । ಯಜನೀಯಂ ಪ್ರಕಾಶೇನ ಸಂಗಮನೀಯಂ ಸ್ವತಃ ಕೃಷ್ಣವರ್ಣಮನ್ಯದೇಕಮಹರ್ಭವತಿ ರಾತ್ರ್ಯಾಖ್ಯಂ। ಇತ್ಥಂ ವಿಷುರೂಪೇ ಶುಕ್ಲಕೃಷ್ಣತಯಾ ನಾನಾರೂಪೇ ಅಹನೀ ತವ ಮಹಿಮ್ನಾ ನಿಷ್ಪದ್ಯೇತೇ। ಯದ್ವಾ। ಹೇ ಪೂಷನ್ ತ್ವದೀಯಮನ್ಯದೇಕಂ ರೂಪಂ ಶುಕ್ರಂ ನಿರ್ಮಲಂ ದಿವಸಸ್ಯೋತ್ಪಾದಕಂ । ತ್ವದೀಯಮನ್ಯದೇಕಂ ರೂಪಂ ಯಜತಂ ಕೇವಲಂ ಯಜನೀಯಂ ನ ಪ್ರಕಾಶಕಂ ರಾತ್ರೇರುತ್ಪಾದಕಂ । ಅತ ಏವ ವಿಷುರೂಪೇ ವಿಷಮರೂಪೇ ಅಹನೀ ಅಹಶ್ಚ ರಾತ್ರಿಶ್ಚ ಭವತಃ। ಅಹೋರಾತ್ರಯೋರ್ನಿರ್ಮಾಣೇ ಸೂರ್ಯ ಏವ ಕರ್ತಾ ಕಥಮಸ್ಯ ಪ್ರಸಕ್ತಿರಿತಿ ತತ್ರಾಹ। ದ್ಯೌರಿವಾಸಿ । ಯಥಾ ದ್ಯೌರಾದಿತ್ಯಃ ಪ್ರಕಾಶಯಿತಾ ತಥಾ ತ್ವಂ ಪ್ರಕಾಶಕೋಽಸಿ। ಕುತ ಇತ್ಯತ ಆಹ। ಹೇ ಸ್ವಧಾವೋಽನ್ನವನ್ಪೂಷನ್ ವಿಶ್ವಾಃ ಸರ್ವಾ ಮಾಯಾಃ ಪ್ರಜ್ಞಾ ಹಿ ಯಸ್ಮಾತ್ಕಾರಣಾದವಸಿ ರಕ್ಷಸಿ ಅತಃ ಕಾರಣಾತ್ತ್ವಂ ಸೂರ್ಯ ಇವ ಭವಸೀತ್ಯರ್ಥಃ। ತಾದೃಶಸ್ಯ ತೇ ತವ ಭದ್ರಾ ಕಲ್ಯಾಣೀ ರಾತಿರ್ದಾನಮಿಹಾಸ್ಮಾಸ್ವಸ್ತು। ಭವತು॥ ಯಾಸ್ಕಸ್ತ್ವಾಹ। ಶುಕ್ರಂ ತೇ ಅನ್ಯಲ್ಲೋಹಿತಂ ತೇ ಅನ್ಯದ್ಯಜ್ಞಿಯಂ ತೇ ಅನ್ಯದಯಜ್ಞಿಯಂ ತೇ ಅನ್ಯದಿತಿ ನಾ ವಿಷಮರೂಪೇ ಅಹನೀ ಕರ್ಮಣಾ ದ್ಯೌರಿವ ಚಾಸಿ। ಸರ್ವಾಣಿ ಚ ಪ್ರಜ್ಞಾನಾನ್ಯವಸ್ಯನ್ನವನ್ । ನಿ. ೧೨-೧೭ । ಇತಿ॥

॥ ಪ್ರತಿಪದಾರ್ಥ ॥

**ಪೂಷನ್**—ಎಲೈ ಪೂಷದೇವನೇ । **ತೇ**—ನಿನ್ನ । **ಅನ್ಯತ್**—ರೂಪಗಳಲ್ಲಿ ಒಂದಾದ ಅಹಸ್ಸು । **ಶುಕ್ರಂ**—ಶುಭ್ರವರ್ಣವುಳ್ಳದ್ದಾಗಿದೆ। **ಯಜತಂ**—ನಿನ್ನ ಪೂಜ್ಯವಾದ । **ತೇ ಅನ್ಯತ್**—ಇನ್ನೊಂದು (ಕೃಷ್ಣ ವರ್ಣದ) ರಾತ್ರಿರೂಪದಲ್ಲಿದೆ, । **ಅಹನೀ**—ನಿನ್ನ ಸ್ವರೂಪಗಳೇ ಆದ ಅಹೋರಾತ್ರಗಳು । **ವಿಷುರೂಪೇ**—ಬೇರೆ ಬೇರೆ ರೂಪವುಳ್ಳವಾಗಿರುತ್ತವೆ । (**ತ್ವಂ**—ನೀನು) । **ದ್ಯೌಃ ಇವ**—ಆದಿತ್ಯನಂತೆ । **ಅಸಿ**—ಆಗಿದ್ದೀಯೆ । **ಸ್ವಧಾವಃ**—ಅನ್ನವಂತನಾದ ಎಲೈ ಪೂಷನೇ। **ವಿಶ್ವಾಃ**—ಸಮಸ್ತವಾದ। **ಮಾಯಾ ಹಿ**—ಪ್ರಜೆಗಳನ್ನೂ ಕೂಡ **ಅವಸಿ**—ನೀನು ರಕ್ಷಿಸುತ್ತೀಯೆ । **ತೇ**—ನಿನ್ನ । **ಭದ್ರಾ**—ಕಲ್ಯಾಣಕಾರಕವಾದ । **ರಾತಿಃ**—ದಾನವು। **ಇಹ**—ನಮಗೆ। **ಅಸ್ತು**—ದತ್ತವಾಗಲಿ.

॥ ಭಾವಾರ್ಥ ॥

ಎಲೈ ಪೂಷದೇವನೇ, ನಿನ್ನ ರೂಪಗಳಲ್ಲಿ ಒಂದಾದ ಅಹಸ್ಸು ಶುಭ್ರವರ್ಣವುಳ್ಳದ್ದಾಗಿದೆ. ನಿನ್ನ ಪೂಜ್ಯವಾದ ಇನ್ನೊಂದು ರೂಪವು ಕೃಷ್ಣವರ್ಣದ ರಾತ್ರಿರೂಪದಲ್ಲಿದೆ. ನಿನ್ನ ಸ್ವರೂಪಗಳೇ ಆದ ಅಹೋರಾತ್ರಗಳು ಬೇರೆ ಬೇರೆ ರೂಪವುಳ್ಳದ್ದಾಗಿರುತ್ತವೆ. ನೀನು ಆದಿತ್ಯನಂತೆ ಪ್ರಕಾಶಮಾನನಾಗಿರುತ್ತೀಯೆ. ಅನ್ನವಂತನಾದ ಎಲೈ ಪೂಷ ದೇವನೇ, ನೀನು ಸಮಸ್ತವಾದ ಪ್ರಜೆಗಳನ್ನೂ ರಕ್ಷಿಸುತ್ತೀಯೆ. ನಿನ್ನ ಕಲ್ಯಾಣಕಾರಕವಾದ ದಾನವು ನಮಗಿರಲಿ

## English Translation.

One of your forms, (Pushan), is luminous, one is venerable; so that the day is variously complexioned: for you are like the sun: verily, best-

ower of food, you protect all intelligences: may your auspicious liaberality be manifested on this occasion.

॥ ವಿಶೇಷವಿಷಯಗಳು ॥

ಈ ಋಕ್ಕಿಗೆ ಯಾಸ್ಕರು ನಿರ್ವಚನವನ್ನು ಹೇಳಿರುವರು—

> ಶುಕ್ರಂ ತೇ ಅನ್ಯಲ್ಲೋಹಿತಂ ತೇ ಅನ್ಯದ್ಯಜತಂ ತೇ ಅನ್ಯದ್ಯಜ್ಞಿಯಂ ತೇ ಅನ್ಯದ್ವಿಷುಮರೂಪೇ ಅಹನೀ ಕರ್ಮ ದ್ಯೌರಿವ ಚಾಸಿ ಸರ್ವಾಣಿ ಪ್ರಜ್ಞಾನಾನ್ಯವಸ್ಯನ್ನವನ್ ಭಾಜನವತೀ ತೇ ಪೂಷನ್ನಿಹ ದತ್ತಿರಸ್ತು ॥　　(ನಿ. ೧೨-೧೮)

ಎಲೈ ಪೂಷದೇವನೇ, ನಿನ್ನ ಒಂದು ರೂಪವು ಲೋಹಿತವರ್ಣವಳ್ಳದ್ದಾಗಿದೆ ಅಥವಾ ಅತ್ಯಂತ ಪ್ರಕಾಶಮಾನವಾದದ್ದಾಗಿದೆ. ಮತ್ತೊಂದು ರೂಪವು ಯಜ್ಞಾರ್ಹವಾಗಿದೆ ಎಂದರೆ ಯಜ್ಞಾದಿಗಳಿಂದ ಪೂಜಿಸಲ್ಪಡಲು ಯೋಗ್ಯವಾಗಿದೆ. ನಿನ್ನ ಎರಡು ರೂಪಗಳಾದ ಅಹೋರಾತ್ರಿಗಳು ಪರಸ್ಪರ ವಿರೋಧಾಕಾರವುಳ್ಳದ್ದಾಗಿವೆ ಎಂದರೆ ಅಹಸ್ಸು ಪ್ರಕಾಶಮಾನವಾಗಿಯೂ ರಾತ್ರಿಯು ಕತ್ತಲಿನಿಂದ ಕೂಡಿಯೂ ಇರುವುದರಿಂದ ಒಂದಕ್ಕೊಂದು ವಿರೋಧವಾಗಿವೆ. ಮತ್ತೆ ನೀನು ಆದಿತ್ಯನಂತೆ ಅಥವಾ ಆದಿತ್ಯನ ಪ್ರಕಾಶದಂತೆ ಸರ್ವತ್ರ ವ್ಯಾಪ್ತನಾಗಿದ್ದೀಯೆ. ನೀನು ಪ್ರಜ್ಞಾವಂತರಾದ ಸಮಸ್ತ ಜನರನ್ನೂ (ಅಥವಾ ಸಮಸ್ತ ಪ್ರಜ್ಞೆ ಅಥವಾ ಶಾಸ್ತ್ರಗಳನ್ನು) ರಕ್ಷಿಸುತ್ತೀಯೆ. ಇದಲ್ಲದೆ ನೀನು ಅನ್ನವಂತನು ಎಂದರೆ ಎಲ್ಲರಿಗೂ ಅನ್ನ (ಆಹಾರ)ವನ್ನೊದಗಿಸಿಕೊಡುವವನು. ಆದುದರಿಂದ ಎಲೈ ಪೂಷದೇವನೇ, ಕಲ್ಯಾಣಕಾರಕವಾದ ಆಹಾರ ಮೊದಲಾದ ವಸ್ತುಗಳ ದಾನವು ನಮಗೂ ಕೊಡಲ್ಪಡಲಿ ಎಂದು ನಿರ್ವಚನದ ಮುಖ್ಯಾಭಿಪ್ರಾಯವು.

॥ ಸಂಹಿತಾಪಾಠಃ ॥

ಅಜಾಶ್ವಃ ಪಶುಪಾ ವಾಜಪಸ್ತ್ಯೋ ಧಿಯಂಜಿನ್ವೋ ಭುವನೇ ವಿಶ್ವೇ ಅರ್ಪಿತಃ ।
ಅಷ್ಟ್ರಾಂ ಪೂಷಾ ಶಿಥಿರಾಮುದ್ವರೀವೃಜತ್ಸಂಚಕ್ಷಾಣೋ ಭುವನಾ ದೇವ ಈಯತೇ ॥ ೨ ॥

॥ ಪದಪಾಠಃ ॥

ಅಜಽಅಶ್ವಃ । ಪಶುಽಪಾಃ । ವಾಜಽಪಸ್ತ್ಯಃ । ಧಿಯಂಽಜಿನ್ವಃ । ಭುವನೇ । ವಿಶ್ವೇ । ಅರ್ಪಿತಃ ।
ಅಷ್ಟ್ರಾಂ । ಪೂಷಾ । ಶಿಥಿರಾಂ । ಉತ್ಽವರೀವೃಜತ್ । ಸಂಽಚಕ್ಷಾಣಃ । ಭುವನಾ । ದೇವಃ ।
ಈಯತೇ ॥ ೨ ॥

॥ ಸಾಯಣಭಾಷ್ಯಂ ॥

**ಅಜಾಶ್ವಶ್ಛಾಗವಾಹನಃ ಪಶುಪಾಃ ಪಶೂನಾಂ ಪಾಲಯಿತಾ ವಾಜಪಸ್ತ್ಯಃ । ವಾಜಾ ಅನ್ನಾನಿ ಪಸ್ತ್ಯೇ ಗೃಹೇ ಯಸ್ಯ ತಾದೃಶಃ । ಧಿಯಂಜಿನ್ವಃ । ಧಿಯಃ ಸ್ತೋತಾರಃ ಕರ್ಮಾಣಿ ವಾ । ತೇಷಾಂ ಪ್ರೀಣಯಿತಾ ವಿಶ್ವೇ ವಿಶ್ವಸ್ಮಿನ್ ಸರ್ವಸ್ಮಿನ್ ಭುವನೇ ಲೋಕೇಽರ್ಪಿತಃ ಪ್ರಜಾಪತಿನಾ ಪೋಷಕತ್ವೇನ ಸ್ಥಾಪಿತಃ । ಅತ ಏವಂಭೂತಃ ಪೂಷಾ ಪೋಷಕೋ ದೇವೋಽಷ್ಟ್ರಾಮಾರಾಂ ಸ್ವಹಸ್ತಗತಾಂ ಶಿಥಿರಾಂ ಶಿಥಿಲಾಂ ಸತೀಮುದ್ವರೀವೃಜತ್ ಉದ್ಯಚ್ಛನ್ ಭುವನಾ ಭುವನಾನಿ ಸರ್ವಾನ್ ಲೋಕಾನ್ ಭೂತಜಾತಾನಿ ವಾ ಸಂಚಕ್ಷಾಣಃ ಸಂಪಶ್ಯನ್ ಸೂರ್ಯಾತ್ಮನಾ ಪ್ರಕಾಶಯನ್ ಈಯತೇ । ನಭಸಿ ಗಚ್ಛತಿ ॥**

॥ ಪ್ರತಿಪದಾರ್ಥ ॥

**ಅಜಾಶ್ವಃ**—ಅಜರೂಪವಾದ ಅಶ್ವವುಳ್ಳವನೂ । **ಪಶುಪಾಃ**—ಪಶುಪಾಲಕನೂ । **ವಾಜಪಸ್ತ್ಯಃ**—ಅನ್ನಸಂಪತ್ತಿನಿಂದ ತುಂಬಿದ ಗೃಹವುಳ್ಳವನೂ । **ಧಿಯಂಜಿನ್ವಃ**—ಸ್ತುತಿಕರ್ತರನ್ನು ತೃಪ್ತಿಗೊಳಿಸುವವನೂ । **ವಿಶ್ವೇ**—ಸಮಸ್ತವಾದ । **ಭುವನೇ**—ಲೋಕದಲ್ಲಿಯೂ । **ಅರ್ಪಿತಃ**—ಪೋಷಕನಾಗಿ ಸ್ಥಾಪಿತನಾದವನೂ ಆದ । **ಪೂಷಾ ದೇವಃ**—ಪೂಷದೇವನು । **ಶಿಥಿರಾಂ**—ಶಿಥಿಲವಾಗಿ ಹಿಡಿದಿರುವ । **ಅಷ್ಟ್ರಾಂ**—ಕುಲಿಶವನ್ನು (ಅಂಕುಶವನ್ನು) । **ಉದ್ವರೀವೃಜತ್**—ಸುತ್ತಲೂ ಬೀಸುತ್ತಲೂ । **ಭುವನಾ**—ಸಕಲ ಲೋಕಗಳನ್ನೂ । **ಸಂಚಕ್ಷಾಣಃ**—ವೀಕ್ಷಿಸುತ್ತಲೂ । **ಈಯತೇ**—ಸಂಚರಿಸುತ್ತಾನೆ.

॥ ಭಾವಾರ್ಥ ॥

ಅಜರೂಪವಾದ ಅಶ್ವವುಳ್ಳವನೂ, ಪಶುಪಾಲಕನೂ, ಅನ್ನಸಂಪತ್ತಿನಿಂದ ತುಂಬಿದ ಗೃಹವುಳ್ಳವನೂ, ಸ್ತುತಿಕರ್ತರನ್ನು ತೃಪ್ತಿಗೊಳಿಸುವವನೂ, ಸಮಸ್ತಲೋಕಗಳಲ್ಲಿಯೂ ಪೋಷಕನಾಗಿ ಸ್ಥಾಪಿತನೂ ಆದ ಪೂಷದೇವನು ಶಿಥಿಲವಾಗಿ ಹಿಡಿದಿರುವ ಕುಲಿಶವನ್ನು ಬೀಸುತ್ತಲೂ, ಸಕಲಲೋಕಗಳನ್ನು ವೀಕ್ಷಿಸುತ್ತಲೂ ಸಂಚರಿಸುತ್ತಾನೆ.

## English Translation.

The rider of the goat, the protector of animals, in whose dwelliag food is abundant, the propitiated by sacred rites, who has been placed over the whole (world) the divine Pushan, brandishing his loosened goad, proceeds (in the sky), contemplating all beings.

॥ ಸಂಹಿತಾಪಾಠಃ ॥

**ಯಾಸ್ತೇ ಪೂಷನ್ನಾವೋ ಅಂತಃ ಸಮುದ್ರೇ ಹಿರಣ್ಯಯೀರಂತರಿಕ್ಷೇ ಚರಂತಿ ।**
**ತಾಭಿರ್ಯಾಸಿ ದೂತ್ಯಾಂ ಸೂರ್ಯಸ್ಯ ಕಾಮೇನ ಕೃತ ಶ್ರವ ಇಚ್ಛಮಾನಃ ॥**

॥ ಪದಪಾಠಃ ॥

ಯಾಃ । ತೇ । ಪೂಷನ್ । ನಾವಃ । ಅಂತಃ । ಸಮುದ್ರೇ । ಹಿರಣ್ಯಯೀಃ । ಅಂತರಿಕ್ಷೇ । ಚರಂತಿ ।

ತಾಭಿಃ । ಯಾಸಿ । ದೂತ್ಯಾಂ । ಸೂರ್ಯಸ್ಯ । ಕಾಮೇನ । ಕೃತ । ಶ್ರವಃ । ಇಚ್ಛಮಾನಃ ॥ ೩ ॥

॥ ಸಾಯಣಭಾಷ್ಯಂ ॥

ಪೌಷ್ಣಸ್ಯ ಪಶೋರ್ವಪಾಪುರೋಡಾಶಯೋರ್ಯಾಸ್ತೇ ಪೂಷನ್ನಿತ್ಯಾದಿಕೇ ದ್ವೇ ಋಚಾವನು-ವಾಕ್ಯೇ । ಸೂತ್ರಿತಂ ಚ । ಯಾಸ್ತೇ ಪೂಷನ್ನಾವೋ ಅಂತಃ ಸಮುದ್ರ ಇತಿ ದ್ವೇ ಪೂಷೇಮಾ ಆಶಾ ಅನು ವೇದ ಸರ್ವಾಃ । ಆ. ೩-೭ । ಇತಿ ॥

ಹೇ ಪೂಷನ್ ತೇ ತ್ವದೀಯಾ ಯಾ ಹಿರಣ್ಯಯೀರ್ಹಿರಣ್ಮಯ್ಯೋ ಹಿತರಮಣೀಯಾ ನಾವಃ ಸಮುದ್ರ ಉದಧಾವಂತರ್ಮಧ್ಯೇಽಂತರಿಕ್ಷೇ ನಭಸಿ ಚರಂತಿ ಸಂಚರಂತಿ ತಾಭಿರ್ನೌಭಿಃ ಸೂರ್ಯಸ್ಯ ದೂತ್ಯಾಂ ಯಾಸಿ । ಗಚ್ಛಸಿ । ಕದಾಚಿದ್ದೇವೈಃ ಸಾರ್ಧಂ ಸೂರ್ಯೇಽಸುರವಧಾರ್ಥಂ ಪ್ರಸ್ಥಿತೇ ಸತಿ ತಸ್ಯ ಭಾರ್ಯಾ ಸ್ವಭರ್ತರಿ ಸಂಜಾತೌತ್ಸುಕ್ಯಾ ಬಭೂವ ತಾಂ ಪ್ರತಿ ಸೂರ್ಯಃ ಪೂಷಣಂ ಪ್ರಾಹೈಷೀತ್ ತೇನ ಚಾತ್ರ ಪೂಷಾ ಸ್ತೂಯತೇ । ಅಪಿ ಚ ತ್ವಂ ಶ್ರವೋ ಹವಿರ್ಲಕ್ಷಣಮನ್ನಮಿಚ್ಛಮಾನ ಇಚ್ಛನ್ ಕಾಮೇನ ಪಶ್ವಾದಿವಿಷಯೇಣ ಸ್ತೋತೃಭಿಃ ಕೃತೋ ವಶೀಕೃತೋಽಸಿ ॥

॥ ಪ್ರತಿಪದಾರ್ಥ ॥

**ಪೂಷನ್**—ಎಲೈ ಪೂಷದೇವನೇ । **ತೇ**—. ನಿನ್ನ । **ಹಿರಣ್ಯಯೀಃ**—ಸುವರ್ಣನಿರ್ಮಿತವಾದ । **ಯಾಃ ನಾವಃ**—ಯಾವ ನೌಕೆಗಳು । **ಸಮುದ್ರೇ**—ಸಮುದ್ರದ । **ಅಂತಃ**—ಮಧ್ಯರೂಪವಾದ । **ಅಂತರಿಕ್ಷೇ**—ಅಂತರಿಕ್ಷದಲ್ಲಿ । **ಚರಂತಿ**—ಸಂಚರಿಸುವುವೋ । **ತಾಭಿಃ**—ಆ ನೌಕೆಗಳೊಡನೆ । **ಸೂರ್ಯಸ್ಯ**—ಸೂರ್ಯನ । **ದೂತ್ಯಾಂ**—ಕರ್ತವ್ಯವನ್ನು । **ಯಾಸಿ**—ನಿರ್ವಹಿಸುತ್ತೀಯೇ । **ಶ್ರವಃ**—ಹವಿಸ್ಸಿನ ರೂಪದ ಅನ್ನವನ್ನು । **ಇಚ್ಛಮಾನಃ**—ಅಪೇಕ್ಷಿಸುತ್ತಾ । **ಕಾಮೇನ**—ಮನಃಪೂರ್ವಕವಾಗಿ ಅರ್ಪಿಸಿದ ಹವಿಸ್ಸಿನಿಂದ । **ಕೃತಃ**—ವಶೀಕೃತನಾಗಿದ್ದೀಯೆ.

॥ ಭಾವಾರ್ಥ ॥

ಎಲೈ ಪೂಷದೇವನೇ, ಸುವರ್ಣನಿರ್ಮಿತವಾದ ಯಾವ ನೌಕೆಗಳು ಸಮುದ್ರದ ಮಧ್ಯರೂಪವಾದ ಅಂತರಿಕ್ಷವಲ್ಲಿ ಸಂಚರಿಸುವುವೋ ಆ ನೌಕೆಗಳೊಡನೆ ಸೂರ್ಯನ ಕರ್ತವ್ಯವನ್ನು ನೀನು ನಿರ್ವಹಿಸುತ್ತೀಯೆ. ಹವಿಸ್ಸಿನ ರೂಪದ ಅನ್ನವನ್ನು ಅಪೇಕ್ಷಿಸುತ್ತಾ ಮನಃಪೂರ್ವಕವಾಗಿ ಅರ್ಪಿಸಿದ ಹವಿಸ್ಸಿನಿಂದ ವಶೀಕೃತನಾಗಿದ್ದೀಯೆ.

## English Translation.

With those your golden vessels, which navigate within the ocean-firmament, you discharge the office of messenger of the sun: desirous of the sacrificial food, you are propitiated by (that which is) willingly offered.

॥ ವಿಶೇಷವಿಷಯಗಳು ॥

ಪೂಷದೇವತೆಯನ್ನುದ್ದೇಶಿಸಿ ಮಾಡುವ ಪಶುಯಾಗದಲ್ಲಿ ವಪಾಪುರೋಡಾಶಗಳನ್ನು ಹೋಮಮಾಡುವಾಗ **ಯಾಸ್ತೇ ಪೂಷನ್** ಎಂದು ಪ್ರಾರಂಭವಾಗುವ ಎರಡು ಋಕ್ಕುಗಳನ್ನೂ (ಈ ಋಕ್ಕು ಮತ್ತು ಮುಂದಿನ ಋಕ್ಕು) ಅನುವಾಕ್ಯಾಮಂತ್ರಗಳನ್ನಾಗಿ ಪಠಿಸಬೇಕೆಂದು ಆಶ್ವಲಾಯನಶ್ರೌತಸೂತ್ರದ—**ಯಾಸ್ತೇ ಪೂಷನ್ನಾವೋ ಅಂತಃ ಸಮುದ್ರ ಇತಿ ದ್ವೇ ಪೂಷೇಮಾ ಆಶಾ ಅನು ವೇದ ಸರ್ವಾಃ** ಎಂಬ ಸೂತ್ರದಿಂದ (ಆ ೨-೭) ವಿವೃತವಾಗಿರುವುದು.

॥ ಸಂಹಿತಾಪಾಠಃ ॥

ಪೂಷಾ ಸುಬಂಧುರ್ದಿವ ಆ ಪೃಥಿವ್ಯಾ ಇಳಸ್ಪತಿರ್ಮಘವಾ ದಸ್ಮವರ್ಚಾಃ ।
ಯಂ ದೇವಾಸೋ ಅದದುಃ ಸೂರ್ಯಾಯೈ ಕಾಮೇನ ಕೃತಂ ತವಸಂ
ಸ್ವಂಚಂ ॥ ೪ ॥

॥ ಪದಪಾಠಃ ॥

ಪೂಷಾ । ಸುಽಬಂಧುಃ । ದಿವಃ । ಆ । ಪೃಥಿವ್ಯಾಃ । ಇಳಃ । ಪತಿಃ । ಮಘಽವಾ । ದಸ್ಮಽವರ್ಚಾಃ ।
ಯಂ । ದೇವಾಸಃ । ಅದದುಃ । ಸೂರ್ಯಾಯೈ । ಕಾಮೇನ । ಕೃತಂ । ತವಸಂ । ಸುಽಅಂಚಂ ॥ ೪ ॥

॥ ಸಾಯಣಭಾಷ್ಯಂ ॥

ಪೂಷಾ ಪೋಷಕೋ ದೇವೋ ದಿವ ಆ ದ್ಯುಲೋಕಸ್ಯ ಚ ಪೃಥಿವ್ಯಾಶ್ಚ ಸುಬಂಧುಃ ಶೋಭನೋ ಬಂಧುರ್ಭವತಿ । ತಥೇಳಸ್ಪತಿರಿಳಾಯಾ ಅನ್ನಸ್ಯ ಪತಿರ್ಮಘವಾ । ಮಘಮಿತಿ ಧನನಾಮ । ತದ್ವಾನ್ । ಯದ್ವಾ । ಮಂಹತೇರ್ದಾನಕರ್ಮಣೋ ಭಾವಸಾಧನೋ ಮಘಶಬ್ದಃ । ದಾನವಾನ್ ದಸ್ಮವರ್ಚಾಃ । ವರ್ಚ ಇತಿ ರೂಪನಾಮ । ದಸ್ಮಂ ದರ್ಶನೀಯಂ ವರ್ಚೋ ಯಸ್ಯ ತಾದೃಶಃ । ಯಂ ಪೂಷಣಂ ದೇವಾಸಃ ಸರ್ವೇ ದೇವಾಃ ಸೂರ್ಯಾಯೈ ಸೂರ್ಯಸ್ಯ ಪತ್ನ್ಯೈ ಯದ್ವಾ ಸಾವಿತ್ರ್ಯೈ ಸೂರ್ಯಾಖ್ಯಾಯಾ ಅಶ್ವಿನೋರ್ವರಣಾಯಾದದುಃ ದತ್ತವಂತಃ । ಪುತ್ರಃ ಪಿತರಾವವೃಣೀತ ಪೂಷಾ । ಋಗ್ವೇ. ೧೦-೮೫-೧೪ । ಇತಿ ಹಿ ಶ್ರೂಯತೇ । ಕೀದೃಶಂ ಪೂಷಣಂ । ಕಾಮೇನ ಪಶ್ವಾದಿವಿಷಯೇಣ ಕೃತಂ ಸ್ತೋತೃಭಿರ್ವಶೀಕೃತಂ ತವಸಂ ಬಲವಂತಂ ಪ್ರವೃದ್ಧಂ ವಾ ಸ್ವಂಚಂ ಸ್ವಂಚನಂ ಸುಷ್ಠು ಗಚ್ಛಂತಂ । ಏವಂವಿಧಂ ಯಂ ಪೂಷಣಮದದುಃ ಸ ಪೂಷಾ ಸುಬಂಧುರಿತ್ಯನ್ವಯಃ ॥

॥ ಪ್ರತಿಪದಾರ್ಥ ॥

**ಕಾಮೇನ**—ಹವಿರಾದಿಗಳಿಂದ । **ಕೃತಂ**—ವಶೀಕೃತನೂ । **ತವಸಂ**—ಶಕ್ತಿಯುಳ್ಳವನೂ । **ಸ್ವಂಚಂ**—ಉತ್ತಮವಾದ ಗತಿಯುಳ್ಳವನೂ ಆದ । **ಯಂ**—ಯಾವ ಪೂಷದೇವನನ್ನು । **ದೇವಾಸಃ**—ಸಕಲ ದೇವತೆಗಳೂ **ಸೂರ್ಯಾಯೈ**—ಸೂರ್ಯದೇವಿಗೆ । **ಅದದುಃ**—ಅರ್ಪಿಸಿದರೋ ಅಂತಹ । **ಇಳಸ್ಪತಿಃ**—ಅನ್ನಕ್ಕೆ ಒಡೆಯನೂ ।

**ಮಘವಾ**—ಧನವಂತನೂ। **ದಸ್ಮವರ್ಚಾಃ**—ಆಕರ್ಷಕವಾದ ಕಾಂತಿಯುಳ್ಳವನೂ ಆದ। **ಪೂಷಾ**—ಪೂಷ ದೇವನು। **ದಿವಿ ಆ**—ಎಲ್ಲಾ ದ್ಯುಲೋಕಕ್ಕೂ। **ಪೃಥಿವ್ಯಾಃ**—ಪೃಥಿವಿಗೂ। **ಸುಬಂಧುಃ**—ಉತ್ತಮವಾದ ಬಂಧುವೂ ಆಗಿದ್ದಾನೆ.

॥ ಭಾವಾರ್ಥ ॥

ಹವಿರಾದಿಗಳಿಂದ ಯಜಮಾನರ ವಶಕ್ಕೆ ಒಯ್ಯಲ್ಪಟ್ಟವನೂ, ಶಕ್ತಿಯುತನೂ, ಉತ್ತಮವಾದ ಗತಿಯುಳ್ಳವನೂ ಆದ ಯಾವ ಪೂಷದೇವನನ್ನು ಸಕಲ ದೇವತೆಗಳೂ ಸೂರ್ಯಪುತ್ರಿಗೆ ಅರ್ಪಿಸಿದರೋ ಅಂತಹ ಅನ್ನಪತಿಯೂ, ಧನವಂತನೂ, ಆಕರ್ಷವಾದ ಕಾಂತಿಯುಳ್ಳವನೂ ಆದ ಪೂಷದೇವನು ಎಲ್ಲಾ ದ್ಯುಲೋಕಕ್ಕೂ ಮತ್ತು ಪೃಥ್ವಿವಿಗೂ ಉತ್ತಮವಾದ ಬಂಧುವಾಗಿದ್ದಾನೆ.

English Translation.

Pushan is the kind kinsman of heaven and earth, the lord of food, the possessor of opulence, of go)dly from; whom the gods gave to Surya, vigorous, well-moving, propitiated by (that which is) willingly offered.



## ಐವತ್ತೊಂಭತ್ತನೆಯ ಸೂಕ್ತವು

॥ ಸಾಯಣಭಾಷ್ಯಂ ॥

**ಪ್ರ ನು ವೋಚೇತಿ ದಶರ್ಚಂ ದಶಮಂ ಸೂಕ್ತಂ ಭರದ್ವಾಜಸ್ಯಾರ್ಷಮಿಂದ್ರಾಗ್ನಿದೇವತಾಕಂ। ಸಪ್ತಮ್ಯಾದ್ಯಾಶ್ಚತಸ್ರೋಽನುಷ್ಟುಭಃ ಶಿಷ್ಟಾಃ ಷಟ್ ಬೃಹತ್ಯಃ। ತಥಾ ಚಾನುಕ್ರಾಂತಂ। ಪ್ರ ನು ದಶೈಂದ್ರಾಗ್ನಂ ತು ಬಾರ್ಹತಂ ಚತುರನುಷ್ಟುಬಂತಮಿತಿ ॥ ಗತೋ ವಿನಿಯೋಗಃ ॥**

ಅನುವಾದವು—**ಪ್ರ ನು ವೋಚಾ** ಎಂಬ ಈ ಸೂಕ್ತವು ಐದನೆಯ ಅನುವಾಕದಲ್ಲಿ ಹತ್ತನೆಯ ಸೂಕ್ತವು. ಇದರಲ್ಲಿ ಹತ್ತು ಋಕ್ಕುಗಳಿರುವುವು. ಈ ಸೂಕ್ತಕ್ಕೆ ಭರದ್ವಾಜನು ಋಷಿಯು ; ಇಂದ್ರಾಗ್ನಿಗಳು ದೇವತೆಯು ; ಈ ಸೂಕ್ತದ ಏಳನೆಯ ಋಕ್ಕಿನಿಂದ ಮುಂದಿನ ನಾಲ್ಕು ಋಕ್ಕುಗಳು ಅನುಷ್ಟುಪ್ ಛಂದಸ್ಸುವು. ಉಳಿದ ಆರು ಋಕ್ಕುಗಳು ಬೃಹತೀಛಂದಸ್ಸುವು. ಅನುಕ್ರಮಣಿಕೆಯಲ್ಲಿ—**ಪ್ರ ನು ದಶೈಂದ್ರಾಗ್ನಂ ತು ಬಾರ್ಹತಂ ಚತುರನುಷ್ಟುಬಂತಂ** ಎಂದು ಹೇಳಿರುವುದು. ವಿನಿಯೋಗವನ್ನು ಹಿಂದೆಯೇ ಹೇಳಲಾಗಿದೆ.

### ಸೂಕ್ತ—೫೯

ಮಂಡಲ—೬ ॥ ಅನುವಾಕ—೫ ॥ ಸೂಕ್ತ—೫೯ ॥
ಅಷ್ಟಕ—೪ ॥ ಅಧ್ಯಾಯ—೮ ॥ ವರ್ಗ—೨೫, ೨೬ ॥
॥ ಸೂಕ್ತದಲ್ಲಿರುವ ಋಕ್ಸಂಖ್ಯೆ—೧೦ ॥
॥ ಋಷಿಃ—ಭರದ್ವಾಜೋ ಬಾರ್ಹಸ್ಪತ್ಯಃ ॥
॥ ದೇವತಾ—ಇಂದ್ರಾಗ್ನೀ ॥
॥ ಛಂದಃ—೧-೬. ಬೃಹತೀ । ೭-೧೦. ಅನುಷ್ಟುಪ್ ॥

॥ ಸಂಹಿತಾಪಾಠಃ ॥

ಪ್ರ ನು ವೋಚಾ ಸುತೇಷು ವಾಂ ವೀರ್ಯಾ೩ ಯಾನಿ ಚಕ್ರಥುಃ ।
ಹತಾಸೋ ವಾಂ ಪಿತರೋ ದೇವಶತ್ರವ ಇಂದ್ರಾಗ್ನೀ ಜೀವಥೋ ಯುವಂ ॥

॥ ಪದಪಾಠಃ ॥

ಪ್ರ । ನು । ವೋಚ । ಸುತೇಷು । ವಾಂ । ವೀರ್ಯಾ । ಯಾನಿ । ಚಕ್ರಥುಃ ।
ಹತಾಸಃ । ವಾಂ । ಪಿತರಃ । ದೇವಽಶತ್ರವಃ । ಇಂದ್ರಾಗ್ನೀ ಇತಿ । ಜೀವಥಃ । ಯುವಂ ॥ ೧ ॥

॥ ಸಾಯಣಭಾಷ್ಯಂ ॥

ಹೇ ಇಂದ್ರಾಗ್ನೀ ಯಾನಿ ವೀರ್ಯಾ ವೀರ್ಯಾಣಿ ವೀರಕರ್ಮಾಣಿ ಚಕ್ರಥುಃ ಕೃತವಂತೌ ಯುವಾಂ ಸುತೇಷ್ವಭಿಷುತೇಷು ಸೋಮೇಷ್ವಸ್ಮದ್ಯಜ್ಞೇ ವಾಂ ಯುವಯೋಸ್ತಾನಿ ವೀರ್ಯಾಣಿ ನು ಕ್ಷಿಪ್ರಂ ಪ್ರ ವೋಚ । ಪ್ರವೋಚಂ । ಪ್ರಬ್ರವೀಮಿ । ತದೇವ ವೀರ್ಯಂ ದರ್ಶಯತಿ । ಹೇ ಇಂದ್ರಾಗ್ನೀ ದೇವಶತ್ರವಃ । ದೇವಾಃ ಶತ್ರವಃ ಶಾತಯಿತಾರೋ ಯೇಷಾಂ ತಾದೃಶಾಃ । ಅಸುರಾಃ ಪಿತರೋ ಹಿಂಸಕಾಃ ॥ ಪೀಯತಿ-ರ್ಹಿಂಸಾಕರ್ಮಾ । ತಸ್ಯೈತದ್ರೂಪಂ ॥ ಈದೃಶಾ ಅಸುರಾ ವಾಂ ಯುವಾಭ್ಯಾಂ ಹತಾಸೋ ಹತಾ ಆಸನ್ । ಯುವಂ ಯುವಾಂ ತು ಜೀವಥಃ । ಜೀವನವಂತೌ ಭವಥಃ । ಅಸುರೈರ್ನ ಬಾಧಿತಾವಿತಿ ಯಾವತ್ ॥

॥ ಪ್ರತಿಪದಾರ್ಥ ॥

**ಇಂದ್ರಾಗ್ನೀ** ಎಲೈ ಇಂದ್ರ ಮತ್ತು ಅಗ್ನಿದೇವತೆಗಳೇ । **ಯಾನಿ**— ಯಾವ ಪ್ರಸಿದ್ಧವಾದ । **ವೀರ್ಯಾ**— ವೀರ್ಯಕರ್ಮಗಳನ್ನು । **ಚಕ್ರಥುಃ**— ನೀವು ಮಾಡಿದ್ದೀರೋ । **ವಾಂ**— ನಿಮ್ಮ ಆ ವೀರ್ಯಕರ್ಮಗಳನ್ನೆಲ್ಲಾ । **ನು**— ಕ್ಷಿಪ್ರವಾಗಿ । **ಸುತೇಷು**— ಸೋಮರಸವು ಹಿಂಡಲ್ಪಟ್ಟಾಗ । **ಪ್ರ ವೋಚ**— ಪಠಿಸುತ್ತೇನೆ (ಎಲೈ ಇಂದ್ರಾಗ್ನಿಗಳೇ) । **ದೇವಶತ್ರವಃ**— ದೇವತೆಗಳಿಗೆಲ್ಲಾ ಶತ್ರುಪ್ರಾಯರೂ । **ಪಿತರಃ**— ಹಿಂಸಕರೂ ಆದ ಅಸುರರು । **ವಾಂ**— ನಿಮ್ಮಿಬ್ಬರಿಂದ । **ಹತಾಸಃ**— ಕೊಲ್ಲಲ್ಪಟ್ಟಿದ್ದಾರೆ (ಆದರೆ) । **ಯುವಂ**— ನೀವಿಬ್ಬರೂ । **ಜೀವಥಃ**— ಅಹಿಂಸಿತರಾಗಿ ಜೀವಿಸಿದ್ದೀರಿ.

॥ ಭಾವಾರ್ಥ ॥

ಎಲೈ ಇಂದ್ರಾಗ್ನಿಗಳೇ, ನೀವು ಯಾವ ಪ್ರಸಿದ್ಧವಾದ ವೀರ್ಯಕರ್ಮಗಳನ್ನು ಮಾಡಿದ್ದೀರೋ, ಆ ವೀರ್ಯಕರ್ಮಗಳನ್ನೆಲ್ಲಾ ಈ ಸೋಮರಸವು ಹಿಂಡಲ್ಪಟ್ಟೊಡನೆಯೇ ಕ್ಷಿಪ್ರವಾಗಿ ಪಠಿಸುತ್ತೇನೆ. ಎಲೈ ಇಂದ್ರಾಗ್ನಿಗಳೇ, ದೇವತೆಗಳಿಗೆಲ್ಲಾ ಶತ್ರುಪ್ರಾಯರೂ, ಹಿಂಸಕರೂ ಆದ ಅಸುರರು ನಿಮ್ಮಿಬ್ಬರಿಂದ ಕೊಲ್ಲಲ್ಪಟ್ಟಿದ್ದಾರೆ. ಆದರೆ ನೀವುಮಾತ್ರ ಅಹಿಂಸಿತರಾಗಿ ಜೀವಿಸಿದ್ದೀರಿ.

## English Translation.

When the libation is effused I celebrate, Indra and Agni, your heroic exploits: the Pitris, the enemies of the gods, have been slain by you, and you survive.

|| ಸಂಹಿತಾಪಾಠಃ ||

ಬಳಿತ್ಥಾ ಮಹಿಮಾ ವಾಮಿಂದ್ರಾಗ್ನೀ ಪನಿಷ್ಠ ಆ ।
ಸಮಾನೋ ವಾಂ ಜನಿತಾ ಭ್ರಾತರಾ ಯುವಂ ಯಮಾವಿಹೇಹಮಾ-
ತರಾ ॥ ೧ ॥

|| ಪದಪಾಠಃ ||

ಬಟ್ । ಇತ್ಥಾ । ಮಹಿಮಾ । ವಾಂ । ಇಂದ್ರಾಗ್ನೀ ಇತಿ । ಪನಿಷ್ಠಃ । ಆ ।
ಸಮಾನಃ । ವಾಂ । ಜನಿತಾ । ಭ್ರಾತರಾ । ಯುವಂ । ಯಮೌ । ಇಹೇಹ್ಽಮಾತರಾ ॥ ೧ ॥

॥ ಸಾಯಣಭಾಷ್ಯಂ ॥

ಹೇ ಇಂದ್ರಾಗ್ನೀ ವಾಂ ಯುವಯೋರ್ಮಹಿಮಾ ಮಹತ್ತ್ವಮಿತ್ಥೇತ್ಥಮನೇನ ಪ್ರಕಾರೇಣ ಬಟ್ ಸತ್ಯಂ । ಯುಷ್ಮದ್ವಿಷಯಂ ಯಜ್ಜನ್ಮಮಹತ್ತ್ವಂ ಪ್ರತಿಪಾದ್ಯತೇ ತತ್ಸರ್ವಂ ಯಥಾರ್ಥಮಿತ್ಯರ್ಥಃ । ಪನಿಷ್ಠ ಆ ಪನಿಷ್ಠಃ ಸ್ತುತ್ಯತಮಶ್ಚ ಪ್ರಜಾಪತಿಃ ಸಮಾನ ಏಕ ಏವ ವಾಂ ಯುವಯೋರ್ಜನಿತಾ ಜನಯಿತಾ । ಅತೋ ಯುವಂ ಯುವಾಂ ಭ್ರಾತರಾ ಭ್ರಾತರೌ ಸ್ಥಃ । ಅಪಿ ಚ ಯಮೌ ಯಮಲೌ ಸಹೋತ್ಪನ್ನಾವಿಹೇಹಮಾತರಾ । ಇಹ ಚೇಹ ಚ ಸರ್ವತ್ರ ಮಾತಾ ಯಯೋಸ್ತಾದೃಶೌ ಸ್ಥಃ । ಅದಿತಿರ್ಹ್ಯನಯೋರ್ಮಾತಾ ಸೈವ ವಿಸ್ತೀರ್ಣಾ ಭೂಮಿರಿತೀಹೇಹಮಾತರಾವಿತಿ ಶ್ರೂಯತೇ ॥

|| ಪ್ರತಿಪದಾರ್ಥ ||

**ಇಂದ್ರಾಗ್ನೀ**—ಎಲೈ ಇಂದ್ರಾಗ್ನಿಗಳೇ । **ವಾಂ**—ನಿಮ್ಮ । **ಮಹಿಮಾ**—ಮಹತ್ವವು । **ಇತ್ಥಾ**—ಈ ಪ್ರಕಾರವಾಗಿರುವುದೆಂಬುದು । **ಬಟ್**—ಸತ್ಯವಾಗಿಯೇ ಇದೆ । **ಪನಿಷ್ಠಃ**—ಅತ್ಯಂತ ಪೂಜ್ಯನಾದ ಪ್ರಜಾಪತಿಯು । **ವಾಂ**—ನಿಮ್ಮಿಬ್ಬರಿಗೂ । **ಸಮಾನಃ**—ಏಕಮಾತ್ರನಾದ । **ಜನಿತಾ**—ಪಿತೃವಾಗಿದ್ದಾನೆ । **ಯುವಂ**—ನೀವಿಬ್ಬರೂ । **ಭ್ರಾತರೌ**—ಭ್ರಾತೃಗಳಾಗಿದ್ದೀರಿ । **ಯಮೌ**—ಸಹೋತ್ಪನ್ನರಾದ ನೀವಿಬ್ಬರೂ । **ಇಹೇಹ-ಮಾತರಾ**—ಸರ್ವತ್ರ ಸ್ಥಿತವಾದ ಮಾತೃಗಳುಳ್ಳವರಾಗಿ (ಭೂಮಿ) ಇದ್ದೀರಿ.

॥ ಭಾವಾರ್ಥ ॥

ಎಲೈ ಇಂದ್ರಾಗ್ನಿಗಳೇ, ನಿಮ್ಮ ಮಹತ್ವವು ಈ ಪ್ರಕಾರವಾಗಿರುವುದೆಂಬುದು ಸತ್ಯವಾಗಿಯೇ ಇದೆ. ಅತ್ಯಂತ ಪೂಜ್ಯನಾದ ಪ್ರಜಾಪತಿಯು ನಿಮ್ಮಿಬ್ಬರಿಗೂ ಏಕಮಾತ್ರನಾದ ಪಿತೃವಾಗಿದ್ದಾನೆ. ನೀವಿಬ್ಬರೂ ಭ್ರಾತೃಗಳಾಗಿದ್ದೀರಿ.

ಸಹೋತ್ಪನ್ನರಾದ ನೀವಿಬ್ಬರೂ ಸರ್ವತ್ರ ಸ್ಥಿತವಾದ ಮಾತೃಗಳುಳ್ಳವರಾಗಿದ್ದೀರಿ. ಸರ್ವತ್ರವ್ಯಾಪ್ತಳಾದ ದೇವ ಮಾತೆಯಾದ ಅದಿತಿಯೇ ನಿಮ್ಮ ಮಾತೆಯು.

English Translation.

Your greatness, Indra and Agni, is after this fashion, and is most deserving of praise: the same is your progenitor: twin brothers are you, having a mother everywhere present.

|| ವಿಶೇಷವಿಷಯಗಳು ||

**ಯಮೌ ಇಹೇಹಮಾತರಾ**— ಇಲ್ಲಿ **ಯಮೌ** ಎಂದರೆ ಯಮಳರು ಅವಳೀ ಮಕ್ಕಳು. ಇಂದ್ರಾಗ್ನಿಗಳನ್ನು ಅವಳೀ ಮಕ್ಕಳೆಂದು ಇಲ್ಲಿ ವರ್ಣಿಸಿದೆ. ಏಕೆಂದರೆ ಇಂದ್ರಾಗ್ನಿಗಳಿಗೆ ಪ್ರಜಾಪತಿಯೇ ತಂದೆಯು. ದೇವ ಮಾತೆಯಾದ ಅದಿತಿಯೇ ತಾಯಿಯು. ಆದುದರಿಂದ ಇಂದ್ರಾಗ್ನಿಗಳು ಒಬ್ಬರಿಗೊಬ್ಬರು ಸಹೋದರರು ಮತ್ತು ಒಟ್ಟಿಗೆ ಏಕಕಾಲದಲ್ಲಿ ಉತ್ಪನ್ನರಾದುದರಿಂದ ಯಮಳರು. ಅದಿತಿಯನ್ನೇ ವಿಸ್ತೀರ್ಣವಾದ ಈ ಭೂಮಿಯೆಂದು ಹೇಳುವುದರಿಂದ ಭೂಮಿಯೇ ಇವರ ಮಾತೆಯೆಂದೂ ಹೇಳಬಹುದು. ಯಾಸ್ಕರು ಯಮಳರ ವಿಷಯದಲ್ಲಿ ಉದಾಹರಣೆಗಾಗಿ ಈ ಋಕ್ಕಿನ **ಯಮಾವಿಹೇಹಮಾತರಾ** ಎಂಬ ವಾಕ್ಯವನ್ನೇ ಉದಾಹರಿಸಿರುವರು (ನಿ. ೧೦-೨೧)

|| ಸಂಹಿತಾಪಾಠಃ ||

ಓಕಿವಾಂಸಾ ಸುತೇ ಸಚಾಁ ಅಶ್ವಾ ಸಪ್ತೀ ಇವಾದನೇ |
ಇಂದ್ರಾ ನ್ವ೧ಗ್ನೀ ಅವಸೇಹ ವಜ್ರಿಣಾ ವಯಂ ದೇವಾ ಹವಾಮಹೇ || ೩ ||

|| ಪದಪಾಠಃ ||

ಓಕಿऽವಾಂಸಾ | ಸುತೇ | ಸಚಾ | ಅಶ್ವಾ | ಸಪ್ತೀ ಇವೇತಿ ಸಪ್ತೀऽಇವ | ಆದನೇ |
ಇಂದ್ರಾ | ನು | ಅಗ್ನೀ ಇತಿ | ಅವಸಾ | ಇಹ | ವಜ್ರಿಣಾ | ವಯಂ | ದೇವಾ | ಹವಾಮಹೇ || ೩ ||

|| ಸಾಯಣಭಾಷ್ಯಂ ||

ಹೇ ಇಂದ್ರಾಗ್ನೀ ಸುತೇऽಭಿಷುತೇ ಸೋಮೇ ಯುವಾಂ ಸಚಾ ಸಹೌಕಿವಾಂಸಾವೋಕಿವಾಂಸಾ ಸಮವೇತೌ ಸಂಗತೌ ಭವತಂ || ಉಚ ಸಮವಾಯ ಇತ್ಯಸ್ಯೈತದ್ರೂಪಂ || ತತ್ರ ದೃಷ್ಟಾಂತಃ | ಆದನೇ ಭಕ್ಷಣೀಯೇ ಘಾಸೇ ಸಪ್ತೀ ಇವಾಶ್ವಾ ಸರ್ಪಣಶೀಲಾವಶ್ವಾವಿವ | ನು ಅದ್ಯ ವಯಂ ತಾದೃಶಾವಿಂದ್ರಾಗ್ನೀ ಇಹಾಸ್ಮಿನ್ಯಜ್ಞೇऽವಸಾ ರಕ್ಷಣೇನ ಹೇತುನಾ ಹವಾಮಹೇ | ಆಹ್ವಯಾಮಹೇ || ಇತರೇತರಯೋಗಾದಿಂದ್ರಶಬ್ದೇऽಗ್ನಿಶಬ್ದೇ ಚ ದ್ವಿವಚನಂ || ಕೀದೃಶಾವಿಂದ್ರಾಗ್ನೀ | ವಜ್ರಿಣಾ ವಜ್ರಿಣಾವಾಯುಧೋಪೇತೌ ದೇವಾ ದಾನಾದಿಗುಣಯುಕ್ತೌ ||

॥ ಪ್ರತಿಪದಾರ್ಥ ॥

(ಎಲೈ ಇಂದ್ರಾಗ್ನಿಗಳೇ), **ಸಪ್ತೀ**—ವೇಗಗಾಮಿಗಳಾದ। **ಅಶ್ವಾ**—ಅಶ್ವಗಳು। **ಆದನೇ**—ಭಕ್ಷಣಾರ್ಥವಾಗಿ ಒಟ್ಟಿಗೆ ಸೇರಿಕೊಳ್ಳುವಂತೆ। **ಸುತೇ**—ಸೋಮರಸವು ಹಿಂಡಲ್ಪಟ್ಟ ಕಾಲದಲ್ಲಿ। **ಸಚಾ**—ನೀವಿಬ್ಬರೂ ಒಟ್ಟಿಗೆ ಸೇರಿ। **ಓಕಿವಾಂಸಾ**—ಒಂದೇ ಸ್ಥಾನವುಳ್ಳವರಾಗುತ್ತೀರಿ। **ನು**—ಈಗ। **ವಯಂ**—ನಾವು। **ಇಹ**—ಈ ಯಜ್ಞದಲ್ಲಿ। **ಅವಸಾ**—ರಕ್ಷಣಾರ್ಥವಾಗಿ। **ವಜ್ರಿಣಾ**—ವಜ್ರಾಯುಧಧಾರಿಗಳೂ। **ದೇವಾ**—ದೇವತಾತ್ಮರೂ ಆದ। **ಇಂದ್ರಾಗ್ನೀ**—ಇಂದ್ರಾಗ್ನಿಗಳನ್ನು। **ಹವಾಮಹೇ**—ಪ್ರಾರ್ಥಿಸಿ ಕರೆಯುತ್ತೇವೆ.

॥ ಭಾವಾರ್ಥ ॥

ಎಲೈ ಇಂದ್ರಾಗ್ನಿಗಳೇ, ವೇಗಗಾಮಿಗಳಾದ ಅಶ್ವಗಳು ತೃಣ ಭಕ್ಷಣಾರ್ಥವಾಗಿ ಒಟ್ಟಿಗೆ ಕೂಡಿಕೊಳ್ಳುವಂತೆ, ಸೋಮರಸವು ಹಿಂಡಲ್ಪಟ್ಟ ಈ ಕಾಲದಲ್ಲಿ ನೀವಿಬ್ಬರೂ ಒಟ್ಟಿಗೆ ಸೇರಿ ಒಂದೇ ಸ್ಥಾನವುಳ್ಳವರಾಗುತ್ತೀರಿ. ನಾವು ಈಗ ಈ ಯಜ್ಞದಲ್ಲಿ ನಮ್ಮ ರಕ್ಷಣಾರ್ಥವಾಗಿ, ವಜ್ರಾಯುಧಧಾರಿಗಳೂ, ದೇವತಾತ್ಮರೂ ಆದ ಇಂದ್ರಾಗ್ನಿಗಳನ್ನು ಪ್ರಾರ್ಥಿಸಿ ಕರೆಯುತ್ತೇವೆ.

English Translation.

You approach together, when the libation is effused, like two fleet coursers to their forage: we invoke to-day Indra and Agni, deities armed with the thunderbolt, to this ceremony for our preservation.

॥ ಸಂಹಿತಾಪಾಠಃ ॥

ಯ ಇಂದ್ರಾಗ್ನೀ ಸುತೇಷು ವಾಂ ಸ್ತವತ್ತೇಷ್ವೃತಾವೃಧಾ ।
ಜೋಷವಾಕಂ ವದತಃ ಪಜ್ರಹೋಷಿಣಾ ನ ದೇವಾ ಭಸಥಶ್ಚನ ॥ ೪ ॥

॥ ಪದಪಾಠಃ ॥

ಯಃ । ಇಂದ್ರಾಗ್ನೀ ಇತಿ । ಸುತೇಷು । ವಾಂ । ಸ್ತವತ್ । ತೇಷು । ಋತಽವೃಧಾ ।
ಜೋಷಽವಾಕಂ । ವದತಃ । ಪಜ್ರಽಹೋಷಿಣಾ । ನ । ದೇವಾ । ಭಸಥಃ । ಚನ ॥ ೪ ॥

॥ ಸಾಯಣಭಾಷ್ಯಂ ॥

ಹೇ ಋತಾವೃಧಾ ಋತಸ್ಯ ಸತ್ಯಸ್ಯ ಯಜ್ಞಸ್ಯ ವಾ ವರ್ಧಯಿತಾರಾವಿಂದ್ರಾಗ್ನೀ ಸುತೇಷ್ವ-ಭಿಷುತೇಷು ಸೋಮೇಷು ಯಃ ಸ್ತೋತಾ ವಾಂ ಯುವಾಂ ಸ್ತವತ್ ಕುತ್ಸಿತಂ ಸ್ತುಯಾತ್ ತೇಷು ಸೋಮೇಷು ಮಧ್ಯೇ ಜೋಷವಾಕಂ ವದತೋ ಜೋಷಂ ಜೋಷಯಿತವ್ಯಂ ಪ್ರೀತಿಹೇತುತ್ವೇನ ಕರ್ತವ್ಯಂ ಸ್ವಯಮಪ್ರೀತಿಕರಂ ತಾದೃಶಂ ವಾಕಂ ವಾಕ್ಯಂ ವದತಸ್ತಸ್ಯ ಸ್ತೋತುಃ ಸೋಮಂ ಹೇ ಪಜ್ರಹೋಷಿಣಾ

ಹಜ್ರಃ ಪ್ರಾರ್ಜಿತಃ ಪ್ರಸಿದ್ಧೋ ಹೋಷೋ ಘೋಷಃ ಸ್ತೋತ್ರಂ ಯಯೋಸ್ತಾದೃಶೌ ಹೇ ದೇವಾ ದೇವೌ ಯುವಾಂ ನ ಭಸಥಃ । ನ ಭಕ್ಷಯಥಃ । ಚನೇತಿ ಪಾದಪೂರಣಃ ॥ ಅತ್ರ ನಿರುಕ್ತಂ । ಜೋಷವಾಕಮಿತ್ಯ-ವಿಜ್ಞಾತನಾಮಧೇಯಂ ಜೋಷಯಿತವ್ಯಂ ಭವತಿ । ಯ ಇಂದ್ರಾಗ್ನೀ ಸುತೇಷು ವಾಂ ಸೋಮೇಷು ಸ್ತೌತಿ ತೇಷ್ಬೃತಸ್ಯ ವರ್ಧಯಿತಾರೌ ನ ತಸ್ಯಾಶ್ನೀಥಃ । ಯೋಽಯಂ ಜೋಷವಾಕಂ ವದತಿ ವಿಜಂಜಪಃ ಪ್ರಾರ್ಜಿತಹೋಷಿಣಾ ದೇವೌ ನ ತಸ್ಯಾಶ್ನೀಥಃ । ನಿ. ೫-೨೨ । ಇತಿ ॥

॥ ಪ್ರತಿಪದಾರ್ಥ ॥

**ಋತಾವೃಧಾ**— ಯಜ್ಞವರ್ಧಕರೂ । **ಹಜ್ರಹೋಷಿಣಾ**— ಪ್ರಸಿದ್ಧವಾದ ಸ್ತುತಿಘೋಷವುಳ್ಳವರೂ । **ದೇವಾ**— ದೇವತಾತ್ಮರೂ ಆದ । **ಇಂದ್ರಾಗ್ನೀ**— ಎಲೈ ಇಂದ್ರಾಗ್ನಿಗಳೇ । **ಸುತೇಷು**— ಸೋಮರಸವು ಹಿಂಡಲ್ಪಟ್ಟ ಕಾಲದಲ್ಲಿ । **ಯಃ**— ಯಾವ ಸ್ತೋತೃವು । **ವಾಂ**— ನಿಮ್ಮಿಬ್ಬರನ್ನೂ ಉದ್ದೇಶಿಸಿ । **ಸ್ತುವತ್**— ಕುತ್ಸಿತವಾಗಿ ಸ್ತುತಿಸುವನೋ । **ತೇಷು**— ಸ್ತುತಿಕರ್ತರ ನಡುವೆಯೂ । **ಜೋಷವಾಕಂ**— ಅತೃಪ್ತಿಕರವಾದ ಸ್ತುತಿವಾಕ್ಯನ್ನು । **ವದತಃ**— ಪಠಿಸುವವರ ನಡುವೆಯೂ । **ನ ಭಸಥಃ**— ನೀವು ಹವಿಸ್ಸನ್ನು ಭಕ್ಷಿಸುವುದಿಲ್ಲ.

॥ ಭಾವಾರ್ಥ ॥

ಯಜ್ಞವರ್ಧಕರೂ, ಪ್ರಸಿದ್ಧವಾದ ಸ್ತುತಿಘೋಷವುಳ್ಳವರೂ, ದೇವತಾತ್ಮರೂ ಆದ ಎಲೈ ಇಂದ್ರಾಗ್ನಿಗಳೇ, ಸೋಮರಸವು ಹಿಂಡಲ್ಪಟ್ಟ ಕಾಲದಲ್ಲಿ ಯಾವ ಸ್ತೋತೃವು ನಿಮ್ಮಿಬ್ಬರನ್ನೂ ಉದ್ದೇಶಿಸಿ ಕುತ್ಸಿತವಾಗಿ ಸ್ತುತಿಸುವರೋ ಅವರ ನಡುವೆಯೂ ಅತೃಪ್ತಿಕರವಾದ ಸ್ತುತಿವಾಕ್ಯನ್ನು ಸ್ತುತಿಸುವವರ ನಡುವೆಯೂ ನೀವು ಹವಿಸ್ಸನ್ನು ಭಕ್ಷಿಸುವುದಿಲ್ಲ.

## English Translation.

Divine Indra and Agni, augmenters of sacrifice, by whom the acclamation (of praise) is received, you partake not of the (Soma) of him who, when the libation is effused, praises you (improperly), uttering unacceptable eulogies.

॥ ವಿಶೇಷವಿಷಯಗಳು ॥

**ಜೋಷವಾಕಂ— ಅಪ್ರೀತಿಕರಂ ವಾಕ್ಯಂ** । ಪ್ರೀತಿಯಿಲ್ಲದಿರುವ ವಾಕ್ಯವನ್ನು. ಈ ಶಬ್ದದ ಅರ್ಥವನ್ನು ವಿವರಿಸುವುದಕ್ಕಾಗಿ ಯಾಸ್ಕರು ಈ ಋಕ್ಕಿಗೆ ನಿರ್ವಚನವನ್ನು ಹೇಳಿದ್ದಾರೆ—

> ಜೋಷವಾಕಂ । ಜೋಷವಾಕಮಿತ್ಯವಿಜ್ಞಾತನಾಮಧೇಯಂ ಜೋಷಯಿತವ್ಯಂ ಭವತಿ । ಯ ಇಂದ್ರಾಗ್ನೀ ಸುತೇಷು ವಾಂ ಸ್ತವತ್ತೇಷ್ಬೃತಾವೃಧಾ । ಜೋಷವಾಕಂ ವದತಃ ಹಜ್ರಹೋ-ಷಿಣಾ ನ ದೇವಾ ಭಸಥಶ್ಚನ ॥ ಯ ಇಂದ್ರಾಗ್ನೀ ಸುತೇಷು ವಾಂ ಸೋಮೇಷು ಸ್ತೌತಿ ತಸ್ಯಾಶ್ನೀಥೋಽಥ ಯೋಽಯಂ ಜೋಷವಾಕಂ ವದತಿ ವಿಜಜ್ಝಪಃ ಪ್ರಾರ್ಜಿತಹೋಷಿಣಾ ನ ದೇವೌ ತಸ್ಯಾಶ್ನೀಥಃ ॥ (ನಿ. ೫-೨೨)

ಎಲೈ ಇಂದ್ರಾಗ್ನಿಗಳೇ, ಸೋಮರಸವು ಹಿಂಡಲ್ಪಟ್ಟಕೂಡಲೇ ಯಾವ ಸ್ತೋತೃವು ನಿಮ್ಮಿಬ್ಬರನ್ನೂ ಸ್ತುತಿಸುವನೋ ಅವನು ಅರ್ಪಿಸಿದ ಹವಿಸ್ಸನ್ನು ಅಥವಾ ಸೋಮವನ್ನು ಸ್ವೀಕರಿಸಿ ಭಕ್ಷಿಸುತ್ತೀರಿ. ಆದರೆ ಸ್ತುತಿಸುವಾಗ ತನಗೆ ತಿಳಿಯದಿರುವುದನ್ನು ಅಥವಾ ಪ್ರೀತಿಕರವಲ್ಲದ್ದನ್ನು ಪಠಿಸಿ ಸ್ತುತಿಸುವ ಸ್ತುತಿಕರ್ತನು ಅರ್ಪಿಸುವುದನ್ನು ನೀವು ಸ್ವೀಕರಿಸಿ ಭಕ್ಷಿಸುವುದಿಲ್ಲ ಎಂದು ನಿರ್ವಚನದ ಮುಖ್ಯಾಭಿಪ್ರಾಯವು.

ಸಾಯಣರ ಅರ್ಥವಿವರಣೆಗೂ ಯಾಸ್ಕರ ವಿವರಣೆಗೂ ಈ ಋಕ್ಕಿನ ಪೂರ್ವಾರ್ಧದ ಋಕ್ಕಿನ ವಿಷಯದಲ್ಲಿ ಸ್ವಲ್ಪ ವ್ಯತ್ಯಾಸವಿದೆ. ಸಾಯಣರು ಇಂದ್ರಾಗ್ನಿಗಳನ್ನು ಕುತ್ಸಿತವಾಗಿ ಎಂದರೆ ನಿಂದೆಸಹಿತವಾಗಿ, ದೋಷಸಹಿತವಾಗಿ, ಅವಹೇಳನರೂಪವಾಗಿ ಸ್ತುತಿಮಾಡುವ ಪುರುಷನ ಹವಿಸ್ಸನ್ನು ಭಕ್ಷಿಸುವುದಿಲ್ಲ ಎಂದು ಅರ್ಥಮಾಡಿದ್ದಾರೆ. ಆದರೆ ಯಾಸ್ಕರು—ಸೋಮಾಭಿಷವವಾದ ಮೇಲೆ ಸ್ತೋತ್ರಮಾಡುವ ಸ್ತುತಿಕರ್ತನ ಹವಿಸ್ಸನ್ನು ಭಕ್ಷಿಸುತ್ತಾರೆಂದೂ ಆದರೆ ಆ ಸ್ತುತಿಯಲ್ಲಿ ನಿಂದಾ, ಅಥವಾ ಪ್ರೀತಿರಹಿತ ವಾಕ್ಯಗಳಿದ್ದಲ್ಲಿ ಅವನ ಹವಿಸ್ಸನ್ನು ಭಕ್ಷಿಸುವುದಿಲ್ಲವೆಂದೂ ಅರ್ಥವಿವರಣೆ ಮಾಡಿದ್ದಾರೆ. ಇಲ್ಲಿ ಎರಡು ವಿಧವಾದ ಅರ್ಥಗಳಿಗೂ ಅವಕಾಶವಿದೆ.

॥ ಸಂಹಿತಾಪಾಠಃ ॥

ಇಂದ್ರಾಗ್ನೀ ಕೋ ಅಸ್ಯ ವಾಂ ದೇವೌ ಮರ್ತಶ್ಚಿಕೇತತಿ ।
ವಿಷೂಚೋ ಅಶ್ವಾನ್ಯುಯುಜಾನ ಈಯತ ಏಕಃ ಸಮಾನ ಆ ರಥೇ ॥ ೫ ॥

॥ ಪದಪಾಠಃ ॥

ಇಂದ್ರಾಗ್ನೀ ಇತಿ । ಕಃ । ಅಸ್ಯ । ವಾಂ । ದೇವೌ । ಮರ್ತಃ । ಚಿಕೇತತಿ ।
ವಿಷೂಚಃ । ಅಶ್ವಾನ್ । ಯುಯುಜಾನಃ । ಈಯತೇ । ಏಕಃ । ಸಮಾನೇ । ಆ । ರಥೇ ॥ ೫ ॥

॥ ಸಾಯಣಭಾಷ್ಯಂ ॥

ಹೇ ದೇವೌ ದ್ಯೋತಮಾನಾವಿಂದ್ರಾಗ್ನೀ ವಾಂ ಯುವಯೋರಸ್ಯೇದಂ ಕರ್ಮ ಕೋ ಮರ್ತೋ ಮನುಷ್ಯಶ್ಚಿಕೇತತಿ । ಜಾನೀಯಾತ್ । ನ ಕೋಽಪೀತ್ಯರ್ಥಃ । ಕಿಂ ತತ್ಕರ್ಮ । ವಿಷೂಚೋ ನಾನಾಂಚತೋ ಗಚ್ಛತೋಽಶ್ವಾನ್ ಸಮಾನ ಉಭಯಾರ್ಥ ಏಕಸ್ಮಿನ್ರಥೇ ಯುವಯೋರೇಕ ಇಂದ್ರಃ ಸೂರ್ಯಾತ್ಮನಾ ವರ್ತಮಾನೋ ಯುಯುಜಾನಸ್ತಾದೃಶಾನಶ್ವಾನ್ಯೋಜಯನ್ ಈಯತೇ । ಸರ್ವಂ ಜಗದಭಿಗಚ್ಛತಿ । ಯದ್ವಾ । ವಿಷೂಚೋ ನಾನಾರೂಪಾನಶ್ವಾನ್ ವ್ಯಾಪಕಾನ್ ಸಮಾನ ಏಕರೂಪೇ ರಥೇ ಸಂವತ್ಸರಾತ್ಮಕೇ ಯುಯುಜಾನೋ ಯೋಜಯನ್ ಯುವಯೋರೇಕಃ ಸೂರ್ಯಾತ್ಮೇಂದ್ರ ಈಯತೇ । ಆಗಚ್ಛತಿ । ಏತದ್ಯುವಯೋಃ ಕರ್ಮ ಕೋ ಯಥಾವಜ್ಜಾನೀಯಾದಿತ್ಯರ್ಥಃ ॥

॥ ಪ್ರತಿಪದಾರ್ಥ ॥

**ದೇವೌ**—ಪ್ರಕಾಶಮಾನರಾದ। **ಇಂದ್ರಾಗ್ನೀ**—ಎಲೈ ಇಂದ್ರಾಗ್ನಿಗಳೇ। **ಏಕಃ**—ನಿಮ್ಮಿಬ್ಬರಲ್ಲಿ ಒಬ್ಬನಾದ ಇಂದ್ರನು। **ಸಮಾನೇ ರಥೇ**—ನಿಮ್ಮಿಬ್ಬರಿಗೂ ಸಮಾನವಾದ ಒಂದೇ ರಥದಲ್ಲಿ ಕುಳಿತುಕೊಂಡು। **ವಿಷೂಚಃ**—ಎಲ್ಲಾ ಕಡೆಗಳಲ್ಲಿಯೂ ಸಂಚರಿಸತಕ್ಕ। **ಅಶ್ವಾನ್**—ಅಶ್ವಗಳನ್ನು। **ಯುಯುಜಾನಃ**—ರಥಕ್ಕೆ ಸೇರಿಸಿದವನಾಗಿ। **ಆ ಈಯತೇ**—ಸೂರ್ಯರೂಪದಲ್ಲಿ ಸಂಚರಿಸುತ್ತಿರುವಾಗ। **ವಾಂ**—ನಿಮ್ಮ। **ಅಸ್ಯ**—ಈ ಸಂಚಾರರೂಪದ ಕರ್ಮವನ್ನು। **ಕಃ ಮರ್ತಃ**—ಯಾವ ಮಾನವನು ತಾನೇ। **ಚಿಕೇತತಿ**—ಅರಿಯಬಲ್ಲನು?

॥ ಭಾವಾರ್ಥ ॥

ಪ್ರಕಾಶಮಾನರಾದ ಎಲೈ ಇಂದ್ರಾಗ್ನಿಗಳೇ, ನಿಮ್ಮಿಬ್ಬರಲ್ಲಿ ಒಬ್ಬನಾದ ಇಂದ್ರನು ನಿಮ್ಮಿಬ್ಬರಿಗೂ ಸಮಾನವಾದ ಒಂದೇ ರಥದಲ್ಲಿ ಕುಳಿತುಕೊಂಡು ಎಲ್ಲಾ ಕಡೆಗಳಲ್ಲಿಯೂ ಸಂಚರಿಸತಕ್ಕ ಅಶ್ವಗಳನ್ನು ರಥಕ್ಕೆ ಸೇರಿಸಿದವನಾಗಿ ಸೂರ್ಯರೂಪದಲ್ಲಿ ಸಂಚರಿಸುವಾಗ ನಿಮ್ಮ ಈ ಸಂಚಾರರೂಪದ ಕರ್ಮವನ್ನೂ ಅದರ ಗುರಿಯನ್ನೂ ಯಾವ ಮಾನವನು ತಾನೇ ಅರಿಯಬಲ್ಲನು?

## English Translation.

What mortal, divine Indra and Agni, is a judge of that (your act), when one of you, harnessing his diversely-going horses, proceeds in the common car.

॥ ಸಂಹಿತಾಪಾಠಃ ॥

ಇಂದ್ರಾಗ್ನೀ ಅಪಾದಿಯಂ ಪೂರ್ವಾಗಾತ್ಪದ್ವತೀಭ್ಯಃ।
ಹಿತ್ವೀ ಶಿರೋ ಜಿಹ್ವಯಾ ವಾವದಚ್ಚರತ್ತ್ರಿಂಶತ್ಪದಾ ನ್ಯಕ್ರಮೀತ್ ॥ ೬ ॥

॥ ಪದಪಾಠಃ ॥

ಇಂದ್ರಾಗ್ನೀ ಇತಿ। ಅಪಾತ್। ಇಯಂ। ಪೂರ್ವಾ। ಆ। ಅಗಾತ್। ಪತ್ಽವತೀಭ್ಯಃ।
ಹಿತ್ವೀ। ಶಿರಃ। ಜಿಹ್ವಯಾ। ವಾವದತ್। ಚರತ್। ತ್ರಿಂಶತ್। ಪದಾ। ನಿ। ಅಕ್ರಮೀತ್ ॥ ೬ ॥

॥ ಸಾಯಣಭಾಷ್ಯಂ ॥

ಹೇ ಇಂದ್ರಾಗ್ನೀ ಅಪಾತ್ಪಾದರಹಿತೇಯಮುಷಾಃ ಪದ್ವತೀಭ್ಯಃ ಪಾದಯುಕ್ತಾಭ್ಯಃ ಸುಪ್ತಾಭ್ಯಃ ಪ್ರಜಾಭ್ಯಃ ಪೂರ್ವಾ ಪ್ರಥಮಭಾವಿನೀ ಸತ್ಯಾಗಾತ್। ಆಗಚ್ಛತಿ। ತಥಾ ಪ್ರಾಣಿನಾಂ ಶಿರೋ ಹಿತ್ವೀ ಪ್ರೇರಯಿತ್ರೀ। ಯದ್ವಾ। ಶಿರೋ ಹಿತ್ವಾ ತ್ಯಕ್ತ್ವಾ ಸ್ವಯಮಶಿರಸ್ಕಾ ಸತೀ। ಜಿಹ್ವಯಾ ಪ್ರಾಣಿಸ್ಥಯಾ ತದೀ-

ಯೇನ ವಾಗಿಂದ್ರಿಯೇಣ ನಾವದತ್ ಭೃಶಂ ಶಬ್ದಂ ಕುರ್ವತೀ ಚರತ್ । ಏವಂ ಚರಂತ್ಯುಷಾಸ್ತ್ರಿಂಶತ್ಪದಾ-ನ್ಯವಯುವಭೂತಾನ್ ತ್ರಿಂಶನ್ಮುಹೂರ್ತಾನ್ನ್ಯಕ್ರಮೀತ್ । ಏಕೇನ ದಿವಸೇನಾತಿಕ್ರಾಮತಿ । ಏತಚ್ಚ ಯುವಯೋಃ ಕರ್ಮ । ತತ್ಕೋ ಜಾನೀಯಾದಿತಿ ಪೂರ್ವತ್ರಾನ್ವಯಃ ॥

॥ ಪ್ರತಿಪದಾರ್ಥ ॥

**ಇಂದ್ರಾಗ್ನೀ**—ಎಲೈ ಇಂದ್ರಾಗ್ನಿಗಳೇ । **ಅಪಾತ್**—ಪಾದರಹಿತಳಾದ । **ಇಯಂ**—ಈ ಉಷೋ ದೇವಿಯು । **ಪದ್ವತೀಭ್ಯಃ**—ಪಾದಯುಕ್ತರಾದ ಪ್ರಜೆಗಳಿಗಿಂತಲೂ । **ಪೂರ್ವಾ**—ಪ್ರಥಮ ಭಾವಿನಿಯಾಗಿಯೇ । **ಆಗಾತ್**—ಆವಿರ್ಭವಿಸಿ ಬರುತ್ತಾಳೆ । **ಶಿರಃ**—ತನ್ನ ತಲೆಯನ್ನು । **ಹಿತ್ವೀ**—ಮರೆಸಿಕೊಂಡು । **ಜಿಹ್ವಯಾ**—ಪ್ರಾಣಿಗಳ ವಾಗಿಂದ್ರಿಯಗಳಿಂದ । **ನಾವದತ್**—ಶಬ್ದಮಾಡಿಸುತ್ತಾ । **ಚರತ್**—ಸಂಚರಿಸುವವಳಾಗಿ । **ತ್ರಿಂಶತ್ ಪದಾ**—ಮೂವತ್ತು ಪಾದಗಳಷ್ಟು ದೂರ (ಮೂವತ್ತು ಮುಹೂರ್ತಗಳಷ್ಟು ಕಾಲ) । **ನ್ಯಕ್ರಮೀತ್**—ಗೋಚರಿಸುವಳು.

॥ ಭಾವಾರ್ಥ ॥

ಎಲೈ ಇಂದ್ರಾಗ್ನಿಗಳೇ, ಪಾದರಹಿತಳಾದ ಈ ಉಷೋದೇವಿಯು ಪಾದಯುಕ್ತರಾದ ಪ್ರಜೆಗಳಿಗಿಂತಲೂ ಪೂರ್ವಭಾವಿಯಾಗಿಯೇ ಆವಿರ್ಭವಿಸಿ ಬರುತ್ತಾಳೆ. ತನ್ನ ತಲೆಯನ್ನು ಮರೆಸಿಕೊಂಡು ಪ್ರಾಣಿಗಳ ವಾಗಿಂದ್ರಿಯ ಗಳಿಂದ ಶಬ್ದಮಾಡಿಸುತ್ತಾ ಸಂಚರಿಸುವವಳಾಗಿ, ಮೂವತ್ತು ಮುಹೂರ್ತಗಳ ಕಾಲ ಗೋಚರಿಸುವಳು. ಇವೆಲ್ಲಾ ಇಂದ್ರಾಗ್ನಿಗಳ ಪ್ರಭಾವವು. ಇದನ್ನು ಯಾವ ಮಾನವನು ಅರಿಯಬಲ್ಲನು ?

English Translation.

This footless (dawn), Indra and Agni, comes before the footed sleepers, animating the head (of living beings with consciousness), causing them to utter loud sounds with their tongues, and passing onwards she traverses thirty steps.

॥ ಸಂಹಿತಾಪಾಠಃ ॥

ಇಂದ್ರಾಗ್ನೀ ಆ ಹಿ ತನ್ವತೇ ನರೋ ಧನ್ವಾನಿ ಬಾಹ್ವೋಃ ।
ಮಾ ನೋ ಅಸ್ಮಿನ್ಮಹಾಧನೇ ಪರಾ ವರ್ಕ್ತಂ ಗವಿಷ್ಟಿಷು ॥ ೭ ॥

॥ ಪದಪಾಠಃ ॥

ಇಂದ್ರಾಗ್ನೀ ಇತಿ । ಆ । ಹಿ । ತನ್ವತೇ । ನರಃ । ಧನ್ವಾನಿ । ಬಾಹ್ವೋಃ ।
ಮಾ । ನಃ । ಅಸ್ಮಿನ್ । ಮಹಾಽಧನೇ । ಪರಾ । ವರ್ಕ್ತಂ । ಗೋಽಇಷ್ಟಿಷು ॥ ೭ ॥

॥ ಸಾಯಣಭಾಷ್ಯಂ ॥

ಹೇ ಇಂದ್ರಾಗ್ನೀ ನರೋ ಯೋದ್ಧಾರೋ ಮನುಷ್ಯಾ ಬಾಹ್ವೋರ್ಹಸ್ತಯೋರ್ಧನ್ವಾನಿ ಧನೂಂಷ್ಯಾ ತನ್ವತೇ ಹಿ । ಆತತಜ್ಯಾನಿ ಕುರ್ವತೇ ಹಿ । ಯುವಾಂ ಚಾಸ್ಮಿನ್ಮಹಾಧನೇ ಜೇತವ್ಯೇನ ಮಹಾಧನೇನೋಪೇತೇ ಸಂಗ್ರಾಮೇ ಗವಿಷ್ಟಿಷು ಗವಾಮನ್ವೇಷಣೇಷು ನೋಽಸ್ಮಾನ್ ಮಾ ಪರಾ ವರ್ಕ್ತಂ । ಮಾ ಪರಿತ್ಯಜತಂ ॥

॥ ಪ್ರತಿಪದಾರ್ಥ ॥

**ಇಂದ್ರಾಗ್ನೀ**—ಎಲೈ ಇಂದ್ರಾಗ್ನಿಗಳೇ । **ನರಃ**—ಯುದ್ಧದಲ್ಲಿ ನಿರತರಾದ ಮಾನವರು । **ಬಾಹ್ವೋಃ** ತಮ್ಮ ಬಾಹುಗಳಿಂದ । **ಧನ್ವಾನಿ**—ಧನಸ್ಸುಗಳನ್ನು । **ಆ ತನ್ವತೇ ಹಿ**—ವಿಸ್ತರಿಸಿ ಹಿಡಿದಿದ್ದಾರೆಯಲ್ಲವೇ । (**ಯುವಾಂ**—ನೀವಿಬ್ಬರೂ) । **ಅಸ್ಮಿನ್ ಮಹಾಧನೇ**—ಪ್ರಭೂತವಾದ ಧನನಿಮಿತ್ತವಾಗಿ ಮಾಡುವ ಈ ಯುದ್ಧದಲ್ಲಿ । **ಗವಿಷ್ಟಿಷು**—ಗೋವುಗಳನ್ನು ಹುಡುಕುವ ಪ್ರಯತ್ನದಲ್ಲಿ ಇರುವಾಗ । **ನಃ**—ನಮ್ಮನ್ನು । **ಮಾ ಪರಾ ವರ್ಕ್ತಂ**— ತ್ಯಜಿಸಿ ಶತ್ರುಗಳ ವಶವಾಗುವಂತೆ ಮಾಡಬೇಡಿರಿ.

॥ ಭಾವಾರ್ಥ ॥

ಎಲೈ ಇಂದ್ರಾಗ್ನಿಗಳೇ, ಯುದ್ಧದಲ್ಲಿ ನಿರತರಾದ ಮಾನವರು ತಮ್ಮ ಬಾಹುಗಳಿಂದ ಧನುಸ್ಸುಗಳನ್ನು ವಿಸ್ತರಿಸಿ ಹಿಡಿದಿದ್ದಾರೆಯಲ್ಲವೇ! ಪ್ರಭೂತವಾದ ಧನ ಲಾಭಕ್ಕಾಗಿ ನಡೆಸುತ್ತಿರುವ ಈ ಯುದ್ಧದಲ್ಲಿ ಗೋವುಗಳನ್ನು ಹುಡುಕುವ ಪ್ರಯತ್ನದಲ್ಲಿರುವಾಗ ನಮ್ಮನ್ನು ತ್ಯಜಿಸಿ ಶತ್ರುಗಳ ವಶವಾಗುವಂತೆ ಮಾಡಬೇಡಿರಿ.

## English Translation.

Indra and Agni, men verily stretch their bows with their arms, but do not desert us contending for cattle in the great combat.

॥ ಸಂಹಿತಾಪಾಠಃ ॥

ಇಂದ್ರಾಗ್ನೀ ತಪಂತಿ ಮಾಘಾ ಅರ್ಯೋ ಅರಾತಯಃ ।
ಅಪ ದ್ವೇಷಾಂಸ್ಯಾ ಕೃತಂ ಯುಯುತಂ ಸೂರ್ಯಾದಧಿ ॥ ೮ ॥

॥ ಪದಪಾಠಃ ॥

ಇಂದ್ರಾಗ್ನೀ ಇತಿ । ತಪಂತಿ । ಮಾ । ಅಘಾಃ । ಅರ್ಯಃ । ಅರಾತಯಃ ।
ಅಪ । ದ್ವೇಷಾಂಸಿ । ಆ । ಕೃತಂ । ಯುಯುತಂ । ಸೂರ್ಯಾತ್ । ಅಧಿ ॥ ೮ ॥

॥ ಸಾಯಣಭಾಷ್ಯಂ ॥

**ಹೇ ಇಂದ್ರಾಗ್ನೀ ಅಘಾ ಅಘಂತ್ರ್ಯೋಽಯೋಽಭಿಗಂತ್ರ್ಯೋಽರಾತಯಃ ಶತ್ರುಸೇನಾ ಮಾ ತಪಂತಿ । ಮಾಂ ಬಾಧಂತೇ । ತಾ ಅಪಾ ಕೃತಂ । ಅಪಾಕುರುತಂ । ತಥಾ ದ್ವೇಷಾಂಸಿ ದ್ವೇಷ್ಟೄನ್‌ಶತ್ರೂನ್ ಸೂರ್ಯಾದಧಿ । ಅಧಿಃ ಪಂಚಮ್ಯರ್ಥಾನುವಾದಕಃ । ಸೂರ್ಯದರ್ಶನಾದ್ಯುಯುತಂ । ಪೃಥಕ್ಕುರುತಂ ಚ । ಯಥಾ ತೇ ಸೂರ್ಯಂ ನ ಪಶ್ಯಂತಿ ತಥಾ ಕುರುತಂ । ಮಾರಯತಮಿತ್ಯರ್ಥಃ ।**

॥ ಪ್ರತಿಪದಾರ್ಥ ॥

**ಇಂದ್ರಾಗ್ನೀ**—ಎಲೈ ಇಂದ್ರಾಗ್ನಿಗಳೇ | **ಅಘಾಃ**—ಪಾಪಕಾರಿಗಳೂ | **ಅರ್ಯಃ**—ಎದುರು ಬೀಳುವವರೂ ಆದ | **ಅರಾತಯಃ**—ಶತ್ರುಗಳು | **ಮಾ**—ನನ್ನನ್ನು | **ತಪಂತಿ**—ಹಿಂಸಿಸುತ್ತಾರೆ | **ಅಪ ಆ ಕೃತಂ**—ಅವರನ್ನು ದೂರಕ್ಕಟ್ಟಿರಿ | **ದ್ವೇಷಾಂಸಿ**—ನಮ್ಮನ್ನು ದ್ವೇಷಿಸುವ ಶತ್ರುಗಳನ್ನು | **ಸೂರ್ಯಾದಧಿ**—ಸೂರ್ಯ ದರ್ಶನದಿಂದ | **ಯುಯುತಂ**—ಬೇರೆ ಮಾಡಿರಿ (ಅವರಿಗೆ ಸೂರ್ಯದರ್ಶನವೂ ಸೂರ್ಯನ ಪ್ರಕಾಶವೂ ಇಲ್ಲದಿರುವಂತೆ ಮಾಡಿರಿ).

॥ ಭಾವಾರ್ಥ ॥

ಎಲೈ ಇಂದ್ರಾಗ್ನಿಗಳೇ, ಪಾಪಕಾರಿಗಳೂ, ನಮ್ಮ ಮೇಲೆ ಬೀಳುವವರೂ ಆದ ಶತ್ರುಗಳು ನನ್ನನ್ನು ಹಿಂಸಿಸುತ್ತಾರೆ. ಅವರನ್ನು ದೂರಕ್ಕಟ್ಟಿರಿ. ನಮ್ಮನ್ನು ದ್ವೇಷಿಸುವ ಶತ್ರುಗಳನ್ನು ಸೂರ್ಯ ದರ್ಶನದಿಂದ ಬೇರೆ ಮಾಡಿರಿ, ಎಂದರೆ ಅವರಿಗೆ ಸೂರ್ಯ ಪ್ರಕಾಶವೇ ಇಲ್ಲದಂತೆ ಮಾಡಿರಿ.

English Translation.

Indra and Agni, murderous, aggressive enemies harass us: drive away my adversaries: separate them from (sight of) the sun.

॥ ಸಂಹಿತಾಪಾಠಃ ॥

ಇಂದ್ರಾಗ್ನೀ ಯುವೋರಪಿ ವಸು ದಿವ್ಯಾನಿ ಪಾರ್ಥಿವಾ ।
ಆ ನ ಇಹ ಪ್ರ ಯಚ್ಛತಂ ರಯಿಂ ವಿಶ್ವಾಯುಪೋಷಸಂ ॥ ೯ ॥

॥ ಪದಪಾಠಃ ॥

ಇಂದ್ರಾಗ್ನೀ ಇತಿ । ಯುವೋಃ । ಅಪಿ । ವಸು । ದಿವ್ಯಾನಿ । ಪಾರ್ಥಿವಾ ।
ಆ । ನಃ । ಇಹ । ಪ್ರ । ಯಚ್ಛತಂ । ರಯಿಂ । ವಿಶ್ವಾಯುಽಪೋಷಸಂ ॥ ೯ ॥

॥ ಸಾಯಣಭಾಷ್ಯಂ ॥

ಹೇ ಇಂದ್ರಾಗ್ನೀ ಯುವೋರ್ಯುವಯೋರ್ದಿವ್ಯಾನಿ ದಿವಿ ಭವಾನಿ ಪಾರ್ಥಿವಾ ಪೃಥಿವ್ಯಾಂ ಭವಾನಿ ಲೋಕದ್ವಯಸಂಬಂಧೀನಿ ವಸು ವಸೂನ್ಯಪಿ ಹಿತಾನಿ ಯುವಯೋರೇವ ವರ್ತಂತೇ। ಅತಃ ಕಾರಣಾದಿಹಾಸ್ಮಿನ್ಯಜ್ಞೇ ನೋಽಸ್ಮಭ್ಯಂ ರಯಿಂ ಧನಮಾ ಅಭಿ ಪ್ರ ಯಚ್ಛತಂ। ಕೀದೃಶಂ ರಯಿಂ। ವಿಶ್ವಾಯುಪೋಷಸಂ। ಆಯವ ಇತಿ ಮನುಷ್ಯನಾಮ। ಸರ್ವೇಷಾಂ ಮನುಷ್ಯಾಣಾಂ ಪೋಷಣಾಯ ಪರ್ಯಾಪ್ತಂ। ಯದ್ವಾ। ಸರ್ವಸ್ಯಾಯುಷಃ ಪೋಷಣೇ ಶಕ್ತಂ॥ ಛಾಂದಸೋ ವರ್ಣಲೋಪಃ॥

॥ ಪ್ರತಿಪದಾರ್ಥ ॥

ಇಂದ್ರಾಗ್ನೀ—ಎಲೈ ಇಂದ್ರಾಗ್ನಿಗಳೇ। ದಿವ್ಯಾನಿ—ದ್ಯುಲೋಕದಲ್ಲಿರತಕ್ಕದ್ದೂ। ಪಾರ್ಥಿವಾ—ಪೃಥಿವೀಸ್ಥವಾದುದೂ ಆದ। ವಸು ಅಪಿ—ಸಮಸ್ತ ಸಂಪತ್ತುಗಳೂ ಕೂಡ। ಯುವೋಃ—ನಿಮ್ಮಿಬ್ಬರಿಗೆ ಮಾತ್ರ ಸೇರಿದವಾಗಿವೆ। ಇಹ—ಈ ಯಜ್ಞಕಾಲದಲ್ಲಿ। ನಃ—ನಮಗೆ। ವಿಶ್ವಾಯುಪೋಷಸಂ—ಸಕಲ ಮಾನವರಿಗೂ ಪೋಷಕವಾದ। ರಯಿಂ—ಧನವನ್ನು। ಆ ಪ್ರ ಯಚ್ಛತಂ—ಒದಗಿಸಿ ಕೊಡಿರಿ.

॥ ಭಾವಾರ್ಥ ॥

ಎಲೈ ಇಂದ್ರಾಗ್ನಿಗಳೇ, ದ್ಯುಲೋಕದಲ್ಲಿರತಕ್ಕದ್ದೂ, ಪೃಥಿವೀಸ್ಥವಾದುದೂ ಆದ ಸಮಸ್ತ ಸಂಪತ್ತುಗಳೂ ಕೂಡ ನಿಮ್ಮಿಬ್ಬರಿಗೆ ಮಾತ್ರ ಸೇರಿದವಾಗಿವೆ. ಈ ಯಜ್ಞಕಾಲದಲ್ಲಿ ಸಕಲ ಮಾನವರಿಗೂ ಪೋಷಕವಾದ ಧನವನ್ನು ನಮಗೆ ಒದಗಿಸಿ ಕೊಡಿರಿ.

English Translation.

Indra and Agni, yours are both celestial and terrestrial treasures: bestow upon us, on this occasion, life-sustaining riches.

॥ ಸಂಹಿತಾಪಾಠಃ ॥

ಇಂದ್ರಾಗ್ನೀ ಉಕ್ಥವಾಹಸಾ ಸ್ತೋಮೇಭಿರ್ಹವನಶ್ರುತಾ।
ವಿಶ್ವಾಭಿರ್ಗೀರ್ಭಿರಾ ಗತಮಸ್ಯ ಸೋಮಸ್ಯ ಪೀತಯೇ॥ ೧೦॥

॥ ಪದಪಾಠಃ ॥

ಇಂದ್ರಾಗ್ನೀ ಇತಿ। ಉಕ್ಥಽವಾಹಸಾ। ಸ್ತೋಮೇಭಿಃ। ಹವನಽಶ್ರುತಾ।
ವಿಶ್ವಾಭಿಃ। ಗೀಃಽಭಿಃ। ಆ। ಗತಂ। ಅಸ್ಯ। ಸೋಮಸ್ಯ। ಪೀತಯೇ॥ ೧೦॥

॥ ಸಾಯಣಭಾಷ್ಯಂ ॥

**ಹೇ ಉಕ್ಥವಾಹಸೋಕ್ಥೈಃ ಸ್ತುತಿಭಿರ್ವಹನೀಯೌ ಹೇ ಹವನಶ್ರುತಾ ಹವನಸ್ಯಾಹ್ವಾನಸ್ಯ ಶ್ರೋತಾರೌ ಏವಂಭೂತೌ ಹೇ ಇಂದ್ರಾಗ್ನೀ ಸ್ತೋಮೇಭಿಃ ಸ್ತೋತ್ರೈರ್ವಿಶ್ವಾಭಿಃ ಸರ್ವಾಭಿರ್ಗೀರ್ಭಿಃ ಶಸ್ತ್ರರೂಪಾಭಿರ್ವಾಗ್ಭಿಶ್ಚ ಹೇತುಭೂತಾಭಿರಾ ಗತಂ ಆಗಚ್ಛತಂ। ಕಿಮರ್ಥಂ। ಅಸ್ಯಾಸ್ಮದೀಯಸ್ಯ ಸೋಮಸ್ಯ ಪೀತಯೇ ಪಾನಾರ್ಥಂ ॥**

॥ ಪ್ರತಿಪದಾರ್ಥ ॥

**ಉಕ್ಥವಾಹಸಾ**—ಉಕ್ಥಮಂತ್ರಗಳಿಂದ ವಹಿಸಲ್ಪಡುವವರೂ । **ಹವನಶ್ರುತಾ**—ನಮ್ಮ ಸ್ತುತಿಗಳನ್ನು ಕೇಳುವವರೂ ಆದ। **ಇಂದ್ರಾಗ್ನೀ**—ಎಲೈ ಇಂದ್ರಾಗ್ನಿಗಳೇ। **ಸ್ತೋಮೇಭಿಃ**—ಸ್ತೋಮರೂಪವಾದ ಸ್ತೋತ್ರಗಳಿಂದಲೂ। **ವಿಶ್ವಾಭಿಃ**—ಸಮಸ್ತವಾದ। **ಗೀರ್ಭಿಃ**—ಶಸ್ತ್ರರೂಪವಾದ ವಾಕ್ಕುಗಳಿಂದಲೂ (ಆಕರ್ಷಿತರಾಗಿ)। **ಅಸ್ಯ**—ಈ ಯಜ್ಞದಲ್ಲಿರ್ಪಿಸಿದ। **ಸೋಮಸ್ಯ**—ಸೋಮರಸದ। **ಪೀತಯೇ**—ಪಾನಾರ್ಥವಾಗಿ। **ಆ ಗತಂ**—ದಯಮಾಡಿರಿ.

॥ ಭಾವಾರ್ಥ ॥

ಉಕ್ಥಮಂತ್ರಗಳಿಂದ ವಹಿಸಲ್ಪಡುವವರೂ, ನಮ್ಮ ಸ್ತುತಿಗಳನ್ನು ಕೇಳುವವರೂ ಆದ ಎಲೈ ಇಂದ್ರಾಗ್ನಿಗಳೇ, ಸ್ತೋಮರೂಪವಾದ ಸ್ತೋತ್ರಗಳಿಂದಲೂ, ಸಮಸ್ತವಾದ ಶಸ್ತ್ರರೂಪವಾದ ವಾಕ್ಕುಗಳಿಂದಲೂ ಆಕರ್ಷಿತರಾಗಿ ಈ ಯಜ್ಞದಲ್ಲಿರ್ಪಿಸುವ ಸೋಮದ ಪಾನಾರ್ಥವಾಗಿ ದಯಮಾಡಿರಿ.

English Translation.

Indra and Agni, who are to be attracted by hymns ; you, who hear our invocation (accompanied) by praises and by all adorations, come hither to drink of this Soma libation.



## ಅರವತ್ತನೆಯ ಸೂಕ್ತವು

॥ ಸಾಯಣಭಾಷ್ಯಂ ॥

**ಶ್ನಥದ್ವೃತ್ರಮಿತಿ ಪಂಚದಶರ್ಚಮೇಕಾದಶಂ ಸೂಕ್ತಂ ಭರದ್ವಾಜಸ್ಯಾರ್ಷಮೈಂದ್ರಾಗ್ನಂ। ಆದೌ ತಿಸ್ರಸ್ತ್ರಿಷ್ಟುಭಶ್ಚತುರ್ಥ್ಯಾದ್ಯಾ ನವ ಗಾಯತ್ರ್ಯಸ್ತ್ರಯೋದಶೀ ತ್ರಿಷ್ಟುಪ್ ಚತುರ್ದಶೀ ಬೃಹತೀ ಪಂಚದಶ್ಯನುಷ್ಟುಪ್। ತಥಾ ಚಾನುಕ್ರಾಂತಂ। ಶ್ನಥತ್ಪಂಚೋನಾ ಗಾಯತ್ರಂ ತು ತ್ರಿತ್ರಿಷ್ಟುಬಾದಿ ತ್ರಿಷ್ಟುಬ್ಬೃಹತ್ಯನುಷ್ಟುಬಂತಮಿತಿ ॥ ಗತಃ ಸೂಕ್ತವಿನಿಯೋಗಃ ॥ ವರುಣಪ್ರಘಾಸೇಷ್ವೈಂದ್ರಾಗ್ನಸ್ಯ ಹವಿಷಃ ಶ್ನಥದಿತ್ಯೇಷಾ ಯಾಜ್ಯಾ। ಸೂತ್ರಿತಂ ಚ। ಇಂದ್ರಾಗ್ನೀ ಅವಸಾ ಗತಂ ಶ್ನಥದ್ವೃತ್ರಮುತ ಸನೋತಿ ವಾಜಂ। ಆ. ೨-೧೭। ಇತಿ ॥**

ಅನುವಾದವು—**ಶ್ನಥದ್ವೃತ್ರಂ** ಎಂಬ ಈ ಸೂಕ್ತವು ಐದನೆಯ ಅನುವಾಕದಲ್ಲಿ ಹನ್ನೊಂದನೆಯ ಸೂಕ್ತವು. ಇದರಲ್ಲಿ ಹದಿನೈದು ಋಕ್ಕುಗಳಿರುವುವು. ಈ ಸೂಕ್ತಕ್ಕೆ ಭರದ್ವಾಜನು ಋಷಿಯು. ಇಂದ್ರಾಗ್ನಿಗಳು ದೇವತೆಯು. ಈ ಸೂಕ್ತದ ಮೊದಲಿನ ಮೂರು ಋಕ್ಕುಗಳು ತ್ರಿಷ್ಟುಪ್ ಛಂದಸ್ಕವು ; ನಾಲ್ಕನೆಯ ಋಕ್ಕಿನಿಂದ ಮುಂದಿನ ಒಂಭತ್ತು ಋಕ್ಕುಗಳು ಗಾಯತ್ರೀ ಛಂದಸ್ಕವು. ಹದಿಮೂರನೆಯ ಋಕ್ಕು ತ್ರಿಷ್ಟುಪ್ ಛಂದಸ್ಕವು. ಹದಿನಾಲ್ಕನೆಯ ಋಕ್ಕು ಬೃಹತೀ ಛಂದಸ್ಕವು. ಹದಿನೈದನೆಯ ಋಕ್ಕು ಅನುಷ್ಟುಪ್ ಛಂದಸ್ಕವು. ಅನುಕ್ರಮಣಿಕೆಯಲ್ಲಿ—**ಶ್ನಥತ್ಪಂಚೋನಾ ಗಾಯತ್ರಂ ತು ತ್ರಿತ್ರಿಷ್ಟುಬಾದಿ ತ್ರಿಷ್ಟುಬ್ಬೃಹತ್ಯನುಷ್ಟುಬಂತಂ** ಎಂದು ಹೇಳಿರುವುದು. ಸೂಕ್ತವಿನಿಯೋಗವನ್ನು ಹಿಂದೆಯೇ ಹೇಳಲಾದೆ. ವರುಣಪ್ರಘಾಸವೆಂಬ ಇಷ್ಟಿಯಲ್ಲಿ ಇಂದ್ರಾಗ್ನಿದೇವತೆಗಳನ್ನುದ್ದೇಶಿಸಿ ಮಾಡುವ ಹವಿಸ್ಸಿನ ಹೋಮದಲ್ಲಿ **ಶ್ನಥತ್** ಎಂಬ ಈ ಸೂಕ್ತದ ಮೊದಲನೆಯ ಋಕ್ಕನ್ನು ಯಾಜ್ಯಾಮಂತ್ರವನ್ನಾಗಿ ಪಠಿಸಬೇಕೆಂದು ಆಶ್ವಲಾಯನಶ್ರೌತಸೂತ್ರದ—**ಇಂದ್ರಾಗ್ನೀ ಅವಸಾ ಗತಂ ಶ್ನಥದ್ವೃತ್ರಮುತ ಸನೋತಿ ವಾಜಂ** ಎಂಬ ಸೂತ್ರದಿಂದ (ಆ. ೨-೧೭) ವಿವೃತವಾಗಿರುವುದು.

## ಸೂಕ್ತ—೬೦

ಮಂಡಲ—೬ ‖ ಅನುವಾಕ—೫ ‖ ಸೂಕ್ತ—೬೦ ‖
ಅಷ್ಟಕ—೪ ‖ ಅಧ್ಯಾಯ—೮ ‖ ವರ್ಗ—೨೭, ೨೮, ೨೯ ‖
‖ ಸೂಕ್ತದಲ್ಲಿರುವ ಋಕ್ಸಂಖ್ಯೆ—೧೫ ‖
‖ ಋಷಿಃ—ಭರದ್ವಾಜೋ ಬಾರ್ಹಸ್ಪತ್ಯಃ ‖
‖ ದೇವತಾ—ಇಂದ್ರಾಗ್ನೀ ‖
‖ ಛಂದಃ—೧-೩, ೧೩. ತ್ರಿಷ್ಟುಪ್ । ೪-೧೨. ಗಾಯತ್ರೀ । ೧೪. ಬೃಹತೀ । ೧೫. ಅನುಷ್ಟುಪ್ ‖

‖ ಸಂಹಿತಾಪಾಠಃ ‖

ಶ್ನಥ॑ದ್ವೃತ್ರಮು॒ತ ಸ॑ನೋತಿ॒ ವಾಜ॒ಮಿಂದ್ರಾ॒ ಯೋ ಅ॒ಗ್ನೀ ಸಹು॑ರೀ ಸಪ॒ರ್ಯಾತ್ ।
ಇ॒ರ॒ಜ್ಯಂತಾ॑ ವಸ॒ವ್ಯ॑ಸ್ಯ ಭೂರೇಃ॒ ಸಹ॑ಸ್ತಮಾ॒ ಸಹ॑ಸಾ ವಾಜ॒ಯಂತಾ॑ ‖ ೧ ‖

‖ ಪದಪಾಠಃ ‖

ಶ್ನಥ॑ತ್ । ವೃತ್ರಂ । ಉ॒ತ । ಸ॒ನೋ॒ತಿ॒ । ವಾಜಂ॑ । ಇಂದ್ರಾ॑ । ಯಃ । ಅ॒ಗ್ನೀ ಇತಿ॑ । ಸಹು॑ರೀ॒ ಇತಿ॑ । ಸ॒ಪ॒ರ್ಯಾತ್ ।
ಇ॒ರ॒ಜ್ಯಂತಾ॑ । ವ॒ಸ॒ವ್ಯ॑ಸ್ಯ । ಭೂರೇಃ॑ । ಸಹಃ॑ऽತಮಾ । ಸಹ॑ಸಾ । ವಾ॒ಜ॒ऽಯಂತಾ॑ ‖ ೧ ‖

॥ ಸಾಯಣಭಾಷ್ಯಂ ॥

ಸ ಪುರುಷೋ ವೃತ್ರಮಾವರಕಂ ಶತ್ರುಂ ಶ್ನಥತ್ । ಹಿನಸ್ತಿ । ಉತಾಪಿ ಚ ವಾಜಮನ್ನಂ ಬಲಂ ವಾ ಸನೋತಿ । ಲಭತೇ । ಯಃ ಪುರುಷಃ ಸಹುರೀ ಶತ್ರೂಣಾಮಭಿಭವಿತಾರಾವಿಂದ್ರಾಗ್ನೀ ಸಪರ್ಯಾತ್ ಪರಿಚರೇತ್ ॥ ಇತರೇತರಯೋಗಾದುಭಯತ್ರ ಪೂರ್ವವದ್ದ್ವಿವಚನಂ ॥ ಕೀದೃಶಾವಿಂದ್ರಾಗ್ನೀ । ಭೂರೇಃ ಪ್ರಭೂತಸ್ಯ ವಸವ್ಯಸ್ಯ ವಸುಸಮೂಹಸ್ಯ । ಯದ್ವಾ ॥ ಸ್ವಾರ್ಥಿಕೋ ಯತ್ ॥ ಧನಸ್ಯೇರಜ್ಯಂತೇಶಾನೌ ಸ್ವಾಮಿನೌ ॥ ಇರಜ್ಯತಿರೈಶ್ವರ್ಯಕರ್ಮಾ ॥ ಸಹಸಾ ಬಲೇನ ಸಹಸ್ತಮಾತಿಶಯೇನಾಭಿಭವಿತಾರೌ ಶತ್ರೂಣಾಂ ವಾಜಯಂತಾ ವಾಜಂ ಹವಿರ್ಲಕ್ಷಣಮನ್ನಮಾತ್ಮನ ಇಚ್ಛಂತೌ । ಯದ್ವಾ । ವಾಜಂ ಸ್ತೋತೃಭ್ಯೋ ದಾತವ್ಯಮನ್ನಂ ಕಾಮಯಮಾನೌ ॥

॥ ಪ್ರತಿಪದಾರ್ಥ ॥

**ಭೂರೇಃ**—ಪ್ರಭೂತವಾದ । **ವಸವ್ಯಸ್ಯ**—ಸಂಪತ್ಸಮೂಹಕ್ಕೆ । **ಇರಜ್ಯಂತಾ**—ಸ್ವಾಮಿಗಳಾದವರೂ । **ಸಹಸಾ**—ಅಧಿಕವಾದ ಶಕ್ತಿಯಿಂದ । **ಸಹಸ್ತಮಾ**—ಶತ್ರುಗಳನ್ನು ಎದುರಿಸುವವರೂ । **ವಾಜಯಂತಾ**—ಹವಿಸ್ಸಿನ ರೂಪದ ಅನ್ನವನ್ನು ಇಚ್ಛಿಸುವವರೂ । **ಸಹುರೀ**—ಶತ್ರುಗಳನ್ನು ಸದೆಬಡಿದು ಸೋಲಿಸುವವರೂ ಆದ । **ಇಂದ್ರಾಗ್ನೀ**—ಇಂದ್ರಾಗ್ನಿರೂಪರಾದ ದೇವತೆಗಳನ್ನು । **ಯಃ**—ಯಾವ ಪುರುಷನು । **ಸಪರ್ಯಾತ್**—ಪೂಜಿಸುವನೋ (ಆ ಪುರುಷನು) । **ವೃತ್ರಂ**—ತನ್ನನ್ನು ಮುತ್ತಿರುವ ಶತ್ರುವನ್ನು । **ಶ್ನಥತ್**—ಹಿಂಸಿಸಿ ಕೊಲ್ಲುತ್ತಾನೆ । **ಉತ**—ಮತ್ತು । **ವಾಜಂ**—ಅನ್ನವನ್ನೂ । **ಸನೋತಿ**—ಹೊಂದುತ್ತಾನೆ.

॥ ಭಾವಾರ್ಥ ॥

ಪ್ರಭೂತವಾದ ಸಂಪತ್ಸಮೂಹಕ್ಕೆಲ್ಲಾ ಸ್ವಾಮಿಗಳಾದವರೂ, ಅತ್ಯಧಿಕವಾದ ಶಕ್ತಿಯಿಂದ ಶತ್ರುಗಳನ್ನು ಎದುರಿಸುವವರೂ, ಹವಿಸ್ಸಿನ ರೂಪದ ಅನ್ನವನ್ನು ಇಚ್ಛಿಸುವವರೂ, ಶತ್ರುಗಳನ್ನು ಸದೆಬಡಿದು ಸೋಲಿಸುವವರೂ ಆದ ಇಂದ್ರಾಗ್ನಿರೂಪರಾದ ದೇವತೆಗಳನ್ನು ಯಾವ ಪುರುಷನು ಪೂಜಿಸುವನೋ ಆ ಪುರುಷನು ತನ್ನನ್ನು ಮುತ್ತಿರುವ ಶತ್ರುವನ್ನು ಹಿಂಸಿಸಿ ಕೊಲ್ಲುತ್ತಾನೆ. ಮತ್ತು ಅನ್ನವನ್ನೂ ಹೊಂದುತ್ತಾನೆ.

## English Translation.

He overcomes his enemy, and acquires food, who worships the victorious Indra and Agni, the lords of infinite opulence, most powerful in strength, desirous of (sacrificial) food.

॥ ಸಂಹಿತಾಪಾಠಃ ॥

ತಾ ಯೋಧಿಷ್ಟಮಭಿ ಗಾ ಇಂದ್ರ ನೂನಮಪಃ ಸ್ವರುಷಸೋ ಅಗ್ನ ಊಳ್ಹಾಃ ।
ದಿಶಃ ಸ್ವರುಷಸ ಇಂದ್ರ ಚಿತ್ರಾ ಅಪೋ ಗಾ ಅಗ್ನೇ ಯುವಸೇ ನಿಯುತ್ವಾನ್ ॥

॥ ಪದಪಾಠಃ ॥

**ತಾ । ಯೋಧಿಷ್ಟಂ । ಅಭಿ । ಗಾಃ । ಇಂದ್ರ । ನೂನಂ । ಅಪಃ । ಸ್ವಃ । ಉಷಸಃ । ಅಗ್ನೇ । ಊಳ್ಹಾಃ ।**

**ದಿಶಃ । ಸ್ವಃ । ಉಷಸಃ । ಇಂದ್ರ । ಚಿತ್ರಾಃ । ಅಪಃ । ಗಾಃ । ಅಗ್ನೇ । ಯುವಸೇ । ನಿಯುತ್ವಾನ್ ॥ ೨ ॥**

॥ ಸಾಯಣಭಾಷ್ಯಂ ॥

**ಹೇ ಇಂದ್ರ ಹೇ ಅಗ್ನೇ ತಾ ತೌ ಯುವಾಂ ಗಾ ಅಪ ಉದಕಾನಿ ಸ್ವಃ ಸೂರ್ಯಮುಷಸ ಉಷಃಕಾಲಾನೂಳ್ಹಾಃ ಪಣಿಭಿರಪಹೃತಾ ಏತಾನ್ ಗವಾದೀನಭಿಲಕ್ಷ್ಯ ಯೋಧಿಷ್ಟಂ। ತೈರಸುರೈರ್ಯುದ್ಧಂ ಕೃತವಂತೌ । ನೂನಮಿತಿ ಪಾದಪೂರಣಾರ್ಥಃ । ಹೇ ಇಂದ್ರ ತ್ವಂ ದಿಶಃ ಪ್ರಾಚ್ಯಾದ್ಯಾಃ ಸ್ವಃ ಸೂರ್ಯ-ಮುಷಸಶ್ಚ ಚಿತ್ರಾಶ್ಚಾಯನೀಯಾ ಅಪ ಉದಕಾನಿ ಚ ಗಾಶ್ಚ ಪಣಿಭಿರಪಹೃತಾನೇತಾನ್ಯುವಸೇ । ಅನೇನ ಲೋಕೇನಾಯೋಜಯಃ । ಯದ್ವಾ । ಅಸುರೈರಾವೃತಾನ್ದಿಗಾದೀನಸುರವಧೇನಾವರಣಮಪನೀಯ ಪೃಥಕ್ಕೃತವಾನಸೀತ್ಯರ್ಥಃ । ಹೇ ಅಗ್ನೇ ನಿಯುತ್ವಾನ್ ನಿಯುದ್ಭಿರಶ್ವೈರ್ಯುಕ್ತಃ ಸನ್ ತ್ವಮಪ್ಯೇವಮ-ಕಾರ್ಷೀರಿತ್ಯರ್ಥಃ ॥**

॥ ಪ್ರತಿಪದಾರ್ಥ ॥

**ಇಂದ್ರ**—ಎಲೈ ಇಂದ್ರನೇ । **ಅಗ್ನೇ**—ಎಲೈ ಅಗ್ನಿಯೇ । **ತಾ**—ನೀವಿಬ್ಬರೂ । **ಊಳ್ಹಾಃ**—ಪಣಿಗಳಿಂದ ಅಪಹೃತವಾದ । **ಗಾಃ**—ಗೋವುಗಳಿಗಾಗಿಯೂ । **ಅಪಃ**—ಉದಕಾರ್ಥವಾಗಿಯೂ । **ಸ್ವಃ**—ಸೂರ್ಯಲಾಭಾರ್ಥವಾಗಿಯೂ । **ಉಷಸಃ**—ಉಷಸ್ಸನ್ನು ಪಡೆಯುವ ಉದ್ದಿಶ್ಯದಿಂದಲೂ । **ನೂನಂ**—ಖಂಡಿತ ವಾಗಿಯೂ । **ಅಭಿ ಯೋಧಿಷ್ಟಂ**—ಶತ್ರುಗಳೊಂದಿಗೆ ಯುದ್ಧಮಾಡುವಿರಿ । **ಇಂದ್ರ**—ಎಲೈ ಇಂದ್ರನೇ । **(ತ್ವಂ**—ನೀನು) । **ದಿಶಃ**—ಪ್ರಾಚ್ಯಾದಿ ದಿಕ್ಕುಗಳನ್ನೂ । **ಸ್ವಃ**—ಸೂರ್ಯನನ್ನೂ । **ಉಷಸಃ**—ಉಷಸ್ಸುಗಳನ್ನೂ । **ಚಿತ್ರಾಃ**—ಆಕರ್ಷಕಗಳಾದ । **ಅಪಃ**—ಉದಕಗಳನ್ನೂ । **ಗಾಃ**—ಪಣಿಗಳಿಂದ ಅಪಹೃತವಾದ ಗೋವುಗಳನ್ನೂ । **ಯುವಸೇ**—ಆಯಾ ಸ್ಥಾನಗಳಲ್ಲಿರಿಸುತ್ತೀಯೆ । **ಅಗ್ನೇ**—ಎಲೈ ಅಗ್ನಿಯೇ । **ನಿಯುತ್ವಾನ್**—ನಿಯುನ್ನಾಮಕಗಳಾದ ಅಶ್ವಗಳುಳ್ಳ ನೀನೂ ಸಹ ಅದೇ ಕಾರ್ಯಗಳನ್ನು ನೆರವೇರಿಸಿದ್ದೀಯೆ.

॥ ಭಾವಾರ್ಥ ॥

ಎಲೈ ಇಂದ್ರನೇ, ಎಲೈ ಅಗ್ನಿಯೇ, ನೀವಿಬ್ಬರೂ ಪಣಿಗಳಿಂದ ಅಪಹೃತವಾದ ಗೋವುಗಳಿಗಾಗಿಯೂ, ಉದಕಾರ್ಥವಾಗಿಯೂ, ಸೂರ್ಯಲಾಭಾರ್ಥವಾಗಿಯೂ, ಉಷಸ್ಸನ್ನು ಪಡೆಯುವ ಉದ್ದಿಶ್ಯದಿಂದಲೂ. ಖಂಡಿತ ವಾಗಿಯೂ ಶತ್ರುಗಳೊಂದಿಗೆ ಯುದ್ಧಮಾಡಿರುವಿರಿ. ಎಲೈ ಇಂದ್ರನೇ, ನೀನು ಪ್ರಾಚ್ಯಾದಿ ದಿಕ್ಕುಗಳನ್ನೂ, ಸೂರ್ಯನನ್ನೂ, ಉಷಸ್ಸುಗಳನ್ನೂ, ಆಕರ್ಷಕವಾದ ಉದಕಗಳನ್ನೂ ಪಣಿಗಳಿಂದ ಅಪಹೃತವಾದ ಗೋವುಗಳನ್ನೂ ಆಯಾ ಸ್ಥಾನದಲ್ಲಿರಿಸುತ್ತೀಯೆ. ಎಲೈ ಅಗ್ನಿಯೇ, ನಿಯುನ್ನಾಮಕಗಳಾದ ಅಶ್ವಗಳುಳ್ಳ ನೀನೂ ಸಹ ಅದೇ ಕಾರ್ಯಗಳನ್ನು ನೆರವೇರಿಸಿದ್ದೀಯೆ.

## English Translation.

Indra and Agni, verily you have combated for (the recovery of) the cows, the waters, the sun, the dawns that had been carried away (by the Asuras): you reunite, Indra, (with the world), the quarters of the horizon, the sun, the wonderful waters, the dawns, the cattle, and so do you, Agni, who have the Niyut steeds.

॥ ಸಂಹಿತಾಪಾಠಃ ॥

ಆ ವೃತ್ರಹಣಾ ವೃತ್ರಹಭಿಃ ಶುಷ್ಮೈರಿಂದ್ರ ಯಾತಂ ನಮೋಭಿರಗ್ನೇ ಅರ್ವಾಕ್ ।
ಯುವಂ ರಾಧೋಭಿರಕವೇಭಿರಿಂದ್ರಾಗ್ನೇ ಅಸ್ಮೇ ಭವತಮುತ್ತಮೇಭಿಃ ॥೩॥

॥ ಪದಪಾಠಃ ॥

ಆ । ವೃತ್ರಽಹನಾ । ವೃತ್ರಽಹಭಿಃ । ಶುಷ್ಮೈಃ । ಇಂದ್ರ । ಯಾತಂ । ನಮಃಽಭಿಃ । ಅಗ್ನೇ । ಅರ್ವಾಕ್ ।
ಯುವಂ । ರಾಧಃಽಭಿಃ । ಅಕವೇಭಿಃ । ಇಂದ್ರ । ಅಗ್ನೇ । ಅಸ್ಮೇ ಇತಿ । ಭವತಂ । ಉತ್ಽತಮೇಭಿಃ ।೩॥

॥ ಸಾಯಣಭಾಷ್ಯಂ ॥

ಐಂದ್ರಾಗ್ನಸ್ಯ ಪಶೋರ್ವಪಾಯಾ ಆ ವೃತ್ರಹಣೇತ್ಯನುವಾಕ್ಯಾ । ಸೂತ್ರಿತಂ ಚ । ಆ ವೃತ್ರಹಣಾ ವೃತ್ರಹಭಿಃ ಶುಷ್ಮೈರಾ ಭರತಂ ಶಿಕ್ಷತಂ ವಜ್ರಬಾಹೂ । ಆ. ೩-೭ । ಇತಿ ॥

ಹೇ ವೃತ್ರಹಣಾ ವೃತ್ರಸ್ಯಾಸುರಸ್ಯ ಹಂತಾರೌ ಹೇ ಇಂದ್ರ ಹೇ ಅಗ್ನೇ ವೃತ್ರಹಭಿರ್ವೃತ್ರಸ್ಯ ಹಂತೃಭಿರ್ವೃತ್ರನಹನನಿಮಿತ್ತೈಃ ಶುಷ್ಮೈರ್ಬಲೈರ್ನಮೋಭಿರಸ್ಮಭ್ಯಂ ದಾತವ್ಯೈರನ್ನೈಶ್ಚ ಸಾರ್ಧಮ-ರ್ವಾಗಸ್ಮದಭಿಮುಖಮಾ ಯಾತಂ । ಆಗಚ್ಛತಂ । ಹೇ ಇಂದ್ರ ಹೇ ಅಗ್ನೇ ಯುವಂ ಯುವಾಮ-ಕವೇಭಿರಕುತ್ಸಿತೈರ್ಮಹದ್ಭಿರುತ್ತಮೇಭಿರುತ್ಕೃಷ್ಟತಮೈ ರಾಧೋಭಿರ್ಧನೈಃ ಸಹಾಸ್ಮೇ ಅಸ್ಮಾಸು ಭವತಂ ಆವಿರ್ಭವತಂ ॥

। ಪ್ರತಿಪದಾರ್ಥ ॥

**ವೃತ್ರಹಣಾ**—ಶತ್ರುಹಂತಕರಾದ । **ಇಂದ್ರ**—ಎಲೈ ಇಂದ್ರನೇ, । **ಅಗ್ನೇ**—ಎಲೈ ಅಗ್ನಿಯೇ । **ವೃತ್ರಹಭಿಃ**—ಶತ್ರುನಾಶಕವಾದ । **ಶುಷ್ಮೈಃ**—ಬಲಗಳೊಡನೆಯೂ । **ನಮೋಭಿಃ**—ನಮಗೆ ಬೇಕಾದ ಅನ್ನಗಳೊಡನೆಯೂ ಕೂಡಿದವರಾಗಿ । **ಅರ್ವಾಕ್**—ನಮಗಭಿಮುಖವಾಗಿ । **ಆ ಯಾತಂ**—ದಯಮಾಡಿರಿ । **ಇಂದ್ರ**—ಎಲೈ ಇಂದ್ರನೇ, । **ಅಗ್ನೇ**—ಎಲೈ ಅಗ್ನಿಯೇ, । **ಯುವಂ**—ನೀವಿಬ್ಬರೂ । **ಅಕವೇಭಿಃ**—

ಕುತ್ಸಿತವಲ್ಲದವೂ । **ಉತ್ತಮೇಭಿಃ**—ಪ್ರಶಸ್ಯವಾದವೂ ಆದ । **ರಾಧೋಭಿಃ**—ಧನಗಳೊಡನೆ । **ಅಸ್ಮೇ**—ನಮಗೆದುರಾಗಿ । **ಭವತಂ**—ಆವಿರ್ಭವಿಸಿ ಕಾಣಿಸಿಕೊಳ್ಳಿರಿ. ।

|| ಭಾವಾರ್ಥ ||

ಶತ್ರುಹಂತಕರಾದ ಎಲೈ ಇಂದ್ರಾಗ್ನಿಗಳೇ, ಶತ್ರುನಾಶಕವಾದ ಬಲಗಳೊಡನೆಯೂ, ನಮಗೆ ಬೇಕಾದ ಅನ್ನಗಳೊಡನೆಯೂ ಕೂಡಿದವರಾಗಿ ನಮಗಭಿಮುಖರಾಗಿ ದಯಮಾಡಿರಿ. ಎಲೈ ಇಂದ್ರನೇ, ಎಲೈ ಅಗ್ನಿಯೇ, ನೀವಿಬ್ಬರೂ ಸಹ ಕುತ್ಸಿತವಲ್ಲದವೂ, ಪ್ರಶಸ್ಯವಾದವೂ ಆದ ಧನಗಳೊಡನೆ ನಮಗೆದುರಾಗಿ ಆವಿರ್ಭವಿಸಿ ಕಾಣಿಸಿಕೊಳ್ಳಿರಿ.

English Translation.

Slayers of Vritra, Indra and Agni, come down with foe-subduing energies, (to be invigorated) by (our) offerings: be manifest to us, Indra and Agni, with unblameable and most excellent riches.

|| ವಿಶೇಷವಿಷಯಗಳು ||

ಇಂದ್ರಾಗ್ನಿಗಳನ್ನು ಉದ್ದೇಶಿಸಿ ಮಾಡುವ ಪಶುಯಾಗದಲ್ಲಿ ವಪಾಹೋಮ ಮಾಡುವಾಗ **ಆ ವೃತ್ರಹಣಾ** ಎಂಬ ಈ ಋಕ್ಕನ್ನು ಅನುವಾಕ್ಯಾಮಂತ್ರವನ್ನಾಗಿ ಪಠಿಸಬೇಕೆಂದು ಆಶ್ವಲಾಯನಶ್ರೌತಸೂತ್ರದ **ಆ ವೃತ್ರಹಣಾ ವೃತ್ರಹಭಿಃ ಶುಷ್ಮೈರಾ ಭರತಂ ಶಿಕ್ಷತಂ ವಜ್ರಬಾಹೂ** ಎಂಬ ಸೂತ್ರದಿಂದ (ಆ. ೩-೭) ವಿವೃತವಾಗಿರುವುದು.

|| ಸಂಹಿತಾಪಾಠಃ ||

ತಾ ಹುವೇ ಯಯೋರಿದಂ ಪಪ್ನೇ ವಿಶ್ವಂ ಪುರಾ ಕೃತಂ ।
ಇಂದ್ರಾಗ್ನೀ ನ ಮರ್ಧತಃ ॥ ೪ ॥

|| ಪದಪಾಠಃ ||

ತಾ । ಹುವೇ । ಯಯೋಃ । ಇದಂ । ಪಪ್ನೇ । ವಿಶ್ವಂ । ಪುರಾ । ಕೃತಂ ।
ಇಂದ್ರಾಗ್ನೀ ಇತಿ । ನ । ಮರ್ಧತಃ ॥ ೪ ॥

|| ಸಾಯಣಭಾಷ್ಯಂ ||

**ಚಾತುರ್ವಿಂಶಿಕೇಽಹನಿ ಪ್ರಾತಃಸವನೇಽಚ್ಛಾವಾಕಶಸ್ತ್ರೇ ತಾ ಹುವೇ ಇತಿ ಷಡಹಸ್ತೋತ್ರಿಯಸ್ತೃಚಃ । ಸೂತ್ರಿತಂ ಚ । ತಾ ಹುವೇ ಯಯೋರಿದಮಿಯಂ ವಾಮಸ್ಯ ಮನ್ಮನಃ । ಆ. ೭-೨ । ಇತಿ ॥ ಪೃಷ್ಠ್ಯಾಭಿಪ್ಲವಷಡಹಯೋಃ ಸ್ತೋಮವೃದ್ಧೌ ತಾ ಹುವ ಇತ್ಯಾದ್ಯಾ ನವರ್ಚ ಆವಾಪಾರ್ಥಾಃ । ಸೂತ್ರಿತಂ ಚ । ತಾ ಹುವೇ ಯಯೋರಿದಮಿತಿ ನವೇಯಂ ವಾಮಸ್ಯ ಮನ್ಮನ ಇತ್ಯೇಕಾದಶ । ಆ. ೭-೫ । ಇತಿ ॥**

**ತಾ ತೌ ತಾದೃಶಾವಿಂದ್ರಾಗ್ನೀ ಹುವೇ । ಆಹ್ವಯೇ । ಯಯೋರಿಂದ್ರಾಗ್ನ್ಯೋಃ ಪುರಾ ಪೂರ್ವಸ್ಮಿನ್ಕಾಲೇ ಕೃತಂ ವಿಶ್ವಂ ಸರ್ವಮಿದಂ ಪೂರ್ವಾಸ್ವೃಕ್ಷು ಕೀರ್ತಿತಂ ವೀರ್ಯಂ ಪಪ್ನೇ ಪನ್ಯತೇ ಋಷಿಭಿಃ ಸ್ತೂಯತೇ । ತಾವಿಂದ್ರಾಗ್ನೀ ಹುವ ಇತ್ಯನ್ವಯಃ । ತೌ ಚೇಂದ್ರಾಗ್ನೀ ನ ಮರ್ಧತಃ । ಸ್ತೋತ್ರೄನ್ನ ಹಿಂಸ್ತಃ । ಅತೋಽಸ್ಮಾನಪ್ಯಾಹೂತೌ ರಕ್ಷತಾಮಿತಿ ಭಾವಃ ॥ ಮರ್ಧತಿರ್ಹಿಂಸಾಕರ್ಮಾ ॥**

॥ ಪ್ರತಿಪದಾರ್ಥ ॥

**ಯಯೋಃ** – ಯಾವ ಇಂದ್ರಾಗ್ನಿಗಳಿಂದ । **ಪುರಾ**—ಪೂರ್ವಕಾಲಗಳಲ್ಲೆಲ್ಲಾ । **ಕೃತಂ**— ನೆರವೇರಿಸಲ್ಪಟ್ಟ । **ವಿಶ್ವಂ**— ಸಮಸ್ತವಾದುದೂ । **ಇದಂ**—ಹಿಂದೆಲ್ಲಾ ವರ್ಣಿತವಾದುದೂ ಆದ ವೀರ್ಯಕರ್ಮಗಳು । **ಪಪ್ನೇ**—ಪ್ರಶಂಸಿಸಲ್ಪಟ್ಟಿದೆಯೋ । **ತಾ**—ಅಂತಹ ಪ್ರಸಿದ್ಧರಾದ ಇಂದ್ರಾಗ್ನಿಗಳನ್ನು । **ಹುವೇ**— ಪ್ರಾರ್ಥಿಸಿ ಕರೆಯುತ್ತೇವೆ । **ಇಂದ್ರಾಗ್ನೀ**—ಎಲೈ ಇಂದ್ರಾಗ್ನಿದೇವತೆಗಳೇ । **ನ ಮರ್ಧತಃ**—ನಮ್ಮನ್ನು ಹಿಂಸಿಸಬೇಡಿರಿ.

॥ ಭಾವಾರ್ಥ ॥

ಯಾವ ಇಂದ್ರಾಗ್ನಿಗಳಿಂದ ಪೂರ್ವಕಾಲಗಳಲ್ಲೆಲ್ಲಾ ನೆರವೇರಿಸಲ್ಪಟ್ಟವೂ, ಹಿಂದಿನ ಮಂತ್ರಗಳಿಂದ ವರ್ಣಿತವಾದವೂ ಆದ ಸಕಲ ವೀರ್ಯಕರ್ಮಗಳೂ ಪ್ರಶಂಸಿಸಲ್ಪಟ್ಟವೆಯೋ ಅಂತಹ ಪ್ರಸಿದ್ಧರಾದ ಇಂದ್ರಾಗ್ನಿಗಳನ್ನು ಪ್ರಾರ್ಥಿಸಿ ಕರೆಯುತ್ತೇವೆ. ನಮ್ಮನ್ನು ಹಿಂಸಿಸಬೇಡಿ.

English Translation.

I invoke those two, the whole of whose deeds of old have been celebrated : Indra and Agni harm us not.

॥ ವಿಶೇಷವಿಷಯಗಳು ॥

ಯಾಗದ ಚಾತುರ್ವಿಂಶಿಕವೆಂಬ ದಿನದ ಪ್ರಾತಃಸವನಕಾಲದಲ್ಲಿ ಅಚ್ಛಾವಾಕನೆಂಬ ಋತ್ವಿಜನು ಪಠಿಸುವ ಶಸ್ತ್ರಮಂತ್ರಗಳಲ್ಲಿ **ತಾ ಹುವೇ** ಎಂದು ಮೊದಲಾಗುವ ಮೂರು ಋಕ್ಕುಗಳನ್ನು (ಈ ಸೂಕ್ತದ ೪–೬ ಋಕ್ಕುಗಳನ್ನು) ಷಡಹಸ್ತೋತ್ರಿಯತೃಚವನ್ನಾಗಿ ಪಠಿಸಬೇಕೆಂದು ಆಶ್ವಲಾಯನಶ್ರೌತಸೂತ್ರದ— **ತಾ ಹುವೇ ಯಯೋರಿದಮಿಯಂ ವಾಮಸ್ಯ ಮನ್ಮನಃ** ಎಂಬ ಸೂತ್ರದಿಂದ (ಆ. ೭–೨) ವಿವೃತವಾಗಿರುವುದು. ಮತ್ತು ಪೃಷ್ಠ್ಯ ಮತ್ತು ಅಭಿಪ್ಲವ ಷಡಹವೆಂಬ ಯಾಗಗಳಲ್ಲಿಯೂ ಸ್ತೋಮವೃದ್ಧಿಗಾಗಿ **ತಾ ಹುವೇ** ಎಂದು ಮೊದಲಾಗುವ ಒಂಭತ್ತು ಋಕ್ಕುಗಳನ್ನು (ಈ ಸೂಕ್ತದ ೪-೧೨ ನೇ ಋಕ್ಕುಗಳನ್ನು) ಆವಾಪಮಂತ್ರಗಳನ್ನಾಗಿ ಪಠಿಸಬೇಕೆಂದು ಆಶ್ವಲಾಯನಶ್ರೌತಸೂತ್ರದ— **ತಾ ಹುವೇ ಯಯೋರಿದಮಿತಿ ನವೇಯಂ ವಾಮಸ್ಯ ಮನ್ಮನ ಇತ್ಯೇಕಾದಶ** ಎಂಬ ಸೂತ್ರದಿಂದ (ಆ. ೭-೫) ವಿವೃತವಾಗಿರುವುದು.

॥ ಸಂಹಿತಾಪಾಠಃ ॥

**ಉಗ್ರಾ ವಿಘನಿನಾ ಮೃಧ ಇಂದ್ರಾಗ್ನೀ ಹವಾಮಹೇ ।**

**ತಾ ನೋ ಮೃಳಾತ ಈದೃಶೇ ॥ ೫ ॥**

॥ ಪದಪಾಠಃ ॥

ಉಗ್ರಾ । ವಿಽಘನಿನಾ । ಮೃಧಃ । ಇಂದ್ರಾಗ್ನೀ ಇತಿ । ಹವಾಮಹೇ ।

ತಾ । ನಃ । ಮೃಳಾತಃ । ಈದೃಶೇ ॥ ೫ ॥

॥ ಸಾಯಣಭಾಷ್ಯಂ ॥

ಉಗ್ರೋ‍ಽಗ್ರಾವುದ್ಗೂರ್ಣಬಲಾವತ ಏವ ಮೃಧಃ ಶತ್ರೂನ್ವಿಘನಿನಾ ವಿಘನಿನಾ ವಿಶೇಷೇಣ ಹತವಂತಾವಿಂದ್ರಾಗ್ನೀ ಹವಾಮಹೇ । ಆಹ್ವಯಾಮಹೇ । ತೌ ಚೇಂದ್ರಾಗ್ನೀ ಈದೃಶೇಽಸ್ಮಿನ್ ಸಂಗ್ರಾಮೇ ನೋಽಸ್ಮಾನ್ಮೃಳಾತಃ । ಸುಖಯತಾಂ । ಯದ್ವಾ ॥ ಮೃಳತಿರೂಪದಯಾಕರ್ಮಾ ॥ ನೋಽಸ್ಮಾಕಂ ಮೃಳಾತಃ । ಉಪದಯಾಂ ಕುರುತಾಂ ॥

॥ ಪ್ರತಿಪದಾರ್ಥ ॥

**ಉಗ್ರಾ**—ಶತ್ರುಭಯಂಕರವಾದ ಶಕ್ತಿಯುಳ್ಳವರೂ । **ಮೃಧಃ**—ಶತ್ರುಗಳನ್ನು । **ವಿಘನಿನಾ**—ನಾಶಮಾಡುವವರೂ ಆದ । **ಇಂದ್ರಾಗ್ನೀ**—ಇಂದ್ರಾಗ್ನಿಗಳನ್ನು । **ಹವಾಮಹೇ**—ಪ್ರಾರ್ಥಿಸಿ ಕರೆಯುತ್ತೇವೆ । **ತಾ** -ಅದೇ ಇಂದ್ರಾಗ್ನಿಗಳು । **ಈದೃಶೇ**--ಇಂತಹ ಸಂಗ್ರಾಮದಲ್ಲಿ । **ನಃ**—ನಮ್ಮನ್ನು । **ಮೃಳಾತಃ**—ಸುಖಪಡಿಸಲಿ.

॥ ಭಾವಾರ್ಥ ॥

ಶತ್ರುಭಯಂಕರವಾದ ಶಕ್ತಿಯುಳ್ಳವರೂ, ಶತ್ರುಗಳನ್ನು ನಾಶಮಾಡುವವರೂ, ಆದ ಇಂದ್ರಾಗ್ನಿಗಳನ್ನು ಪ್ರಾರ್ಥಿಸಿ ಕರೆಯುತ್ತೇವೆ. ಅದೇ ಇಂದ್ರಾಗ್ನಿಗಳು ಇಂತಹ ಸಂಗ್ರಾಮದಲ್ಲಿ ನಮ್ಮನ್ನು ಸುಖಪಡಿಸಲಿ.

English Translation.

We invoke the fierce Indra and Agni, the slayers of enemies: may they give us success in similar warfare.

॥ ಸಂಹಿತಾಪಾಠಃ ॥

ಹತೋ ವೃತ್ರಾಣ್ಯಾರ್ಯಾ ಹತೋ ದಾಸಾನಿ ಸತ್ಪತೀ ।

ಹತೋ ವಿಶ್ವಾ ಅಪ ದ್ವಿಷಃ ॥ ೬ ॥

॥ ಪದಪಾಠಃ ॥

ಹತಃ । ವೃತ್ರಾಣಿ । ಆರ್ಯಾ । ಹತಃ । ದಾಸಾನಿ । ಸತ್ಪತೀ ಇತಿ ಸತ್ಽಪತೀ ।

ಹತಃ । ವಿಶ್ವಾಃ । ಅಪ । ದ್ವಿಷಃ ॥ ೬ ॥

॥ ಸಾಯಣಭಾಷ್ಯಂ ॥

ತಾವಿಂದ್ರಾಗ್ನೀ ಆರ್ಯೈಃ ಕರ್ಮಾನುಷ್ಠಾತೃಭಿಃ ಕೃತಾನಿ ವೃತ್ರಾಣ್ಯುಪದ್ರವಜಾತಾನಿ ಹತಃ । ಹಿಂಸ್ತಃ । ತಥಾ ಸತ್ಪತೀ ಸತಾಂ ಪಾಲಯಿತಾರಾವಿಂದ್ರಾಗ್ನೀ ದಾಸಾನಿ । ದಾಸಾಃ ಕರ್ಮಹೀನಾಃ ಶತ್ರವಃ । ತೈಃ ಕೃತಾನಿ ಚೋಪದ್ರವಜಾತಾನಿ ಹತಃ । ಅಪಿ ಚ ವಿಶ್ವಾಃ ಸರ್ವಾ ದ್ವಿಷೋ ದ್ವೇಷ್ಟ್ರೀಃ ಶತ್ರುಭೂತಾಃ ಪ್ರಜಾ ಅಪ ಹತಃ ವಿನಾಶಯತಃ । ಅತೋಽಸ್ಮಾಕಮಪ್ಯೇವಮೇವ ಕುರುತಾಮಿತಿ ಭಾವಃ॥

॥ ಪ್ರತಿಪದಾರ್ಥ ॥

(**ಇಂದ್ರಾಗ್ನೀ**—ಇಂದಾಗ್ನಿಗಳು) । **ಆರ್ಯಾ**—ಕರ್ಮಕರ್ತರಾದ ಆರ್ಯರಿಂದ ಕೃತವಾದ । **ವೃತ್ರಾಣಿ**—ಹಿಂಸೆಗಳನ್ನು ॥ **ಹತಃ**—ನಾಶಪಡಿಸುತ್ತಾರೆ । **ಸತ್ಪತೀ**—ಸಜ್ಜನರ ಪಾಲಕರಾದ ಅದೇ ಇಂದ್ರಾಗ್ನಿಗಳು । **ದಾಸಾನಿ**— ಕರ್ಮಹೀನರಾದ ಶತ್ರುಗಳಿಂದ ಉಂಟಾದ ತೊಂದರೆಗಳನ್ನೂ । **ಹತಃ**— ನಾಶಪಡಿಸುತ್ತಾರೆ । **ವಿಶ್ವಾಃ**—ಸಮಸ್ತವಾದ । **ದ್ವಿಷಃ**—ಶತ್ರುಜನರನ್ನೂ । **ಅಪ ಹತಃ**— ಪೂರ್ಣವಾಗಿ ನಾಶಪಡಿಸುತ್ತಾರೆ.

॥ ಭಾವಾರ್ಥ ॥

ಕರ್ಮಕರ್ತರಾದ ಆರ್ಯರಿಂದಾಗಲಿ, ಕರ್ಮಹೀನರಾದ ದಾಸರೂಪರಾದ ಶತ್ರುಗಳಿಂದಾಗಲಿ ಉಂಟಾದ ಹಿಂಸೆಗಳನ್ನೆಲ್ಲಾ ಇಂದ್ರಾಗ್ನಿಗಳು ನಾಶಪಡಿಸುತ್ತಾರೆ. ಮತ್ತು ಸಮಸ್ತ ಶತ್ರುಜನರನ್ನೂ ನಾಶಪಡಿಸುತ್ತಾರೆ.

## English Translation.

Counteract all oppressions (committed) by the pious : counteract all oppressions (committed) by the impious : protectors of the virtuous, destroy all those who hate us.

॥ ಸಂಹಿತಾಪಾಠಃ ॥

ಇಂದ್ರಾಗ್ನೀ ಯುವಾಮಿಮೇ೩ಽಭಿ ಸ್ತೋಮಾ ಅನೂಷತ ।
ಪಿಬತಂ ಶಂಭುವಾ ಸುತಂ ॥ ೭ ॥

॥ ಪದಪಾಠಃ ॥

ಇಂದ್ರಾಗ್ನೀ ಇತಿ । ಯುವಾಂ । ಇಮೇ । ಅಭಿ । ಸ್ತೋಮಾಃ । ಅನೂಷತ ।
ಪಿಬತಂ । ಶಂಽಭುವಾ । ಸುತಂ ॥ ೭ ॥

॥ ಸಾಯಣಭಾಷ್ಯಂ ॥

ಚಾತುರ್ವಿಂಶಿಕೇಽಹನಿ ಪ್ರಾತಃಸವನೇಽಚ್ಛಾವಾಕಶಸ್ತ್ರ ಇಂದ್ರಾಗ್ನೀ ಯುವಾಮಿತಿ ಷಡಹ-ಸ್ತೋತ್ರಿಯಸ್ತೃಚಃ । ಸೂತ್ರಿತಂ ಚ । ಇಂದ್ರಾಗ್ನೀ ಯುವಾಮಿಮೇ ಯಜ್ಞಸ್ಯ ಹಿ ಸ್ಥ ಋತ್ವಿಜೇತ್ಯಚ್ಛಾ-ವಾಕಸ್ಯ । ಆ. ೭-೨ । ಇತಿ ॥

ಹೇ ಇಂದ್ರಾಗ್ನೀ ಯುವಾಮಿಮೇ ಸ್ತೋಮಾಃ ಸ್ತೋತಾರೋಽಭ್ಯನೂಷತ ಅಭಿಷ್ಟುವಂತಿ । ಹೇ ಶಂಭುವಾ ಸುಖಸ್ಯ ಭಾವಯಿತಾರಾವಿಂದ್ರಾಗ್ನೀ ಸುತಮಭಿಷುತಮಸ್ಮದೀಯಂ ಸೋಮಂ ಪಿಬತಂ ॥

॥ ಪ್ರತಿಪದಾರ್ಥ ॥

**ಇಂದ್ರಾಗ್ನೀ**—ಎಲೈ ಇಂದ್ರಾಗ್ನಿಗಳೇ । **ಯುವಾಂ**—ನಿಮ್ಮಿಬ್ಬರನ್ನೂ । **ಇಮೇ ಸ್ತೋಮಾಃ**—ಈ ಸ್ತುತಿಕರ್ತರು । **ಅಭ್ಯನೂಷತ**—ಪ್ರಶಂಸಿಸುತ್ತಾರೆ । **ಶಂಭುವಾ**—ಸುಖಕಾರಕರಾದ ಎಲೈ ಇಂದ್ರಾಗ್ನಿಗಳೇ । **ಸುತಂ**—ಹಿಂಡಿರುವ ಈ ಸೋಮರಸವನ್ನು । **ಪಿಬತಂ**—ಪಾನಮಾಡಿರಿ ।

॥ ಭಾವಾರ್ಥ ॥

ಎಲೈ ಇಂದ್ರಾಗ್ನಿಗಳೇ, ನಿಮ್ಮಿಬ್ಬರನ್ನೂ ಈ ಸ್ತುತಿಕರ್ತರು ಪ್ರಶಂಸಿಸುತ್ತಾರೆ. ಸುಖಕಾರಕರಾದ ಎಲೆ ಇಂದ್ರಾಗ್ನಿಗಳೇ ಹಿಂಡಿರುವ ಈ ಸೋಮರಸವನ್ನು ಪಾನಮಾಡಿರಿ.

English Translation.

Indra and Agni, these hymns glorify you both ; drink, bestowers of of happiness, the libation.

॥ ವಿಶೇಷವಿಷಯಗಳು ॥

ಯಾಗದ ಚಾತುರ್ವಿಂಶಿಕವೆಂಬ ದಿನದ ಪ್ರಾತಸ್ಸವನಕಾಲದಲ್ಲಿ ಅಚ್ಛಾವಾಕನೆಂಬ ಋತ್ವಿಜನು ಪಠಿಸುವ ಶಸ್ತ್ರಮಂತ್ರಗಳಲ್ಲಿ **ಇಂದ್ರಾಗ್ನೀ ಯುವಾಂ** ಎಂದು ಮೊದಲಾಗುವ ಮೂರು ಋಕ್ಕುಗಳನ್ನು (ಈ ಸೂಕ್ತದ ೭-೯ ಋಕ್ಕುಗಳನ್ನು) ಷಡಹಸ್ತೋತ್ರಿಯತೃಚವನ್ನಾಗಿ ಪಠಿಸಬೇಕೆಂದು ಆಶ್ವಲಾಯನಶ್ರೌತಸೂತ್ರದ—**ಇಂದ್ರಾಗ್ನೀ ಯುವಾಮಿಮೇ ಯಜ್ಞಸ್ಯ ಹಿ ಸ್ಥ ಋತ್ವಿಜೇತ್ಯಚ್ಛಾವಾಕಸ್ಯ** ಎಂಬ ಸೂತ್ರದಿಂದ (ಆ. ೭-೨) ವಿವೃತವಾಗಿರುವುದು.

॥ ಸಂಹಿತಾಪಾಠಃ ॥

ಯಾ ವಾಂ ಸಂತಿ ಪುರುಸ್ಪೃಹೋ ನಿಯುತೋ ದಾಶುಷೇ ನರಾ ।
ಇಂದ್ರಾಗ್ನೀ ತಾಭಿರಾ ಗತಂ ॥ ೮ ॥

॥ ಪದಪಾಠಃ ॥

ಯಾಃ । ವಾಂ । ಸಂತಿ । ಪುರುಽಸ್ಪೃಹಃ । ನಿಽಯುತಃ । ದಾಶುಷೇ । ನರಾ ।

ಇಂದ್ರಾಗ್ನೀ ಇತಿ । ತಾಭಿಃ । ಆ । ಗತಂ ॥ ೮ ॥

॥ ಸಾಯಣಭಾಷ್ಯಂ ॥

**ಹೇ ನರಾ ನೇತಾರಾವಿಂದ್ರಾಗ್ನೀ ವಾಂ ಯುವಯೋಃ ಸ್ವಭೂತಾಃ ಪುರುಸ್ಪೃಹಃ ಪುರುಭಿರ್ಬಹುಭಿಃ ಸ್ಪೃಹಣೀಯಾ ದಾಶುಷೇ ಹವೀಂಷಿ ದತ್ತವತೇ ಯಜಮಾನಾರ್ಥಮುತ್ಪನ್ನಾ ಯಾ ನಿಯುತೋಽಶ್ವಾಃ ಸಂತಿ ಹೇ ಇಂದ್ರಾಗ್ನೀ ತಾಭಿರ್ನಿಯುದ್ಭಿರಾ ಗತಂ । ಆಗಚ್ಛತಂ ॥**

॥ ಪ್ರತಿಪದಾರ್ಥ ॥

**ನರಾ**—ಜಗನ್ನೇತೃಗಳಾದ । **ಇಂದ್ರಾಗ್ನೀ**—ಎಲೈ ಇಂದ್ರಾಗ್ನಿಗಳೇ । **ವಾಂ**—ನಿಮಗೆ ಸೇರಿದ । **ಯಾಃ**—ಯಾವ । **ನಿಯುತಃ**—ಅಶ್ವಗಳು । **ಪುರುಸ್ಪೃಹಃ**—ಅನೇಕರಿಂದ ಅಪೇಕ್ಷಿತವಾಗಿಯೂ । **ದಾಶುಷೇ**—ಹವಿಸ್ಸನ್ನರ್ಪಿಸುವ ಯಜಮಾನಾರ್ಥವಾಗಿ ಉತ್ಪನ್ನವಾಗಿಯೂ । **ಸಂತಿ**—ಇರುವುವೋ । **ತಾಭಿಃ**—ಆ ಅಶ್ವಗಳೊಡನೆ । **ಆ ಗತಂ**—ದಯಮಾಡಿರಿ.

॥ ಭಾವಾರ್ಥ ॥

ಜಗನ್ನೇತೃಗಳಾದ ಎಲೈ ಇಂದ್ರಾಗ್ನಿಗಳೇ, ನಿಮಗೆ ಸೇರಿದ ಯಾವ ಅಶ್ವಗಳು ಅನೇಕರಿಂದ ಅಪೇಕ್ಷಿತವಾಗಿಯೂ ಹವಿಸ್ಸನ್ನರ್ಪಿಸುವ ಯಜಮಾನಾರ್ಥವಾಗಿ ಉತ್ಪನ್ನವಾಗಿಯೂ ಇರುವುವೋ, ಆ ಅಶ್ವಗಳೊಡನೆ ದಯಮಾಡಿ.

English Translation.

Indra and Agni, leaders (of rites), whose Niyut steeds are desired by many, come with them to the donor (of the libatation.)

॥ ಸಂಹಿತಾಪಾಠಃ ॥

ತಾಭಿರಾ ಗಚ್ಛತಂ ನರೋಪೇದಂ ಸವನಂ ಸುತಂ ।
ಇಂದ್ರಾಗ್ನೀ ಸೋಮಪೀತಯೇ ॥ ೯ ॥

॥ ಪದಪಾಠಃ ॥

ತಾಭಿಃ । ಆ । ಗಚ್ಛತಂ । ನರಾ । ಉಪ । ಇದಂ । ಸವನಂ । ಸುತಂ ।
ಇಂದ್ರಾಗ್ನೀ ಇತಿ । ಸೋಮ್ಽಪೀತಯೇ ॥ ೯ ॥

॥ ಸಾಯಣಭಾಷ್ಯಂ ॥

**ಹೇ ನರಾ ನೇತಾರಾವಿಂದ್ರಾಗ್ನೀ । ಸೂಯತೇಽಭಿಷೂಯತ ಇತಿ ಸವನಃ ಸೋಮಃ । ಇದಂ ಸವನಮಿಮಂ ಸೋಮಂ ಸುತಮಭಿಷುತಮುಪ ಪ್ರತಿ । ಯದ್ವಾ । ಇದಂ ಪ್ರಾತಃಸವನಮುಪಾಸ್ಮಿನ್**

**ಸವನೇ ಸುತಮಭಿಷುತಂ ಸೋಮಂ ಪ್ರತಿ ತಾಭಿರ್ನಿಯುದ್ಭಿರಾ ಗಚ್ಛತಂ । ಕಿಮರ್ಥಂ । ಸೋಮಪೀತಯೇ ತಸ್ಯ ಸೋಮಸ್ಯ ಪಾನಾರ್ಥಂ ॥**

॥ ಪ್ರತಿಪದಾರ್ಥ ॥

ನರಾ—ನೇತೃಗಳಾದ । **ಇಂದ್ರಾಗ್ನೀ**—ಎಲೈ ಇಂದ್ರಾಗ್ನಿಗಳೇ । **ಸುತಂ**—ಹಿಂಡಲ್ಪಟ್ಟ । **ಇದಂ ಸವನಂ ಉಪ**—ಈ ಸೋಮರಸಕ್ಕೆ ಅಭಿಮುಖವಾಗಿ । **ತಾಭಿಃ**—ಆದೇ ಅಶ್ವಗಳೊಡನೆ । **ಸೋಮಪೀತಯೇ**—ಸೋಮಪಾನಾರ್ಥವಾಗಿ । **ಆ ಗಚ್ಛತಂ**—ದಯಮಾಡಿರಿ.

॥ ಭಾವಾರ್ಥ ॥

ನೇತೃಗಳಾದ ಎಲೈ ಇಂದ್ರಾಗ್ನಿಗಳೇ, ಹಿಂಡಿ ಸಿದ್ಧವಾಗಿರುವ ಈ ಸೋಮಪಾನಾರ್ಥವಾಗಿ ನಿಮ್ಮ ಅಶ್ವಗಳೊಡನೆ ಈ ರಸಕ್ಕೆ ಅಭಿಮುಖವಾಗಿ ದಯಮಾಡಿರಿ.

English Translation.

Come with them, leaders (of rites), to the effused libation, to drink, Indra and Agni, of the Soma.

॥ ಸಂಹಿತಾಪಾಠಃ ॥

**ತಮೀಳಿಷ್ವ ಯೋ ಅರ್ಚಿಷಾ ವನಾ ವಿಶ್ವಾ ಪರಿಷ್ವಜತ್ ।**
**ಕೃಷ್ಣಾ ಕೃಣೋತಿ ಜಿಹ್ವಯಾ ॥ ೧೦ ॥**

॥ ಪದಪಾಠಃ ॥

**ತಂ । ಈಳಿಷ್ವ । ಯಃ । ಅರ್ಚಿಷಾ । ವನಾ । ವಿಶ್ವಾ । ಪರಿऽಸ್ವಜತ್ ।**
**ಕೃಷ್ಣಾ । ಕೃಣೋತಿ । ಜಿಹ್ವಯಾ ॥ ೧೦ ॥**

॥ ಸಾಯಣಭಾಷ್ಯಂ ॥

**ಯೋ ಸ್ತೋತಸ್ತಮಗ್ನಿಮೀಳಿಷ್ವ ಸ್ತುಹಿ ಯೋಽಗ್ನಿರರ್ಚಿಷಾ ಜ್ವಾಲಾರೂಪೇಣ ತೇಜಸಾ ವಿಶ್ವಾ ಸರ್ವಾಣಿ ವನಾರಣ್ಯಾನಿ ಪರಿಷ್ವಜತ್ ಪರಿಷ್ವಜತಿ ಪರಿತೋ ವೇಷ್ಟಯತಿ । ಯಶ್ಚ ತಾನಿ ವನಾನಿ ಜಿಹ್ವಯಾ ಜ್ವಾಲಯಾ ದಗ್ಧ್ವಾ ಕೃಷ್ಣಾ ಕೃಷ್ಣವರ್ಣಾನಿ ಕೃಣೋತಿ ಕರೋತಿ ॥**

॥ ಪ್ರತಿಪದಾರ್ಥ ॥

(ಎಲೈ ಸ್ತುತಿಕರ್ತನೇ) **ಯಃ**—ಯಾವ ಅಗ್ನಿಯು । **ಅರ್ಚಿಷಾ**—ತನ್ನ ತೇಜಸ್ಸಿನಿಂದ । **ವಿಶ್ವಾ**—ಸಮಸ್ತವಾದ । **ವನಾ**—ಅರಣ್ಯಗಳನ್ನೂ । **ಪರಿಷ್ವಜತ್**—ಆವರಿಸುವನೋ (ಮತ್ತು) । **ಜಿಹ್ವಯಾ**—ಜ್ವಾಲಾರೂಪವಾದ ಜಿಹ್ವೆಯಿಂದ । **ಕೃಷ್ಣಾ**—ಆ ವನಗಳನ್ನೆಲ್ಲಾ ಕೃಷ್ಣವರ್ಣವುಳ್ಳದ್ದನ್ನಾಗಿ । **ಕೃಣೋತಿ**—ಮಾಡುವನೋ । **ತಂ**—ಆ ಅಗ್ನಿಯನ್ನು । **ಈಳಿಷ್ವ**—ಸ್ತುತಿಸು.

। ಭಾವಾರ್ಥ ।

ಎಲೈ ಸ್ತುತಿಕರ್ತನೇ, ಯಾವ ಅಗ್ನಿಯು ತನ್ನ ತೇಜಸ್ಸಿನಿಂದ ಸಮಸ್ತವಾದ ಅರಣ್ಯಗಳನ್ನೂ ಆವರಿಸುವನೋ ಮತ್ತು ಜ್ವಾಲಾರೂಪವಾದ ಜಿಹ್ವೆಯಿಂದ ಆ ವನಗಳನ್ನೆಲ್ಲಾ ಕೃಷ್ಣವರ್ಣವುಳ್ಳದ್ದನ್ನಾಗಿ ಮಾಡುವನೋ ಆ ಅಗ್ನಿಯನ್ನು ಸ್ತುತಿಸು.

English Translation.

Glorify that Agni who envelopes all the forests with flame, who blackens them with (his) tongue.

। ಸಂಹಿತಾಪಾಠಃ ।

ಯ ಇದ್ಧ ಆವಿವಾಸತಿ ಸುಮ್ನಮಿಂದ್ರಸ್ಯ ಮರ್ತ್ಯಃ ।

ದ್ಯುಮ್ನಾಯ ಸುತರಾ ಅಪಃ ॥ ೧೧ ॥

॥ ಪದಪಾಠಃ ॥

ಯಃ । ಇದ್ಧೇ । ಆಽವಿವಾಸತಿ । ಸುಮ್ನಂ । ಇಂದ್ರಸ್ಯ । ಮರ್ತ್ಯಃ ।

ದ್ಯುಮ್ನಾಯ । ಸುಽತರಾಃ । ಅಪಃ ॥ ೧೧ ॥

॥ ಸಾಯಣಭಾಷ್ಯಂ ॥

**ಯೋ ಮರ್ತ್ಯೋ ಮನುಷ್ಯ ಇದ್ಧೇ ದೀಪ್ತೇಽಗ್ನೌ ಸುಮ್ನಂ ಸುಖಕರಂ ಹವಿರಿಂದ್ರಸ್ಯೇಂದ್ರಾಯಾವಿವಾಸತಿ ಪರಿಚರತಿ ಪ್ರಯಚ್ಛತಿ ॥ ಚತುರ್ಥ್ಯರ್ಥೇ ಷಷ್ಠೀ ॥ ತಸ್ಯ ಮರ್ತ್ಯಸ್ಯ ದ್ಯುಮ್ನಾಯ ದ್ಯೋತಮಾನಾಯಾನ್ನಾಯ ತದರ್ಥಂ ಸುತರಾಃ ಸುಖೇನ ತರಣೀಯಾ ಅಪ ಉದಕಾನಿ ವೃಷ್ಟ್ಯಾತ್ಮಕಾನೀಂದ್ರಃ ಕರೋತೀತಿ ಶೇಷಃ ॥**

। ಪ್ರತಿಪದಾರ್ಥ ॥

**ಯಃ**—ಯಾವ । **ಮರ್ತ್ಯಃ**—ಮಾನವನಾದ ಯಜಮಾನನು । **ಇದ್ಧೇ**—ಯಜ್ಞಾಗ್ನಿಯು ಪ್ರಜ್ವಲಿತನಾದಾಗ । **ಸುಮ್ನಂ**—ಸುಖಕರವಾದ ಹವಿಸ್ಸನ್ನು । **ಇಂದ್ರಸ್ಯ**—ಇಂದ್ರನನ್ನುದ್ದೇಶಿಸಿ । **ಆವಿವಾಸತಿ**—ಅರ್ಪಿಸುವನೋ (ಆ ಮಾನವನಿಗೆ) । **ದ್ಯುಮ್ನಾಯ**—ಪ್ರಕಾಶಮಾನವಾದ ಅನ್ನಸಾಧನೆಗಾಗಿ । **ಸುತರಾಃ**—ದುಃಖದಿಂದ ಸುಲಭವಾಗಿ ಯಜಮಾನನನ್ನು ದಾಟಿಸತಕ್ಕ । **ಅಪಃ**—ವೃಷ್ಟ್ಯುದಕಗಳನ್ನು (ಇಂದ್ರನು ಕೊಡುತ್ತಾನೆ).

॥ ಭಾವಾರ್ಥ ॥

ಯಾವ ಮಾನವನಾದ ಯಜಮಾನನು ಯಜ್ಞಾಗ್ನಿಯು ಪ್ರಜ್ವಲಿತನಾದಾಗ ಸುಖಕರವಾದ ಹವಿಸ್ಸನ್ನು ಇಂದ್ರನಿಗೆ ಅರ್ಪಿಸುವನೋ ಆ ಮಾನವನಿಗೆ ಪ್ರಕಾಶಮಾನವಾದ ಅನ್ನಲಾಭಾರ್ಥವಾಗಿ ದುಃಖದಿಂದ ಸುಲಭವಾಗಿ ದಾಟಿಸತಕ್ಕ ವೃಷ್ಟ್ಯುದಕಗಳನ್ನು ಇಂದ್ರನು ಕೊಡುತ್ತಾನೆ.

## English Translation.

The mortal who presents the gratifying (oblation) to Indra in the kindled (fire), to him (Indra grants) acceptable waters for his sustenance.

॥ ಸಂಹಿತಾಪಾಠಃ ॥

ತಾ ನೋ ವಾಜವತೀರಿಷ ಆಶೂನ್ಪಿಪೃತಮರ್ವತಃ ।

ಇಂದ್ರಮಗ್ನಿಂ ಚ ವೋಳ್ಹವೇ ॥ ೧೨ ॥

॥ ಪದಪಾಠಃ ॥

ತಾ । ನಃ । ವಾಜಽವತೀಃ । ಇಷಃ । ಆಶೂನ್ । ಪಿಪೃತಂ । ಅರ್ವತಃ ।

ಇಂದ್ರಂ । ಅಗ್ನಿಂ । ಚ । ವೋಳ್ಹವೇ ॥ ೧೨ ॥

॥ ಸಾಯಣಭಾಷ್ಯಂ ॥

ಹೇ ಇಂದ್ರಾಗ್ನೀ ತಾ ತೌ ಯುವಾಂ ವಾಜವತೀರನ್ನವತೀರಿಷ ಇಷ್ಯಮಾಣಾ ವೃಷ್ಟೀಃ । ಯದ್ವಾ । ವಾಜೋ ಬಲಂ । ತದ್ವತೀರಿಷೋಽನ್ನಾನ್ಯಾಶೂನ್ ಶೀಘ್ರಗಾನರ್ವತೋಽಶ್ವಾಂಶ್ಚ ನೋಽಸ್ಮಭ್ಯಂ ಪಿಪೃತಂ । ಪೂರಯತಂ । ಪ್ರಯಚ್ಛತಂ । ಕಿಮರ್ಥಂ । ಇಂದ್ರಮಗ್ನಿಂ ಚ ಯುವಾಂ ವೋಳ್ಹವೇ ವೋಢುಂ ಹವಿರ್ಭಿಃ ಪ್ರಾಪಯಿತುಂ ॥

॥ ಪ್ರತಿಪದಾರ್ಥ ॥

(ಎಲೈ ಇಂದ್ರಾಗ್ನಿಗಳೇ) । **ತಾ**—ಪ್ರಸಿದ್ಧರಾದ ನೀವು । **ಇಂದ್ರಮಗ್ನಿಂ ಚ**—ಇಂದ್ರಾಗ್ನಿರೂಪರಾದ ನಿಮಗೆ । **ವೋಳ್ಹವೇ**—ಹವಿಸ್ಸನ್ನು ವಹಿಸುವುದಕ್ಕಾಗಿ । **ವಾಜವತೀಃ**—ಅನ್ನಯುಕ್ತವಾದವೂ । **ಇಷಃ**—ಶಕ್ತಿಯುತವಾದವೂ । **ಆಶೂನ್**—ಶೀಘ್ರಗಾಮಿಗಳೂ ಆದ । **ಅರ್ವತಃ**—ಅಶ್ವಗಳನ್ನು । **ನಃ**—ನಮಗೆ । **ಪಿಪೃತಂ** – ಒದಗಿಸಿಕೊಡಿರಿ.

॥ ಭಾವಾರ್ಥ ॥

ಎಲೈ ಇಂದ್ರಾಗ್ನಿಗಳೇ, ಪ್ರಸಿದ್ಧರಾದ ನೀವು ಇಂದ್ರಾಗ್ನಿರೂಪರಾದ ನಿಮಗೆ ಹವಿಸ್ಸನ್ನು ವಹಿಸುವುದಕ್ಕಾಗಿ ಅನ್ನಯುಕ್ತವಾದವೂ ಶಕ್ತಿಯುತವಾದವೂ ಶೀಘ್ರಗಾಮಿಗಳೂ ಆದ ಅಶ್ವಗಳನ್ನು ಒದಗಿಸಿ ಕೊಡಿರಿ.

## English Translation.

May those two grant us strengthening food, and swift horses to convey (our offerings).

॥ ಸಂಹಿತಾಪಾಠಃ ॥

ಉಭಾ ವಾಮಿಂದ್ರಾಗ್ನೀ ಆಹುವಧ್ಯಾ ಉಭಾ ರಾಧಸಃ ಸಹ ಮಾದಯಧ್ಯೈ।
ಉಭಾ ದಾತಾರಾವಿಷಾಂ ರಯೀಣಾಮುಭಾ ವಾಜಸ್ಯ ಸಾತಯೇ ಹುವೇ
ವಾಂ ॥ ೧೩ ॥

॥ ಪದಪಾಠಃ ॥

ಉಭಾ । ವಾಂ । ಇಂದ್ರಾಗ್ನೀ ಇತಿ । ಆऽಹುವಧ್ಯೈ । ಉಭಾ । ರಾಧಸಃ । ಸಹ । ಮಾದಯಧ್ಯೈ ।
ಉಭಾ । ದಾತಾರೌ । ಇಷಾಂ । ರಯೀಣಾಂ । ಉಭಾ । ವಾಜಸ್ಯ । ಸಾತಯೇ । ಹುವೇ । ವಾಂ ॥ ೧೩ ॥

॥ ಸಾಯಣಭಾಷ್ಯಂ ॥

ಐಂದ್ರಾಗ್ನಸ್ಯ ಪಶೋರ್ಹವಿಷೋಽನುವಾಕ್ಯೋಭಾ ವಾಮಿತ್ಯೇಷಾ । ಸೂತ್ರಿತಂ ಚ । ಉಭಾ ವಾಮಿಂದ್ರಾಗ್ನೀ ಆಹುವಧ್ಯೈ ಶುಚಿಂ ನು ಸ್ತೋಮಂ ನವ ಜಾತಮದ್ಯ । ಆ. ೩-೭ । ಇತಿ ॥

ಹೇ ಇಂದ್ರಾಗ್ನೀ ಉಭೋಭೌ ಸಂಹತ್ಯ ವರ್ತಮಾನೌ ವಾಂ ಯುವಾಂ ಹುವೇ । ಆಹ್ವಯಾಮಿ। ಕಿಮರ್ಥಂ। ಆಹುವಧ್ಯಾ ಆಭಿಮುಖ್ಯೇನ ಹೋತುಂ । ತಥೋಭೋಭೌ ಯುವಾಮಾಹ್ವಯೇ ರಾಧಸೋ ರಾಧಸಾ ರಾಧಕೇನ ಹವಿಷಾ ಸಹ ಯುಗಪದೇವ ಮಾದಯಧ್ಯೈ ಮಾದಯಿತುಂ ತರ್ಪಯಿತುಂ। ಸರ್ವೇಷು ದೇವೇಷು ಸತ್ಸ್ವನಯೋರಾಹ್ವಾನೇ ಕಿಂ ಕಾರಣಮಿತಿ ಚೇದುಚ್ಯತೇ। ಉಭೋಭೌ ತೌ ಯುವಾಮಿಷಾಮನ್ನಾನಾಂ ರಯೀಣಾಂ ಧನಾನಾಂ ಚ ದಾತಾರೌ ಸ್ಥಃ। ಅತಃ ಕಾರಣಾದುಭೋಭೌ ವಾಂ ಯುವಾಂ ವಾಜಸ್ಯಾನ್ನಸ್ಯ ಸಾತಯೇ ಸಂಭಜನಾಯ ಹುವೇ । ಆಹ್ವಯೇ ॥

॥ ಪ್ರತಿಪದಾರ್ಥ ॥

**ಇಂದ್ರಾಗ್ನೀ**—ಎಲೈ ಇಂದ್ರಾಗ್ನಿಗಳೇ । **ಉಭಾ**—ಇಬ್ಬರೂ ಒಟ್ಟಿಗಿರತಕ್ಕ । **ವಾಂ**—ನಿಮ್ಮಿಬ್ಬರನ್ನೂ । **ಆಹುವಧ್ಯೈ**—ಹವಿಸ್ಸನ್ನರ್ಪಿಸಲು । **ಹುವೇ**— ಪ್ರಾರ್ಥಿಸಿ ಕರೆಯುತ್ತೇನೆ । **ರಾಧಸಃ**— ಹವಿಸ್ಸುಗಳಿಂದ । **ಉಭಾ**—ಇಬ್ಬರೂ । **ಸಹ**—ಒಂದೇ ಕಾಲದಲ್ಲಿ । **ಮಾದಯಧ್ಯೈ**—ತೃಪ್ತಿಯನ್ನು ಅನುಭವಿಸಲು (ಕರೆಯುತ್ತೇನೆ)। **ಉಭಾ**—ನೀವಿಬ್ಬರೂ । **ಇಷಾಂ**—ಅನ್ನಗಳಿಗೂ । **ರಯೀಣಾಂ**—ಧನಗಳಿಗೂ । **ದಾತಾರೌ**—ದಾನ ಮಾಡತಕ್ಕವರಾಗಿದ್ದೀರಿ । **ಉಭಾ**— ಒಟ್ಟಿಗಿರುವ । **ವಾಂ**—ನಿಮ್ಮಿಬ್ಬರನ್ನೂ । **ವಾಜಸ್ಯ**—ಅನ್ನದ । **ಸಾತಯೇ**— ಪ್ರಾಪ್ತಿಗಾಗಿ (ಕರೆಯುತ್ತೇನೆ).

॥ ಭಾವಾರ್ಥ ॥

ಎಲೈ ಇಂದ್ರಾಗ್ನಿಗಳೇ, ಒಟ್ಟಿಗಿರತಕ್ಕ ನಿಮ್ಮಿಬ್ಬರನ್ನೂ ಹವಿಸ್ಸನ್ನರ್ಪಿಸಲು ಪ್ರಾರ್ಥಿಸಿ ಕರೆಯುತ್ತೇನೆ. ಹವಿಸ್ಸುಗಳಿಂದ ನೀವಿಬ್ಬರೂ ಒಂದೇ ಕಾಲದಲ್ಲಿ ತೃಪ್ತಿಯನ್ನನುಭವಿಸಿ. ನೀವಿಬ್ಬರೂ ಅನ್ನಗಳಿಗೂ, ಧನಗಳಿಗೂ ದಾತೃಗಳಾಗಿದ್ದೀರಿ. ಒಟ್ಟಿಗಿರುವ ನಿಮ್ಮಿಬ್ಬರನ್ನೂ ಅನ್ನಪ್ರಾಪ್ತಿಗಾಗಿ ಕರೆಯುತ್ತೇನೆ.

## English Translation.

I invoke you both, Indra and Agni, to be present at the sacrifice ; and both together to be exhilarated by the (sacrificial) food ; for you are both donors of food and riches, and therefore I invoke you both for the obtaining of sustenance

|| ವಿಶೇಷವಿಷಯಗಳು ||

ಇಂದ್ರಾಗ್ನಿಗಳನ್ನುದ್ದೇಶಿಸಿ ಮಾಡುವ ಪಶುಯಾಗದಲ್ಲಿ ಹವಿಸ್ಸನ್ನು ಹೋಮಮಾಡುವಾಗ **ಉಭಾ ವಾಂ** ಎಂಬ ಈ ಋಕ್ಕನ್ನು ಅನುವಾಕ್ಯಾಮಂತ್ರವನ್ನಾಗಿ ಪಠಿಸಬೇಕೆಂದು ಅಶ್ವಲಾಯನಶ್ರೌತಸೂತ್ರದ— **ಉಭಾ ವಾಮಿಂದ್ರಾಗ್ನೀ ಆಹುವಧ್ಯೈ ಶುಚಿಂ ನು ಸ್ತೋಮಂ ನವಜಾತಮದ್ಯ** ಎಂಬ ಸೂತ್ರದಿಂದ (ಆ. ೩-೭) ವಿಷ್ಪತವಾಗಿರುವುದು.

|| ಸಂಹಿತಾಪಾಠಃ ||

**ಆ ನೋ ಗವ್ಯೇಭಿರಶ್ವ್ಯೈರ್ವಸವ್ಯೈ೩ರುಪ ಗಚ್ಛತಂ ।**
**ಸಖಾಯೌ ದೇವೌ ಸಖ್ಯಾಯ ಶಂಭುವೇಂದ್ರಾಗ್ನೀ ತಾ ಹವಾಮಹೇ ॥೧೪॥**

|| ಪದಪಾಠಃ ||

**ಆ । ನಃ । ಗವ್ಯೇಭಿಃ । ಅಶ್ವ್ಯೈಃ । ವಸವ್ಯೈಃ । ಉಪ । ಗಚ್ಛತಂ ।**
**ಸಖಾಯಾ । ದೇವಾ । ಸಖ್ಯಾಯ । ಶಂಽಭುವಾ । ಇಂದ್ರಾಗ್ನೀ ಇತಿ । ತಾ । ಹವಾಮಹೇ ॥ ೧೪ ॥**

|| ಸಾಯಣಭಾಷ್ಯಂ ||

**ಹೇ ಇಂದ್ರಾಗ್ನೀ ಗವ್ಯೇಭಿರ್ಗೋಸಮೂಹೈರಶ್ವ್ಯೈರಶ್ವಸಮೂಹೈರ್ವಸವ್ಯೈರ್ವಸುಸಮೂಹೈಶ್ಚ ಸಾರ್ಧಂ ನೋಽಸ್ಮಾನಾಭಿಮುಖ್ಯೇನೋಪಾ ಗಚ್ಛತಂ । ಶೇಷಃ ಪರೋಕ್ಷಕೃತಃ । ಸಖಾಯೌ ಸಮಾನಖ್ಯಾನೌ ದೇವೌ ದಾನಾದಿಗುಣಯುಕ್ತೌ ಶಂಭುವಾ ಶಂಭುವೌ ಸುಖಸ್ಯ ಭಾವಯಿತಾರೌ ತಾ ತಾದೃಶಾವಿಂದ್ರಾಗ್ನೀ ಸಖ್ಯಾಯ ಸಖಿತ್ವಾರ್ಥಂ ವಯಂ ಹವಾಮಹೇ । ಆಹ್ವಯಾಮಹೇ ॥**

|| ಪ್ರತಿಪದಾರ್ಥ ||

(ಎಲೈ ಇಂದ್ರಾಗ್ನಿಗಳೇ) । **ಗವ್ಯೇಭಿಃ**—ಗೋಸಮೂಹಗಳೊಂದಿಗೂ । **ಅಶ್ವ್ಯೈಃ**—ಅಶ್ವಸಮೂಹಗಳೊಂದಿಗೂ । **ವಸವ್ಯೈಃ**—ಸಂಪತ್ಸಮೃದ್ಧಿಗಳೊಂದಿಗೂ । **ನಃ ಉಪ**—ನಮಗಭಿಮುಖವಾಗಿ । **ಆಗಚ್ಛತಂ**—ದಯಮಾಡಿರಿ । **ಸಖಾಯೌ**—ಮಿತ್ರಭೂತರೂ । **ದೇವೌ**—ದೇವತಾತ್ಮರೂ । **ಶಂಭುವಾ**—ಸುಖಕರ್ತರೂ । **ತಾ**—ಪ್ರಸಿದ್ಧರೂ ಆದ । **ಇಂದ್ರಾಗ್ನೀ**—ಇಂದ್ರಾಗ್ನಿಗಳನ್ನು । **ಸಖ್ಯಾಯ**—ಮಿತ್ರತ್ವಸಂಪಾದನೆಗಾಗಿ । **ಹವಾಮಹೇ**—ಪ್ರಾರ್ಥಿಸಿ ಕರೆಯುತ್ತೇವೆ.

॥ ಭಾವಾರ್ಥ ॥

ಎಲೈ ಇಂದ್ರಾಗ್ನಿಗಳೇ, ಗೋಸಮೂಹಗಳೊಂದಿಗೂ, ಅಶ್ವಸಮೂಹಗಳೊಂದಿಗೂ, ಸಂಪತ್ಸಮೃದ್ಧಿಗಳೊಂದಿಗೂ, ನಮಗಭಿಮುಖವಾಗಿ ದಯಮಾಡಿರಿ. ಮಿತ್ರಭೂತರೂ, ದೇವತಾತ್ಮರೂ ಸುಖಕರ್ತರೂ ಪ್ರಸಿದ್ಧರೂ ಆದ ಇಂದ್ರಾಗ್ನಿಗಳನ್ನು ಮಿತ್ರತ್ವಸಂಪಾದನೆಗಾಗಿ ಪ್ರಾರ್ಥಿಸಿ ಕರೆಯುತ್ತೇವೆ.

English Translation.

Come to us with herds of cattle, with troops of horses, with ample treasures, divine friends, Indra and Agni : givers of happiness, we invoke you as such for your friendship.

॥ ಸಂಹಿತಾಪಾಠಃ ॥

ಇಂದ್ರಾಗ್ನೀ ಶೃಣುತಂ ಹವಂ ಯಜಮಾನಸ್ಯ ಸುನ್ವತಃ ।
ವೀತಂ ಹವ್ಯಾನ್ಯಾ ಗತಂ ಪಿಬತಂ ಸೋಮ್ಯಂ ಮಧು ॥ ೧೫ ॥

॥ ಪದಪಾಠಃ ॥

ಇಂದ್ರಾಗ್ನೀ ಇತಿ । ಶೃಣುತಂ । ಹವಂ । ಯಜಮಾನಸ್ಯ । ಸುನ್ವತಃ ।
ವೀತಂ । ಹವ್ಯಾನಿ । ಆ । ಗತಂ । ಪಿಬತಂ । ಸೋಮ್ಯಂ । ಮಧು ॥ ೧೫ ॥

॥ ಸಾಯಣಭಾಷ್ಯಂ ॥

ಹೇ ಇಂದ್ರಾಗ್ನೀ ಸುನ್ವತಃ ಸೋಮಾಭಿಷವಂ ಕುರ್ವತೋ ಯಜಮಾನಸ್ಯ ಹವಮಾಹ್ವಾನಂ ಸ್ತೋತ್ರಂ ಶೃಣುತಂ । ಶ್ರುತ್ವಾ ಚ ತದೀಯಾನಿ ಹವ್ಯಾನಿ ಹವೀಂಷಿ ವೀತಂ । ಕಾಮಯೇಥಾಂ । ಕಾಮಯಿತ್ವಾ ಚಾ ಗತಂ । ಆಗಚ್ಛತಂ । ಆಗತ್ಯ ಚ ಸೋಮ್ಯಂ ಸೋಮಾತ್ಮಕಂ ಮಧು ಪಿಬತಂ ॥

॥ ಪ್ರತಿಪದಾರ್ಥ ॥

**ಇಂದ್ರಾಗ್ನೀ**—ಎಲೈ ಇಂದ್ರಾಗ್ನಿಗಳೇ । **ಸುನ್ವತಃ**—ಸೋಮರಸವನ್ನು ಹಿಂಡುವ । **ಯಜಮಾನಸ್ಯ**—ಯಜಮಾನನ । **ಹವಂ**—ಆಹ್ವಾನರೂಪವಾದ ಸ್ತುತಿಯನ್ನು । **ಶೃಣುತಂ**—ಕೇಳಿರಿ । **ಹವ್ಯಾನಿ**—ಅವನಿಂದ ಅರ್ಪಿತವಾಗುವ ಹವಿಸ್ಸುಗಳನ್ನು । **ವೀತಂ**—ಅಪೇಕ್ಷಿಸಿರಿ । **ಆ ಗತಂ**—ಅದರ ಸ್ವೀಕಾರಕ್ಕಾಗಿ ದಯಮಾಡಿರಿ । **ಸೋಮ್ಯಂ**—ಸೋಮಾತ್ಮಕವಾದ । **ಮಧು**—ಮಧುರವಾದ ರಸವನ್ನು । **ಪಿಬತಂ**—ಪಾನಮಾಡಿರಿ.

॥ ಭಾವಾರ್ಥ ॥

ಎಲೈ ಇಂದ್ರಾಗ್ನಿಗಳೇ, ಸೋಮರಸವನ್ನು ಹಿಂಡುವ ಯಜಮಾನನ ಆಹ್ವಾನರೂಪವಾದ ಸ್ತುತಿಯನ್ನು ಕೇಳಿರಿ. ಅವನಿಂದ ಅರ್ಪಿತವಾಗುವ ಹವಿಸ್ಸುಗಳನ್ನಪೇಕ್ಷಿಸಿ ಅದರ ಸ್ವೀಕಾರಕ್ಕಾಗಿ ದಯಮಾಡಿರಿ. ಸೋಮಾತ್ಮಕವಾದ ಮಧುವನ್ನು ಪಾನಮಾಡಿರಿ

English Translation.

Hear, Indra and Agni, the invocation of the institutor of the rite as he offers the libation : partake of the offering : come, quaff the sweet Soma beverage.



# ಅರವತ್ತೊಂದನೆಯ ಸೂಕ್ತವು

॥ ಸಾಯಣಭಾಷ್ಯಂ ॥

**ಇಯಮದದಾದಿತಿ ಚತುರ್ದಶರ್ಚಂ ದ್ವಾದಶಂ ಸೂಕ್ತಂ ಭರದ್ವಾಜಸ್ಯಾರ್ಷಂ ಸರಸ್ವತೀದೇವತಾಕಂ । ಆದಿತಸ್ತಿಸ್ರೋ ಜಗತ್ಯಸ್ತ್ರಯೋದಶ್ಯಪಿ ಜಗತೀ ಚತುರ್ದಶೀ ತ್ರಿಷ್ಟುಪ್ ಶಿಷ್ಟಾ ಗಾಯತ್ರ್ಯಃ । ತಥಾ ಚಾನುಕ್ರಾಂತಂ । ಇಯಂ ಷಳೂನಾ ಸಾರಸ್ವತಂ ತ್ರಿಜಗತ್ಯಾದಿ ಜಗತೀತ್ರಿಷ್ಟುಬಂತಮಿತಿ ॥ ಅತ್ರ ಶೌನಕಃ । ಇಯಮಿತ್ಯೇತದಾದ್ಯಂ ತು ಸೂಕ್ತಂ ಸಾರಸ್ವತಂ ಜಪೇತ್ । ದ್ವಿಜಃ ಪ್ರಾತಃ ಶುಚಿರ್ಭೂತ್ವಾ ವಾಗ್ಮೀ ಭವತಿ ಬುದ್ಧಿಮಾನ್ । ಋಗ್ವಿ. ೨-೨೩ । ಇತಿ ॥ ಪಾರ್ಷ್ಣಿಕೇ ಷಷ್ಠೇಽಹನಿ ಪ್ರಉಗ ಇಯಮದದಾದಿತಿ ಸಾರಸ್ವತಸ್ತೃಚಃ । ಸೂತ್ರಿತಂ ಚ । ಇಯಮದದಾದ್ರಭಸಮೃಣಚ್ಯುತಮಿತಿ ಪ್ರಉಗಂ । ಆ. ೮-೧ । ಇತಿ ॥**

ಅನುವಾದವು—**ಇಯಮದದಾತ್** ಎಂಬ ಈ ಸೂಕ್ತವು ಐದನೆಯ ಅನುವಾಕದಲ್ಲಿ ಹನ್ನೆರಡನೆಯ ಸೂಕ್ತವು. ಇದರಲ್ಲಿ ಹದಿನಾಲ್ಕು ಋಕ್ಕುಗಳಿರುವವು. ಈ ಸೂಕ್ತಕ್ಕೆ ಭರದ್ವಾಜನು ಋಷಿಯು; ಸರಸ್ವತಿಯು ದೇವತೆಯು; ಈ ಸೂಕ್ತದ ಮೊದಲಿನ ಮೂರು ಋಕ್ಕುಗಳೂ ಹದಿಮೂರನೆಯ ಋಕ್ಕೂ ಜಗತೀಛಂದಸ್ಕವು. ಹದಿನಾಲ್ಕನೆಯದು ತ್ರಿಷ್ಟುಪ್‌ಛಂದಸ್ಕವು. ಉಳಿದ ಋಕ್ಕುಗಳೆಲ್ಲಾ ಗಾಯತ್ರೀಛಂದಸ್ಕವು. ಅನುಕ್ರಮಣಿಕೆಯಲ್ಲಿ—**ಇಯಂ ಷಳೂನಾ ಸಾರಸ್ವತಂ ತ್ರಿಜಗತ್ಯಾದಿ ಜಗತೀತ್ರಿಷ್ಟುಬಂತಂ** ಎಂದು ಹೇಳಿರುವುದು. ಈ ಸೂಕ್ತದ ವಿನಿಯೋಗ ವಿಷಯದಲ್ಲಿ ಶೌನಕಮಹರ್ಷಿಯು ತಮ್ಮ ಋಗ್ವಿಧಾನವೆಂಬ ಗ್ರಂಥದಲ್ಲಿ—

**ಇಯಮಿತ್ಯೇತದಾದ್ಯಂ ತು ಸೂಕ್ತಂ ಸಾರಸ್ವತಂ ಜಪೇತ್ ।**
**ದ್ವಿಜಃ ಪ್ರಾತಃ ಶುಚಿರ್ಭೂತ್ವಾ ವಾಗ್ಮೀ ಭವತಿ ಬುದ್ಧಿಮಾನ್ ॥**
(ಋಗ್ವಿಧಾನ. ೨-೨೫)

ಎಂದು ಹೇಳಿದ್ದಾರೆ. ಎಂದರೆ, ದ್ವಿಜನಾದವನು ಪ್ರಾತಃಕಾಲದಲ್ಲೆದ್ದು ಸ್ನಾನಾದಿಗಳಿಂದ ಶುಚಿರ್ಭೂತನಾಗಿ **ಇಯಮದದಾತ್** ಎಂಬ ಸರಸ್ವತೀ ದೇವತಾಕವಾದ ಈ ಸೂಕ್ತವನ್ನು ಜಪಿಸುತ್ತಿದ್ದರೆ, ಆ ಪುರುಷನು ಸರಸ್ವತೀ ದೇವತೆಯ

ಅನುಗ್ರಹದಿಂದ ವಾಚಾಳಿಯೂ, ಎಂದರೆ ಮಾತನಾಡುವುದರಲ್ಲಿ ಕುಶಲನೂ, ಬುದ್ಧಿವಂತನೂ ಆಗುವನು. ಮತ್ತು ಪೃಷ್ಠ್ಯಯಾಗದ ಆರನೆಯ ದಿವಸ ಪ್ರಉಗಶಸ್ತ್ರಮಂತ್ರಗಳನ್ನು ಪಠಿಸುವಾಗ **ಇಯಮದದಾತ್** ಎಂಬ ಸೂಕ್ತದ ಮೊದಲಿನ ಮೂರು ಋಕ್ಕುಗಳನ್ನು ಸಾರಸ್ವತತೃಚವನ್ನಾಗಿ ಪಠಿಸಬೇಕೆಂದು ಆಶ್ವಲಾಯನ ಶ್ರೌತಸೂತ್ರದ—**ಇಯ-ಮದದ್ರಾದಭಸಮೃಣಚ್ಯುತಮಿತಿ ಪ್ರಉಗಂ** ಎಂಬ ಸೂತ್ರದಿಂದ (ಆ. ೮-೧) ವಿವೃತವಾಗಿರುವದು

## ಸೂಕ್ತ—೬೧

ಮಂಡಲ—೬ ॥ ಅನುವಾಕ—೫ ॥ ಸೂಕ್ತ—೬೧ ॥
ಅಷ್ಟಕ—೪ ॥ ಅಧ್ಯಾಯ—೮ ॥ ವರ್ಗ—೩೦, ೩೧, ೩೨ ॥

॥ ಸೂಕ್ತದಲ್ಲಿರುವ ಋಕ್ಸಂಖ್ಯೆ—೧೪ ॥
॥ ಋಷಿಃ—ಭರದ್ವಾಜೋ ಬಾರ್ಹಸ್ಪತ್ಯಃ ॥
॥ ದೇವತಾ—ಸರಸ್ವತೀ ॥
॥ ಛಂದಃ—೧-೩, ೧೩ ಜಗತೀ । ೪-೧೨. ಗಾಯತ್ರೀ । ೧೪. ತ್ರಿಷ್ಟುಪ್ ॥

॥ ಸಂಹಿತಾಪಾಠಃ ॥

ಇಯಮದದಾದ್ರಭಸಮೃಣಚ್ಯುತಂ ದಿವೋದಾಸಂ ವಧ್ರ್ಯಶ್ವಾಯ ದಾಶುಷೇ ।
ಯಾ ಶಶ್ವಂತಮಾಚಖಾದಾವಸಂ ಪಣಿಂ ತಾ ತೇ ದಾತ್ರಾಣಿ ತವಿಷಾ ಸರಸ್ವತೀ ॥ ೧ ॥

॥ ಪದಪಾಠಃ ॥

ಇಯಂ । ಅದದಾತ್ । ರಭಸಂ । ಋಣಽಚ್ಯುತಂ । ದಿವಃಽದಾಸಂ । ವಧ್ರಿಽಅಶ್ವಾಯ । ದಾಶುಷೇ ।
ಯಾ । ಶಶ್ವಂತಂ । ಆಽಚಖಾದ । ಅವಸಂ । ಪಣಿಂ । ತಾ । ತೇ । ದಾತ್ರಾಣಿ । ತವಿಷಾ । ಸರಸ್ವತಿ ॥ ೧ ॥

॥ ಸಾಯಣಭಾಷ್ಯಂ ॥

ಇಯಂ ಸರಸ್ವತೀ ರಭಸಂ ವೇಗವಂತಮೃಣಚ್ಯುತಂ ವೈದಿಕಸ್ಯ ದೇವರ್ಷಿಪಿತೃಸಂಬಂಧಿನೋ ಲೌಕಿಕಸ್ಯ ಚ ಋಣಸ್ಯ ಚ್ಯಾವಯಿತಾರಂ ದಿವೋದಾಸಮೇತತ್ಸಂಜ್ಞಂ ಪುತ್ರಂ ದಾಶುಷೇ ಹವೀಂಷಿ ದತ್ತವತೇ ವಧ್ರ್ಯಶ್ವಾಯೈತತ್ಸಂಜ್ಞಾಯ ಋಷಯೇಽದದಾತ್ । ದತ್ತವತೀ । ಯಾ ಸರಸ್ವತೀ ಶಶ್ವಂತಂ ಬಹುಲಂ ಪಣಿಂ ಪಣನಶೀಲಂ ವಣಿಜಮದಾತೃಜನಮವಸಂ ಕೇವಲಂ ಸ್ವಾತ್ಮನ ಏವ ತರ್ಪಕಮಾಚಖಾದ ಆಜಘಾನ ಸೇಯಮದದಾದಿತ್ಯನ್ವಯಃ । ಅಥ ಪ್ರತ್ಯಕ್ಷೀಕೃತ್ಯ ಸ್ತೌತಿ । ಹೇ ಸರಸ್ವತಿ ದೇವಿ ತಾ ತಾನಿ ಪುತ್ರದಾನಾದೀನಿ ತೇ ತ್ವದೀಯಾನಿ ದಾತ್ರಾಣಿ ದಾನಾನಿ ತವಿಷಾ ತವಿಷಾಣಿ ಮಹಾಂತಿ ಭವಂತಿ ॥

॥ ಪ್ರತಿಪದಾರ್ಥ ॥

**ಯಾ**—ಯಾವ ಸರಸ್ವತೀ ದೇವಿಯು | **ಶಶ್ವಂತಂ**—ಬಹಳವಾಗಿ | **ಅವಸಂ**—ಸ್ವಹಿತವನ್ನೇ ಯೋಚಿಸುತ್ತಿದ್ದವನೂ | **ಪಣಿಂ**—ಲೋಭಿಯೂ ಆದ ಅಸುರನನ್ನು | **ಆಚಖಾದ**—ಕೊಂದಳೋ ಅಂತಹ | **ಇಯಂ**—ಈ ಸರಸ್ವತೀ ದೇವಿಯು | **ರಭಸಂ**—ವೇಗಶಾಲಿಯೂ | **ಋಣಚ್ಯುತಂ**—ದೇವರ್ಷಿಪಿತೃಗಳ ಋಣಗಳನ್ನು ತೀರಿಸುವವನೂ ಆದ | **ದಿವೋದಾಸಂ**—ದಿವೋದಾಸನೆಂಬ ಪುತ್ರನನ್ನು | **ದಾಶುಷೇ**—ಹವಿಸ್ಸನ್ನರ್ಪಿಸುವ | **ವಧ್ರ್ಯಶ್ವಾಯ**—ವಧ್ರ್ಯಶ್ವನೆಂಬ ಋಷಿಗೆ | **ಅದದಾತ್**—ಕೊಟ್ಟಿದ್ದಾಳೆ | **ಸರಸ್ವತಿ**—ಎಲೈ ಸರಸ್ವತೀದೇವಿಯೇ | **ತಾ**—ನಿನ್ನಿಂದ ಕೊಡಲ್ಪಟ್ಟ ಪುತ್ರದಾನವೂ | **ತೇ**—ನಿನ್ನಿಂದ ಅನುಗೃಹೀತವಾದ | **ದಾತ್ರಾಣಿ**—ಧನದಾನಾದಿಗಳೂ | **ತವಿಷಾ**—ಮಹತ್ಫಲವುಳ್ಳವಾಗಿರುತ್ತವೆ.

॥ ಭಾವಾರ್ಥ ॥

ಅನೇಕವಾಗಿ ತನ್ನ ಹಿತವನ್ನೇ ಯೋಚಿಸುತ್ತಾ ಸ್ವಾರ್ಥಿಯಾಗಿದ್ದವನೂ ಅತ್ಯಂತ ಲೋಭಿಯೂ ಆದ ಅಸುರನನ್ನು ಯಾವ ಸರಸ್ವತಿಯು ನಾಶಮಾಡಿದಳೋ, ಅದೇ ಸರಸ್ವತಿಯು ವೇಗಶಾಲಿಯೂ, ದೇವಪಿತೃಗಳ ಋಣವನ್ನು ತೀರಿಸುವವನೂ ಆದ ದಿವೋದಾಸನೆಂಬ ಪುತ್ರನನ್ನು ಹವಿಸ್ಸನ್ನರ್ಪಿಸತಕ್ಕ ವಧ್ರ್ಯಶ್ವನೆಂಬ ಋಷಿಗೆ ಕೊಟ್ಟಿದ್ದಾಳೆ. ಎಲೈ ಸರಸ್ವತಿಯೇ, ನಿನ್ನಿಂದ ಅನುಗೃಹೀತವಾಗುವ ಪುತ್ರದಾನವೂ ಧನದಾನವೂ ಸಹ ಮಹತ್ಫಲಗಳುಳ್ಳವಾಗಿವೆ.

English Translation.

She gave to the donor of the oblations, Vadhryaswa, a son, Divodasa endowed with speed, and acquitting the debt (due to gods and progenitors); she who destroyed the churlish niggard, (thinking) only of himself : such are your great bounties, Saraswati.

॥ ಸಂಹಿತಾಪಾಠಃ ॥

ಇಯಂ ಶುಷ್ಮೇಭಿರ್ಬಿಸಖಾ ಇವಾರುಜತ್ಸಾನು ಗಿರೀಣಾಂ ತವಿಷೇಭಿರೂರ್ಮಿಭಿಃ ।
ಪಾರಾವತಘ್ನೀಮವಸೇ ಸುವೃಕ್ತಿಭಿಃ ಸರಸ್ವತೀಮಾ ವಿವಾಸೇಮ ಧೀತಿಭಿಃ ॥

॥ ಪದಪಾಠಃ ॥

ಇಯಂ । ಶುಷ್ಮೇಭಿಃ । ಬಿಸಖಾಃಽಇವ । ಅರುಜತ್ । ಸಾನು । ಗಿರೀಣಾಂ । ತವಿಷೇಭಿಃ । ಊರ್ಮಿಽಭಿಃ ।
ಪಾರಾವತಽಘ್ನೀಂ । ಅವಸೇ । ಸುವೃಕ್ತಿಽಭಿಃ । ಸರಸ್ವತೀಂ । ಆ । ವಿವಾಸೇಮ । ಧೀತಿಽಭಿಃ ॥ ೨ ॥

॥ ಸಾಯಣಭಾಷ್ಯಂ ॥

**ಸರಸ್ವತೀ ದೇವತಾರೂಪೇಣ ನದೀರೂಪೇಣ ಚ ವರ್ತತೇ । ದೇವತಾರೂಪಾ ಸ್ತುತಾ । ಅಧುನಾನಯಾ ನದೀರೂಪಾಂ ಸರಸ್ವತೀಂ ಸ್ತೌತಿ । ಇಯಂ ನದೀರೂಪಾ ಸರಸ್ವತೀ ಶುಷ್ಮೇಭಿಃ ಶೋಷಕೈರಾತ್ಮೀಯೈರ್ಬಲೈಸ್ತವಿಷೇಭಿರ್ಮಹದ್ಭಿರೂರ್ಮಿಭಿಸ್ತರಂಗೈರ್ಗಿರೀಣಾಂ ಪರ್ವತಾನಾಂ ತೀರ-ಸಂಬದ್ಧಾನಾಂ ಸಾನು ಸಾನೂನ್ಯರುಜತ್ । ಭನಕ್ತಿ । ಬಿಸಖಾ ಇವ । ಬಿಸಂ ಖನತೀತಿ ಬಿಸಖಾಃ । ಸ ಯಥಾ ಬಿಸಾರ್ಥಂ ಪಂಕಂ ರುಜತಿ ತದ್ವತ್। ತಾಂ ಸರಸ್ವತೀಂ ಪಾರಾವತಘ್ನೀಂ ಪರಾವತಿ ದೂರದೇಶೇ ವಿದ್ಯಮಾನಸ್ಯಾಪಿ ವೃಕ್ಷಾದೇರ್ಹಂತ್ರೀಂ ಸುವೃಕ್ತಿಭಿಃ ಸ್ತುತಿಭಿರ್ಧೀತಿಭಿಃ ಕರ್ಮಭಿಶ್ಚಾವಸೇ ರಕ್ಷಣಾರ್ಥಮಾವಿವಾಸೇಮ । ಪರಿಚರೇಮ । ಯದ್ವಾ । ಪಾರಾವತಘ್ನೀಂ ಪಾರಾವಾರೇ ಪಾರಾರ್ವಾಚೀ ತೀರೇ। ತಯೋರ್ಘಾತಿನೀಂ । ಉಕ್ತಂ ಚ । ಪಾರಾವತಘ್ನೀಂ ಪಾರಾವಾರಘಾತಿನೀಂ । ನಿ. ೨-೨೪ । ಇತಿ ॥**

॥ ಪ್ರತಿಪದಾರ್ಥ ॥

**ಇಯಂ**—ನದೀರೂಪಳಾದ ಈ ಸರಸ್ವತೀದೇವಿಯು । **ಬಿಸಖಾ ಇವ**—ತಾವರೆ ದಂಟಿಗಾಗಿ ಪಂಕವನ್ನು ಕೊರೆಯುವಂತೆ ಸುಲಭವಾಗಿ । **ಶುಷ್ಮೇಭಿಃ**—ಶಕ್ತಿಯುತವಾದವೂ । **ತವಿಷೇಭಿಃ**—ಮಹತ್ತಾದವೂ ಆದ । **ಊರ್ಮಿಭಿಃ**—ತನ್ನ ಅಲೆಗಳಿಂದ । **ಗಿರೀಣಾಂ**— ಪರ್ವತಗಳ । **ಸಾನು**— ಉನ್ನತಪ್ರದೇಶಗಳನ್ನು । **ಅರುಜತ್**—ಭೇದಿಸುತ್ತಾಳೆ । **ಪಾರಾವತಘ್ನೀಂ**—ದೂರ ದೇಶದಲ್ಲಿರುವ ವೃಕ್ಷಾದಿಗಳನ್ನೂ (ಅಥವಾ ದಡಗಳನ್ನು) ಕೆಳಗುರುಳಿಸತಕ್ಕ । **ಸರಸ್ವತೀಂ**—ಈ ಸರಸ್ವತೀದೇವಿಯನ್ನು । **ಸುವೃಕ್ತಿಭಿಃ**— ಉತ್ತಮವಾದ ಸ್ತುತಿಗಳಿಂದಲೂ । **ಧೀತಿಭಿಃ**—ಉತ್ತಮವಾದ ಕರ್ಮಗಳಿಂದಲೂ । **ಅವಸೇ**—ರಕ್ಷಣಾರ್ಥವಾಗಿ । **ಆ ವಿವಾಸೇಮ**—ಪೂಜಿಸೋಣ.

॥ ಭಾವಾರ್ಥ ॥

ನದೀರೂಪಳಾದ ಈ ಸರಸ್ವತೀದೇವಿಯು ತಾವರೆ ದಂಟಿಗಾಗಿ ಪಂಕವನ್ನು ಕೊರೆಯುವಂತೆ ತನ್ನ ಶಕ್ತಿಯುತವಾದವೂ, ಮಹತ್ತಾದವೂ ಆದ ಅಲೆಗಳಿಂದ ಪರ್ವತಗಳ ಉನ್ನತಪ್ರದೇಶಗಳನ್ನು ಸುಲಭವಾಗಿ ಭೇದಿಸುತ್ತಾಳೆ. ದೂರ ದೇಶದಲ್ಲಿರುವ ವೃಕ್ಷಾದಿಗಳನ್ನೂ ದಡಗಳನ್ನೂ ಕೆಳಗುರುಳಿಸತಕ್ಕ ಈ ಸರಸ್ವತೀದೇವಿಯನ್ನು ಉತ್ತಮವಾದ ಸ್ತುತಿಗಳಿಂದಲೂ ಉತ್ತಮವಾದ ಕರ್ಮಗಳಿಂದಲೂ ರಕ್ಷಣಾರ್ಥವಾಗಿ ಪೂಜಿಸೋಣ.

## English Translation.

With impetuous and mighty waves she breaks down the precipices of the mountains, like a digger for the lotus fibres : we adore for our protection, with praises and with sacred rites, Saraswati the underminer of both her banks.

॥ ವಿಶೇಷವಿಷಯಗಳು ॥

ಈ ಋಕ್ಕಿಗೆ ಯಾಸ್ಕರು ನಿರ್ವಚನವನ್ನು ಹೇಳಿದ್ದಾರೆ—

**ಇಯಂ ಶುಷ್ಮೇಭಿಃ ಶೋಷಣೈಃ । ಶುಷ್ಮಮಿತಿ ಬಲನಾಮ ಶೋಷಯತೀತಿ ಸತಃ । ಬಿಸಂ ಬಿಸ್ಯ-**
**ತೇರ್ಭೇದನಕರ್ಮಣೋ ವೃದ್ಧಿಕರ್ಮಣೋ ವಾ । ಸಾನು ಸಮುಚ್ಛ್ರಿತಂ ಭವತಿ ಸಮುನ್ನು-**

**ನ್ನಮಿತಿ ವಾ । ಮಹದ್ಭಿರೂರ್ಮಿಭಿಃ ಪಾರಾವತಘ್ನೀಂ ಪಾರಾವಾರಘಾತಿನೀಂ । ಪಾರಂ ಪರಂ ಭವತಿ । ಅವಾರಮವರಂ । ಅವನಾಯ ಸುಪ್ರವೃತ್ತಾಭಿಃ ಶೋಭನಾಭಿಃ ಸ್ತುತಿಭಿಃ ಸರಸ್ವತೀಂ ನದೀಂ ಕರ್ಮಭಿಃ ಪರಿಚರೇಮ ॥** (ನಿ. ೨-೨೪)

**ಶುಷ್ಮ**ವೆಂದರೆ ಬಲವೆಂದರ್ಥವು. ಏಕೆಂದರೆ ಅದುಮು ಎಂಬರ್ಥವುಳ್ಳ **ಶೋಷಯತಿ** ಧಾತುವಿನಿಂದ ಶುಷ್ಮ ಶಬ್ದವು ನಿಷ್ಪನ್ನವಾಗಿ ಎಲ್ಲವನ್ನೂ ತನ್ನ ಬಲದಿಂದ ಅದುಮುವುದರಿಂದ ಶುಷ್ಮ ಶಬ್ದಕ್ಕೆ ಬಲವೆಂಬ ಅರ್ಥವು ರೂಢಿಯಾಗಿದೆ. **ಬಿಸಂ** ಎಂದರೆ ತಾವರೆದಂಟು. ಈ ಶಬ್ದವು ಕತ್ತರಿಸು, ತುಂಡುಮಾಡು ಅಥವಾ ವೃದ್ಧಿಯಾಗು ಎಂಬರ್ಥವಿರುವ **ಬಿಸ್ಯತಿ** ಧಾತುವಿನಿಂದ ನಿಷ್ಪನ್ನವಾಗಿದೆ. ಸಾನು ಎಂಬ ಶಬ್ದಕ್ಕೆ ಎತ್ತರವಾದ ಪ್ರದೇಶವು ಅಥವಾ ಉನ್ನತವಾದ ಪ್ರದೇಶವು, ಶಿಖರವು ಎಂದರ್ಥವು. ಈ ಸರಸ್ವತೀನದಿಯು ತನ್ನ ಬೃಹದಾಕಾರವುಳ್ಳ ಎಂದರೆ ದೊಡ್ಡದಾದ ಅಲೆಗಳಿಂದ ಮೃದುವಾದ ತಾವರೆ ದಂಟನ್ನು ಸುಲಭವಾಗಿ ಕತ್ತರಿಸುವಂತೆ ತನ್ನ ಎರಡು ದಡಗಳನ್ನೂ ಕೊಚ್ಚಿ ನಾಶ ಮಾಡುತ್ತಾಳೆ. ಎಂದರೆ ನದಿಯ ಪ್ರವಾಹದಿಂದ ಎರಡು ದಡಗಳು ಕುಸಿದುಬಿದ್ದು ನದಿಯ ನೀರನಲ್ಲಿ ಸೇರಿಹೋಗುತ್ತವೆ. **ಪಾರಂ** ಎಂದರೆ ಬೇರೆಯಾದುದು (ಪರಂ) ಅಥವಾ ದೂರದಲ್ಲಿರುವುದು. ಅವರಂ ಎಂದರೆ ಹತ್ತಿರವಿರುವುದು. ಪಾರಾವಾರಂ ಎಂದರೆ ದೂರದಲ್ಲಿರುವ (ಎದುರಾಗಿರುವ) ಮತ್ತು ಹತ್ತಿರದಲ್ಲಿರುವ ಎರಡು ದಡಗಳು ಎಂದರ್ಥವು. ಇಂತಹ ಎರಡು ದಡಗಳ ಮಧ್ಯದಲ್ಲಿ ಹರಿಯುತ್ತಿರುವ ಸರಸ್ವತೀನದಿಯನ್ನು, ನಮ್ಮ ರಕ್ಷಣೆಗಾಗಿ ಉತ್ತಮವಾಗಿ ನಿರ್ಮಿಸಲ್ಪಟ್ಟು, ಸ್ಪಷ್ಟವಾಗಿಯೂ ಸ್ವರಸಹಿತವಾಗಿಯೂ ಪಠಿಸಲ್ಪಡುವ ಸ್ತುತಿಗಳಿಂದ ಅಥವಾ ಶ್ರೇಷ್ಠವಾಗಿ ಆಚರಿಸಲ್ಪಡುವ ಪೂಜಾದಿಕರ್ಮಗಳಿಂದ ಸೇವೆಮಾಡೋಣ ಎಂದು ನಿರ್ವಚನದ ಮುಖ್ಯಾಭಿಪ್ರಾಯವು.

॥ ಸಂಹಿತಾಪಾಠಃ ॥

ಸರಸ್ವತಿ ದೇವನಿದೋ ನಿ ಬರ್ಹಯ ಪ್ರಜಾಂ ವಿಶ್ವಸ್ಯ ಬೃಸಯಸ್ಯ ಮಾಯಿನಃ ।
ಉತ ಕ್ಷಿತಿಭ್ಯೋಽವನೀರವಿಂದೋ ವಿಷಮೇಭ್ಯೋ ಅಸ್ರವೋ ವಾಜಿನೀವತಿ ॥

॥ ಪದಪಾಠಃ ॥

ಸರಸ್ವತಿ । ದೇವಽನಿದಃ । ಬರ್ಹಯ । ಪ್ರಽಜಾಂ । ವಿಶ್ವಸ್ಯ । ಬೃಸಯಸ್ಯ । ಮಾಯಿನಃ ।
ಉತ । ಕ್ಷಿತಿಽಭ್ಯಃ । ಅವನೀಃ । ಅವಿಂದಃ । ವಿಷಂ । ಏಭ್ಯಃ । ಅಸ್ರವಃ । ವಾಜಿನೀಽವತಿ ॥ ೩ ॥

**ಹೇ ಸರಸ್ವತಿ ದೇವನಿದೋ ದೇವಾನಾಂ ನಿಂದಕಾನಸುರಾನ್ನಿ ಬರ್ಹಯ । ನ್ಯಬರ್ಹಯಃ । ಅವಧೀಃ । ತಥಾ ವಿಶ್ವಸ್ಯ ವ್ಯಾಪ್ತಸ್ಯ ಮಾಯಿನೋ ಮಾಯಾವಿನೋ ಬೃಸಯಸ್ಯ । ಬೃಸಯ ಇತಿ ತ್ವಷ್ಟುರ್ನಾಮಧೇಯಂ । ತ್ವಷ್ಟುಃ ಪ್ರಜಾಂ ಪುತ್ರಂ ವೃತ್ರಾಸುರಂ ಚ ನ್ಯವಧೀಃ । ತ್ವತ್ಸಹಾಯ್ಯಾ-ದೇವೇಂದ್ರೋ ಹತವಾನಿತ್ಯರ್ಥಃ । ಉತಾಪಿ ಚ ಹೇ ವಾಜಿನೀವತಿ ಅನ್ನವತಿ ಸರಸ್ವತಿ ತ್ವಂ ಕ್ಷಿತಿಭ್ಯೋ**

ಮನುಷ್ಯೇಭ್ಯೋಽವನೀರಸುರೈರಪಹೃತಾ ಭೂಮೀರವಿಂದಃ । ಅಲಂಭಯಃ । ಏಭ್ಯೋ ಮನುಷ್ಯೇಭ್ಯೋ ವಿಷಮುದಕಂ ಚಾಸ್ರವಃ । ಅಕ್ಷಾರಯಃ । ಯದ್ವಾ । ಕ್ಷಿತಯೋಽಸುರಜನಾಃ । ತೇಭ್ಯಃ ಸಕಾಶಾದವನೀರ್ಭೂರ್ಮೀರವಿಂದಃ । ಲಬ್ಧವಾನಸಿ । ತಾನ್ ಹತ್ವೈಭ್ಯಶ್ಚಾಸುರೇಭ್ಯೋ ವಿಷಂ ಮೃತಿಹೇತುಭೂತಂ ಗರಲಮಸ್ರವಃ ॥

॥ ಪ್ರತಿಪದಾರ್ಥ ॥

**ಸರಸ್ವತಿ**—ಎಲೈ ಸರಸ್ವತೀದೇವಿಯೇ । **ದೇವನಿದಃ**—ದೇವನಿಂದಕರಾದ ಅಸುರರನ್ನು । **ನಿ ಬರ್ಹಯಃ**—ನಾಶಮಾಡಿರುವೆ । **ವಿಶ್ವಸ್ಯ**—ಸರ್ವವ್ಯಾಪಕನೂ । **ಮಾಯಿನಃ**—ಶಕ್ತಿಯುತನೂ ಆದ । **ಬೃಸಯಸ್ಯ**—ತ್ವಷ್ಟೃವಿನ । **ಪ್ರಜಾಂ**—ಪುತ್ರನಾದ ವೃತ್ರನನ್ನೂ ಕೊಂದಿದ್ದೀಯೆ । **ಉತ**—ಮತ್ತು । **ವಾಜಿನೀವತಿ**—ಅನ್ನಯುಕ್ತಳಾದ ಎಲೈ ಸರಸ್ವತಿಯೇ । **ಕ್ಷಿತಿಭ್ಯಃ**—ಮಾನವರಿಗೆ । **ಅವನೀಃ**—ಅಸುರರಿಂದ ಅಪಹೃತವಾದ ಭೂಮಿಗಳನ್ನು । **ಅವಿಂದಃ**—ಪುನಃ ಒದಗಿಸಿದೆ । **ಏಭ್ಯಃ**—ಈ ಮಾನವರಿಗಾಗಿ । **ವಿಷಂ**—ಉದಕವನ್ನೂ । **ಅಸ್ರವಃ**—ಹರಿಯುವಂತೆ ಮಾಡಿದೆ.

॥ ಭಾವಾರ್ಥ ॥

ಎಲೈ ಸರಸ್ವತೀದೇವಿಯೇ. ನೀನು ದೇವನಿಂದಕರಾದ ಅಸುರರನ್ನು ನಾಶಪಡಿಸಿರುವೆ. ಸರ್ವವ್ಯಾಪಕನೂ ಶಕ್ತಿಯುತನೂ ಆದ ತ್ವಷ್ಟೃವಿನ ಪುತ್ರನಾದ ವೃತ್ರನನ್ನೂ ಕೊಂದಿದ್ದೀಯೆ, ಮತ್ತು ಅನ್ನಯುಕ್ತಳಾದ ಎಲೈ ಸರಸ್ವತಿಯೇ, ಮಾನವರಿಗೆ ಅಸುರರಿಂದ ಅಪಹೃತವಾದ ಭೂಮಿಗಳನ್ನು ಪುನಃ ಒದಗಿಸಿಕೊಟ್ಟಿರುವೆ. ಈ ಮಾನವರಿಗಾಗಿಯೇ, ಉದಕವನ್ನೂ ಪ್ರವಹಿಸುವಂತೆ ಮಾಡಿದೆ.

English Translation.

Destory, Saraswati the revilers of the gods, the offspring of the universal deluder, Vrisaya : giver of sustenance, you have acquired for men the lands (seized by the Asuras), and have showered water upon them.

॥ ಸಂಹಿತಾಪಾಠಃ ॥

ಪ್ರ ಣೋ ದೇವೀ ಸರಸ್ವತೀ ವಾಜೇಭಿರ್ವಾಜಿನೀವತೀ ।
ಧೀನಾಮವಿತ್ರ್ಯವತು ॥ ೪ ॥

॥ ಪದಪಾಠಃ ॥

ಪ್ರ । ನಃ । ದೇವೀ । ಸರಸ್ವತೀ । ವಾಜೇಭಿಃ । ವಾಜಿನೀಽವತೀ ।
ಧೀನಾಂ । ಅವಿತ್ರೀ । ಅವತು ॥ ೪ ॥

॥ ಸಾಯಣಭಾಷ್ಯಂ ॥

ದೇವೀ ದಾನಾದಿಗುಣಯುಕ್ತಾ ವಾಜಿನೀವತೀ । ವಾಜೋಽನ್ನಂ ಯಸ್ಯಾಂ ಕ್ರಿಯಾಯಾಂ ಸಾ ವಾಜಿನೀ । ತದ್ಯುಕ್ತಾ । ಧೀನಾಂ ಧ್ಯಾತ್ರೀಣಾಂ ಸ್ತೋತ್ರೀಣಾಮವಿತ್ರೀ ರಕ್ಷಿತ್ರೀ । ಏವಂಭೂತಾ ಸರಸ್ವತೀ ವಾಜೇಭಿರನ್ನೈರ್ನೋಽಸ್ಮಾನ್ಪ್ರಾವತು । ಪ್ರಕರ್ಷೇಣ ತರ್ಪಯತು ॥

॥ ಪ್ರತಿಪದಾರ್ಥ ॥

ದೇವೀ—ದೇವತಾತ್ಮಳೂ । ವಾಜಿನೀವತೀ—ಅನ್ನಯುಕ್ತಳೂ । ಧೀನಾಂ—ಸ್ತುತಿಕರ್ತರಿಗೆ । ಅವಿತ್ರೀ—ರಕ್ಷಕಳೂ ಆದ । ಸರಸ್ವತೀ—ಸರಸ್ವತಿಯು । ವಾಜೇಭಿಃ—ಅನ್ನಗಳಿಂದ । ನಃ—ನಮ್ಮನ್ನು । ಪ್ರ ಅವತು—ಪೂರ್ಣವಾಗಿ ರಕ್ಷಿಸಲಿ ಅಥವಾ ತೃಪ್ತಿಗೊಳಿಸಲಿ.

॥ ಭಾವಾರ್ಥ ॥

ದೇವತಾತ್ಮಳೂ, ಅನ್ನಯುಕ್ತಳೂ, ಸ್ತುತಿಕರ್ತರಿಗೆ ರಕ್ಷಕಳೂ ಆದ ಸರಸ್ವತಿಯು ಅನ್ನಗಳಿಂದ ನಮ್ಮನ್ನು ರಕ್ಷಿಸಿ:ಪೂರ್ಣವಾಗಿ ತೃಪ್ತಿಗೊಳಿಸಲಿ.

English Translation.

May the divine Saraswati, the acceptress of (sacrifiicial) food. the protectress of her worshippers, sustain as with (abundant) viands.

॥ ಸಂಹಿತಾಪಾಠಃ ॥

ಯಸ್ತ್ವಾ ದೇವಿ ಸರಸ್ವತ್ಯುಪಬ್ರೂತೇ ಧನೇ ಹಿತೇ ।
ಇಂದ್ರಂ ನ ವೃತ್ರತೂರ್ಯೇ ॥ ೫ ॥

॥ ಪದಪಾಠಃ ॥

ಯಃ । ತ್ವಾ । ದೇವಿ । ಸರಸ್ವತಿ । ಉಪಽಬ್ರೂತೇ । ಧನೇ । ಹಿತೇ ।
ಇಂದ್ರಂ । ನ । ವೃತ್ರಽತೂರ್ಯೇ ॥ ೫ ॥

॥ ಸಾಯಣಭಾಷ್ಯಂ ॥

ಹೇ ದೇವಿ ಸರಸ್ವತಿ ಯಃ ಸ್ತೋತಾ ವೃತ್ರತೂರ್ಯೇ ಸಂಗ್ರಾಮೇ ಧನೇ ಹಿತೇ ನಿಹಿತೇ ನಿಮಿತ್ತಭೂತೇ ಸತೀಂದ್ರಂ ನ ಇಂದ್ರಮಿವ ತ್ವಾಮುಪಬ್ರೂತೇ ಸ್ತೌತಿ ತಂ ರಕ್ಷೇತಿ ಶೇಷಃ ॥

॥ ಪ್ರತಿಪದಾರ್ಥ ॥

ದೇವಿ—ದೇವತಾತ್ಮಳಾದ । ಸರಸ್ವತಿ—ಎಲೈ ಸರಸ್ವತಿಯೇ । ಯಃ—ಯಾವ ಸ್ತುತಿಕರ್ತನು । ವೃತ್ರತೂರ್ಯೇ—ಸಂಗ್ರಾಮದಲ್ಲಿ । ಧನೇ ಹಿತೇ—ಧನನಿಮಿತ್ತವಾಗಿ । ಇಂದ್ರಂ ನ—ಇಂದ್ರನನ್ನು ಸ್ತುತಿಸುವಂತೆ । ತ್ವಾ ಉಪಬ್ರೂತೇ—ನಿನ್ನನ್ನು ಸ್ತುತಿಸುವನೋ (ಅಂತಹ ಸ್ತುತಿಕರ್ತನನ್ನು ರಕ್ಷಿಸು).

॥ ಭಾವಾರ್ಥ ॥

ದೇವತಾತ್ಮಳಾದ ಎಲೈ ಸರಸ್ವತಿಯೇ, ಯಾವ ಸ್ತುತಿಕರ್ತನು ಸಂಗ್ರಾಮದಲ್ಲಿ ಧನ ನಿಮಿತ್ತವಾಗಿ ಇಂದ್ರನನ್ನು ಸ್ತುತಿಸುವಂತೆಯೇ ನಿನ್ನನ್ನು ಸ್ತುತಿಸುವನೋ ಅಂತಹ ಸ್ತುತಿಕರ್ತನನ್ನು ರಕ್ಷಿಸು.

English Translation.

Divine Saraswati, protect him engaged in conflict for the sake of wealth, who glorifies you like Indra.

॥ ಸಂಹಿತಾಪಾಠಃ ॥

ತ್ವಂ ದೇವಿ ಸರಸ್ವತ್ಯವಾ ವಾಜೇಷು ವಾಜಿನಿ ।

ರದಾ ಪೂಷೇವ ನಃ ಸನಿಂ ॥ ೬ ॥

॥ ಪದಪಾಠಃ ॥

ತ್ವಂ । ದೇವಿ । ಸರಸ್ವತಿ । ಅವ । ವಾಜೇಷು । ವಾಜಿನಿ ।

ರದ । ಪೂಷಾऽಇವ । ನಃ । ಸನಿಂ ॥ ೬ ॥

॥ ಸಾಯಣಭಾಷ್ಯಂ ॥

**ಹೇ ದೇವಿ ದಾನಾದಿಗುಣಯುಕ್ತೇ ಹೇ ವಾಜಿನಿ । ವಾಜೋ ಬಲಮನ್ನಂ ವಾ । ತದ್ಯುಕ್ತೇ । ಹೇ ಸರಸ್ವತಿ ತ್ವಂ ವಾಜೇಷು ಸಂಗ್ರಾಮೇಷ್ವವ । ಅಸ್ಮಾನ್ರಕ್ಷ । ಅಪಿ ಚ ನೋऽಸ್ಮಭ್ಯಂ ಪೂಷೇವ ಪೋಷಕೋ ದೇವ ಇವ ಸನಿಂ ಸಂಭಜನೀಯಂ ಧನಂ ರದ । ವಿಲಿಖ । ಪ್ರಯಚ್ಛೇತಿ ಯಾವತ್ ॥**

॥ ಪ್ರತಿಪದಾರ್ಥ ॥

**ದೇವಿ**— ದಾನಾದಿಗುಣಯುಕ್ತಳಾದವಳೂ । **ವಾಜಿನಿ**—ಶಕ್ತಿಯುತಳೂ ಆದ । **ಸರಸ್ವತಿ**—ಎಲೈ ಸರಸ್ವತಿಯೇ । **ತ್ವಂ**—ನೀನು । **ವಾಜೇಷು**—ಸಂಗ್ರಾಮಗಳಲ್ಲಿ । **ಅವ**—ನಮ್ಮನ್ನು ರಕ್ಷಿಸು । **ನಃ**—ನಮಗೆ । **ಪೂಷೇವ**—ಪೋಷಕನಾದ ಪೂಷದೇವನಂತೆ । **ಸನಿಂ**— ಭೋಗಯೋಗ್ಯವಾದ ಧನವನ್ನು । **ರದ**— ಕೊಡು.

॥ ಭಾವಾರ್ಥ ॥

ದಾನಾದಿಗುಣಯುಕ್ತಳೂ, ಶಕ್ತಿಯುತಳೂ ಆದ ಎಲೈ ಸರಸ್ವತಿಯೇ, ನೀನು ಸಂಗ್ರಾಮಗಳಲ್ಲಿ ನಮ್ಮನ್ನು ರಕ್ಷಿಸು. ನಮಗೆ ಪೋಷಕನಾದ ಪೂಷದೇವನಂತೆ ಭೋಗಯೋಗ್ಯವಾದ ಧನವನ್ನು ಒದಗಿಸಿಕೊಡು.

English Translation.

Divine Saraswati, abounding in food, protect us in combat, and, like Pushan, give us gifts.

|| ಸಂಹಿತಾಪಾಠಃ ||

ಉತ ಸ್ಯಾ ನಃ ಸರಸ್ವತೀ ಘೋರಾ ಹಿರಣ್ಯವರ್ತನಿಃ ।
ವೃತ್ರಘ್ನೀ ವಷ್ಟಿ ಸುಷ್ಟುತಿಂ || ೭ ||

|| ಪದಪಾಠಃ ||

ಉತ । ಸ್ಯಾ । ನಃ । ಸರಸ್ವತೀ । ಘೋರಾ । ಹಿರಣ್ಯऽವರ್ತನಿಃ ।
ವೃತ್ರऽಘ್ನೀ । ವಷ್ಟಿ । ಸುऽಸ್ತುತಿಂ || ೭ ||

|| ಸಾಯಣಭಾಷ್ಯಂ ||

ಉತಾಪಿ ಚ ಸ್ಯಾ ಸಾ ಪ್ರಸಿದ್ಧಾ ಸರಸ್ವತೀ ಘೋರಾ ಶತ್ರೂಣಾಂ ಭಯಕಾರಿಣೀ ಹಿರಣ್ಯವರ್ತನಿಃ । ವರ್ತತೇऽನೇನೇತಿ ವರ್ತನೀ ರಥಃ । ಹಿರಣ್ಯಮಯೋ ವರ್ತನಿರ್ಯಸ್ಯಾಃ ಸಾ ತಥೋಕ್ತಾ । ವೃತ್ರಘ್ನೀ ವೃತ್ರಾಣಾಂ ಶತ್ರೂಣಾಂ ಹಂತ್ರೀ । ಏವಂಭೂತಾ ಸಾ ಸರಸ್ವತೀ ನೋऽಸ್ಮದೀಯಾಂ ಸುಷ್ಟುತಿಂ ಶೋಭನಾಂ ಸ್ತುತಿಂ ವಷ್ಟಿ । ಕಾಮಯತಾಂ ||

|| ಪ್ರತಿಪದಾರ್ಥ ||

**ಉತ**—ಮತ್ತು । **ಸ್ಯಾ**—ಪ್ರಸಿದ್ಧಳೂ । **ಘೋರಾ**—ಶತ್ರುಗಳಿಗೆ ಭಯಂಕರಳೂ । **ಹಿರಣ್ಯವರ್ತನಿಃ**—ಸುವರ್ಣನಿರ್ಮಿತವಾದ ರಥವುಳ್ಳವಳೂ । **ವೃತ್ರಘ್ನೀ**—ಶತ್ರುನಾಶಕಳೂ ಆದ । **ಸರಸ್ವತೀ**—ಸರಸ್ವತೀದೇವಿಯು । **ನಃ**—ನಮ್ಮ । **ಸುಷ್ಟುತಿಂ**—ಉತ್ತಮವಾದ ಸ್ತುತಿಯನ್ನು । **ವಷ್ಟಿ**—ಅಪೇಕ್ಷಿಸಲಿ.

|| ಭಾವಾರ್ಥ ||

ಪ್ರಸಿದ್ಧಳೂ, ಶತ್ರುಗಳಿಗೆ ಭಯಂಕರಳೂ, ಸುವರ್ಣನಿರ್ಮಿತವಾದ ರಥವುಳ್ಳವಳೂ, ಶತ್ರುನಾಶಕಳೂ ಆದ ಸರಸ್ವತೀದೇವಿಯು ನಮ್ಮ ಉತ್ತಮವಾದ ಸ್ತುತಿಯನ್ನು ಅಪೇಕ್ಷಿಸಲಿ.

## English Translation.

May the fierce Saraswati, ridiing in a golden chariot, the destructress of enemies, be pleased by our earnest laudation.

|| ಸಂಹಿತಾಪಾಠಃ ||

ಯಸ್ಯಾ ಅನಂತೋ ಅಹ್ರುತಸ್ತ್ವೇಷಶ್ಚರಿಷ್ಣುರರ್ಣವಃ ।
ಅಮಶ್ಚರತಿ ರೋರುವತ್ || ೮ ||

॥ ಪದಪಾಠಃ ॥

ಯಸ್ಯಾಃ । ಅನಂತಃ । ಅಹ್ರುತಃ । ತ್ವೇಷಃ । ಚರಿಷ್ಣುಃ । ಅರ್ಣವಃ ॥

ಅಮಃ । ಚರತಿ । ರೋರುವತ್ ॥ ೮ ॥

॥ ಸಾಯಣಭಾಷ್ಯಂ ॥

ಯಸ್ಯಾಃ ಸರಸ್ವತ್ಯಾ ಅಮೋ ಬಲಮನಂತೋऽಪರ್ಯಂತೋऽಪರಿಮಿತೋऽಹ್ರುತೋऽಹಿಂಸಿತೋऽಕುಟಿಲೋ ವಾ ತ್ವೇಷೋ ದೀಪ್ತಶ್ಚರಿಷ್ಣುಶ್ಚರಣಶೀಲಃ । ಸರ್ವತ್ರಾಪ್ರತಿಹತಗತಿರಿತ್ಯರ್ಥಃ । ಅರ್ಣವ ಉದಕವಾನ್ । ಉದಕಪ್ರದ ಇತ್ಯರ್ಥಃ । ಏವಂಭೂತಃ ಸನ್ ರೋರುವತ್ ಭೃಶಂ ಶಬ್ದಂ ಕುರ್ವನ್ ಚರತಿ ವರ್ತತೇ ಸಾ ನೋ ವಿಶ್ವಾ ಇತ್ಯುತ್ತರತ್ರ ಸಂಬಂಧಃ ॥

॥ ಪ್ರತಿಪದಾರ್ಥ ॥

**ಯಸ್ಯಾಃ**—ಯಾವ ಸರಸ್ವತಿಯ । **ಅಮಃ**—ಶಕ್ತಿಯು । **ಅನಂತಃ**—ಅಪರಿಮಿತವಾಗಿಯೂ । **ಅಹ್ರುತಃ**—ಶತ್ರುಗಳಿಂದ ಹಿಂಸಿಸಲ್ಪಡದೆಯೂ । **ತ್ವೇಷಃ**—ಕಾಂತಿಯುತವಾಗಿಯೂ । **ಚರಿಷ್ಣುಃ**—ಸರ್ವತ್ರ ಸಂಚರಿಸುವುದಾಗಿಯೂ । **ಅರ್ಣವಃ**—ಉದಕಯುಕ್ತವಾಗಿಯೂ ಇದ್ದು । **ರೋರುವತ್**— ಅಧಿಕವಾದ ಶಬ್ದ ಮಾಡುತ್ತಾ । **ಚರತಿ**—ಚಲಿಸುವುದೋ (ಆ ಬಲವು ನಮ್ಮನ್ನು ಶತ್ರುಗಳಿಂದ ರಕ್ಷಿಸಲಿ).

॥ ಭಾವಾರ್ಥ ॥

ಯಾವ ಸರಸ್ವತಿಯ ಶಕ್ತಿಯು ಅಪರಿಮಿತವಾಗಿಯೂ, ಶತ್ರುಗಳಿಂದ ಹಿಂಸಿಸಲ್ಪಡದೆಯೂ, ಕಾಂತಿಯುತವಾಗಿಯೂ, ಸರ್ವಗಾಮಿಗಳಾಗಿಯೂ, ಉದಕಭರಿತವಾಗಿಯೂ ಇದ್ದು ಅಧಿಕವಾಗಿ ಶಬ್ದಮಾಡುತ್ತಾ ಚಲಿಸುವುದೋ ಆ ಶಕ್ತಿಯು ನಮ್ಮನ್ನು ಶತ್ರುಗಳಿಂದ ರಕ್ಷಿಸಲಿ.

English Translation.

May she whose might, infinite, undeviating, splendid, progressive, water-shedding, proceed, loud-sounding.

॥ ಸಂಹಿತಾಪಾಠಃ ॥

ಸಾ ನೋ ವಿಶ್ವಾ ಅತಿ ದ್ವಿಷಃ ಸ್ವಸೄರನ್ಯಾ ಋತಾವರೀ ।

ಅತನ್ನಹೇವ ಸೂರ್ಯಃ ॥ ೯ ॥

॥ ಪದಪಾಠಃ ॥

ಸಾ । ನಃ । ವಿಶ್ವಾಃ । ಅತಿ । ದ್ವಿಷಃ । ಸ್ವಸೄಃ । ಅನ್ಯಾಃ । ಋತऽವರೀ ।

ಅತನ್ । ಅಹಾऽಇವ । ಸೂರ್ಯಃ ॥ ೯ ॥

॥ ಸಾಯಣಭಾಷ್ಯಂ ॥

ಸಾ ಸರಸ್ವತೀ ನೋಽಸ್ಮಾನ್ವಿಶ್ವಾಃ ಸರ್ವಾ ದ್ವಿಷೋ ದ್ವೇಷ್ಟ್ರೀಃ ಪ್ರಜಾ ಅತಿ ನಯೆತು । ಅತಿಕ್ರಾಮಯತು । ತಥಾ ಸ್ವಸ್ರಾಃ ಸ್ವಯಂಸಾರಿಣೀಃ ಸಹೋತ್ಪನ್ನಾ ವಾ ಋತಾವರೀಃ । ಋತಮಿತ್ಯುದಕ-ನಾಮ । ತದ್ಯುಕ್ತಾ ಅನ್ಯಾಶ್ಚ ನದೀರಸ್ಮಾನತಿ ನಯತು । ಯದ್ವಾ ॥ ಜಸ್ಯೇವ ವಾ ಛಂದಸೀತಿ ಪೂರ್ವ-ಸವರ್ಣದೀರ್ಘಃ ॥ ಉದಕವತ್ಯಃ ಸ್ವಸಾರೋ ಭಗಿನ್ಯೋಽನ್ಯಾ ಗಂಗಾದ್ಯಾ ನದ್ಯಶ್ಚಾಸ್ಮಾನ್ ಶತ್ರೂನತಿ ನಯಂತು । ತತ್ರ ದೃಷ್ಟಾಂತಃ । ಸೂರ್ಯಃ ಸರ್ವಸ್ಯ ಪ್ರೇರಕ ಆದಿತ್ಯೋಽತನ್ ಸತತಂ ಗಚ್ಛನ್ ಅಹೇವಾಹಾನೀವ । ಯಥಾಹಾನಿ ಶೀಘ್ರಮತಿನಯತಿ ತದ್ವತ್ ॥

॥ ಪ್ರತಿಪದಾರ್ಥ ॥

**ಸಾ**—ಮೇಲೆ ಹೇಳಿದ ಗುಣಗಳಿಂದ ಕೂಡಿದ ಸರಸ್ವತಿಯು । **ನಃ**—ನಮ್ಮನ್ನು । **ವಿಶ್ವಾ**—ಸಮಸ್ತವಾದ । **ದ್ವಿಷಃ**—ಶತ್ರುಪ್ರಜೆಗಳಿಂದಲೂ । **ಅತಿ ನಯತು**—ದಾಟಿಸಲಿ । **ಸ್ವಸ್ರಾಃ**—ಸ್ವಯಂ ಪ್ರವಹಿಸುವುವೂ (ಭಗಿನಿಯರು) । **ಋತಾವರೀಃ**—ಉದಕಯುಕ್ತವೂ ಆದ । **ಅನ್ಯಾಃ**—ಇತರ ನದೀದೇವತೆಗಳೂ । **ಸೂರ್ಯಃ**—ಸೂರ್ಯನೂ । **ಅತನ್**—ಸಂಚರಿಸುತ್ತಾ । **ಅಹೇವ**—ಅಹಸ್ಸನ್ನು ವೇಗವಾಗಿ ಕೊನೆಗಾಣಿಸುವಂತೆ । **ಅತಿ ನಯತು**—ಶತ್ರುಗಳನ್ನು ಕೊನೆಗಾಣಿಸಲಿ.

॥ ಭಾವಾರ್ಥ ॥

ಮೇಲೆ ಹೇಳಿದ ಗುಣಗಳಿಂದ ಕೂಡಿದ ಸರಸ್ವತಿಯು ನಮ್ಮನ್ನು ಸಮಸ್ತವಾದ ಶತ್ರುಪ್ರಜೆಗಳಿಂದಲೂ ದಾಟಿಸಲಿ. ಸೂರ್ಯನು ವೇಗವಾಗಿ ಸಂಚರಿಸುತ್ತಾ ಅಹಸ್ಸನ್ನು ವೇಗವಾಗಿ ಕೊನೆಗಾಣಿಸುವಂತೆ, ಸ್ವಯಂ ಪ್ರವಹಿಸುವುವೂ (ಅಥವಾ ಸರಸ್ವತೀನದಿಯ ಸಹೋದರಿಯರೂ) ಉದಯುಕ್ತವೂ ಆದ ಇತರ ನದೀದೇವತೆಗಳೂ ಸಹ ನಮ್ಮ ಶತ್ರುಗಳನ್ನು ಕೊನೆಗಾಣಿಸಲಿ.

## English Translation.

Overcome all our adversaries, and bring to us her other water-laden sisters, as the ever-rolling sun (leads on) the days.

॥ ಸಂಹಿತಾಪಾಠಃ ॥

ಉತ ನಃ ಪ್ರಿಯಾ ಪ್ರಿಯಾಸು ಸಪ್ತಸ್ವಸಾ ಸುಜುಷ್ಟಾ ।
ಸರಸ್ವತೀ ಸ್ತೋಮ್ಯಾ ಭೂತ್ ॥ ೧೦ ॥

॥ ಪದಪಾಠಃ ॥

ಉತ । ನಃ । ಪ್ರಿಯಾ । ಪ್ರಿಯಾಸು । ಸಪ್ತಽಸ್ವಸಾ । ಸುಽಜುಷ್ಟಾ ।
ಸರಸ್ವತೀ । ಸ್ತೋಮ್ಯಾ । ಭೂತ್ ॥ ೧೦ ॥

॥ ಸಾಯಣಭಾಷ್ಯಂ ॥

ದಶರಾತ್ರೇ ತೃತೀಯೇಽಹನಿ ಪ್ರಉಗ ಉತ ನಃ ಪ್ರಿಯೇತಿ ಸಾರಸ್ವತಸ್ತೃಚಃ । ಸೂತ್ರಿತಂ ಚ । ಉತ ನಃ ಪ್ರಿಯಾ ಪ್ರಿಯಾಸ್ವಿತ್ಯೌಷ್ಣಿಹಂ ಪ್ರಉಗಂ । ಆ. ೭-೧೦ । ಇತಿ ॥ ಪವಿತ್ರೇಷ್ಟ್ಯಾಮುತ ನಃ ಪ್ರಿಯೇತಿ ಸಾರಸ್ವತಸ್ಯ ಹವಿಷೋಽನುವಾಕ್ಯಾ । ಸೂತ್ರಿತಂ ಚ । ಉತ ನಃ ಪ್ರಿಯಾ ಪ್ರಿಯಾಸ್ವಿಮಾ ಜುಹ್ವಾನಾ ಯುಷ್ಮದಾ ನಮೋಭಿಃ । ಆ. ೨-೧೨ । ಇತಿ ॥

ಉತಾಪಿ ಚ ನೋಽಸ್ಮಾಕಂ ಪ್ರಿಯಾಸು ಪ್ರಿಯಾಣಾಂ ಮಧ್ಯೇ ಪ್ರಿಯಾ ಪ್ರಿಯತಮಾ ಸಪ್ತಸ್ವಸಾ । ಗಾಯತ್ರ್ಯಾದೀನಿ ಸಪ್ತ ಛಂದಾಂಸಿ ಸ್ವಸಾರೋ ಯಸ್ಯಾಸ್ತಾದೃಶೀ । ನದೀರೂಪಾಯಾಸ್ತು ಗಂಗಾದ್ಯಾಃ ಸಪ್ತ ನದ್ಯಃ ಸ್ವಸಾರಃ । ಸುಜುಷ್ಟಾ ಸುಷ್ಠು ಪುರಾತನೈರ್ಋಷಿಭಿಃ ಸೇವಿತಾ । ಏವಂಭೂತಾ ಸರಸ್ವತೀ ದೇವೀ ಸ್ತೋಮ್ಯಾ ಭೂತ್ । ಸ್ತೋತವ್ಯಾ ಭವತು ॥

॥ ಪ್ರತಿಪದಾರ್ಥ ॥

**ಉತ**—ಮತ್ತು । **ನಃ**—ನಮ್ಮ । **ಪ್ರಿಯಾಸು**—ಪ್ರೀತಿಪಾತ್ರರ ನಡುವೆ । **ಪ್ರಿಯಾ**—ಅತ್ಯಂತ ಪ್ರಿಯತಮಳೂ । **ಸಪ್ತಸ್ವಸಾ**—ಗಂಗಾದಿ ಸಪ್ತಸಹೋದರಿಯುಳ್ಳವಳೂ । **ಸುಜುಷ್ಟಾ**—ಋಷಿಗಳಿಂದ ಸೇವಿತಳೂ ಆದ । **ಸರಸ್ವತೀ**—ಸರಸ್ವತೀದೇವಿಯು । **ಸ್ತೋಮ್ಯಾ**—ಸ್ತುತಿ ಪಾತ್ರಳಾಗಿ । **ಭೂತ್**—ಆಗಿರಲಿ.

॥ ಭಾವಾರ್ಥ ॥

ನಮ್ಮ ಪ್ರೀತಿಪಾತ್ರರ ಮಧ್ಯದಲ್ಲೆಲ್ಲಾ ಅತಿಶಯವಾದ ಪ್ರೀತಿಗೆ ಪಾತ್ರಳೂ, ಗಂಗಾದಿ ಸಪ್ತ ಸಹೋದರಿಯರುಳ್ಳವಳೂ, ಋಷಿಗಳಿಂದ ಸೇವಿತಳೂ ಆದ ಸರಸ್ವತೀ ನದಿಯು ನಮಗೆ ಸ್ತುತಿಪಾತ್ರಳಾಗಿರಲಿ.

English Translation.

May Saraswati, who has seven sisters, who is dearest amongst those dear to us, and is fully propitiated be ever adorable.

॥ ವಿಶೇಷವಿಷಯಗಳು ॥

ದಶರಾತ್ರವೆಂಬ ಯಾಗದ ಮೂರನೆಯ ದಿವಸ ಪ್ರಉಗ ಶಸ್ತ್ರಮಂತ್ರಗಳನ್ನು ಪಠಿಸುವಾಗ **ಉತ ನಃ ಪ್ರಿಯಾ** ಎಂದು ಮೊದಲಾಗುವ ಮೂರು ಋಕ್ಕುಗಳನ್ನು (ಈ ಸೂಕ್ತದ ೧೦-೧೨ ಋಕ್ಕುಗಳು) ಸರಸ್ವತೀ ದೇವತಾಕವಾದ ತೃಚವನ್ನಾಗಿ ಪಠಿಸಬೇಕೆಂದು ಆಶ್ವಲಾಯನ ಶ್ರೌತಸೂತ್ರದ—**ಉತ ನಃ ಪ್ರಿಯಾ ಪ್ರಿಯಾಸ್ವಿತ್ಯೌಷ್ಣಿಹಂ ಪ್ರಉಗಂ** ಎಂಬ ಸೂತ್ರದಿಂದ (ಆ. ೭-೧೦) ವಿವೃತವಾಗಿರುವುದು. ಮತ್ತು ಪವಿತ್ರೇಷ್ಟಿಯಲ್ಲಿ **ಉತ ನಃ ಪ್ರಿಯಾ** ಎಂಬ ಈ ಋಕ್ಕನ್ನು ಸರಸ್ವತೀದೇವತೆಯನ್ನುದ್ದೇಶಿಸಿ ಮಾಡುವ ಹವಿರ್ಹೋಮದಲ್ಲಿ ಅನುವಾಕ್ಯಾಮಂತ್ರವನ್ನಾಗಿ ಪಠಿಸಬೇಕೆಂದು ಆಶ್ವಲಾಯನ ಶ್ರೌತಸೂತ್ರದ—**ಉತ ನಃ ಪ್ರಿಯಾ ಪ್ರಿಯಾಸ್ವಿಮಾ ಜುಹ್ವಾನಾ ಯುಷ್ಮದಾ ನಮೋಭಿಃ** ಎಂಬ ಸೂತ್ರದಿಂದ (ಆ. ೨-೧೨) ವಿವೃತವಾಗಿರುವುದು

ಇಲ್ಲಿ **ಸಪ್ತಸ್ವಸಾ** ಎಂಬ ಶಬ್ದಕ್ಕೆ ಎರಡು ವಿಧವಾಗಿ ಅರ್ಥಮಾಡಬೇಕು. ಸರಸ್ವತಿಯನ್ನು ವಾಗ್ದೇವತೆಯೆಂಬರ್ಥದಲ್ಲಿ ಸ್ತುತಿಸುವಾಗ **ಸಪ್ತಸ್ವಸಾ**—ಏಳು ಮಂದಿ ಭಗಿನಿಯರು ಎಂದರೆ ಗಾಯತ್ರ್ಯಾದಿ ಸಪ್ತಛಂದಸ್ಸುಗಳೆಂದೂ ನದಿಯೆಂಬರ್ಥದಲ್ಲಿ ಸ್ತುತಿಸುವಾಗ ಗಂಗಾದಿ ಸಪ್ತನದಿಗಳೆಂದೂ ಅರ್ಥವನ್ನು ಹೇಳಬೇಕು.

|| ಸಂಹಿತಾಪಾಠಃ ||

ಆಪಪ್ರುಷೀ ಪಾರ್ಥಿವಾನ್ಯುರು ರಜೋ ಅಂತರಿಕ್ಷಂ ।

ಸರಸ್ವತೀ ನಿದಸ್ಪಾತು ॥ ೧೧ ॥

|| ಪದಪಾಠಃ ||

ಆಽಪಪ್ರುಷೀ । ಪಾರ್ಥಿವಾನಿ । ಉರು । ರಜಃ । ಅಂತರಿಕ್ಷಂ ।

ಸರಸ್ವತೀ । ನಿದಃ । ಪಾತು ॥ ೧೧ ॥

|| ಸಾಯಣಭಾಷ್ಯಂ ||

ಪಾರ್ಥಿವಾನಿ ಪೃಥಿವ್ಯಾಃ ಸಂಬಂಧೀನ್ಯುರೂರೂಣಿ ವಿಸ್ತೀರ್ಣಾನಿ ರಜೋ ರಜಾಂಸಿ ಲೋಕಾನಂತರಿಕ್ಷಮಂತರಾ ಕ್ಷಾಂತಂ ನಭಶ್ಚಾಪಪ್ರುಷೀ ಸ್ವತೇಜಸಾ ಪೂರಿತವತೀ ಸರಸ್ವತೀ ದೇವೀ ನಿದೋ ನಿಂದಕಾಚ್ಛತ್ರೋಃ ಪಾತು । ಅಸ್ಮಾನ್ರಕ್ಷತು ॥

॥ ಪ್ರತಿಪದಾರ್ಥ ॥

**ಪಾರ್ಥಿವಾನಿ**—ಪೃಥಿವೀಲೋಕಕ್ಕೆ ಸೇರಿದವೂ । **ಉರು**—ವಿಸ್ತೃತವಾದವೂ ಆದ । **ರಜಃ**—ಲೋಕಗಳನ್ನೂ । **ಅಂತರಿಕ್ಷಂ**—ಅಂತರಿಕ್ಷವನ್ನೂ । **ಆ ಪಪ್ರುಷೀ**—ವ್ಯಾಪಿಸಿರುವ । **ಸರಸ್ವತೀ**— ಸರಸ್ವತೀ ದೇವಿಯು । **ನಿದಃ**—ನಿಂದಕರಾದ ಶತ್ರುಗಳಿಂದ । **ಪಾತು**—ನಮ್ಮನ್ನು ರಕ್ಷಿಸಲಿ.

॥ ಭಾವಾರ್ಥ ॥

ಪೃಥಿವೀ ಲೋಕಕ್ಕೆ ಸೇರಿದವೂ, ವಿಸ್ತೃತವಾದವೂ ಆದ ಲೋಕಗಳನ್ನೂ ಅಂತರಿಕ್ಷವನ್ನೂ ವ್ಯಾಪಿಸಿರುವ ಸರಸ್ವತೀದೇವಿಯು ನಿಂದಿಕರಾದ ಶತ್ರುಗಳಿಂದ ನಮ್ಮನ್ನು ರಕ್ಷಿಸಲಿ.

## English Translation.

May Saraswati, filling (with radiance) the vast expanse of earth and heaven, defend us from the reviler.

॥ ಸಂಹಿತಾಪಾಠಃ ॥

ತ್ರಿಷಧಸ್ಥಾ ಸಪ್ತಧಾತುಃ ಪಂಚ ಜಾತಾ ವರ್ಧಯಂತೀ ।

ವಾಜೇವಾಜೇ ಹವ್ಯಾ ಭೂತ್ ॥ ೧೨ ॥

॥ ಪದಪಾಠಃ ॥

ತ್ರಿಽಸಧಸ್ಥಾ । ಸಪ್ತಽಧಾತುಃ । ಪಂಚ । ಜಾತಾ । ವರ್ಧಯಂತೀ ।

ವಾಜೇಽವಾಜೇ । ಹವ್ಯಾ । ಭೂತ್ ॥ ೧೨ ॥

॥ ಸಾಯಣಭಾಷ್ಯಂ ॥

ತ್ರಿಷಧಸ್ಥಾ ತ್ರಿಷು ಲೋಕೇಷು ಸಹಾವತಿಷ್ಠಮಾನಾ ತ್ರಿಲೋಕವ್ಯಾಪಿನೀ ಸಪ್ತಧಾತುಃ । ಸಪ್ತ ಧಾತವೋಽವಯವಾ ಗಾಯತ್ರ್ಯಾದ್ಯಾ ಗಂಗಾದ್ಯಾ ವಾ ಯಸ್ಯಾಃ ಸಾ ತಥೋಕ್ತಾ । ಪಂಚ ಜಾತಾ ಜಾತಾನಿ ನಿಷಾದಪಂಚಮಾಂಶ್ಚತುರೋ ವರ್ಣಾನ್ ಗಂಧರ್ವಾದೀನ್ವಾ ವರ್ಧಯಂತ್ಯಭಿವೃದ್ಧಾನ್ಕುರ್ವತೀ । ಈದೃಶೀ ಸರಸ್ವತೀ ವಾಜೇ ವಾಜೇ ಯುದ್ಧೇ ಯುದ್ಧೇ ಸರ್ವೇಷು ಯುದ್ಧೇಷು ಹವ್ಯಾ ಭೂತ್ । ಹ್ವಾತವ್ಯಾ ಭವತಿ ॥

॥ ಪ್ರತಿಪದಾರ್ಥ ॥

**ತ್ರಿಷಧಸ್ಥಾ**—ಮೂರುಲೋಕಗಳನ್ನೂ ವ್ಯಾಪಿಸಿರುವವಳೂ । **ಸಪ್ತಧಾತುಃ**—ಗಂಗಾದಿ ಸಪ್ತ ಅವಯವಗಳುಳ್ಳವಳೂ । **ಪಂಚ ಜಾತಾ**—ನಿಷಾದಾದಿ ಪಂಚ ವಿಧವಾಗಿ ಉತ್ಪನ್ನರಾದ ಪ್ರಜೆಗಳನ್ನೂ । **ವರ್ಧಯಂತೀ**—ಪೋಷಿಸುವವಳೂ ಆದ ಸರಸ್ವತಿಯು । **ವಾಜೇ ವಾಜೇ**—ಪ್ರತಿಯೊಂದು ಯುದ್ಧದಲ್ಲಿಯೂ । **ಹವ್ಯಾ ಭೂತ್**—ನಮ್ಮ ಆಹ್ವಾನಕ್ಕೂ ಸ್ತುತಿಗೂ ಪಾತ್ರಳಾಗುತ್ತಾಳೆ.

॥ ಭಾವಾರ್ಥ ॥

ಮೂರು ಲೋಕಗಳನ್ನೂ ವ್ಯಾಪಿಸುವವಳೂ, ಗಂಗಾದಿ ಸಪ್ತ ಅವಯವಗಳುಳ್ಳವಳೂ, ನಿಷಾದಾದಿ ಪಂಚ ವಿಧವಾಗಿ ಉತ್ಪನ್ನರಾದ ಪ್ರಜೆಗಳನ್ನು ಪೋಷಿಸುವವಳೂ ಆದ ಸರಸ್ವತಿಯು ಪ್ರತಿಯೊಂದು ಯುದ್ಧದಲ್ಲಿಯೂ ನಮ್ಮ ಆಹ್ವಾನಕ್ಕೂ ಸ್ತುತಿಗೂ ಪಾತ್ರಳಾಗುತ್ತಾಳೆ.

English Translation.

Abiding in the three worlds, comprising seven elements, cherishing the five races (of beings), she is ever to be invoked in battle.

॥ ಸಂಹಿತಾಪಾಠಃ ॥

ಪ್ರ ಯಾ ಮಹಿಮ್ನಾ ಮಹಿನಾಸು ಚೇಕಿತೇ ದ್ಯುಮ್ನೇಭಿರನ್ಯಾ ಅಪಸಾಮಪಸ್ತಮಾ ।

ರಥ ಇವ ಬೃಹತೀ ವಿಭ್ವನೇ ಕೃತೋಪಸ್ತುತ್ಯಾ ಚಿಕಿತುಷಾ ಸರಸ್ವತೀ ॥೧೩॥

॥ ಪದಪಾಠಃ ॥

ಪ್ರ । ಯಾ । ಮಹಿಮ್ನಾ । ಮಹಿನಾ । ಆಸು । ಚೇಕಿತೇ । ದ್ಯುಮ್ನೇಭಿಃ । ಅನ್ಯಾಃ । ಅಪಸಾಂ । ಅಪಃಽತಮಾ ।
ರಥಃಽಇವ । ಬೃಹತೀ । ವಿಽಭ್ವನೇ । ಕೃತಾ । ಉಪಽಸ್ತುತ್ಯಾ । ಚಿಕಿತುಷಾ । ಸರಸ್ವತೀ । ೧೩ ॥

॥ ಸಾಯಣಭಾಷ್ಯಂ ॥

ಮಹಿಮ್ನಾ ಮಾಹಾತ್ಮ್ಯೇನ ಮಹಿನಾ ಮಹತೀ ದ್ಯುಮ್ನೇಭಿರ್ದ್ಯುಮ್ನೈರ್ದ್ಯೋತಮಾನೈರ್ಯಶೋಭಿರನ್ನೈರ್ವಾ ಯುಕ್ತಾ ಸತ್ಯಸ್ವಾಸಾಂ ನದೀನಾಂ ದೇವತಾನಾಂ ವಾ ಮಧ್ಯೇ ಯಾ ಸರಸ್ವತೀ ಪ್ರ ಚೇಕಿತೇ ಪ್ರಕರ್ಷೇಣ ಜ್ಞಾಯತೇ । ಯಾ ಚಾನ್ಯಾ ಅನ್ಯಾಸಾಂ ॥ ಸುಪಾಂ ಸುಲುಗಿತಿ ಷಷ್ಠೀ ಬಹುವಚನಸ್ಯ ಜಸ್ ॥ ಅಪಸಾಂ ವೇಗವತೀನಾಂ ನದೀನಾಂ ಮಧ್ಯೇಽಪಸ್ತಮಾ ವೇಗವತ್ತಮಾ । ಯಾ ಚ ರಥ ಇವ ವಿಭ್ವನೇ ವಿಭುತ್ವಾಯ ಬೃಹತೀ ಪರಿವೃಢಾ ಗುಣೈರಧಿಕಾ ಕೃತಾ ಪ್ರಜಾಪತಿನಾ ನಿರ್ಮಿತಾ ಸಾ ಸರಸ್ವತೀ ಚಿಕಿತುಷಾ ಜಾನತಾ ಸ್ತೋತ್ರೋಪಸ್ತುತ್ಯಾ । ಉಪಸ್ತೋತವ್ಯಾ ಭವತಿ ॥

॥ ಪ್ರತಿಪದಾರ್ಥ ॥

**ಯಾ**—ಯಾವ ಸರಸ್ವತಿಯು । **ಮಹಿಮ್ನಾ**—ತನ್ನ ಮಾಹಾತ್ಮ್ಯದಿಂದ । **ಮಹಿನಾ**—ಮಹತ್ತ್ವರೂಪವುಳ್ಳವಳೂ । **ದ್ಯುಮ್ನೇಭಿಃ**—ಕಾಂತಿಯುತವಾದ ಅನ್ನಯುಕ್ತಳೂ ಆಗಿ । **ಆಸು**—ಈ ನದೀ ದೇವತೆಗಳ ನಡುವೆ । **ಪ್ರ ಚೇಕಿತೇ**—ಅತಿಶಯವಾಗಿ ತಿಳಿಯಲ್ಪಡುವಳೋ । **ಅನ್ಯಾಃ ಅಪಸಾಂ**—ಇತರ ಪ್ರವಾಹವುಳ್ಳ ನದಿಗಳ ನಡುವೆ । **ಅಪಸ್ತಮಾ**—ಅತ್ಯತಿಶಯವಾದ ವೇಗದ ಪ್ರವಾಹವುಳ್ಳವಳೂ । **ವಿಭ್ವನೇ**—ಸರ್ವವ್ಯಾಪಕವಾಗಲು । **ಬೃಹತೀ**—ಪ್ರವೃದ್ಧಮಾನಳಾಗಿಯೂ ಆಗಿ । **ರಥ ಇವ**—ರಥದಂತೆ । **ಕೃತಾ**—ಪ್ರಜಾಪತಿಯಿಂದ ನಿರ್ಮಿತಳಾದಳೋ ಅಂತಹ । **ಸರಸ್ವತೀ**—ಸರಸ್ವತೀದೇವಿಯು । **ಚಿಕಿತುಷಾ**—ಸ್ತೋತೃವಿನ ಜ್ಞಾನಕ್ಕೆ ಪಾತ್ರಳಾಗಿಯೂ । **ಉಪಸ್ತುತ್ಯಾ**—ಸ್ತುತಿಗೆ ಪಾತ್ರಳಾಗಿಯೂ ಆಗಿರುತ್ತಾಳೆ.

॥ ಭಾವಾರ್ಥ ॥

ಯಾವ ಸರಸ್ವತೀದೇವಿಯು ತನ್ನ ಮಾಹಾತ್ಮ್ಯದಿಂದ ಮಹತ್ಸ್ವರೂಪವುಳ್ಳವಳೂ, ಕಾಂತಿಯುತವಾದ ಅನ್ನಯುಕ್ತಳೂ ಆಗಿ ಈ ನದೀದೇವತೆಗಳ ನಡುವೆ ಅತಿಶಯವಾಗಿ ತಿಳಿಯಲ್ಪಡುವಳೋ, ಪ್ರವಾಹವುಳ್ಳ ಇತರ ನದಿಗಳ ನಡುವೆ ಅತ್ಯತಿಶಯವಾದ ಪ್ರವಾಹವುಳ್ಳವಳಾಗಿಯೂ ಸರ್ವವ್ಯಾಪಕಿಯಾಗಲು ಪ್ರವೃದ್ಧಮಾನಳಾಗಿಯೂ ಆಗಿ ಪ್ರಜಾಪತಿಯಿಂದ ನಿರ್ಮಿತಳಾದಳೋ ಅಂತಹ ಸರಸ್ವತೀದೇವಿಯು ಸ್ತೋತೃವಿನ ಜ್ಞಾನಕ್ಕೆ ಪಾತ್ರಳಾಗಿಯೂ ಸ್ತುತಿಗೆ ಪಾತ್ರಳಾಗಿಯೂ ಆಗಿರುತ್ತಾಳೆ.

## English Translation.

She who is distinguised amongest them as eminent in greatness and in her glories: she who is the most impetuous of all other streams: she who has been created vast in capacity as a chariot, she Saraswati, is to be glorified by the discreet (worshipper).

॥ ಸಂಹಿತಾಪಾಠಃ ॥

**ಸರಸ್ವತ್ಯಭಿ ನೋ ನೇಷಿ ವಸ್ಯೋ ಮಾಪ ಸ್ಫರೀಃ ಪಯಸಾ ಮಾ ನ ಆ ಧಕ್ ।**
**ಜುಷಸ್ವ ನಃ ಸಖ್ಯಾ ವೇಶ್ಯಾ ಚ ಮಾ ತ್ವತ್‌ಕ್ಷೇತ್ರಾಣ್ಯರಣಾನಿ ಗನ್ಮ ॥ ೧೪ ॥**

॥ ಪದಪಾಠಃ ॥

**ಸರಸ್ವತಿ । ಅಭಿ । ನಃ । ನೇಷಿ । ವಸ್ಯಃ । ಮಾ । ಅಪ । ಸ್ಫರೀಃ । ಪಯಸಾ । ಮಾ । ನಃ । ಆ । ಧಕ್ ।**
**ಜುಷಸ್ವ । ನಃ । ಸಖ್ಯಾ । ವೇಶ್ಯಾ । ಚ । ಮಾ । ತ್ವತ್ । ಕ್ಷೇತ್ರಾಣಿ । ಅರಣಾನಿ । ಗನ್ಮ ॥ ೧೪ ॥**

॥ ಸಾಯಣಭಾಷ್ಯಂ ॥

**ಹೇ ಸರಸ್ವತಿ ನೋಽಸ್ಮಾನ್ವಸ್ಯೋ ವಸೀಯಃ ಪ್ರಶಸ್ತಂ ವಸು ಧನಮಭಿ ನೇಷಿ । ಅಭಿಪ್ರಾಪಯ । ಮಾಪ ಸ್ಫರೀಃ । ಅಪ್ರವೃದ್ಧಾನ್ಮಾ ಕಾರ್ಷೀಃ ॥ ಸ್ಫಾರೋ ವೃದ್ಧಿಃ । ಉಪಸರ್ಗವಶಾತ್ತದ್ವಿಪರೀತೇ ವರ್ತತೇ ॥ ತಥಾ ಪಯಸೋದಕೇನಾಧಿಕೇನ ನೋಽಸ್ಮಾನ್ಮಾ ಆ ಧಕ್ । ನಾಭಿದಹ । ನ ಬಾಧಸ್ವ । ಅಪಿ ಚ ನೋಽಸ್ಮಾಕಂ ಸಖ್ಯಾ ಸಖ್ಯಾನಿ ಸಖಿಕರ್ಮಾಣಿ ವೇಶ್ಯಾ ಪ್ರವೇಶನಾನಿ ಚ ಜುಷಸ್ವ । ಸೇವಸ್ವ । ವಯಂ ಚ ತ್ವತ್ಸಕಾಶಾದರಣಾನ್ಯರಮಣಾನಿ ನಿಕೃಷ್ಟಾನಿ ಕ್ಷೇತ್ರಾಣಿ ಮಾ ಗನ್ಮ । ಮಾ ಪ್ರಾಪ್ನವಾಮ । ಅಪಿ ತು ರಮಣೀಯಾನ್ಯೇವ ॥**

॥ ಪ್ರತಿಪದಾರ್ಥ ॥

**ಸರಸ್ವತಿ**—ಎಲೈ ಸರಸ್ವತೀದೇವಿಯೇ । **ನಃ**—ನಮಗೆ । **ವಸ್ಯಃ**—ಪ್ರಶಸ್ಯವಾದ ಧನವನ್ನು । **ಅಭಿ ನೇಷಿ**—ಹೊಂದಿಸು । **ಮಾಪ ಸ್ಫರೀಃ**—ನಮ್ಮ ವೃದ್ಧಿಗೆ ಅಡಚಣೆಯನ್ನುಂಟುಮಾಡಬೇಡ । **ಪಯಸಾ**—ತಡೆಯಲಾಗದ ಉದಕಪ್ರವಾಹದಿಂದ । **ನಃ**—ನಮ್ಮನ್ನು । **ಮಾ ಆ ಧಕ್**—ಹಿಂಸಿಸಬೇಡ । **ನಃ**—ನಮ್ಮ । **ಸಖ್ಯಾ**—ಮಿತ್ರತ್ವವನ್ನೂ । **ವೇಶ್ಯಾ ಚ**—ವಾಸಗೃಹಗಳನ್ನೂ । **ಜುಷಸ್ವ**—ಸೇವಿಸು । **ತ್ವತ್**—ನಿನಗೆ । **ಅರಣಾನಿ**—ಹರ್ಷರಹಿತವಾದ । **ಕ್ಷೇತ್ರಾಣಿ**—ಕ್ಷೇತ್ರಗಳನ್ನು । **ಮಾ ಗನ್ಮ**—ನಾವು ಸೇರದಿರುವಂತಾಗಲಿ.

॥ ಭಾವಾರ್ಥ ॥

ಎಲೈ ಸರಸ್ವತೀದೇವಿಯೇ, ನಮಗೆ ಪ್ರಶಸ್ಯವಾದ ಧನವನ್ನು ಒದಗಿಸು. ನಮ್ಮ ವೃದ್ಧಿಗೆ ಅಡಚಣೆಯನ್ನುಂಟು ಮಾಡಬೇಡ. ತಡೆಯಲಾಗದ ಉದಕಪ್ರವಾಹದಿಂದ ನಮ್ಮನ್ನು ಹಿಂಸಿಸಬೇಡ. ನಮ್ಮ ಮಿತ್ರತ್ವವನ್ನೂ ವಾಸ ಗೃಹಗಳನ್ನೂ ಸೇವಿಸು. ನಿನಗೆ ಹರ್ಷರಹಿತವಾದ ಕ್ಷೇತ್ರಗಳನ್ನು ನಾವು ಸೇರದಿರುವಂತಾಗಲಿ ಅಥವಾ ಹರ್ಷರಹಿತ ವಾದ ಕ್ಷೇತ್ರಗಳನ್ನು ನಾವು ನಿನ್ನಿಂದ ಪಡೆಯುವಂತೆ ಮಾಡಬೇಡ.

## English Translation.

Guide us, Saraswati, to precious wealth ; reduce us not to insignificance ; overwhelm us not with (excess of) water ; be pleased by our friendly (services) and access to our habitaions, and let us not repair to places unacceptable to you.



**ವೇದಾರ್ಥಸ್ಯ ಪ್ರಕಾಶೇನ ತಮೋ ಹಾರ್ದಂ ನಿವಾರಯನ್ ।**
**ಪುಮರ್ಥಾಂಶ್ಚತುರೋ ದೇಯಾದ್ವಿದ್ಯಾತೀರ್ಥಮಹೇಶ್ವರಃ ॥**

**ಇತಿ ಶ್ರೀಮದ್ರಾಜಾಧಿರಾಜ ಪರಮೇಶ್ವರ ವೈದಿಕಮಾರ್ಗಪ್ರವರ್ತಕ ಶ್ರೀ ವೀರಬುಕ್ಕಭೂಪಾಲಸಾಮ್ರಾಜ್ಯ-ಧುರಂಧರೇಣ ಸಾಯಣಾಚಾರ್ಯೇಣ ವಿರಚಿತೇ ಮಾಧವೀಯೇ ವೇದಾರ್ಥಪ್ರಕಾಶೇ ಋಕ್ಸಂಹಿತಾಭಾಷ್ಯೇ ಚತುರ್ಥಾಷ್ಟಕೇ ಽಷ್ಟಮೋಽಧ್ಯಾಯಃ ಸಮಾಪ್ತಃ**

॥ ಓಂ ತತ್ಸತ್ ॥

ಇಲ್ಲಿಗೆ ಶ್ರೀಸಾಯಣಭಾಷ್ಯಸಹಿತವೂ ಕರ್ನಾಟಕ ಭಾಷಾನುವಾದಯುತವೂ ಆದ
ಋಗ್ವೇದಸಂಹಿತೆಯ ನಾಲ್ಕನೆಯ ಅಷ್ಟಕದಲ್ಲಿ
ಎಂಟನೆಯ ಅಧ್ಯಾಯವು ಮುಗಿದುದು.

ಯದಕ್ಷರಪದಭ್ರಷ್ಟಂ ಮಾತ್ರಾಹೀನಂ ತು ಯದ್ಭವೇತ್ ।
ತತ್ಸರ್ವಂ ಕ್ಷಮ್ಯತಾಂ ದೇವ ವಾಗೀಶ್ವರ ನಮೋಽಸ್ತು ತೇ ॥

॥ ಶುಭಂ ಭೂಯಾತ್ ॥

॥ ಮಂಗಳಂ ॥





|| ಶ್ರೀಃ ||

|| ಶ್ರೀ ಗಣಾಧಿಪತಯೇ ನಮಃ ||

ವಾಗೀಶಾದ್ಯಾಃ ಸುಮನಸಃ ಸರ್ವಾರ್ಥಾನಾಮುಪಕ್ರಮೇ ।
ಯಂ ನತ್ವಾ ಕೃತಕೃತ್ಯಾಃ ಸ್ಯುಸ್ತಂ ನಮಾಮಿ ಗಜಾನನಂ ॥
ಯಸ್ಯ ನಿಃಶ್ವಸಿತಂ ವೇದಾ ಯೋ ವೇದೇಭ್ಯೋಽಖಿಲಂ ಜಗತ್ ।
ನಿರ್ಮಮೇ ತಮಹಂ ವಂದೇ ವಿದ್ಯಾತೀರ್ಥಮಹೇಶ್ವರಂ ॥
ವೇದಃ ಶಿವಃ ಶಿವೋ ವೇದೋ ವೇದಾಧ್ಯಾಯೀ ಸದಾಶಿವಃ ।
ತಸ್ಮಾತ್ಸರ್ವಪ್ರಯತ್ನೇನ ವೇದಮೇವ ಸದಾ ಜಪೇತ್ ॥

## ಸಾಯಣಭಾಷ್ಯಸಹಿತಾ

# ಋಗ್ವೇದಸಂಹಿತಾ

(ಕರ್ನಾಟಕ ಭಾಷಾರ್ಥಾನುವಾದ ವಿವರಣೆ ಸಹಿತವಾಗಿ)

## || ಪಂಚಮಾಷ್ಟಕೇ ಪ್ರಥಮೋಽಧ್ಯಾಯಃ ||

### ಐದನೆಯ ಅಷ್ಟಕದಲ್ಲಿ ಒಂದನೆಯ ಅಧ್ಯಾಯವು

## ಆರನೆಯ ಮಂಡಲದ ಅರವತ್ತೆರಡನೆಯ ಸೂಕ್ತವು

|| ಸಾಯಣಭಾಷ್ಯಂ ||

**ಅಥ ಪಂಚಮಾಷ್ಟಕೇ ಪ್ರಥಮೋಽಧ್ಯಾಯ ಆರಭ್ಯತೇ । ಷಷ್ಠಮಂಡಲಸ್ಯ ಷಷ್ಠೇಽನುವಾಕೇ ಚತುರ್ದಶ ಸೂಕ್ತಾನಿ । ತತ್ರ ಸ್ತುಷೇ ನರೇತ್ಯೇಕಾದಶರ್ಚಂ ಪ್ರಥಮಂ ಸೂಕ್ತಂ । ಅತ್ರೇಯಮನುಕ್ರಮಣಿಕಾ । ಸ್ತುಷ ಏಕಾದಶಾಶ್ವಿನಂ ತ್ವಿತಿ । ಮಂಡಲದ್ರಷ್ಟಾ ಬಾರ್ಹಸ್ಪತ್ಯೋ ಭರದ್ವಾಜ ಋಷಿಃ । ಅನುಕ್ತತ್ವಾತ್ತ್ರಿಷ್ಟುಪ್ । ಅಶ್ವಿನೌ ದೇವತಾ ॥ ಪ್ರಾತರನುವಾಕ ಆಶ್ವಿನೇ ಕ್ರತಾವಿದಮಾದಿಕೇ ದ್ವೇ ಸೂಕ್ತೇ । ಆಶ್ವಿನಶಸ್ತ್ರೇ ಚೈತೇ ಏವ । ಸೂತ್ರಿತಂ ಚ । ಸ್ತುಷೇ ನರೇತಿ ಸೂಕ್ತೇ । ಆ. ೪-೧೫ । ಇತಿ ||**

ಅನುವಾದವು---ಈಗ ಋಗ್ವೇದಸಂಹಿತೆಯಲ್ಲಿ ಐದನೆಯ ಅಷ್ಟಕದ ಮೊದಲನೆಯ ಅಧ್ಯಾಯದ ವಿವರಣೆಯನ್ನು ಪ್ರಾರಂಭಿಸುವೆವು. ಆರನೆಯ ಮಂಡಲದ ಆರನೆಯ ಅನುವಾಕದಲ್ಲಿ ಹದಿನಾಲ್ಕು ಸೂಕ್ತಗಳಿರುವವು. ಅವುಗಳಲ್ಲಿ **ಸ್ತುಷೇ ನರಾ** ಎಂಬುದು ಮೊದಲನೆಯ ಸೂಕ್ತವು ಇದರಲ್ಲಿ ಹನ್ನೊಂದು ಋಕ್ಕುಗಳಿರುವವು. ಅನುಕ್ರಮಣಿಕೆ

ಯಲ್ಲಿ—**ಸ್ತುಷೆ ಏಕಾದಶಾಶ್ವಿನಂ ತು** ಎಂದು ಹೇಳಿರುವುದು. ಈ ಸೂಕ್ತಕ್ಕೆ ಮಂಡಲದ್ರಷ್ಟೃವಾದ ಭರದ್ವಾಜನೇ ಋಷಿಯು; ಅಶ್ವಿನೀದೇವತೆಗಳು ದೇವತೆಯು; ತ್ರಿಷ್ಟುಪ್‌ಛಂದಸ್ಸು. ಪ್ರಾತರನುವಾಕಮಂತ್ರಪಠನಕಾಲದಲ್ಲಿ ಆಶ್ವಿನಕ್ರತುಸಂಬಂಧವಾದ ತ್ರಿಷ್ಟುಪ್‌ಛಂದಸ್ಸಿನ ಮಂತ್ರಗಳಿಗಾಗಿ ಈ ಸೂಕ್ತ ಮತ್ತು ಮುಂದಿನ ಸೂಕ್ತಗಳ (೨ ಸೂಕ್ತಗಳ) ವಿನಿಯೋಗವಿರುವುದೆಂದೂ, ಆಶ್ವಿನಶಸ್ತ್ರಮಂತ್ರಗಳಿಗಾಗಿಯೂ ಈ ಎರಡು ಸೂಕ್ತಗಳ ವಿನಿಯೋಗ ವಿರುವುದೆಂದೂ ಆಶ್ವಲಾಯನಶ್ರೌತಸೂತ್ರದ—**ಸ್ತುಷೇ ನರೇತಿ ಸೂಕ್ತೇ** ಎಂಬ ಸೂತ್ರದಿಂದ (ಆ. ೪-೧೫) ವಿವೃತವಾಗಿರುವುದು.

## ಸೂಕ್ತ—೬೨

ಮಂಡಲ—೬ ॥ ಅನುವಾಕ—೬ ॥ ಸೂಕ್ತ—೬೨ ॥
ಅಷ್ಟಕ—೫ ॥ ಅಧ್ಯಾಯ—೧ ॥ ವರ್ಗ—೧, ೨ ॥

॥ ಸೂಕ್ತದಲ್ಲಿರುವ ಋಕ್ಸಂಖ್ಯೆ—೧೧ ॥
॥ ಋಷಿಃ—ಭರದ್ವಾಜೋ ಬಾರ್ಹಸ್ಪತ್ಯಃ ॥
॥ ದೇವತಾ—ಅಶ್ವಿನೌ ॥
॥ ಛಂದಃ—ತ್ರಿಷ್ಟುಪ್ ॥

॥ ಸಂಹಿತಾಪಾಠಃ ॥

ಸ್ತುಷೇ ನರಾ ದಿವೋ ಅಸ್ಯ ಪ್ರಸಂತಾಶ್ವಿನಾ ಹುವೇ ಜರಮಾಣೋ ಅರ್ಕೈಃ ।
ಯಾ ಸದ್ಯ ಉಸ್ರಾ ವ್ಯುಷಿ ಜ್ಮೋ ಅಂತಾನ್ಯುಯೂಷತಃ ಪರ್ಯುರೂ ವರಾಂಸಿ ॥ ೧ ॥

॥ ಪದಪಾಠಃ ॥

ಸ್ತುಷೇ । ನರಾ । ದಿವಃ । ಅಸ್ಯ । ಪ್ರಽಸಂತಾ । ಅಶ್ವಿನಾ । ಹುವೇ । ಜರಮಾಣಃ । ಅರ್ಕೈಃ ।
ಯಾ । ಸದ್ಯಃ । ಉಸ್ರಾ । ವಿಽಉಷಿ । ಜ್ಮಃ । ಅಂತಾನ್ । ಯುಯೂಷತಃ । ಪರಿ । ಉರು । ವರಾಂಸಿ ॥

॥ ಸಾಯಣಭಾಷ್ಯಂ ॥

ದಿವೋ ದ್ಯುಲೋಕಸ್ಯ ನರಾ ನೇತಾರಾವಸ್ಯ ಭುವನಸ್ಯ ಪ್ರಸಂತಾ ಪ್ರಸಂತೌ ಪ್ರಭವಂತಾವೀಶ್ವರಾವಶ್ವಿನಾಶ್ವಿನಾವಶ್ವೈರನ್ವಿತೌ ಸ್ತುಷೇ ಪ್ರಗೀತಮಂತ್ರಸಾಧ್ಯೈಃ ಸ್ತೋತ್ರೈಃ ಸ್ತೋತುಮರ್ಕೈರರ್ಚನೀಯೈರಮಂತ್ರಸಾಧ್ಯೈಃ ಶಸ್ತ್ರೈರ್ಜರಮಾಣಃ ಸ್ತುತಿಂ ಕುರ್ವನ್ಹುವೇ । ಆಹ್ವಯಾಮಿ । ಕೀದೃಶಾವಿತ್ಯಪೇಕ್ಷಾಯಾಂ । ಯಾ ಯೌ ಸದ್ಯ ಏವೋಸ್ರಾ ಶತ್ರೂಣಾಂ ನಿವಾರಕೌ ವ್ಯುಷಿ ವ್ಯುಷ್ಟೌ ನಿಶಾಯಾಃ ಸಮಾಪ್ತೌ ಜ್ಮಃ ಪೃಥಿವ್ಯಾ ಅಂತಾನ್ ಪರ್ಯಂತಾನುರೂರೂಣಿ ವರಾಂಸಿ ರೂಪಸ್ಯಾವರಕಾಣಿ ತಮಾಂಸಿ ಚ ಪರಿ ಪರಿತೋ ಯುಯೂಷತಃ ಪೃಥಕ್ಕುರುತಃ । ಅಥವಾ ವರಾಂಸಿ ತೇಜಾಂಸಿ ತಮೋನಿವಾರಣಾತ್ಪರಿಯುಯೂಷತಃ । ವಿಸ್ತಾರಯತಃ ॥

॥ ಪ್ರತಿಪದಾರ್ಥ ॥

**ಯಾ**—ಯಾವ ಅಶ್ವಿನೀದೇವತೆಗಳು । **ಸದ್ಯಃ**—ಸಂಕಲ್ಪಿಸಿದೊಡನೆಯೇ । **ಉಸ್ರಾ**—ಶತ್ರುನಿವಾರಕರಾಗುವರೋ (ಮತ್ತು) । **ವ್ಯುಷಿ**—ಉಷಃಕಾಲದಲ್ಲಿಯೇ । **ಜ್ಮಃ**—ಪೃಥ್ವಿಯ । **ಅಂತಾನ್**—ಸುತ್ತಲೂ । **ಉರು**—ವಿಸ್ತೃತವಾಗಿ । **ವರಾಂಸಿ**—ಆವರಿಸಿರುವ ಕಗ್ಗತ್ತಲೆಗಳನ್ನು । **ಪರಿ**—ಎಲ್ಲಾ ಕಡೆಗಳಲ್ಲೂ । **ಯುಯೂಷತಃ**—ಬೇರೆಮಾಡಿ ದೂರಕ್ಕೋಡಿಸುವರೋ ಅಂತಹವರೂ । **ದಿವಃ**—ದ್ಯುಲೋಕಕ್ಕೆ । **ನರಾ**—ನೇತೃಗಳೂ । **ಅಸ್ಯ**—ಈ ಲೋಕಕ್ಕೆ । **ಪ್ರಸಂತಾ**—ಈಶ್ವರರೂ ಆದ । **ಅಶ್ವಿನಾ**—ಅಶ್ವಿನೀದೇವತೆಗಳನ್ನು । **ಅರ್ಕೈಃ**—ಪೂಜ್ಯವಾದ ಮಂತ್ರಗಳಿಂದ । **ಜರಮಾಣಃ**—ಸ್ತುತಿಸುತ್ತಾ । **ಹುವೇ**—ಕರೆಯುತ್ತೇನೆ । (ಮತ್ತು) **ಸ್ತುಷೇ**—ಸ್ತುತಿಸುತ್ತೇನೆ.

॥ ಭಾವಾರ್ಥ ॥

ಸಂಕಲ್ಪಿಸಿದೊಡನೆಯೇ ಶತ್ರುಗಳನ್ನು ನಾಶಮಾಡುವ ಶಕ್ತಿಯುಳ್ಳವರೂ, ಉಷಃಕಾಲದಲ್ಲಿಯೇ ಪೃಥ್ವಿಯ ಸುತ್ತಲೂ ಆವರಿಸಿರುವ ಕಗ್ಗತ್ತಲೆಗಳನ್ನು ಎಲ್ಲಾ ಕಡೆಯೂ ನಾಶಮಾಡುವವರೂ, ದ್ಯುಲೋಕದ ನೇತೃಗಳೂ, ಪೃಥ್ವಿಯ ಈಶ್ವರರೂ ಆದ ಅಶ್ವಿನೀದೇವತೆಗಳನ್ನು ಪೂಜ್ಯವಾದ ಮಂತ್ರಗಳಿಂದ ಸ್ತುತಿಸುತ್ತಾ ಕರೆಯುತ್ತೇನೆ.

English Translation.

I praise the two leaders of heaven, the presiders over this world : I invoke the Aswins, glorifying them with sacred hymns, them who are ever the discomfiters (of foes), who at dawn scatter the investing glooms to the ends of the earth.

॥ ಸಂಹಿತಾಪಾಠಃ ॥

ತಾ ಯುಜ್ಞಮಾ ಶುಚಿಭಿಶ್ಚಕ್ರಮಾಣಾ ರಥಸ್ಯ ಭಾನುಂ ರುರುಚೂ ರಜೋಭಿಃ ।
ಪುರೂ ವರಾಂಸ್ಯಮಿತಾ ಮಿಮಾನಾಪೋ ಧನ್ವಾನ್ಯತಿ ಯಾಥೋ ಅಜ್ರಾನ್ ॥

॥ ಪದಪಾಠಃ ॥

ತಾ । ಯಜ್ಞಂ । ಆ । ಶುಚಿಽಭಿಃ । ಚಕ್ರಮಾಣಾ । ರಥಸ್ಯ । ಭಾನುಂ । ರುರುಚುಃ । ರಜಃಽಭಿಃ ।
ಪುರು । ವರಾಂಸಿ । ಅಮಿತಾ । ಮಿಮಾನಾ । ಅಪಃ । ಧನ್ವಾನಿ । ಅತಿ । ಯಾಥಃ । ಅಜ್ರಾನ್ ॥ ೨ ॥

॥ ಸಾಯಣಭಾಷ್ಯಂ ॥

ಕಿಂಚ ತಾ ತೌ ಪ್ರಸಿದ್ಧಾವಶ್ವಿನೌ ಯಜ್ಞಮಸ್ಮದೀಯಂ ಯಾಗಮಾ ಚಕ್ರಮಾಣಾಭಿಚಕ್ರಮಾಣೌ ಶುಚಿಭಿರ್ನಿರ್ಮಲೈ ರಜೋಭಿಃ ಸ್ವೀಯೈಸ್ತೇಜೋಭಿಃ । ರಜೋ ರಜತೇರ್ಜ್ಯೋತೀ ರಜ ಉಚ್ಯತೇ ।

ನಿ. ೪-೧೯ । ಇತಿ ಯಾಸ್ಕೇನೋಕ್ತತ್ವಾತ್ । ರಥಸ್ಯ ಸ್ವಕೀಯಸ್ಯ ರಥಸ್ಯ ಭಾನುಂ ದೀಪ್ತಿಂ ರುರುಚುಃ । ರೋಚಯೇತೇ । ಅಪಿ ಚ ಪುರು ಬಹೂನಿ ವರಾಂಸಿ ತಮೋನಿವಾರಕಾಣಿ ತೇಜಾಂಸ್ಯಮಿತಾಪರಿಮಿತಾನಿ ಮಿಮಾನಾ ನಿರ್ಮಿಮಾಣಾವಪ ಉದ್ದಿಶ್ಯ ಧನ್ವಾನಿ ಮರುಪ್ರದೇಶಾನಜ್ರಾನ್ ಸ್ವಕೀಯಾನಶ್ವಾನತಿ ಯಾಥಃ । ಅತಿಕ್ರಾಮಯಥಃ ॥

। ಪ್ರತಿಪದಾರ್ಥ ॥

**ತಾ**—ಪ್ರಸಿದ್ಧರಾದ ಅಶ್ವಿನೀದೇವತೆಗಳು । **ಯಜ್ಞಂ**—ನಮ್ಮ ಯಜ್ಞಕ್ಕೆ । **ಆ ಚಕ್ರಮಾಣಾ**—ಬರುತ್ತಾ । **ಶುಚಿಭಿಃ**—ನಿರ್ಮಲವಾದ । **ರಜೋಭಿಃ** ತೇಜಸ್ಸುಗಳಿಂದ । **ರಥಸ್ಯ**—ತಮ್ಮ ರಥದ । **ಭಾನುಂ**—ಕಾಂತಿಯನ್ನು । **ರುರುಚುಃ**—ವೃದ್ಧಿಗೊಳಿಸುತ್ತಾರೆ । **ಪುರು**—ಅತ್ಯಧಿಕವಾದವೂ । **ವರಾಂಸಿ**—ತಮಸ್ಸನ್ನು ನಿವಾರಿಸುವುವೂ ಆದ ತೇಜಸ್ಸುಗಳನ್ನು । **ಅಮಿತಾ**—ಅಪರಿಮಿತವಾಗಿ । **ಮಿಮಾನಾ**—ನಿರ್ಮಿಸುತ್ತಾ । **ಅಪಃ**—ಉದಕಾರ್ಥವಾಗಿ । **ಧನ್ವಾನಿ**—ಮರುಭೂಮಿಗಳಲ್ಲೆಲ್ಲಾ । **ಅಜ್ರಾನ್**—ತಮ್ಮ ಅಶ್ವಗಳನ್ನು । **ಅತಿ ಯಾಥಃ**—ಓಡಿಸುತ್ತಾರೆ.

॥ ಭಾವಾರ್ಥ ॥

ಪ್ರಸಿದ್ಧರಾದ ಅಶ್ವಿನೀದೇವತೆಗಳು ನಮ್ಮ ಯಜ್ಞಕ್ಕೆ ಬರುತ್ತಾ ತಮ್ಮ ನಿರ್ಮಲವಾದ ತೇಜಸ್ಸುಗಳಿಂದ ತಮ್ಮ ರಥದ ಕಾಂತಿಯನ್ನು ವೃದ್ಧಿಗೊಳಿಸುತ್ತಾರೆ. ಅತ್ಯಧಿಕವಾದವೂ ತಮಸ್ಸನ್ನು ನಿವಾರಿಸುವುವೂ ಆದ ತೇಜಸ್ಸುಗಳನ್ನು ಅಪರಿಮಿತವಾಗಿ ನಿರ್ಮಿಸುತ್ತಾ ಉದಕಾರ್ಥವಾಗಿ ಮರುಭೂಮಿಗಳಲ್ಲೆಲ್ಲಾ ತಮ್ಮ ಅಶ್ವಗಳನ್ನು ಓಡಿಸುತ್ತಾರೆ.

## English Translation

Coming to the sacrifice with their bright splendours, they light up the lustre of (their) car; emitting vast and infiinite radiance: they drive their horses over deserts (refreshing them) with water.

॥ ಸಂಹಿತಾಪಾಠಃ ॥

ತಾ ಹ ತ್ಯದ್ವರ್ತಿರ್ಯದರಧ್ರಮುಗ್ರೇತ್ಥಾ ಧಿಯ ಊಹಥುಃ ಶಶ್ವದಶ್ವೈಃ ।
ಮನೋಜವೇಭಿರಿಷಿರೈಃ ಶಯಧ್ಯೈ ಪರಿ ವ್ಯಥಿರ್ದಾಶುಷೋ ಮರ್ತ್ಯಸ್ಯ ॥ ೩॥

॥ ಪದಪಾಠಃ ॥

ತಾ । ಹ । ತ್ಯತ್ । ವರ್ತಿಃ । ಯತ್ । ಅರಧ್ರಂ । ಉಗ್ರಾ । ಇತ್ಥಾ । ಧಿಯಃ । ಊಹಥುಃ । ಶಶ್ವತ್ । ಅಶ್ವೈಃ ।
ಮನಃಽಜವೇಭಿಃ । ಇಷಿರೈಃ । ಶಯಧ್ಯೈ । ಪರಿ । ವ್ಯಥಿಃ । ದಾಶುಷಃ । ಮರ್ತ್ಯಸ್ಯ ॥ ೩ ॥

॥ ಸಾಯಣಭಾಷ್ಯಂ ॥

ತಾ ಹ ತೌ ಖಲೂಗ್ರೋಗ್ರಾವಶ್ವಿನೌ ಯುವಾಂ ಯದರಧ್ರಮಸಮೃದ್ಧಂ ತ್ಯದ್ವರ್ತಿರ್ಯಜಮಾನಸ್ಯ ತದ್ಗೃಹಂ ಸಮರ್ಧಯಿತುಂ ಗಚ್ಛಥಃ । ಕಿಂಚೇತ್ಥೇತ್ಥಂ ಧಿಯಃ ಸ್ತೋತೃನಿಷಿರೈರೇಷಣೀಯೈಃ ಕಾಮ್ಯೈರ್ಮನೋಜವೇಭಿರ್ಮನೋವೇಗೈರಶ್ವೈಃ ಸ್ವೀಯೈರಶ್ವೈಃ ಶಶ್ವತ್ಸರ್ವದೋಹಥುಃ । ಸ್ವರ್ಗಂ ಪ್ರಾಪಯಥಃ । ಮರ್ತ್ಯಸ್ಯ ಮನುಷ್ಯಸ್ಯ ದಾಶುಷೋ ಯಜಮಾನಸ್ಯ ವ್ಯಥಿರ್ಹಿಂಸಕಃ ಪರಿ ಶಯಧ್ಯೈ ಪರಿಶಯನಾಯ ದೀರ್ಘನಿದ್ರಾಯೈ ಯುವಾಭ್ಯಾಂ ಕ್ರಿಯತಾಂ ॥

॥ ಪ್ರತಿಪದಾರ್ಥ ॥

(ಎಲೈ ಅಶ್ವಿನೀದೇವತೆಗಳೇ) **ತಾ ಹ**—ಪ್ರಸಿದ್ಧರಾದವರೂ । **ಉಗ್ರಾ**—ಭಯಂಕರವಾದ ಶಕ್ತಿಯುಳ್ಳವರೂ ಆದ ನೀವು । **ಅರಧ್ರಂ**—ಸಂಪತ್ಸಮೃದ್ಧಿಯಿಲ್ಲದ । **ಯತ್ ವರ್ತಿಃ**—ಯಾವ ಯಜಮಾನನ ಗೃಹಕ್ಕೆ (ಅದನ್ನು ಸಂಪತ್ಸಮೃದ್ಧವನ್ನಾಗಿ ಮಾಡಲು ಬರುವಿರೋ) । **ತ್ಯತ್**—ಅದೇ ಗೃಹದಿಂದ । **ಇತ್ಥಾ**—ಅದೇ ಅನುಗ್ರಹದಿಂದ । **ಇಷಿರೈಃ**—ಆಕರ್ಷಕವಾದವೂ । **ಮನೋಜವೇಭಿಃ**—ಮನೋವೇಗವುಳ್ಳವೂ ಆದ । **ಅಶ್ವೈಃ**—ಅಶ್ವಗಳ ಸಹಾಯದಿಂದ । **ಶಶ್ವತ್**—ಯಾವಾಗಲೂ । **ಧಿಯಃ**—ಕರ್ಮಕರ್ತರಾದ ಯಜಮಾನರನ್ನು । **ಊಹಥುಃ**—ಸ್ವರ್ಗಕ್ಕೆ ಒಯ್ಯುತ್ತೀರಿ । **ಮರ್ತ್ಯಸ್ಯ**—ಮಾನವನೂ । **ದಾಶುಷಃ**—ಹವಿಸ್ಸನ್ನರ್ಪಿಸುವವನೂ ಆದ ಯಜಮಾನನ । **ವ್ಯಥಿಃ**—ಹಿಂಸಕನಾದ ಶತ್ರುವು । **ಪರಿಶಯಧ್ಯೈ**—ದೀರ್ಘನಿದ್ರೆಮಾಡಲು ಕೆಳಗುರುಳಿಸಲ್ಪಡಲಿ.

॥ ಭಾವಾರ್ಥ ॥

ಎಲೈ ಅಶ್ವಿನೀದೇವತೆಗಳೇ. ಪ್ರಸಿದ್ಧರಾದವರೂ, ಭಯಂಕರವಾದ ಶಕ್ತಿಯುಳ್ಳವರೂ ಆದ ನೀವು ಸಂಪತ್ಸಮೃದ್ಧಿಯಿಂದ ಕೂಡದೇ ಇರುವ ಯಾವ ಗೃಹಕ್ಕೆ ಅದರಲ್ಲಿ ಸಂಪತ್ತನ್ನು ತುಂಬಿಸಲು ಬರುವಿರೋ ಅದೇ ಗೃಹದಿಂದ ಅದೇ ಅಭಿಮಾನಯುಕ್ತರಾಗಿ ಆಕರ್ಷಕವಾದವೂ, ಮನೋವೇಗವುಳ್ಳವೂ ಆದ ಅಶ್ವಗಳ ಸಹಾಯದಿಂದ ಯಾವಾಗಲೂ ಕರ್ಮಕರ್ತರಾದ ಯಜಮಾನರನ್ನು ಸ್ವರ್ಗಕ್ಕೆ ಒಯ್ಯುತ್ತೀರಿ. ಮಾನವನೂ, ಹವಿಸನ್ನರ್ಪಿಸುವವನೂ ಆದ ಯಜಮಾನನ ಹಿಂಸಕನಾದ ಶತ್ರುವು ಮೃತನಾಗಿ ದೀರ್ಘನಿದ್ರೆಮಾಡಲು ಕೆಳಗುರುಳಿಸಲ್ಪಡಲಿ.

## English Translation.

Fierce Aswins, from that humble mansion to which (you have repaired), you have ever borne with your desirable horses, as swift as thought, the pious worshippers in some manner (to heaven): Let the injurer of the liberal man (be consigned by you) to (final) repose.

॥ ಸಂಹಿತಾಪಾಠಃ ॥

ತಾ ನವ್ಯಸೋ ಜರಮಾಣಸ್ಯ ಮನ್ಮೋಪ ಭೂಷತೋ ಯುಯುಜಾನಸಪ್ತೀ

ಶುಭಂ ಪೃಕ್ಷಮಿಷಮೂರ್ಜಂ ವಹಂತಾ ಹೋತಾ ಯಕ್ಷತ್ಪ್ರತ್ನೋ ಅಧ್ರು-
ಗ್ಯುವಾನಾ ॥ ೪ ॥

॥ ಪದಪಾಠಃ ॥

ತಾ । ನವ್ಯಸಃ । ಜರಮಾಣಸ್ಯ । ಮನ್ಮ । ಉಪ । ಭೂಷತಃ । ಯುಯುಜಾನಸಪ್ತೀ ಇತಿ ಯುಯು-
ಜಾನಽಸಪ್ತೀ ।

ಶುಭಂ । ಪೃಕ್ಷಂ । ಇಷಂ । ಊರ್ಜಂ । ವಹಂತಾ । ಹೋತಾ । ಯಕ್ಷತ್ । ಪ್ರತ್ನಃ । ಅಧ್ರುಕ್ ।
ಯುವಾನಾ ॥ ೪ ॥

॥ ಸಾಯಣಭಾಷ್ಯಂ ॥

ತಾ ತಾವಶ್ವಿನೌ ಯುಯುಜಾನಸಪ್ತೀ ರಥೇ ಯುಜ್ಯಮಾನಾಶ್ವೌ ಶುಭಂ ಶೋಭನಂ ಪೃಕ್ಷಮನ್ನಂ । ಪಯಃ ಪೃಕ್ಷ ಇತ್ಯನ್ನನಾಮಸು ಪಾಠಾತ್ । ಇಷಂ ಪುಷ್ಟಿಮೂರ್ಜಂ ರಸಂ ಚ ವಹಂತಾ ವಹಂತೌ ನವ್ಯಸೋ ನವತರಸ್ಯ ಜರಮಾಣಸ್ಯ ಸ್ತುತಿಂ ಕುರ್ವತೋ ಮನ್ಮ ಮನನೀಯಂ ಸ್ತೋತ್ರಮುಪ ಭೂಷತಃ । ಉಪಗಚ್ಛತಃ । ಯದ್ವಾ । ಸ್ತೋತ್ರಸಮೀಪೇ ಭವತಃ । ಕಿಂ ಚ ಯುವಾನಾ ನಿತ್ಯತರುಣೌ ತೌ ಹೋತಾ ದೇವಾನಾಮಾಹ್ವಾತಾಧ್ರುಗದ್ರೋಗ್ಧಾ ಪ್ರಿಯಃ ಪ್ರತ್ನಃ ಪುರಾಣೋಽಗ್ನಿರ್ಯಕ್ಷತ್ । ಯಜತು ॥

। ಪ್ರತಿಪದಾರ್ಥ ।

**ತಾ**—ಅದೇ ಅಶ್ವಿನೀದೇವತೆಗಳು । **ಯುಯುಜಾನಸಪ್ತೀ**—ರಥಕ್ಕೆ ತಮ್ಮ ಅಶ್ವಗಳನ್ನು ಯೋಜಿಸಿದವರಾಗಿ । **ಶುಭಂ**—ಉತ್ತಮವಾದ । **ಪೃಕ್ಷಂ**—ಅನ್ನವನ್ನೂ । **ಇಷಂ**—ಪುಷ್ಟಿಯನ್ನೂ । **ಊರ್ಜಂ**—ರಸವನ್ನೂ । **ವಹಂತಾ**—ತುಂಬಿಕೊಂಡವರಾಗಿ । **ನವ್ಯಸಃ**—ನೂತನನಾದ । **ಜರಮಾಣಸ್ಯ**—ಸ್ತುತಿಕರ್ತನ । **ಮನ್ಮ**—ಧ್ಯಾನಾತ್ಮಕವಾದ ಸ್ತುತಿಗಭಿಮುಖವಾಗಿ । **ಉಪ ಭೂಷತಃ**—ಆಗಮಿಸುತ್ತಾರೆ । **ಯುವಾನಾ**—ನಿತ್ಯತರುಣರಾದ ಅದೇ ಅಶ್ವಿನೀದೇವತೆಗಳನ್ನು । **ಹೋತಾ**—ದೇವತೆಗಳನ್ನು ಯಜ್ಞಕ್ಕೆ ಕರೆಯುವವನೂ । **ಅಧ್ರುಕ್**—ಪ್ರಿಯಕರನೂ । **ಪ್ರತ್ನಃ**—ಪುರಾತನನೂ ಆದ ಅಗ್ನಿಯು । **ಯಕ್ಷತ್**—ಪೂಜಿಸಲಿ.

॥ ಭಾವಾರ್ಥ ॥

ಅಶ್ವಿನೀದೇವತೆಗಳು ತಮ್ಮ ರಥಕ್ಕೆ ಅಶ್ವಗಳನ್ನು ಯೋಜಿಸಿ ಉತ್ತಮವೂ ಕಲ್ಯಾಣಕಾರಕವೂ ಆದ ಅನ್ನವನ್ನೂ, ಪುಷ್ಟಿಯನ್ನೂ ಶಕ್ತಿಸಾಧಕವಾದ ರಸವನ್ನೂ ತುಂಬಿಕೊಂಡು ನೂತನನಾದ ಸ್ತುತಿಕರ್ತನ ಧ್ಯಾನಾತ್ಮಕವಾದ ಸ್ತುತಿಗಭಿಮುಖವಾಗಿ ಆಗಮಿಸುತ್ತಾರೆ. ನಿತ್ಯತರುಣರಾದ ಅದೇ ಅಶ್ವಿನೀದೇವತೆಗಳನ್ನು ಯಜ್ಞಕ್ಕೆ ಕರೆಯುವವನೂ, ಪ್ರಿಯಕರನೂ, (ದ್ರೋಹಬುದ್ಧಿಯಿಲ್ಲದವನೂ) ಪುರಾತನನೂ ಆದ ಅಗ್ನಿಯು ಪೂಜಿಸಲಿ.

## English Translation.

Harnessing their horses, bringing excellent food, nourishment, and strength, they approach (to receive) the adoration of their recent worshipper ; and may the benevolent ancient inoker of the gods (Agni) sacrifice to the ever youthful (deities).

॥ ಸಂಹಿತಾಪಾಠಃ ॥

ತಾ ವಲ್ಗೂ ದಸ್ರಾ ಪುರುಶಾಕತಮಾ ಪ್ರತ್ನಾ ನವ್ಯಸಾ ವಚಸಾ ವಿವಾಸೇ ।
ಯಾ ಶಂಸತೇ ಸ್ತುವತೇ ಶಂಭವಿಷ್ಠಾ ಬಭೂವತುರ್ಗೃಣತೇ ಚಿತ್ರರಾತೀ ॥

॥ ಪದಪಾಠಃ ॥

ತಾ । ವಲ್ಗೂ ಇತಿ । ದಸ್ರಾ । ಪುರುಶಾಕ್ಽತಮಾ । ಪ್ರತ್ನಾ । ನವ್ಯಸಾ । ವಚಸಾ । ಆ । ವಿವಾಸೇ ।
ಯಾ । ಶಂಸತೇ । ಸ್ತುವತೇ । ಶಂಽಭವಿಷ್ಠಾ । ಬಭೂವತುಃ । ಗೃಣತೇ । ಚಿತ್ರರಾತೀ ಇತಿ ಚಿತ್ರಽರಾತೀ ॥

॥ ಸಾಯಣಭಾಷ್ಯಂ ॥

ಯಾ ಯೌ ಶಂಸತೇ ಶಸ್ತ್ರೈಃ ಸ್ತುತಿಂ ಕುರ್ವತೇ ಸ್ತುವತೇ ಸ್ತೋತ್ರೈಃ ಸ್ತುತಿಂ ಕುರ್ವತೇ ಜನಾಯ ಶಂಭವಿಷ್ಠಾತಿಶಯೇನ ಸುಖಸ್ಯ ಭಾವಯಿತಾರಾವತಿಶಯೇನ ಸುಖಸ್ವರೂಪೌ ವಾ ಗೃಣತೇ ಸ್ತೋತ್ರಶಸ್ತ್ರವ್ಯತಿರಿಕ್ತಲೌಕಿಕಸ್ತುತಿಭಿಃ ಸ್ತುವತೇ ಚ ಚಿತ್ರರಾತೀ ವಿಚಿತ್ರದಾನೌ ಬಭೂವತುಃ ತಾ ತೌ ವಲ್ಗೂ ವಲನಶೀಲೌ ರುಚಿರೌ ವಾ ಪುರುಶಾಕತಮಾತಿಶಯೇನ ಬಹುಕರ್ಮಾಣೌ ಬಹುಸಹಾಯೌ ವಾ ಪ್ರತ್ನಾ ಪ್ರತ್ನೌ ಪುರಾಣೌ । ಪ್ರತ್ನಂ ಪ್ರದಿವ ಇತಿ ಪುರಾಣನಾಮಸು ಪಾಠಾತ್ । ದಸ್ರಾ ದರ್ಶನೀಯಾವಶ್ವಿನೌ ನವ್ಯಸಾ ನವತರೇಣ ವಚಸಾ ಸ್ತುತ್ಯಾ ಆ ವಿವಾಸೇ । ಪರಿಚರಾಮಿ ॥

॥ ಪ್ರತಿಪದಾರ್ಥ ॥

**ಯಾ**—ಯಾವ ಅಶ್ವಿನೀದೇವತೆಗಳು । **ಶಂಸತೇ**—ಪ್ರಶಂಸೆಮಾಡುವವನಿಗೂ । **ಸ್ತುವತೇ**—ಸ್ತೋತ್ರ ಮಾಡುವವನಿಗೂ । **ಶಂಭವಿಷ್ಠಾ**—ಅತಿಶಯವಾದ ಸುಖವನ್ನು ಕೊಡತಕ್ಕವರೂ । **ಗೃಣತೇ**—ಲೌಕಿಕವಾದ ಪ್ರಶಂಸಾವಾಕ್ಯಗಳಿಂದ ಸ್ತುತಿಸುವವನಿಗೆ । **ಚಿತ್ರರಾತೀ**—ಅನೇಕ ವಿಧವಾದ ದಾನಗಳನ್ನು ಕೊಡತಕ್ಕವರೂ । **ಬಭೂವತುಃ**—ಆಗಿದ್ದಾರೆಯೋ । **ತಾ**—ಅಂತಹ । **ವಲ್ಗೂ**—ಮನೋಹರವಾದ ರೂಪವುಳ್ಳವರೂ । **ಪುರುಶಾಕತಮಾ**—ಅತ್ಯತಿಶಯವಾದ ಕರ್ಮಕರ್ತರೂ । **ಪ್ರತ್ನಾ**—ಪುರಾತನರೂ । **ದಸ್ರಾ**—ಆಕರ್ಷಕವಾದ ಸೌಂದರ್ಯವುಳ್ಳವರೂ ಆದ ಅಶ್ವಿನೀದೇವತೆಗಳನ್ನು । **ನವ್ಯಸಾ**—ನೂತನವಾದ । **ವಚಸಾ**—ಸ್ತುತಿಯಿಂದ । **ಆ ವಿವಾಸೇ**—ಸೇವಿಸುತ್ತೇನೆ.

|| ಭಾವಾರ್ಥ ||

ಪ್ರಶಂಸಕನಿಗೂ, ಶಸ್ತ್ರಮಂತ್ರಾದಿಗಳಿಂದ ಸ್ತುತಿಮಾಡುವವನೂ ಆದ ಸ್ತುತಿಕರ್ತನಿಗೆ ಅತಿಶಯವಾದ ಸುಖ ದಾತರೂ, ಲೌಕಿಕವಾದ ಪ್ರಶಂಸಾವಾಕ್ಯಗಳಿಂದ ಸ್ತುತಿಸುವವನಿಗೆ ಅನೇಕ ವಿಧವಾದ ದಾನಗಳನ್ನು ಕೊಡತಕ್ಕವರೂ ಆಗಿ ಮನೋಹರವಾದ ರೂಪವುಳ್ಳವರೂ, ಅತ್ಯತಿಶಯವಾದ ಕರ್ಮಕರ್ತರೂ, ಪುರಾತನರೂ, ಆಕರ್ಷಕವಾದ ಸೌಂದರ್ಯ ವುಳ್ಳವರೂ ಆದ ಅಶ್ವಿನೀದೇವತೆಗಳನ್ನು ನೂತನವಾದ ಸ್ತುತಿಯಿಂದ ಸೇವಿಸುತ್ತೇನೆ.

English Translation.

I worship with a new hymn those two quick-moving good-loooking ancient (Aswins), the achievers of many exploits, who are the givers of great felicity to him who prays to (them), or praises (them); bestowers of wondrous gifts on him who adores (them).

|| ಸಂಹಿತಾಪಾಠಃ ||

ತಾ ಭುಜ್ಯುಂ ವಿಭಿರದ್ಭ್ಯಃ ಸಮುದ್ರಾತ್ತುಗ್ರಸ್ಯ ಸೂನುಮೂಹಥೂ ರಜೋಭಿಃ ।
ಅರೇಣುಭಿರ್ಯೋಜನೇಭಿರ್ಭುಜಂತಾ ಪತತ್ರಿಭಿರರ್ಣಸೋ ನಿರುಪಸ್ಥಾತ್ ॥

|| ಪದಪಾಠಃ ||

ತಾ । ಭುಜ್ಯುಂ । ವಿಽಭಿಃ । ಅತ್ಽಭ್ಯಃ । ಸಮುದ್ರಾತ್ । ತುಗ್ರಸ್ಯ । ಸೂನುಂ । ಊಹಥುಃ । ರಜಃಽಭಿಃ । ಅರೇಣುಽಭಿಃ । ಯೋಜನೇಭಿಃ । ಭುಜಂತಾ । ಪತತ್ರಿಽಭಿಃ । ಅರ್ಣಸಃ । ನಿಃ । ಉಪಽಸ್ಥಾತ್ ॥ ೬ ॥

॥ ಸಾಯಣಭಾಷ್ಯಂ ॥

**ತಾ ತಾವಶ್ವಿನೌ ಯುವಾಂ ತುಗ್ರಸ್ಯ ಸೂನುಂ ಭುಜ್ಯುಂ ಭುಜ್ಯುನಾಮಕಂ ಸಮುದ್ರಮಧ್ಯೇ ಭಗ್ನನಾವಂ ಭುಜಂತಾ ರಕ್ಷಂತಾವರೇಣುಭೀ ರೇಣುರಹಿತೈರಾಂತರಿಕ್ಷೈ ರಜೋಭಿರ್ಮಾರ್ಗೈರ್ಯೋಜನೇಭೀ ರಥಯುಕ್ತೈಃ ಪತತ್ರಿಭಿಃ ಪತನವದ್ಭಿರ್ವಿಭಿರಶ್ವೈರರ್ಣಸೋ ಜಲಸ್ಯೋಪಸ್ಥಾದ್ಯೋನೇಃ ಸಮುದ್ರಾದದ್ಭ್ಯೋ ನಿರೂಹಥುಃ । ನಿರಗಮಯತಂ । ಸಮುದ್ರಾದದ್ಭ್ಯ ಇತಿ ಪ್ರಯೋಗೋ ಮಾಶುರ್ಗೃಹಾದ್ಗಚ್ಛತೀತಿವತ್ ॥**

|| ಪ್ರತಿಪದಾರ್ಥ ||

(ಎಲೈ ಅಶ್ವಿನೀದೇವತೆಗಳೇ) **ತಾ**—ಪ್ರಸಿದ್ಧರಾದ ನೀವು । **ಅರೇಣುಭಿಃ**—ರೇಣು (ಧೂಳು) ರಹಿತವಾದ । **ರಜೋಭಿಃ**—ಅಂತರಿಕ್ಷ ಮಾರ್ಗಗಳಲ್ಲಿ ಸಂಚರಿಸುವುವೂ । **ಯೋಜನೇಭಿಃ**—ರಥಯುಕ್ತವಾದವೂ । **ಪತ-**

**ತ್ರಿಭಿಃ**—ಪಕ್ಷಿವೇಗದಿಂದ ಓಡುವುವೂ ಆದ | **ವಿಭಿಃ**—ಅಶ್ವಗಳ ಸಹಾಯದಿಂದ | **ತುಗ್ರಸ್ಯ**—ತುಗ್ರನ | **ಸೂನುಂ**—ಪುತ್ರನಾದ | **ಭುಜ್ಯುಂ**—ಭುಜ್ಯುವನ್ನು | **ಭುಜಂತಾ**—ರಕ್ಷಿಸುವವರಾಗಿ | **ಅರ್ಣಸಃ**—ಉದಕಕ್ಕೆ | **ಉಪಸ್ಥಾತ್**—ಆಶ್ರಯವಾದ | **ಸಮುದ್ರಾತ್ ಅದ್ಭ್ಯಃ**—ಸಮುದ್ರದ ಆಳವಾದ ಉದಕದಿಂದ | **ನಿ ಊಹಥುಃ**—ಮೇಲಕ್ಕೆತ್ತಿದಿರಿ.

॥ ಭಾವಾರ್ಥ ॥

ಎಲೈ ಅಶ್ವಿನೀದೇವತೆಗಳೇ, ಪ್ರಸಿದ್ಧರಾದ ನೀವು ರೇಣುರಹಿತವಾದ ಅಂತರಿಕ್ಷಮಾರ್ಗಗಳಲ್ಲಿ ಸಂಚರಿಸುವುವೂ, ರಥಯುಕ್ತವಾದವೂ, ಪಕ್ಷಿವೇಗದಿಂದ ಓಡುವುವೂ ಆದ ಅಶ್ವಗಳ ಸಹಾಯದಿಂದ ತುಗ್ರಪುತ್ರನಾದ ಭುಜ್ಯುವನ್ನು ರಕ್ಷಿಸುವವರಾಗಿ ಅತ್ಯಂತ ಆಳವಾದ ಸಮುದ್ರದ ಉದಕಮಧ್ಯದಿಂದ ಅವನನ್ನು ಮೇಲಕ್ಕೆತ್ತಿದಿರಿ.

English Translation.

They bore up from the waters, from the ocean, by the winged horses attached to their car, (passing) by roads unsoiled by dust, Bhujyu, the son of Tugra ; they (bore him) from out of the lap of the water.

॥ ವಿಶೇಷವಿಷಯಗಳು ॥

ಅಶ್ವಿನೀದೇವತೆಗಳು ತುಗ್ರಪುತ್ರನಾದ ಭುಜ್ಯುವನ್ನು ಸಮುದ್ರಮಧ್ಯದಲ್ಲಿ ರಕ್ಷಿಸಿದರೆಂಬ ವಿಷಯವನ್ನು ನಾವು ಋ. ಸಂ. ಭಾಗ 8 ಪುಟ 812, ಮತ್ತು ಭಾಗ 9-194, 9-369, 9-467, 13-523, 13-616, ಇತ್ಯಾದಿ ಸ್ಥಳಗಳಲ್ಲಿ ವಿವರಿಸಿದ್ದೇವೆ.

॥ ಸಂಹಿತಾಪಾಠಃ ॥

ವಿ ಜಯುಷಾ ರಥ್ಯಾ ಯಾತಮದ್ರಿಂ ಶ್ರುತಂ ಹವಂ ವೃಷಣಾ ವಧ್ರಿಮತ್ಯಾಃ ।
ದಶಸ್ಯಂತಾ ಶಯವೇ ಪಿಪ್ಯಥುರ್ಗಾಮಿತಿ ಚ್ಯವಾನಾ ಸುಮತಿಂ ಭುರಣ್ಯೂ ॥

॥ ಪದಪಾಠಃ ॥

ವಿ । ಜಯುಷಾ । ರಥ್ಯಾ । ಯಾತಂ । ಅದ್ರಿಂ । ಶ್ರುತಂ । ಹವಂ । ವೃಷಣಾ । ವಧ್ರಿಽಮತ್ಯಾಃ ।
ದಶಸ್ಯಂತಾ । ಶಯವೇ । ಪಿಪ್ಯಥುಃ । ಗಾಂ । ಇತಿ । ಚ್ಯವಾನಾ । ಸುಽಮತಿಂ । ಭುರಣ್ಯೂ ಇತಿ ॥ ೭ ॥

॥ ಸಾಯಣಭಾಷ್ಯಂ ॥

ರಥ್ಯಾ ಹೇ ರಥಾರೂಢಾವಶ್ವಿನೌ ಜಯುಷಾ ಜಯಶೀಲೇನ ರಥೇನಾದ್ರಿಂ ಮಾರ್ಗೇ ಸ್ಥಿತಂ ಪರ್ವತಂ ವಿ ಯಾತಂ । ವ್ಯಬಾಧೇಥಾಂ । ಯಾತಿರತ್ರ ವಧಕರ್ಮಾ । ತಥಾ ಚ ನಿಗಮಾಂತರಂ ।

ವಿಭಿಂದುನಾ ನಾಸತ್ಯಾ ರಥೇನ ವಿ ಪರ್ವತಾँ ಅಜರಯೂ ಅಯಾತಂ । ಋಗ್ವೇ. ೧-೧೧೬-೨೦ । ಇತಿ । ವೃಷಣಾ ಕಾಮಾನಾಂ ವರ್ಷಿತಾರೌ ವಧ್ರಿಮತ್ಯಾಃ ಪುತ್ರಾರ್ಥಿನ್ಯಾ ಹವಮಾಹ್ವಾನಂ ಶ್ರುತಂ । ಶೃಣುತಂ । ದಶಸ್ಯಂತಾ ಸ್ತೋತೃಭ್ಯಃ ಕಾಮಾನ್ಪ್ರಯಚ್ಛಂತೌ ಶಯವೇ ಯುವಾಂ ಸ್ತುವತೇ ಗಾಂ ನಿವೃತ್ತಪ್ರಸವಾಂ ಪಿಪ್ಯಥುಃ । ಕ್ಷೀರೇಣಾಪ್ಯಾಯಯತಂ । ತಥಾ ಚ ನಿಗಮಾಂತರಂ । ಶಯವೇ ಚಿನ್ನಾಸತ್ಯಾ ಶಚೀಭಿರ್ಜ-ಸುರಯೇ ಸ್ತರ್ಯಂ ಪಿಪ್ಯಥುರ್ಗಾಂ । ಋಗ್ವೇ. ೧-೧೧೬-೨೨ । ಇತಿ । ಇತೀತ್ಥಂ ಸುಮತಿಂ ಸುಷ್ಟುತಿಂ ಚ್ಯವಾನಾ ಗಚ್ಛಂತೌ ಭುರಣ್ಯಾ ಸರ್ವತ್ರ ಗಂತಾರೌ ಯಜ್ಞಸ್ಯ ಭರ್ತಾರೌ ವಾ ಭವತಂ ॥

॥ ಪ್ರತಿಪದಾರ್ಥ ॥

**ರಥ್ಯಾ**—ರಥಾರೂಢರಾದ ಎಲೈ ಅಶ್ವಿನೀದೇವತೆಗಳೇ । **ಜಯುಷಾ**—ಜಯಶಾಲಿಯಾದ ನಿಮ್ಮ ರಥದ ಸಹಾಯದಿಂದ । **ಅದ್ರಿಂ**—ಮಾರ್ಗ ಮಧ್ಯದಲ್ಲಿದ್ದ ಪರ್ವತವನ್ನು । **ವಿ ಯಾತಂ**—ಕೊರೆದುಕೊಂಡು ಪ್ರವೇಶಿಸಿದಿರಿ । **ವೃಷಣಾ**—ಕಾಮವರ್ಷಕರಾದ ಎಲೈ ಅಶ್ವಿನೀದೇವತೆಗಳೇ । **ವಧ್ರಿಮತ್ಯಾಃ**—ಪುತ್ರಾರ್ಥಿನಿಯಾದ ವಧ್ರಿಮತಿಯ । **ಹವಂ**—ಆಹ್ವಾನವನ್ನು । **ಶ್ರುತಂ**—ಕೇಳಿದಿರಿ । **ದಶಸ್ಯಂತಾ**—ಸ್ತೋತೃಗಳಿಗೆ ಇಷ್ಟಾರ್ಥ ಪ್ರದರಾಗಿ । **ಶಯವೇ**—ಸ್ತುತಿಕರ್ತನಾದ ಶಯುವಿಗೋಸ್ಕರ । **ಗಾಂ**—ಕರುವನ್ನು ಹಾಕದ ಗೋವನ್ನು । **ಪಿಪ್ಯಥುಃ**—ಕ್ಷೀರದಿಂದ ತುಂಬಿದಿರಿ । **ಇತಿ**—ಇದೇ ಪ್ರಕಾರವಾಗಿ । **ಸುಮತಿಂ**—ಅನುಗ್ರಹ ಬುದ್ಧಿಯನ್ನು । **ಚ್ಯವಾನಾ**—ಪ್ರಕಟಿಸುತ್ತಾ । **ಭುರಣ್ಯಾ**—ಸಕಲ ಯಜ್ಞಕ್ಕೂ ಹೋಗುವವರಾಗಿರಿ.

॥ ಭಾವಾರ್ಥ ॥

ರಥಾರೂಢರಾದ ಎಲೈ ಅಶ್ವಿನೀದೇವತೆಗಳೇ, ಜಯಶಾಲಿಯಾದ ನಿಮ್ಮ ರಥದ ಸಹಾಯದಿಂದ ಮಾರ್ಗ ಮಧ್ಯವಲ್ಲಿದ್ದ ಪರ್ವತವನ್ನು ಕೊರೆದುಕೊಂಡು ಪ್ರವೇಶಿಸಿದಿರಿ. ಕಾಮವರ್ಷಕರಾದ ಎಲೈ ಅಶ್ವಿನೀದೇವತೆಗಳೇ, ಪುತ್ರಾರ್ಥಿನಿಯಾದ ವಧ್ರಿಮತಿಯ ಆಹ್ವಾನವನ್ನು ಕೇಳಿದಿರಿ. ಸ್ತೋತೃಗಳಿಗೆ ಇಷ್ಟಾರ್ಥಪ್ರದವಾಗಿ ಸ್ತುತಿಕರ್ತನಾದ ಶಯುವಿಗಾಗಿ ಕರುವನ್ನು ಹಾಕದ ಗೋವನ್ನು ಕ್ಷೀರದಿಂದ ತುಂಬಿದಿರಿ. ಇದೇ ಪ್ರಕಾರವಾಗಿ ಅನುಗ್ರಹಬುದ್ಧಿಯನ್ನು ಪ್ರಕಟಿಸುತ್ತಾ ಸಲಕ ಯಜ್ಞಕ್ಕೂ ಹೋಗುವವರಾಗಿರಿ.

## English Translation.

Riders in your car, you have penetrated the mountain by your trimphant chariot : showerers (of benefits) you heard the invocation of Vadhrimati : you have nourished, bountiful givers, the cow for' Sayu — and in this manner displaying benevolence are you everywhere present.

॥ ವಿಶೇಷವಿಷಯಗಳು ॥

ವಧ್ರಿಮತಿ ಎಂಬ ಸ್ತ್ರೀಗೆ ಹಿರಣ್ಯಹಸ್ತನೆಂಬ ಪುತ್ರನನ್ನು ಅನುಗ್ರಹಿಸಿದ ವಿಚಾರವು ಋ. ಸಂ. ಭಾಗ 9 ಪುಟ 252 ಮತ್ತು 408ರಲ್ಲಿಯೂ, ಶಯುವೆಂಬ ಋಷಿಯ ಬಂಜೆಯಾದ ಹಸುವನ್ನು ಕರು ಹಾಕಿ ಹಾಲು ಕೊಡು

ವಂತೆ ಮಾಡಿದ ವಿಚಾರವು ಋ. ಸಂ. 8-736, 9-294, 9-440, 13-509ನೇ ಭಾಗ—ಮತ್ತು ಪುಟಗಳಲ್ಲಿಯೂ ವಿವರಿಸಲಾಗಿದೆ.

|| ಸಂಹಿತಾಪಾಠಃ ||

ಯದ್ರೋದಸೀ ಪ್ರದಿವೋ ಅಸ್ತಿ ಭೂಮಾ ಹೇಳೋ ದೇವಾನಾಮುತ ಮರ್ತ್ಯತ್ರಾ ।
ತದಾದಿತ್ಯಾ ವಸವೋ ರುದ್ರಿಯಾಸೋ ರಕ್ಷೋಯುಜೇ ತಪುರಘಂ ದಧಾತ ॥

|| ಪದಪಾಠಃ ||

ಯತ್ । ರೋದಸೀ ಇತಿ । ಪ್ರऽದಿವಃ । ಅಸ್ತಿ । ಭೂಮಾ । ಹೇಳಃ । ದೇವಾನಾಂ । ಉತ । ಮರ್ತ್ಯऽತ್ರಾ ।
ತತ್ । ಆದಿತ್ಯಾಃ । ವಸವಃ । ರುದ್ರಿಯಾಸಃ । ರಕ್ಷಃऽಯುಜೇ । ತಪುಃ । ಅಘಂ । ದಧಾತ ॥ ೮ ॥

|| ಸಾಯಣಭಾಷ್ಯಂ ||

ರೋದಸೀ ಹೇ ದ್ಯಾವಾಪೃಥಿವ್ಯೌ ಹೇ ಆದಿತ್ಯಾ ಹೇ ವಸವೋ ರುದ್ರಿಯಾಸೋ ಹೇ ರುದ್ರಪುತ್ರಾ ಮರುತೋ ಮರ್ತ್ಯತ್ರಾ ಮರ್ತ್ಯೇಷ್ವಶ್ವಿನೋಃ ಪರಿಚಾರಕೇಷು ದೇವಾನಾಂ ಯದ್ಧೇಳಃ ಕ್ರೋಧೋ ಭೂಮಾ ಮಹಾನಸ್ತಿ ತದ್ಧೇಳಸ್ತಪುಸ್ತಾಪಕಂ ರಕ್ಷೋಯುಜೇ ರಕ್ಷೋಭಿರ್ಯುಕ್ತಾಯ ರಕ್ಷಸಾಂ ಸ್ವಾಮಿನೇ ಪ್ರೇರಕಾಯ ವಾಘಮಾಹಂತೃ ದಧಾತ । ಕುರುತ । ಅಥವಾ ರಕ್ಷೋಯುಜೇ ರಕ್ಷೋಭಿರ್ಯುಕ್ತಾಯ ಯಜ್ವನೇऽಘಮಾಹಂತೃ ಕುರುತ ॥

|| ಪ್ರತಿಪದಾರ್ಥ ||

**ಉತ**—ಮತ್ತು । **ರೋದಸೀ**—ಎಲೈ ದ್ಯಾವಾಪೃಥಿವಿಗಳೇ । **ಆದಿತ್ಯಾಃ**—ಎಲೈ ಆದಿತ್ಯರೇ । **ವಸವಃ**—ಎಲೈ ವಸುಸಂಜ್ಞಕರಾದ ದೇವತೆಗಳೇ । **ರುದ್ರಿಯಾಸಃ**—ಎಲೈ ರುದ್ರಪುತ್ರರಾದ ಮರುತ್ತುಗಳೇ । **ಮರ್ತ್ಯತ್ರಾ**—ಅಶ್ವಿನೀದೇವತೆಗಳನ್ನು ಪೂಜಿಸುವ ಮಾನವರ ಮೇಲೆ । **ಪ್ರದಿವಃ**—ಅಂತರಿಕ್ಷದಿಂದ । **ದೇವಾನಾಂ**—ದೇವತೆಗಳಿಂದ ಪ್ರಯುಕ್ತವಾದುದೂ । **ಭೂಮಾ**—ಅತ್ಯಧಿಕವಾದ ಶಕ್ತಿಯುಳ್ಳದ್ದೂ ಆದ । **ಯತ್ ಹೇಳಃ**—ಯಾವ ಕ್ರೋಧವು । **ಅಸ್ತಿ**—ಇರುವುದೋ । **ತಪುಃ**—ದಾಹಾತ್ಮಕವಾದ । **ತತ್**—ಅದೇ ಕ್ರೋಧವನ್ನು । **ರಕ್ಷೋಯುಜೇ**—ರಾಕ್ಷಸರೊಂದಿಗೆ ಕೂಡಿಕೊಂಡಿರುವ ಪುರುಷನಿಗೆ । **ಅಘಂ**—ನಾಶವಾಗುವಂತೆ । **ದಧಾತ**—ಮಾಡಿರಿ.

|| ಭಾವಾರ್ಥ ||

ಎಲೈ ದ್ಯಾವಾಪೃಥಿವಿಗಳೇ, ಎಲೈ ಆದಿತ್ಯರೇ, ಎಲೈ ವಸುಸಂಜ್ಞಕರಾದ ದೇವತೆಗಳೇ, ಎಲೈ ರುದ್ರಪುತ್ರರಾದ ಮರುತ್ತುಗಳೇ, ಅಶ್ವಿನೀದೇವತೆಗಳನ್ನು ಪೂಜಿಸುವ ಮಾನವರ ಮೇಲೆ ಅಂತರಿಕ್ಷದಿಂದ ದೇವತೆಗಳಿಂದ ಪ್ರಯುಕ್ತ

ವಾದುವೂ, ಅತ್ಯಧಿಕವಾದ ಶಕ್ತಿಯುಳ್ಳದ್ದೂ ಆದ ಯಾವ ಕ್ರೋಧವು ಇರುವುದೋ, ದಾಹಾತ್ಮಕವಾದ ಅದೇ ಕ್ರೋಧವನ್ನು ರಾಕ್ಷಸರೊಂದಿಗೆ ಕೂಡಿಕೊಂಡಿರುವ ಪುರುಷನ ಮೇಲೆ ಅವನ ನಾಶಕಾರಕವಾಗಿ ಆಗುವಂತೆ ಮಾಡಿರಿ

## English Translation.

Heaven and Earth, Adityas, Vasus, Maruts, render that dread anger of the gods which (has) of old (been directed) against mortals, destructive and fatal to him who is associated with the Rakshasas.

॥ ಸಂಹಿತಾಪಾಠಃ ॥

ಯ ಈಂ ರಾಜಾನಾವೃತುಥಾ ವಿದಧದ್ರಜಸೋ ಮಿತ್ರೋ ವರುಣಶ್ಚಿಕೇತತ್ ।
ಗಂಭೀರಾಯ ರಕ್ಷಸೇ ಹೇತಿಮಸ್ಯ ದ್ರೋಘಾಯ ಚಿದ್ವಚಸ ಆನವಾಯ ॥

॥ ಪದಪಾಠಃ ॥

ಯಃ । ಈಂ । ರಾಜಾನೌ । ಋತುऽಥಾ । ವಿऽದಧತ್ । ರಜಸಃ । ಮಿತ್ರಃ । ವರುಣಃ । ಚಿಕೇತತ್ ।
ಗಂಭೀರಾಯ । ರಕ್ಷಸೇ । ಹೇತಿಂ । ಅಸ್ಯ । ದ್ರೋಘಾಯ । ಚಿತ್ । ವಚಸೇ । ಆನವಾಯ ॥ ೯ ॥

॥ ಸಾಯಣಭಾಷ್ಯಂ ॥

ಯೋ ನರೋ ರಜಸಃ ಸಮಸ್ತಸ್ಯ ಲೋಕಸ್ಯ । ಲೋಕಾ ರಜಾಂಸ್ಯುಚ್ಯಂತ ಇತಿ ಯಾಸ್ಕೇನೋಕ್ತತ್ವಾತ್ । ರಾಜಾನಾವೀಮೇತಾವಶ್ವಿನಾವೃತುಥಾ ಕಾಲೇ ಕಾಲೇ ವಿದಧತ್ ಪರಿಚರತಿ ತಂ ಮಿತ್ರೋ ವರುಣಶ್ಚ ಚಿಕೇತತ್ । ಜಾನೀಯಾತ್ । ಮಿತ್ರವರುಣಪ್ರಭೃತಯೋ ದೇವಾ ಏನಂ ವಿದುರಿತ್ಯರ್ಥಃ । ಕಿಂಚಾಯಂ ಪರಿಚಾರಕೋ ಗಂಭೀರಾಯ ಮಹಾಬಲಾಯ ರಕ್ಷಸೇ ರಾಕ್ಷಸಾಯ ಹೇತಿಂ ಘಾತಕಮಾಯುಧಮಸ್ಯ । ಅಸ್ಯತಿ । ಕ್ಷಿಪತಿ ॥ ಪ್ರಥಮಪುರುಷಸ್ಯ ಮಧ್ಯಮಪುರುಷೇಣ ವ್ಯತ್ಯಯಃ ॥ ದ್ರೋಘಾಯಾಭಿದ್ರೋಹಾತ್ಮಕಾಯಾನವಾಯ ಮನುಷ್ಯಸಂಬಂಧಿನೇ ವಚಸೇ ಚಿತ್ ವಚನಾಯೈವ ಹೇತಿಮಸ್ಯತಿ । ಮನುಷ್ಯಾಣಾಮಭಿದ್ರೋಹಾಯೈನಮಾಸ್ಕಂದತೀತಿ ॥

॥ ಪ್ರತಿಪದಾರ್ಥ ॥

**ಯಃ**—ಯಾವ ಮಾನವನು । **ರಜಸಃ**—ಸಮಸ್ತ ಲೋಕಕ್ಕೂ । **ರಾಜಾನೌ**—ಈಶ್ವರರಾದ । **ಈಂ**—ಈ ಅಶ್ವಿನೀದೇವತೆಗಳನ್ನು । **ಋತುಥಾ**—ಆಯಾ ಯಜ್ಞಕಾಲಗಳಿಗನುಗುಣವಾಗಿ । **ವಿದಧತ್**—ಪೂಜಿಸುವನೋ (ಅವನನ್ನು) । **ಮಿತ್ರಃ**—ಮಿತ್ರನೂ । **ವರುಣಃ**—ವರುಣನೂ । **ಚಿಕೇತತ್**—ಚೆನ್ನಾಗಿ ಅರಿಯುತ್ತಾರೆ (ಇದೇ ಪೂಜಕನು) । **ಗಂಭೀರಾಯ**—ಅತ್ಯಧಿಕವಾದ ಬಲವುಳ್ಳವನಾದ । **ರಕ್ಷಸೇ**—ಅಸುರನ ಮೇಲೆ ।

**ಹೇತಿಂ**—ನಾಶಕರವಾದ ಆಯುಧವನ್ನು । **ಅಸ್ಯ**—ಪ್ರಯೋಗಿಸಬಲ್ಲನು । **ದ್ರೋಘಾಯ**—ದ್ರೋಹವನ್ನಾಚರಿಸುವ । **ಅನವಾಯ**—ಮಾನವನಿಂದ ಪ್ರಯುಕ್ತವಾದ । **ವಚಸೇ ಚಿತ್**—ನಿಂದಕವಾದ ವಾಕ್ಕುಗಳ ಮೇಲೂ ಪ್ರಯೋಗಿಸಬಲ್ಲನು.

॥ ಭಾವಾರ್ಥ ॥

ಯಾವ ಮಾನವನು ಸಮಸ್ತ ಲೋಕಕ್ಕೂ ಈಶ್ವರರಾದ ಈ ಅಶ್ವಿನೀದೇವತೆಗಳನ್ನು ಆಯಾ ಯಜ್ಞಕಾಲಗಳಿಗನುಗುಣವಾಗಿ ಪೂಜಿಸುವನೋ ಅವನನ್ನು ಮಿತ್ರನೂ, ವರುಣನೂ ಚೆನ್ನಾಗಿ ಅರಿಯುತ್ತಾರೆ. ಇದೇ ಪೂಜಕನು ಅತ್ಯಧಿಕವಾದ ಬಲವುಳ್ಳವನಾದ ಅಸುರನ ಮೇಲೆ ನಾಶಕರವಾದ ಆಯುಧವನ್ನು ಪ್ರಯೋಗಿಸಬಲ್ಲನು. ದ್ರೋಹವನ್ನಾಚರಿಸುವ ಮಾನವನಿಂದ ಪ್ರಯುಕ್ತವಾದ ನಿಂದಕವಾದ ವಾಕ್ಕುಗಳ ಮೇಲೂ ಪ್ರಯೋಗಿಸಬಲ್ಲನು.

English Translation.

Mitra and Varuna recognize him who of all the world worships the royal (Asvins) in due season; he hurls his weapon against the strong Rakshasa, against the malignant menaces of man.

॥ ಸಂಹಿತಾಪಾಠಃ ॥

ಅಂತರೈಶ್ಚಕ್ರೈಸ್ತನಯಾಯ ವರ್ತಿರ್ದ್ಯುಮತಾ ಯಾತಂ ನೃವತಾ ರಥೇನ ।
ಸನುತ್ಯೇನ ತ್ಯಜಸಾ ಮರ್ತ್ಯಸ್ಯ ವನುಷ್ಯತಾಮಪಿ ಶೀರ್ಷಾ ವವೃಕ್ತಂ ॥ ೧೦ ॥

॥ ಪದಪಾಠಃ ॥

ಅಂತರೈಃ । ಚಕ್ರೈಃ । ತನಯಾಯ । ವರ್ತಿಃ । ದ್ಯುಽಮತಾ । ಆ । ಯಾತಂ । ನೃಽವತಾ । ರಥೇನ ।
ಸನುತ್ಯೇನ । ತ್ಯಜಸಾ । ಮರ್ತ್ಯಸ್ಯ । ವನುಷ್ಯತಾಂ । ಅಪಿ । ಶೀರ್ಷಾ । ವವೃಕ್ತಂ ॥ ೧೦ ॥

॥ ಸಾಯಣಭಾಷ್ಯಂ ॥

ಹೇ ಅಶ್ವಿನಾವಂತರೈರನಿಕೃಷ್ಟೈಶ್ಚಕ್ರೈರ್ಯುಕ್ತೇನ ದ್ಯುಮತಾ ದೀಪ್ತಿಮತಾ ನೃವತಾ ನೇತ್ರಾ ಸಾರಥಿನಾ ಯುಕ್ತೇನ । ಯದ್ವಾ । ಅಶ್ವಯುಕ್ತೇನ । ಪತಂಗಾ ನರ ಇತ್ಯಶ್ವನಾಮಸು ಪಾಠಾತ್ । ರಥೇನ ವರ್ತಿರಸ್ಮಾಕಂ ಗೃಹಂ ತನಯಾಯ ತನಯಂ ದಾತುಮಾ ಯಾತಂ । ಅಪಿ ಚ ಸನುತ್ಯೇನ ತಿರೋಹಿತೇನ ತ್ಯಜಸಾ ಕ್ರೋಧೇನ । ಹೃಣಿಸ್ತ್ಯಜ ಇತಿ ಕ್ರೋಧನಾಮಸು ಪಾಠಾತ್ । ಮರ್ತ್ಯಸ್ಯ ಮನುಷ್ಯಸ್ಯ ವನುಷ್ಯತಾಂ ಬಾಧಮಾನಾನಾಂ । ವನುಷ್ಯತಿರ್ಹಂತಿಕರ್ಮೇತಿ ಯಾಸ್ಕೇನೋಕ್ತತ್ವಾತ್ । ಶೀರ್ಷಾ ಶಿರಾಂಸ್ಯಪಿ ವವೃಕ್ತಂ । ಪ್ರವೃಕ್ತಂ ॥

॥ ಪ್ರತಿಪದಾರ್ಥ ॥

(ಎಲೈ ಅಶ್ವಿನೀದೇವತೆಗಳೇ) **ಅಂತರೈಃ**—ನಿಕೃಷ್ಟವಲ್ಲದೇ ಉತ್ತಮವಾದ । **ಚಕ್ರೈಃ**—ಚಕ್ರಗಳಿಂದ ಕೂಡಿದುದೂ । **ದ್ಯುಮತಾ**—ಕಾಂತಿಯುಕ್ತವಾದುದೂ । **ನೃವತಾ**—ಶ್ರೇಷ್ಠವಾದ ಸಾರಥಿಯಿಂದ ಕೂಡಿದುದೂ ಆದ । **ರಥೇನ**—ರಥದೊಡನೆ । **ವರ್ತಿಃ**—ನಮ್ಮ ಯಜ್ಞಗೃಹಕ್ಕೆ । **ತನಯಾಯ**—ಪುತ್ರದಾನಕ್ಕಾಗಿ । **ಆ ಯಾತಂ**—ದಯಮಾಡಿರಿ । **ಸನುತ್ಯೇನ**—ಮೇಲೆ ತೋರ್ಪಡಿಸದೇ ಗೂಢವಾದ । **ತ್ಯಜಸಾ**—ಕ್ರೋಧದಿಂದ । **ಮರ್ತ್ಯಸ್ಯ**—ನಿಮ್ಮನ್ನು ಪೂಜಿಸುವ ಮಾನವನಿಗೆ. । **ವನುಷ್ಯತಾಂ**—ಹಿಂಸೆಮಾಡತಕ್ಕ ಅಸುರರ । **ಶೀರ್ಷಾ**—ಶಿರಸ್ಸುಗಳನ್ನು । **ಅಪಿ ವವೃಕ್ತಂ**—ಭೇದಿಸಿರಿ.

॥ ಭಾವಾರ್ಥ ॥

ಎಲೈ ಅಶ್ವಿನೀದೇವತೆಗಳೇ, ಅತ್ಯುತ್ಕೃಷ್ಟವಾದ ಚಕ್ರಗಳಿಂದ ಕೂಡಿದುದೂ, ಕಾಂತಿಯುಕ್ತವಾದುದೂ, ಶ್ರೇಷ್ಠವಾದ ಸಾರಥಿಯಿಂದ ಕೂಡಿದುದೂ ಆದ ರಥದೊಡನೆ ನಮ್ಮ ಯಜ್ಞ ಗೃಹಕ್ಕೆ ದಯಮಾಡಿ ನಮಗೆ ಪುತ್ರದಾನವನ್ನು ಕೊಡಿರಿ. ನಿಮ್ಮನ್ನು ಪೂಜಿಸುವ ಮಾನವನಿಗೆ ಹಿಂಸೆಮಾಡತಕ್ಕ ಅಸುರರ ಶಿರಸ್ಸುಗಳನ್ನು ಮೇಲೆ ತೋರ್ಪಡಿಸದೇ ಗೂಢವಾಗಿರತಕ್ಕ ಕ್ರೋಧದಿಂದ ಭೇದಿಸಿರಿ.

English Translation.

Come with your shining and well-guided chariot, (fitted) with excellent wheels, to our dwelling, (to bestow upon us) male offspring: cut off with secret indignation the heads of those obstrcting (the adoration)) of the mortal (who worships you).

॥ ಸಂಹಿತಾಪಾಠಃ ॥

**ಆ ಪರಮಾಭಿರುತ ಮಧ್ಯಮಾಭಿರ್ನಿಯುದ್ಭಿರ್ಯಾತಮವಮಾಭಿರರ್ವಾಕ್ ।**
**ದೃಳ್ಹಸ್ಯ ಚಿದ್ಗೋಮತೋ ವಿ ವ್ರಜಸ್ಯ ದುರೋ ವರ್ತಂ ಗೃಣತೇ ಚಿತ್ರರಾತೀ ॥ ೧೧ ॥**

॥ ಪದಪಾಠಃ ॥

ಆ । ಪರಮಾಭಿಃ । ಉತ । ಮಧ್ಯಮಾಭಿಃ । ನಿಯುತ್ಽಭಿಃ । ಯಾತಂ । ಅವಮಾಭಿಃ । ಅರ್ವಾಕ್ ।
ದೃಳ್ಹಸ್ಯ । ಚಿತ್ । ಗೋಽಮತಃ । ವಿ । ವ್ರಜಸ್ಯ । ದುರಃ । ವರ್ತಂ । ಗೃಣತೇ । ಚಿತ್ರರಾತೀ ಇತಿ ಚಿತ್ರಽರಾತೀ ॥ ೧೧ ॥

॥ ಸಾಯಣಭಾಷ್ಯಂ ॥

ಹೇ ಅಶ್ವಿನೌ ಪರಮಾಭಿರುತ್ಕೃಷ್ಟಾಭಿರುತಾಪಿ ಚ ಮಧ್ಯಮಾಭಿರನುತ್ಕೃಷ್ಟಾಭಿರವಮಾಭಿರ್ನಿ-ಕೃಷ್ಟಾಭಿಶ್ಚ ನಿಯುದ್ಭಿರ್ವಾಹೈರರ್ವಾಗಸ್ಮದಭಿಮುಖಮಾ ಯಾತಂ । ದೃಳ್ಹಸ್ಯ ಚಿದ್ದೃಳ್ಹಾಪಿಧಾನಸ್ಯಾಪಿ

**ಗೋಮತೋ ಗೋಯುಕ್ತಸ್ಯ ವ್ರಜಸ್ಯ ಗೋಷ್ಠಸ್ಯ ದುರೋ ದ್ವಾರಾಣಿ ವಿ ವರ್ತಂ । ವಿವೃಣುತಂ । ಕಿಂಚ ಗೃಣತೇ ಸ್ತುವತೇ ಮಹ್ಯಂ ಚಿತ್ರರಾತೀ ವಿಚಿತ್ರದಾನಾ ಭವತಂ ॥**

॥ ಪ್ರತಿಪದಾರ್ಥ ॥

(ಎಲೈ ಅಶ್ವಿನೀ ದೇವತೆಗಳೇ) **ಪರಮಾಭಿಃ**—ಅತ್ಯುತ್ಕೃಷ್ಟವಾದವೂ । **ಉತ**—ಮತ್ತು । **ಮಧ್ಯಮಾಭಿಃ**—ಮಧ್ಯಸ್ಥವಾದವೂ । **ಅವಮಾಭಿಃ**—ಅತಿ ನಿಕೃಷ್ಟವಾದವೂ ಆದ । **ನಿಯುದ್ಭಿಃ**—ಅಶ್ವಗಳೊಡನೆ । **ಅರ್ವಾಕ್**—ನಮಗಭಿಮುಖವಾಗಿ । **ಆ ಯಾತಂ**—ದಯಮಾಡಿರಿ । **ಗೋಮತಃ**—ಗೋಯುಕ್ತವಾದ । **ವ್ರಜಸ್ಯ**—ಕೊಟ್ಟಿಗೆಯ । **ದುರಃ**—ದ್ವಾರಗಳನ್ನು । **ದೃಳ್ಹಸ್ಯ ಚಿತ್**—ಅತ್ಯಂತ ದೃಢವಾಗಿದ್ದರೂ ಸಹ । **ವಿ ವರ್ತಂ**—ತೆಗೆಯಿರಿ । **ಗೃಣತೇ**—ಸ್ತುತಿಕರ್ತನಾದ ನನಗೆ । **ಚಿತ್ರರಾತೀ**—ಅನೇಕವಿಧವಾದ ದಾನವನ್ನು ಕೊಡುವವರಾಗಿ ಆಗಿರಿ.

॥ ಭಾವಾರ್ಥ ॥

ಎಲೈ ಅಶ್ವಿನೀದೇವತೆಗಳೇ, ಅತ್ಯುತ್ಕೃಷ್ಟವಾದವೂ, ಮಧ್ಯಸ್ಥವಾದವೂ, ಅತಿ ನಿಕೃಷ್ಟವಾದವೂ ಆದ ಅಶ್ವಗಳೊಡನೆ ನಮಗಭಿಮುಖವಾಗಿ ದಯಮಾಡಿರಿ. ಅತ್ಯಂತ ದೃಢವಾಗಿದ್ದರೂ ಸಹ ಗೋಯುತವಾದ ಕೊಟ್ಟಿಗೆಯ ದ್ವಾರಗಳನ್ನು ತೆಗೆಯಿರಿ. ಸ್ತುತಿಕರ್ತನಾದ ನನಗೆ ಅನೇಕ ವಿಧವಾದ ದಾನವನ್ನು ಅನುಗ್ರಹಿಸಿರಿ.

### English Translation.

Come down, whether with the most excellent, or middling, or inferior Niyut steeds; set open the doors of the fast-shut stall of the cattle: be bountiful to him who praises you.



## ಅರವತ್ತಮೂರನೆಯ ಸೂಕ್ತವು

। ಸಾಯಣಭಾಷ್ಯಂ ।

**ಕ್ವ ತ್ಯೇತ್ಯೇಕಾದಶರ್ಚಂ ದ್ವಿತೀಯಂ ಸೂಕ್ತಂ ಭರದ್ವಾಜಸ್ಯಾರ್ಷಂ । ಅತ್ರೇಯಮನುಕ್ರಮಣಿಕಾ । ಕ್ವ ತ್ಯೈಕಪದಾಂತಂ ತ್ರೈಷ್ಟುಭಮಿತಿ । ಆ ವಾಂ ಸುಮ್ನ ಇತ್ಯೇಕಾದಶ್ಯೇಕಪದಾ ತ್ರಿಷ್ಟುಪ್ ಶಿಷ್ಟಾಸ್ತ್ರಿಷ್ಟುಭಃ । ಆಶ್ವಿನಂ ತ್ವಿತ್ಯುಕ್ತತ್ವಾದಸ್ಯಾಪಿ ಸೂಕ್ತಸ್ಯಾಶ್ವಿನಾ ದೇವತಾ ॥ ಪ್ರಾತರನುವಾಕಾಶ್ವಿನಶಸ್ತ್ರಯೋಸ್ತ್ರೈಷ್ಟುಭೇ ಛಂದಸಿ ವಿನಿಯೋಗಃ ॥**

ಅನುವಾದವು—**ಕ್ವ ತ್ಯಾ** ಎಂಬ ಈ ಸೂಕ್ತವು ಆರನೆಯ ಅನುವಾಕದಲ್ಲಿ ಎರಡನೆಯ ಸೂಕ್ತವು. ಇದರಲ್ಲಿ ಹನ್ನೊಂದು ಋಕ್ಕುಗಳಿರುವುವು. ಈ ಸೂಕ್ತಕ್ಕೆ ಭರದ್ವಾಜನು ಋಷಿಯು; **ಆ ವಾಂ ಸುಮ್ನೇ** ಎಂಬ ಹನ್ನೊಂದನೆಯ ಋಕ್ಕು ಏಕಪದಾ ಎಂಬ ಛಂದಸ್ಸಿನದು ಉಳಿದ ಋಕ್ಕುಗಳು ತ್ರಿಷ್ಟುಪ್ ಛಂದಸ್ಸಿನವು. ಅನುಕ್ರಮಣಿಕೆಯಲ್ಲಿ—

**ಕ್ವ ತ್ಯೈಕಪದಾಂತಂ ತ್ರೈಷ್ಟುಭಂ** ಎಂದು ಹೇಳಿರುವುದು. ಪ್ರಾತರನುವಾಕ ಮತ್ತು ಆಶ್ವಿನಶಸ್ತ್ರಮಂತ್ರಗಳಲ್ಲಿ ತ್ರಿಷ್ಟುಪ್ ಛಂದಸ್ಸಿನ ಮಂತ್ರಗಳಿಗಾಗಿ ಈ ಸೂಕ್ತದ ವಿನಿಯೋಗವಿರುವುದು.

## ಸೂಕ್ತ—೬೩

ಮಂಡಲ—೬ ॥ ಅನುವಾಕ—೬ ॥ ಸೂಕ್ತ—೬೩ ॥
ಅಷ್ಟಕ—೫ ॥ ಅಧ್ಯಾಯ—೧ ॥ ವರ್ಗ—೩, ೪ ॥

॥ ಸೂಕ್ತದಲ್ಲಿರುವ ಋಕ್ಸಂಖ್ಯೆ—೧೧ ॥
॥ ಋಷಿಃ—ಭರದ್ವಾಜೋ ಬಾರ್ಹಸ್ಪತ್ಯಃ ॥
॥ ದೇವತಾ—ಅಶ್ವಿನೌ ॥
॥ ಛಂದಃ—೧-೧೦. ತ್ರಿಷ್ಟುಪ್ । ೧೧. ಏಕಪದಾ ॥

॥ ಸಂಹಿತಾಪಾಠಃ ॥

ಕ್ವ೧ ತ್ಯಾ ವಲ್ಗೂ ಪುರುಹೂತಾದ್ಯ ದೂತೋ ನ ಸ್ತೋಮೋಽವಿದನ್ನಮ-
ಸ್ವಾನ್ ।
ಆ ಯೋ ಅರ್ವಾಙ್ನಾಸತ್ಯಾ ವವರ್ತ ಪ್ರೇಷ್ಠಾ ಹ್ಯಸಥೋ ಅಸ್ಯ ಮನ್ಮನ್ ॥

॥ ಪದಪಾಠಃ ॥

ಕ್ವ । ತ್ಯಾ । ವಲ್ಗೂ ಇತಿ । ಪುರುಽಹೂತಾ । ಅದ್ಯ । ದೂತಃ । ನ । ಸ್ತೋಮಃ । ಅವಿದತ್ । ನಮಸ್ವಾನ್ ।
ಆ । ಯಃ । ಅರ್ವಾಕ್ । ನಾಸತ್ಯಾ । ವವರ್ತ । ಪ್ರೇಷ್ಠಾ । ಹಿ । ಅಸಥಃ । ಅಸ್ಯ । ಮನ್ಮನ್ ॥ ೧ ॥

॥ ಸಾಯಣಭಾಷ್ಯಂ ॥

**ಕ್ವ ಕುತ್ರ ಸ್ಥಿತೌ ವಲ್ಗೂ ರುಚಿರೌ ಪುರುಹೂತಾ ಬಹುಭಿರಾಹೂತೌ ತ್ಯಾ ತಾವಶ್ವಿನೌ ನಮಸ್ವಾನ್ಹವಿಷಾ ಯುಕ್ತಃ । ನಮ ಆಯುರಿತ್ಯನ್ನನಾಮಸು ಪಾಠಾತ್ । ಸ್ತೋಮಃ ಪಂಚದಶಾದಿಃ ಸ್ತೋಮೋಽದ್ಯ ದೂತೋ ನ ಪ್ರೇರಿತೋ ದೂತ ಇವಾವಿದತ್ । ವಿಂದೇತ್ । ಯಃ ಸ್ತೋಮೋಽರ್ವಾ-ಗಸ್ಮದಭಿಮುಖಂ ನಾಸತ್ಯಾಶ್ವಿನಾವಾ ವವರ್ತ ಆವರ್ತಯತ್ । ಹೇ ಅಶ್ವಿನೌ ಯುವಾಮಸ್ಯ ಸ್ತೋತು-ರ್ಮನ್ಮನ್ ಸ್ತೋತ್ರೇ ಪ್ರೇಷ್ಠಾ ಹಿ ಪ್ರಿಯತಮೌ ಹ್ಯಸಥಃ । ಭವಥಃ ॥**

॥ ಪ್ರತಿಪದಾರ್ಥ ॥

**ಯಃ**—ಯಾವ ಸ್ತೋಮವು । **ನಾಸತ್ಯಾ**—ಅಶ್ವಿನೀದೇವತೆಗಳನ್ನು । **ಅರ್ವಾಕ್**—ನಮಗಭಿಮುಖರಾಗುವಂತೆ । **ಆ ವವರ್ತ**—ತಿರುಗಿಸಬಲ್ಲದೋ ಅಂತಹ । **ನಮಸ್ವಾನ್**—ಹವಿಸ್ಸುಗಳಿಂದ ಕೂಡಿದ । **ಸ್ತೋಮಃ**—ಪಂಚದಶಾದಿ ಸ್ತೋಮವು । **ದೂತೋ ನ**—ಅಪರ ಅನ್ವೇಷಣಕ್ಕಾಗಿ ಕಳುಹಿದ ದೂತನಂತೆ । **ಅದ್ಯ**—ಈ ಕಾಲದಲ್ಲಿ । **ವಲ್ಗೂ**—ಮನೋಹರವಾದ ರೂಪವುಳ್ಳವರೂ । **ಪುರುಹೂತಾ**—ಅನೇಕರಿಂದ ಕರೆಯಲ್ಪಡುವವರೂ ।

**ತ್ಯಾ**—ಪ್ರಸಿದ್ಧರೂ ಆದ ಅಶ್ವಿನೀದೇವತೆಗಳನ್ನು । **ಕ್ವ**—ಯಾವ ಪ್ರದೇಶದಲ್ಲಿರುವವರೆಂದು । **ಅವಿದತ್**—ತಿಳಿಯ ಬಲ್ಲದು । (ಎಲೈ ಅಶ್ವಿನೀದೇವತೆಗಳೇ) **ಅಸ್ಯ**— ಈ ಸ್ತುತಿಕರ್ತನ । **ಮನ್ಮನ್**—ಸ್ತುತಿಯ ವಿಷಯದಲ್ಲಿ । **ಪ್ರೇಷ್ಠಾ ಊ**—ಅತ್ಯಂತಪ್ರಿಯತಮರಾಗಿ । **ಅಸಥಃ**—ಆಗಿರಿ.

॥ ಭಾವಾರ್ಥ ॥

ಯಾವ ಪಂಚದಶಾದಿ ಸ್ತೋಮವು ಅಶ್ವಿನೀದೇವತೆಗಳನ್ನು ನಮಗಭಿಮುಖರಾಗುವಂತೆ ತಿರುಗಿಸಬಲ್ಲದೋ ಅಂತಹ ಪಂಚದಶಾದಿ ಸ್ತೋಮವು ಹವಿಸ್ಸುಗಳಿಂದ ಕೂಡಿಕೊಂಡು ಅವರ ಅನ್ವೇಷಣಕ್ಕಾಗಿ ಕಳುಹಿಸಿದ ದೂತನಂತೆ ಈ ಕಾಲದಲ್ಲಿ ಮನೋಹರವಾದ ರೂಪವುಳ್ಳವರೂ, ಅನೇಕರಿಂದ ಕರೆಯಲ್ಪಡುವವರೂ, ಪ್ರಸಿದ್ಧರೂ ಆದ ಅಶ್ವಿನೀ ದೇವತೆಗಳನ್ನು ಯಾವ ಪ್ರದೇಶದಲ್ಲಿರುವವರೆಂದು ತಿಳಿಯಬಲ್ಲದು. ಎಲೈ ಅಶ್ವಿನೀದೇವತೆಗಳೇ, ಈ ಸ್ತುತಿಕರ್ತನ ಸ್ತುತಿಯ ವಿಷಯದಲ್ಲಿ ಅತ್ಯಂತ ಪ್ರೀತಿಯುತರಾಗಿರಿ.

## English Translation.

Where may our praise and oblations find to-day, for a messenger, those two splendid (Aswins), the invoked of many, and bring the Nasatyas to our presence ? Be propitiated (Aswins) by the adoration of this (your worshipper).

॥ ಸಂಹಿತಾಪಾಠಃ ॥

ಅರಂ ಮೇ ಗಂತಂ ಹವನಾಯಾಸ್ಮೈ ಗೃಣಾನಾ ಯಥಾ ಪಿಬಾಥೋ ಅಂಧಃ ।
ಪರಿ ಹ ತ್ಯದ್ವರ್ತಿರ್ಯಾಥೋ ರಿಷೋ ನ ಯತ್ಪರೋ ನಾಂತರಸ್ತುತುರ್ಯಾತ್ ॥

॥ ಪದಪಾಠಃ ॥

ಅರಂ । ಮೇ । ಗಂತಂ । ಹವನಾಯ । ಅಸ್ಮೈ । ಗೃಣಾನಾ । ಯಥಾ । ಪಿಬಾಥಃ । ಅಂಧಃ ।
ಪರಿ । ಹ । ತ್ಯತ್ । ವರ್ತಿಃ । ಯಾಥಃ । ರಿಷಃ । ನ । ಯತ್ । ಪರಃ । ನ । ಅಂತರಃ । ತುತುರ್ಯಾತ್ ॥

॥ ಸಾಯಣಭಾಷ್ಯಂ ॥

ಹೇ ಅಶ್ವಿನೌ ಯುವಾಂ ಮೇ ಮದೀಯಾಯಾಸ್ಮೈ ಹವನಾಯಾಹ್ವಾನಾಯಾರಂ ಪರ್ಯಾಪ್ತಂ ಗಂತಂ । ಗಚ್ಛತಂ । ಗೃಣಾನಾ ಸ್ತೂಯಮಾನಾವಂಧಃ ಸೋಮಂ ಯಥಾ ಪಿಬಾಥಃ ಪಿಬತಂ । ರಿಷೋ ಹಿಂಸಕಸ್ಯ ಶತ್ರೋಸ್ತ್ಯದ್ವರ್ತಿಸ್ತದ್ಗೃಹಂ ಪರಿ ಯಾಥಃ ಪರಿತೋ ಯಾಥಃ ಯದ್ವರ್ತಿಃ ಪರೋ ವಿಪ್ರಕೃಷ್ಟೋ ನ ತುತುರ್ಯಾತ್ ನ ಹಿಂಸ್ಯಾತ್ । ಅಂತರಃ ಸಂನಿಕೃಷ್ಟೋಽಪಿ ನ ತುತುರ್ಯಾತ್ ।

ಯದ್ವಾ । ತ್ಯದ್ವರ್ತಿಸ್ತದಸ್ಮದೀಯಂ ಗೃಹಂ ರಿಷೋ ಹಿಂಸಕಾತ್ಪರಿ ಯಾಥಃ । ತ್ಯದ್ವರ್ತಿಃ ಪರೋ ವಿಪ್ರಕೃಷ್ಟೋಽಂತರಃ ಸಂನಿಕೃಷ್ಟೋಽಪಿ ನ ತುತುರ್ಯಾತ್ । ಅಯಂ ಭಾವಃ । ಯಥಾಸ್ಮದೀಯಂ ಗೃಹಂ ದೂರಸ್ಥಃ ಸಂನಿಕೃಷ್ಟೋಽಪಿ ನ ಹಿಂಸ್ಯಾತ್ತಥಾ ರಕ್ಷಾಂ ಕುರುಥ ಇತಿ ॥

॥ ಪ್ರತಿಪದಾರ್ಥ ॥

(ಎಲೈ ಅಶ್ವಿನೀದೇವತೆಗಳೇ) **ಗೃಣಾನಾ**—ಸ್ತುತಿಸಲ್ಪಡತಕ್ಕ ನೀವು । **ಯಥಾ**—ಯಾವ ಪ್ರಕಾರವಾಗಿ । **ಅಂಧಃ**—ಸೋಮರಸವನ್ನು । **ಪಿಬಾಥಃ**—ಪಾನಮಾಡುವಿರೋ ಆ ಕಾರಣದಿಂದ । **ಮೇ**—ನನ್ನ । **ಅಸ್ಮೈ ಹವನಾಯ**—ಈ ಆಹ್ವಾನವನ್ನು ಮನ್ನಿಸಿ । **ಅರಂ**—ತೃಪ್ತಿಕರವಾದ ರೀತಿಯಲ್ಲಿ । **ಗಂತಂ**—ದಯಮಾಡಿರಿ । **ಯತ್**—ಯಾವಗೃಹವನ್ನು (ಯಾವ ರೀತಿ) । **ಪರಃ**—ದೂರದಲ್ಲಿರುವ ಶತ್ರುವು । **ನ ತುತುರ್ಯಾತ್**—ಹಿಂಸಿಸಲಾರನೋ । **ಅಂತರ**—ಹತ್ತಿರದಲ್ಲಿರತಕ್ಕ ಶತ್ರುವೂ । **ನ**—ಹಿಂಸಿಸಲಾರನೋ । **ತ್ಯತ್ ವರ್ತಿಃ**—ಅದೇ ಗೃಹವನ್ನು (ಅದೇರೀತಿ) । **ರಿಷಃ**—ಹಿಂಸಕನಾದ ಶತ್ರುವಿನಿಂದ । **ಪರಿ ಯಾಥಃ**—ಪೂರ್ಣವಾಗಿ ರಕ್ಷಿಸಿರಿ.

॥ ಭಾವಾರ್ಥ ॥

ಎಲೈ ಅಶ್ವಿನೀದೇವತೆಗಳೇ, ಸ್ತುತಿಪಾತ್ರರಾದ ನೀವು ಯಾವ ಪ್ರಕಾರವಾಗಿ ಸೋಮರಸವನ್ನು ಪಾನ ಮಾಡುವಿರೋ, ಆ ಕಾರಣದಿಂದ ನನ್ನ ಈ ಸ್ತುತಿಗೆ ತೃಪ್ತಿಕರವಾದ ರೀತಿಯಲ್ಲಿ ದಯಮಾಡಿರಿ. ನಮ್ಮ ಗೃಹವನ್ನು ಯಾವ ರೀತಿ ದೂರದಲ್ಲಿರುವ ಶತ್ರುವಾಗಲಿ ಅಥವಾ ಹತ್ತಿರದ ಶತ್ರುವಾಗಲಿ ಹಿಂಸಿಸಲಾರನೋ ಅದೇ ರೀತಿ ಹಿಂಸಕ ನಾದ ಶತ್ರುವಿನಿಂದ ಅದನ್ನು ಪೂರ್ಣವಾಗಿ ರಕ್ಷಿಸಿರಿ

English Translation.

Praised, that you may drink the (sacrificial) beverage, you come promptly upon this my invocation: keep guard around the dwelling against (all) adversaries, so that neither one that abides at a distance nor a neighbour may do us harm.

॥ ಸಂಹಿತಾಪಾಠಃ ॥

ಅಕಾರಿ ವಾಮಂಧಸೋ ವರೀಮನ್ನಸ್ತಾರಿ ಬರ್ಹಿಃ ಸುಪ್ರಾಯಣತಮಂ ।
ಉತ್ತಾನಹಸ್ತೋ ಯುವಯುರ್ವವಂದಾ ವಾಂ ನಕ್ಷಂತೋ ಅದ್ರಯ ಆಂಜನ್ ॥ ೩ ॥

॥ ಪದಪಾಠಃ ॥

ಅಕಾರಿ । ವಾಂ । ಅಂಧಸಃ । ವರೀಮನ್ । ಅಸ್ತಾರಿ । ಬರ್ಹಿಃ । ಸುಪ್ರಽಅಯನತಮಂ ।
ಉತ್ತಾನಽಹಸ್ತಃ । ಯುವಯುಃ । ವವಂದ । ಆ । ವಾಂ । ನಕ್ಷಂತಃ । ಅದ್ರಯಃ । ಆಂಜನ್ ॥ ೩ ॥

|| ಸಾಯಣಭಾಷ್ಯಂ ||

**ವಾಂ ಯುವಯೋರರ್ಥೇಽಂಧಸಃ ಸೋಮಸ್ಯ ವರೀಮನ್ ವಿಸ್ತೃತೇಽಭಿಷವಾದೌ ಯತ್ಕೃತ್ಯ-ಮಸ್ತಿ ತದಕಾರಿ । ಕೃತಂ । ಸುಪ್ರಾಯಣತಮಂ ಮೃದುತಮಂ ಬರ್ಹಿರಸ್ತಾರಿ । ಸ್ತೀರ್ಣಂ । ಉತ್ತಾನಹಸ್ತಃ ಕೃತಾಂಜಲಿರ್ಯುವಯುರ್ಯುವಾಂ ಕಾಮಯಮಾನೋ ಹೋತಾ ವವಂದ । ಸ್ತೌತಿ । ವಾಂ ಯುವಾಂ ನಕ್ಷಂತೋ ವ್ಯಾಪ್ನುವಂತಃ ॥ ಣಕ್ಷ ಪೃಕ್ಷ ನಕ್ಷ ಗತಾವಿತಿ ಧಾತುಃ ॥ ಅದ್ರಯೋ ಗ್ರಾವಾಣ ಅಂಜನ್ । ಸೋಮರಸಮಾ ಸಮಂತಾದ್ವ್ಯಕ್ತೀಕೃತವಂತಃ ॥**

। ಪ್ರತಿಪದಾರ್ಥ ।

(ಎಲೈ ಅಶ್ವಿನೀ ದೇವತೆಗಳೇ) ವಾಂ—ನಿಮ್ಮನ್ನುದ್ದೇಶಿಸಿ । **ಅಂಧಸಃ**—ಸೋಮರಸದ । **ವರೀಮನ್**—ಅಭಿಷವ (ಹಿಂಡುವ) ಕರ್ಮವು । **ಅಕಾರಿ**—ಮಾಡಲ್ಪಟ್ಟಿದೆ । **ಸುಪ್ರಾಯಣತಮಂ**—ಅತ್ಯಂತ ಮೃದುವಾದ । **ಬರ್ಹಿಃ**—ದರ್ಭಾಸನವು । **ಅಸ್ತಾರಿ**—ವಿಸ್ತೃತವಾಗಿ ಹರಡಿದೆ । **ಉತ್ತಾನಹಸ್ತಃ**—ಕೈಗಳನ್ನು ಮೇಲಕ್ಕೆತ್ತಿ ಜೋಡಿಸಿ । **ಯುವಯುಃ**—ನಿಮ್ಮ ಸಾನ್ನಿಧ್ಯವನ್ನಪೇಕ್ಷಿಸುವ ಹೋತೃವು । **ವವಂದ**—ನಿಮ್ಮನ್ನು ಸ್ತುತಿಸುತ್ತಾನೆ । **ವಾಂ**—ನಿಮಗಾಗಿ । **ನಕ್ಷಂತಃ**—ವಿಸ್ತೃತವಾದ । **ಅದ್ರಯಃ**—ಗ್ರಾವಗಳು (ಹಿಂಡುವ ಕಲ್ಲುಗಳು) । **ಆ ಅಂಜನ್**—ಸೋಮರಸವನ್ನು ಹಿಂಡುತ್ತವೆ.

। ಭಾವಾರ್ಥ ॥

ಎಲೈ ಅಶ್ವಿನೀದೇವತೆಗಳೇ, ನಿಮ್ಮನ್ನುದ್ದೇಶಿಸಿ ಸೋಮರಸದ ಅಭಿಷವಕರ್ಮವು ಮಾಡಲ್ಪಟ್ಟಿದೆ. ಅತ್ಯಂತ ಮೃದುವಾದ ದರ್ಭಾಸನವು ವಿಸ್ತೃತವಾಗಿ ಹರಡಿದೆ. ನಿಮ್ಮ ಸಾನ್ನಿಧ್ಯವನ್ನಪೇಕ್ಷಿಸುವ ಹೋತೃವು ಕೈಗಳನ್ನು ಮೇಲಕ್ಕೆತ್ತಿ ಜೋಡಿಸಿ ನಿಮ್ಮನ್ನು ಸ್ತುತಿಸುತ್ತಾನೆ. ನಿಮಗಾಗಿ ವಿಸ್ತೃತವಾದ ಗ್ರಾವಗಳು ಸೋಮರಸವನ್ನು ಹಿಂಡುತ್ತವೆ.

## English Translation.

(What is essential) for the copious effusion of (the sacrificial) food has been done for you : the very delicate sacred grass has been strewn ; the (priest with) uplifted hands desirous of your presence praises you ; the stones express (the Soma juice), designing it for you.

॥ ಸಂಹಿತಾಪಾಠಃ ॥

ಊರ್ಧ್ವೋ ವಾಮಗ್ನಿರಧ್ವರೇಷ್ವಸ್ಥಾತ್ಪ್ರ ರಾತಿರೇತಿ ಜೂರ್ಣಿನೀ ಘೃತಾಚೀ

ಪ್ರ ಹೋತಾ ಗೂರ್ತಮನಾ ಉರಾಣೋಽಯುಕ್ತ ಯೋ ನಾಸತ್ಯಾ

ಹವೀಮನ್ ॥ ೪ ॥

॥ ಪದಪಾಠಃ ॥

ಊರ್ಧ್ವಃ । ವಾಂ । ಅಗ್ನಿಃ । ಅಧ್ವರೇಷು । ಅಸ್ಥಾತ್ । ಪ್ರ । ರಾತಿಃ । ಏತಿ । ಜೂರ್ಣಿನೀ । ಘೃತಾಚೀ ।

ಪ್ರ । ಹೋತಾ । ಗೂರ್ತಽಮನಾಃ । ಉರಾಣಃ । ಅಯುಕ್ತ । ಯಃ । ನಾಸತ್ಯಾ । ಹವೀಮನ್ ॥ ೪ ॥

॥ ಸಾಯಣಭಾಷ್ಯಂ ॥

ಅಗ್ನಿರ್ವಾಂ ಯುವಯೋರ್ಯಜ್ಞಾರ್ಥಮೂರ್ಧ್ವೋಽಸ್ಥಾತ್ । ಉದತಿಷ್ಠತ್ । ಅಧ್ವರೇಷು ಯಜ್ಞೇಷು ಪ್ರೈತಿ । ಸಮಿದ್ಧ ಆಹವನೀಯಂ ಗಚ್ಛತಿ ಚ । ರಾತಿರ್ಧನಂ ಹವಿರ್ಜೂರ್ಣಿನೀ ಪ್ರಗಾಮಿನೀ । ಜೂರ್ಣಿರ್ಜವತೇರ್ವಾ । ನಿ. ೬-೪ । ಇತಿ ಯಾಸ್ಕೇನೋಕ್ತತ್ವಾತ್ । ಘೃತಾಚೀ ಘೃತೇನಾಕ್ತಾ । ಉಪಸ್ತೀರ್ಣಾಭಿಘಾರಿತೇತ್ಯರ್ಥಃ । ಕಿಂಚ ಹೋತೋರಾಣ ಉರು ಕುರ್ವಾಣಃ ಪ್ರ ಗೂರ್ತಮನಾಃ ಪ್ರಕರ್ಷಣೋದ್ಯುಕ್ತಮನಾ ಭವತಿ ಯೋ ಹೋತಾ ನಾಸತ್ಯಾಶ್ವಿನೌ ಹವೀಮನ್ನಾಹ್ವಾನೇ ಸ್ತೋತ್ರೇ ವಾಯುಕ್ತ ಯೋಜಯತಿ ॥

॥ ಪ್ರತಿಪದಾರ್ಥ ॥

(ಎಲೈ ಅಶ್ವಿನೀದೇವತೆಗಳೇ) **ಅಗ್ನಿಃ**—ಅಗ್ನಿಯು । **ವಾಂ**—ನಿಮ್ಮ ಪೂಜಾರ್ಥವಾಗಿ । **ಊರ್ಧ್ವಃ**—ಉನ್ನತವಾಗಿ । **ಅಸ್ಥಾತ್**—ಪ್ರಜ್ವಲಿತನಾಗಿ ಬೆಳಗುತಿದ್ದಾನೆ । **ಅಧ್ವರೇಷು**—ಯಜ್ಞಗಳಲ್ಲಿ । **ಪ್ರ ಏತಿ**—ಸುತ್ತುವರಿದು ಸಂಚರಿಸುತ್ತಾನೆ । **ಘೃತಾಚೀ**—ಘೃತದಿಂದ ಸಿಕ್ತವಾದ । **ರಾತಿಃ**—ಹವಿಸ್ಸು । **ಜೂರ್ಣಿನೀ**—ವೇಗವಾಗಿ ಪ್ರವಹಿಸುತ್ತದೆ । **ಯಃ**—ಯಾವ ಹೋತೃವು । **ನಾಸತ್ಯಾ**—ಅಶ್ವಿನೀದೇವತೆಗಳನ್ನು । **ಹವೀಮನ್**—ಆಹ್ವಾನರೂಪವಾದ ಸ್ತುತಿಯೊಡನೆ । **ಅಯುಕ್ತ**—ಯೋಜಿಸುವನೋ ಅಂತಹ । **ಹೋತಾ**—ಹೋತೃವು । **ಉರಾಣಃ**—ವಿಸ್ತೃತವಾದ ಶ್ರದ್ಧೆಯುಳ್ಳವನಾಗಿಯೂ । **ಪ್ರ ಗೂರ್ತಮನಾಃ**—ಪೂಜಾನಿರತವಾದ ಮನಸ್ಸುಳ್ಳವನಾಗಿಯೂ ಇರುತ್ತಾನೆ.

॥ ಭಾವಾರ್ಥ ॥

ಎಲೈ ಅಶ್ವಿನೀದೇವತೆಗಳೇ, ನಿಮ್ಮ ಪೂಜಾರ್ಥವಾಗಿ ಅಗ್ನಿಯು ಉನ್ನತವಾದ ಪ್ರದೇಶದಲ್ಲಿ ಪ್ರಜ್ವಲಿತನಾಗಿ ಸ್ಥಿತನಾಗಿದ್ದಾನೆ. ಯಜ್ಞಪ್ರದೇಶಗಳಲ್ಲೆಲ್ಲಾ ಸುತ್ತುವರಿದು ಸಂಚರಿಸುತ್ತಾನೆ. ಘೃತದಿಂದ ಸಿಕ್ತವಾದ ಹವಿಸ್ಸು ವೇಗವಾಗಿ ಪ್ರವಹಿಸುತ್ತದೆ. ಯಾವ ಹೋತೃವು ಅಶ್ವಿನೀದೇವತೆಗಳನ್ನು ಆಹ್ವಾನರೂಪವಾದ ಸ್ತುತಿಯೊಡನೆ ಯೋಜಿಸುವನೋ ಅಂತಹ ಹೋತೃವು ವಿಸ್ತೃತವಾದ ಶ್ರದ್ಧೆಯುಳ್ಳವನಾಗಿಯೂ ಪೂಜಾನಿರತವಾದ ಮನಸ್ಸುಳ್ಳವನಾಗಿಯೂ ಇರುತ್ತಾನೆ.

## English Translation.

Agni is above for you : he is present at (your) sacrifices : the oblation flows diffusive and redolent of ghi : diligent and zealous is the ministrant priest who is engaged, Nasatyas, in your invocation.

॥ ಸಂಹಿತಾಪಾಠಃ ॥

ಅಧಿ ಶ್ರಿಯೇ ದುಹಿತಾ ಸೂರ್ಯಸ್ಯ ರಥಂ ತಸ್ಥೌ ಪುರುಭುಜಾ ಶತೋತಿಂ ।
ಪ್ರ ಮಾಯಾಭಿರ್ಮಾಯಿನಾ ಭೂತಮತ್ರ ನರಾ ನೃತೂ ಜನಿಮನ್ಯಜ್ಞಿ-
ಯಾನಾಂ ॥ ೫ ॥

॥ ಪದಪಾಠಃ ॥

ಅಧಿ । ಶ್ರಿಯೇ । ದುಹಿತಾ । ಸೂರ್ಯಸ್ಯ । ರಥಂ । ತಸ್ಥೌ । ಪುರುಽಭುಜಾ । ಶತಽಊತಿಂ ।
ಪ್ರ । ಮಾಯಾಭಿಃ । ಮಾಯಿನಾ । ಭೂತಂ । ಅತ್ರ । ನರಾ । ನೃತೂ ಇತಿ । ಜನಿಮನ್ । ಯಜ್ಞಿಯಾನಾಂ ॥

॥ ಸಾಯಣಭಾಷ್ಯಂ ॥

ಪುರುಭುಜಾ ಹೇ ಪೂರ್ಣಭುಜೌ ಬಹೂನಾಂ ರಕ್ಷಕೌ ವಾಶ್ವಿನೌ ಯುವಯೋಃ ಶತೋತಿಂ ಬಹುರಕ್ಷಕಂ ಬಹುಗಮನಂ ವಾ ರಥಂ ಸೂರ್ಯಸ್ಯ ದುಹಿತಾ ಸೂರ್ಯಾ ಶ್ರಿಯೇ ಶ್ರಯಿತುಮಧಿ ತಸ್ಥೌ । ಅಧ್ಯತಿಷ್ಠತ್ । ಅಪಿ ಚ ಯಜ್ಞಿಯಾನಾಂ ದೇವಾನಾಮತ್ರ ಜನಿಮನ್ನಸ್ಮಿನ್ ಜನ್ಮನಿ ಪ್ರಾದುರ್ಭಾವೇ ಮಾಯಾಭಿಃ ಪ್ರಜ್ಞಾನೈಃ । ಶಚೀ ಮಾಯೇತಿ ಪ್ರಜ್ಞಾನಾಮಸು ಪಾಠಾತ್ । ಮಾಯಿನೌ ಪ್ರಜ್ಞಾವಂತೌ ನರಾ ನೇತಾರೌ ನೃತೂ ನೃತ್ಯಂತೌ ಭೂತಂ । ಭವತಂ । ಯದ್ವಾ । ಹೇ ಮಾಯಿನೌ ಪ್ರಾಜ್ಞೌ ನರೌ ನೇತಾರೌ ನೃತೂ ನೃತ್ಯಂತಾವಶ್ವಿನೌ ಯಜ್ಞಿಯಾನಾಂ ದೇವಾನಾಮತ್ರ ಜನಿಮನ್ ಜನ್ಮನಿ ಪ್ರಾದುರ್ಭಾವೇ ಪ್ರ ಭೂತಂ ಪ್ರಾಜ್ಞತಮಮುಗ್ನ್ಯಾದಿಕಂ ದೇವಂ ಮಾಯಾಭಿಃ ಪ್ರಜ್ಞಾನೈಃ ಕೌಶಲೈರ್ವಾ ಜಿತವಂತೌ ಸ್ಥ ಇತ್ಯರ್ಥಃ । ಅಯಮರ್ಥಃ ಪ್ರಜಾಪತಿರ್ವೈ ಸೋಮಾಯ ರಾಜ್ಞೇ ದುಹಿತರಂ ಪ್ರಾಯಚ್ಛತ್ಸೂರ್ಯಾಂ ಸಾವಿತ್ರೀಂ । ಐ. ಬ್ರಾ. ೪ ೭ । ಇತ್ಯಾದಿನಾ ಸ್ಪಷ್ಟೀಕೃತಃ ॥

॥ ಪ್ರತಿಪದಾರ್ಥ ॥

**ಪುರುಭುಜಾ**—ಅನೇಕರಿಗೆ ಪಾಲಕರಾದ ಎಲೈ ಅಶ್ವಿನೀದೇವತೆಗಳೇ । **ಶತೋತಿಂ**— ನೂರಾರು ಭಕ್ತರಿಗೆ ರಕ್ಷಕವಾದ । **ರಥಂ**—ನಿಮ್ಮ ರಥವನ್ನು । **ಸೂರ್ಯಸ್ಯ**—ಸೂರ್ಯನ । **ದುಹಿತಾ**—ಮಗಳಾದ ಸೂರ್ಯಾ ದೇವಿಯು । **ಶ್ರಿಯೇ**—ನಿಮ್ಮನ್ನು ಆಶ್ರಯಿಸಿ । **ಅಧಿ ತಸ್ಥೌ**—ಹತ್ತಿ ಕುಳಿತಿದ್ದಾಳೆ । **ಮಾಯಿನಾ**— ಪ್ರಜ್ಞಾವಂತರೂ । **ನರಾ**—ನೇತೃಗಳೂ ಆದ ಎಲೈ ಅಶ್ವಿನೀದೇವತೆಗಳೇ । **ಅತ್ರ ಜನಿಮನ್**—ಈ ಯಜ್ಞದಲ್ಲಿ ಆವಿರ್ಭೂತರಾಗಿರುವ । **ಯಜ್ಞಿಯಾನಾಂ**—ಪೂಜಾರ್ಹರಾದ ದೇವತೆಗಳ ನಡುವೆ । **ಮಾಯಾಭಿಃ**—ನಿಮ್ಮ ಪ್ರಜ್ಞೆಗಳಿಂದ । **ನೃತೂ**—ನೀವೇ ಅತ್ಯಧಿಕವಾದ ಕುಶಲತೆಯುಳ್ಳವರಾಗಿಯೂ । **ಪ್ರ**—ಉತ್ಕೃಷ್ಟರಾಗಿಯೂ । **ಭೂತಂ**—ಇರುವವರಾಗಿ

॥ ಭಾವಾರ್ಥ ॥

ಅನೇಕರಿಗೆ ಪಾಲಕರಾದ ಎಲೈ ಅಶ್ವಿನೀದೇವತೆಗಳೇ, ನೂರಾರು ಭಕ್ತರಿಗೆ ರಕ್ಷಕವಾದ ನಿಮ್ಮ ರಥವನ್ನು ಸೂರ್ಯನ ಮಗಳಾದ ಸೂರ್ಯಾದೇವಿಯು ನಿಮ್ಮನ್ನು ಆಶ್ರಯಿಸಿ ಹತ್ತಿ ಕುಳಿತಿದ್ದಾಳೆ. ಪ್ರಜ್ಞಾವಂತರೂ, ನೇತೃಗಳೂ ಆದ ಎಲೈ ಅಶ್ವಿನೀ ದೇವತೆಗಳೇ, ಈ ಯಜ್ಞದಲ್ಲಿ ಆವಿರ್ಭೂತರಾಗಿರುವ ಪೂಜಾರ್ಹವಾದ ದೇವತೆಗಳ ನಡುವೆ ನಿಮ್ಮ ಪ್ರಜ್ಞೆಗಳಿಂದ ನೀವೇ ಅತ್ಯಧಿಕವಾದ ಕುಶಲತೆಯುಳ್ಳವರಾಗಿಯೂ ಉತ್ಕೃಷ್ಟರಾಗಿಯೂ ಇರುವವರಾಗಿರಿ.

## English Translation.

Protectors of many, the daughter of Surya ascended your chariot, the defence of hundreds, for refuge : sagacious leaders and guides, you have excelled by your devices (all others) at this appearance of the adorable (deities).

॥ ವಿಶೇಷವಿಷಯಗಳು ॥

ಸೂರ್ಯಪುತ್ರಿಯು ಅಶ್ವಿನೀದೇವತೆಗಳ ರಥವನ್ನು ಹತ್ತಿಕುಳಿತಿದ್ದಳೆಂಬ ವಿಚಾರದಲ್ಲಿ ವಿಸ್ತಾರವಾದ ವಿವರಣೆಗಾಗಿ ಋ. ಸಂ. ಭಾಗ ೯ ಪುಟ 365 ಮತ್ತು 471 ಪುಟಗಳನ್ನು ನೋಡಿ

॥ ಸಂಹಿತಾಪಾಠಃ ॥

ಯುವಂ ಶ್ರೀಭಿರ್ದರ್ಶತಾಭಿರಾಭಿಃ ಶುಭೇ ಪುಷ್ಟಿಮೂಹಥುಃ ಸೂರ್ಯಾ-
ಯಾಃ ।
ಪ್ರ ವಾಂ ವಯೋ ವಪುಷೇಽನು ಪಪ್ತನ್ನಕ್ಷದ್ವಾಣೀ ಸುಷ್ಟುತಾ ಧಿಷ್ಣ್ಯ
ವಾಂ ॥ ೬ ॥

॥ ಪದಪಾಠಃ ॥

ಯುವಂ । ಶ್ರೀಭಿಃ । ದರ್ಶತಾಭಿಃ । ಆಭಿಃ । ಶುಭೇ । ಪುಷ್ಟಿಂ । ಊಹಥುಃ । ಸೂರ್ಯಾಯಾಃ ।
ಪ್ರ । ವಾಂ । ವಯಃ । ವಪುಷೇ । ಅನು । ಪಪ್ತನ್ । ನಕ್ಷತ್ । ವಾಣೀ । ಸುಽಸ್ತುತಾ । ಧಿಷ್ಣ್ಯಾ । ವಾಂ ॥

॥ ಸಾಯಣಭಾಷ್ಯಂ ॥

ಹೇ ಅಶ್ವಿನೌ ಯುವಂ ಯುವಾಂ ದರ್ಶತಾಭಿರ್ದರ್ಶನೀಯಾಭಿರಾಭಿಃ ಶ್ರೀಮತಾಂ ಪರಿದೃಶ್ಯಮಾನಾಭಿಃ ಶ್ರೀಭಿರ್ಲಕ್ಷ್ಮೀಭಿಃ ಕಾಂತಿಭಿರ್ವಾ ಸೂರ್ಯಾಯಾ ಯುವಯೋಃ ಪತ್ನ್ಯಾಃ ಶುಭೇ ಶೋಭನಾರ್ಥಂ ಪುಷ್ಟಿಂ ಪೂರ್ತಿಮೂಹಥುಃ । ಪ್ರಾಪಯಥಃ । ಕಿಂಚ ವಾಂ ಯುವಾಂ ವಯೋಽಶ್ವಾ ವಪುಷೇ ಶೋಭಾಯೈ ಪ್ರಾನು ಪಪ್ತನ್ । ಪ್ರಕರ್ಷೇಣಾನ್ವಪತನ್ । ಅಪಿ ಚ ಹೇ ಧಿಷ್ಣ್ಯಾ ಸ್ತುತ್ಯರ್ಹಾವಶ್ವಿನೌ ವಾಂ ಯುವಾಂ ಸುಷ್ಟುತಾ ವಾಣ್ಯೃಷೀಣಾಂ ಸ್ತುತಿರ್ನಕ್ಷತ್ । ವ್ಯಾಪ್ನೋತಿ ॥

॥ ಪ್ರತಿಪದಾರ್ಥ ॥

(ಎಲೈ ಅಶ್ವಿನೀದೇವತೆಗಳೇ) **ಯುವಂ**—ನೀವಿಬ್ಬರೂ | **ದರ್ಶತಾಭಿಃ**—ಆಕರ್ಷಕವಾದ | **ಅಭಿಃ ಶ್ರೀಭಿಃ**—ಈ ಕಾಂತಿಗಳಿಂದ | **ಸೂರ್ಯಾಯಾಃ**—ಸೂರ್ಯಾದೇವಿಗೆ | **ಶುಭೇ**—ಮಂಗಳಾರ್ಥವಾದ | **ಪುಷ್ಟಿಂ**—ಪೌಷ್ಕಲ್ಯವನ್ನು | **ಊಹಥುಃ**—ಹೊಂದಿಸಿದ್ದೀರಿ | **ವಾಂ**—ನಿಮ್ಮ | **ವಯಃ**—ಅಶ್ವಗಳು | **ವಪುಷೇ**—ಶೋಭನಾರ್ಥವಾಗಿ | **ಪ್ರ ಅನು ಪಪ್ತನ್**—ಅತ್ಯತಿಶಯವಾಗಿ ಓಡಿಬರುತ್ತವೆ | **ಧಿಷ್ಣ್ಯಾ**—ಸ್ತುತ್ಯರ್ಹರಾದ ಎಲೈ ಅಶ್ವಿನೀದೇವತೆಗಳೇ | **ವಾಂ**—ನಿಮ್ಮನ್ನುದ್ದೇಶಿಸಿದುದೂ | **ಸುಷ್ಟುತಾ**—ಸ್ತುತಿರೂಪವಾದುದೂ ಆದ | **ವಾಣೀ**—ಋಷಿಗಳ ವಾಕ್ಕು | **ನಕ್ಷತ್**—ನಿಮ್ಮನ್ನು ವ್ಯಾಪಿಸುತ್ತದೆ.

॥ ಭಾವಾರ್ಥ ॥

ಎಲೈ ಅಶ್ವಿನೀದೇವತೆಗಳೇ, ನೀವಿಬ್ಬರೂ ಆಕರ್ಷಕವಾದ ಈ ಕಾಂತಿಗಳಿಂದ ಸೂರ್ಯಾದೇವಿಗೆ ಮಂಗಳಾರ್ಥವಾದ ಪೌಷ್ಕಲ್ಯವನ್ನು ಹೊಂದಿಸಿದ್ದೀರಿ. ನಿಮ್ಮ ಅಶ್ವಗಳು ಶೋಭನಾರ್ಥವಾಗಿಯೂ ಅತ್ಯತಿಶಯವಾಗಿಯೂ ಓಡಿಬರುತ್ತವೆ. ಸ್ತುತ್ಯರ್ಹರಾದ ಎಲೈ ಅಶ್ವಿನೀದೇವತೆಗಳೇ, ನಿಮ್ಮನ್ನುದ್ದೇಶಿಸಿದುದೂ, ಸ್ತುತಿರೂಪವಾದುದೂ ಆದ ಋಷಿಗಳ ವಾಕ್ಕು ನಿಮ್ಮನ್ನು ವ್ಯಾಪಿಸುತ್ತದೆ.

English Translation.

You have provided with these beautiful splendours, gratification for the enjoyment of Surya, your horses have descended for felicity, deserving of praise, the laudation (of the sages) has reached you glorified.

॥ ಸಂಹಿತಾಪಾಠಃ ॥

ಆ ವಾಂ ವಯೋಽಶ್ವಾಸೋ ವಹಿಷ್ಠಾ ಅಭಿ ಪ್ರಯೋ ನಾಸತ್ಯಾ ವಹಂತು ।
ಪ್ರ ವಾಂ ರಥೋ ಮನೋಜವಾ ಅಸರ್ಜೀಷಃ ಪೃಕ್ಷ ಇಷಿಧೋ ಅನು ಪೂರ್ವೀಃ ॥ ೭ ॥

॥ ಪದಪಾಠಃ ॥

ಆ । ವಾಂ । ವಯಃ । ಅಶ್ವಾಸಃ । ವಹಿಷ್ಠಾಃ । ಅಭಿ । ಪ್ರಯಃ । ನಾಸತ್ಯಾ । ವಹಂತು ।
ಪ್ರ । ವಾಂ । ರಥಃ । ಮನಃಽಜವಾಃ । ಅಸರ್ಜಿ । ಇಷಃ । ಪೃಕ್ಷಃ । ಇಷಿಧಃ । ಅನು । ಪೂರ್ವೀಃ ॥ ೭ ॥

॥ ಸಾಯಣಭಾಷ್ಯಂ ॥

ಹೇ ನಾಸತ್ಯಾ ವಾಂ ಯುವಾಂ ವಯೋ ಗಂತಾರೋ ವಹಿಷ್ಠಾ ವೋಢೃತಮಾ ಅಶ್ವಾಸೋಽಶ್ವಾಃ ಪ್ರಯಃ ಸೋಮರೂಪಮನ್ನಮಭ್ಯಾ ವಹಂತು । ಪ್ರಾಪಯಂತು । ವಾಂ ಯುವಯೋರ್ಮನೋಜವಾ

ಮನೋವೇಗೋ ರಥಃ ಪೃಕ್ಷಃ ಸಂಪರ್ಚನೀಯಾ ಇಷಿಧ ಏಷಣೀಯಾಃ ಪೂರ್ವೀರ್ಬಹ್ವೀರಿಷೋಽನ್ನಾನಿ ಸೋಮಾನನು ಪ್ರಾಸರ್ಜಿ । ವಿಸೃಷ್ಟಃ ॥

॥ ಪ್ರತಿಪದಾರ್ಥ ॥

**ನಾಸತ್ಯಾ**—ಎಲೈ ಅಶ್ವಿನೀದೇವತೆಗಳೇ । **ವಯಃ**—ವೇಗಗಾಮಿಗಳೂ । **ವಹಿಷ್ಠಾಃ**—ಅತಿಶಯವಾಗಿ ವಹಿಸುವುವೂ ಆದ । **ವಾಂ ಅಶ್ವಾಸಃ**—ನಿಮ್ಮ ಅಶ್ವಗಳು । **ಪ್ರಯಃ ಅಭಿ**—ಸೋಮರೂಪವಾದ ಅನ್ನಕ್ಕಭಿ ಮುಖವಾಗಿ । **ಆ ವಹಂತು**—ನಿಮ್ಮನ್ನು ಕರೆತರಲಿ । **ವಾಂ**—ನಿಮ್ಮ । **ಮನೋಜವಾಃ**—ಮನೋವೇಗ ವುಳ್ಳ । **ರಥಃ**—ರಥವು । **ಪೃಕ್ಷಃ**—ಪುಷ್ಕಲವಾದುದೂ । **ಇಷಿಧಃ**— ಇಷ್ಟವಾದುದೂ । **ಪೂರ್ವೀಃ**—ಪ್ರಭೂತವಾದುದೂ ಆದ । **ಇಷಃ**—ಅನ್ನಗಳನ್ನು । **ಅನು ಪ್ರ ಅಸರ್ಜಿ**—ಸುರಿಸಿದೆ.

॥ ಭಾವಾರ್ಥ ॥

ಎಲೈ ಅಶ್ವಿನೀದೇವತೆಗಳೇ, ವೇಗಗಾಮಿಗಳೂ, ನಿಮ್ಮನ್ನು ಅತಿಶಯವಾಗಿ ವಹಿಸುವುವೂ ಆದ ನಿಮ್ಮ ಅಶ್ವಗಳು ಸೋಮರೂಪವಾದ ಅನ್ನಕ್ಕಭಿಮುಖವಾಗಿ ನಿಮ್ಮನ್ನು ಕರೆತರಲಿ. ಮನೋವೇಗವುಳ್ಳ ನಿಮ್ಮ ರಥವು ಪುಷ್ಕಲವಾದುದೂ, ಇಷ್ಟವಾದುದೂ ಪ್ರಭೂತವಾದುದೂ ಆದ ಅನ್ನವನ್ನು ಸುರಿಸಿದೆ.

English Translation.

May your rapid burden-bearing steeds bring you Nasatyas to the (sacrificial) food : your chariot swift as thought has dispensed substantial, desirable, abundant food.

॥ ಸಂಹಿತಾಪಾಠಃ ॥

ಪುರು ಹಿ ವಾಂ ಪುರುಭುಜಾ ದೇಷ್ಣಂ ಧೇನುಂ ನ ಇಷಂ ಪಿನ್ವತಮಸಕ್ರಾಂ ।
ಸ್ತುತಶ್ಚ ವಾಂ ಮಾಧ್ವೀ ಸುಷ್ಟುತಿಶ್ಚ ರಸಾಶ್ಚ ಯೇ ವಾಮನು ರಾತಿಮಗ್ಮನ್ ॥

॥ ಪದಪಾಠಃ ॥

ಪುರು । ಹಿ । ವಾಂ । ಪುರುಽಭುಜಾ । ದೇಷ್ಣಂ । ಧೇನುಂ । ನಃ । ಇಷಂ । ಪಿನ್ವತಂ । ಅಸಕ್ರಾಂ । ಸ್ತುತಃ । ಚ । ವಾಂ । ಮಾಧ್ವೀ ಇತಿ । ಸುಽಸ್ತುತಿಃ । ಚ । ರಸಾಃ । ಚ । ಯೇ । ವಾಂ । ಅನು । ರಾತಿಂ । ಅಗ್ಮನ್ ॥ ೮ ॥

॥ ಸಾಯಣಭಾಷ್ಯಂ ॥

ಪುರುಭುಜಾ ಹೇ ಪೂರ್ಣಭುಜೌ ಬಹುಪಾಲಕೌ ವಾ ವಾಂ ಯುವಯೋರ್ದೇಷ್ಣಂ ದಾತವ್ಯಂ ಧನಂ ಪುರು ಬಹು ಹಿ ಭವತಿ । ಅತಃ ಕಾರಣಾನ್ನೋಽಸ್ಮಭ್ಯಂ ಧೇನುಂ ಪ್ರೀಣಯಿತ್ರೀಮಸಕ್ರಾಂ

**ಮತ್ತೋಽನ್ಯತ್ರಾಸಂಕ್ರಮಣೀಂ । ಅಸಕ್ರಾಮಸಂಕ್ರಮಣೀಂ । ನಿ. ೬-೨೯ । ಇತಿ ಯಾಸ್ಕೇನೋಕ್ತತ್ವಾತ್ । ಇಷಮನ್ನಂ ಪಿನ್ವತಂ । ಪ್ರಯಚ್ಛತಂ । ಯದ್ವಾ । ಇಷಮೇಷಣೀಯಾಂ ಧೇನುಮಿತ್ಯನ್ವಯಃ । ಕಿಂಚ ವಾಂ ಸ್ತುತಃ । ಸ್ತುವಂತೀತಿ ಸ್ತುತಃ ಸ್ತೋತಾರಃ । ಸಂತಿ । ಮಾಧ್ವೀ ಮಾದಯಿತಾರಾವಶ್ವಿನೌ ಸುಷ್ಟುತಿಃ ಶೋಭನಾ ಸ್ತುತಿಶ್ಚ ಸ್ತೋತೃಷು ಭವತಿ । ರಸಾಃ ಸೋಮರಸಾಶ್ಚ ಸಂತಿ । ಯೇ ರಸಾ ವಾಂ ಯುವಯೋ ರಾತಿಂ ದಾನಮನೂದ್ದಿಶ್ಯಾಗ್ಮನ್ ದೇವಯಜನಂ ಪ್ರಾಪ್ತಾಃ । ಅಯಂ ಭಾವಃ । ಸುಷ್ಟುತಿಂ ಶ್ರುತ್ವಾ ದೇವಯಜನಂ ಪ್ರಾಪ್ತಾನ್ ಸೋಮರಸಾನ್ ಪೀತ್ವಾ ಸ್ತೋತೃಭ್ಯಃ ಕಾಮಾನ್ಪ್ರಯಚ್ಛತಮಿತಿ ಶೇಷಃ ॥**

॥ ಪ್ರತಿಪದಾರ್ಥ ॥

**ಪುರುಭುಜಾ**—ಅನೇಕರಿಗೆ ಪಾಲಕರಾದ ಎಲೈ ಅಶ್ವಿನೀದೇವತೆಗಳೇ। **ವಾಂ**—ನಿಮ್ಮಿಂದ। **ದೇಷ್ಣಂ**—ಕೊಡಲ್ಪಡಬೇಕಾದ ಧನವು । **ಪುರು ಹಿ**—ಅತ್ಯಧಿಕವಾಗಿದೆ (ಆದುದರಿಂದ) । **ನಃ**—ನಮಗೆ । **ಧೇನುಂ**—ತೃಪ್ತಿಕರವಾದುದೂ। **ಅಸಕ್ರಾಂ**—ಮತ್ತೊಬ್ಬರಿಗೆ ಸೇರದಿರುವುದೂ ಆದ। **ಇಷಂ**—ಅನ್ನವನ್ನು । **ಪಿನ್ವತಂ**—ಒದಗಿಸಿ ಕೊಡಿರಿ (ಅಥವಾ) । **ಅಸಕ್ರಾಂ**—ಯಾವಾಗಲೂ ಹಾಲನ್ನು ಕೊಡುತ್ತಿರುವ । **ಧೇನುಂ ನ**—ಗೋವಿನಂತಿರುವ (ಎಂದರೆ ಯಾವಾಗಲೂ ಕಮ್ಮಿಯಾಗದಿರುವ) । **ಇಷಂ**—ಅನ್ನವನ್ನು । **ಪಿನ್ವತಂ**—ಒದಗಿಸಿ ಕೊಡಿ । **ಮಾಧ್ವೀ**—ಸಂತೋಷಕಾರಕರಾದ ಎಲೈ ಅಶ್ವಿನೀದೇವತೆಗಳೇ । **ವಾಂ**—ನಿಮ್ಮನ್ನು । **ಸ್ತುತಃ**—ಸ್ತೋತೃಗಳು ಸ್ತುತಿಸುತ್ತಾರೆ । **ಸುಷ್ಟುತಿಃ ಚ**—ಸ್ತೋತೃಗಳಲ್ಲಿ ಅತ್ಯುತ್ತಮವಾದ ಸ್ತುತಿಯೂ ಇರುತ್ತದೆ । **ಯೇ**—ಯಾವ ಸೋಮರಸಗಳು । **ವಾಂ**—ನಿಮ್ಮ ! **ರಾತಿಂ ಅನು**—ದಾನವನ್ನುದ್ದೇಶಿಸಿ । **ಅಗ್ಮನ್**—ದೇವ ಗೃಹವನ್ನು ಸೇರಿವೆಯೋ । **ರಸಾಃ ಚ**—ಅಂತಹ ಸೋಮರಸಗಳೂ ಸಿದ್ಧವಾಗಿವೆ.

॥ ಭಾವಾರ್ಥ ॥

ಬಹುಜನರ ಪಾಲಕರಾದ ಎಲೈ ಅಶ್ವಿನೀದೇವತೆಗಳೇ, ನಿಮ್ಮಿಂದ ಕೊಡಲ್ಪಡಬೇಕಾದ ಧನವು ಅತ್ಯಧಿಕವಾಗಿದೆ. ಆದುದರಿಂದ ನಮಗೆ ತೃಪ್ತಿಕರವಾದುದೂ, ಯಾವಾಗಲೂ ಕಮ್ಮಿಯಾಗದಿರುವುದೂ ಆದ ಅನ್ನವನ್ನು ಒದಗಿಸಿ ಕೊಡಿರಿ. ಸಂತೋಷಕಾರಕರಾದ ಎಲೈ ಅಶ್ವಿನೀದೇವತೆಗಳೇ, ನಿಮ್ಮನ್ನು ಸ್ತೋತೃಗಳು ಸ್ತುತಿಸುತ್ತಾರೆ. ಸ್ತೋತೃಗಳಲ್ಲಿ ಅತ್ಯುತ್ತಮವಾದ ಸ್ತುತಿಯೂ ಇರುತ್ತದೆ. ಯಾವ ಸೋಮರಸಗಳು ನಿಮ್ಮ ದಾನವನ್ನು ಉದ್ದೇಶಿಸಿ ದೇವಗೃಹವನ್ನು ಸೇರಿವೆಯೋ ಅಂತಹ ಸೋಮರಸಗಳೂ ಸಿದ್ಧವಾಗಿವೆ.

English Translation.

Protectors of many, vast (wealth) is to be distributed by you : give us then nutritious and invariable food. Givers of delight, there are to you, adorers, and fit praise, and libations, which are prepared to acknowledge your liberality

॥ ವಿಶೇಷವಿಷಯಗಳು ॥

**ಅಸಕ್ರಾಂ**—ಈ ಶಬ್ದಕ್ಕೆ ಯಾಸ್ಕರು—**ಧೇನುಂ ನ ಇಷಂ ಪಿನ್ವತಮಸಕ್ರಾಂ । ಅಸಂಕ್ರಮಣೀಂ ।** (ನಿ. ೬-೨೯) ಎಂದು ನಿರ್ವಚನವನ್ನು ಹೇಳಿದ್ದಾರೆ. ಯಾವಾಗಲೂ ಹಾಲು ಕೊಡುವುದನ್ನು ನಿಲ್ಲಿಸದಿರುವ ಗೋವಿ

ನಾಶಿರುವ ಅನ್ನವನ್ನು, ಎಂದರೆ ಯಾವಾಗಲೂ ಕ್ಷಯಿಸದಿರುವ, ಕಮ್ಮಿಯಾಗದಿರುವ ಅನ್ನವನ್ನು (ಅಹಾರವನ್ನು) ನಮಗೆ ಒದಗಿಸಿ ಕೊಡಿ ಎಂದಭಿಪ್ರಾಯವು.

॥ ಸಂಹಿತಾಪಾಠಃ ॥

ಉತ ಮ ಋಜ್ರೇ ಪುರಯಸ್ಯ ರಘ್ವೀ ಸುಮೀಳ್ಹೇ ಶತಂ ಪೇರುಕೇ ಚ ಪಕ್ವಾ।
ಶಾಂಡೋ ದಾದ್ಧಿರಣಿನಃ ಸ್ಮದ್ದಿಷ್ಟೀನ್ದಶ ವಶಾಸೋ ಅಭಿಷಾಚ ಋಷ್ವಾನ್॥

॥ ಪದಪಾಠಃ ॥

ಉತ । ಮೇ । ಋಜ್ರೇ ಇತಿ । ಪುರಯಸ್ಯ । ರಘ್ವೀ ಇತಿ । ಸುಽಮೀಳ್ಹೇ । ಶತಂ । ಪೇರುಕೇ । ಚ । ಪಕ್ವಾ ।

ಶಾಂಡಃ । ದಾತ್ । ಹಿರಣಿನಃ । ಸ್ಮತ್ಽದಿಷ್ಟೀನ್ । ದಶ । ವಶಾಸಃ । ಅಭಿಽಸಾಚಃ । ಋಷ್ವಾನ್ ॥ ೯ ॥

॥ ಸಾಯಣಭಾಷ್ಯಂ ॥

ಉತಾಪಿ ಚ ಪುರಯಸ್ಯ ಪುರಯನಾಮಕಸ್ಯ ಸ್ವಭೂತೇ ಋಜ್ರೇ ಋಜುಗಮನೇ ರಘ್ವೀ ಕ್ಷಿಪ್ರಗಾಮಿನ್ಯೌ ವಡವೇ ಮೇಽಶ್ವಿನೋಃ ಸ್ತುತಿಂ ಕುರ್ವತೋ ಮಮಾಭೂತಾಂ। ಸುಮೀಳ್ಹೇ ರಾಜ್ಞಿ ವಿದ್ಯಮಾನಾಃ ಸಂತಃ ಶತಂ ಗಾವೋ ಮಮಾಭೂವನ್। ಪೇರುಕೇ ರಾಜ್ಞಿ ವಿದ್ಯಮಾನಾನಿ ಪಕ್ವಾ ಪಕ್ವಾನ್ಯನ್ನಾನಿ ಮಮಾಸನ್। ಶಾಂಡಶ್ಚ ರಾಜಾಸ್ಮೈ ಹಿರಣಿನೋ ಹಿರಣ್ಯವತಃ ಸ್ಮದ್ದಿಷ್ಟೀನ್ ಪ್ರಶಸ್ತದರ್ಶನಾನ್ರಥಾನಶ್ವಾನ್ವಾ ದಶ ದಶಸಂಖ್ಯಾಕಾನ್ವಶಾಸೋಽನುಗುಣಾನಭಿಷಾಚಃ ಶತ್ರೂಣಾಮಭಿಭಾವುಕಾನೃಷ್ವಾನ್ದರ್ಶನೀಯಾನ್ಪುರುಷಾನಶ್ವಿನೋಃ ಸ್ತೋತೃಭ್ಯೋ ದಾತ್। ದದಾತು।

॥ ಪ್ರತಿಪದಾರ್ಥ ॥

(ಎಲೈ ಅಶ್ವಿನೀದೇವತೆಗಳೇ) **ಉತ**—ಮತ್ತು। **ಪುರಯಸ್ಯ**—ಪುರಯನಾಮಕನಾದ ರಾಜನಲ್ಲಿರುವ। **ಋಜ್ರೇ**—ಋಜುಗಾಮಿಗಳಾದವೂ। **ರಘ್ವೀ**—ವೇಗಗಾಮಿಗಳಾದವೂ ಆದ ಅಶ್ವಗಳು। **ಮೇ**—ಅಶ್ವಿನೀ ದೇವತೆಗಳನ್ನು ಸ್ತುತಿಸುವ ನನಗಿರಲಿ। **ಸುಮೀಳ್ಹೇ**—ಸುಮೀಳ್ಹ ನಾಮಕನಾದ ರಾಜನಲ್ಲಿರುವ। **ಶತಂ**—ನೂರು ಗೋವುಗಳೂ ನನಗಿರಲಿ। **ಪೇರುಕೇ**—ಪೇರುಕನಲ್ಲಿರುವ। **ಪಕ್ವಾ**—ಪಕ್ವವಾದ ಅನ್ನಗಳು ನನಗಿರಲಿ। **ಶಾಂಡಃ**—ಶಾಂಡನೆಂಬ ರಾಜನು। **ಹಿರಣಿನಃ**—ಸುವರ್ಣನಿರ್ಮಿತವಾದವೂ। **ಸ್ಮದ್ದಿಷ್ಟೀನ್**—ಪ್ರಶಸ್ಯವಾದ ರೂಪವುಳ್ಳವೂ ಆದ। **ದಶ**—ಹತ್ತು ರಥಗಳನ್ನೂ ಅಶ್ವಗಳನ್ನೂ। **ವಶಾಸಃ**—ನಮಗೆ ವಿಧೇಯರೂ। ಅಭಿಷಾಚಃ—ಶತ್ರುಗಳನ್ನು ಸೋಲಿಸುವವರೂ। **ಋಷ್ವಾನ್**—ದರ್ಶನೀಯವಾದ ರೂಪವುಳ್ಳವರೂ ಆದ ಪುರುಷರನ್ನೂ। **ದಾತ್**—ನಿಮ್ಮನ್ನು ಪೂಜಿಸುವ ನನಗೆ ಕೊಡಲಿ.

॥ ಭಾವಾರ್ಥ ॥

ಎಲೈ ಅಶ್ವಿನಿದೇವತೆಗಳೇ, ಪುರಯನಾಮಕನಾದ ರಾಜನಲ್ಲಿರುವ ಋಜುಗಾಮಿಗಳೂ, ವೇಗಗಾಮಿಗಳೂ ಆದ ಅಶ್ವಗಳು ಅಶ್ವಿನೀದೇವತೆಗಳನ್ನು ಸ್ತುತಿಸುವ ನನಗಿರಲಿ. ಸುಮಿಳ್ಹನಲ್ಲಿರುವ ನೂರು ಗೋವುಗಳೂ ಪೇರುಕನಲ್ಲಿರುವ ಪಕ್ವವಾದ ಅನ್ನಗಳೂ ನನಗಿರಲಿ. ಶಾಂಡನೆಂಬ ರಾಜನು ಪ್ರಶಸ್ಯವಾದ ರೂಪವುಳ್ಳವೂ ಸುವರ್ಣನಿರ್ಮಿತವಾದವೂ ಆದ ಹತ್ತು ರಥಗಳನ್ನೂ ತದನುಗುಣವಾದ ಅಶ್ವಗಳನ್ನೂ ವಿಧೇಯರೂ ಶತ್ರುನಾಶಕರೂ ಆದ ಪುರುಷರನ್ನೂ ನಿಮ್ಮ ಪೂಜಕರಾದ ನಮಗೆ ಕೊಡಲಿ.

English Translation.

May the two straight-going, light-moving, (mares) of Puraya be mine; may the hundred cows belonging to Sumitha, may the dressed viands prepared by Peruka be for me: may Sanda bestow upon me ten handsome golden chariots, and obdient, valiant, and well-favoured (dependants).

॥ ಸಂಹಿತಾಪಾಠಃ ॥

ಸಂ ವಾಂ ಶತಾ ನಾಸತ್ಯಾ ಸಹಸ್ರಾಶ್ವಾನಾಂ ಪುರುಪಂಥಾ ಗಿರೇ ದಾತ್ ।
ಭರದ್ವಾಜಾಯ ವೀರ ನೂ ಗಿರೇ ದಾದ್ಧತಾ ರಕ್ಷಾಂಸಿ ಪುರುದಂಸಸಾ ಸ್ಯುಃ ॥

॥ ಪದಪಾಠಃ ॥

ಸಂ । ವಾಂ । ಶತಾ । ನಾಸತ್ಯಾ । ಸಹಸ್ರಾ । ಅಶ್ವಾನಾಂ । ಪುರುऽಪಂಥಾಃ । ಗಿರೇ । ದಾತ್ ।
ಭರತ್ऽವಾಜಾಯ । ವೀರ । ನು । ಗಿರೇ । ದಾತ್ । ಹತಾ । ರಕ್ಷಾಂಸಿ । ಪುರುऽದಂಸಸಾ । ಸ್ಯುರಿತಿ ಸ್ಯುಃ ॥

॥ ಸಾಯಣಭಾಷ್ಯಂ ॥

ನಾಸತ್ಯಾ ಹೇ ಅಶ್ವಿನೌ ವಾಂ ಯುವಯೋರ್ಗಿರೇ । ಗೃಣಾತೀತಿ ಗೀಃ ಸ್ತೋತಾ । ತಸ್ಮೈ ಅಶ್ವಾನಾಂ ಶತಾ ಶತಾನಿ ಸಹಸ್ರಾ ಸಹಸ್ರಾಣಿ ಪುರುಪಂಥಾಃ ಪುರುಪಂಥಾ ನಾಮ ರಾಜಾ ಸಂ ದಾತ್ । ಸಂದದಾತಿ । ವೀರ ಹೇ ವೀರಾವಶ್ವಿನೌ ॥ ದ್ವಿವಚನಸ್ಯ ಲುಕ್ ॥ ಗಿರೇ ಯುವಯೋಃ ಸ್ತೋತ್ರೇ ಭರದ್ವಾಜಾಯ ಮಹ್ಯಮುಪಿ ನು ಕ್ಷಿಪ್ರಂ ದಾತ್ । ದದಾತು । ಕಿಂಚ ಹೇ ಪುರುದಂಸಸಾ ಬಹುಕರ್ಮಾಣಾವಶ್ವಿನೌ ಯುವಯೋರನುಗ್ರಹಾದ್ರಕ್ಷಾಂಸಿ ಹತಾ ಹತಾನಿ ಸ್ಯುಃ ॥

॥ ಪ್ರತಿಪದಾರ್ಥ ॥

**ನಾಸತ್ಯಾ**—ಎಲೈ ಅಶ್ವಿನೀದೇವತೆಗಳೇ । **ವಾಂ**—ನಿಮ್ಮ । **ಗಿರೇ**—ಸ್ತುತಿಕರ್ತನಿಗೆ । **ಪುರುಪಂಥಃ**—ಪುರುಪಂಥನೆಂಬ ರಾಜನು । **ಶತಾ**—ಶತಸಂಖ್ಯಾಕವಾದವೂ । **ಸಹಸ್ರಾ**—ಸಹಸ್ರಸಂಖ್ಯಾಕವಾದವೂ

ಆದ । **ಅಶ್ವಾನಾಂ**—ಅಶ್ವಗಳನ್ನು । **ಸಂ ದಾತ್**—ಕೊಡಲಿ । **ವೀರ**—ಪರಾಕ್ರಮಿಗಳಾದ ಎಲೈ ಅಶ್ವಿನೀ ದೇವತೆಗಳೇ । **ಗಿರೇ**—ನಿಮ್ಮನ್ನು ಸ್ತುತಿಸುವ । **ಭರದ್ವಾಜಾಯ**—ಭರದ್ವಾಜನಿಗೂ । **ನು**—ಶೀಘ್ರವಾಗಿ । **ದಾತ್**—ಅವುಗಳನ್ನು ದಾನಮಾಡಲಿ । **ಪುರುದಂಸಸಾ**—ಅನೇಕ ಕರ್ಮಕರ್ತರಾದ ಎಲೈ ಅಶ್ವಿನೀದೇವತೆಗಳೇ । **ರಕ್ಷಾಂಸಿ**—ರಾಕ್ಷಸರೆಲ್ಲರೂ । **ಹತಾ ಸ್ಯುಃ**—ಹತರಾಗಲಿ.

॥ ಭಾವಾರ್ಥ ॥

ಎಲೈ ಅಶ್ವಿನೀದೇವತೆಗಳೇ, ನಿಮ್ಮ ಸ್ತುತಿಕರ್ತನಿಗೆ ಪುರುಪಂಥನೆಂಬ ರಾಜನು ಶತಸಂಖ್ಯಾಕವಾದವೂ ಸಹಸ್ರಸಂಖ್ಯಾಕವಾದವೂ ಆದ ಅಶ್ವಗಳನ್ನು ಕೊಡಲಿ. ಪರಾಕ್ರಮಿಗಳಾದ ಎಲೈ ಅಶ್ವಿನೀದೇವತೆಗಳೇ ನಿಮ್ಮನ್ನು ಸ್ತುತಿಸುವ ಭರದ್ವಾಜನಿಗೂ, ಶೀಘ್ರವಾಗಿ ಅವುಗಳನ್ನು ದಾನಮಾಡಲಿ. ಅನೇಕ ಕರ್ಮಕರ್ತರಾದ ಎಲೈ ಅಶ್ವಿನೀ ದೇವತೆಗಳೇ, ರಾಕ್ಷಸರೆಲ್ಲರೂ ಹತವಾಗಲಿ.

English Translation.

May Purupantha, Nasatyas, grant to him who praises you, hundreds and thousands of horses: may he give them, heroes, to Bharadwaja: achievers of great deeds, may the Rakshasas be slain.

॥ ಸಂಹಿತಾಪಾಠಃ ॥

ಆ ವಾಂ ಸುಮ್ನೇ ವರಿಮನ್ತ್ಸೂರಿಭಿಃ ಷ್ಯಾಂ ॥ ೧೧ ॥

॥ ಪದಪಾಠಃ ॥

**ಆ । ವಾಂ । ಸುಮ್ನೇ । ವರಿಮನ್ । ಸೂರಿಽಭಿಃ । ಸ್ಯಾಂ ॥ ೧೧ ॥**

॥ ಸಾಯಣಭಾಷ್ಯಂ ॥

**ಹೇ ಅಶ್ವಿನೌ ವರಿಮನ್ವಿಸ್ತೃತೇ ಸುಮ್ನೇ ವಾಂ ಯುವಾಭ್ಯಾಂ ದತ್ತೇ ಸುಖಾವಹೇ ಧನೇ । ಜಲಾಷಂ ಸುಮ್ನಮಿತಿ ಸುಖನಾಮಸು ಪಾಠಾತ್ । ಸೂರಿಭಿರ್ವಿದ್ವದ್ಭಿಃ ಪುತ್ರಾದಿಭಿಃ ಸಹಾ ಸಮಂತಾತ್ಸ್ಯಾಂ । ಭವೇಯಂ ॥**

॥ ಪ್ರತಿಪದಾರ್ಥ ॥

(ಎಲೈ ಅಶ್ವಿನೀದೇವತೆಗಳೇ) **ವರಿಮನ್**—ಅತ್ಯಂತ ವಿಸ್ತೃತವಾದ । **ಸುಮ್ನೇ**—ಸುಖದಲ್ಲಿ । **ವಾಂ**—ನಿಮ್ಮಿಂದ ದತ್ತವಾದ ಧನದ ಸಹಾಯದಿಂದ । **ಸೂರಿಭಿಃ**—ವಿದ್ಯಾವಂತರಾದ ಪುತ್ರರೊಡನೆ । **ಆ ಸ್ಯಾಂ**—ಸರ್ವತ್ರ ಇರುವಂತಾಗಲಿ.

॥ ಭಾವಾರ್ಥ ॥

ಎಲೈ ಅಶ್ವಿನೀದೇವತೆಗಳೇ, ನಿಮ್ಮಿಂದ ದತ್ತವಾದ ಧನದ ಸಹಾಯದಿಂದ ನಾವು ವಿದ್ಯಾವಂತರಾದ ಪುತ್ರರೊಡನೆ ಅತಿ ವಿಸ್ತೃತವಾದ ಸುಖದಲ್ಲಿರುವಂತಾಗಲಿ.

English Translation.

May I be associated with the pious in the abundant felicity bestowed by you.



# ಅರವತ್ತನಾಲ್ಕನೆಯ ಸೂಕ್ತವು

॥ ಸಾಯಣಭಾಷ್ಯಂ ॥

**ಉದು ಶ್ರಿಯ ಇತಿ ಷಡೃಚಂ ತೃತೀಯಂ ಸೂಕ್ತಂ ಭರದ್ವಾಜಸ್ಯಾರ್ಷಂ ತ್ರೈಷ್ಟುಭಮುಷೋದೇವತಾಕಂ । ಅನುಕ್ರಮ್ಯತೇ ಚ । ಉದು ಶ್ರಿಯೋ ಷಳುಷಸ್ಯಂ ತ್ವಿತಿ ॥ ಪ್ರಾತರನುವಾಕ ಉಷಸ್ಯೇ ಕ್ರತೌ ತ್ರೈಷ್ಟುಭೇ ಛಂದಸ್ಯಾಶ್ವಿನಶಸ್ತ್ರೇ ಚೈತದಾದಿಕೇ ದ್ವೇ ಸೂಕ್ತೇ । ಸೂತ್ರ್ಯತೇ ಹಿ । ಉದು ಶ್ರಿಯ ಇತಿ ಸೂಕ್ತೇ । ಅ. ೪-೧೪ । ಇತಿ ॥**

ಅನುವಾದವು—**ಉದು ಶ್ರಿಯೋ** ಎಂಬ ಈ ಸೂಕ್ತವು ಆರನೆಯ ಅನುವಾಕದಲ್ಲಿ ಮೂರನೆಯ ಸೂಕ್ತವು ಇದರಲ್ಲಿ ಆರು ಋಕ್ಕುಗಳಿರುವುವು. ಈ ಸೂಕ್ತಕ್ಕೆ ಭರದ್ವಾಜನು ಋಷಿಯು : ಉಷೋದೇವತೆಯು ದೇವತೆಯು ; ತ್ರಿಷ್ಟುಪ್ ಛಂದಸ್ಸವು. ಅನುಕ್ರಮಣಿಕೆಯಲ್ಲಿ— **ಉದು ಶ್ರಿಯೋ ಷಳುಷಸ್ಯಂ ತು** ಎಂದು ಹೇಳಿರುವುದು. ಪ್ರಾತರನುವಾಕ ಮಂತ್ರಪಠನಕಾಲದಲ್ಲಿ ಉಷಸ್ಯಕ್ರತು ಸಂಬಂಧವಾದ ತ್ರಿಷ್ಟುಪ್‌ಛಂದಸ್ಸಿನ ಮಂತ್ರಗಳಿಗಾಗಿಯೂ, ಆಶ್ವಿನಶಸ್ತ್ರಮಂತ್ರಗಳಿಗಾಗಿಯೂ ಈ ಸೂಕ್ತದ ಮತ್ತು ಮುಂದಿನ ಸೂಕ್ತದ ವಿನಿಯೋಗವಿರುವುದೆಂದು ಆಶ್ವಲಾಯನ ಶೌತಸೂತ್ರದ—**ಉದು ಶ್ರಿಯ ಇತಿ ಸೂಕ್ತೇ** ಎಂಬ ಸೂತ್ರದಿಂದ (ಅ. ೪-೧೪) ವಿವೃತವಾಗಿರುವುದು.

## ಸೂಕ್ತ—೬೪

ಮಂಡಲ—೬ ॥ ಅನುವಾಕ—೬ ॥ ಸೂಕ್ತ—೬೪ ॥
ಅಷ್ಟಕ—೫ ॥ ಅಧ್ಯಾಯ—೧ ॥ ವರ್ಗ— ೫ ॥

॥ ಸೂಕ್ತದಲ್ಲಿರುವ ಋಕ್ಸಂಖ್ಯೆ—೬ ॥
॥ ಋಷಿಃ—ಭರದ್ವಾಜೋ ಬಾರ್ಹಸ್ಪತ್ಯಃ ॥
॥ ದೇವತಾ—ಉಷಾಃ ॥
॥ ಛಂದಃ—ತ್ರಿಷ್ಟುಪ್ ॥

॥ ಸಂಹಿತಾಪಾಠಃ ॥

**ಉದು ಶ್ರಿಯ ಉಷಸೋ ರೋಚಮಾನಾ ಅಸ್ಥುರಪಾಂ ನೋರ್ಮಯೋ ರುಶಂತಃ ।**
**ಕೃಣೋತಿ ವಿಶ್ವಾ ಸುಪಥಾ ಸುಗಾನ್ಯಭೂದು ವಸ್ವೀ ದಕ್ಷಿಣಾ ಮಘೋನೀ ॥**

॥ ಪದಪಾಠಃ ॥

ಉತ್ । ಊಂ ಇತಿ । ಶ್ರಿಯೇ । ಉಷಸಃ । ರೋಚಮಾನಾಃ । ಅಸ್ಥುಃ । ಅಪಾಂ । ನ । ಊರ್ಮಯಃ । ರುಶಂತಃ ।

ಕೃಣೋತಿ । ವಿಶ್ವಾ । ಸುಽಪಥಾ । ಸುಽಗಾನಿ । ಅಭೂತ್ । ಊಂ ಇತಿ । ವಸ್ವೀ । ದಕ್ಷಿಣಾ । ಮಘೋನೀ ॥

॥ ಸಾಯಣಭಾಷ್ಯಂ ॥

**ರೋಚಮಾನಾ ದೀಪ್ಯಮಾನಾ ರುಶಂತಃ ಶುಕ್ಲವರ್ಣಾಃ । ರುಶದಿತಿ ವರ್ಣನಾಮ । ನಿ. ೨-೨೦ । ಇತಿ ಯಾಸ್ಕಃ । ಉಷಸಃ ಶ್ರಿಯೇ ಜಗತಃ ಶೋಭಾಯೈ ಜಗದ್ವ್ಯಾಪ್ತುಂ ವಾಪಾಮೂರ್ಮಯೋ ನ ಉದಕಸಂಬಂಧಿನಸ್ತರಂಗಾ ಇವೋದಸ್ಥುಃ । ಉತ್ತಿಷ್ಠಂತಿ । ಅನಂತರಮೇಕವನ್ನಿಗಮಃ । ಉಷಾ ವಿಶ್ವಾ ವಿಶ್ವಾನಿ ಸ್ಥಾನಾನಿ ಸುಪಥಾ ಸುಮಾರ್ಗಾಣಿ ಸುಗಾನಿ ಸುಖೇನ ಗಮ್ಯಾನಿ ಕೃಣೋತಿ । ಕರೋತಿ । ಅಪಿ ಚ । ಮಘೋನೀ ಧನವತ್ಯುಷಾ ವಸ್ವೀ ಪ್ರಶಸ್ತಾ ದಕ್ಷಿಣಾ ಸಮರ್ಧಯಿತ್ರೀ ಚಾಭೂತ್ ॥**

॥ ಪ್ರತಿಪದಾರ್ಥ ॥

**ರೋಚಮಾನಾಃ**—ಆಕರ್ಷಕವಾದವರು । **ರುಶಂತಃ**—ಶುಭ್ರವರ್ಣವುಳ್ಳವರೂ ಆದ । **ಉಷಸಃ**—ಉಷಸ್ಸುಗಳು । **ಶ್ರಿಯೇ**—ಜಗತ್ತಿಗೆ ಕಾಂತಿಯನ್ನುಂಟುಮಾಡಲು । **ಅಪಾಂ**—ಉದಕಗಳ । **ಊರ್ಮಯಃ ನ**—ಅಲೆಗಳಂತೆ । **ಉದಸ್ಥುಃ**—ಉದ್ಭವಿಸುತ್ತಾರೆ । **ಉಷಾಃ**—ಉಷಸ್ಸು । **ಸುಪಥಾ**—ಉತ್ತಮವಾದ ಮಾರ್ಗಗಳುಳ್ಳವನ್ನಾಗಿಯೂ । **ಸುಗಾನಿ**—ಸುಲಭವಾಗಿ ಸಂಚರಿಸಲು ಯೋಗ್ಯವಾದವನ್ನಾಗಿಯೂ । **ಕೃಣೋತಿ**—ಮಾಡುತ್ತಾಳೆ । **ಮಘೋನೀ**—ಧನಯುಕ್ತಳಾದ ಉಷಸ್ಸು । **ವಸ್ವೀ**—ಪ್ರಶಸ್ಯಳಾಗಿಯೂ । **ದಕ್ಷಿಣಾ**—ಸಂಪತ್ಸಮೃದ್ಧಿಯನ್ನುಂಟುಮಾಡುವವಳಾಗಿಯೂ । **ಅಭೂತ್**—ಆಗುತ್ತಾಳೆ.

॥ ಭಾವಾರ್ಥ ॥

ಆಕರ್ಷಕವಾದ ರೂಪವುಳ್ಳವರೂ, ಶುಭ್ರವರ್ಣವುಳ್ಳವರೂ ಆದ ಉಷಸ್ಸುಗಳು ಜಗತ್ತಿಗೆ ಕಾಂತಿಯನ್ನುಂಟುಮಾಡಲು ಉದಕಗಳ ಅಲೆಗಳಂತೆ ಉದ್ಭವಿಸುತ್ತಾರೆ. ಉಷಸ್ಸು ಸಕಲಸ್ಥಾನಗಳನ್ನೂ ಉತ್ತಮವಾದ ಮಾರ್ಗಗಳುಳ್ಳವನ್ನಾಗಿಯೂ, ಸುಲಭವಾಗಿ ಸಂಚರಿಸಲು ಯೋಗ್ಯವಾದವನ್ನಾಗಿಯೂ ಮಾಡುತ್ತಾಳೆ. ಧನಯುಕ್ತಳಾದ ಉಷಸ್ಸು ಪ್ರಶಸ್ಯಳಾಗಿಯೂ ಸಂಪತ್ಸಮೃದ್ಧಿಯನ್ನುಂಟುಮಾಡುವವಳಾಗಿಯೂ ಆಗುತ್ತಾಳೆ.

## English Translation.

The white and shining tints of the dawn have spread like the waves of the waters, for the beautifying (of the world); she renders all good roads easy to be traversed; she who is replete with delight, excellence, and health.

॥ ಸಂಹಿತಾಪಾಠಃ ॥

ಭದ್ರಾ ದದೃಕ್ಷ ಉರ್ವಿಯಾ ವಿ ಭಾಸ್ಯುತ್ತೇ ಶೋಚಿರ್ಭಾನವೋ ದ್ಯಾಮಪಪ್ತನ್ ।
ಆವಿರ್ವಕ್ಷಃ ಕೃಣುಷೇ ಶುಂಭಮಾನೋಷೋ ದೇವಿ ರೋಚಮಾನಾ ಮಹೋಭಿಃ ॥ ೧ ॥

॥ ಪದಪಾಠಃ ।

ಭದ್ರಾ । ದದೃಕ್ಷೇ । ಉರ್ವಿಯಾ । ವಿ । ಭಾಸಿ । ಉತ್ । ತೇ । ಶೋಚಿಃ । ಭಾನವಃ । ದ್ಯಾಂ । ಅಪಪ್ತನ್ ।
ಆವಿಃ । ವಕ್ಷಃ । ಕೃಣುಷೇ । ಶುಂಭಮಾನಾ । ಉಷಃ । ದೇವಿ । ರೋಚಮಾನಾ । ಮಹಃಽಭಿಃ ॥ ೧ ॥

। ಸಾಯಣಭಾಷ್ಯಂ ॥

**ಹೇ ಉಷೋ ದೇವಿ ಭದ್ರಾ ಕಲ್ಯಾಣೀ ದದೃಕ್ಷೇ । ದೃಶ್ಯಸೇ । ಉರ್ವಿಯಾ ವಿಸ್ತೀರ್ಣಾ ಚ ವಿ ಭಾಸಿ । ತೇ ತವ ಶೋಚಿಃ ಶೋಚಿಷಃ ॥ ಜಸೋ ಲುಕ್ ॥ ದೀಪ್ಯಮಾನಾ ಭಾನವೋ ರಶ್ಮಯೋ ದ್ಯಾಮಂತರಿಕ್ಷಮುದಪಪ್ತನ್ । ಉತ್ಪತಂತಿ । ಕಿಂಚ ಹೇ ಉಷೋ ದೇವಿ ಮಹೋಭಿಸ್ತೇಜೋಭಿಃ ಶುಂಭಮಾನಾ ಶೋಭಮಾನಾ ರೋಚಮಾನಾ ದೀಪ್ಯಮಾನಾ ವಕ್ಷಸ್ತ್ವದೀಯಂ ರೂಪಮಾವಿಷ್ಕೃಣುಷೇ । ಪ್ರಕಟೀಕರೋಷಿ ॥**

॥ ಪ್ರತಿಪದಾರ್ಥ ॥

(ಎಲೈ ಉಷೋದೇವಿಯೇ **ತ್ವಂ**—ನೀನು) । **ಭದ್ರಾ**—ಕಲ್ಯಾಣರೂಪಳಾಗಿ । **ದದೃಕ್ಷೇ**—ಗೋಚರಳಾಗಿದ್ದೀಯೆ । **ಉರ್ವಿಯಾ**—ಅತ್ಯಂತ ವಿಸ್ತೃತವಾದ ಸ್ವರೂಪವುಳ್ಳವಳಾಗಿ । **ವಿ ಭಾಸಿ**—ಕಾಂತಿಯಿಂದ ಬೆಳಗುತ್ತೀಯೆ । **ತೇ**—ನಿನ್ನ । **ಶೋಚಿಃ**—ಪ್ರಕಾಶಮಾನವಾದ । **ಭಾನವಃ**—ರಶ್ಮಿಗಳು । **ದ್ಯಾಂ**—ಅಂತರಿಕ್ಷವನ್ನೆಲ್ಲಾ । **ಉದಪಪ್ತನ್**—ವ್ಯಾಪಿಸಿ ಹರಡಿವೆ । **ಉಷೋ ದೇವಿ**—ಎಲೈ ಉಷೋದೇವಿಯೇ । **ಮಹೋಭಿಃ**—ನಿನ್ನ ತೇಜಸ್ಸುಗಳಿಂದ । **ಶುಂಭಮಾನಾ**—ಕಂಗೊಳಿಸುತ್ತಾ । **ರೋಚಮಾನಾ**—ಆಕರ್ಷಕವಾದ ರೂಪವುಳ್ಳವಳಾಗಿ । **ವಕ್ಷಃ**—ನಿನ್ನ ರೂಪವನ್ನು । **ಆವಿಃ ಕೃಣುಷೇ**—ಪ್ರಕಟಿಸುತ್ತೀಯೆ.

॥ ಭಾವಾರ್ಥ ॥

ಎಲೈ ಉಷೋದೇವಿಯೇ, ನೀನು ಜಗತ್ತಿಗೆಲ್ಲಾ ಕಲ್ಯಾಣರೂಪದಲ್ಲಿ ಗೋಚರಳಾಗಿದ್ದೀಯೆ. ಅತ್ಯಂತ ವಿಸ್ತೃತವಾದ ಸ್ವರೂಪವುಳ್ಳವಳಾಗಿ ಕಾಂತಿಯಿಂದ ಬೆಳಗುತ್ತೀಯೆ. ಪ್ರಕಾಶಮಾನವಾದ ನಿನ್ನ ರಶ್ಮಿಗಳು ಅಂತರಿಕ್ಷವನ್ನೆಲ್ಲಾ ವ್ಯಾಪಿಸಿ ಹರಡಿವೆ. ಎಲೈ ಉಷೋದೇವಿಯೇ, ನಿನ್ನ ತೇಜಸ್ಸುಗಳಿಂದ ಕಂಗೊಳಿಸುತ್ತಾ ಆಕರ್ಷಕವಾದ ರೂಪವುಳ್ಳವಳಾಗಿ ನಿನ್ನ ಸ್ವರೂಪವನ್ನು ಪ್ರಕಟಿಸುತ್ತೀಯೆ.

## English Translation.

Divine Ushas, you are seen auspicious : you shine afar : your bright rays spread over the sky, lovely and radiant with great (splendours), you display your person.

॥ ಸಂಹಿತಾಪಾಠಃ ॥

ವಹಂತಿ ಸೀಮರುಣಾಸೋ ರುಶಂತೋ ಗಾವಃ ಸುಭಗಾಮುರ್ವಿಯಾ ಪ್ರಥಾನಾಂ ।
ಅಪೇಜತೇ ಶೂರೋ ಅಸ್ತೇವ ಶತ್ರೂನ್ಬಾಧತೇ ತಮೋ ಅಜಿರೋ ನ ವೋಳ್ಹಾ ॥ ೨ ॥

॥ ಪದಪಾಠಃ ॥

ವಹಂತಿ । ಸೀಂ । ಅರುಣಾಸಃ । ರುಶಂತಃ । ಗಾವಃ । ಸುಽಭಗಾಂ । ಉರ್ವಿಯಾ । ಪ್ರಥಾನಾಂ ।
ಅಪ । ಈಜತೇ । ಶೂರಃ । ಅಸ್ತಾಽಇವ । ಶತ್ರೂನ್ । ಬಾಧತೇ । ತಮಃ । ಅಜಿರಃ । ನ । ವೋಳ್ಹಾ ॥೨॥

॥ ಸಾಯಣಭಾಷ್ಯಂ ॥

ಅರುಣಾಸೋ ಲೋಹಿತವರ್ಣಾ ರುಶಂತೋ ದೀಪ್ಯಮಾನಾ ಗಾವೋ ರಶ್ಮಯಃ । ಕಿರಣಾ ಗಾವ ಇತಿ ರಶ್ಮಿನಾಮಸು ಪಾಠಾತ್ । ಸುಭಗಾಮುರ್ವಿಯೋರ್ವೀಂ ವಿಸ್ತೀರ್ಣಾಂ ಪ್ರಥಾನಾಂ ಪ್ರಥಮಾನಾಂ ಸೀಮೇನಾಮುಷೋದೇವತಾಂ ವಹಂತಿ । ಸೇಯಮುಷೋದೇವತಾ ಶೂರೋಽಸ್ತೇವ ವೀರಃ ಕ್ಷೇಪ್ತೇವ ಶತ್ರೂನ್ ತಮೋಽಪೇಜತೇ । ಅಪಗಮಯತಿ । ವೋಳ್ಹಾ ಸೇನಾಯಾ ಅಜಿರೋ ನ ಕ್ಷಿಪ್ರಗಾಮೀ ಶತ್ರೂನ್ಯಥಾ ಬಾಧತೇ ತಥಾ ತಮಾಂಸಿ ಬಾಧತೇ ಚ ॥

॥ ಪ್ರತಿಪದಾರ್ಥ ॥

**ಅರುಣಾಸಃ**—ಹೊಂಬಣ್ಣವುಳ್ಳವೂ । **ರುಶಂತಃ**—ಪ್ರಕಾಶಮಾನವಾದವೂ ಆದ । **ಗಾವಃ**—ರಶ್ಮಿಗಳು । **ಸುಭಗಾಂ**—ಮಂಗಳಕಾರಿಣಿಯೂ । **ಉರ್ವಿಯಾ**—ವಿಸ್ತೃತವಾದ ರೂಪವುಳ್ಳವಳೂ । **ಪ್ರಥಾನಾಂ**—ಪ್ರಸಿದ್ಧಳೂ ಆದ । **ಸೀಂ**—ಈ ಉಷೋದೇವಿಯನ್ನು । **ವಹಂತಿ**—ವಹಿಸುತ್ತವೆ । **ಶೂರಃ**—ಪರಾಕ್ರಮಿಯಾದ । **ಅಸ್ತಾ ಇವ**—ಧನ್ವಿಯು । **ಶತ್ರೂನ್**—ಶತ್ರುಗಳನ್ನು ಹೊಡೆದೋಡಿಸುವಂತೆ । (**ಉಷಾಃ**—ಉಷೋದೇವಿಯು) । **ತಮಃ**—ಕತ್ತಲೆಯನ್ನು । **ಅಪೇಜತೇ**—ಹೊಡೆದೋಡಿಸುತ್ತಾಳೆ । **ಅಜಿರಃ**—ಕ್ಷಿಪ್ರಗಾಮಿಯಾದ । **ವೋಳ್ಹಾ ನ**—ಸೇನಾ ನಾಯಕನಂತೆ । **ಬಾಧತೇ**—ತಮಸ್ಸನ್ನು ಹಿಂಸಿಸುತ್ತಾಳೆ.

|| ಭಾವಾರ್ಥ ||

ಹೊಂಬಣ್ಣವುಳ್ಳವೂ, ಪ್ರಕಾಶಮಾನವಾದವೂ ಆದ ರಶ್ಮಿಗಳು ಮಂಗಳಕಾರಿಣಿಯೂ ವಿಸ್ತೃತವಾದ ರೂಪವುಳ್ಳವಳೂ ಪ್ರಸಿದ್ಧಳೂ ಆದ ಈ ಉಷೋದೇವಿಯನ್ನು ವಹಿಸುತ್ತವೆ. ಪರಾಕ್ರಮಿಯಾದ ಧನ್ವಿಯು ಶತ್ರುಗಳನ್ನು ಹೊಡೆದೋಡಿಸುವಂತೆ ಉಷೋದೇವಿಯು ಕತ್ತಲೆಯನ್ನು ಹೊಡೆದೋಡಿಸುತ್ತಾಳೆ. ಕ್ಷಿಪ್ರಗಾಮಿಯಾದ ಸೇನಾನಾಯಕನಂತೆ ತಮಸ್ಸನ್ನು ಹಿಂಸಿಸುತ್ತಾಳೆ.

## English Translation

Ruddy and resplendent cows bear the auspicious, expanding, illustrious dawn : like a warrior, who, casting his darts, or a swift charger scattering enemies, she drives away the glooms.

|| ಸಂಹಿತಾಪಾಠಃ ||

ಸುಗೋತ ತೇ ಸುಪಥಾ ಪರ್ವತೇಷ್ವವಾತೇ ಅಪಸ್ತರಸಿ ಸ್ವಭಾನೋ |
ಸಾ ನ ಆ ವಹ ಪೃಥುಯಾಮನ್ನೃಷ್ವೇ ರಯಿಂ ದಿವೋ ದುಹಿತರಿಷಯಧ್ಯೈ ||

|| ಪದಪಾಠಃ ||

ಸುऽಗಾ | ಉತ | ತೇ | ಸುऽಪಥಾ | ಪರ್ವತೇಷು | ಅವಾತೇ | ಅಪಃ | ತರಸಿ | ಸ್ವಭಾನೋ ಇತಿ ಸ್ವऽಭಾನೋ |

ಸಾ | ನಃ | ಆ | ವಹ | ಪೃಥುऽಯಾಮನ್ | ಋಷ್ವೇ | ರಯಿಂ | ದಿವಃ | ದುಹಿತಃ | ಇಷಯಧ್ಯೈ ||೪||

|| ಸಾಯಣಭಾಷ್ಯಂ ||

ಹೇ ಉಷೋ ದೇವಿ ಪರ್ವತೇಷೂತೆ ದುರ್ಗೇಷ್ವಪ್ಯವಾತೇ ಗಮನಸಾಧನರಹಿತೇ ದೇಶೇ ಸುಪಥಾ ಸುಪಥಾನಿ ಮಾರ್ಗಾಣಿ ಸುಗಾ ಸುಗಾನಿ ಸುಖೇನ ಗಮ್ಯಾನಿ ತೇ ತವ ಭವಂತಿ | ಸ್ವಭಾನೋ ಹೇ ಸ್ವಪ್ರಕಾಶೇಽಪೋಽಂತರಿಕ್ಷಮಾಕಾಶಂ | ಅಪ ಇತ್ಯಂತರಿಕ್ಷನಾಮಸು ಪಾಠಾತ್ | ಸಾಮುದ್ರಿಕೀರಪೋ ವಾ ತರಸಿ | ಪೃಥುಯಾಮನ್ ಪೃಥುರಥ ಋಷ್ವೇ ದರ್ಶನೀಯೇ ದಿವೋ ದುಹಿತರಂತರಿಕ್ಷಸುತೇ ಹೇ ಉಷೋ ದೇವಿ ಸಾ ತ್ವಮಿಷಯಧ್ಯಾ ಏಷಣೀಯಂ ಧನಂ ನೋಽಸ್ಮಭ್ಯಮಾ ವಹ ||

|| ಪ್ರತಿಪದಾರ್ಥ ||

(ಎಲೈ ಉಷೋದೇವಿಯೇ) **ಪರ್ವತೇಷು**—ಪರ್ವತಗಳಲ್ಲಿಯೂ | **ಉತ**—ಮತ್ತು | **ಅವಾತೇ**—ಗಮನಸಾಧನವಿಲ್ಲದಿರುವ ದುರ್ಗಗಳಲ್ಲಿಯೂ ಇರತಕ್ಕ | **ಸುಪಥಾ**—ಉತ್ತಮವಾದ ಮಾರ್ಗವೂ | **ಸುಗಾ**—ಸುಲಭವಾಗಿ ಸಂಚರಿಸುವ ಸಾಧನವೂ | **ತೇ**—ನಿನಗೆ ಸೇರಿದವೇ ಆಗಿವೆ | **ಸ್ವಭಾನೋ**—ಸ್ವಯಂ ಪ್ರಕಾಶವುಳ್ಳ

ಎಲೈ ದೇವಿಯೇ। **ಅಪಃ**—ಅಂತರಿಕ್ಷವನ್ನು । **ತೆರಸಿ**—ನೀನು ದಾಟುತ್ತೀಯೆ । **ದಿವೋ ದುಹಿತಃ**—ಅಂತರಿಕ್ಷ ಪುತ್ರಿಯಾದ ಎಲೈ ಉಷೋದೇವಿಯೇ। **ಸಾ**—ಅಂತಹ ಕಲ್ಯಾಣಗುಣವುಳ್ಳ ನೀನು । **ಪೃಥುಯಾಮನ್**—ವಿಸ್ತೃತವಾದ ಅವಕಾಶವುಳ್ಳದ್ದೂ । **ಋಷ್ವೇ**—ಆಕರ್ಷಕವಾದ ರೂಪವುಳ್ಳದ್ದೂ ಆದ ನಿನ್ನ ರಥದಲ್ಲಿ । **ಇಷಯುಧ್ಯೈ**—ಅಪೇಕ್ಷಿತವಾದ । **ರಯಿಂ**—ಧನವನ್ನು । **ನಃ**—ನಮಗೆ। **ಆ ವಹ**—ವಹಿಸಿಕೊಂಡು ಬಾ.

॥ ಭಾವಾರ್ಥ ॥

ಎಲೈ ಉಷೋದೇವಿಯೇ, ಪರ್ವತಗಳಲ್ಲಿಯೂ ಮತ್ತು ಗಮನಸಾಧನವಿಲ್ಲದಿರುವ ದುರ್ಗಗಳಲ್ಲಿಯೂ ಇರತಕ್ಕ ಉತ್ತಮವಾದ ಮಾರ್ಗವೂ ಸುಖವಾಗಿ ಸಂಚರಿಸುವ ಸಾಧನವೂ ನಿನಗೆ ಸೇರಿದವೇ ಆಗಿವೆ. ಸ್ವಯಂ ಪ್ರಕಾಶವುಳ್ಳ ಎಲೈ ದೇವಿಯೇ, ನೀನು ಅಂತರಿಕ್ಷವನ್ನು ದಾಟುತ್ತೀಯೆ. ಅಂತರಿಕ್ಷಪುತ್ರಿಯಾದ ಎಲೈ ಉಷೋದೇವಿಯೇ, ಪ್ರಸಿದ್ಧವಾದ ಕಲ್ಯಾಣಗುಣಗಳುಳ್ಳ ನೀನು ವಿಸ್ತೃತವಾದ ಅವಕಾಶವುಳ್ಳದ್ದೂ ಆಕರ್ಷಕವಾದ ರೂಪವುಳ್ಳದ್ದೂ ಆದ ನಿನ್ನ ರಥದಲ್ಲಿ ನಮಗೆ ಅಪೇಕ್ಷಿತವಾದ ಧನವನ್ನು ತೆಗೆದುಕೊಂಡು ಬಾ.

## English Translation.

Yours are good roads and easy to be traversed in mountains and inaccessible places : you pass self-irradating over the waters : bring to us, daughter of heaven, in your spacious and beatiful chariot, desirable riches.

॥ ಸಂಹಿತಾಪಾಠಃ ॥

ಸಾ ವಹ ಯೋಕ್ಷಭಿರವಾತೋಷೋ ವರಂ ವಹಸಿ ಜೋಷಮನು ।
ತ್ವಂ ದಿವೋ ದುಹಿತರ್ಯಾ ಹ ದೇವೀ ಪೂರ್ವಹೂತೌ ಮಂಹನಾ ದರ್ಶತಾ
ಭೂಃ ॥ ೫ ॥

॥ ಪದಪಾಠಃ ॥

ಸಾ । ಆ । ವಹ । ಯಾ । ಉಕ್ಷsಭಿಃ । ಅವಾತಾ । ಉಷಃ । ವರಂ । ವಹಸಿ । ಜೋಷಂ । ಅನು ।
ತ್ವಂ । ದಿವಃ । ದುಹಿತಃ । ಯಾ । ಹ । ದೇವೀ । ಪೂರ್ವsಹೂತೌ । ಮಂಹನಾ । ದರ್ಶತಾ । ಭೂಃ ॥೫॥

॥ ಸಾಯಣಭಾಷ್ಯಂ ॥

ಹೇ ಉಷಃ ಸಾ ತ್ವಂ ವರಂ ಧನಂ ಮಹ್ಯಮಾ ವಹ। ಯಾ ತ್ವಮವಾತಾಪ್ರತಿಗತಾ ಜೋಷಂ ಪ್ರೀತಿಮನೂಕ್ಷಭಿರನಡುದ್ಭಿರಶ್ವೈರ್ವಾ ಸ್ತೋತೃಭ್ಯೋ ವರಂ ವಹಸಿ। ಕಿಂಚ ಹೇ ದಿವೋ ದುಹಿತ-ರಂತರಿಕ್ಷಸುತೇ ಯಾ ತ್ವಂ ದೇವೀ ದ್ಯೋತಮಾನಾ ಪೂರ್ವಹೂತೌ ಪ್ರಥಮಾಹ್ವಾನೇ ಪ್ರಾತರನುವಾಕೇ

ಮಂಹನಾ ಪೂಜನೀಯಾ ಭವಸಿ ಸಾ ತ್ವಂ ದರ್ಶತಾ ದರ್ಶನೀಯಾ ಭೂರಿತಿ ಯೋಜನಾ । ಯಾ ದರ್ಶತಾ ಭೂರಿತ್ಯನ್ವಯೇ ಯದ್ವೃತ್ತೇನ ಸಾಮಾನಾಧಿಕರಣ್ಯಾತ್ ಭೂರಿತ್ಯಸ್ಯ ನಿಘಾತೋ ನ ಸ್ಯಾತ್ ॥

॥ ಪ್ರತಿಪದಾರ್ಥ ॥

**ಉಷಃ**—ಎಲೈ ಉಷೋದೇವಿಯೇ । **ಯಾ**—ಯಾವ ನೀನು । **ಅವಾತಾ**—ಅಪ್ರತಿಹತಳಾಗಿ । **ಜೋಷಂ**—ಪ್ರಿಯವಾದ ಧನವನ್ನು । **ಅನು ಉಕ್ಷಭಿಃ**—ನಿನ್ನ ವಾಹನಗಳ ಮೇಲೆ । **ವಹಸಿ**—ವಹಿಸಿರುವೆಯೋ । **ಸಾ**—ಅಂತಹ ನೀನು । **ವರಂ**—ಉತ್ಕೃಷ್ಟವಾದ ಧನವನ್ನು । **ಆ ವಹ**—ನನಗಾಗಿ ವಹಿಸಿಕೊಂಡು ಬಾ । **ದಿವೋ ದುಹಿತಃ**—ಅಂತರಿಕ್ಷಪುತ್ರಿಯಾದ ಎಲೈ ಉಷಸ್ಸೇ । **ಯಾ ತ್ವಂ**—ಯಾವ ನೀನು । **ದೇವೀ**—ಪ್ರಕಾಶಮಾನಳೂ ಪೂಜ್ಯಳೂ ಆಗಿ । **ಪೂರ್ವಹೂತೌ ಪ**—ಪ್ರಥಮ ಯಾಗದಲ್ಲೇ । **ಮಂಹನಾ**—ಪೂಜಾರ್ಹಳಾಗಿರುವೆಯೋ (ಅಂತಹ ನೀನು) । **ದರ್ಶತಾ ಭೂಃ**—ದರ್ಶನೀಯಳಾಗಿ ಆಗಿರು.

॥ ಭಾವಾರ್ಥ ॥

ಎಲೈ ಉಷೋದೇವಿಯೇ, ಯಾವ ನೀನು ಅಪ್ರತಿಹತಳಾಗಿ ವೃಷಭರೂಪಳಾದ ನಿನ್ನ ವಾಹನಗಳ ಮೇಲೆ ಪ್ರಿಯವಾದ ಧನವನ್ನು ವಹಿಸಿರುವೆಯೋ ಅಂತಹ ನೀನು ನನಗಾಗಿ ಉತ್ಕೃಷ್ಟವಾದ ಧನಗಳನ್ನು ವಹಿಸಿಕೊಂಡು ಬಾ. ಅಂತರಿಕ್ಷಪುತ್ರಿಯಾದ ಎಲೈ ಉಷಸ್ಸೇ, ಯಾವ ನೀನು ಪ್ರಕಾಶಮಾನಳೂ ಪೂಜ್ಯಳೂ ಆಗಿ ಪ್ರಥಮ ಯಾಗದಲ್ಲೇ (ಪ್ರಾತರನುವಾಕದಲ್ಲೇ) ಪೂಜಾರ್ಹಳಾಗಿ ಇರುವೆಯೋ ಅಂತಹ ನೀನು ದರ್ಶನೀಯರೂಪವುಳ್ಳವಳಾಗಿರು.

English Translation.

Ushas, bring me opulence, for unopposed you bear with your oxen (wealth to your worshippers), according to your satisfaction: daughter of heaven, you who are divine, who are lovely, are to be worshipped at the first (daily) rite.

॥ ಸಂಹಿತಾಪಾಠಃ ॥

ಉತ್ತೇ ವಯಶ್ಚಿದ್ವಸತೇರಪಪ್ತನ್ನರಶ್ಚ ಯೇ ಪಿತುಭಾಜೋ ವ್ಯುಷ್ಟೌ ।
ಅಮಾ ಸತೇ ವಹಸಿ ಭೂರಿ ವಾಮಮುಷೋ ದೇವಿ ದಾಶುಷೇ ಮರ್ತ್ಯಾಯ ॥

॥ ಪದಪಾಠಃ ॥

ಉತ್ । ತೇ । ವಯಃ । ಚಿತ್ । ವಸತೇಃ । ಅಪಪ್ತನ್ । ನರಃ । ಚ । ಯೇ । ಪಿತುಽಭಾಜಃ । ವಿಽಉಷ್ಟೌ ॥
ಅಮಾ । ಸತೇ । ವಹಸಿ । ಭೂರಿ । ವಾಮಂ । ಉಷಃ । ದೇವಿ । ದಾಶುಷೇ । ಮರ್ತ್ಯಾಯ ॥ ೬ ॥

॥ ಸಾಯಣಭಾಷ್ಯಂ ॥

ಹೇ ಉಷೋ ದೇವಿ ತೇ ತವ ವ್ಯುಷ್ಟೌ ಸತ್ಯಾಂ ವಯಶ್ಚಿತ್ಪಕ್ಷಿಣೋಽಪಿ ವಸತೇರ್ನಿವಾಸಸ್ಥಾನಾ-ದುದಪಪ್ತನ್ । ಉತ್ಪತಂತಿ । ಯೇ ಪಿತುಭಾಜೋ ಹವಿಷಾಂ ಸಂಭಕ್ತಾರೋಽನ್ನಸ್ಯೋಪಾರ್ಜಕಾ ವಾ । ಪಿತುರಿತ್ಯನ್ನನಾಮಸು ಪಾಠಾತ್ । ನರಃ ತೇಽಪಿ ಚೋತ್ಪತಂತಿ । ಕಿಂಚ ಹೇ ಉಷೋ ದೇವಿ ತ್ವಮವಮಾ ಸಮೀಪೇ ಸತೇ ವರ್ತಮಾನಾಯ ದಾಶುಷೇ ಹವಿಷಾಂ ಪ್ರದಾತ್ರೇ ಮರ್ತ್ಯಾಯ ಭೂರಿ ಪ್ರಭೂತಂ ವಾಮಂ ಧನಂ ವಹಸಿ ॥

॥ ಪ್ರತಿಪದಾರ್ಥ ॥

(ಎಲೈ ಉಷೋದೇವಿಯೇ) **ತೇ**—ನಿನ್ನ । **ವ್ಯುಷ್ಟೌ**—ಆವಿರ್ಭಾವಕಾಲದಲ್ಲಿ । **ವಯಃಶ್ಚಿತ್**—ಪಕ್ಷಿಗಳೂ ಕೂಡ । **ವಸತೇಃ**—ತಮ್ಮ ನಿವಾಸಸ್ಥಾನಗಳಿಂದ । **ಉದಪಪ್ತನ್**—ಹಾರಿ ಹೋಗುತ್ತವೆ । **ಯೇ**—ಯಾರು । **ಪಿತುಭಾಜಃ**—ಅನ್ನಸಂಪಾದನೆಯಲ್ಲಿ ನಿರತರೋ ಅಂತಹ । **ನರಃ ಚ**—ಮಾನವರೂ ಸಹ ಪ್ರಬುದ್ಧರಾಗಿ ಎದ್ದು ಓಡಾಡುತ್ತಾರೆ । **ಉಷೋ ದೇವಿ**—ದೇವತಾತ್ಮಳಾದ ಎಲೈ ಉಷಸ್ಸೇ । **ಅವಮಾ**—ಸಮೀಪದಲ್ಲಿ । **ಸತೇ**—ಇರತಕ್ಕವನೂ । **ದಾಶುಷೇ**—ಹವಿಸ್ಸನ್ನರ್ಪಿಸುವವನೂ ಆದ । **ಮರ್ತ್ಯಾಯ**—ಯಜಮಾನನಿಗೆ । **ಭೂರಿ**—ಅಧಿಕವಾಗಿ । **ವಾಮಂ**—ಅಪೇಕ್ಷಿತವಾದ ಧನವನ್ನು । **ವಹಸಿ**—ತೆಗೆದುಕೊಂಡು ಬಾ.

॥ ಭಾವಾರ್ಥ ॥

ಎಲೈ ಉಷೋದೇವಿಯೇ, ನಿನ್ನ ಆವಿರ್ಭಾವಕಾಲದಲ್ಲಿ ಪಕ್ಷಿಗಳೂ ಕೂಡ ತಮ್ಮ ನಿವಾಸಸ್ಥಾನಗಳಿಂದ ಹಾರಿಹೋಗುತ್ತವೆ. ಅನ್ನಸಂಪಾದನೆಯಲ್ಲಿ ನಿರತರಾದ ಮಾನವರೂ ಸಹ ಪ್ರಬುದ್ಧರಾಗಿ ಎದ್ದು ಓಡಾಡುತ್ತಾರೆ. ದೇವತಾತ್ಮಳಾದ ಎಲೈ ಉಷಸ್ಸೇ, ನಿನ್ನ ಸಮೀಪದಲ್ಲಿದ್ದು ನಿನಗೆ ಹವಿಸ್ಸನ್ನರ್ಪಿಸುವ ಯಜಮಾನನಿಗೆ ಅಧಿಕವಾಗಿ ಅಪೇಕ್ಷಿತವಾದ ಧನವನ್ನು ತೆಗೆದುಕೊಂಡು ಬಾ.

English Translation.

At your dawning, divine Ushas, the birds spring up from their nests, and men who have to gain their sustenance (arise): you divine Ushas, bring ample wealth to the mortal who is near you, the offerer of the oblation.



## ಅರವತ್ತೈದನೆಯ ಸೂಕ್ತವು

॥ ಸಾಯಣಭಾಷ್ಯಂ ॥

ಏಷಾ ಸ್ಯೇತಿ ಷಡೃಚಂ ಚತುರ್ಥಂ ಸೂಕ್ತಂ ಭರದ್ವಾಜಸ್ಯಾರ್ಷಂ ತ್ರೈಷ್ಟುಭಂ । ಅನುಕ್ರಮ್ಯತೇ ಚ । ಏಷಾ ಸ್ಯೇತಿ । ಉಷಸ್ಯಂ ತ್ವಿತಿ ಪೂರ್ವಸೂಕ್ತ ಉಕ್ತತ್ವಾದಿದಮಪ್ಯುಷೋದೇವತಾಕಂ ॥ ಪ್ರಾತರನು-ವಾಕಾಶ್ವಿನಶಸ್ತ್ರಯೋರುಕ್ತೋ ವಿನಿಯೋಗಃ ॥

ಅನುವಾದವು— **ಏಷಾ ಸ್ಯಾ** ಎಂಬ ಈ ಸೂಕ್ತವು ಆರನೆಯ ಅನುವಾಕದಲ್ಲಿ ನಾಲ್ಕನೆಯ ಸೂಕ್ತವು ಇದರಲ್ಲಿ ಆರು ಋಕ್ಕುಗಳಿರುವವು. ಈ ಸೂಕ್ತಕ್ಕೆ ಭರದ್ವಾಜನು ಋಷಿಯು ; ಉಷೋದೇವತೆಯೇ ದೇವತೆಯು ; ತ್ರಿಷ್ಟುಪ್ ಛಂದಸ್ಸು. ಅನುಕ್ರಮಣಿಕೆಯಲ್ಲಿ— **ಏಷಾ ಸ್ಯಾ** ಎಂದು ಹೇಳಿರುವುದು. ಪ್ರಾತರನುವಾಕ ಮತ್ತು ಆಶ್ವಿನ ಶಸ್ತ್ರಮಂತ್ರಗಳಿಗಾಗಿ ಈ ಸೂಕ್ತದ ವಿನಿಯೋಗವಿರುವುದೆಂದು ಹಿಂದೆಯೇ ಹೇಳಲಾಗಿದೆ.

## ಸೂಕ್ತ—೬೪

ಮಂಡಲ—೬ ॥ ಅನುವಾಕ—೬ ॥ ಸೂಕ್ತ—೬೪ ॥
ಅಷ್ಟಕ—೫ ॥ ಅಧ್ಯಾಯ—೧ ॥ ವರ್ಗ—೬ ॥

॥ ಸೂಕ್ತದಲ್ಲಿರುವ ಋಕ್ಸಂಖ್ಯೆ—೬ ॥
॥ ಋಷಿಃ—ಭರದ್ವಾಜೋ ಬಾರ್ಹಸ್ಪತ್ಯಃ ॥
॥ ದೇವತಾ—ಉಷಾಃ ॥
॥ ಛಂದಃ—ತ್ರಿಷ್ಟುಪ್ ॥

॥ ಸಂಹಿತಾಪಾಠಃ ॥

**ಏಷಾ ಸ್ಯಾ ನೋ ದುಹಿತಾ ದಿವೋಜಾಃ ಕ್ಷಿತೀರುಚ್ಛಂತೀ ಮಾನುಷೀರಜೀಗಃ।**
**ಯಾ ಭಾನುನಾ ರುಶತಾ ರಾಮ್ಯಾಸ್ವಜ್ಞಾಯಿ ತಿರಸ್ತಮಸಶ್ಚಿದಕ್ತೂನ್ ॥ ೧ ॥**

॥ ಪದಪಾಠಃ ॥

**ಏಷಾ । ಸ್ಯಾ । ನಃ । ದುಹಿತಾ । ದಿವಃऽಜಾಃ । ಕ್ಷಿತೀಃ । ಉಚ್ಛಂತೀ । ಮಾನುಷೀಃ । ಅಜೀಗರಿತಿ । ಯಾ । ಭಾನುನಾ । ರುಶತಾ । ರಾಮ್ಯಾಸು । ಅಜ್ಞಾಯಿ । ತಿರಃ । ತಮಸಃ । ಚಿತ್ । ಅಕ್ತೂನ್ ॥ ೧ ॥**

॥ ಸಾಯಣಭಾಷ್ಯಂ ॥

**ಏಷಾ ಸ್ಯಾ ಸಾ ದಿವೋಜಾ ದಿವೋ ಜಾತಾ ಅತ ಏವ ದುಹಿತಾ ದಿವಃ ಪುತ್ರ್ಯುಷಾ ನೋऽಸ್ಮದರ್ಥಮುಚ್ಛಂತೀ ತಮಾಂಸಿ ವರ್ಜಯಂತೀ ಕ್ಷಿತೀಃ ಪ್ರಜಾಃ ಮಾನುಷೀರಜೀಗಃ। ಉದ್ಗಿರತಿ। ಜೀಗರ್ತಿರ್ಗಿರತಿಕರ್ಮಾ ವಾ । ನಿ. ೬-೮ । ಇತಿ ಯಾಸ್ಕಃ। ಪ್ರಕಾಶಯತೀತಿ ಯಾವತ್ । ಯಾ ರುಶತಾ ದೀಪ್ಯಮಾನೇನ ಭಾನುನಾ ಯುಕ್ತಾ ರಾಮ್ಯಾಸು ಯಾಮ್ಯಾಸು ರಾತ್ರಿಷು ॥ ರೇಫಯಕಾರಯೋರ್ವ್ಯತ್ಯಯಃ ॥ ಅಕ್ತೂನ್ನಕ್ಷತ್ರಾದಿತೇಜಾಂಸಿ ತಮಸಶ್ಚಿತ್ ತಮಾಂಸಿ ಚ ತಿರಸ್ತಿರಸ್ಕುರ್ವತ್ಯಜ್ಞಾಯಿ ದೃಶ್ಯತೇ॥**

॥ ಪ್ರತಿಪದಾರ್ಥ ॥

**ಯಾ**—ಯಾದ ಉಷೋದೇವಿಯು । **ರುಶತಾ**—ಕಾಂತಿಯುತವಾದ । **ಭಾನುನಾ**—ರಶ್ಮಿಗಳಿಂದ । **ರಾಮ್ಯಾಸು**—ರಾತ್ರಿಕಾಲಗಳಲ್ಲಿದ್ದ । **ಅಕ್ತೂನ್**—ನಕ್ಷತ್ರಾದಿಗಳನ್ನು । **ತಮಸಶ್ಚಿತ್**—ಅದರಂತೆಯೇ

ಅಂಧಕಾರವನ್ನೂ । **ತಿರಃ**—ಮರೆ ಮಾಡುತ್ತಾ । **ಅಜ್ಞಾಯಿ**—ಗೋಚರಳಾಗುವಳೋ ಅಂತಹ । **ಸ್ಯಾ**—ಪ್ರಸಿದ್ಧಳೂ । **ದಿವೋಜಾಃ**—ದ್ಯುಲೋಕೋತ್ಪನ್ನಳೂ । **ದುಹಿತಾ**—ದ್ಯುಲೋಕಪುತ್ರಿಯೂ ಆದ । **ಏಷಾ**—ಈ ಉಷೋದೇವಿಯು । **ನಃ**—ನಮಗಾಗಿ । **ಉಚ್ಛಂತೀ**—ತಮಸ್ಸನ್ನು ನಾಶಪಡಿಸುತ್ತಾ । **ಮಾನುಷೀಃ**—**ಕ್ಷಿತೀಃ**—ಮಾನವ ಪ್ರಜೆಗಳನ್ನು । **ಅಜೀಗಃ**—ಪ್ರಕಾಶಪಡಿಸುತ್ತಾಳೆ.

॥ ಭಾವಾರ್ಥ ॥

ಯಾವ ಉಷೋದೇವಿಯು ತನ್ನ ಕಾಂತಿಯುತವಾದ ರಶ್ಮಿಗಳಿಂದ ರಾತ್ರಿ ಕಾಲದಲ್ಲಿ ಕಂಗೊಳಿಸುತ್ತಿದ್ದ ನಕ್ಷತ್ರಾದಿಗಳನ್ನೂ ಅದರಂತೆಯೇ ಅಂಧಕಾರವನ್ನೂ ಮರೆಮಾಡುತ್ತಾ ಗೋಚರಳಾಗುವಳೋ ಅಂತಹ ಪ್ರಸಿದ್ಧಳೂ ದ್ಯುಲೋಕೋತ್ಪನ್ನಳೂ, ದ್ಯುಲೋಕಪುತ್ರಿಯೂ ಆದ ಉಷೋದೇವಿಯು ನಮಗಾಗಿ ತಮಸ್ಸನ್ನು ಚದುರಿಸುತ್ತಾ ಮಾನವಪ್ರಜೆಗಳನ್ನು ಪ್ರಕಾಶಪಡಿಸುತ್ತಾಳೆ.

English Translatior.

This heaven-bron daughter (of th sky), driving away the darkness for us, makes visible humau beings : she who with bright lustre is perceived dissipating the glooms, and (extinguishing) the planets (shining) in the nights.

॥ ಸಂಹಿತಾಪಾಠಃ ॥

ವಿ ತದ್ಯಯುರರುಣಯುಗ್ಭಿರಶ್ವೈಶ್ಚಿತ್ರಂ ಭಾಂತ್ಯುಷಸಶ್ಚಂದ್ರರಥಾಃ ।
ಅಗ್ರಂ ಯಜ್ಞಸ್ಯ ಬೃಹತೋ ನಯಂತೀರ್ವಿ ತಾ ಬಾಧಂತೇ ತಮ
ಊರ್ಮ್ಯಾಯಾಃ ॥ ೨ ॥

॥ ಪದಪಾಠಃ ॥

ವಿ । ತತ್ । ಯಯುಃ । ಅರುಣಯುಕ್ಽಭಿಃ । ಅಶ್ವೈಃ । ಚಿತ್ರಂ । ಭಾಂತಿ । ಉಷಸಃ । ಚಂದ್ರಽರಥಾಃ ।
ಅಗ್ರಂ । ಯಜ್ಞಸ್ಯ । ಬೃಹತಃ । ನಯಂತೀಃ । ವಿ । ತಾಃ । ಬಾಧಂತೇ । ತಮಃ । ಊರ್ಮ್ಯಾಯಾಃ ॥೨॥

॥ ಸಾಯಣಭಾಷ್ಯಂ ॥

ಚಂದ್ರರಥಾಃ ಕಾಂತಿರಥಾಃ । ಚಂದ್ರಶ್ಚಂದತೇಃ ಕಾಂತಿಕರ್ಮಣಃ । ನಿ. ೧೧-೫ । ಇತಿ ಯಾಸ್ಕಃ । ತಾ ಉಷಸಸ್ತತ್ತದಾನೀಂ ಪ್ರಾತಃಕಾಲೇ ಬೃಹತೋ ಬೃಂಹಣಶೀಲಸ್ಯ ಯಜ್ಞಸ್ಯಾಗ್ರಂ ಮುಖಂ ನಯಂತೀಃ ಸಂಪಾದಯಂತ್ಯೋಽರುಣಯುಗ್ಭಿರರುಣವರ್ಣಯುಕ್ತೈರಶ್ವೈರ್ವಿ ಯಯುಃ । ವಿಸ್ತೀರ್ಣಂ ಯಾಂತಿ ।

**ಚಿತ್ರಂ ಯಥಾ ಭವತಿ ತಥಾ ಭಾಂತಿ ಚ । ಉರ್ವಾರ್ಮ್ಯಯಾ ರಾತ್ರೇಃ । ಅಕ್ತುರೂರ್ಮ್ಯೇತಿ ರಾತ್ರಿನಾಮಸು ಪಾಠಾತ್ । ತಮೋ ವಿ ಬಾಧಂತೇ । ಸಮ್ಯಗಪನಯಂತಿ ಚ ॥**

॥ ಪ್ರತಿಪದಾರ್ಥ ॥

**ಚಂದ್ರರಥಾಃ**—ಆಕರ್ಷಕವಾದ ಕಾಂತಿಯುಳ್ಳ ರಥಯುಕ್ತರಾದ । **ಉಷಸಃ**—ಉಷಸ್ಸುಗಳು । **ತತ್**—ಪ್ರಾತಃಕಾಲದಲ್ಲಿಯೇ । **ಬೃಹತಃ**—ಬೃಹತ್ಸ್ವರೂಪವುಳ್ಳ । **ಯಜ್ಞಸ್ಯ**—ಯಜ್ಞದ । **ಅಗ್ರಂ**—ಅಗ್ರಭಾಗವನ್ನು । **ನಯಂತೀಃ**—ಸಂಪಾದಿಸುತ್ತಾ । **ಅರುಣಯುಗ್ಭಿಃ**—ಅರುಣವರ್ಣಯುಕ್ತವಾದ । **ಅಶ್ವೈಃ**—ಅಶ್ವಗಳಿಂದ । **ವಿ ಯಯುಃ**—ಯಥೇಚ್ಛವಾಗಿ ಸಂಚರಿಸುತ್ತಾರೆ । **ಚಿತ್ರಂ**—ನಾನಾವಿಧವಾಗಿ । **ಭಾಂತಿ**—ಪ್ರಕಾಶಿಸುತ್ತಾರೆ । **ತಾಃ**—ಅವರು । **ಊರ್ವಾರ್ಮ್ಯಯಾಃ**—ರಾತ್ರಿಕಾಲದ । **ತಮಃ**—ಅಂಧಕಾರವನ್ನು । **ವಿ ಬಾಧಂತೇ**—ಪೂರ್ಣವಾಗಿ ನಾಶಪಡಿಸುತ್ತಾರೆ.

॥ ಭಾವಾರ್ಥ ॥

ಆಕರ್ಷಕವಾದ ಕಾಂತಿಯುಳ್ಳ ರಥದಿಂದ ಕೂಡಿದ ಉಷಸ್ಸುಗಳು ಪ್ರಾತಃಕಾಲದಲ್ಲಿಯೇ ಬೃಹತ್ಸ್ವರೂಪವುಳ್ಳ ಯಜ್ಞದ ಅಗ್ರಭಾಗವನ್ನು ಸಂಪಾದಿಸುತ್ತಾ ಅರುಣ ವರ್ಣಯುಕ್ತವಾದ ಅಶ್ವಗಳೊಡನೆ ಯಥೇಚ್ಛವಾಗಿ ಸಂಚರಿಸುತ್ತಾರೆ. ನಾನಾವಿಧವಾಗಿ ಪ್ರಕಾಶಿಸುತ್ತಾ ಅವರು ರಾತ್ರಿಕಾಲದ ಅಂಧಕಾರವನ್ನು ಪೂರ್ಣವಾಗಿ ನಾಶಪಡಿಸುತ್ತಾರೆ.

English Translation.

The Dawns in beautiful chariots drawn by purple steeds in pairs, shine gloriously as they proceed (along the heaven): bringing on the commencement of the great (morning) sacrifice, they disperse the darkness of the night.

॥ ಸಂಹಿತಾಪಾಠಃ ॥

ಶ್ರವೋ ವಾಜಮಿಷಮೂರ್ಜಂ ವಹಂತೀರ್ನಿ ದಾಶುಷ ಉಷಸೋ ಮರ್ತ್ಯಾಯ ।
ಮಘೋನೀರ್ವೀರವತ್ಪತ್ಯಮಾನಾ ಅವೋ ಧಾತ ವಿಧತೇ ರತ್ನಮದ್ಯ ॥೩॥

॥ ಪದಪಾಠಃ ॥

**ಶ್ರವಃ । ವಾಜಂ । ಇಷಂ । ಊರ್ಜಂ । ವಹಂತೀಃ । ನಿ । ದಾಶುಷೇ । ಉಷಸಃ । ಮರ್ತ್ಯಾಯ । ಮಘೋನೀಃ । ವೀರಽವತ್ । ಪತ್ಯಮಾನಾಃ । ಅವಃ । ಧಾತ । ವಿಧತೇ । ರತ್ನಂ । ಅದ್ಯ ॥ ೩ ॥**

॥ ಸಾಯಣಭಾಷ್ಯಂ ॥

ಹೇ ಉಷಸೋ ದಾಶುಷೇ ಹವಿಷಾಂ ದಾತ್ರೇ ಮರ್ತ್ಯಾಯ ಶ್ರವಃ ಕೀರ್ತಿಂ ವಾಜಂ ಬಲಮಿಷಮನ್ನಮೂರ್ಜಂ ರಸಂ ಚ ವಹಂತೀರ್ವಹಂತ್ಯೋ ಯೂಯಂ ಮಘೋನೀರ್ಧನವತ್ಯಃ ಪತ್ಯಮಾನಾ ಗಚ್ಛಂತ್ಯೋಽದ್ಯ ವಿಧತೇ ಪರಿಚರತೇ ಮಹ್ಯಂ ವೀರವತ್ಪುತ್ರಪೌತ್ರಾದಿಸಹಿತಮವೋಽನ್ನಂ। ಸಿನಮವ ಇತ್ಯನ್ನನಾಮಸು ಪಾಠಾತ್ । ರತ್ನಂ ಧನಂ ಚ । ಶ್ವಾತ್ರಂ ರತ್ನಮಿತಿ ಧನನಾಮಸು ಪಾಠಾತ್ । ನಿ ಧಾತ । ನಿತರಾಂ ಧತ್ತ ॥

॥ ಪ್ರತಿಪದಾರ್ಥ ॥

**ಉಷಸಃ** – ಎಲೈ ಉಷೋದೇವಿಗಳೇ । **ದಾಶುಷೇ**—ಹವಿಸ್ಸನ್ನು ಅರ್ಪಿಸತಕ್ಕ । **ಮರ್ತ್ಯಾಯ**—ಮಾನವನಿಗೆ । **ಶ್ರವಃ**—ಕೀರ್ತಿಯನ್ನೂ । **ವಾಜಂ**—ಬಲನನ್ನೂ । **ಇಷಂ**—ಅನ್ನವನ್ನೂ । **ಊರ್ಜಂ**—ರಸವನ್ನೂ । **ವಹಂತೀಃ**—ವಹಿಸುವ ನೀವು । **ಮಘೋನೀಃ**—ಧನವತಿಯರಾಗಿ । **ಪತ್ಯಮಾನಾಃ**—ಸಂಚರಿಸುತ್ತಾ । **ಅದ್ಯ**—ಈ ಕಾಲದಲ್ಲಿ । **ವಿಧತೇ**—ನಿಮ್ಮನ್ನು ಪೂಜಿಸುವ ನನಗೂ । **ವೀರವತ್**—ವೀರಪುತ್ರಾದಿ ಸಹಿತವಾದ । **ಅವಃ**—ಅನ್ನವನ್ನು । **ರತ್ನಂ**— ಧನವನ್ನೂ । **ನಿ ಧಾತ**—ಪೂರ್ಣವಾಗಿ ಕೊಡಿರಿ.

॥ ಭಾವಾರ್ಥ ॥

ಎಲೈ ಉಷೋದೇವಿಗಳೇ, ಹವಿಸ್ಸನ್ನು ಅರ್ಪಿಸತಕ್ಕ ಮಾನವನಿಗೆ ಕೀರ್ತಿಯನ್ನೂ, ಬಲವನ್ನೂ, ಅನ್ನವನ್ನೂ, ರಸವನ್ನೂ, ವಹಿಸುವ ನೀವು ಧನವತಿಯರಾಗಿ ಸಂಚರಿಸುತ್ತಾ ಈ ಕಾಲದಲ್ಲಿ ನಿಮ್ಮನ್ನು ಪೂಜಿಸುವ ನನಗೂ ವೀರಪುತ್ರಾದಿಸಹಿತವಾದ ಅನ್ನವನ್ನೂ ಧನವನ್ನೂ ಪೂರ್ಣವಾಗಿ ಕೊಡಿರಿ.

## English Translation.

Dawns, bringing fame, and food, and sustenance, and strength to the mortal, the donor (of the oblation). abounding in wealth, and proceeding (through the sky), bestow upon the worshipper to-day food, with male descendants and riches.

|| ಸಂಹಿತಾಪಾಠಃ ||

ಇದಾ ಹಿ ವೋ ವಿಧತೇ ರತ್ನಮಸ್ತೀದಾ ವೀರಾಯ ದಾಶುಷ ಉಷಾಸಃ ।
ಇದಾ ವಿಪ್ರಾಯ ಜರತೇ ಯದುಕ್ಥಾ ನಿ ಷ್ಮ ಮಾವತೇ ವಹಥಾ ಪುರಾ ಚಿತ್ ॥ ೪ ॥

|| ಪದಪಾಠಃ ||

ಇದಾ । ಹಿ । ವಃ । ವಿಧತೇ । ರತ್ನಂ । ಅಸ್ತಿ । ಇದಾ । ವೀರಾಯ । ದಾಶುಷೇ । ಉಷಸಃ ।

ಇದಾ । ವಿಪ್ರಾಯ । ಜರತೇ । ಯತ್ । ಉಕ್ಥಾ । ನಿ । ಸ್ಮ । ಮಾವತೇ । ವಹಥ । ಪುರಾ । ಚಿತ್ ॥ ೪ ॥

|| ಸಾಯಣಭಾಷ್ಯಂ ||

**ಹೇ ಉಷಸ ಇದಾ ಹೀದಾನೀಮೇವ ವೋ ಯುಷ್ಮಾಕಂ ವಿಧತೇ ಪರಿಚರತೇ ದಾತುಂ ರತ್ನಂ ಧನಮಸ್ತಿ । ಇದಾ ಹೀದಾನೀಮೇವ ವೀರಾಯ ಪ್ರೇರಯಿತ್ರೇ ಹವಿಷಾಂ ದಾಶುಷೇ ಯಜಮಾನಾಯ ದಾತುಂ ವೋ ರತ್ನಮಸ್ತಿ । ಇದಾ ಹೀದಾನೀಮೇವ ವಿಪ್ರಾಯ ಪ್ರಾಜ್ಞಾಯ ಜರತೇ ಸ್ತುವತೇ ದಾತುಂ ವೋ ರತ್ನಮಸ್ತಿ । ಯದ್ಯಸ್ಮಿನ್ನಿಪ್ರ ಉಕ್ಥೋಕ್ಥನಾಮಕಾನಿ ಸ್ತೋತ್ರಾಣಿ ವಿದ್ಯಂತೇ ಮಾವತೇ ಮತ್ಸದೃಶಾಯ ಯಜಮಾನಾಯ ತದ್ರತ್ನಂ ನಿ ವಹಥ । ಪುರಾ ಚಿತ್ ಪುರಾಪಿ ರತ್ನಂ ಮಹ್ಯಂ ದತ್ತಂ ॥**

||ಪ್ರತಿಪದಾರ್ಥ ||

**ಉಷಸಃ**—ಎಲೈ ಉಷೋದೇವಿಗಳೇ । **ಇದಾ ಹಿ**—ಈಗಲೇ । **ವಃ**—ನಿಮಗೆ । **ವಿಧತೇ**—ಪೂಜೆಯನ್ನರ್ಪಿಸುವವನಿಗೆ ಕೊಡಲು । **ರತ್ನಂ**—ಧನವು । **ಅಸ್ತಿ**—ಇದೆ । **ಇದಾ (ಹಿ)**—ಈಗಲೇ । **ವೀರಾಯ**—ಹವಿಸ್ಸನ್ನರ್ಪಿಸುವ । **ದಾಶುಷೇ**—ಯಜಮಾನನಿಗೆ (ಕೊಡಲು ನಿಮ್ಮಲ್ಲಿ ಧನವಿದೆ) । **ಇದಾ (ಹಿ)**—ಈಗಲೇ । **ವಿಪ್ರಾಯ**—ಪ್ರಾಜ್ಞನೂ । **ಜರತೇ**—ಸ್ತುತಿಕರ್ತನೂ ಆದ ಯಜಮಾನನಿಗೆ ಕೊಡಲು ಧನವಿದೆ । **ಯತ್**—ಯಾವ ಯಜಮಾನನಲ್ಲಿ । **ಉಕ್ಥಾ**—ಉಕ್ಥರೂಪವಾದ ಸ್ತೋತ್ರಗಳಿವೆಯೋ । **ಮಾವತೇ**—ನನ್ನಂತಿರುವ ಆ ಯಜಮಾನನಿಗೂ । **ನಿ ವಹಥ**—ಧನವನ್ನು ತಂಬಿರಿ । **ಪುರಾ ಚಿತ್**—ಹಿಂದೆಯೂ ನನಗೆ ದಾನಮಾಡಿದಿರಿ.

॥ ಭಾವಾರ್ಥ ॥

ಎಲೈ ಉಷೋದೇವಿಗಳೇ, ಈಗಲೇ ನಿಮಗೆ ಪೂಜೆಯನ್ನರ್ಪಿಸುವವನಿಗೆ ಕೊಡಲೂ ಧನವಿದೆ. ಈಗಲೇ ಹವಿಸ್ಸನ್ನರ್ಪಿಸುವ ಯಜಮಾನನಿಗೆ ಕೊಡಲೂ ಧನವಿದೆ. ಪ್ರಾಜ್ಞನೂ ಸ್ತುತಿಕರ್ತನೂ ಆದ ಯಜಮಾನನಿಗೆ ಈಗಲೇ ಕೊಡಲು ಧನವಿದೆ. ಎಲೈ ಉಷಸ್ಸುಗಳೇ, ನನ್ನಂತೆಯೇ, ಯಾವ ಯಜಮಾನನಲ್ಲಿ ಉಕ್ಥರೂಪವಾದ ಸ್ತುತಿಗಳಿವೆಯೋ ಅಂತಹ ಯಜಮಾನನಿಗೆ ಹಿಂದೆ ನಮಗೆ ಕೊಟ್ಟಂತೆಯೇ ಧನವವನ್ನು ತಂದು ತುಂಬಿರಿ.

## English Translation.

Verily, Dawns, there is at present wealth to give to your worshipper, to the man offering (oblations), to the sage repeating your praise; if the praises (are accepted), then bring to him who is like me such wealth as has been formerly bestowed (upon myself).

॥ ಸಂಹಿತಾಪಾಠಃ ॥

ಇದಾ ಹಿ ತ ಉಷೋ ಅದ್ರಿಸಾನೋ ಗೋತ್ರಾ ಗವಾಮಂಗಿರಸೋ ಗೃಣಂತಿ।
ವ್ಯ೧ರ್ಕೇಣ ಬಿಭಿದುರ್ಬ್ರಹ್ಮಣಾ ಚ ಸತ್ಯಾ ನೃಣಾಮಭವದ್ದೇವಹೂತಿಃ ॥

॥ ಪದಪಾಠಃ ॥

ಇದಾ । ಹಿ । ತೇ । ಉಷಃ । ಅದ್ರಿಸಾನೋ ಇತ್ಯದ್ರಿಽಸಾನೋ । ಗೋತ್ರಾ । ಗವಾಂ । ಅಂಗಿರಸಃ । ಗೃಣಂತಿ ।
ವಿ । ಅರ್ಕೇಣ । ಬಿಭಿದುಃ । ಬ್ರಹ್ಮಣಾ । ಚ । ಸತ್ಯಾ । ನೃಣಾಂ । ಅಭವತ್ । ದೇವಽಹೂತಿಃ ॥ ೫ ॥

॥ ಸಾಯಣಭಾಷ್ಯಂ ॥

**ಹೇ ಉಷೋಽದ್ರಿಸಾನೋ ಅದೃತಸಾನೋ ತೇ ತವ ಪ್ರಸಾದಾದಿದಾ ಹಿ ಸದ್ಯ ಏವ ಗವಾಂ ಗೋತ್ರಾ ಸಂಘಾನಂಗಿರಸೋ ಗೃಣಂತಿ । ಉತ್ಸೃಜಂತಿ । ತಥಾ ಚ ನಿಗಮಾಂತರಂ । ಗವಾಂ ಗೋತ್ರಮುದಸೃಜೋ ಯದಂಗಿರಃ । ಋಗ್ವೇ. ೨-೨೩-೧೮ । ಇತಿ । ಅರ್ಕೇಣಾರ್ಚನೀಯೇನ ಬ್ರಹ್ಮಣಾ ಸ್ತೋತ್ರೇಣ ವಿ ಬಿಭಿದುಃ । ತಮಾಂಸಿ ವಿದಾರಯಂತಿ ಚ । ನೃಣಾಂ ನೇತೄಣಾಂ ತೇಷಾಮಂಗಿರಸಾಂ ದೇವಹೂತಿರ್ದೇವ-ವಿಷಯಾ ಸ್ತುತಿಃ ಸತ್ಯಾ ಸತ್ಯಫಲಾಭವತ್ ॥**

॥ ಪ್ರತಿಪದಾರ್ಥ ॥

**ಉಷಃ**—ಎಲೈ ಉಷೋದೇವಿಯೇ । **ತೇ**—ನಿನ್ನ ಅನುಗ್ರಹದಿಂದ । **ಅಂಗಿರಸಃ**—ಅಂಗಿರಸ್ಸುಗಳು । **ಅದ್ರಿಸಾನೋ**—ಪರ್ವತದ ಸಾನುಪ್ರದೇಶಗಳಿಂದ । **ಇದಾ ಹಿ**—ಈಗಲೇ । **ಗವಾಂ ಗೋತ್ರಾ**—ಗೋವುಗಳ ಸಂಘವನ್ನು । **ಗೃಣಂತಿ**—ಬಿಡಿಸಿಕೊಳ್ಳುತ್ತಾರೆ । **ಅರ್ಕೇಣ**—ಪೂಜಾಯೋಗ್ಯವಾದ । **ಬ್ರಹ್ಮಣಾ ಚ**—ಸ್ತೋತ್ರದಿಂದಲೂ । **ವಿ ಬಿಭಿದುಃ**—ತಮಸ್ಸನ್ನು ನಾಶಪಡಿಸಿದ್ದಾರೆ । **ನೃಣಾಂ**—ನೇತೃಗಳಾದ ಅಂಗಿರಸ್ಸುಗಳ । **ದೇವಹೂತಿಃ**—ದೇವತೆಗಳನ್ನುದ್ದೇಶಿಸಿದ ಸ್ತುತಿಯು । **ಸತ್ಯಾ**—ಸತ್ಯ ಫಲವುಳ್ಳದ್ದಾಗಿ । **ಅಭವತ್**—ಆಯಿತು.

॥ ಭಾವಾರ್ಥ ॥

ಎಲೈ ಉಷೋದೇವಿಯೇ, ನಿನ್ನ ಅನುಗ್ರಹದಿಂದ ಅಂಗಿರಸ್ಸುಗಳು ಪರ್ವತದ ಸಾನುಪ್ರದೇಶಗಳಿಂದ ಈಗಲೇ ಗೋವುಗಳ ಸಂಘವನ್ನು ಬಿಡಿಸಿಕೊಳ್ಳುತ್ತಾರೆ. ಪೂಜಾಯೋಗ್ಯವಾದ ಸ್ತೋತ್ರದಿಂದಲೂ ತಮಸ್ಸನ್ನು ನಾಶಪಡಿಸಿದ್ದಾರೆ. ನೇತೃಗಳಾದ ಅಂಗಿರಸ್ಸುಗಳ ದೇವತೆಗಳನ್ನುದ್ದೇಶಿಸಿದ ಸ್ತುತಿಯು ಸತ್ಯ ಫಲವುಳ್ಳದ್ದಾಗಿ ಆಯಿತು.

## English Translation.

Verily, Ushas, the Angirasas through your (favour) recover the herd of cattle from the summit of the mountain : by adoration and prayer they

have divided (the rock) : unfailing was the praise of the gods uttered by the leaders (of rites).

॥ ಸಂಹಿತಾಪಾಠಃ ॥

ಉಚ್ಛಾ ದಿವೋ ದುಹಿತಃ ಪ್ರತ್ನವನ್ನೋ ಭರದ್ವಾಜವದ್ವಿಧತೇ ಮಘೋನಿ।
ಸುವೀರಂ ರಯಿಂ ಗೃಣತೇ ರಿರೀಹ್ಯುರುಗಾಯಮಧಿ ಧೇಹಿ ಶ್ರವೋ ನಃ ॥೬॥

॥ ಪದಪಾಠಃ ॥

ಉಚ್ಛ । ದಿವಃ । ದುಹಿತರಿತಿ । ಪ್ರತ್ನಽವತ್ । ನಃ । ಭರದ್ವಾಜಽವತ್ । ವಿಧತೇ । ಮಘೋನಿ ।
ಸುಽವೀರಂ । ರಯಿಂ । ಗೃಣತೇ । ರಿರೀಹಿ । ಉರುಽಗಾಯಂ । ಅಧಿ । ಧೇಹಿ । ಶ್ರವಃ । ನಃ ॥ ೬ ॥

॥ ಸಾಯಣಭಾಷ್ಯಂ ॥

ಹೇ ದಿವೋ ದುಹಿತರುಷಃ ಪ್ರತ್ನವತ್ಪುರಾತನೇಭ್ಯ ಇವ ನೋಽಸ್ಮದರ್ಥಮುಚ್ಛ । ತಮಾಂಸಿ ವರ್ಜಯ । ಹೇ ಮಘೋನಿ ಭರದ್ವಾಜವದ್ವಿಧತೇ ಪರಿಚರತೇ । ಭರದ್ವಾಜವದಿತಿ ವಚನಾದನ್ಯೋಽಪ್ಯಸ್ತಿ ಭರದ್ವಾಜಃ । ತಥಾ ಚ ಬ್ರಾಹ್ಮಣಂ । ಪ್ರಾಣೋ ವೈ ಭರದ್ವಾಜವದಿತಿ । ಗೃಣತೇ ಸ್ತುತಿಂ ಕುರ್ವತೇ ಮಹ್ಯಂ ಸುವೀರಂ ಕಲ್ಯಾಣಪುತ್ರಪೌತ್ರಾದಿಯುಕ್ತಂ ರಯಿಂ ಧನಂ ರಿರೀಹಿ । ದೇಹಿ । ಕಿಂಚ ನೋಽಸ್ಮಭ್ಯಮುರುಗಾಯಂ ಬಹುಭಿರ್ಗಾತವ್ಯಂ ಶ್ರವೋಽನ್ನಮಧಿ ಧೇಹಿ । ಅಧಿಕಂ ಪ್ರಯಚ್ಛ ॥

॥ ಪ್ರತಿಪದಾರ್ಥ ॥

**ದಿವೋ ದುಹಿತಃ**—ದ್ಯುಲೋಕ ಪುತ್ರಿಯಾದ ಎಲೈ ಉಷೋದೇವಿಯೇ । **ಪ್ರತ್ನವತ್**—ಹಿಂದೆ ಅನುಗ್ರಹಿಸಿದಂತೆಯೇ । **ನಃ**—ನಮಗಾಗಿಯೂ । **ಉಚ್ಛ**—ತಮಸ್ಸನ್ನು ಚದುರಿಸು । **ಮಘೋನಿ**—ಧನಯುಕ್ತಳಾದ ಎಲೈ ಉಷೋದೇವಿಯೇ । **ಭರದ್ವಾಜವತ್**—ಹಿಂದೆ ಭರದ್ವಾಜನಿಗೆ ಕೊಟ್ಟಂತೆಯೇ । **ವಿಧತೇ**—ನಿನಗೆ ಪೂಜೆಯನ್ನರ್ಪಿಸುವವನೂ । **ಗೃಣತೇ**—ಸ್ತುತಿಸುವವನೂ ಆದ ನನಗೂ ಸಹ । **ಸುವೀರಂ**—ವೀರಪುತ್ರಾದಿ ಸಹಿತವಾದ । **ರಯಿಂ**—ಧನವನ್ನು । **ರಿರೀಹಿ**—ಕೊಡು । **ನಃ**—ನಮಗೆ । **ಉರುಗಾಯಂ**—ಅನೇಕರಿಂದ ಪ್ರಶಂಸಿತವಾದ । **ಶ್ರವಃ**—ಅನ್ನವನ್ನು । **ಅಧಿ ಧೇಹಿ**—ಅಧಿಕವಾಗಿ ಕೊಡು.

॥ ಭಾವಾರ್ಥ ॥

ದ್ಯುಲೋಕಪುತ್ರಿಯಾದ ಎಲೈ ಉಷೋದೇವಿಯೇ, ಹಿಂದೆ ಅನುಗ್ರಹಿಸಿದಂತೆಯೇ ನಮಗಾಗಿಯೂ ಸಹ ತಮಸ್ಸನ್ನು ನಾಶಮಾಡಿ ಪ್ರಕಾಶವನ್ನುಂಟುಮಾಡು. ಧನಯುಕ್ತಳಾದ ಎಲೈ ಉಷೋದೇವಿಯೇ, ಹಿಂದೆ ಭರದ್ವಾಜನಿಗೆ ಕೊಟ್ಟಂತೆಯೇ ನಿನಗೆ ಪೂಜೆಯನ್ನರ್ಪಿಸುವವನೂ, ಸ್ತುತಿಸುವವನೂ ಆದ ನನಗೂ ಸಹ ವೀರಪುತ್ರಾದಿಸಹಿತವಾದ ಧನವನ್ನು ಕೊಡು. ಅನೇಕರಿಂದ ಪ್ರಶಂಸಿತವಾಗುವ ಅನ್ನವನ್ನೂ ನಮಗೆ ಒದಗಿಸು.

### English Translation.

Daughter of hevan, dawn upon us, as upon those of old : possessor of riches (dawn) upon the worshipper, as (you have done upon) Bharadwaja : grant to him who glorifies you, wealth with male decendants : give to us food that may be distributed to many.



## ಅರವತ್ತಾರನೆಯ ಸೂಕ್ತವು

|| ಸಾಯಣಭಾಷ್ಯಂ ||

**ವಪುರ್ನು ತದಿತ್ಯೇಕಾದಶರ್ಚಂ ಪಂಚಮಂ ಸೂಕ್ತಂ ಭರದ್ವಾಜಸ್ಯಾರ್ಷಂ ತ್ರೈಷ್ಟುಭಂ ಮಾರುತಂ। ತಥಾ ಚಾನುಕ್ರಮ್ಯತೇ। ವಪುರ್ನ್ವೇಕಾದಶ ಮಾರುತಮಿತಿ ॥ ವ್ಯೂಳ್ಹೇ ದಶರಾತ್ರೇ ಷಷ್ಠೇಽಹನ್ಯಾಗ್ನಿಮಾರುತ ಇದಂ ಸೂಕ್ತಂ ಮಾರುತನಿವಿದ್ಧಾನಂ। ಸೂತ್ರಿತಂ ಚ। ಹವಿಷ್ಪಾಂತಂ ವಪುರ್ನು ತತ್ । ಆ. ೮-೮ । ಇತಿ ॥ ವೈಶ್ವದೇವೇ ಪರ್ವಣಿ ಮಾರುತಸಪ್ತಕಪಾಲಸ್ಯ ಪ್ರ ಚಿತ್ರಮರ್ಕಮಿತಿ ಯಾಜ್ಯಾ। ಪ್ರ ಚಿತ್ರಮರ್ಕಂ ಗೃಣತೇ ತುರಾಯೇತಿ ನವಾನುಯಾಜ್ಯಾಃ। ಆ. ೨-೧೬ । ಇತಿ ॥ ಏಕಾದಶಿನೇ ಮಾರುತೇ ಪಶೌ ಪ್ರ ಚಿತ್ರಮರ್ಕಮಿತ್ಯೇಷೈವ ಯಾಜ್ಯಾ। ಸೂತ್ರಿತಂ ಚ। ಪ್ರ ಚಿತ್ರಮರ್ಕಂ ಗೃಣತೇ ತುರಾಯೋರಾ ಇವೇದಚರಮಾ ಅಹೇವ। ಆ. ೩ ೭। ಇತಿ ॥**

ಅನುವಾದವು—**ವಪುರ್ನು ತತ್** ಎಂಬ ಈ ಸೂಕ್ತವು ಆರನೆಯ ಅನುವಾಕದಲ್ಲಿ ಐದನೆಯ ಸೂಕ್ತವು. ಇದರಲ್ಲಿ ಹನ್ನೊಂದು ಋಕ್ಕುಗಳಿರುವವು. ಈ ಸೂಕ್ತಕ್ಕೆ ಭರದ್ವಾಜನು ಋಷಿಯು; ಮರುದ್ದೇವತೆಗಳು ದೇವತೆಯು. ತ್ರಿಷ್ಟುಪ್ ಛಂದಸ್ಸು. ಅನುಕ್ರಮಣಿಕೆಯಲ್ಲಿ—**ವಪುರ್ನ್ವೇಕಾದಶ ಮಾರುತಂ** ಎಂದು ಹೇಳಿರುವುದು. **ವ್ಯೂಳ್ಹ** ದಶರಾತ್ರವೆಂಬ ಯಾಗದ ಆರನೆಯ ದಿವಸ ಆಗ್ನಿಮಾರುತ ಶಸ್ತ್ರಮಂತ್ರಗಳ ಮಧ್ಯದಲ್ಲಿ **ಈ ಸೂಕ್ತವನ್ನು** ಮರುದ್ದೇವತಾಕವಾದ ನಿವಿದ್ಧಾನೀಯಸೂಕ್ತವನ್ನಾಗಿ ಪಠಿಸಬೇಕೆಂದು ಆಶ್ವಲಾಯನ ಶ್ರೌತಸೂತ್ರದ—**ಹವಿಷ್ಪಾಂತಂ ವಪುರ್ನು ತತ್** ಎಂಬ ಸೂತ್ರದಿಂದ (ಆ. ೮-೮) ವಿವೃತವಾಗಿರುವುದು. ವೈಶ್ವದೇವಸಂಬಂಧವಾದ ಪರ್ವೇಷ್ಟಿಯಲ್ಲಿ **ಪ್ರ ಚಿತ್ರಮರ್ಕಂ** ಎಂಬ ಈ ಒಂಭತ್ತನೆಯ ಋಕ್ಕನ್ನು ಮಾರುತಸಪ್ತಕಪಾಲ ಹೋಮದಲ್ಲಿ ಯಾಜ್ಯಾಮಂತ್ರವನ್ನಾಗಿ ಪಠಿಸಬೇಕೆಂದು ಆಶ್ವಲಾಯನಶ್ರೌತಸೂತ್ರದ—**ಪ್ರ ಚಿತ್ರಮರ್ಕಂ ಗೃಣತೇ ತುರಾಯೇತಿ ನವಾನುಯಾಜಾಃ** ಎಂಬ ಸೂತ್ರದಿಂದ (ಆ. ೨-೧೬) ವಿವೃತವಾಗಿರುವುದು. ಯಾಗದ ಏಕಾದಶಿನ್ ಎಂಬ ದಿನ ಮಾಡುವ ಮರುದ್ದೇವತಾಕವಾದ ಪಶುಹೋಮದಲ್ಲಿ **ಪ್ರ ಚಿತ್ರಮರ್ಕಂ** ಎಂಬ ಋಕ್ಕನ್ನು ಯಾಜ್ಯಾಮಂತ್ರವನ್ನಾಗಿ ಪಠಿಸಬೇಕೆಂದು ಆಶ್ವಲಾಯನ ಶ್ರೌತಸೂತ್ರದ—**ಪ್ರ ಚಿತ್ರಮರ್ಕಂ ಗೃಣತೇ ತುರಾಯರಾ ಇವೇದ ಚರಮಾ ಅಹೇವ** ಎಂಬ ಸೂತ್ರದಿಂದ (ಆ. ೩-೭) ವಿವೃತವಾಗಿರುವುದು.

## ಸೂಕ್ತ—೬೬

ಮಂಡಲ—೬ ॥ ಅನುವಾಕ—೬ ॥ ಸೂಕ್ತ—೬೬ ॥
ಅಷ್ಟಕ—೫ ॥ ಅಧ್ಯಾಯ—೧ ॥ ವರ್ಗ—೭,೮ ॥
॥ ಸೂಕ್ತದಲ್ಲಿರುವ ಋಕ್ಸಂಖ್ಯೆ—೧೧ ॥
॥ ಋಷಿಃ— ಭರದ್ವಾಜೋ ಬಾರ್ಹಸ್ಪತ್ಯಃ ॥
॥ ದೇವತಾ—ಮರುತಃ ॥
॥ ಛಂದಃ—ತ್ರಿಷ್ಟುಪ್ ॥

॥ ಸಂಹಿತಾಪಾಠಃ ॥

ವಪುರ್ನು ತಚ್ಚಿಕಿತುಷೇ ಚಿದಸ್ತು ಸಮಾನಂ ನಾಮ ಧೇನು ಪತ್ಯಮಾನಂ ।
ಮರ್ತೇಷ್ವನ್ಯದ್ದೋಹಸೇ ಪೀಪಾಯ ಸಕೃಚ್ಛುಕ್ರಂ ದುದುಹೇ ಪೃಶ್ನಿರೂಧಃ ॥

॥ ಪದಪಾಠಃ ॥

ವಪುಃ । ನು । ತತ್ । ಚಿಕಿತುಷೇ । ಚಿತ್ । ಅಸ್ತು । ಸಮಾನಂ । ನಾಮ । ಧೇನು । ಪತ್ಯಮಾನಂ ।

ಮರ್ತೇಷು । ಅನ್ಯತ್ । ದೋಹಸೇ । ಪೀಪಾಯ । ಸಕೃತ್ । ಶುಕ್ರಂ । ದುದುಹೇ । ಪೃಶ್ನಿಃ । ಊಧಃ ॥

॥ ಸಾಯಣಭಾಷ್ಯಂ ॥

ತತ್ಪ್ರಸಿದ್ಧಂ ಸಮಾನಮೇಕರೂಪಂ । ಮರುತಃ ಸರ್ವದಾ ಸಮಾನರೂಪಾಃ । ತಥಾ ಚ ನಿಗಮಾಂತರಂ । ಅಜ್ಯೇಷ್ಠಾಸೋ ಅಕನಿಷ್ಠಾಸ ಏತೇ । ಋಗ್ವೇ. ೫-೬೦-೫ । ಇತಿ । ನಾಮ ಸ್ಥಿರಾಣಾಮಪಿ ನಾಮಕಂ ಧೇನು ಪ್ರೀಣಯಿತೃ ಪತ್ಯಮಾನಂ ಸರ್ವದಾ ಗಚ್ಛದ್ವಪುರ್ಮರುತಾಂ ರೂಪಂ ಚಿಕಿತುಷೇ ವಿದುಷೇ ಸ್ತೋತ್ರೇ ನು ಕ್ಷಿಪ್ರಮಸ್ತು । ಪ್ರಾದುರ್ಭವತು । ಚಿದಿತಿ ಪೂರಕಂ । ಕಿಂಚ ತದ್ರೂಪಂ ಮರ್ತ್ಯೇಷು ಮರ್ತ್ಯಲೋಕೇಽನ್ಯದೋಷಧಿವನಸ್ಪತ್ಯಾದಿಕಂ ದೋಹಸೇ ಕಾಮಾನ್ದೋಗ್ಧುಂ ಪೀಪಾಯ । ಆಪ್ಯಾಯಯತಿ । ಕಿಂಚ ಮರುತಾಮೇವ ನಿರ್ದೇಶಾತ್ಪೃಶ್ನಿರಂತರಿಕ್ಷಂ ಸಕೃತ್ಸಂವತ್ಸರಸ್ಯ ವರ್ಷಾಸು ಶುಕ್ರಂ ಶುಕ್ಲವರ್ಣಮೂಧ ಉದಕಂ ದುದುಹೇ । ಕ್ಷರತಿ ॥

॥ ಪ್ರತಿಪದಾರ್ಥ ॥

**ತತ್**—ಪ್ರಸಿದ್ಧವಾದುದೂ । **ಸಮಾನಂ**—ಒಂದೇ ರೂಪವುಳ್ಳದ್ದೂ । **ನಾಮ**—ಪ್ರಬಲವಾದ ಶತ್ರುಗಳನ್ನು ವಿಧೇಯರಾಗುವಂತೆ ಮಾಡತಕ್ಕದ್ದೂ । **ಧೇನು**—ಪ್ರೀತಿಕಾರಕವಾದುದೂ । **ಪತ್ಯಮಾನಂ**—ಸರ್ವದಾ ಸಂಚರಿಸತಕ್ಕದ್ದೂ ಆದ । **ವಪುಃ**—ಮರುತ್ತುಗಳ ರೂಪವು । **ಚಿಕಿತುಷೇ**—ಜ್ಞಾನಿಯಾದ ಸ್ತೋತೃವಿಗೆ । **ನು**—ಕ್ಷಿಪ್ರವಾಗಿ । **ಅಸ್ತು**—ಗೋಚರಿಸಿ ಕಾಣಿಸಿಕೊಳ್ಳಲಿ (ಅದೇ ಮರುತ್ಸಂಘವು) । **ಮರ್ತೇಷು**—ಮಾನವ ಲೋಕದಲ್ಲಿ । **ಅನ್ಯತ್**—ಓಷಧಿವನಸ್ಪತ್ಯಾದಿಗಳನ್ನು । **ದೋಹಸೇ**—ಮಾನವನ ಇಷ್ಟಾರ್ಥ ಸಾಧನೆಗಾಗಿ ।

**ಪೀಪಾಯ**—ವೃದ್ಧಿಪಡಿಸುತ್ತದೆ (ಈ ಮರುತ್ತುಗಳ ಸಂಕಲ್ಪದಿಂದಲೇ)। **ಪೃಶ್ನಿಃ**—ಅಂತರಿಕ್ಷವೂ। **ಸಕೃತ್**—ಸಂವತ್ಸರದ ಆಯಾ ಕಾಲದಲ್ಲಿ। **ಶುಕ್ರಂ**—ಶುಕ್ರವರ್ಣವುಳ್ಳ। **ಊಧಃ**—ಉದಕವನ್ನು। **ದುದುಹೇ**—ಕರೆಯುತ್ತದೆ.

॥ ಭಾವಾರ್ಥ ॥

ಪ್ರಸಿದ್ಧವಾದುದೂ, ಸಮಾನರೂಪವುಳ್ಳದ್ದೂ, ಪ್ರಬಲವಾದ ಶತ್ರುಗಳನ್ನೂ ವಿಧೇಯರಾಗುವಂತೆ ಮಾಡತಕ್ಕದ್ದೂ, ಪ್ರೀತಿಕಾರಕವಾದುದೂ ಸರ್ವದಾ ಸಂಚರಿಸತಕ್ಕದ್ದೂ ಆದ ಮರುತ್ತುಗಳ ರೂಪವು ಜ್ಞಾನಿಯಾದ ಸ್ತೋತೃವಿನ ಮುಂದೆ ಗೋಚರಿಸುತ್ತದೆ. ಅದೇ ಮರುತ್ಸಂಘವು ಮಾನವಲೋಕದಲ್ಲಿ ಓಷಧಿವನಸ್ಪತ್ಯಾದಿಗಳನ್ನು ಮಾನವನ ಇಷ್ಟಾರ್ಥಸಾಧನೆಗಾಗಿ ವೃದ್ಧಿಪಡಿಸುತ್ತದೆ. ಈ ಮರುತ್ತುಗಳ ಸಂಕಲ್ಪದಿಂದಲೇ, ಅಂತರಿಕ್ಷವೂ ಸಹ ಸಂವತ್ಸರದ ವರ್ಷಾಕಾಲದಲ್ಲಿ ಶುಭ್ರವರ್ಣವುಳ್ಳ ಉದಕವನ್ನು ಕರೆಯುತ್ತದೆ.

English Translation.

May the like-formed, benevolent, all-pervading, all-humiliating troop (of the Maruts) be promptly with the prudent man : the troop that ever cherishes, all that amongst mortals is designed to yield (them) advantage and (at whose will) Prishni gives milk from (her) bright udder once (in the year).

॥ ಸಂಹಿತಾಪಾಠಃ ॥

ಯೇ ಅಗ್ನಯೋ ನ ಶೋಶುಚನ್ನಿಧಾನಾ ದ್ವಿರ್ಯತ್ತ್ರಿರ್ಮರುತೋ ವಾವೃಧಂತ ।
ಅರೇಣವೋ ಹಿರಣ್ಯಯಾಸ ಏಷಾಂ ಸಾಕಂ ನೃಮ್ಣೈಃ ಪೌಂಸ್ಯೇಭಿಶ್ಚ ಭೂವನ್ ॥ ೨ ॥

॥ ಪದಪಾಠಃ ॥

ಯೇ । ಅಗ್ನಯಃ । ನ । ಶೋಶುಚನ್ । ಇಧಾನಾಃ । ದ್ವಿಃ । ಯತ್ । ತ್ರಿಃ । ಮರುತಃ । ವವೃಧಂತ ।
ಅರೇಣವಃ । ಹಿರಣ್ಯಯಾಸಃ । ಏಷಾಂ । ಸಾಕಂ । ನೃಮ್ಣೈಃ । ಪೌಂಸ್ಯೇಭಿಃ । ಚ । ಭೂವನ್ ॥ ೨ ॥

॥ ಸಾಯಣಭಾಷ್ಯಂ ॥

ಹೇ ಮರುತಾ ಇಧಾನಾ ಅಗ್ನಯೋ ನ ಸಮಿಧ್ಯಮಾನಾ ಅಗ್ನಯ ಇವ ಶೋಶುಚನ್ ದೀಪ್ಯಂತೇ। ಯದ್ಯೇ ಮರುತೋ ದ್ವಿರ್ದ್ವಿಗುಣಂ ತ್ರಿಸ್ತ್ರಿಗುಣಂ ಚ ವವೃಧಂತ ಇಚ್ಛಾನುರೂಪಂ ವರ್ಧಂತೇ॥ ಸಂಹಿತಾಯಾಂ ದೀರ್ಘಶ್ಛಾಂದಸಃ॥ ಏಷಾಂ ಮರುತಾಂ ರಥಾ ಅರೇಣವೋ ರೇಣುರಹಿತಾ ಹಿರಣ್ಯ-

**ಯಾಸೋ ಹಿರಣ್ಮಯಾಲಂಕಾರಾಶ್ಚ ಭವಂತಿ । ತೇ ಮರುತೋ ನೃಮ್ಣೈರ್ಧನೈಃ ಪೌಂಸ್ಯೇಭಿರ್ಬಲೈಶ್ಚ ಸಾಕಂ ಸಾರ್ಧಂ ಭೂವನ್ । ಪ್ರಾದುರ್ಭವಂತಿ । ತಥಾ ಚ ನಿಗಮಾಂತರಂ । ಯೇ ಪೃಷತೀಭಿರ್ಋಷ್ಟಿಭಿಃ । ಋಗ್ವೇ. ೧-೩೭-೨ । ಇತಿ ॥**

॥ ಪ್ರತಿಪದಾರ್ಥ ॥

**ಯೇ ಮರುತಃ**— ಯಾವ ಮರುತ್ತುಗಳು । **ಅಗ್ನಯೋ ನ**— ಅಗ್ನಿಗಳಂತೆ । **ಇಧಾನಾಃ**— ಪ್ರಜ್ವಲಿಸುತ್ತಾ । **ಶೋಶುಚನ್**— ಪ್ರಕಾಶಿಸುತ್ತಾರೋ । **ಯತ್**— ಯಾವ ಮರುತ್ತುಗಳು । **ದ್ವಿಃ**— ದ್ವಿಗುಣಿತವಾಗಿಯೂ । **ತ್ರಿಃ**— ತ್ರಿಗುಣಿತವಾಗಿಯೂ । **ವವೃಧಂತ**— ವೃದ್ಧಿಯನ್ನು ಹೊಂದುವರೋ । **ಏಷಾಂ**— ಇಂತಹ ಮರುತ್ತುಗಳ ರಥಗಳು । **ಅರೇಣವಃ**— ರೇಣು (ಧೂಳು) ರಹಿತವಾಗಿಯೂ । **ಹಿರಣ್ಯಯಾಸಃ**— ಸುವರ್ಣನಿರ್ಮಿತವಾಗಿಯೂ ಇರುತ್ತವೆ (ಅದೇ ಮರುತ್ತುಗಳು) । **ನೃಮ್ಣೈಃ**— ಧನಗಳೊಡನೆಯೂ । **ಪೌಂಸ್ಯೇಭಿಶ್ಚ ಸಾಕಂ**— ಶಕ್ತಿಗಳೊಡನೆಯೂ ಕೂಡಿಕೊಂಡು । **ಭೂವನ್**— ಪ್ರಾದುರ್ಭವಿಸುತ್ತಾರೆ.

॥ ಭಾವಾರ್ಥ ॥

ಅಗ್ನಿಗಳಂತೆ ಪ್ರಜ್ವಲಿಸುತ್ತಾ ಪ್ರಕಾಶಿಸುವವರೂ, ದ್ವಿಗುಣಿತವಾಗಿಯೂ, ತ್ರಿಗುಣಿತವಾಗಿಯೂ ವೃದ್ಧಿಯನ್ನು ಹೊಂದತಕ್ಕವರೂ ಆದ ಮರುತ್ತುಗಳ ರಥಗಳು ರೇಣುರಹಿತವಾಗಿಯೂ, ಸುವರ್ಣನಿರ್ಮಿತವಾಗಿಯೂ ಇರುತ್ತವೆ. ಅದೇ ಮರುತ್ತುಗಳು ಧನಗಳೊಡನೆಯೂ, ಶಕ್ತಿಗಳೊಡನೆಯೂ ಕೂಡಿಕೊಂಡು ಪ್ರಾದುರ್ಭವಿಸುತ್ತಾರೆ.

English Translation.

Unsoiled by dust the golden chariots of those Maruts, who are shining like kindled fires, enlarging themselves (at will) twofold and threefold, and (charged) with riches and virile energies, are manifest.

॥ ಸಂಹಿತಾಪಾಠಃ ॥

**ರುದ್ರಸ್ಯ ಯೇ ಮೀಳ್ಹುಷಃ ಸಂತಿ ಪುತ್ರಾ ಯಾಂಶ್ಚೋ ನು ದಾಧೃವಿರ್ಭರಧ್ಯೈ ।**
**ವಿದೇ ಹಿ ಮಾತಾ ಮಹೋ ಮಹೀ ಷಾ ಸೇತ್ಪೃಶ್ನಿಃ ಸುಭ್ವೇ೩ ಗರ್ಭಮಾಧಾತ್ ॥ ೩ ॥**

॥ ಪದಪಾಠಃ ॥

**ರುದ್ರಸ್ಯ । ಯೇ । ಮೀಳ್ಹುಷಃ । ಸಂತಿ । ಪುತ್ರಾಃ । ಯಾನ್ । ಚೋ ಇತಿ । ನು । ದಾಧೃವಿಃ । ಭರಧ್ಯೈ । ವಿದೇ । ಹಿ । ಮಾತಾ । ಮಹಃ । ಮಹೀ । ಸಾ । ಸಾ । ಇತ್ । ಪೃಶ್ನಿಃ । ಸುऽಭ್ವೇ । ಗರ್ಭಂ । ಆ । ಅಧಾತ್ ॥ ೩ ॥**

॥ ಸಾಯಣಭಾಷ್ಯಂ ॥

ವೃಷ್ಣಃ ಸೇಕ್ತುಃ ರುದ್ರಸ್ಯ ಪುತ್ರಾ ಯೇ ಮರುತಃ ಸಂತಿ ದಾಧೃವಿರ್ಧರಿತ್ರೀ ಪೃಶ್ನಿರಂತರಿಕ್ಷಂ ಯಾಂಶ್ಚಿನ್ನು ಯಾಂಶ್ಚ ಮರುತೋ ನು ಭರಧ್ಯೈ ಭರ್ತುಂ ಕ್ಷಮಾ ಭವತಿ । ವಿದೇ ಹಿ ಸರ್ವಜ್ಞಾತಾ ಹಿ ಮಹೋ ಮಹತಾಮೇಷಾಂ ಮಾತಾ ಸಾ ಪೃಶ್ನಿರ್ಮಹೀ ಮಹತೀ । ಕಿಂಚ ಸಾ ಪೃಶ್ನಿಃ ಸುಭ್ವೇ ನೃಣಾಂ ಸಮ್ಯಕ್ ಭವನಾಯ ಗರ್ಭಮುದಕಮಾಧಾತ್ । ಆದಧಾತಿ ।

॥ ಪ್ರತಿಪದಾರ್ಥ ॥

**ವೃಷ್ಣಃ**—ವೃಷ್ಟಿಸೇಚಕನಾದ । **ರುದ್ರಸ್ಯ**—ರುದ್ರನ । **ಪುತ್ರಾಃ**—ಪುತ್ರರೂಪರಾದ । **ಯೇ**—ಯಾವ ಮರುತ್ತುಗಳು । **ಸಂತಿ**—ಇರುವರೋ । **ಯಾಂಶ್ಚಿನ್ನು**—ಯಾವ ಮರುತ್ತುಗಳನ್ನು । **ಭರಧ್ಯೈ**—ಭರಿಸಲು । **ದಾಧೃವಿಃ**—ಧರಿತ್ರಿಯಾದ ಅಂತರಿಕ್ಷವು ಶಕ್ತವಾಗುವುದೋ । **ಮಹಃ**—ಮಹಾತ್ಮರಾದ ಅಂತಹ ಮರುತ್ತುಗಳ । **ಮಾತಾ**—ಮಾತೆಯಾದ । **ಸಾ**—ಪೃಶ್ನಿಯು । **ಮಹೀ**—ಮಹತ್ಸ್ವರೂಪವುಳ್ಳವಳೆಂದು । **ವಿದೇ ಹಿ**—ಸರ್ವರಿಗೂ ತಿಳಿದ ವಿಷಯವಾಗಿದೆ । **ಸಾ ಇತ್ ಪೃಶ್ನಿಃ**—ಅದೇ ಪೃಶ್ನಿಯು । **ಸುಭ್ವೇ**—ಮಾನವರಿಗೆಲ್ಲಾ ಹಿತವನ್ನುಂಟುಮಾಡಲು । **ಗರ್ಭಂ**—ಉದಕವನ್ನು । **ಆಧಾತ್**—ಸ್ವೀಕರಿಸಿ ಧರಿಸಿದ್ದಾಳೆ.

॥ ಭಾವಾರ್ಥ ॥

ವೃಷ್ಟಿಯನ್ನು ಸುರಿಸತಕ್ಕ ರುದ್ರನ ಪುತ್ರರೂಪರಾದ ಯಾವ ಮರುತ್ತುಗಳು ಇರುವರೋ, ಯಾವ ಮರುತ್ತುಗಳನ್ನು ಭರಿಸಲು ಧರಿತ್ರಿಯಾದ ಅಂತರಿಕ್ಷವು ಶಕ್ತವಾಗುವುದೋ ಮಹಾತ್ಮರಾದ ಅಂತಹ ಮರುತ್ತುಗಳ ಮಾತೆಯಾದ ಪೃಶ್ನಿಯು ಮಹತ್ಸ್ವರೂಪವುಳ್ಳವಳೆಂದು ಸರ್ವರಿಗೂ ತಿಳಿದ ವಿಷಯವಾಗಿದೆ. ಅದೇ ಪೃಶ್ನಿಯು ಮಾನವರಿಗೆಲ್ಲಾ ಹಿತವನ್ನುಂಟುಮಾಡಲು ಉದಕವನ್ನು ಸ್ವೀಕರಿಸಿ ಧರಿಸಿದ್ದಾಳೆ.

English Translation.

They (who are) the sons of the showerer Rudra, whom the nursing (firmament is able) to sustain, and of whom, the mighty ones, it is known that the great Prishni has received the germ for the benefit (of man).

॥ ಸಂಹಿತಾಪಾಠಃ ॥

ನ ಯ ಈಷಂತೇ ಜನುಷೋಽಯಾ ನ್ವ೧ಂತಃ ಸಂತೋಽವದ್ಯಾನಿ ಪುನಾನಾಃ ।
ನಿರ್ಯದ್ದುಹ್ರೇ ಶುಚಯೋಽನು ಜೋಷಮನು ಶ್ರಿಯಾ ತನ್ವಮುಕ್ಷಮಾಣಾಃ ॥ ೪ ॥

ವುದೂ । **ತತುರಿಃ**—ಶತ್ರುಹಿಂಸಕವೂ ಆಗಿ । **ದ್ಯುಮ್ನಾ**—ಅವರ ಯಶಸ್ಸನ್ನೆಲ್ಲಾ । **ಸದ್ಯಃ**—ಒಡನೆಯೇ । **ಪ್ರ ತಿರತೇ**—ಪೂರ್ಣವಾಗಿ ಮುಚ್ಚುವುದೋ ಅಂತಹ । **ಸೂರಿಭ್ಯಃ**—ಸ್ತುತಿಕರ್ತರಾದ । **ನಃ**— ನಮಗೆ । **ಸುತ್ರಾತ್ರಃ**—ಸುರಕ್ಷಕವಾದುದೂ । **ದೇವಗೋಪಾಃ**—ದೇವತೆಗಳಿಂದ ರಕ್ಷಿತವಾದುದೂ ಆದ । **ರಯಿಃ**—ಧನವು । **ಸ್ಯಾತ್**—ಲಭಿಸಲಿ.

॥ ಭಾವಾರ್ಥ ॥

ಎಲೈ ಇಂದ್ರ ಮತ್ತು ವರುಣದೇವತೆಗಳೇ, ಯಾವ ನಮ್ಮ ಬಲವು ಯುದ್ಧಗಳಲ್ಲಿ ಶತ್ರುಗಳನ್ನು ಸೋಲಿಸುವುದೂ ಶತ್ರುಹಿಂಸಕವೂ ಆಗಿ ಅವರ ಯಶಸ್ಸನ್ನೆಲ್ಲಾ ಒಡನೆಯೇ ಪೂರ್ಣವಾಗಿ ಮುಚ್ಚುವುದೋ ಅಂತಹ ಸ್ತುತಿಕರ್ತರಾದ ನಮಗೆ ಸುರಕ್ಷಕವಾದುದೂ ದೇವತೆಗಳಿಂದ ರಕ್ಷಿತವಾದುದೂ ಆದ ಧನವು ಲಭಿಸಲಿ,

## English Translation

May that opulence, Indra and Varuna, which is a sure defence, and of which the gods are the guardians, be ours, celebrating your praise, whose destroying prowess in battles victorious (over foes) speedily obscures (their) fame.

॥ ಸಂಹಿತಾಪಾಠಃ ॥

ನೂ ನ ಇಂದ್ರಾವರುಣಾ ಗೃಣಾನಾ ಪೃಙ್ಕ್ತಂ ರಯಿಂ ಸೌಶ್ರವಸಾಯ ದೇವಾ ।
ಇತ್ಥಾ ಗೃಣಂತೋ ಮಹಿನಸ್ಯ ಶರ್ಧೋಽಪೋ ನ ನಾವಾ ದುರಿತಾ ತರೇಮ ॥

॥ ಪದಪಾಠಃ ॥

ನು । ನಃ । ಇಂದ್ರಾವರುಣಾ । ಗೃಣಾನಾ । ಪೃಙ್ಕ್ತಂ । ರಯಿಂ । ಸೌಶ್ರವಸಾಯ । ದೇವಾ ।
ಇತ್ಥಾ । ಗೃಣಂತಃ । ಮಹಿನಸ್ಯ । ಶರ್ಧಃ । ಅಪಃ । ನ । ನಾವಾ । ದುಃಽಇತಾ । ತರೇಮ ॥ ೮ ॥

॥ ಸಾಯಣಭಾಷ್ಯಂ ॥

ಹೇ ಇಂದ್ರಾವರುಣೇಂದ್ರಾವರುಣೌ ಗೃಣಾನಾ ಸ್ತೂಯಮಾನೌ ಯುವಾಂ ನೋಽಸ್ಮಭ್ಯಂ ಸೌಶ್ರವಸಾಯ । ಸುಶ್ರವಸೋ ಭಾವಃ ಸೌಶ್ರವಸಂ । ತಸ್ಮೈ ಸುಶ್ರವಸ್ತ್ವಾಯ ರಯಿಂ ಧನಂ ನು ಕ್ಷಿಪ್ರಂ ಪೃಂಕ್ತಂ । ಪ್ರಯಚ್ಛತಂ । ಕಿಂಚ ಹೇ ದೇವಾ ದೇವೌ ಮಹಿನಸ್ಯ ಮಹತೋಽಯುರ್ವಯೋಃ ಶರ್ಧೋ ಬಲಮಿತ್ಥೇತ್ಥಂ ಗೃಣಂತಃ ಸ್ತುವಂತೋ ವಯಂ ದುರಿತಾ ದುರಿತಾನಿ ನಾವಾಪೋ ನ ಉದಕಾನೀವ ತರೇಮ ॥

॥ ಪ್ರತಿಪದಾರ್ಥ ॥

**ಇಂದ್ರಾವರುಣಾ**—ಎಲೈ ಇಂದ್ರಾವರುಣರೇ। **ಗೃಣಾನಾ**—ನಮ್ಮಿಂದ ಸ್ತುತರಾಗುವ ನೀವು। **ನಃ**—ನಮಗೆ। **ಸೌಶ್ರವಸಾಯ**—ಉತ್ತಮವಾದ ಸುಖಪ್ರಾಪ್ತಿಗಾಗಿ। **ರಯಿಂ**—ಧನವನ್ನು। **ನು**—ಕ್ಷಿಪ್ರವಾಗಿ। **ಸೃಜತಂ**—ಕೊಡಿರಿ। **ದೇವಾ**—ಎಲೈ ದೇವತಾತ್ಮರೇ। **ನಾವಾ**—ದೋಣಿಯಿಂದ। **ಅಪೋ ನ**—ಉದಕವನ್ನು ದಾಟುವಂತೆ। **ಮಹಿನಸ್ಯ**—ಮಹಾತ್ಮಕರಾದ ನಿಮ್ಮ। **ಶರ್ಧಃ**—ಬಲವನ್ನು। **ಇತ್ಥಾ**—ಈ ಪ್ರಕಾರವಾಗಿ। **ಗೃಣಂತಃ**—ಸ್ತುತಿಸುವ ನಾವು। **ದುರಿತಾ**—ನಮ್ಮ ಪಾಪಗಳನ್ನು। **ತರೇಮ**—ದಾಟುವಂತಾಗಲಿ.

॥ ಭಾವಾರ್ಥ ॥

ಎಲೈ ಇಂದ್ರಾವರುಣರೇ, ನಮ್ಮಿಂದ ಸ್ತುತರಾಗುವ ನೀವು ನಮಗೆ ಉತ್ತಮವಾದ ಸುಖಪ್ರಾಪ್ತಿಗಾಗಿ ಕ್ಷಿಪ್ರವಾಗಿ ಧನವನ್ನು ಕೊಡಿರಿ. ಎಲೈ ದೇವತಾತ್ಮರೇ, ಮಹಾತ್ಮರಾದ ನಿಮ್ಮ ಬಲವನ್ನು ಈ ಪ್ರಕಾರವಾಗಿ ಸ್ತುತಿಸುವ ನಾವು ದೋಣಿಯಿಂದ ಉದಕವನ್ನು ದಾಟುವಂತೆ ನಮ್ಮ ಪಾಪಗಳನ್ನು ದಾಟುವಂತಾಗಲಿ.

## English Translation.

Divine and glorified Indra and Varuna, quickly bestow upon us wealth for our felicity; and thus eulogising the strength of you two, mighty (deities), may we pass over all difficulties as (we cross) the waters with a boat.

॥ ಸಂಹಿತಾಪಾಠಃ ॥

ಪ್ರ ಸಮ್ರಾಜೇ ಬೃಹತೇ ಮನ್ಮ ನು ಪ್ರಿಯಮರ್ಚ ದೇವಾಯ ವರುಣಾಯ ಸಪ್ರಥಃ।
ಅಯಂ ಯ ಉರ್ವೀ ಮಹಿನಾ ಮಹಿವ್ರತಃ ಕ್ರತ್ವಾ ವಿಭಾತ್ಯಜರೋ ನ ಶೋಚಿಷಾ ॥ ೯ ॥

॥ ಪದಪಾಠಃ ॥

ಪ್ರ। ಸಂಽರಾಜೇ। ಬೃಹತೇ। ಮನ್ಮ। ನು। ಪ್ರಿಯಂ। ಅರ್ಚ। ದೇವಾಯ। ವರುಣಾಯ। ಸಽಪ್ರಥಃ। ಅಯಂ। ಯಃ। ಉರ್ವೀ ಇತಿ। ಮಹಿನಾ। ಮಹಿಽವ್ರತಃ। ಕ್ರತ್ವಾ। ವಿಽಭಾತಿ। ಅಜರಃ। ನ। ಶೋಚಿಷಾ ॥ ೯ ॥

॥ ಸಾಯಣಭಾಷ್ಯಂ ॥

**ಹೇ ಸ್ತೋತಃ ಸಮ್ರಾಜ ಆಜ್ಞಯಾ ರಾಜ್ಞಾಂ ಶಾಸಕಾಯ ಬೃಹತೇ ಪರಿವೃಢಾಯ ದೇವಾಯ ದ್ಯೋತಮಾನಾಯ ವರುಣಾಯ ಪ್ರಿಯಂ ಮನೋಹರಂ ಸಪ್ರಥಃ ಸರ್ವತಃ ಪೃಥು । ತಥಾ ಚ ಯಾಸ್ಕಃ। ಸಪ್ರಥಾಃ ಸರ್ವತಃ ಪೃಥುಃ । ನಿ. ೬-೭ । ಇತಿ । ಮನ್ಮ ಸ್ತೋತ್ರಂ ನು ಅದ್ಯ ಪ್ರಾರ್ಚ । ಪ್ರೋಚ್ಚಾರಯ। ಅಯಂ ಯೋ ಯೋಽಯಂ ವರುಣೋ ಮಹಿನಾ ಮಹಿಮ್ನಾ ಯುಕ್ತೋ ಮಹಿವ್ರತೋ ಮಹಾಕರ್ಮಾ ಕ್ರತ್ವಾ ಪ್ರಜ್ಞಯಾ ಚ ಯುಕ್ತಃ ಶೋಚಿಷಾ ತೇಜಸಾ ಯುಕ್ತೋಽಜರೋ ನ ಜರಾರಹಿತಶ್ಚೋರ್ವೀ ವಿಸ್ತೀರ್ಣೇ ದ್ಯಾವಾಪೃಥಿವ್ಯೌ ವಿಭಾತಿ ವಿಭಾಸಯತಿ ॥**

॥ ಪ್ರತಿಪದಾರ್ಥ ॥

(ಎಲೈ ಸ್ತುತಿಕರ್ತನೇ) **ಯಃ ಅಯಂ**—ಯಾವ ಇದೇ ವರುಣನು । **ಮಹಿನಾ**—ತನ್ನ ಮಹತ್ವದಿಂದ ಕೂಡಿಕೊಂಡು । **ಮಹಿವ್ರತಃ**—ಮಹತ್ಕರ್ಮವುಳ್ಳವನಾಗಿಯೂ । **ಕ್ರತ್ವಾ**—ಪ್ರಜ್ಞಾಯುತನಾಗಿಯೂ । **ಅಜರೋ ನ**—ಕ್ಷಯರಹಿತನಾಗಿಯೂ । **ಉರ್ವೀ**—ವಿಸ್ತೃತವಾದ ದ್ಯಾವಾಪೃಥಿವಿಗಳನ್ನು । **ಶೋಚಿಷಾ**—ಕಾಂತಿಯಿಂದ । **ವಿಭಾತಿ**—ಪ್ರಕಾಶಿಸುವಂತೆ ಮಾಡುವನೋ ಅಂತಹ । **ಸಮ್ರಾಜೇ**—ಸಾರ್ವಭೌಮನೂ । **ಬೃಹತೇ**—ಪ್ರವೃದ್ಧನೂ । **ದೇವಾಯ**—ಪ್ರಕಾಶಮಾನನೂ ಆದ । **ವರುಣಾಯ**—ವರುಣನನ್ನುದ್ದೇಶಿಸಿ । **ಪ್ರಿಯಂ**—ಮನೋಹರವಾದುದೂ । **ಸಪ್ರಥಃ**—ವಿಸ್ತಾರವಾದುದೂ ಆದ । **ಮನ್ಮ**—ಸ್ತೋತ್ರವನ್ನು । **ನು**—ಈಗಲೇ । **ಪ್ರ ಅರ್ಚ**—ಪಠಿಸಿ ಪೂಜಿಸು.

॥ ಭಾವಾರ್ಥ ॥

ಎಲೈ ಸ್ತುತಿಕರ್ತನೇ, ಯಾವ ಇದೇ ವರುಣನು ತನ್ನ ಮಹತ್ವದಿಂದ ಕೂಡಿಕೊಂಡು ಮಹತ್ಕರ್ಮವುಳ್ಳವನಾಗಿಯೂ, ಪ್ರಜ್ಞಾಯುತನಾಗಿಯೂ, ಕ್ಷಯರಹಿತನಾಗಿಯೂ ವಿಸ್ತೃತವಾದ ದ್ಯಾವಾಪೃಥಿವಿಗಳೆರಡನ್ನೂ ತನ್ನ ಕಾಂತಿಯಿಂದ ಪ್ರಕಾಶಿಸುವಂತೆ ಮಾಡುವನೋ ಅಂತಹ ಸಾರ್ವಭೌಮನೂ, ಪ್ರವೃದ್ಧನೂ, ಪ್ರಕಾಶಮಾನನೂ ಆದ ವರುಣನನ್ನುದ್ದೇಶಿಸಿ ಮನೋಹರವಾದುದೂ, ವಿಸ್ತೃತವಾದುದೂ ಆದ ಸ್ತೋತ್ರವನ್ನು ಈಗಲೇ ಪಠಿಸಿ ಪೂಜಿಸು.

English Translation.

Repeat acceptable and all-comprehensive praise to the imperial mighty divine Varuna, he who, endowed with greatness, with wisdom, and with splendour, illumes the spacious (heaven and earth).

॥ ಸಂಹಿತಾಪಾಠಃ ॥

ಇಂದ್ರಾವರುಣಾ ಸುತಪಾವಿಮಂ ಸುತಂ ಸೋಮಂ ಪಿಬತಂ ಮದ್ಯಂ ಧೃತವ್ರತಾ ।
ಯುವೋ ರಥೋ ಅಧ್ವರಂ ದೇವವೀತಯೇ ಪ್ರತಿ ಸ್ವಸರಮುಪ ಯಾತಿ ಪೀತಯೇ ॥ ೧೦ ॥

॥ ಪದಪಾಠಃ ॥

ಇಂದ್ರಾವರುಣಾ । ಸುತೇऽಪಾ । ಇಮಂ । ಸುತಂ । ಸೋಮಂ । ಪಿಬತಂ । ಮದ್ಯಂ । ಧೃತೇऽವ್ರತಾ ।
ಯುವೋಃ । ರಥಃ । ಅಧ್ವರಂ । ದೇವऽವೀತಯೇ । ಪ್ರತಿ । ಸ್ವಸರಂ । ಉಪ । ಯಾತಿ । ಪೀತಯೇ ॥೧॥

॥ ಸಾಯಣಭಾಷ್ಯಂ ॥

ಇಂದ್ರಾವರುಣಾ ಹೇ ಇಂದ್ರಾವರುಣೌ ಸುತಪಾ ಸುತಸ್ಯ ಸೋಮಸ್ಯ ಪಾತಾರೌ ಯುವಾಂ ಮದ್ಯಂ ಮದಕರಂ ಸುತಮಭಿಷುತಮಿಮಂ ಸೋಮಂ ಪಿಬತಂ । ಕಿಂಚ ಹೇ ಧೃತವ್ರತಾ ಧೃತಕರ್ಮಾಣೌ ಯುವೋರ್ಯುವಯೋ ರಥೋऽಧ್ವರಮುದ್ದಿಶ್ಯ ದೇವವೀತಯೇ! ದೇವಾನಾಂ ಪಾನಾರ್ಥಂ ಪೀತಯೇ ಯುವಯೋರಪಿ ಸೋಮಪಾನಾರ್ಥಂ ಸ್ವಸರಂ ಮಾರ್ಗಂ ಪ್ರತ್ಯುಪ ಯಾತಿ ॥

॥ ಪ್ರತಿಪದಾರ್ಥ ॥

**ಇಂದ್ರಾ ವರುಣಾ**—ಎಲೈ ಇಂದ್ರಾ ವರುಣರೇ । **ಸುತಪಾ**—ಹಿಂಡಿದ ಸೋಮವನ್ನು ಪಾನಮಾಡುವ ನೀವು । **ಮದ್ಯಂ**—ತೃಪ್ತಿಕರವಾದುದೂ । **ಸುತಂ**—ಹಿಂಡಿರುವುದೂ ಆದ । **ಇಮಂ ಸೋಮಂ**—ಈ ಸೋಮರಸವನ್ನು । **ಪಿಬತಂ**—ಪಾನಮಾಡಿರಿ । **ಧೃತವ್ರತಾ**—ಧೃತವ್ರತರಾದ ಎಲೈ ಇಂದ್ರಾ ವರುಣರೇ । **ಯುವೋಃ**—ನಿಮ್ಮ । **ರಥಃ**—ರಥವು । **ಅಧ್ವರಂ**—ಯಜ್ಞಕ್ಕೆ । **ದೇವವೀತಯೇ**—ದೇವತೆಗಳ ಪಾನಾರ್ಥವಾಗಿಯೂ । **ಪೀತಯೇ**—ನಿಮ್ಮ ಪಾನಾರ್ಥವಾಗಿಯೂ । **ಸ್ವಸರಂ ಪ್ರತಿ**—ಯಜ್ಞಮಾರ್ಗವನ್ನನುಸರಿಸಿ । **ಉಪ ಯಾತಿ**—ಬರುತ್ತದೆ.

॥ ಭಾವಾರ್ಥ ॥

ಎಲೈ ಇಂದ್ರಾವರುಣರೇ, ಹಿಂಡಿದ ಸೋಮವನ್ನು ಪಾನಮಾಡುವ ನೀವು ತೃಪ್ತಿಕರವಾದುದೂ ಈಗ ತಾನೇ ಹಿಂಡಿರುವುದೂ ಆದ ಈ ಸೋಮರಸವನ್ನು ಪಾನಮಾಡಿರಿ. ಧೃತವ್ರತರಾದ ಎಲೈ ಇಂದ್ರಾ ವರುಣರೇ, ನಿಮ್ಮ ರಥವು ದೇವತೆಗಳ ಪಾನಾರ್ಥವಾಗಿಯೂ, ನಿಮ್ಮ ಪಾನಾರ್ಥವಾಗಿಯೂ ಯಜ್ಞಮಾರ್ಗವನ್ನನುಸರಿಸಿ ಬರುತ್ತದೆ.

## English Translation.

Indra and Varuna, observant of holy duties, drinkers of the Soma juice, drink this exhilarating effused libation: your chariot approaches along the road to the sacrifice, (that you may partake) of the food of the gods, aud drink (the Soma).

॥ ಸಂಹಿತಾಪಾಠಃ ॥

ಇಂದ್ರಾವರುಣಾ ಮಧುಮತ್ತಮಸ್ಯ ವೃಷ್ಣಃ ಸೋಮಸ್ಯ ವೃಷಣಾ ವೃಷೇಥಾಂ ।
ಇದಂ ವಾಮಂಧಃ ಪರಿಷಿಕ್ತಮಸ್ಮೇ ಆಸದ್ಯಾಸ್ಮಿನ್ಬರ್ಹಿಷಿ ಮಾದಯೇಥಾಂ ॥

॥ ಪದಪಾಠಃ ॥

ಇಂದ್ರಾವರುಣಾ । ಮಧುಮತ್ಽತಮಸ್ಯ । ವೃಷ್ಣಃ । ಸೋಮಸ್ಯ । ವೃಷಣಾ । ಆ । ವೃಷೇಥಾಂ ।
ಇದಂ । ವಾಂ । ಅಂಧಃ । ಪರಿಽಸಿಕ್ತಂ । ಅಸ್ಮೇ ಇತಿ । ಆಽಸದ್ಯ । ಅಸ್ಮಿನ್ । ಬರ್ಹಿಷಿ । ಮಾದಯೇಥಾಂ ॥

॥ ಸಾಯಣಭಾಷ್ಯಂ ॥

ಇಂದ್ರಾವರುಣಾ ಹೇ ಇಂದ್ರಾವರುಣೌ ವೃಷಣಾ ಕಾಮಾನಾಂ ವರ್ಷಿತಾರೌ ಯುವಾಂ ಮಧುಮತ್ತಮಸ್ಯಾತಿಶಯೇನ ಮಧುಮಂತಂ ರಸವಂತಂ ವೃಷ್ಣೋ ವರ್ಷಿತಾರಂ ಸೋಮಸ್ಯ ಸೋಮಮಾ ವೃಷೇಥಾಂ । ಅಶ್ನೀತಂ । ತಥಾ ಚ ಶತಪಥಬ್ರಾಹ್ಮಣಂ । ಯಥಾಭಾಗಮಾವೃಷಾಯಧ್ವಮಿತಿ ಯಥಾಭಾಗಮಶ್ನೀತೇತ್ಯೇವೈತದಾಹ । ೨-೪-೨-೧೦ । ಇತಿ । ವಾಂ ಯುವಯೋರರ್ಥ ಇದಮಂಧಃ ಸೋಮರೂಪಮನ್ನಮಸ್ಮೇ ಅಸ್ಮಾಭಿಃ ಪರಿಷಿಕ್ತಂ ಪಾತ್ರೇಷು । ಅತ ಆಸದ್ಯೋಪವಿಶ್ಯಾಸ್ಮಿನ್ಬರ್ಹಿಷಿ ಯಜ್ಞೇ ಮಾದಯೇಥಾಂ ಸೋಮಪಾನ ಇತಿ ಶೇಷಃ ॥

॥ ಪ್ರತಿಪದಾರ್ಥ ॥

**ಇಂದ್ರಾವರುಣಾ**—ಎಲೈ ಇಂದ್ರ ಮತ್ತು ವರುಣರೇ । **ವೃಷಣಾ**—ಕಾಮವರ್ಷಕರಾದ ನೀವು । **ಮಧುಮತ್ತಮಸ್ಯ**—ಅತ್ಯಂತ ಮಧುರವಾದುದೂ । **ವೃಷ್ಣಃ**—ರಸವತ್ತಾದುದೂ ಆದ । **ಸೋಮಸ್ಯ**—ಸೋಮವನ್ನು । **ಆ ವೃಷೇಥಾಂ**—ಸೇವಿಸಿರಿ । **ವಾಂ**—ನಿಮಗಾಗಿ । **ಇದಂ ಅಂಧಃ**—ಈ ಸೋಮರಸವು । **ಅಸ್ಮೇ**—ನಮ್ಮಿಂದ । **ಪರಿಷಿಕ್ತಂ**—ಪಾತ್ರೆಯಲ್ಲಿ ತುಂಬಲ್ಪಟ್ಟಿದೆ । **ಅಸ್ಮಿನ್ ಬರ್ಹಿಷಿ**—ಈ ದರ್ಭಾಸನದ ಮೇಲೆ । **ಆಸದ್ಯ**—ಕುಳಿತುಕೊಂಡು । **ಮಾದಯೇಥಾಂ**—ತೃಪ್ತಿಪಡಿರಿ.

॥ ಭಾವಾರ್ಥ ॥

ಎಲೈ ಇಂದ್ರ ಮತ್ತು ವರುಣರೇ, ಕಾಮವರ್ಷಕರಾದ ನೀವು ಅತ್ಯಂತ ಮಧುರವಾದುದೂ ರಸವತ್ತಾದುದೂ ಆದ ಸೋಮರಸವನ್ನು ಸೇವಿಸಿರಿ. ನಿಮಗಾಗಿ ಈ ಸೋಮರಸವು ನಮ್ಮಿಂದ ಪಾತ್ರೆಯಲ್ಲಿ ತುಂಬಲ್ಪಟ್ಟಿದೆ. ಈ ದರ್ಭಾಸನದ ಮೇಲೆ ಕುಳಿತುಕೊಂಡು ತೃಪ್ತಿಪಡಿರಿ.

## English Translation.

Drink, Indra and Varuna, showerers (of benefits), of the most sweet soma the shedder (of blessings): this, your beverage, is poured forth by us: sitting on the sacred grass, be exhilarated (by the draught).



# ಅರವತ್ತೊಂಭತ್ತನೆಯ ಸೂಕ್ತವು

॥ ಸಾಯಣಭಾಷ್ಯಂ ॥

**ಸಂ ವಾಂ ಕರ್ಮಣೇತ್ಯಷ್ಟರ್ಚಮಷ್ಟಮಂ ಸೂಕ್ತಂ ಭರದ್ವಾಜಸ್ಯಾರ್ಷಂ ತ್ರೈಷ್ಟುಭಮೈಂದ್ರಾವೈಷ್ಣವಂ। ಅನುಕ್ರಮ್ಯತೇ ಚ। ಸಂ ವಾಮಷ್ಟಾವೈಂದ್ರಾವೈಷ್ಣವಮಿತಿ॥ ಉಕ್ಥೇ ತೃತೀಯಸವನೇಽಚ್ಛಾವಾಕಶಸ್ತ್ರ ಏತತ್ಸೂಕ್ತಂ। ಸೂತ್ರ್ಯತೇ ಹಿ। ಸಂ ವಾಂ ಕರ್ಮಣೇಂದ್ರಾವಿಷ್ಣೂ ಮದಪತೀ ಮದಾನಾಮಿತಿ ಯಾಜ್ಯಾ। ಆ. ೬-೧। ಇತಿ॥ ಸೋಮಾತಿರೇಕೇ ಪ್ರಾತಃಸವನೇ ನೈಮಿತ್ತಿಕೇ ಶಸ್ತ್ರೇ ಪರಿಹಿತೇ ಸತಿ ಗಾಣಗಾರಿಮತೇ ಸಂ ವಾಮಿತಿ ತಸ್ಯ ಶಸ್ತ್ರಯಾಜ್ಯಾ। ಸೂತ್ರಿತಂ ಚ। ಐಂದ್ರಾವೈಷ್ಣವ್ಯೇತಿ ಗಾಣಗಾರಿರ್ದೈವತಪ್ರಧಾನತ್ವಾತ್ಸಂ ವಾಂ ಕರ್ಮಣಾ ಸಮಿಷಾ ಹಿನೋಮಿ। ಆ. ೬-೭। ಇತಿ॥ ಸೋಮಾತಿರೇಕೇ ಮಾಧ್ಯಂದಿನಸವನೇ ಯಾ ವಿಶ್ವಾಸಾಮಿತ್ಯೇಷಾ ಶಸ್ತ್ರಯಾಜ್ಯಾ। ಸೂತ್ರಿತಂ ಚ। ಯಾ ವಿಶ್ವಾಸಾಂ ಜನಿತಾರಾ ಮತೀನಾಮಿತಿ ಯಾಜ್ಯಾ। ಆ. ೬-೭। ಇತಿ॥ ಉಕ್ಥ್ಯೇ ತೃತೀಯಸವನೇಽಚ್ಛಾವಾಕಸ್ಯೇಂದ್ರಾವಿಷ್ಣೂ ಮದಪತೀ ಇತಿ ಶಸ್ತ್ರಯಾಜ್ಯಾ। ಸೂತ್ರಂ ತೂದಾಹೃತಂ॥ ತೃತೀಯಸವನೇಽಚ್ಛಾವಾಕಸ್ಯೇಂದ್ರಾವಿಷ್ಣೂ ಪಿಬತಮಿತಿ ಪ್ರಸ್ಥಿತಯಾಜ್ಯಾ। ಸೂತ್ರಿತಂ ಚ। ಇಂದ್ರಾವಿಷ್ಣೂ ಪಿಬತಂ ಮಧ್ವೋ ಅಸ್ಯೇಮಂ ಸ್ತೋಮಮರ್ಹತೇ ಜಾತವೇದಸೇ। ಆ. ೫-೫ ಇತಿ॥**

ಅನುವಾದವು— **ಸಂ ವಾಂ ಕರ್ಮಣಾ** ಎಂಬ ಈ ಸೂಕ್ತವು ಆರನೆಯ ಅನುವಾಕದಲ್ಲಿ ಎಂಟನೆಯ ಸೂಕ್ತವು. ಇದರಲ್ಲಿ ಎಂಟು ಋಕ್ಕುಗಳಿರುವವು. ಈ ಸೂಕ್ತಕ್ಕೆ ಭರದ್ವಾಜನು ಋಷಿಯು; ಇಂದ್ರ ಮತ್ತು ವಿಷ್ಣುವು ದೇವತೆಯು; ತ್ರಿಷ್ಟುಪ್‌ಛಂದಸ್ಸು. ಅನುಕ್ರಮಣಿಕೆಯಲ್ಲಿ – **ಸಂ ವಾಮಷ್ಟಾವೈಂದ್ರಾವೈಷ್ಣವಂ** ಎಂದು ಹೇಳಿರುವುದು. ಉಕ್ಥ್ಯವೆಂಬ ಯಾಗದ ತೃತೀಯಸವನಕಾಲದಲ್ಲಿ ಅಚ್ಛಾವಾಕನೆಂಬ ಋತ್ವಿಜನು ಪಠಿಸುವ ಶಸ್ತ್ರಮಂತ್ರಗಳಲ್ಲಿ ಈ ಸೂಕ್ತವನ್ನು ಪಠಿಸಬೇಕೆಂದು ಆಶ್ವಲಾಯನಶ್ರೌತಸೂತ್ರದ—**ಸಂ ವಾಂ ಕರ್ಮಣೇಂದ್ರಾವಿಷ್ಣೂ ಮದಪತೀ ಮದಾನಾಮಿತಿ ಯಾಜ್ಯಾ** ಎಂಬ ಸೂತ್ರದಿಂದ (ಆ. ೬-೧) ವಿವೃತವಾಗಿರುವುದು. ಪ್ರಾತಃಸವನಕಾಲದಲ್ಲಿ ಸೋಮಾತಿರೇಕನಿಮಿತ್ತವಾಗಿ ಶಸ್ತ್ರಮಂತ್ರಗಳನ್ನು ಪಠಿಸಬೇಕಾದ ಸಂದರ್ಭದಲ್ಲಿ **ಗಾಣಗಾರಿ** ಎಂಬ ಆಚಾರ್ಯರ ಮತದಂತೆ **ಸಂ ವಾಂ** ಎಂಬ ಋಕ್ಕನ್ನು ಶಸ್ತ್ರಯಾಜ್ಯಾಮಂತ್ರವನ್ನಾಗಿ ಪಠಿಸಬೇಕೆಂದು ಆಶ್ವಲಾಯನಶ್ರೌತಸೂತ್ರದ— **ಐಂದ್ರಾವೈಷ್ಣವ್ಯೇತಿ ಗಾಣಗಾರಿರ್ದೈವತಪ್ರಧಾನತ್ವಾತ್ ಸಂ ವಾಂ ಕರ್ಮಣಾ ಸಮಿಷಾ ಹಿನೋಮಿ** ಎಂಬ ಸೂತ್ರದಿಂದ (ಆ. ೬-೭) ವಿವೃತವಾಗಿರುವುದು. ಇದರಂತೆ ಮಾಧ್ಯಂದಿನಸವನಕಾಲದಲ್ಲಿಯೂ ಸೋಮಾತಿರೇಕ ನಿಮಿತ್ತವಾಗಿ **ಯಾ ವಿಶ್ವಾಸಾಂ** ಎಂಬ ಎರಡನೆಯ ಋಕ್ಕನ್ನು ಶಸ್ತ್ರಯಾಜ್ಯಾಮಂತ್ರವನ್ನಾಗಿ ಪಠಿಸಬೇಕೆಂದು ಆಶ್ವಲಾಯನಶ್ರೌತಸೂತ್ರದ – **ಯಾ ವಿಶ್ವಾಸಾಂ ಜನಿತಾರಾ ಮತೀನಾಮಿತಿ ಯಾಜ್ಯಾ** ಎಂಬ ಸೂತ್ರದಿಂದ (ಆ. ೬-೭) ವಿವೃತವಾಗಿರುವುದು ಉಕ್ಥ್ಯಯಾಗದಲ್ಲಿಯೂ ತೃತೀಯಸವನಕಾಲದಲ್ಲಿ ಅಚ್ಛಾವಾಕನೆಂಬ ಋತ್ವಿಜನು **ಇಂದ್ರಾವಿಷ್ಣೂ ಮದಪತೀ** ಎಂಬ ಮೂರನೆಯ ಋಕ್ಕನ್ನು ಶಸ್ತ್ರಯಾಜ್ಯಾಮಂತ್ರವನ್ನಾಗಿ ಪಠಿಸಬೇಕೆಂದು ಮೇಲಿನ ಸೂತ್ರದಲ್ಲಿಯೇ ಹೇಳಿದೆ. ಮತ್ತು ತೃತೀಯಸವನಕಾಲದಲ್ಲಿ ಅಚ್ಛಾವಾಕನೆಂಬ ಋತ್ವಿಜನು **ಇಂದ್ರಾವಿಷ್ಣೂ ಪಿಬತಂ** ಎಂಬ ಏಳನೆಯ ಋಕ್ಕನ್ನು ಪ್ರಸ್ಥಿತಯಾಜ್ಯಾಮಂತ್ರವನ್ನಾಗಿ ಪಠಿಸಬೇಕೆಂದು ಆಶ್ವಲಾಯನಶ್ರೌತಸೂತ್ರದ—

ಇಂದ್ರಾವಿಷ್ಣೂ ಪಿಬತಂ ಮಧ್ವೋ ಅಸ್ಯೇಮಂ ಸ್ತೋಮಮರ್ಹತೇ ಜಾತವೇದಸೇ ಎಂಬ ಸೂತ್ರದಿಂದ (ಆ. ೫-೫) ವಿವೃತವಾಗಿರುವುದು.

## ಸೂಕ್ತ—೬೯

ಮಂಡಲ—೬ ॥ ಅನುವಾಕ—೬ ॥ ಸೂಕ್ತ—೬೯ ॥

ಅಷ್ಟಕ—೫ ॥ ಅಧ್ಯಾಯ—೧ ॥ ವರ್ಗ—೧೩ ॥

॥ ಸೂಕ್ತದಲ್ಲಿರುವ ಋಕ್ಸಂಖ್ಯೆ—೮ ॥

॥ ಋಷಿಃ—ಭರದ್ವಾಜೋ ಬಾರ್ಹಸ್ಪತ್ಯಃ ॥

॥ ದೇವತಾ—ಇಂದ್ರಾವಿಷ್ಣೂ ॥

॥ ಛಂದಃ—ತ್ರಿಷ್ಟುಪ್ ॥

॥ ಸಂಹಿತಾಪಾಠಃ ॥

**ಸಂ ವಾಂ ಕರ್ಮಣಾ ಸಮಿಷಾ ಹಿನೋಮೀಂದ್ರಾವಿಷ್ಣೂ ಅಪಸಸ್ಪಾರೇ ಅಸ್ಯ ।**

**ಜುಷೇಥಾಂ ಯಜ್ಞಂ ದ್ರವಿಣಂ ಚ ಧತ್ತಮರಿಷ್ಟೈರ್ನಃ ಪಥಿಭಿಃ ಪಾರಯಂತಾ ॥ ೧ ॥**

॥ ಪದಪಾಠಃ ॥

ಸಂ । ವಾಂ । ಕರ್ಮಣಾ । ಸಂ । ಇಷಾ । ಹಿನೋಮಿ । ಇಂದ್ರಾವಿಷ್ಣೂ ಇತಿ । ಅಪಸಃ । ಪಾರೇ । ಅಸ್ಯ ।

ಜುಷೇಥಾಂ । ಯಜ್ಞಂ । ದ್ರವಿಣಂ । ಚ । ಧತ್ತಂ । ಅರಿಷ್ಟೈಃ । ನಃ । ಪಥಿಽಭಿಃ । ಪಾರಯಂತಾ ॥ ೧ ॥

॥ ಸಾಯಣಭಾಷ್ಯಂ ॥

ಹೇ ಇಂದ್ರಾವಿಷ್ಣೂ ವಾಂ ಯುವಾಂ ಕರ್ಮಣಾ ಸ್ತೋತ್ರೇಣೇಷಾ ಹವಿಷಾ ಚ ಸಂ ಹಿನೋಮಿ। ಸಮ್ಯಕ್ ಪ್ರೇರಯಾಮಿ । ಅಪಸಃ ಕರ್ಮಣೋಽಸ್ಯೋಕ್ಥಸ್ಯ ಪಾರೇ ಸಮಾಪ್ತೌ ಯಜ್ಞಂ ಜುಷೇಥಾಂ । ಸೇವೇಥಾಂ । ಕಿಂಚಾರಿಷ್ಟೈರನುಪದ್ರವೈಃ ಪಥಿಭಿರ್ಮಾರ್ಗೈರ್ನೋಽಸ್ಮಾನ್ಪಾರಯಂತಾ ಪಾರಂ ನಯಂತೌ ಯುವಾಂ ದ್ರವಿಣಂ ಧನಂ ಧತ್ತಂ । ಅಸ್ಮಭ್ಯಂ ದತ್ತಂ ॥

॥ ಪ್ರತಿಪದಾರ್ಥ ॥

ಇಂದ್ರಾವಿಷ್ಣೂ—ಎಲೈ ಇಂದ್ರ ಮತ್ತು ವಿಷ್ಣುದೇವತೆಗಳೇ । **ವಾಂ**—ನಿಮ್ಮನ್ನು । **ಕರ್ಮಣಾ**—ಸ್ತುತಿರೂಪವಾದ ಕರ್ಮದಿಂದಲೂ । **ಇಷಾ**—ಹವಿಸ್ಸಿನಿಂದಲೂ । **ಸಂ ಹಿನೋಮಿ**—ಪೂಜಿಸುತ್ತೇನೆ ।

**ಅಪಸಃ**— ನನ್ನ ಕರ್ಮದ(ಮತ್ತು)| **ಅಸ್ಯ**— ಈ ಉಕ್ಥಮಂತ್ರ ಪಠನದ | **ಪಾರೇ**— ಕೊನೆಯಲ್ಲಿ | **ಯಜ್ಞಂ**— ಯಜ್ಞವನ್ನು | **ಜುಷೇಥಾಂ**— ಸೇವಿಸಿರಿ | **ಅರಿಷ್ಟೈಃ**— ಹಿಂಸಾರಹಿತವಾದ | **ಪಥಿಭಿಃ** — ಮಾರ್ಗಗಳಿಂದ | **ನಃ**— ನಮ್ಮನ್ನು | **ಪಾರಯಂತಾ**— ಕರೆದುಕೊಂಡು ಹೋಗಿ ದಡವನ್ನು ಕಾಣಿಸಿರಿ| **ದ್ರವಿಣಂ ಚ** — ಧನವನ್ನೂ | **ಧತ್ತಂ**— ನಮಗೆ ಕೊಡಿರಿ.

|| ಭಾವಾರ್ಥ ||

ಎಲೈ ಇಂದ್ರ ಮತ್ತು ವಿಷ್ಣುದೇವತೆಗಳೇ, ನಿಮ್ಮನ್ನು ಸ್ತುತಿರೂಪವಾದ ಕರ್ಮದಿಂದಲೂ ಹವಿಸ್ಸಿನಿಂದಲೂ ಪೂಜಿಸುತ್ತೇನೆ. ನನ್ನ ಕರ್ಮದ ಮತ್ತು ಈ ಉಕ್ಥಮಂತ್ರಪಠನದ ಕೊನೆಯಲ್ಲಿ ಯಜ್ಞವನ್ನು ಸೇವಿಸಿರಿ. ಹಿಂಸಾರಹಿತ ವಾದ ಮಾರ್ಗಗಳಿಂದ ನಮ್ಮನ್ನು ಕರೆದುಕೊಂಡು ಹೋಗಿರಿ. ಮತ್ತು ತೊಂದರೆಯಿಲ್ಲದೇ ದಡವನ್ನು ಕಾಣಿಸಿರಿ. ನಮಗೆ ಧನವನ್ನು ಕೊಡಿರಿ.

English Translation.

I earnestly propitiate you, Indra and Vishnu, by worship and (sacrificial) food : upon the completion of the rite, accept the sacrifice, and grant us wealth, conducting us by safe paths.

| ಸಂಹಿತಾಪಾಠಃ ||

ಯಾ ವಿಶ್ವಾಸಾಂ ಜನಿತಾರಾ ಮತೀನಾಮಿಂದ್ರಾವಿಷ್ಣೂ ಕಲಶಾ ಸೋಮ-
ಧಾನಾ |
ಪ್ರ ವಾಂ ಗಿರಃ ಶಸ್ಯಮಾನಾ ಅವಂತು ಪ್ರ ಸ್ತೋಮಾಸೋ ಗೀಯ-
ಮಾನಾಸೋ ಅರ್ಕೈಃ || ೨ ||

|| ಪದಪಾಠಃ ||

ಯಾ | ವಿಶ್ವಾಸಾಂ | ಜನಿತಾರಾ | ಮತೀನಾಂ | ಇಂದ್ರಾವಿಷ್ಣೂ ಇತಿ | ಕಲಶಾ | ಸೋಮsಧಾನಾ |
ಪ್ರ | ವಾಂ | ಗಿರಃ | ಶಸ್ಯಮಾನಾಃ | ಅವಂತು | ಪ್ರ | ಸ್ತೋಮಾಸಃ | ಗೀಯಮಾನಾಸಃ | ಅರ್ಕೈಃ || ೨ ||

| ಸಾಯಣಭಾಷ್ಯಂ |

ಯಾ ಯೌ ಪ್ರಸಿದ್ಧಾವಿಂದ್ರಾವಿಷ್ಣೂ ವಿಶ್ವಾಸಾಂ ಸರ್ವಾಸಾಂ ಮತೀನಾಂ ಸ್ತುತೀನಾಂ ಜನಿತಾರಾ ಜನಿತಾರೌ || ಜನ ಜನನ ಇತ್ಯಸ್ಮಾದ್ಧಾತೋಸ್ತೃಚೀದಂ ರೂಪಂ | ಯದ್ವಾ | ಜನೀ ಪ್ರಾದುರ್ಭಾವ

**ಇತ್ಯಸ್ಮಾದ್ಧಾತೋರೇವ ತೃಚಿ ಜನಿತಾ ಮಂತ್ರೆ ಇತಿ ನಿಪಾತನಾಣ್ಣಿಲೋಪಃ ॥ ಕಲಶಾ ಕಲಶೌ ಸೋಮಧಾನಾ ಸೋಮಸ್ಯ ನಿಧಾನಭೂತೌ ಚ ಸ್ಯಾತಾಂ । ಅಥ ಪ್ರತ್ಯಕ್ಷಸ್ತುತಿಃ । ಹೇ ಇಂದ್ರಾವಿಷ್ಣೂ ವಾಂ ಯುವಾಂ ಶಸ್ಯಮಾನಾ ಉಚ್ಚಾರ್ಯಮಾಣಾಃ ಶಸ್ತ್ರರೂಪಾ ಗಿರೋ ವಾಚಃ ಪ್ರಾವಂತು । ಪ್ರಾಪ್ನುವಂತು । ಅರ್ಕೈಃ ಸ್ತೋತ್ರೈರ್ಭಿಗೀಯಮಾನಾಸೋ ಗೀಯಮಾನಾಃ ಸ್ತೋಮಾಸಃ ಸ್ತೋಮಾಃ ಸ್ತೋತ್ರಾಣಿ ಚ ಪ್ರಾವಂತು । ಪ್ರಾಪ್ನುವಂತು ॥**

॥ ಪ್ರತಿಪದಾರ್ಥ ॥

**ಇಂದ್ರಾವಿಷ್ಣೂ**—ಎಲೈ ಇಂದ್ರಾ ವಿಷ್ಣುಗಳೇ । **ಯಾ**—ಯಾವ ನೀವು । **ವಿಶ್ವಾಸಾಂ**—ಸಮಸ್ತ ವಾದ । **ಮತೀನಾಂ**—ಸ್ತುತಿಗಳಿಗೂ । **ಜನಿತಾರಾ**—ಉತ್ಪತ್ತಿಸ್ಥಾನರಾಗಿಯೂ । **ಕಲಶಾ**—ಕಲಶರೂಪ ರಾಗಿಯೂ । **ಸೋಮಧಾನಾ**—ಸೋಮವನ್ನಿಡತಕ್ಕ ಪಾತ್ರರೂಪರಾಗಿಯೂ ಇದ್ದೀರೋ ಅಂತಹ । **ವಾಂ**—ನಿಮ್ಮನ್ನು । **ಶಸ್ಯಮಾನಾಃ**—ನಿಮ್ಮನ್ನು ಪ್ರಶಂಸಿಸತಕ್ಕ । ಗಿರಃ—ಸ್ತುತಿ ವಾಕ್ಕುಗಳು । **ಪ್ರ ಅವಂತು**—ಬಂದು ಸೇರಲಿ । **ಅರ್ಕೈಃ**—ಸ್ತೋತ್ರಗಳಿಂದ । **ಗೀಯಮಾನಾಸಃ**—ಪಠಿತವಾಗುವ । **ಸ್ತೋಮಾಸಃ**—ಸ್ತೋಮಗಳೂ । **ಪ್ರ (ಅವಂತು)**—ಬಂದು ಸೇರಲಿ.

॥ ಭಾವಾರ್ಥ ॥

ಎಲೈ ಇಂದ್ರಾವಿಷ್ಣುಗಳೇ, ಯಾವ ನೀವು ಸಮಸ್ತ ಸ್ತುತಿಗಳಿಗೂ ಉತ್ಪತ್ತಿಸ್ಥಾನರಾಗಿಯೂ, ಕಲಶರೂಪ ರಾಗಿಯೂ ಸೋಮವನ್ನಿಡತಕ್ಕ ಪಾತ್ರರೂಪರಾಗಿಯೂ ಇದ್ದಿರೋ ಅಂತಹ ನಿಮ್ಮನ್ನು ಪ್ರಶಂಸಿಸತಕ್ಕ ನಮ್ಮ ಸ್ತುತಿವಾಕ್ಕುಗಳು ಬಂದು ಸೇರಿಕೊಳ್ಳಲಿ. ಸ್ತೋತ್ರಗಳಿಂದ ಪಠಿತವಾಗುವ ಸ್ತೋಮಗಳೂ ಬಂದು ಸೇರಿಕೊಳ್ಳಲಿ.

## English Translation.

May the prayers that are repeated to you reach you Indra and Vishnu : may the praises that are chaunted reach you : you are the generators of all praises, pitchers recipient of the Soma libation.

॥ ಸಂಹಿತಾಪಾಠಃ ॥

ಇಂದ್ರಾವಿಷ್ಣೂ ಮದಪತೀ ಮದಾನಾಮಾ ಸೋಮಂ ಯಾತಂ ದ್ರವಿಣೋ ದಧಾನಾ ।

ಸಂ ವಾಮಂಜಂತ್ವಕ್ತುಭಿರ್ಮತೀನಾಂ ಸಂ ಸ್ತೋಮಾಸಃ ಶಸ್ಯಮಾನಾಸ ಉಕ್ಥೈಃ ।

॥ ಪದಪಾಠಃ ॥

ಇಂದ್ರಾವಿಷ್ಣೂ ಇತಿ । ಮದಪತೀ ಇತಿ ಮದಽಪತೀ । ಮದಾನಾಂ । ಆ । ಸೋಮಂ । ಯಾತಂ ।
ದ್ರವಿಣೋ ಇತಿ । ದಧಾನಾ ।

ಸಂ । ವಾಂ । ಅಂಜಂತು । ಅಕ್ತುಽಭಿಃ । ಮತೀನಾಂ । ಸಂ । ಸ್ತೋಮಾಸಃ । ಶಸ್ಯಮಾನಾಸಃ ।
ಉಕ್ಥೈಃ ॥ ೩ ॥

॥ ಸಾಯಣಭಾಷ್ಯಂ ॥

ಹೇ ಇಂದ್ರಾವಿಷ್ಣೂ ಮದಾನಾಂ ಸೋಮಾನಾಂ ಮದಪತೀ ಸ್ವಾಮಿನೌ । ಮದಪತೀ ಇತ್ಯತ್ರ ಮದಶಬ್ದೋಽನುವಾದಃ । ದ್ರವಿಣೋ ದ್ರವಿಣಾನಿ ಧನಾನ್ಯಪಿ ॥ ದ್ರವಿಣಾ ಉ ಇತಿ ಪದದ್ವಯಮೇಕೀಭೂಯ ದ್ರವಿಣೋ ಇತಿ ಪದಂ ನಿಷ್ಪನ್ನಂ ॥ ದಧಾನಾ ದದಾನೌ ಯುವಾಂ ಸೋಮಮಭ್ಯಾ ಯಾತಂ । ಮತೀನಾಂ ಸ್ತೋತೄಣಾಂ ಸ್ತೋಮಾಸಃ ಸ್ತೋತ್ರಾಣ್ಯುಕ್ಥೈಃ ಶಸ್ತ್ರೈಃ ಸಾರ್ಧಂ ಶಸ್ಯಮಾನಾಸ ಉಚ್ಚಾರ್ಯಮಾಣಾ ವಾಂ ಯುವಾಮಕ್ತುಭಿಸ್ತೇಜೋಭಿಃ ಸಮಂಜಂತು । ಸಮರ್ಧಯಂತು । ಸಂ ಸಮಿತಿ ದ್ವಿರುಕ್ತಿರಾದರಾರ್ಥಾ ॥

॥ ಪ್ರತಿಪದಾರ್ಥ ॥

**ಇಂದ್ರಾವಿಷ್ಣೂ**—ಎಲೈ ಇಂದ್ರಾ ವಿಷ್ಣುಗಳೇ । **ಮದಾನಾಂ**—ಸೋಮಗಳಿಗೆಲ್ಲಾ । **ಮದಪತೀ**—ಸ್ವಾಮಿಗಳೂ । **ದ್ರವಿಣೋ**—ಧನಗಳನ್ನೂ । **ದಧಾನಾ**—ಹೊಂದಿರುವವರೂ ಆದ ನೀವು । **ಸೋಮಂ**—ಸೋಮಕ್ಕಭಿಮುಖವಾಗಿ । **ಆ ಯಾತಂ**—ದಯಮಾಡಿರಿ । **ಮತೀನಾಂ**—ಸ್ತೋತೃಗಳ । **ಸ್ತೋಮಾಸಃ**—ಸ್ತೋತ್ರಗಳು । **ಉಕ್ಥೈಃ**—ಶಸ್ತ್ರಮಂತ್ರಗಳೊಡನೆ ಕೂಡಿಕೊಂಡು । **ವಾಂ**—ನಿಮ್ಮನ್ನು । **ಶಸ್ಯಮಾನಾಸಃ**—ಪ್ರಶಂಸಿಸುತ್ತಾ । **ಅಕ್ತುಭಿಃ**—ತೇಜಸ್ಸುಗಳಿಂದ । **ಸಂ ಅಂಜಂತು**—ತುಂಬಿಕೊಂಡುವೃದ್ಧರಾಗುವಂತೆ ಮಾಡಲಿ.

॥ ಭಾವಾರ್ಥ ॥

ಎಲೈ ಇಂದ್ರಾ ವಿಷ್ಣುಗಳೇ, ಸೋಮಗಳಿಗೆಲ್ಲಾ ಸ್ವಾಮಿಗಳೂ, ಧನಗಳಿಗೂ ಸ್ವಾಮಿಗಳೂ ಆದ ನೀವು ಸೋಮಕ್ಕಭಿಮುಖವಾಗಿ ದಯಮಾಡಿರಿ. ಸ್ತೋತೃಗಳ ಸ್ತೋತ್ರಗಳು ಶಸ್ತ್ರಮಂತ್ರಗಳೊಡನೆ ಕೂಡಿಕೊಂಡು ನಿಮ್ಮನ್ನು ಪ್ರಶಂಸಿಸುತ್ತಾ ತೇಜಸ್ಸುಗಳಿಂದ ತುಂಬಿಕೊಂಡು ವೃದ್ಧರಾಗುವಂತೆ ಮಾಡಲಿ.

English Translation.

Indra and Vishnu, lords of the exhilaration, of the exhilarating juices, come to (drink) the Soma, bringing (with you) wealth : may the encomiums of the praises repeated along with the prayers anoint you completely with radiance.

॥ ಸಂಹಿತಾಪಾಠಃ ॥

ಆ ವಾಮಶ್ವಾಸೋ ಅಭಿಮಾತಿಷಾಹ ಇಂದ್ರಾವಿಷ್ಣೂ ಸಧಮಾದೋ ವಹಂತು ।
ಜುಷೇಥಾಂ ವಿಶ್ವಾ ಹವನಾ ಮತೀನಾಮುಪ ಬ್ರಹ್ಮಾಣಿ ಶೃಣುತಂ ಗಿರೋ ಮೇ ॥ ೪ ॥

॥ ಪದಪಾಠಃ ॥

ಆ । ವಾಂ । ಅಶ್ವಾಸಃ । ಅಭಿಮಾತಿಽಸಹಃ । ಇಂದ್ರಾವಿಷ್ಣೂ ಇತಿ । ಸಧಽಮಾದಃ । ವಹಂತು ।
ಜುಷೇಥಾಂ । ವಿಶ್ವಾ । ಹವನಾ । ಮತೀನಾಂ । ಉಪ । ಬ್ರಹ್ಮಾಣಿ । ಶೃಣುತಂ । ಗಿರಃ । ಮೇ ॥ ೪ ॥

॥ ಸಾಯಣಭಾಷ್ಯಂ ॥

**ಹೇ ಇಂದ್ರಾವಿಷ್ಣೂ ವಾಂ ಯುವಾಮಭಿಮಾತಿಷಾಹೋಽಭಿಮಾತೀನಾಂ ಹಿಂಸಕಾನಾಮಭಿಭವಿತಾರಃ ಸಧಮಾದಃ ಸಹ ಮಾದ್ಯಂತೋಽಶ್ವಾಸೋಽಶ್ವಾ ಆ ವಹಂತು । ಮತೀನಾಂ ಸ್ತೋತೄಣಾಂ ವಿಶ್ವಾ ವಿಶ್ವಾನಿ ಹವನಾ ಹವನಾನಿ ಸ್ತೋತ್ರಾಣಿ ಜುಷೇಥಾಂ । ಸೇವೇಥಾಂ । ತದರ್ಥಂ ಮೇ ಮದೀಯಾನಿ ಬ್ರಹ್ಮಾಣಿ ಸ್ತೋತ್ರಾಣಿ ಗಿರಃ ಶಸ್ತ್ರರೂಪಾ ವಾಚಶ್ಚೋಪ ಶೃಣುತಂ ॥**

॥ ಪ್ರತಿಪದಾರ್ಥ ॥

**ಇಂದ್ರಾವಿಷ್ಣೂ**—ಎಲೈ ಇಂದ್ರ ಮತ್ತು ವಿಷ್ಣುದೇವತೆಗಳೇ । **ವಾಂ**—ನಿಮ್ಮ । **ಅಭಿಮಾತಿಷಾಹಃ**—ಹಿಂಸಕರಾದ ಶತ್ರುಗಳನ್ನು ಬೀಳಿಸುವುವೂ । **ಸಧಮಾದಃ**—ಒಟ್ಟಿಗೆ ಹರ್ಷವನ್ನು ಹೊಂದುವುವೂ ಆದ । **ಅಶ್ವಾಸಃ**—ಅಶ್ವಗಳು । **ಆ ವಹಂತು**—ನಿಮ್ಮನ್ನು ಕರೆತರಲಿ । **ಮತೀನಾಂ**—ಸ್ತೋತೃಗಳ । **ವಿಶ್ವಾ**—ಸಮಸ್ತವಾದ । **ಹವನಾ**—ಸ್ತೋತ್ರಗಳನ್ನೂ । **ಜುಷೇಥಾಂ**--ಸೇವಿಸಿರಿ । **ಮೇ**—ನನ್ನಿಂದ ಪಠಿತವಾಗುವ । **ಬ್ರಹ್ಮಾಣಿ**—ಸ್ತೋತ್ರಗಳನ್ನೂ । **ಗಿರಃ**—ಶಸ್ತ್ರರೂಪವಾದ ವಾಕ್ಕುಗಳನ್ನೂ । **ಉಪ ಶೃಣುತಂ**—ಆಲಿಸಿ ಕೇಳಿರಿ.

॥ ಭಾವಾರ್ಥ ॥

ಎಲೈ ಇಂದ್ರ ಮತ್ತು ವಿಷ್ಣುದೇವತೆಗಳೇ, ಹಿಂಸಕರಾದ ಶತ್ರುಗಳನ್ನು ಸೋಲಿಸುವುವೂ, ಒಟ್ಟಿಗೆ ಹರ್ಷವನ್ನು ಹೊಂದುವುವೂ ಆದ ನಿಮ್ಮ ಅಶ್ವಗಳು ನಿಮ್ಮನ್ನು ಕರೆತರಲಿ. ನೀವು ಸ್ತೋತೃಗಳ ಸಮಸ್ತ ಸ್ತೋತ್ರಗಳನ್ನೂ ಸೇವಿಸಿರಿ. ನನ್ನಿಂದ ಪಠಿತವಾಗುವ ಸ್ತೋತ್ರಗಳನ್ನೂ ಶಸ್ತ್ರರೂಪವಾದ ವಾಕ್ಕುಗಳನ್ನೂ ಆಲಿಸಿ ಕೇಳಿರಿ.

## English Translation.

May your equally-spirited steeds, Indra and Vishnu, the triumphant over enemies, bear you hither : be pleased with all the invocations of your worshippers : hear my prayers and praises.

|| ಸಂಹಿತಾಪಾಠಃ ||

ಇಂದ್ರಾವಿಷ್ಣೂ ತತ್ಪನಯಾಯ್ಯಂ ವಾಂ ಸೋಮಸ್ಯ ಮದ ಉರು ಚಕ್ರ-
ಮಾಥೇ ।

ಅಕೃಣುತಮಂತರಿಕ್ಷಂ ವರೀಯೋಽಪ್ರಥತಂ ಜೀವಸೇ ನೋ ರಜಾಂಸಿ || ೫ ||

|| ಪದಪಾಠಃ ||

ಇಂದ್ರಾವಿಷ್ಣೂ ಇತಿ । ತತ್ । ಪನಯಾಯ್ಯಂ । ವಾಂ । ಸೋಮಸ್ಯ । ಮದೇ । ಉರು । ಚಕ್ರಮಾಥೇ
ಇತಿ ।

ಅಕೃಣುತಂ । ಅಂತರಿಕ್ಷಂ । ವರೀಯಃ । ಅಪ್ರಥತಂ । ಜೀವಸೇ । ನಃ । ರಜಾಂಸಿ || ೫ ||

|| ಸಾಯಣಭಾಷ್ಯಂ ||

ಹೇ ಇಂದ್ರಾದಿಷ್ಣೂ ವಾಂ ಯುವಯೋಸ್ತತ್ಕರ್ಮ ಪನಯಾಯ್ಯಂ ಸ್ತುತ್ಯಂ । ಕಿಂ ತತ್ಕರ್ಮೇ-ತ್ಯತ ಆಹ । ಸೋಮಸ್ಯ ಮದೇ ಸತಿ ಯದುರು ವಿಸ್ತೀರ್ಣಂ ಚಕ್ರಮಾಥೇ । ವಿಚಕ್ರಮಾಥೇ । ಯದ್ಯಪಿ ವಿಷ್ಣೋರೇವ ವಿಕ್ರಮಸ್ತಥಾಪ್ಯೇಕಾರ್ಥತ್ವಾದುಭಯೋರಿತ್ಯುಚ್ಯತೇ । ಯಚ್ಚಾಂತರಿಕ್ಷಂ ವರೀಯ ಉರುತರಮಕೃಣುತಂ ಅಕುರುತಂ । ಯದಪಿ ಚ ರಜಾಂಸಿ ಲೋಕಾನ್ ಸರ್ವಾನ್ । ಲೋಕಾ ರಜಾಂಸ್ಯುಚ್ಯಂತ ಇತಿ ಯಾಸ್ಕಃ । ನೋಽಸ್ಮಾಕಂ ಜೀವಸೇ ಜೀವನಾಯಾಪ್ರಥತಂ ಅಪ್ರಥಯತಂ ||

|| ಪ್ರತಿಪದಾರ್ಥ ||

**ಇಂದ್ರಾವಿಷ್ಣೂ**— ಎಲೈ ಇಂದ್ರ ಮತ್ತು ವಿಷ್ಣುದೇವತೆಗಳೇ ! **ಸೋಮಸ್ಯ**—ಸೋಮರಸದ ಪಾನದಿಂದ । **ಮದೇ**—ಹರ್ಷವುಂಟಾದಾಗ । **ಉರು**—ಅತ್ಯಂತ ವಿಸ್ತೃತವಾಗಿ । **ಚಕ್ರಮಾಥೇ**—ವಿಶ್ವವನ್ನು ಆಕ್ರಮಿಸಿದಿರಿ ಎಂಬ । **ವಾಂ**—ನಿಮ್ಮ । **ತತ್**—ಆ ಆಕ್ರಮಣಕರ್ಮವು । **ಪನಯಾಯ್ಯಂ**—ಅತ್ಯಂತ ಸ್ತುತ್ಯವಾಗಿದೆ । **ಅಂತರಿಕ್ಷಂ**—ಅಂತರಿಕ್ಷವನ್ನು । **ವರೀಯಃ**—ವಿಸ್ತೃತವಾಗುವಂತೆ । **ಅಕೃಣುತಂ**—ಮಾಡಿದ್ದೀರಿ । **ರಜಾಂಸಿ**—ಸಕಲ ಲೋಕಗಳನ್ನೂ । **ನಃ**—ನಮಗೆ । **ಜೀವಸೇ**—ಜೀವನಕ್ಕೆ ಯೋಗ್ಯವಾಗಿರುವಂತೆ । **ಅಪ್ರಥತಂ**—ಪ್ರಕಟಿಸಿದ್ದೀರಿ.

|| ಭಾವಾರ್ಥ ||

ಎಲೈ ಇಂದ್ರ ಮತ್ತು ವಿಷ್ಣುದೇವತೆಗಳೇ, ಸೋಮರಸದ ಪಾನದಿಂದ ಹರ್ಷವುಂಟಾದಾಗ ಅತ್ಯಂತ ವಿಸ್ತೃತವಾಗಿ ವಿಶ್ವವನ್ನು ಆಕ್ರಮಿಸಿದಿರಿ ಎಂಬ ನಿಮ್ಮ ಆ ಆಕ್ರಮಣಕರ್ಮವು ಅತ್ಯಂತ: ಸ್ತುತ್ಯವಾಗಿದೆ. ನೀವು ಅಂತರಿಕ್ಷವನ್ನು ವಿಸ್ತೃತವಾಗುವಂತೆ ಮಾಡಿದ್ದೀರಿ. ಸಕಲ ಲೋಕಗಳನ್ನೂ ನಮ್ಮ ಜೀವನಕ್ಕೆ ಯೋಗ್ಯವಾಗಿರುವಂತೆ ಪ್ರಕಟಿಸಿದ್ದೀರಿ.

## English Translation.

Indra and Vishnu, that (exploit) is to be glorified, by which, in the exhilaration of the Soma, you have strode over the wide (space): you have traversed the wide fimameut: you have declared the worlds (fit) for our existence.

॥ ಸಂಹಿತಾಪಾಠಃ ॥

ಇಂದ್ರಾವಿಷ್ಣೂ ಹವಿಷಾ ವಾವೃಧಾನಾಗ್ರಾದ್ವಾನಾ ನಮಸಾ ರಾತಹವ್ಯಾ ।
ಘೃತಾಸುತೀ ದ್ರವಿಣಂ ಧತ್ತಮಸ್ಮೇ ಸಮುದ್ರಃ ಸ್ಥಃ ಕಲಶಃ ಸೋಮಧಾನಃ ॥

॥ ಪದಪಾಠಃ ॥

ಇಂದ್ರಾವಿಷ್ಣೂ ಇತಿ । ಹವಿಷಾ । ವಾವೃಧಾನಾ । ಅಗ್ರ‌ಽಅದ್ವಾನಾ । ನಮಸಾ । ರಾತಽಹವ್ಯಾ ।
ಘೃತಾಸುತೀ ಇತಿ ಘೃತಽಆಸುತೀ । ದ್ರವಿಣಂ । ಧತ್ತಂ । ಅಸ್ಮೇ ಇತಿ । ಸಮುದ್ರಃ । ಸ್ಥಃ । ಕಲಶಃ ।
ಸೋಮಽಧಾನಃ ॥ ೬ ॥

॥ ಸಾಯಣಭಾಷ್ಯಂ ॥

ಘೃತಾಸುತೀ ಘೃತಾನ್ನಾವಿಂದ್ರಾವಿಷ್ಣೂ ಯುವಾಂ ಹವಿಷಾ ಸೋಮೇನ ವಾವೃಧಾನಾ ವರ್ಧಮಾನಾವಗ್ರಾದ್ವಾನಾ ಸೋಮಾಗ್ರಸ್ಯ ಶುಕ್ರಸ್ಯಾತ್ತಾರೌ ನಮಸಾ ನಮಸ್ಕಾರೇಣ ರಾತಹವ್ಯಾ ದತ್ತಹವಿಷ್ಕೌ ಯಜಮಾನೈರಸ್ಮೇ ಅಸ್ಮಭ್ಯಂ ದ್ರವಿಣಂ ಧನಂ ಧತ್ತಂ । ಪ್ರಯಚ್ಛತಂ । ಕಿಂಚ ಯುವಾಂ ಸಮುದ್ರ ಉದಧಿರಿವ ಸ್ಥಃ । ಭವಥಃ । ಯತಃ ಸೋಮಧಾನಃ ಸೋಮನಿಧಾನಃ ಕಲಶೋ ಭವಥಃ ॥

॥ ಪ್ರತಿಪದಾರ್ಥ ॥

ಇಂದ್ರಾವಿಷ್ಣೂ— ಎಲೈ ಇಂದ್ರ ಮತ್ತು ವಿಷ್ಣುದೇವತೆಗಳೇ । **ಘೃತಾಸುತೀ**—ಘೃತರೂಪವಾದ ಅನ್ನವಂತರಾದ ನೀವು । **ಹವಿಷಾ**—ಸೋಮರೂಪವಾದ ಹವಿಸ್ಸಿನಿಂದ । **ವಾವೃಧಾನಾ**—ವೃದ್ಧಿಯನ್ನು ಹೊಂದುವವರೂ । **ಅಗ್ರಾದ್ವಾನಾ**—ಸೋಮಾಗ್ರವನ್ನು ಭಕ್ಷಿಸುವವರೂ । **ನಮಸಾ**—ನಮಸ್ಕಾರಪೂರ್ವಕವಾಗಿ । **ರಾತಹವ್ಯಾ**—ಅರ್ಪಿಸಲ್ಪಡುವ ಹವಿಸ್ಸುಳ್ಳವರೂ ಆಗಿ । **ಅಸ್ಮೇ**—ನಮಗೆ । **ದ್ರವಿಣಂ**—ಧನವನ್ನು । **ಧತ್ತಂ**—ಕೊಡಿರಿ । (**ಯುವಾಂ**—ನೀವಿಬ್ಬರೂ) । **ಸಮುದ್ರಃ**—ಸಮುದ್ರದಂತೆ ಗಂಭೀರರಾಗಿ । **ಸ್ಥಃ**—ಆಗಿದ್ದೀರಿ । **ಸೋಮಧಾನಃ** ಸೋಮವನ್ನಿಡತಕ್ಕ । **ಕಲಶಃ**—ಕಲಶಪಾತ್ರರೂಪರೂ ಆಗಿದ್ದೀರಿ.

॥ ಭಾವಾರ್ಥ ॥

ಎಲೈ ಇಂದ್ರ ಮತ್ತು ವಿಷ್ಣುದೇವತೆಗಳೇ, ಘೃತರೂಪವಾದ ಅನ್ನವಂತರಾದ ನೀವು ಸೋಮರೂಪವಾದ ಹವಿಸ್ಸಿನಿಂದ ವೃದ್ಧಿಯನ್ನು ಹೊಂದುವವರೂ ಸೋಮಾಗ್ರವನ್ನು ಭಕ್ಷಿಸುವವರೂ, ನಮಸ್ಕಾರಪೂರ್ವಕವಾಗಿ ಅರ್ಪಿತವಾಗುವ ಹವಿಸ್ಸುಳ್ಳವರೂ ಆಗಿ ನಮಗೆ ಧನವನ್ನು ಕೊಡಿರಿ. ನೀವಿಬ್ಬರೂ ಸಮುದ್ರದಂತೆ ಗಂಭೀರರಾಗಿದ್ದೀರಿ. ಸೋಮವನ್ನಿಡತಕ್ಕ ಕಲಶಪಾತ್ರರೂಪರೂ ಆಗಿದ್ದೀರಿ.

English Translation.

Indra and Vishnu, feeders upon clarified butter, drinking of the fermented Soma, thriving upon oblations, accepting them offered with reverenee, bestow upon us wealth ; for you are an ocean, a pitcher, the receptacle of the libation.

॥ ಸಂಹಿತಾಪಾಠಃ ॥

ಇಂದ್ರಾವಿಷ್ಣೂ ಪಿಬತಂ ಮಧ್ವೋ ಅಸ್ಯ ಸೋಮಸ್ಯ ದಸ್ರಾ ಜಠರಂ ಪೃಣೇಥಾಂ ।
ಆ ವಾಮಂಧಾಂಸಿ ಮದಿರಾಣ್ಯಗ್ಮನ್ನುಪ ಬ್ರಹ್ಮಾಣಿ ಶೃಣುತಂ ಹವಂ ಮೇ ॥

॥ ಪದಪಾಠಃ ॥

ಇಂದ್ರಾವಿಷ್ಣೂ ಇತಿ । ಪಿಬತಂ । ಮಧ್ವಃ । ಅಸ್ಯ । ಸೋಮಸ್ಯ । ದಸ್ರಾ । ಜಠರಂ । ಪೃಣೇಥಾಂ ।
ಆ । ವಾಂ । ಅಂಧಾಂಸಿ । ಮದಿರಾಣಿ । ಅಗ್ಮನ್ । ಉಪ । ಬ್ರಹ್ಮಾಣಿ । ಶೃಣುತಂ । ಹವಂ । ಮೇ ॥ ೭ ॥

॥ ಸಾಯಣಭಾಷ್ಯಂ ॥

ದಸ್ರಾ ಹೇ ದರ್ಶನೀಯೌ ಇಂದ್ರಾವಿಷ್ಣೂ ಯುವಾಂ ಮಧ್ವೋಽಸ್ಯ ಮದಕರಮಿಮಂ ಸೋಮಸ್ಯ ಸೋಮಂ ಪಿಬತಂ । ಕಿಂಚ ಜಠರಮುದರಂ ಪೃಣೇಥಾಂ । ಸೋಮೇನ ಪೂರಯೇಥಾಂ । ಹೇ ಇಂದ್ರಾವಿಷ್ಣೂ ವಾಂ ಯುವಾಂ ಮದಿರಾಣಿ ಮದಕರಾಣ್ಯಂಧಾಂಸಿ ಸೋಮಾತ್ಮಕಾನ್ಯನ್ನಾನ್ಯಾಗ್ಮನ್ । ಅಭಿಗಚ್ಛಂತು । ಮೇ ಮದೀಯಾನಿ ಬ್ರಹ್ಮಾಣಿ ಸ್ತೋತ್ರಾಣಿ ಹವಂ ಮದೀಯಮಾಹ್ವಾನಂ ಚೋಪ ಶೃಣುತಂ ॥

॥ ಪ್ರತಿಪದಾರ್ಥ ॥

ದಸ್ರಾ—ಆಕರ್ಷಕವಾದ ರೂಪವುಳ್ಳ । ಇಂದ್ರಾವಿಷ್ಣೂ—ಎಲೈ ಇಂದ್ರ ಮತ್ತು ವಿಷ್ಣುಗಳೇ । ಮಧ್ವಃ—ಮದಕಾರಕವಾದ । ಅಸ್ಯ ಸೋಮಸ್ಯ—ಈ ಸೋಮರಸವನ್ನು । ಪಿಬತಂ—ಪಾನಮಾಡಿರಿ । ಜಠರಂ—

ನಿಮ್ಮ ಉದರವನ್ನು | **ಪೃಣೇಥಾಂ**— ಈ ರಸದಿಂದ ತುಂಬಿಕೊಳ್ಳಿರಿ (ಎಲೈ ಇಂದ್ರಾವಿಷ್ಣುಗಳೇ) | **ವಾಂ**— ನಿಮ್ಮನ್ನು | **ಮದಿರಾಣಿ**—ಮದಕಾರಕವಾದ | **ಅಂಧಾಂಸಿ**—ಸೋಮರೂಪವಾದ ಅನ್ನಗಳು | **ಆ ಅಗ್ಮನ್**— ಸಮೀಪಿಸಿ ಬರಲಿ | **ಮೇ** — ನನ್ನ | **ಬ್ರಹ್ಮಾಣಿ**—ಸ್ತೋತ್ರಗಳನ್ನೂ | **ಹವಂ**—ಆಹ್ವಾನವನ್ನೂ | **ಉಪ ಶೃಣುತಂ**—ಕೇಳಿರಿ.

॥ ಭಾವಾರ್ಥ ॥

ಆಕರ್ಷಕವಾದ ರೂಪವುಳ್ಳ ಎಲೈ ಇಂದ್ರ ಮತ್ತು ವಿಷ್ಣುಗಳೇ, ಮದಾಕಾರಕವಾದ ಈ ಸೋಮರಸವನ್ನು ಪಾನಮಾಡಿರಿ. ನಿಮ್ಮ ಉದರವನ್ನು ಈ ರಸದಿಂದ ತುಂಬಿಕೊಳ್ಳಿರಿ. ಎಲೈ ಇಂದ್ರಾವಿಷ್ಣುಗಳೇ, ನಿಮ್ಮನ್ನು ಮದಕಾರಕವಾದ ಸೋಮರೂಪದ ಅನ್ನಗಳು ಸಮೀಪಿಸಿ ಬರಲಿ. ನನ್ನ ಸ್ತೋತ್ರಗಳನ್ನೂ, ಆಹ್ವಾನವನ್ನೂ ಕೇಳಿರಿ.

English Translation.

Indra and Vishnu, agreeable of aspect, drink of this sweet Soma; fill with it your bellies : may the inebriating beverage reach you : hear my prayers, my invocation.

॥ ಸಂಹಿತಾಪಾಠಃ ॥

**ಉಭಾ ಜಿಗ್ಯಥುರ್ನ ಪರಾ ಜಯೇಥೇ ನ ಪರಾ ಜಿಗ್ಯೇ ಕತರಶ್ಚನೈನೋಃ ।**
**ಇಂದ್ರಶ್ಚ ವಿಷ್ಣೋ ಯದಪಸ್ಪೃಧೇಥಾಂ ತ್ರೇಧಾ ಸಹಸ್ರಂ ವಿ ತದೈರಯೇಥಾಂ ॥ ೮ ॥**

॥ ಪದಪಾಠಃ ॥

ಉಭಾ । ಜಿಗ್ಯಥುಃ । ನ । ಪರಾ । ಜಯೇಥೇ ಇತಿ । ನ । ಪರಾ । ಜಿಗ್ಯೇ । ಕತರಃ । ಚನ । ಏನೋಃ । ಇಂದ್ರಃ । ಚ । ವಿಷ್ಣೋ ಇತಿ । ಯತ್ । ಅಪಸ್ಪೃಧೇಥಾಂ । ತ್ರೇಧಾ । ಸಹಸ್ರಂ । ವಿ । ತತ್ । ಐರಯೇಥಾಂ ॥ ೮ ॥

॥ ಸಾಯಣಭಾಷ್ಯಂ ॥

ಹೇ ಇಂದ್ರಾವಿಷ್ಣೂ ಉಭೋಭೌ ಯುವಾಂ ಜಿಗ್ಯಥುಃ । ಶತ್ರೂನಜೈಷ್ಟಂ । ನ ಪರಾ ಜಯೇಥೇ । ನ ಪುನಃ ಕದಾಚನ ಪರಾಜಯೇಥೇ । ಏನೋರೇನಯೋರ್ಯುವಯೋರ್ಮಧ್ಯೇ ಕತರಶ್ಚನೈಕತರೋಽಪಿ ನ ಪರಾ ಜಿಗ್ಯೇ । ನ ಪರಾಜೈಷ್ಟ । ಹೇ ವಿಷ್ಣೋ ಇಂದ್ರಶ್ಚ ತ್ವಂ ಚ ಯುವಾಂ ಯದ್ಯದ್ವಸ್ತು ಪ್ರತ್ಯಪಸ್ಪೃಧೇಥಾಂ ಅಸುರೈಃ ಸಹಾಸ್ಪೃಧೇಥಾಂ ತ್ರೇಧಾ ಲೋಕವೇದವಾಗಾತ್ಮನಾ ತ್ರಿಧಾ ಸ್ಥಿತಂ ಸಹಸ್ರಮಮಿತಂ ಚ ವಿ ತದೈರಯೇಥಾಂ । ವ್ಯಕ್ರಮೇಥಾಮಿತ್ಯರ್ಥಃ ॥ ತಥಾ ಚ ಬ್ರಾಹ್ಮಣಂ । ಉಭಾ ಜಿಗ್ಯಥುರಿತ್ಯಚ್ಛಾವಾಕಸ್ಯೋಭೌ ಹಿ ತೌ ಜಿಗ್ಯತುರ್ನ ಪರಾ ಜಯೇಥೇ ನ ಪರಾ ಜಿಗ್ಯ ಇತಿ ನ ಹಿ ತಯೋಃ

**ಕತರಚ್ಚನ ಪರಾಜಿಗ್ಯ ಇಂದ್ರಶ್ಚ ವಿಷ್ಣೋ ಯದಪಸ್ಪೃಧೇಥಾಂ ತ್ರೇಧಾ ಸಹಸ್ರಂ ವಿ ತದೈರಯೇಥಾಮಿ-ತೀಂದ್ರಶ್ಚ ಹ ವೈ ವಿಷ್ಣುಶ್ಚಾಸುರೈರ್ಯುಯುಧಾತೇ ತಾನ್ ಹ ಸ್ಮ ಜಿತ್ವೋಚತುಃ ಕಲ್ಪಾವಮಹಾ ಇತಿ ತೇ ಹ ತಥೇತ್ಯಸುರಾ ಊಚುಃ ಸೋಽಬ್ರವೀದಿಂದ್ರೋ ಯಾವದೇವಾಯಂ ವಿಷ್ಣುಸ್ತ್ರಿರ್ವಿಕ್ರಮತೇ ತಾವದಸ್ಮಾಕಮಥ ಯುಷ್ಮಾಕಮಿತರದಿತಿ ಸ ಇಮಾಁಲ್ಲೋಕಾನ್ವಿಚಕ್ರಮೇಽಥೋ ವೇದಾನಥೋ ವಾಚಂ ತದಾಹುಃ ಕಿಂ ತತ್ಸಹಸ್ರಮಿತೀಮೇ ಲೋಕಾ ಇಮೇ ವೇದಾ ಅಥೋ ವಾಗಿತಿ ಬ್ರೂಯಾದೈರಯೇಥಾ-ವ್ಯೈರಯೇಥಾಂ । ಐ. ಬ್ರಾ. ೬-೧೫ । ಇತಿ ॥ ಯದ್ವಾ । ತತ್ಸಹಸ್ರಂ ಗವಾಂ ಸಹಸ್ರಂ ತ್ರೇಧಾ ವ್ಯೈರಯೇಥಾಮಿತ್ಯರ್ಥಃ ॥**

। ಪ್ರತಿಪದಾರ್ಥ ।

(ಎಲೈ ಇಂದ್ರಾ ವಿಷ್ಣುಗಳೇ) **ಉಭಾ**—ನೀವಿಬ್ಬರೂ । **ಜಿಗ್ಯಥುಃ**—ಯಾವಾಗಲೂ ಶತ್ರುಗಳನ್ನು ಜಯಿಸುತ್ತೀರಿ । **ನ ಪರಾ ಜಯೇಥೇ**—ಯಾವಾಗಲೂ ನೀವು ಪರಾಜಿತರಾಗಿಲ್ಲ । **ಏನೋಃ**—ನಿಮ್ಮಿಬ್ಬರಲ್ಲಿ । **ಕತರಶ್ಚನ**—ಯಾರೊಬ್ಬರೂ ಸಹ । **ನ ಪರಾ ಜಿಗ್ಯೇ**—ಅಪಜಯವನ್ನು ಹೊಂದುವುದಿಲ್ಲ । **ವಿಷ್ಣೋ**—ಎಲೈ ವಿಷ್ಣುವೇ (ನೀನೂ) । **ಇಂದ್ರಶ್ಚ**—ಇಂದ್ರನೂ । **ಯತ್**—ಯಾವ ಯಾವ ಯುದ್ಧದಲ್ಲಿ । **ಅಪಸ್ಪೃಧೇಥಾಂ**—ಅಸುರರೊಂದಿಗೆ ಸ್ಪರ್ಧಿಸುವಿರೋ ಅವುಗಳಲ್ಲೆಲ್ಲಾ । **ತ್ರೇಧಾಂ**—ಮೂರು ಪ್ರಕಾರವಾದುದೂ । **ಸಹಸ್ರಂ**—ಅಪರಿಮಿತವಾದುದೂ ಆದ । **ವಿ ತತ್ ಐರಯೇಥಾಂ**—ಜಯವನ್ನು ಪಡೆದು ಪೂರ್ಣವಾದ ಆಕ್ರಮಣವನ್ನು ಮಾಡುತ್ತೀರಿ

। ಭಾವಾರ್ಥ ।

ಎಲೈ ಇಂದ್ರಾವಿಷ್ಣುಗಳೇ, ನೀವಿಬ್ಬರೂ ಯಾವಾಗಲೂ ಶತ್ರುಗಳನ್ನು ಜಯಿಸುತ್ತೀರಿ. ನೀವು ಯಾವಾಗಲೂ ಪರಾಜಿತರಾಗಿಲ್ಲ. ನಿಮ್ಮಿಬ್ಬರಲ್ಲಿ ಯಾರೊಬ್ಬರೂ ಸಹ ಅಪಜಯವನ್ನು ಹೊಂದುವುದಿಲ್ಲ. ಎಲೈ ವಿಷ್ಣುವೇ, ನೀನೂ ಇಂದ್ರನೂ ಯಾವ ಯಾವ ಯುದ್ಧದಲ್ಲಿ ಅಸುರರೊಂದಿಗೆ ಸ್ಪರ್ಧಿಸುವಿರೋ ಅವುಗಳಲ್ಲೆಲ್ಲಾ ಮೂರು ಪ್ರಕಾರವಾದುದೂ ಅಪರಿಮಿತವಾದುದೂ ಆದ ಜಯವನ್ನು ಪಡೆದು ಪೂರ್ಣವಾದ ಆಕ್ರಮಣವನ್ನು ಮಾಡುತ್ತೀರಿ.

### English Translation.

You have both (ever) been victorious : never have been conquered ; neither of you two has been vanquished : with whomsoever you have contended you have thrice conquered thousands.



## ಎಪ್ಪತ್ತನೆಯ ಸೂಕ್ತವು

॥ ಸಾಯಣಭಾಷ್ಯಂ ॥

**ಘೃತವತೀ ಭುವನಾನಾಮಿತಿ ಷಡೃಚಂ ನವಮಂ ಸೂಕ್ತಂ ಭರದ್ವಾಜಸ್ಯಾರ್ಷಂ ಜಾಗತಂ ದ್ಯಾವಾಪೃಥಿವೀದೇವತಾಕಂ । ತಥಾ ಚಾನುಕ್ರಮ್ಯತೇ । ಘೃತವತೀ ಷಟ್ ದ್ಯಾವಾಪೃಥಿವೀಯಂ**

**ಜಾಗತಮಿತಿ ॥ ಅಭಿಪ್ಲವಿಕೇ ಪಂಚಮೇಽಹನಿ ವೈಶ್ವದೇವಶಸ್ತ್ರ ಆದ್ಯಸ್ತೃಚೋ ದ್ಯಾವಾಪೃಥಿವ್ಯನಿವಿದ್ಧಾನಾರ್ಥಃ । ಸೂತ್ರಿತಂ ಚ । ಘೃತವತೀ ಭುವನಾನಾಮಭಿಶ್ರಿಯೇಂದ್ರ ಋಭುಭಿರ್ವಾಜವದ್ಭಿರಿತಿ ತೃಚೌ । ಆ. ೭-೭ । ಇತಿ ॥ ಬೃಹಸ್ಪತಿಸವೇಽಪಿ ವೈಶ್ವದೇವಶಸ್ತ್ರ ಏಷ ಸ್ತೃಚಃ । ಸೂತ್ರಿತಂ ಚ । ಆ. ೯-೫ ॥ ಆಭಿಪ್ಲವಿಕೇ ತೃತೀಯೇಽಹನಿ ವೈಶ್ವದೇವಶಸ್ತ್ರೇ ಘೃತೇನ ದ್ಯಾವಾಪೃಥಿವೀ ಇತಿ ತಿಸ್ರೋ ದ್ಯಾವಾಪೃಥಿವ್ಯನಿವಿದ್ಧಾನಾರ್ಥಾಃ । ಸೂತ್ರಿತಂ ಚ । ಘೃತೇನ ದ್ಯಾವಾಪೃಥಿವೀ ಇತಿ ತಿಸ್ರೋಽನಶ್ವೋ ಜಾತಃ । ಆ. ೭-೭ । ಇತಿ ॥**

ಅನುವಾದವು—**ಘೃತವತೀ ಭುವನಾನಾಂ** ಎಂಬ ಈ ಸೂಕ್ತವು ಆರನೆಯ ಅನುವಾಕದಲ್ಲಿ ಒಂಭತ್ತನೆಯ ಸೂಕ್ತವು. ಇದರಲ್ಲಿ ಆರು ಋಕ್ಕುಗಳಿರುವವು. ಈ ಸೂಕ್ತಕ್ಕೆ ಭರದ್ವಾಜನು ಋಷಿಯು ; ದ್ಯಾವಾಪೃಥಿವಿಗಳು ದೇವತೆಯು ; ಜಗತೀಛಂದಸ್ಸು. ಅನುಕ್ರಮಣಿಕೆಯಲ್ಲಿ—**ಘೃತವತೀ ಷಟ್ ದ್ಯಾವಾಪೃಥಿವೀಯಂ ಜಾಗತಂ** ಎಂದು ಹೇಳಿರುವುದು. ಅಭಿಪ್ಲವಯಾಗದಲ್ಲಿ ಐದನೆಯ ದಿವಸ ವೈಶ್ವದೇವಶಸ್ತ್ರಮಂತ್ರಪಠನಕಾಲದಲ್ಲಿ ಈ ಸೂಕ್ತದ ಮೊದಲಿನ ಮೂರು ಋಕ್ಕುಗಳನ್ನು ದ್ಯಾವಾಪೃಥಿವೀದೇವತಾಕವಾದ ನಿವಿದ್ಧಾನತೃಚವನ್ನಾಗಿ ಪಠಿಸಬೇಕೆಂದು ಆಶ್ವಲಾಯನಶ್ರೌತಸೂತ್ರದ—**ಘೃತವತೀ ಭುವನಾನಾಮಭಿಶ್ರಿಯೇಂದ್ರ ಋಭುಭಿರ್ವಾಜವದ್ಭಿರಿತಿ ತೃಚೌ** ಎಂಬ ಸೂತ್ರದಿಂದ (ಆ. ೭-೭) ವಿವೃತವಾಗಿರುವುದು. ಬೃಹಸ್ಪತಿಸವವೆಂಬ ಯಾಗದಲ್ಲಿಯೂ ಸಹ ವೈಶ್ವದೇವ ಶಸ್ತ್ರಮಂತ್ರಗಳಿಗಾಗಿ ಮೇಲೆ ಹೇಳಿದ ತೃಚವನ್ನು ಪಠಿಸಬೇಕೆಂದು ಆಶ್ವಲಾಯನಶ್ರೌತಸೂತ್ರದಲ್ಲಿ (ಆ. ೯-೫) ವಿವೃತವಾಗಿದೆ. ಮತ್ತು ಅಭಿಪ್ಲವಯಾಗದಲ್ಲಿ ಮೂರನೆಯ ದಿವಸದಲ್ಲಿ ವೈಶ್ವದೇವಶಸ್ತ್ರಮಂತ್ರಗಳನ್ನು ಪಠಿಸುವಾಗ **ಘೃತೇನ ದ್ಯಾವಾಪೃಥಿವೀ** ಎಂದು ಮೊದಲಾಗುವ ೪, ೫, ೬ ನೆಯ ಋಕ್ಕುಗಳನ್ನು ಪಠಿಸಬೇಕೆಂದು ಆಶ್ವಲಾಯನ ಶ್ರೌತಸೂತ್ರದ—**ಘೃತೇನ ದ್ಯಾವಾಪೃಥಿವೀ ಇತಿ ತಿಸ್ರೋಽನಶ್ವೋ ಜಾತಃ** ಎಂಬ ಸೂತ್ರದಿಂದ (ಆ. ೭-೭) ವಿವೃತವಾಗಿರುವುದು.

## ಸೂಕ್ತ—೭೦

ಮಂಡಲ—೬ ॥ ಅನುವಾಕ—೬ ॥ ಸೂಕ್ತ—೭೦ ॥
ಅಷ್ಟಕ—೫ ॥ ಅಧ್ಯಾಯ—೧ ॥ ವರ್ಗ—೧೪ ॥

॥ ಸೂಕ್ತದಲ್ಲಿರುವ ಋಕ್ಸಂಖ್ಯೆ—೬ ॥
॥ ಋಷಿಃ—ಭರದ್ವಾಜೋ ಬಾರ್ಹಸ್ಪತ್ಯಃ ॥
॥ ದೇವತಾ—ದ್ಯಾವಾಪೃಥಿವ್ಯೌ ॥
॥ ಛಂದಃ—ಜಗತೀ ॥

॥ ಸಂಹಿತಾಪಾಠಃ ॥

ಘೃತವತೀ ಭುವನಾನಾಮಭಿಶ್ರಿಯೋರ್ವೀ ಪೃಥ್ವೀ ಮಧುದುಘೇ ಸುಪೇಶಸಾ ।
ದ್ಯಾವಾಪೃಥಿವೀ ವರುಣಸ್ಯ ಧರ್ಮಣಾ ವಿಷ್ಕಭಿತೇ ಅಜರೇ ಭೂರಿರೇತಸಾ ॥

॥ ಪದಪಾಠಃ ॥

ಘೃತವತೀ ಇತಿ ಘೃತऽವತೀ । ಭುವನಾನಾಂ । ಅಭಿऽಶ್ರಿಯಾ । ಉರ್ವೀ ಇತಿ । ಪೃಥ್ವೀ ಇತಿ । ಮಧುದುಘೇ ಇತಿ ಮಧುऽದುಘೇ । ಸುऽಪೇಶಸಾ ।

ದ್ಯಾವಾಪೃಥಿವೀ ಇತಿ । ವರುಣಸ್ಯ । ಧರ್ಮಣಾ । ವಿಸ್ಕಭಿತೇ ಇತಿ ವಿऽಸ್ಕಭಿತೇ । ಅಜರೇ ಇತಿ । ಭೂರಿऽರೇತಸಾ ॥ ೧ ॥

॥ ಸಾಯಣಭಾಷ್ಯಂ ॥

ದ್ಯಾವಾಪೃಥಿವೀ ಹೇ ದ್ಯಾವಾಪೃಥಿವ್ಯೌ ಘೃತವತೀ ದೀಪ್ತಿಮತ್ಯಾವುದಕವತ್ಯೌ ವಾ । ವನಂ ಘೃತಮಿತ್ಯುದಕನಾಮಸು ಪಾಠಾತ್ । ಭವತ ಇತಿ ಶೇಷಃ । ಭುವನಾನಾಂ ಭೂತಾನಾಮಭಿಶ್ರಿಯಾಭಿಶ್ರಯಣೀಯೇ ಭವತ ಇತಿ ಸರ್ವತ್ರಾನುಸಂಬಂಧನೀಯಂ । ಉರ್ವೀ ವಿಸ್ತೀರ್ಣೇ ಪೃಥ್ವೀ ಬಹುಕಾರ್ಯರೂಪೇಣ ಪ್ರಥಿತೇ ಚ ಮಧುದುಘೇ ಮಧುನ ಉದಕಸ್ಯ ದೋಗ್ಧ್ರ್ಯೌ ಸುಪೇಶಸಾ ಸುರೂಪೇ ವರುಣಸ್ಯ ಸರ್ವಸ್ಯ ನಿಯಾಮಕಸ್ಯ ಧರ್ಮಣಾ ಧಾರಣೇನ ವಿಷ್ಕಭಿತೇ ಪೃಥಗ್ಧಾರಿತೇ ಅಜರೇ ನಿತ್ಯೇ ಭೂರಿರೇತಸಾ ಬಹುರೇತಸ್ಕೇ ಬಹುಕಾರ್ಯೇ ವಾ ಭವತಃ । ಅತ್ರ ಸಾಕ್ಷಾತ್ ದ್ಯಾವಾಪೃಥಿವ್ಯೋಃ ಸ್ತುತಿಪ್ರಸಂಗಾದ್ವರುಣಸ್ಯೇತಿ ದ್ರಷ್ಟವ್ಯಂ ॥

॥ ಪ್ರತಿಪದಾರ್ಥ ॥

**ಘೃತವತೀ**—ಪ್ರಭಾಯುತರಾದ । **ದ್ಯಾವಾಪೃಥಿವೀ**—ದ್ಯಾವಾಪೃಥಿವಿಗಳಿಬ್ಬರೂ । **ಭುವನಾನಾಂ**—ಸಕಲಭುವನಗಳಿಗೂ । **ಅಭಿಶ್ರಿಯಾ**—ಆಶ್ರಯದಾತರಾಗಿದ್ದು । **ಉರ್ವೀ**—ವಿಸ್ತೃತವಾದ ರೂಪವುಳ್ಳವರಾಗಿಯೂ । **ಪೃಥ್ವೀ**—ವಿಶಾಲವಾದ ಕೀರ್ತಿಯುಳ್ಳವರಾಗಿಯೂ । **ಮಧುದುಘೇ**—ಉದಕವನ್ನು ಕರೆಯುವವರಾಗಿಯೂ । **ಸುಪೇಶಸಾ**—ಉತ್ತಮವಾದ ಸ್ವರೂಪವುಳ್ಳವರಾಗಿಯೂ । **ವರುಣಸ್ಯ**—ವರುಣನ । **ಧರ್ಮಣಾ**—ಲೋಕಧಾರಕವಾದ ಕರ್ಮದಿಂದ । **ವಿಷ್ಕಭಿತೇ**—ಬೇರೆಬೇರೆಯಾದ ಅಸ್ತಿತ್ವವನ್ನು ಹೊಂದುವವರೂ । **ಅಜರೇ**—ಕ್ಷಯರಹಿತರೂ । **ಭೂರಿರೇತಸಾ**—ಅತ್ಯಧಿಕವಾದ ಸತ್ವವುಳ್ಳವರೂ ಆಗಿದ್ದಾರೆ.

॥ ಭಾವಾರ್ಥ ॥

ಪ್ರಭಾಯುತರಾದ ದ್ಯಾವಾಪೃಥಿವಿಗಳಿಬ್ಬರೂ ಸಹ ಸಕಲ ಭುವನಗಳಿಗೂ ಆಶ್ರಯದಾತರಾಗಿದ್ದು ವಿಸ್ತೃತವಾದ ರೂಪವುಳ್ಳವರಾಗಿಯೂ ವಿಶಾಲವಾದ ಕೀರ್ತಿಯುಳ್ಳವರಾಗಿಯೂ, ಉದಕವನ್ನು ಕರೆಯುವವರಾಗಿಯೂ, ಉತ್ತಮವಾದ ಸ್ವರೂಪವುಳ್ಳವರಾಗಿಯೂ ವರುಣನ, ಲೋಕಧಾರಕವಾದ ಕರ್ಮದಿಂದ ಬೇರೆಬೇರೆಯಾದ ಅಸ್ತಿತ್ವವನ್ನು ಹೊಂದಿದವರಾಗಿಯೂ- ಕ್ಷಯರಹಿತರಾಗಿಯೂ ಆಗಿದ್ದಾರೆ.

English Translation.

Radiant Heaven and Earth, the asylum of created beings, you are spacious, manifold, water-yieding, lovely, separately fixed by the functions of Varuna, undecaying, many-germed.

॥ ಸಂಹಿತಾಪಾಠಃ ॥

ಅಸಶ್ಚಂತೀ ಭೂರಿಧಾರೇ ಪಯಸ್ವತೀ ಘೃತಂ ದುಹಾತೇ ಸುಕೃತೇ ಶುಚಿ-
ವ್ರತೇ ।
ರಾಜಂತೀ ಅಸ್ಯ ಭುವನಸ್ಯ ರೋದಸೀ ಅಸ್ಮೇ ರೇತಃ ಸಿಂಚತಂ ಯನ್ಮನು-
ರ್ಹಿತಂ ॥ ೨ ॥

॥ ಪದಪಾಠಃ ॥

ಅಸಶ್ಚಂತೀ ಇತಿ । ಭೂರಿಧಾರೇ ಇತಿ ಭೂರಿಽಧಾರೇ । ಪಯಸ್ವತೀ ಇತಿ । ಘೃತಂ । ದುಹಾತೇ ಇತಿ ।
ಸುಽಕೃತೇ । ಶುಚಿವ್ರತೇ ಇತಿ ಶುಚಿಽವ್ರತೇ ।
ರಾಜಂತೀ ಇತಿ । ಅಸ್ಯ । ಭುವನಸ್ಯ । ರೋದಸೀ ಇತಿ । ಅಸ್ಮೇ ಇತಿ । ರೇತಃ । ಸಿಂಚತಂ । ಯತ್ ।
ಮನುಃಽಹಿತಂ ॥ ೨ ॥

॥ ಸಾಯಣಭಾಷ್ಯಂ ॥

ಅಸಶ್ಚಂತೀ ಅಸಜ್ಯಮಾನೇ ವ್ಯುದಸ್ಯಂತ್ಯೌ ವಾ ಭೂರಿಧಾರೇ ಬಹುಧಾರೇ । ದಿವೋ ವೃಷ್ಟಿಧಾರಾಃ ಪೃಥಿವ್ಯಾಶ್ಚಾಹುತ್ಯುದ್ಭೂತರಸಧಾರಾಃ । ಏವಮುಭಯೋರಪಿ ಬಹುಧಾರತ್ವಂ । ಪಯಸ್ವತೀ ಉದಕವತ್ಯೌ । ತಥಾ ಚ ಯಾಸ್ಕಃ । ಅಸಜ್ಯಮಾನೇ ಇತಿ ವಾ ವ್ಯುದಸ್ಯಂತ್ಯಾವಿತಿ ವಾ ಬಹುಧಾರೇ ಉದಕವತ್ಯೌ । ನಿ. ೫-೨ । ಇತಿ । ಶುಚಿವ್ರತೇ ಶುಚಿಕ್ರಿಯೇ ದ್ಯಾವಾಪೃಥಿವ್ಯೌ ಸುಕೃತೇ ಶೋಭನಕಾರಿಣೇ ಯಜಮಾನಾಯ ಘೃತಂ ಸಸ್ಯಾದಿಸಮೃದ್ಧಿಹೇತೂದಕಂ ದುಹಾತೇ । ಅಥ ಪ್ರತ್ಯಕ್ಷ-ಸ್ತುತಿಃ । ರೋದಸೀ ಹೇ ದ್ಯಾವಾಪೃಥಿವ್ಯಾವಸ್ಯ ಭುವನಸ್ಯ ಭೂತಜಾತಸ್ಯ ರಾಜಂತೀ ಈಶಾನೇ ಯುವಾಮಸ್ಮೇ ಅಸ್ಮಾಸು ರೇತಃ ಪ್ರಜನನಸಮರ್ಥಂ ವೀರ್ಯಂ ಸಿಂಚತಂ । ಯದ್ರೇತೋ ಮನುರ್ಹಿತಂ ಮನುಷ್ಯೇಭ್ಯೋ ಹಿತಂ ॥

॥ ಪ್ರತಿಪದಾರ್ಥ ॥

**ಅಸಶ್ಚಂತೀ**—ಪತನರಹಿತರೂ । **ಭೂರಿಧಾರೇ**—ನಾನಾ ಸತ್ವಗಳನ್ನು ಧರಿಸುವವರೂ । **ಪಯ-ಸ್ವತೀ**—ಉದಕವತಿಯರೂ । **ಶುಚಿವ್ರತೇ**—ಶುದ್ಧವಾದ ಕ್ರಿಯಾವ್ರತವುಳ್ಳವರೂ ಆದ ದ್ಯಾವಾಪೃಥಿವಿಗಳು । **ಸುಕೃತೇ**—ಉತ್ತಮವಾದ ಕರ್ಮಕರ್ತನಾದ ಯಜಮಾನನಿಗೆ । **ಘೃತಂ**—ಉದಕವನ್ನು । **ದುಹಾತೇ**—ಕರೆಯುತ್ತಾರೆ । **ರೋದಸೀ**—ಎಲೈ ದ್ಯಾವಾಪೃಥಿವಿಗಳೇ । **ಅಸ್ಯ ಭುವನಸ್ಯ**—ಸಲಕ ಭೂತಜಾತಕಗಳಿಗೂ । **ರಾಜಂತೀ**—ಒಡೆಯರಾದ ನೀವು । **ಯತ್**—ಯಾವ ರೇತಸ್ಸು । **ಮನುರ್ಹಿತಂ**—ಮಾನವರಿಗೆ ಹಿತಕಾರಿಯೋ ಅಂತಹ । **ರೇತಃ**—ರೇತಸ್ಸನ್ನು । **ಅಸ್ಮೇ**—ನಮ್ಮಲ್ಲಿ । **ಸಿಂಚತಂ**—ಸುರಿಸಿ ಸ್ಥಾಪಿಸಿರಿ.

|| ಭಾವಾರ್ಥ ||

ಪತನರಹಿತರೂ, ನಾನಾ ಸತ್ವಗಳನ್ನು ಧರಿಸಿರುವವರೂ, ಉದಕವತಿಯರೂ, ಶುದ್ಧವಾದ ಕ್ರಿಯಾವ್ರತವುಳ್ಳವರೂ ಆದ ದ್ಯಾವಾಪೃಥಿವಿಗಳು ಉತ್ತಮವಾದ ಕರ್ಮಕರ್ತನಾದ ಯಜಮಾನನಿಗೆ ಉದಕವನ್ನು ಕರೆಯುತ್ತಾರೆ. ಎಲೈ ದ್ಯಾವಾಪೃಥಿವಿಗಳೇ, ಸಕಲ ಭೂತಜಾತಗಳಿಗೂ ಒಡೆಯರಾದ ನೀವು ಯಾವ ರೇತಸ್ಸು ಮಾನವರಿಗೆ ಹಿತಕಾರಿಯೋ ಅಂತಹ ರೇತಸ್ಸನ್ನು (ಉದಕ ಅಥವಾ ಶಕ್ತಿಯನ್ನು) ನಮ್ಮಲ್ಲಿ ಸುರಿಸಿ ಸ್ಥಾಪಿಸಿರಿ.

English Translation.

Uncollapsing, many-showering, water-retaining, yielding moisture, beneficent, pure in act: you two Heaven and Earth, rulers over created beings, grant us vigour, that may be favourable to (the increase of) mankind.

|| ಸಂಹಿತಾಪಾಠಃ ||

ಯೋ ವಾಮೃಜವೇ ಕ್ರಮಣಾಯ ರೋದಸೀ ಮರ್ತೋ ದದಾಶ ಧಿಷಣೇ
ಸ ಸಾಧತಿ ।
ಪ್ರ ಪ್ರಜಾಭಿರ್ಜಾಯತೇ ಧರ್ಮಣಸ್ಪರಿ ಯುವೋಃ ಸಿಕ್ತಾ ವಿಷುರೂಪಾಣಿ
ಸವ್ರತಾ || ೩ ||

|| ಪದಪಾಠಃ ||

ಯಃ । ವಾಂ । ಋಜವೇ । ಕ್ರಮಣಾಯ । ರೋದಸೀ ಇತಿ । ಮರ್ತಃ । ದದಾಶ । ಧಿಷಣೇ ಇತಿ । ಸಃ ।
ಸಾಧತಿ ।
ಪ್ರ । ಪ್ರಽಜಾಭಿಃ । ಜಾಯತೇ । ಧರ್ಮಣಃ । ಪರಿ । ಯುವೋಃ । ಸಿಕ್ತಾ । ವಿಷುಽರೂಪಾಣಿ । ಸಽವ್ರತಾ ||

|| ಸಾಯಣಭಾಷ್ಯಂ ||

ಧಿಷಣೇ ಧೃಷ್ಟೇ ಸರ್ವಸ್ಯ ಭುವನಸ್ಯ ನಿವಾಸಭೂತೇ ವಾ ಹೇ ರೋದಸೀ ವಾಂ ಯುವಾಭ್ಯಾಂ ಯೋ ಮರ್ತೋ ಮರ್ತ್ಯ ಋಜವೇ ಕ್ರಮಣಾಯ ಯುವಯೋಃ ಸುಖಗಮನಾಯ ದದಾಶ ಹವೀಂಷಿ ದದಾತಿ ಸ ಮರ್ತ್ಯಃ ಸಾಧತಿ । ಕಾಮಾನ್ ಸಾಧಯತಿ । ಕಿಂಚ ಪ್ರಜಾಭಿಃ ಪುತ್ರಪೌತ್ರಾದಿಭಿಃ ಪ್ರ ಜಾಯತೇ । ಪ್ರವೃದ್ಧೋ ಭವತಿ । ಧರ್ಮಣಃ ಕರ್ಮಣಃ ಪರ್ಯುಪರಿ ಯುವೋರ್ಯುವಯೋಃ ಸಿಕ್ತಾ ಸಿಕ್ತಾನಿ ರೇತಾಂಸಿ ವಿಷುರೂಪಾಣಿ ನಾನಾವರ್ಣಾನಿ ಸವ್ರತಾ ಸಮಾನಕರ್ಮಾಣಿ ಭೂತಾನಿ ಜಾಯಂತೇ ||

॥ ಪ್ರತಿಪದಾರ್ಥ ॥

**ಧಿಷಣೇ**—ದೃಢವಾದ ಸ್ಥಿತಿಯನ್ನು ಹೊಂದಿರುವ | **ರೋದಸೀ**—ಎಲೈ ದ್ಯಾವಾಪೃಥಿವಿಗಳೇ | **ವಾಂ**—ನಿಮಗಾಗಿ | **ಯಃ ಮರ್ತಃ**—ಯಾವ ಮಾನವನು | **ಋಜವೇ ಕ್ರಮಣಾಯ**—ನಿಮ್ಮ ಸುಖಾಗಮನಾರ್ಥವಾಗಿ | **ದದಾಶ**—ಹವಿಸ್ಸನ್ನರ್ಪಿಸುವನೋ | **ಸಃ**—ಅದೇ ಮಾನವನು | **ಸಾಧತಿ**—ಇಷ್ಟಾರ್ಥಗಳನ್ನು ಪಡೆಯುತ್ತಾನೆ | **ಪ್ರಜಾಭಿಃ**—ಪುತ್ರಪೌತ್ರಾದಿಗಳೊಡನೆ | **ಪ್ರ ಜಾಯತೇ**—ವೃದ್ಧಿಯನ್ನು ಹೊಂದುತ್ತಾನೆ | **ಯುವೋಃ**—ನಿಮ್ಮ | **ಧರ್ಮಣಃ ಪರಿ**—ಧಾರಕವಾದ ಕರ್ಮಫಲವಾಗಿ | **ಸಿಕ್ತಾ**—ಸೇಚಿತವಾದ ತೇಜಸ್ಸುಗಳಿಂದ | **ವಿಷುರೂಪಾಣಿ**—ನಾನಾ ವಿಧವಾದ ರೂಪವುಳ್ಳವೂ | **ಸವ್ರತಾ**—ಆದರೂ ಸಮಾನವಾದ ಕರ್ಮವುಳ್ಳವೂ ಆದ ಭೂತಜಾತಗಳು (ಪ್ರಾಣಿಗಳು) ಉತ್ಪನ್ನವಾಗುತ್ತವೆ.

॥ ಭಾವಾರ್ಥ ॥

ದೃಢವಾದ ಸ್ಥಿತಿಯನ್ನು ಹೊಂದಿರುವ ಎಲೈ ದ್ಯಾವಾಪೃಥಿವಿಗಳೇ, ನಿಮಗಾಗಿ ಯಾವ ಮಾನವನು ನಿಮ್ಮ ಸುಖಾಗಮನಕೋಸ್ಕರ ಹವಿಸ್ಸನ್ನರ್ಪಿಸುವನೋ ಅದೇ ಮಾನವನು ಸಕಲ ಇಷ್ಟಾರ್ಥಗಳನ್ನೂ ಪಡೆಯುತ್ತಾನೆ. ಪುತ್ರಪೌತ್ರಾದಿಗಳೊಂದಿಗೆ ವೃದ್ಧಿಯನ್ನು ಹೊಂದುತ್ತಾನೆ. ನಿಮ್ಮ ಧಾರಕವಾದ ಕರ್ಮಫಲವಾಗಿ ಸೇಚಿತವಾದ ರೇತಸ್ಸುಗಳಿಂದ ನಾನಾವಿಧವಾದ ರೂಪವುಳ್ಳವೂ ಆದರೂ ಸಮಾನವಾದ ಕರ್ಮವುಳ್ಳವೂ ಆದ ಪ್ರಾಣಿಗಳು ಉತ್ಪನ್ನವಾಗುತ್ತವೆ.

## English Translation.

Firm-set Heaven and Earth, the mortal who has offered (oblations) for your straight-forwad course, accomplishes (his objects), he prospers with progeny, and invigorated by your operation, many beings of various forms, but similar functions, engendered.

॥ ಸಂಹಿತಾಪಾಠಃ ॥

ಘೃತೇನ ದ್ಯಾವಾಪೃಥಿವೀ ಅಭೀವೃತೇ ಘೃತಶ್ರಿಯಾ ಘೃತಪೃಚಾ ಘೃತಾವೃಧಾ ।
ಉರ್ವೀ ಪೃಥ್ವೀ ಹೋತೃವೂರ್ಯೇ ಪುರೋಹಿತೇ ತೇ ಇದ್ವಿಪ್ರಾ ಈಳತೇ ಸುಮ್ನಮಿಷ್ಟಯೇ ॥ ೪ ॥

॥ ಪದಪಾಠಃ ॥

ಘೃತೇನ । ದ್ಯಾವಾಪೃಥಿವೀ ಇತಿ । ಅಭಿವೃತೇ ಇತ್ಯಭಿऽವೃತೇ । ಘೃತऽಶ್ರಿಯಾ । ಘೃತऽಪೃಚಾ ।

ಘೃತऽವೃಧಾ ।

ಉರ್ವೀ ಇತಿ । ಪೃಥ್ವೀ ಇತಿ । ಹೋತೃऽವೂರ್ಯೇ । ಪುರೋಹಿತೇ ಇತಿ ಪುರಃऽಹಿತೇ । ತೇ ಇತಿ । ಇತ್ ।

ವಿಪ್ರಾಃ । ಈಳತೇ । ಸುಮ್ನಂ । ಇಷ್ಟಯೇ ॥ ೪ ॥

। ಸಾಯಣಭಾಷ್ಯಂ ॥

ದ್ಯಾವಾಪೃಥಿವೀ ದ್ಯಾವಾಪೃಥಿವ್ಯೌ ಘೃತೇನೋದಕೇನಾಭಿವೃತೇ ಆವೃತೇ ಭವತಃ । ಘೃತಶ್ರಿಯೋದಕಂ ಶ್ರಯಂತ್ಯೌ ಚ ಘೃತಪೃಚಾ ಘೃತಸಂಪೃಕ್ತೇ ಚ ಘೃತಾವೃಧಾ ಘೃತಂ ವರ್ಧಯಂತ್ಯೌ ಚೋರ್ವೀ ವಿಸ್ತೀರ್ಣೇ ಪೃಥ್ವೀ ಪ್ರಥಿತೇ ಚ ಭವತಃ । ಹೋತೃವೂರ್ಯೇ ಯಜ್ಞೇ ಪುರೋಹಿತೇ ಯಜಮಾನೈಃ ಪುರಸ್ಕೃತೇ ಚ ಭವತಃ । ವಿಪ್ರಾಃ ಪ್ರಾಜ್ಞಾಃ ಸ್ತೋತಾರಸ್ತೇ ಇತ್ ದ್ಯಾವಾಪೃಥಿವ್ಯಾವೇವೇಷ್ಟಯೇ ಯಜ್ಞಾಯ । ಹೋತ್ರೇಷ್ಟಿರಿತಿ ಯಜ್ಞನಾಮಸು ಪಾಠಾತ್ । ಸುಮ್ನಂ ಸುಖಮೀಳತೇ । ಯಾಚಂತೇ । ಸುಖೇ ಸತಿ ಹಿ ಯಾಗಾಃ ಪ್ರವರ್ತಂತೇ ॥

। ಪ್ರತಿಪದಾರ್ಥ ।

**ದ್ಯಾವಾಪೃಥಿವೀ**—ದ್ಯಾವಾಪೃಥಿವಿಗಳು । **ಘೃತೇನ**—ಉದಕದಿಂದ । **ಅಭಿವೃತೇ**—ಆವೃತರಾಗಿದ್ದಾರೆ । **ಘೃತಶ್ರಿಯಾ**—ಉದಕಕ್ಕೆ ಆಶ್ರಯರಾಗಿಯೂ । **ಘೃತಪೃಚಾ**—ಘೃತದಿಂದ ಸಂತೃಪ್ತರಾಗಿಯೂ । **ಘೃತಾವೃಧಾ**—ಘೃತವನ್ನು (ಉದಕವನ್ನು) ವೃದ್ಧಿಪಡಿಸುವವರಾಗಿಯೂ । **ಉರ್ವೀ**—ವಿಸ್ತೃತರಾಗಿಯೂ । **ಪೃಥ್ವೀ**—ವಿಸ್ತೃತವಾದ ಕೀರ್ತಿಯುಳ್ಳವರಾಗಿಯೂ ಇರುತ್ತಾರೆ । **ಹೋತೃವೂರ್ಯೇ**—ಯಜ್ಞದಲ್ಲಿ । **ಪುರೋಹಿತೇ**—ಪ್ರಥಮಪುರಸ್ಕಾರಕ್ಕೆ ಅರ್ಹರಾಗಿದ್ದಾರೆ । **ವಿಪ್ರಾಃ**—ಪ್ರಾಜ್ಞರಾದ ಸ್ತೋತೃಗಳು । **ತೇ ಇತ್**—ದ್ಯಾವಾಪೃಥಿವಿಗಳಿಂದಲೇ । **ಇಷ್ಟಯೇ**—ಯಜ್ಞಾರ್ಥವಾಗಿ । **ಸುಮ್ನಂ**—ಸುಖವನ್ನು । **ಈಳತೇ**—ಯಾಚಿಸುತ್ತಾರೆ.

। ಭಾವಾರ್ಥ ॥

ದ್ಯಾವಾಪೃಥಿವಿಗಳು ಉದಕದಿಂದ ಆವೃತರಾಗಿದ್ದಾರೆ. ಉದಕಕ್ಕೆ ಆಶ್ರಯರಾಗಿಯೂ, ಉದಕದಿಂದ ಸಂಪೃಕ್ತರಾಗಿಯೂ, ಉದಕವನ್ನು ವೃದ್ಧಿಪಡಿಸುವವರಾಗಿಯೂ, ವಿಸ್ತೃತವಾದ ರೂಪವೂ, ಖ್ಯಾತಿಯೂ ಉಳ್ಳವರಾಗಿಯೂ ಇರುತ್ತಾರೆ. ಯಜ್ಞದಲ್ಲಿ ಪ್ರಥಮಪುರಸ್ಕಾರಕ್ಕೆ ಅರ್ಹರಾಗಿದ್ದಾರೆ. ಪ್ರಾಜ್ಞರಾದ ಸ್ತೋತೃಗಳು ದ್ಯಾವಾಪೃಥಿವಿಗಳಿಂದಲೇ ಯಜ್ಞಾರ್ಥವಾಗಿ ಸುಖವನ್ನು ಯಾಚಿಸುತ್ತಾರೆ.

## English Translation.

You are surrounded, Heaven and Earth, by water : you are the asylum of water : imbued with water : the augmenters of water : vast and

manifold ; you are first propitiated in the sacrifice : the pious pray to you for happiness, that the sacrifice (may be celebrated).

॥ ಸಂಹಿತಾಪಾಠಃ ॥

ಮಧು ನೋ ದ್ಯಾವಾಪೃಥಿವೀ ಮಿಮಿಕ್ಷತಾಂ ಮಧುಶ್ಚುತಾ ಮಧುದುಘೇ ಮಧುವ್ರತೇ ।
ದಧಾನೇ ಯಜ್ಞಂ ದ್ರವಿಣಂ ಚ ದೇವತಾ ಮಹಿ ಶ್ರವೋ ವಾಜಮಸ್ಮೇ ಸುವೀರ್ಯಂ ॥ ೫ ॥

॥ ಪದಪಾಠಃ ॥

ಮಧು । ನಃ । ದ್ಯಾವಾಪೃಥಿವೀ ಇತಿ । ಮಿಮಿಕ್ಷತಾಂ । ಮಧುऽಶ್ಚುತಾ । ಮಧುದುಘೇ ಇತಿ ಮಧುऽದುಘೇ । ಮಧುವ್ರತೇ ಇತಿ ಮಧುऽವ್ರತೇ ।
ದಧಾನೇ ಇತಿ । ಯಜ್ಞಂ । ದ್ರವಿಣಂ । ಚ । ದೇವತಾ । ಮಹಿ । ಶ್ರವಃ । ವಾಜಂ । ಅಸ್ಮೇ ಇತಿ । ಸುऽವೀರ್ಯಂ ॥ ೫ ॥

॥ ಸಾಯಣಭಾಷ್ಯಂ ॥

ಮಧುಶ್ಚುತೋದಕಸ್ಯ ಕ್ಷಾರಯಿತ್ರ್ಯೌ ಮಧುದುಘೇ ಉದಕದೋಗ್ಧ್ರ್ಯೌ ಮಧುವ್ರತೇ ಉದಕಾರ್ಥಕರ್ಮಾಣೌ ದೇವತಾ ದೇವತಾಭೂತೇ ಅಸ್ಮೇ ಅಸ್ಮಾಸು ಯಜ್ಞಂ ದ್ರವಿಣಂ ಧನಂ ಚ ಮಹಿ ಮಹತ್ ಶ್ರವೋ ಯಶೋ ವಾಜಮನ್ನಂ ಸುವೀರ್ಯಂ ಸುವೀರತ್ವಂ ಚ ದಧಾನೇ ದದತ್ಯೌ ದ್ಯಾವಾಪೃಥಿವೀ ದ್ಯಾವಾಪೃಥಿವ್ಯೌ ನೋऽಸ್ಮಾನ್ಮಧು ಮಧುನಾ ॥ ತೃತೀಯೈಕವಚನಸ್ಯ ಲುಕ್ ॥ ಮಿಮಿಕ್ಷತಾಂ । ಸಿಂಚತಾಂ ॥

॥ ಪ್ರತಿಪದಾರ್ಥ ॥

**ಮಧುಶ್ಚುತಾ**—ಉದಕವನ್ನು ಸ್ರವಿಸುವಂತೆ ಮಾಡುವವರೂ । **ಮಧುದುಘೇ**—ಉದಕವನ್ನು ಕರೆಯುವವರೂ । **ಮಧುವ್ರತೇ**—ಉದಕಾರ್ಥವಾದ ಕರ್ಮವುಳ್ಳವರೂ । **ದೇವತಾ**—ದೇವತಾತ್ಮರೂ । **ಅಸ್ಮೇ**—ನಮಗೆ । **ಯಜ್ಞಂ**—ಯಜ್ಞವನ್ನೂ । **ದ್ರವಿಣಂ**—ಧನವನ್ನೂ । **ಮಹಿ**—ಮಹತ್ತಾದ । **ಶ್ರವಃ**—ಯಶಸ್ಸನ್ನೂ । **ವಾಜಂ ಚ**—ಅನ್ನವನ್ನೂ । **ಸುವೀರ್ಯಂ**—ಉತ್ತಮವಾದ ವೀರ್ಯವನ್ನೂ । **ದಧಾನೇ**—ಕೊಡುವವರೂ ಆದ । **ದ್ಯಾವಾಪೃಥಿವೀ**—ದ್ಯಾವಾಪೃಥಿವಿಗಳು । **ನಃ**—ನಮ್ಮನ್ನು । **ಮಧು**—ಉದಕದಿಂದ । **ಮಿಮಿಕ್ಷತಾಂ**—ತೋಯಿಸಲಿ.

॥ ಭಾವಾರ್ಥ ॥

ಉದಕವನ್ನು ಪ್ರವಿಸುವಂತೆ ಮಾಡುವವರೂ, ಉದಕವನ್ನು ಕರೆಯುವವರೂ ಉದಕಾರ್ಥವಾದ ಕರ್ಮವುಳ್ಳವರೂ, ದೇವತಾತ್ಮರೂ ನಮಗೆ ಯಜ್ಞವನ್ನೂ, ಧನವನ್ನೂ, ಮಹತ್ತಾದ ಯಶಸ್ಸನ್ನೂ, ಅನ್ನವನ್ನೂ ಉತ್ತಮವಾದ ವೀರ್ಯವನ್ನೂ ಕೊಡುವವರೂ ಆದ ದ್ಯಾವಾಪೃಥಿವಿಗಳು ನಮ್ಮನ್ನು ಉದಕದಿಂದ (ವೃಷ್ಟಿಯಿಂದ) ತೋಯಿಸಲಿ.

## English Translation.

May Heaven and Earth, the effusers of water, the milkers of water, dischargers of the functions of water, divinities, the promoters of sacrifice, the bestowers of wealth, of renown, of food, of male posterity, combine together.

॥ ಸಂಹಿತಾಪಾಠಃ ॥

ಊರ್ಜಂ ನೋ ದ್ಯೌಶ್ಚ ಪೃಥಿವೀ ಚ ಪಿನ್ವತಾಂ ಪಿತಾ ಮಾತಾ ವಿಶ್ವವಿದಾ
ಸುದಂಸಸಾ ।
ಸಂರರಾಣೇ ರೋದಸೀ ವಿಶ್ವಶಂಭುವಾ ಸನಿಂ ವಾಜಂ ರಯಿಮಸ್ಮೇ
ಸಮಿನ್ವತಾಂ ॥ ೬ ॥

॥ ಪದಪಾಠಃ ॥

ಊರ್ಜಂ । ನಃ । ದ್ಯೌಃ । ಚ । ಪೃಥಿವೀ । ಚ । ಪಿನ್ವತಾಂ । ಪಿತಾ । ಮಾತಾ । ವಿಶ್ವಽವಿದಾ । ಸುಽದಂಸಸಾ । ಸಂರರಾಣೇ ಇತಿ ಸಂಽರರಾಣೇ । ರೋದಸೀ ಇತಿ । ವಿಶ್ವಽಶಂಭುವಾ । ಸನಿಂ । ವಾಜಂ । ರಯಿಂ ।
ಅಸ್ಮೇ ಇತಿ । ಸಂ । ಇನ್ವತಾಂ ॥ ೬ ॥

॥ ಸಾಯಣಭಾಷ್ಯಂ ॥

ಪಿತಾ ವರ್ಷಸ್ಯ ಸೇಕ್ತೃತ್ವೇನ ಪಿತೃಭೂತಾ ದ್ಯೌಶ್ಚ ಮಾತಾ ಧಾರಕತ್ವೇನ ಮಾತೃಭೂತಾ ಪೃಥಿವೀ ಚೋಭೇ ನೋಽಸ್ಮಭ್ಯಮೂರ್ಜಮನ್ನಂ ಪಿನ್ವತಾಂ । ಸಿಂಚತಾಂ । ಕಿಂಚ ವಿಶ್ವವಿದಾ ವಿಶ್ವಂ ಜಾನಂತ್ಯೌ ವಿಶ್ವಸ್ಯ ವೇದಯಿತ್ರ್ಯೌ ವಾ ಸುದಂಸಸಾ ಸುಕರ್ಮಾಣೌ ಸಂರರಾಣೇ ಪರಸ್ಪರೋಪಕಾರ್ಯೋಪಕಾರಕಭಾವೇನ ಸಹ ರಮಮಾಣೇ ವಿಶ್ವಶಂಭುವಾ ಸರ್ವಸ್ಯ ಭಾವಯಿತ್ರ್ಯೌ ರೋದಸೀ ದ್ಯಾವಾಪೃಥಿವ್ಯಾವಸ್ಮೇ ಅಸ್ಮಾಸು ಸನಿಂ ಸಂಭಜನೀಯಂ ಪುತ್ರಾದಿಕಂ ವಾಜಂ ಬಲಂ ರಯಿಂ ಧನಂ ಚ ಸಮಿನ್ವತಾಂ । ಸಂಪ್ರೇರಯತಾಂ ॥

॥ ಪ್ರತಿಪದಾರ್ಥ ॥

**ಪಿತಾ**—ಪಿತೃರೂಪಿಯಾದ । **ದ್ಯೌಶ್ಚ**—ದ್ಯುಲೋಕಾಧಿದೇವತೆಯೂ । **ಮಾತಾ**—ಮಾತೃರೂಪಿಣಿಯಾದ । **ಪೃಥಿವೀ ಚ**—ಪೃಥಿವಿಯೂ । **ನಃ**—ನಮಗೆ । **ಊರ್ಜಂ**—ಶಕ್ತಿಸಾಧಕವಾದ ಅನ್ನವನ್ನು । **ಪಿನ್ವತಾಂ**—ಒದಗಿಸಲಿ । **ವಿಶ್ವವಿದಾ**—ಸರ್ವಜ್ಞರೂ । **ಸುದಂಸಸಾ**—ಉತ್ತಮವಾದ ಕರ್ಮವುಳ್ಳವರೂ । **ಸಂರರಾಣೇ**—ಒಟ್ಟಿಗೆ ರಮಿಸುವವರೂ । **ವಿಶ್ವಶಂಭುವಾ**—ವಿಶ್ವಕ್ಕೆಲ್ಲಾ ಮಂಗಳಕಾರಕರೂ ಆದ । **ರೋದಸೀ**—ದ್ಯಾವಾಪೃಥಿವಿಗಳು । **ಅಸ್ಮೇ**—ನಮ್ಮಲ್ಲಿ । **ಸನಿಂ**—ಭೋಗಯೋಗ್ಯವಾದ ಪುತ್ರಾದಿಗಳನ್ನೂ । **ವಾಜಂ**—ಬಲವನ್ನೂ । **ರಯಿಂ**—ಧನವನ್ನೂ । **ಸಮಿನ್ವತಾಂ**—ತುಂಬಿಕೊಡಲಿ.

॥ ಭಾವಾರ್ಥ ॥

ಪಿತೃರೂಪಿಯಾದ ದ್ಯುಲೋಕಾಧಿದೇವತೆಯೂ, ಮಾತೃರೂಪಿಣಿಯಾದ ಪೃಥಿವಿಯೂ ನಮಗೆ ಶಕ್ತಿಸಾಧಕವಾದ ಅನ್ನವನ್ನು ಒದಗಿಸಲಿ. ಸರ್ವಜ್ಞರೂ ಉತ್ತಮವಾದ ಕರ್ಮವುಳ್ಳವರೂ ಒಟ್ಟಿಗೆ ರಮಿಸುವವರೂ ವಿಶ್ವಕ್ಕೆಲ್ಲಾ ಮಂಗಳಕಾರಕರೂ ಆದ ದ್ಯಾವಾಪೃಥಿವಿಗಳು ನಮ್ಮಲ್ಲಿ ಭೋಗಯೋಗ್ಯವಾದ ಪುತ್ರಾದಿಗಳನ್ನೂ, ಬಲವನ್ನೂ, ಧನವನ್ನೂ ತುಂಬಿಕೊಡಲಿ.

English Translation.

May father Heaven, may mother Earth, who are all knowing, and doers of good deeds, grant us sustenance ; may Heaven and Earth mutually co-operating and promoting the happiness of all, bestow upon us posterity, food and riches.



# ಎಪ್ಪತ್ತೊಂದನೆಯ ಸೂಕ್ತವು

॥ ಸಾಯಣಭಾಷ್ಯಂ ॥

**ಉದು ಷ್ಯ ದೇವ ಇತಿ ಷಡೃಚಂ ದಶಮಂ ಸೂಕ್ತಂ ಭರದ್ವಾಜಸ್ಯಾರ್ಷಂ ಸವಿತೃದೇವತಾಕಂ । ಆದ್ಯಾಸ್ತಿಸ್ರೋ ಜಗತ್ಯಶ್ಚತುರ್ಥ್ಯಾದ್ಯಾಸ್ತಿಸ್ರಸ್ತ್ರಿಷ್ಟುಭಃ । ತಥಾ ಚಾನುಕ್ರಾಂತಂ । ಉದು ಷ್ಯ ಸಾವಿತ್ರಂ ತ್ರಿತ್ರಿಷ್ಟುಬಂತಮಿತಿ ॥ ಸೂಕ್ತವಿನಿಯೋಗೋ ಲೈಂಗಿಕಃ ॥ ಚಾತುರ್ವಿಂಶಿಕೇಽಹನಿ ವೈಶ್ವದೇವಶಸ್ತ್ರ ಆದ್ಯಸ್ತೃಚಃ ಸಾವಿತ್ರಸೂಕ್ತಸ್ಥಾನ ಆವಪನೀಯಃ । ಸೂತ್ರಿತಂ ಚ । ಉದು ಷ್ಯ ದೇವಃ ಸವಿತಾ ಹಿರಣ್ಯಯೇತಿ ತಿಸ್ರಸ್ತೇ ಹಿ ದ್ಯಾವಾಪೃಥಿವೀ । ಆ. ೭-೪ । ಇತಿ ॥ ಬೃಹಸ್ಪತಿಸವೇಽಪಿ ವೈಶ್ವದೇವಶಸ್ತ್ರೇ ಸಾವಿತ್ರಸೂಕ್ತಸ್ಥಾನ ಏಷ ತೃಚಃ । ಸೂತ್ರಿತಂ ಚ । ಉದು ಷ್ಯ ದೇವಃ ಸವಿತಾ ಹಿರಣ್ಯಯೇತ್ಯನೂತ್ಯ ಷ್ಯೇತ್ । ಆ. ೯-೫ । ಇತಿ ॥ ವ್ಯೂಳ್ಹೇ ಪಂಚಮೇಽಹನಿ ವೈಶ್ವದೇವಶಸ್ತ್ರ ಉದು ಷ್ಯ ದೇವಃ ಸವಿತಾ ದಮೂನಾ ಇತಿ ತೃಚಃ ಸಾವಿತ್ರನಿವಿದ್ಧಾನಾರ್ಥಃ । ಸೂತ್ರಿತಂ ಚ । ಉದು ಷ್ಯ ದೇವಃ ಸವಿತಾ ದಮೂನಾ**

**ಇತಿ ತಿಸ್ರಃ।** ಆ. ೮-೮। **ಇತಿ ॥ ವೈಶ್ವದೇವಪರ್ವಣಿ ಸಾವಿತ್ರದ್ವಾದಶಕಪಾಲಸ್ಯ ವಾಮಮದ್ಯೇತಿ ಯಾಜ್ಯಾ। ಸೂತ್ರಿತಂ ಚ। ವಾಮಮದ್ಯ ಸವಿತರ್ವಾಮಮು ಶ್ವಃ ಪೂಷನ್ನವ ವ್ರತೇ ವಯಂ।** ಆ. ೨-೧೬। **ಇತಿ ॥**

ಅನುವಾದವು— **ಉದು ಷ್ಯ ದೇವಃ** ಎಂಬ ಈ ಸೂಕ್ತವು ಆರನೆಯ ಅನುವಾಕದಲ್ಲಿ ಹತ್ತನೆಯ ಸೂಕ್ತವು. ಇದರಲ್ಲಿ ಆರು ಋಕ್ಕುಗಳಿರುವುವು. ಈ ಸೂಕ್ತಕ್ಕೆ ಭರದ್ವಾಜನು ಋಷಿಯು ; ಸವಿತೃವು ದೇವತೆಯು ; ಈ ಸೂಕ್ತದ ಮೊದಲನೆಯ ಮೂರು ಋಕ್ಕುಗಳು ಜಗತೀಛಂದಸ್ಕವು ; ನಾಲ್ಕರಿಂದ ಕೊನೆಯ ಮೂರು ಋಕ್ಕುಗಳು ತ್ರಿಷ್ಟುಪ್ ಛಂದಸ್ಕವು. ಅನುಕ್ರಮಣಿಕೆಯಲ್ಲಿ— **ಉದು ಷ್ಯ ಸಾವಿತ್ರಂ ತ್ರಿತ್ರಿಷ್ಟುಬಂತಂ** ಎಂದು ಹೇಳಿರುವುದು. ಸೂಕ್ತ ವಿನಿಯೋಗವು ಲೈಂಗಿಕವು. ಯಾಗದ ಚಾತುರ್ವಿಂಶಕವೆಂಬ ದಿನದಲ್ಲಿ ವೈಶ್ವದೇವಶಸ್ತ್ರಮಂತ್ರಗಳಲ್ಲಿ ಈ ಸೂಕ್ತದ ಮೊದಲ ಮೂರು ಋಕ್ಕುಗಳನ್ನು ಸವಿತೃದೇವತಾಕವಾದ ಸೂಕ್ತಸ್ಥಾನದಲ್ಲಿ ಆವಪನಾರ್ಥವಾಗಿ ಪಠಿಸಬೇಕೆಂದು ಆಶ್ವಲಾಯನಶ್ರೌತ್ರಸೂತ್ರದ— **ಉದು ಷ್ಯ ದೇವಃ ಸವಿತಾ ಹಿರಣ್ಯಯೇತಿ ತಿಸ್ರಸ್ತ್ರೇಃ ಹಿ ದ್ಯಾವಾಪೃಥಿವೀ** ಎಂಬ ಸೂತ್ರದಿಂದ (ಆ ೭-೪) ವಿವೃತವಾಗಿರುವುದು. ಬೃಹಸ್ಪತಿಸವವೆಂಬ ಯಾಗದಲ್ಲಿಯೂ ವೈಶ್ವದೇವಶಸ್ತ್ರಮಂತ್ರಪಠನ ಕಾಲದಲ್ಲಿ ಸವಿತೃದೇವತಾಕವಾದ ಸೂಕ್ತಸ್ಥಾನದಲ್ಲಿ ಈ ತೃಚವನ್ನು (ಸೂಕ್ತದ ಮೊದಲ ಮೂರು ಋಕ್ಕುಗಳನ್ನು) ತ್ಯಜಿಸಬೇಕೆಂದು ಆಶ್ವಲಾಯನಶ್ರೌತಸೂತ್ರದ— **ಉದು ಷ್ಯ ದೇವಃ ಸವಿತಾ ಹಿರಣ್ಯೇಯೇತ್ಯನೂತ್ರಿಷ್ಮೇತ್** ಎಂಬ ಸೂತ್ರದಿಂದ (ಆ ೯-೫) ವಿವೃತವಾಗಿರುವುದು. ವ್ಯೂಢವೆಂಬ ಯಾಗದ ಐದನೆಯ ದಿವಸದಲ್ಲಿ ವೈಶ್ವದೇವಶಸ್ತ್ರಮಂತ್ರಗಳನ್ನು ಪಠಿಸುವಾಗ ಈ ಸೂಕ್ತ ೪-೬ ಋಕ್ಕುಗಳ ತೃಚವನ್ನು ಸವಿತೃದೇವತಾಕವಾದ ಸೂಕ್ತದ ಮಧ್ಯದಲ್ಲಿ ನಿವಿದ್ಧಾನ ಸೂಕ್ತವನ್ನಾಗಿ ಸೇರಿಸಿ ಪಠಿಸಬೇಕೆಂದು ಅಶ್ವಲಾಯನಶ್ರೌತಸೂತ್ರದ— **ಉದು ಷ್ಯ ದೇವಃ ಸವಿತಾ ದಮೂನಾ ಇತಿ ತಿಸ್ರಃ** ಎಂಬ ಸೂತ್ರದಿಂದ (ಆ. ೮-೮) ವಿವೃತವಾಗಿರುವುದು. ವೈಶ್ವದೇವಪರ್ವಹೋಮದಲ್ಲಿ ಸವಿತೃದೇವತಾಕವಾದ ದ್ವಾದಶಕಪಾಲಹೋಮದಲ್ಲಿ **ವಾಮಮದ್ಯ** ಎಂಬ ಆರನೆಯ ಋಕ್ಕನ್ನು ಯಾಜ್ಯಾಮಂತ್ರವನ್ನಾಗಿ ಪಠಿಸಬೇಕೆಂದು ಆಶ್ವಲಾಯನಶ್ರೌತಸೂತ್ರದ **ವಾಮಮದ್ಯ ಸವಿತರ್ವಾಮಮುಶ್ವಃ ಪೂಷನ್ನವ ವ್ರತೇ ವಯಂ** ಎಂಬ ಸೂತ್ರದಿಂದ (ಆ. ೨-೧೬) ವಿವೃತವಾಗಿರುವುದು.

## ಸೂಕ್ತ—೭೧

ಮಂಡಲ—೬ ॥ ಅನುವಾಕ—೬ ॥ ಸೂಕ್ತ—೭೧ ॥
ಅಷ್ಟಕ—೫ ॥ ಅಧ್ಯಾಯ—೧ ॥ ವರ್ಗ—೧೫ ॥

॥ ಸೂಕ್ತದಲ್ಲಿರುವ ಋಕ್ಸಂಖ್ಯೆ—೬ ॥
॥ ಋಷಿಃ—ಭರದ್ವಾಜೋ ಬಾರ್ಹಸ್ಪತ್ಯಃ ॥
॥ ದೇವತಾ—ಸವಿತಾ ॥
॥ ಛಂದಃ—೧-೩. ಜಗತೀ। ೪-೬. ತ್ರಿಷ್ಟುಪ್ ॥

॥ ಸಂಹಿತಾಪಾಠಃ ॥

**ಉದು ಷ್ಯ ದೇವಃ ಸವಿತಾ ಹಿರಣ್ಯಯಾ ಬಾಹೂ ಅಯಂಸ್ತ ಸವನಾಯ ಸುಕ್ರತುಃ।**

ಘೃತೇನ ಪಾಣೀ ಅಭಿ ಪ್ರುಷ್ಣುತೇ ಮಖೋ ಯುವಾ ಸುದಕ್ಷೋ ರಜಸೋ
ವಿಧರ್ಮಣಿ ॥ ೧ ॥

॥ ಪದಪಾಠಃ ॥

ಉತ್ । ಊಂ ಇತಿ । ಸ್ಯಃ । ದೇವಃ । ಸವಿತಾ । ಹಿರಣ್ಯಯಾ । ಬಾಹೂ ಇತಿ । ಅಯಂಸ್ತ । ಸವನಾಯ ।
ಸುಽಕ್ರತುಃ ।

ಘೃತೇನ । ಪಾಣೀ ಇತಿ । ಅಭಿ । ಪ್ರುಷ್ಣುತೇ । ಮಖಃ । ಯುವಾ । ಸುಽದಕ್ಷಃ । ರಜಸಃ । ವಿಽಧರ್ಮಣಿ ॥

॥ ಸಾಯಣಭಾಷ್ಯಂ ॥

ದೇವೋ ದ್ಯೋತಮಾನಃ ಸುಕ್ರತುಃ ಸುಕರ್ಮಾ ಸ್ಯ ಸ ಪ್ರಸಿದ್ಧಃ ಸವಿತಾ ಹಿರಣ್ಯಯಾ ಹಿರಣ್ಮಯಾವಾತ್ಮೀಯೌ ಬಾಹೂ ಸವನಾಯ ಸುವನಾಯ ದಾನಾಯ ವೋದಯಂಸ್ತ । ಉದ್ಯಚ್ಛತಿ । ಕಿಂಚ ಮಖೋ ಮಂಹನೀಯೋ ಯುವಾ ನಿತ್ಯತರುಣಃ ಸುದಕ್ಷಃ ಸುಪ್ರಜ್ಞೋ ರಜಸೋ ಲೋಕಸ್ಯೋ-ದಕಸ್ಯ ವಾ ವಿಧರ್ಮಣಿ ವಿಧಾರಣೇ ಸ್ಥಿತೋ ಘೃತೇನೋದಕೇನ ಪೂರ್ಣೌ ಸ್ವೌ ಪಾಣೀ ಅಭಿ ಪ್ರುಷ್ಣುತೇ । ಅಭಿಪ್ರೇರಯತಿ ॥

॥ ಪ್ರತಿಪದಾರ್ಥ ॥

**ದೇವಃ**—ಪ್ರಭಾಯುತನೂ । **ಸುಕ್ರತುಃ**—ಉತ್ತಮವಾದ ಕರ್ಮವುಳ್ಳವನೂ । **ಸ್ಯಃ**—ಪ್ರಸಿದ್ಧನೂ ಆದ । **ಸವಿತಾ**—ಸವಿತೃದೇವನು । **ಹಿರಣ್ಯಯಾ**—ತನ್ನ ಸುವರ್ಣಮಯವಾದ । **ಬಾಹೂ**—ತೋಳುಗಳನ್ನು । **ಸವನಾಯ**—ಉತ್ತಮವಾದ ದಾನಕ್ಕಾಗಿ । **ಉದಯಂಸ್ತ**—ಎತ್ತಿ ಪ್ರಸರಿಸುತ್ತಾನೆ । **ಮಖಃ**—ಪೂಜ್ಯನೂ । **ಯುವಾ**—ನಿತ್ಯತರುಣನೂ । **ಸುದಕ್ಷಃ**—ಉತ್ತಮವಾದ ಪ್ರಜ್ಞಾಯುತನೂ । **ರಜಸಃ**—ಲೋಕಗಳ । **ವಿಧರ್ಮಣಿ**—ನಾನಾ ವಿಧವಾದ ಕರ್ಮಗಳಲ್ಲಿ ನಿರತನೂ ಆದ ಸವಿತೃವು । **ಘೃತೇನ**—ಉದಕದಿಂದ ಪೂರ್ಣವಾದ । **ಪಾಣೀ**—ತನ್ನ ಬಾಹುಗಳನ್ನು । **ಅಭಿ ಪ್ರುಷ್ಣುತೇ**—ಪೂರ್ಣವಾಗಿ ನೀಡುತ್ತಾನೆ.

॥ ಭಾವಾರ್ಥ ॥

ಪ್ರಭಾಯುತನೂ ಉತ್ತಮವಾದ ಕರ್ಮವುಳ್ಳವನೂ ಪ್ರಸಿದ್ಧನೂ ಆದ ಸವಿತೃದೇವನು ತನ್ನ ಸುವರ್ಣಮಯವಾದ ತೋಳುಗಳನ್ನು ಉತ್ತಮವಾದ ದಾನಕ್ಕಾಗಿ ಎತ್ತಿ ಪ್ರಸರಿಸುತ್ತಾನೆ. ಪೂಜ್ಯನೂ ನಿತ್ಯತರುಣನೂ ಉತ್ತಮವಾದ ಪ್ರಜ್ಞಾಯುತನೂ ಲೋಕಗಳ ನಾನಾವಿಧವಾದ ಕರ್ಮಗಳಲ್ಲಿ ನಿರತನೂ ಆದ ಸವಿತೃವು ಉದಕದಿಂದ ಪೂರ್ಣವಾದ ತನ್ನ ಬಾಹುಗಳನ್ನು ಪೂರ್ಣವಾಗಿ ನೀಡುತ್ತಾನೆ.

## English Translation.

The divine and benevolent Savitri puts forth his golden arms for (making) donations : the adorable, youthful, sagacious (deity), stretches out out his hands, filled with water, in the various service of the world.

॥ ಸಂಹಿತಾಪಾಠಃ ॥

ದೇವಸ್ಯ ವಯಂ ಸವಿತುಃ ಸವೀಮನಿ ಶ್ರೇಷ್ಠೇ ಸ್ಯಾಮ ವಸುನಶ್ಚ ದಾವನೇ।
ಯೋ ವಿಶ್ವಸ್ಯ ದ್ವಿಪದೋ ಯಶ್ಚತುಷ್ಪದೋ ನಿವೇಶನೇ ಪ್ರಸವೇ ಚಾಸಿ
ಭೂಮನಃ ॥ ೨ ॥

॥ ಪದಪಾಠಃ ॥

ದೇವಸ್ಯ । ವಯಂ । ಸವಿತುಃ । ಸವೀಮನಿ । ಶ್ರೇಷ್ಠೇ । ಸ್ಯಾಮ । ವಸುನಃ । ಚ । ದಾವನೇ ।
ಯಃ । ವಿಶ್ವಸ್ಯ । ದ್ವಿऽಪದಃ । ಯಃ । ಚತುಃऽಪದಃ । ನಿऽವೇಶನೇ । ಪ್ರऽಸವೇ । ಚ । ಅಸಿ । ಭೂಮನಃ ॥

॥ ಸಾಯಣಭಾಷ್ಯಂ ॥

ತಸ್ಯ ದೇವಸ್ಯ ಸವಿತುಃ ಪ್ರೇರಕಸ್ಯ ಸವೀಮನಿ ಪ್ರಸವೇऽನುಜ್ಞಾನೇ । ತಥಾ ಚ ಯಾಸ್ಕಃ । ಸವೀಮನಿ ಪ್ರಸವೇ । ನಿ. ೬-೭ । ಇತಿ । ಶ್ರೇಷ್ಠೇऽತಿಶಯೇನ ಪ್ರಶಸ್ತೇ ವಸುನೋ ಧನಸ್ಯ ದಾವನೇ ದಾನೇ ಚ ಸ್ಯಾಮ । ಸಮರ್ಥಾ ಭೂಯಾಸ್ಮ । ಯಸ್ತ್ವಂ ವಿಶ್ವಸ್ಯ ಸರ್ವಸ್ಯ ದ್ವಿಪದೋ ನಿವೇಶನೇ ಸ್ಥಿತೌ ಪ್ರಸವೇ ಚ ಸ್ವತಂತ್ರೋऽಸಿ । ಯಸ್ತ್ವಂ ಭೂಮನೋ ಭೂರೇಶ್ಚತುಷ್ಪದೋ ನಿವೇಶನೇ ಪ್ರಸವೇ ಚ ಸ್ವತಂತ್ರೋऽಸಿ ॥

॥ ಪ್ರತಿಪದಾರ್ಥ ॥

**ದೇವಸ್ಯ**—ದೇವತಾತ್ಮನಾದ । **ಸವಿತುಃ**—ಸವಿತೃವಿನ । **ಸವೀಮನಿ**—ಅನುಜ್ಞೆಯಲ್ಲಿಯೂ । **ಶ್ರೇಷ್ಠೇ**—ಉತ್ತಮವಾದ । **ವಸುನಃ**—ಧನದ । **ದಾವನೇ ಚ**—ದಾನಕ್ಕೆ ಪಾತ್ರರಾಗಿಯೂ । **ವಯಂ**—ನಾವು । **ಸ್ಯಾಮ**—ಇರುವಂತಾಗಲಿ (ಎಲೈ ಸವಿತೃದೇವನೇ) । **ಯಃ**—ಯಾವ ಅದೇ ನೀನು । **ವಿಶ್ವಸ್ಯ**—ಸಮಸ್ತವಾದ । **ದ್ವಿಪದಃ**—ಪಾದದ್ವಯಗಳುಳ್ಳ ಮಾನವಾದಿಗಳ । **ನಿವೇಶನೇ**—ಸ್ಥಿತಿಗೂ । **ಪ್ರಸವೇ ಚ**—ಉತ್ಪತ್ತಿಗೂ । **ಅಸಿ**—ಸ್ವತಂತ್ರನಾಗಿದ್ದೀಯೆ । **ಯಃ**—ಯಾವ ಅದೇ ನೀನು । **ಭೂಮನಃ**—ಅತ್ಯಧಿಕವಾದ ಸಂಖ್ಯೆಯುಳ್ಳ । **ಚತುಷ್ಪದಃ**—ನಾಲ್ಕು ಕಾಲುಗಳುಳ್ಳ ಪಶ್ವಾದಿಗಳ ಸೃಷ್ಟಿಗೂ ಸ್ಥಿತಿಗೂ ಸ್ವತಂತ್ರಕಾರಣನಾಗಿದ್ದೀಯೆ.

॥ ಭಾವಾರ್ಥ ॥

ದೇವತಾತ್ಮನಾದ ಸವಿತೃವಿನ ಅನುಜ್ಞೆಯಲ್ಲಿಯೂ ಉತ್ತಮವಾದ ಧನದ ದಾನಕ್ಕೆ ಪಾತ್ರರಾಗಿಯೂ ನಾವು ಇರುವಂತಾಗಲಿ. ಎಲೈ ಸವಿತೃದೇವನೇ, ಯಾವ ಆದೇ ನೀನು ಸಮಸ್ತವಾದ ದ್ವಿಪಾದಿಗಳಾದ ಮಾನವಾದಿಗಳ ಮತ್ತು ಚತುಷ್ಪಾದಿಗಳಾದ ಪಶ್ವಾದಿಗಳ ಉತ್ಪತ್ತಿಗೂ, ಸ್ಥಿತಿಗೂ ಸ್ವತಂತ್ರವಾದ ಕಾರಣನಾಗಿದ್ದೀಯೆ

English Translation.

May we be amongst the progeny of the divine Savitri, and (have power) to offer him most excellent donations : for you are he who (are absolute) in the procreation and perpetuation of many (living beings), bipeds or quadrupeds.

। ಸಂಹಿತಾಪಾಠಃ ।

ಅದಬ್ಧೇಭಿಃ ಸವಿತಃ ಪಾಯುಭಿಷ್ಟ್ವಂ ಶಿವೇಭಿರದ್ಯ ಪರಿ ಪಾಹಿ ನೋ ಗಯಂ ।
ಹಿರಣ್ಯಜಿಹ್ವಃ ಸುವಿತಾಯ ನವ್ಯಸೇ ರಕ್ಷಾ ಮಾಕಿರ್ನೋ ಅಘಶಂಸ ಈಶತ ॥

॥ ಪದಪಾಠಃ ॥

ಅದಬ್ಧೇಭಿಃ । ಸವಿತರಿತಿ । ಪಾಯುಽಭಿಃ । ತ್ವಂ । ಶಿವೇಭಿಃ । ಅದ್ಯ । ಪರಿ । ಪಾಹಿ । ನಃ । ಗಯಂ ।
ಹಿರಣ್ಯಽಜಿಹ್ವಃ । ಸುವಿತಾಯ । ನವ್ಯಸೇ । ರಕ್ಷ । ಮಾಕಿಃ । ನಃ । ಅಘಽಶಂಸಃ । ಈಶತ ॥ ೩ ॥

। ಸಾಯಣಭಾಷ್ಯಂ ।

ಹೇ ಸವಿತರದಬ್ಧೇಭಿರಹಿಂಸಿತೈಃ ಪಾಯುಭಿಸ್ತೇಜೋಭೀ ರಕ್ಷಣಸಾಧನೈರ್ವಾ ಶಿವೇಭಿಃ ಸುಖಕಾರಿಭಿರ್ನೋಽಸ್ಮಾಕಂ ಗಯಂ ಗೃಹಂ ಧನಂ ವಾ । ಗಯಃ ಕೃದರ ಇತಿ ಗೃಹನಾಮಸು ಮೀಳ್ಹಂ ಗಯ ಇತಿ ಧನನಾಮಸು ಪಾಠಾತ್ । ಅದ್ಯ ಪರಿ ಯಾಹಿ । ರಕ್ಷ । ಹಿರಣ್ಯಜಿಹ್ವೋ ಹಿತರಮಣೀಯವಾಕ್ ತ್ವಂ । ತಥಾ ಚ ಯಾಸ್ಕಃ । ಹಿರಣ್ಯಂ ಕಸ್ಮಾದಿತ್ಯುಪಕ್ರಮ್ಯ ಹಿತರಮಣಂ ಭವತೀತಿ ವಾ । ನಿ. ೨-೧೦ । ಇತಿ । ಸುವಿತಾಯ ಸುಖಾಯ ನವ್ಯಸೇ ನವತರಾಯ ಭವ । ರಕ್ಷ । ಅಸ್ಮಾನ್ಪಾಲಯ ಚ । ನೋಽಸ್ಮಾಕಮಘಶಂಸೋಽನರ್ಥಮಾಶಂಸಮಾನಃ ಶತ್ರುರ್ಮಾಕಿರೀಶತ । ಮೇಶತ ॥

॥ ಪ್ರತಿಪದಾರ್ಥ ॥

**ಸವಿತಃ**—ಎಲೈ ಸವಿತೃದೇವನೇ । **ಅದಬ್ಧೇಭಿಃ**—ಅಹಿಂಸಿತವಾದವೂ । **ಪಾಯುಭಿಃ**—ರಕ್ಷಕವಾದವೂ । **ಶಿವೇಭಿಃ**—ಮಂಗಳಕರವಾದವೂ ಆದ ನಿನ್ನ ತೇಜಸ್ಸುಗಳಿಂದ । **ನಃ**—ನಮ್ಮ । **ಗಯಂ**—ಗೃಹವನ್ನು ।

**ಅದ್ಯ**—ಈಗ | **ಪರಿ ಪಾಹಿ**—ರಕ್ಷಿಸು | **ಹಿರಣ್ಯಜಿಹ್ವಃ**—ಸುವರ್ಣಮಯವಾದ ವಾಕ್ಕುಳ್ಳ | **ತ್ವಂ**—ನೀನು | **ಸುವಿತಾಯ**—ನಮ್ಮ ಸುಖಕ್ಕಾಗಿ | **ನವ್ಯಸೇ**—ನೂತನ ಸ್ವರೂಪವನ್ನು ಹೊಂದಿರು | **ರಕ್ಷ**—ನಮ್ಮನ್ನು ರಕ್ಷಿಸು | **ನಃ**—ನಮಗೆ | **ಅಘಶಂಸಃ**—ಕೇಡನ್ನು ಬಯಸುವ ಶತ್ರುವು | **ಮಾಕಿಃ ಈಶತ**—ಯಾರೂ ಕೆಡಕನ್ನುಂಟುಮಾಡುವ ಶಕ್ತಿಯನ್ನು ಹೊಂದದಿರಲಿ.

॥ ಭಾವಾರ್ಥ ॥

ಎಲೈ ಸವಿತೃದೇವನೇ. ಅಹಿಂಸಿತವಾದವೂ, ರಕ್ಷಕವಾದವೂ, ಮಂಗಳಕರವಾದವೂ ಆದ ನಿನ್ನ ತೇಜಸ್ಸುಗಳಿಂದ ನಮ್ಮ ಗೃಹವನ್ನು ಈಗ ರಕ್ಷಿಸು. ಸುವರ್ಣಮಯವಾದ ವಾಕ್ಕುಳ್ಳ ನೀನು ನಮ್ಮ ಸುಖಕ್ಕಾಗಿ ನೂತನವಾದ ಸ್ವರೂಪವನ್ನು ಹೊಂದಿರು, ನಮ್ಮನ್ನು ರಕ್ಷಿಸು. ನಮಗೆ ಕೇಡನ್ನು ಬಯಸುವ ಯಾವ ಶತ್ರುವೂ ನಮಗೆ ಕೆಡಕನ್ನುಂಟುಮಾಡುವ ಶಕ್ತಿಯನ್ನು ಹೊಂದದಿರಲಿ.

## English Translation.

You, Savitri, prosper to-day our dwelling with uninjurable protections, confirming happiness ; you who are golden-tongued, (be vigilant) for our present prosperity : protect us ; let not any calumniator have powcr (to harm) us.

॥ ಸಂಹಿತಾಪಾಠಃ ॥

ಉದು ಷ್ಯ ದೇವಃ ಸವಿತಾ ದಮೂನಾ ಹಿರಣ್ಯಪಾಣಿಃ ಪ್ರತಿದೋಷಮಸ್ಥಾತ್।
ಅಯೋಹನುರ್ಯಜತೋ ಮಂದ್ರಜಿಹ್ವ ಆ ದಾಶುಷೇ ಸುವತಿ ಭೂರಿ
ವಾಮಂ ॥ ೪ ॥

॥ ಪದಪಾಠಃ ॥

ಉತ್ । ಊಂ ಇತಿ । ಸ್ಯಃ । ದೇವಃ । ಸವಿತಾ । ದಮೂನಾಃ । ಹಿರಣ್ಯಽಪಾಣಿಃ । ಪ್ರತಿಽದೋಷಂ ।
ಅಸ್ಥಾತ್ ।

ಅಯಃಽಹನುಃ । ಯಜತಃ । ಮಂದ್ರಽಜಿಹ್ವಃ । ಆ । ದಾಶುಷೇ । ಸುವತಿ । ಭೂರಿ । ವಾಮಂ ॥ ೪ ॥

॥ ಸಾಯಣಭಾಷ್ಯಂ ॥

**ದೇವೋ ದ್ಯೋತಮಾನೋ ದಮೂನಾ ದಮಮನಾ ದಾನಮನಾ ವಾ । ತಥಾ ಚ ಯಾಸ್ಕಃ । ದಮೂನಾ ದಮಮನಾ ವಾ ದಾನಮನಾ ವಾ ದಾಂತಮನಾ ವಾ । ನಿ. ೪-೪ । ಇತಿ । ಹಿರಣ್ಯಪಾಣಿರ್ಹಿರಣ್ಮಯಪಾಣಿರಯೋಹನುರ್ಹಿರಣ್ಮಯಹನುಃ । ರುಕ್ಮಮಯ ಇತಿ ಹಿರಣ್ಯ ನಾಮಸು ಪಾಠಾತ್ । ಯಜತೋ**

ಯಷ್ಟವ್ಯೋ ಮಂದ್ರಜಿಹ್ವೋ ಮೋದಮಾನವಾಕ್ ಸ್ಯ ಸ ಸವಿತಾ ಪ್ರತಿದೋಷಂ ಪ್ರತಿರಾತ್ರಂ ರಾತ್ರೇರವಸಾನೇಽವಸಾನ ಉದಸ್ಥಾತ್ । ಉತ್ತಿಷ್ಠತು । ಯೋ ದಾಶುಷೇ ಯಜಮಾನಾಯ ಮಹ್ಯಂ ಭೂರಿ ಪ್ರಭೂತಂ ವಾಮಂ ವನನೀಯಂ ಸಂಭಜನೀಯಮನ್ನಂ । ವಾಮಂ ವನನೀಯಂ । ನಿ. ೬-೩೧ । ಇತಿ ಯಾಸ್ಕಃ। ಆ ಸುವತಿ ಪ್ರೇರಯತಿ ॥

। ಪ್ರತಿಪದಾರ್ಥ ॥

**ದೇವಃ**—ಪ್ರಕಾಶಮಾನನೂ । **ದಮೂನಾಃ**—ದಾನಮನಸ್ಕನೂ । **ಹಿರಣ್ಯಪಾಣಿಃ**—ಸುವರ್ಣಮಯವಾದ ಪಾಣಿಯುಳ್ಳವನೂ । **ಅಯೋಹನುಃ**—ಹಿರಣ್ಮಯವಾದ ಕೆನ್ನೆಯುಳ್ಳವನೂ । **ಯಜತಃ**—ಪೂಜ್ಯನೂ । **ಮಂದ್ರಜಿಹ್ವಃ**—ಆಹ್ಲಾದಕವಾದ ವಾಕ್ಕುಳ್ಳವನೂ । **ಸ್ಯಃ**—ಪ್ರಸಿದ್ಧನೂ ಆದ । **ಸವಿತಾ**—ಸವಿತೃದೇವನು। **ಪ್ರತಿದೋಷಂ**—ಪ್ರತಿಯೊಂದು ರಾತ್ರಿಯ ಕೊನೆಯಲ್ಲಿಯೂ। **ಉದಸ್ಥಾತ್**—ಉದಯವನ್ನು ಹೊಂದಲಿ। **ದಾಶುಷೇ**—ಹವಿಸ್ಸನ್ನರ್ಪಿಸುವ ನನಗೆ। **ಭೂರಿ**—ಪ್ರಭೂತವಾದುದೂ। **ವಾಮಂ**—ಆಕರ್ಷಕವಾದುದೂ ಆದ ಅನ್ನವನ್ನು । **ಆ ಸುವತಿ**—ಒದಗಿಸಲಿ

॥ ಭಾವಾರ್ಥ ॥

ಪ್ರಕಾಶಮಾನನೂ ದಾನಮನಸ್ಕನೂ ಸುವರ್ಣಮಯವಾದ ಪಾಣಿಯುಳ್ಳವನೂ ಹಿರಣ್ಮಯವಾದ ಕೆನ್ನೆಯುಳ್ಳವನೂ ಪೂಜ್ಯನೂ ಆಹ್ಲಾದಕವಾದ ವಾಕ್ಕುಳ್ಳವನೂ ಪ್ರಸಿದ್ಧನೂ ಆದ ಸವಿತೃದೇವನು ಪ್ರತಿಯೊಂದು ರಾತ್ರಿಯ ಕೊನೆಯಲ್ಲಿಯೂ ಉದಯವನ್ನು ಹೊಂದಲಿ. ಹವಿಸ್ಸನ್ನರ್ಪಿಸುವ ನನಗೆ ಪ್ರಭೂತವಾದುದೂ ಆಕರ್ಷಕವಾದುದೂ ಆದ ಅನ್ನವನ್ನು ಒದಗಿಸಲಿ.

## English Translation.

May the divine, munificent, golden-handed, golded-jawed, adorable sweet-spoken Savitri, rise regularly at the close of night : when he bestows abundant and desirable (food) upon the donor of the oblation.

॥ ಸಂಹಿತಾಪಾಠಃ ॥

ಉದೂ ಅಯಾಁ ಉಪವಕ್ತೇವ ಬಾಹೂ ಹಿರಣ್ಯಯಾ ಸವಿತಾ ಸುಪ್ರತೀಕಾ ।
ದಿವೋ ರೋಹಾಂಸ್ಯರುಹತ್ಪೃಥಿವ್ಯಾ ಅರೀರಮತ್ಪತಯತ್ಕಚ್ಚಿದಭ್ವಂ ॥ ೪ ॥

॥ ಪದಪಾಠಃ ॥

ಉತ್ । ಊಂ ಇತಿ । ಅಯಾನ್ । ಉಪವಕ್ತಾಽಇವ । ಬಾಹೂ ಇತಿ । ಹಿರಣ್ಯಯಾ । ಸವಿತಾ । ಸುಽಪ್ರತೀಕಾ ।
ದಿವಃ । ರೋಹಾಂಸಿ । ಅರುಹತ್ । ಪೃಥಿವ್ಯಾಃ । ಅರೀರಮತ್ । ಪತಯತ್ । ಕತ್ । ಚಿತ್ । ಅಭ್ವಂ ॥

॥ ಸಾಯಣಭಾಷ್ಯಂ ॥

ಸವಿತೋಽಪವಕ್ತೇವಾಸ್ಮಾಕಮಧಿವಕ್ತೇವ ಹಿರಣ್ಯಯಾ ಹಿರಣ್ಮಯೌ ಸುಪ್ರತೀಕಾ ಶೋಭನಾವಯವೌ ಬಾಹೂ ಉದಯಾನ್ । ಉದ್ಯಚ್ಛತು । ಯೋಽಯಂ ಪೃಥಿವ್ಯಾಃ ಪೃಥಿವೀಪರ್ಯಂತಾದ್ದಿವೋಽಂತರಿಕ್ಷಸ್ಯ ರೋಹಾಂಸ್ಯುಚ್ಛ್ರಿತಪ್ರದೇಶಾನರುಹತ್ ರೋಹತಿ । ಪತಯತ್ ಗಚ್ಛತ್ ಕಚ್ಚಿತ್ ಯತ್ಕಿಂಚಿದಭ್ವಂ ಮಹತ್ಸರ್ವಂ ವಸ್ತುಜಾತಂ ತಿರೋಹಿತಮರೀರಮತ್ ರಮಯತಿ ಚ ॥

॥ ಪ್ರತಿಪದಾರ್ಥ ॥

**ಸವಿತಾ**—ಸವಿತೃದೇವನು । **ಉಪವಕ್ತೇವ**—ನಮಗೆ ಮಂಗಳಕರವಾದ ಉಪಸ್ತುತಿಯನ್ನು ಹೇಳುವವನಂತೆ । **ಹಿರಣ್ಯಯಾ**—ಸುವರ್ಣಮಯವಾದವೂ । **ಸುಪ್ರತೀತಾ**—ಶ್ರೇಷ್ಠವಾದ ರೂಪವುಳ್ಳವೂ ಆದ । **ಬಾಹೂ**—ಬಾಹುಗಳನ್ನು । **ಉದಯಾನ್**—ಮೇಲಕ್ಕೆತ್ತಿ ಪ್ರಸರಿಸಲಿ (ಇದೇ ಸವಿತೃವು) । **ಪೃಥಿವ್ಯಾಃ**—ಪೃಥಿವಿಯ (ಮತ್ತು) । **ದಿವಃ**—ಅಂತರಿಕ್ಷದ । **ರೋಹಾಂಸಿ**—ಉನ್ನತವಾದ ಪ್ರದೇಶಗಳನ್ನು । **ಅರುಹತ್**—ಹತ್ತುತ್ತಾನೆ । **ಪತಯತ್**—ಸಂಚರಿಸುತ್ತಾ । **ಕಚ್ಚಿತ್ ಅಭ್ವಂ**—ಮಹತ್ತಾದ ಸಕಲ ಭೂತಗಳನ್ನೂ । **ಅರೀರಮತ್**—ಸಂತೋಷಗೊಳಿಸುತ್ತಾನೆ.

॥ ಭಾವಾರ್ಥ ॥

ಸವಿತೃದೇವನು ನಮಗೆ ಮಂಗಳಕರವಾದ ಉಪಸ್ತುತಿಯನ್ನು ಹೇಳುವವನಂತೆ ಸುವರ್ಣಮಯವಾದವೂ ಶ್ರೇಷ್ಠವಾದ ರೂಪವುಳ್ಳವೂ ಆದ ಬಾಹುಗಳನ್ನು ಮೇಲಕ್ಕೆತ್ತಿ ಹಿಡಿಯಲಿ. ಇದೇ ಸವಿತೃವು ಪೃಥಿವಿಯ ಮತ್ತು ಅಂತರಿಕ್ಷದ ಉನ್ನತವಾದ ಪ್ರದೇಶಗಳನ್ನು ಹತ್ತುತ್ತಾನೆ. ಸಂಚರಿಸುತ್ತಾ ಮಹತ್ತಾದ ಸಕಲ ಭೂತಗಳನ್ನೂ ಸಂತೋಷಗೊಳಿಸುತ್ತಾನೆ.

## English Translation.

May Savitri put forth like an orator his golden well-formed arms: (he who), from the ends of the earth, ascends to the summit of the sky, and, moving along, delights every thing that is.

॥ ಸಂಹಿತಾಪಾಠಃ ॥

ವಾಮಮದ್ಯ ಸವಿತರ್ವಾಮಮು ಶ್ವೋ ದಿವೇದಿವೇ ವಾಮಮಸ್ಮಭ್ಯಂ
ಸಾವೀಃ ।
ವಾಮಸ್ಯ ಹಿ ಕ್ಷಯಸ್ಯ ದೇವ ಭೂರೇರಯಾ ಧಿಯಾ ವಾಮಭಾಜಃ ಸ್ಯಾಮ ।

॥ ಪದಪಾಠಃ ॥

ವಾಮಂ । ಅದ್ಯ । ಸವಿತಃ । ವಾಮಂ । ಊಂ ಇತಿ । ಶ್ವಃ । ದಿವೇಽದಿವೇ । ವಾಮಂ । ಅಸ್ಮಭ್ಯಂ । ಸಾವೀಃ ।
ವಾಮಸ್ಯ । ಹಿ । ಕ್ಷಯಸ್ಯ । ದೇವ । ಭೂರೇಃ । ಅಯಾ । ಧಿಯಾ । ವಾಮಽಭಾಜಃ । ಸ್ಯಾಮ ॥ ೬ ॥

॥ ಸಾಯಣಭಾಷ್ಯಂ ॥

**ಹೇ ಸವಿತರಸ್ಮಭ್ಯಂ ವಾಮಂ ಧನಮದ್ಯ ಸಾವೀಃ । ಸುವ । ಶ್ವಶ್ಚ ವಾಮಂ ಧನಂ ಪ್ರಸುವ । ಕಿಂ ಬಹೂಕ್ತ್ಯಾ । ದಿವೇ ದಿವೇ ಪ್ರತಿದಿನಂ ವಾಮಂ ಧನಂ ಪ್ರಸುವ । ಹೇ ದೇವ ಹಿ ಯಸ್ಮಾತ್ ಕ್ಷಯಸ್ಯ ನಿವಾಸಭೂತಸ್ಯ ಭೂರೇಃ ಪ್ರಭೂತಸ್ಯ ವಾಮಸ್ಯ ದಾತಾಸಿ ಅತೋ ವಯಮಯಾನಯಾ ಧಿಯಾ ಸ್ತುತ್ಯಾ ವಾಮಭಾಜೋ ಧನವಂತಃ ಸ್ಯಾಮ । ಭೂಯಾಸ್ಮ ॥**

॥ ಪ್ರತಿಪದಾರ್ಥ ॥

**ಸವಿತಃ**—ಎಲೈ ಸವಿತೃದೇವನೇ । **ಅಸ್ಮಭ್ಯಂ**—ನಮಗೆ । **ವಾಮಂ**—ಆಕರ್ಷಕವಾದ ಧನವನ್ನು । **ಅದ್ಯ**—ಈಗ । **ಸಾವೀಃ**—ಉತ್ಪನ್ನಮಾಡು । **ಶ್ವಃ**—ನಾಳೆಯೂ । **ವಾಮಂ**—ಅದೇ ರೀತಿಯ ಧನವನ್ನು ಉತ್ಪನ್ನಮಾಡು । **ದಿವೇ ದಿವೇ**—ಪ್ರತಿದಿನವೂ । **ವಾಮಂ**—ಅದೇ ಧನವನ್ನು ಉತ್ಪನ್ನಮಾಡು । **ದೇವ**—ದೇವತಾತ್ಮನಾದ ಎಲೈ ಸವಿತೃವೇ । **ಹಿ**—ಯಾವ ಕಾರಣದಿಂದ । **ಕ್ಷಯಸ್ಯ**—ವಾಸಗೃಹಕ್ಕೂ । **ಭೂರೇಃ**—ಪ್ರಭೂತವಾದ । **ವಾಮಸ್ಯ**—ಧನಕ್ಕೂ ದಾತೃವಾಗಿದ್ದೀಯೋ (ಅದುದರಿಂದಲೇ) । **ಅಯಾ ಧಿಯಾ**—ಇದೇ ಸ್ತುತಿಯಿಂದ । **ವಾಮಭಾಜಃ**—ಧನವಂತರಾಗಿ । **ಸ್ಯಾಮ**—ನಾವು ಇರುವಂತಾಗಲಿ,

॥ ಭಾವಾರ್ಥ ॥

ಎಲೈ ಸವಿತೃದೇವನೇ, ನಮಗೆ ಆಕರ್ಷಕವಾದ ಧನವನ್ನು ಇಂದೂ, ನಾಳೆಯೂ ಹಾಗೆಯೇ ಪ್ರತಿದಿನವೂ ಉತ್ಪನ್ನಮಾಡು. ಪ್ರತಿದಿನವೂ ಅದೇ ಧನವನ್ನೇ ಉತ್ಪನ್ನಮಾಡು. ದೇವತಾತ್ಮನಾದ ಎಲೈ ಸವಿತೃವೇ, ಯಾವ ಪ್ರಭಾವದಿಂದ ನೀನು ವಾಸಗೃಹಕ್ಕೂ ಪ್ರಭೂತವಾದ ಧನಕ್ಕೂ ದಾತೃವಾಗಿದ್ದೀಯೋ ಆ ಮಹತ್ವದಿಂದಲೇ, ನಮ್ಮ ಈ ಸ್ತುತಿಯ ಫಲವಾಗಿ ನಾವು ಧನವಂತರಾಗಿರುವಂತೆ ಮಾಡು.

## English Translation

Beget for us Savitri, wealth to-day, wealth day by day : you are the giver of ample wealth, of a (spacious) mansion : may we, by this praise, become partakers of wealth.



# ಎಪ್ಪತ್ತೆರಡನೆಯ ಸೂಕ್ತವು

॥ ಸಾಯಣಭಾಷ್ಯಂ ॥

**ಇಂದ್ರಾಸೋಮಾ ಮಹೀತಿ ಪಂಚರ್ಚಮೇಕಾದಶಂ ಸೂಕ್ತಂ ಭರದ್ವಾಜಸ್ಯಾರ್ಷಂ ತ್ರೈಷ್ಟುಭಮಿಂದ್ರಾಸೋಮದೇವತಾಕಂ । ಇಂದ್ರಾಸೋಮಾ ಪಂಚೈಂದ್ರಾಸೋಮಮಿತ್ಯನುಕ್ರಾಂತಂ ॥ ಸೂಕ್ತವಿನಿಯೋಗೋ ಲೈಂಗಿಕಃ ॥**

ಅನುವಾದವು— **ಇಂದ್ರಾಸೋಮಾ ಮಹಿ** ಎಂಬ ಈ ಸೂಕ್ತವು ಆರನೆಯ ಅನುವಾಕದಲ್ಲಿ ಹನ್ನೊಂದನೆಯ ಸೂಕ್ತವು. ಇದರಲ್ಲಿ ಐದು ಋಕ್ಕುಗಳಿರುವವು. ಈ ಸೂಕ್ತಕ್ಕೆ ಭರದ್ವಾಜನು ಋಷಿಯು ; ಇಂದ್ರಾಸೋಮರು ದೇವತೆಯು ; ತ್ರಿಷ್ಟುಪ್‌ಛಂದಸ್ಸು. ಅನುಕ್ರಮಣಿಕೆಯಲ್ಲಿ— **ಇಂದ್ರಾಸೋಮಾ ಪಂಚೈಂದ್ರಾಸೋಮಂ** ಎಂದು ಹೇಳಿರುವುದು. ಸೂಕ್ತವಿನಿಯೋಗವು ಲೈಂಗಿಕವು.

## ಸೂಕ್ತ—೭೨

ಮಂಡಲ—೬ ॥ ಅನುವಾಕ—೬ ॥ ಸೂಕ್ತ—೭೨ ॥
ಅಷ್ಟಕ—೫ ॥ ಅಧ್ಯಾಯ—೧ ॥ ವರ್ಗ—೧೬ ॥
॥ ಸೂಕ್ತದಲ್ಲಿರುವ ಋಕ್ಸಂಖ್ಯೆ—೫ ॥
॥ ಋಷಿಃ—ಭರದ್ವಾಜೋ ಬಾರ್ಹಸ್ಪತ್ಯಃ ॥
॥ ದೇವತಾ—ಇಂದ್ರಾಸೋಮೌ ॥
॥ ಛಂದಃ—ತ್ರಿಷ್ಟುಪ್ ॥

॥ ಸಂಹಿತಾಪಾಠಃ ॥

ಇಂದ್ರಾಸೋಮಾ ಮಹಿ ತದ್ವಾಂ ಮಹಿತ್ವಂ ಯುವಂ ಮಹಾನಿ ಪ್ರಥಮಾನಿ ಚಕ್ರಥುಃ ।
ಯುವಂ ಸೂರ್ಯಂ ವಿವಿದಥುರ್ಯುವಂ ಸ್ವರ್ವಿಶ್ವಾ ತಮಾಂಸ್ಯಹತಂ ನಿದಶ್ಚ ॥ ೧ ॥

॥ ಪದಪಾಠಃ ॥

ಇಂದ್ರಾಸೋಮಾ । ಮಹಿ । ತತ್ । ವಾಂ । ಮಹಿತ್ವಂ । ಯುವಂ । ಮಹಾನಿ । ಪ್ರಥಮಾನಿ । ಚಕ್ರಥುಃ ।
ಯುವಂ । ಸೂರ್ಯಂ । ವಿವಿದಥುಃ । ಯುವಂ । ಸ್ವಃ । ವಿಶ್ವಾ । ತಮಾಂಸಿ । ಅಹತಂ । ನಿದಃ । ಚ ॥೧॥

॥ ಸಾಯಣಭಾಷ್ಯಂ ॥

ಇಂದ್ರಾಸೋಮಾ ಹೇ ಇಂದ್ರಾಸೋಮೌ ವಾಂ ಯುವಯೋಸ್ತನ್ಮಹಿತ್ವಂ ಮಹತ್ತ್ವಂ ಮಹಿ ಮಹತ್ । ಕಿಂ ತದಿತ್ಯತ ಆಹ । ಯುವಂ ಯುವಾಂ ಮಹಾನಿ ಮಹಾಂತಿ ಪ್ರಥಮಾನಿ ಪ್ರತಮಾನಿ ಮುಖ್ಯಾನಿ ವಾ ಭೂತಾನಿ । ಪ್ರಥಮ ಇತಿ ಮುಖ್ಯನಾಮ ಪ್ರತಮೋ ಭವತಿ । ನಿ. ೨-೨೨ । ಇತಿ ಯಾಸ್ಕಃ । ಚಕ್ರಥುಃ । ಆಕಾರ್ಷ್ಟಂ । ಕಿಂಚ ಯುವಂ ಯುವಾಂ ಸೂರ್ಯಂ ವಿವಿದಥುಃ । ಅಲಂಭಯತಂ ಚ ಜನಾನ್ । ಯುವಂ ಯುವಾಂ ಸ್ವರುದಕಂ ಚ ವಿವಿದಥುಃ । ಹೇಮ ಸ್ವರಿತ್ಯುದಕನಾಮಸು ಪಾಠಾತ್ । ಅಪಿ ಚ ವಿಶ್ವಾ ವಿಶ್ವಾನಿ ತಮಾಂಸಿ ನಿದಶ್ಚ ನಿಂದಿತ್ಯ್ನಸುರಾಂಶ್ಚಾಹತಂ । ಅಹಿಂಸ್ತಂ ॥

॥ ಪ್ರತಿಪದಾರ್ಥ ॥

**ಇಂದ್ರಾಸೋಮಾ**—ಎಲೈ ಇಂದ್ರ ಮತ್ತು ಸೋಮದೇವತೆಗಳೇ । **ವಾಂ**—ನಿಮ್ಮಿಬ್ಬರ । **ತತ್**—ಪ್ರಸಿದ್ಧವಾದ । **ಮಹಿತ್ವಂ**—ಮಾಹಾತ್ಮ್ಯವು । **ಮಹಿ**—ಅತ್ಯಧಿಕವಾಗಿದೆ । **ಯುವಂ**—ನೀವಿಬ್ಬರೂ । **ಮಹಾನಿ**—ಮಹಚ್ಛಕ್ತಿಯುಳ್ಳವೂ । **ಪ್ರಥಮಾನಿ**—ಅತಿಮುಖ್ಯವೂ ಆದ ಭೂತಜಾತಗಳನ್ನೆಲ್ಲಾ । **ಚಕ್ರಥುಃ**—ನಿರ್ಮಿಸಿದ್ದೀರಿ । **ಯುವಂ**—ನೀವು । **ಸೂರ್ಯಂ**—ಸೂರ್ಯನನ್ನು । **ವಿವಿದಥುಃ**—ಎಲ್ಲರಿಗೂ ಗೋಚರವಾಗುವಂತೆ ಅಂತರಿಕ್ಷದಲ್ಲಿ ಸ್ಥಾಪಿಸಿದ್ದೀರಿ । **ಯುವಂ**—ನೀವು । **ಸ್ವಃ**—ಉದಕವನ್ನೂ ನಿರ್ಮಿಸಿದ್ದೀರಿ । **ವಿಶ್ವಾ**—ಸಮಸ್ತವಾದ । **ತಮಾಂಸಿ**—ಕಗ್ಗತ್ತಲೆಗಳನ್ನೂ । **ನಿದಶ್ಚ**—ನಿಂದಕರಾದ ಅಸುರರನ್ನೂ । **ಅಹತಂ**—ನಾಶಮಾಡಿದ್ದೀರಿ.

॥ ಭಾವಾರ್ಥ ॥

ಎಲೈ ಇಂದ್ರ ಮತ್ತು ಸೋಮದೇವತೆಗಳೇ, ನಿಮ್ಮಿಬ್ಬರ ಪ್ರಸಿದ್ಧವಾದ ಮಾಹಾತ್ಮ್ಯವು ಅತ್ಯಧಿಕವಾಗಿದೆ. ನೀವಿಬ್ಬರೂ ಸಹ ಮಹಚ್ಛಕ್ತಿಯುಳ್ಳವೂ, ಅತಿಮುಖ್ಯವೂ ಆದ ಭೂತಜಾತಗಳನ್ನೆಲ್ಲಾ ನಿರ್ಮಿಸಿದ್ದೀರಿ. ನೀವು ಸೂರ್ಯನನ್ನು ಎಲ್ಲರಿಗೂ ಗೋಚರವಾಗುವಂತೆ ಅಂತರಿಕ್ಷದಲ್ಲಿ ಸ್ಥಾಪಿಸಿದ್ದೀರಿ. ಉದಕವನ್ನೂ ನಿರ್ಮಿಸಿದ್ದೀರಿ. ಸಮಸ್ತ ಕಗ್ಗತ್ತಲೆಗಳನ್ನೂ ನಿಂದಾರ್ಹರಾದ ಅಸುರರನ್ನೂ ಒಟ್ಟಿಗೆ ನಾಶಮಾಡಿದ್ದೀರಿ.

## English Translation.

Great, Indra and Soma, is that your greatness, for you have made great and principal (beings): you have made known (to men) Surya and the waters : you have dissipated the glooms and (destroyed) the revilers.

॥ ಸಂಹಿತಾಪಾಠಃ ॥

ಇಂದ್ರಾಸೋಮಾ ವಾಸಯಥ ಉಷಾಸಮುತ್ಸೂರ್ಯಂ ನಯಥೋ ಜ್ಯೋತಿಷಾ ಸಹ ।

ಉಪ ದ್ಯಾಂ ಸ್ಕಂಭಥುಃ ಸ್ಕಂಭನೇನಾಪ್ರಥತಂ ಪೃಥಿವೀಂ ಮಾತರಂ ವಿ ॥೨॥

॥ ಪದಪಾಠಃ ॥

ಇಂದ್ರಾಸೋಮಾ । ವಾಸಯಥಃ । ಉಷಸಂ । ಉತ್ । ಸೂರ್ಯಂ । ನಯಥಃ । ಜ್ಯೋತಿಷಾ । ಸಹ ।

ಉಪ । ದ್ಯಾಂ । ಸ್ಕಂಭಥುಃ । ಸ್ಕಂಭನೇನ । ಅಪ್ರಥತಂ । ಪೃಥಿವೀಂ । ಮಾತರಂ । ವಿ ॥ ೨ ॥

॥ ಸಾಯಣಭಾಷ್ಯಂ ॥

ಇಂದ್ರಾಸೋಮಾ ಹೇ ಇಂದ್ರಾಸೋಮಾವುಷಸಂ ವಾಸಯಥಃ । ವಿವಾಸಯಥಃ । ಉಷಸಂ ವ್ಯುಚ್ಛಂತೀಂ ಕಾರಯಥ ಇತ್ಯರ್ಥಃ । ಕಿಂಚ ಸೂರ್ಯಂ ಜ್ಯೋತಿಷಾ ತೇಜಸಾ ಸಹೋನ್ನಯಥಃ । ಅಪಿ ಚ ದ್ಯಾಂ ದಿವಂ ಸ್ಕಂಭನೇನ ಸ್ತಂಭನಹೇತುನಾಂತರಿಕ್ಷೇಣ ಮಧ್ಯೇ ಸ್ಥಾಪಿತೇನೋಪ ಸ್ಕಂಭಥುಃ । ಅಸ್ತಂಭಯತಂ । ಮಾತರಂ ವಿಶ್ವಸ್ಯ ಮಾತೃಭೂತಾಂ ಪೃಥಿವೀಂ ವ್ಯಪ್ರಥತಂ । ವ್ಯಪ್ರಥಯತಂ ॥

॥ ಪ್ರತಿಪದಾರ್ಥ ॥

ಇಂದ್ರಾಸೋಮಾ—ಎಲೈ ಇಂದ್ರ ಮತ್ತು ಸೋಮದೇವತೆಗಳೇ (ನೀವು) । **ಉಷಸಂ**—ಉಷಸ್ಸನ್ನು । **ವಾಸಯಥಃ**—ಆವಿರ್ಭೂತವಾಗಿ ಪ್ರಕಾಶಿಸುವಂತೆ ಮಾಡಿದ್ದೀರಿ । **ಸೂರ್ಯಂ**—ಸೂರ್ಯನನ್ನು । **ಜ್ಯೋತಿಷಾ ಸಹ**—ಪ್ರಭೆಯೊಡನೆ । **ಉನ್ನಯಥಃ**—ಮೇಲೆದ್ದು ಉದಯಿಸುವಂತೆ ಮಾಡಿದ್ದೀರಿ । **ದ್ಯಾಂ**—ದ್ಯುಲೋಕವನ್ನು । **ಸ್ಕಂಭನೇನ**—ಅಂತರಿಕ್ಷರೂಪವಾದ ಆಧಾರಸ್ತಂಭದಿಂದ । **ಉಪ ಸ್ಕಂಭಥುಃ**—ಅವಲಂಬಿಸಿ ನಿಲ್ಲುವಂತೆ ಮಾಡಿದ್ದೀರಿ । **ಮಾತರಂ**—ಜಗತ್ತಿಗೆ ಮಾತೃಪ್ರಾಯವಾದ । **ಪೃಥಿವೀಂ**—ಪೃಥ್ವಿಯನ್ನು । **ವಿ ಅಪ್ರಥತಂ**—ವಿಸ್ತೃತವಾಗಿ ಬೆಳೆಯುವಂತೆ ಮಾಡಿದ್ದೀರಿ.

॥ ಭಾವಾರ್ಥ ॥

ಎಲೈ ಇಂದ್ರ ಮತ್ತು ಸೋಮದೇವತೆಗಳೇ, ನೀವು ಉಷಸ್ಸನ್ನು ಕಾಂತಿಯೊಡನೆ ಗೋಚರವಾಗುವಂತೆಯೂ, ಸೂರ್ಯನನ್ನು ಪ್ರಭೆಯೊಡನೆ ಮೇಲೆದ್ದು ಉದಯಿಸುವಂತೆಯೂ ಮಾಡಿದ್ದೀರಿ. ದ್ಯುಲೋಕವು ಅಂತರಿಕ್ಷರೂಪವಾದ ಆಧಾರಸ್ತಂಭದ ಮೇಲೆ ಅವಲಂಬಿಸಿ ನಿಲ್ಲುವಂತೆ ಮಾಡಿದ್ದೀರಿ. ಜಗತ್ತಿಗೆ ಮಾತೃಭೂತವಾದ ಪೃಥ್ವಿಯನ್ನು ವಿಸ್ತೃತವಾಗಿ ಬೆಳೆಯುವಂತೆ ಮಾಡಿದ್ದೀರಿ.

English Translation.

Indra and Soma, you have led on the dawns ; you have upraised the sun with his splendour : you have propped up the sky with the supporting pillar (of the firmament): you have spread out the earth, the mother (of all).

॥ ಸಂಹಿತಾಪಾಠಃ ॥

ಇಂದ್ರಾಸೋಮಾವಹಿಮಪಃ ಪರಿಷ್ಠಾಂ ಹಥೋ ವೃತ್ರಮನು ವಾಂ ದ್ಯೌರಮನ್ಯತ ।
ಪ್ರಾರ್ಣಾಂಸ್ಯೈರಯತಂ ನದೀನಾಮಾ ಸಮುದ್ರಾಣಿ ಪಪ್ರಥುಃ ಪುರೂಣಿ ॥

॥ ಪದಪಾಠಃ ॥

ಇಂದ್ರಾಸೋಮಾ । ಅಹಿಂ । ಅಪಃ । ಪರಿsಸ್ಥಾಂ । ಹಥಃ । ವೃತ್ರಂ । ಅನು । ವಾಂ । ದ್ಯೌಃ । ಅಮನ್ಯತ ।
ಪ್ರ । ಅರ್ಣಾಂಸಿ । ಐರಯತಂ । ನದೀನಾಂ । ಆ । ಸಮುದ್ರಾಣಿ । ಪಪ್ರಥುಃ । ಪುರೂಣಿ ॥ ೩ ॥

॥ ಸಾಯಣಭಾಷ್ಯಂ ॥

ಹೇ ಇಂದ್ರಾಸೋಮಾವಹಿಂ ಜಗತೆ ಆಹಂತಾರಮಪೋ ಮೇಘಸ್ಥಾನ್ಯುದಕಾನಿ ಪರಿಷ್ಠಾಂ ಪರಿವೃತ್ಯ ಸ್ಥಿತಂ ವೃತ್ರಮಸುರಂ ಹಥಃ । ಹತಂ । ತದಾನೀಂ ದ್ಯೌರ್ವಾಂ ಯುವಾಮನ್ವಮನ್ಯತ । ಕಿಂಚ ನದೀನಾಮರ್ಣಾಂಸ್ಯುದಕಾನಿ ಪ್ರೈರಯತಂ । ಪುರೂಣಿ ಬಹೂನಿ । ತುವಿ ಪುರ್ವಿತಿ ಬಹುನಾಮಸು ಪಾಠಾತ್ । ಸಮುದ್ರಾಣ್ಯುದಕಸ್ಥಾನಾನ್ಯಾ ಪಪ್ರಥುಃ । ಉದಕೈರಾಪೂರಯತಂ ಚ । ಅಥವಾ ಸಮುಂದಂತೀತ್ಯುದಕಾನ್ಯೇವ ಸಮುದ್ರಾಣಿ । ತಾನಿ ರಸೇನಾಪೂರಯತಮಿತ್ಯರ್ಥಃ । ತಥಾ ಚ ಯಾಸ್ಕಃ । ಸಮುದ್ರಃ ಕಸ್ಮಾತ್ಸಮುದ್ದ್ರವಂತ್ಯಸ್ಮಾದಾಪಃ ಸಮಭಿದ್ರವಂತ್ಯೇನಮಾಪಃ ಸಂಮೋದಂತೇಽಸ್ಮಿನ್ಭೂತಾನಿ ಸಮುದಕೋ ಭವತಿ ಸಮುನತ್ತೀತಿ ವಾ । ನಿ. ೨-೧೦ । ಇತಿ ॥

॥ ಪ್ರತಿಪದಾರ್ಥ ॥

**ಇಂದ್ರಾಸೋಮಾ**—ಎಲೈ ಇಂದ್ರ ಮತ್ತು ಸೋಮದೇವತೆಗಳೇ । **ಅಹಿಂ**—ಅಹಿಯನ್ನೂ । **ಅಪಃ**—ಮೇಘಸ್ಥವಾದ ಉದಕಗಳನ್ನು । **ಪರಿಷ್ಠಾಂ**—ಸುತ್ತುವರಿದು ನಿಂತಿದ್ದ । **ವೃತ್ರಂ**—ವೃತ್ರಾಸುರನನ್ನೂ । **ಹಥಃ**—ಕೊಂದಿದ್ದೀರಿ (ಆದುದರಿಂದಲೇ) । **ದ್ಯೌಃ**—ದ್ಯುಲೋಕವು । **ವಾಂ**—ನಿಮ್ಮನ್ನು । **ಅನ್ವಮನ್ಯತ**—ಗೌರವಿಸುತ್ತದೆ । **(ಯುವಂ**—ನೀವುಗಳು) । **ನದೀನಾಂ**—ನದಿಗಳ । **ಅರ್ಣಾಂಸಿ**—ಉದಕಗಳನ್ನು । **ಪ್ರೈರಯತಂ**—ಪ್ರವಹಿಸುವಂತೆ ಪ್ರೇರಿಸಿದಿರಿ । **ಪುರೂಣಿ**—ಅನೇಕವಾದ । **ಸಮುದ್ರಾಣಿ**—ಸಮುದ್ರಗಳನ್ನು । **ಆ ಪಪ್ರಥುಃ**—ಉದಕಗಳಿಂದ ತುಂಬಿದಿರಿ.

॥ ಭಾವಾರ್ಥ ॥

ಎಲೈ ಇಂದ್ರ ಮತ್ತು ಸೋಮದೇವತೆಗಳೇ, ನೀವಿಬ್ಬರೂ ಸಹ ಅಹಿಯನ್ನೂ, ಮೇಘಸ್ಥವಾದ ಉದಕಗಳನ್ನು ಸುತ್ತುವರಿದು ನಿಂತಿದ್ದ ವೃತ್ರಾಸುರನನ್ನೂ ಕೊಂದಿದ್ದೀರಿ. ಆದುದರಿಂದಲೇ, ದ್ಯುಲೋಕವು ನಿಮ್ಮನ್ನು ಗೌರವಿಸುತ್ತದೆ. ನೀವು ಉದಕಭರಿತವಾದ ನದಿಗಳನ್ನು ಪ್ರವಹಿಸುವಂತೆ ಮಾಡಿದಿರಿ. ಸಮುದ್ರಗಳನ್ನು ಉದಕಗಳಿಂದ ತುಂಬಿದ್ದೀರಿ.

## English Translation.

Indra and Soma, you slew Ahi and Vritra, the obstructer of the waters; for which the heaven venerates you both : you have urged on the the waters of the rivers until they have replenished numerous oceans.

॥ ಸಂಹಿತಾಪಾಠಃ ॥

ಇಂದ್ರಾಸೋಮಾ ಪಕ್ವಮಾಮಾಸ್ವಂತರ್ನಿ ಗವಾಮಿದ್ದಧಥುರ್ವಕ್ಷಣಾಸು ।
ಜಗೃಭಥುರನಪಿನದ್ಧಮಾಸು ರುಶಚ್ಚಿತ್ರಾಸು ಜಗತೀಷ್ವಂತಃ ॥ ೪ ॥

॥ ಪದಪಾಠಃ ॥

ಇಂದ್ರಾಸೋಮಾ । ಪಕ್ವಂ । ಆಮಾಸು । ಅಂತಃ । ನಿ । ಗವಾಂ । ಇತ್ । ದಧಥುಃ । ವಕ್ಷಣಾಸು ।
ಜಗೃಭಥುಃ । ಅನಪಿऽನದ್ಧಂ । ಆಸು । ರುಶತ್ । ಚಿತ್ರಾಸು । ಜಗತೀಷು । ಅಂತರಿತಿ ॥ ೪ ॥

॥ ಸಾಯಣಭಾಷ್ಯಂ ॥

ಇಂದ್ರಾಸೋಮಾ ಹೇ ಇಂದ್ರಾಸೋಮಾವಾಮಾಸ್ವಪಕ್ವಾಸು ಗವಾಂ ವಕ್ಷಣಾಸೂಧಃಸ್ವಂತರ್ಮಧ್ಯೇ ಪಕ್ವಂ ಪಯೋ ನಿ ದಧಥುಃ । ಕಿಂಚ ಚಿತ್ರಾಸು ನಾನಾವರ್ಣಾಸ್ವಾಸು ಜಗತೀಷು ಗೋಷು । ಇಳಾ ಜಗತೀತಿ ಗೋನಾಮಸು ಪಾಠಾತ್ । ಅಂತರ್ಮಧ್ಯೇಽನಪಿನದ್ಧಂ ಕೇನಾಪ್ಯಬದ್ಧಂ ರುಶತ್ ಶುಕ್ಲವರ್ಣಂ ಪಯೋ ಜಗೃಭಥುಃ । ಯಥಾ ಪೃಥಿವ್ಯಾಂ ಸ್ವಯಂ ನ ಕ್ಷರತಿ ತಥಾ ಧಾರಿತವಂತಾವಿತ್ಯರ್ಥಃ । ಇದಿತಿ ಪೂರಕಃ ॥

॥ ಪ್ರತಿಪದಾರ್ಥ ॥

**ಇಂದ್ರಾಸೋಮಾ**—ಎಲೈ ಇಂದ್ರ ಮತ್ತು ಸೋಮದೇವತೆಗಳೇ। **ಗವಾಂ**—ಗೋವುಗಳ। **ಆಮಾಸು**—ಅಪಕ್ವವಾದ । **ವಕ್ಷಣಾಸು**—ಕೆಚ್ಚಲುಗಳ । **ಅಂತಃ**—ಮಧ್ಯಪ್ರದೇಶದಲ್ಲಿ । **ಪಕ್ವಂ**—ಪಕ್ವವಾದ ಕ್ಷೀರವನ್ನು । **ನಿ ದಧಥುಃ**—ತುಂಬಿಟ್ಟದ್ದೀರಿ । **ಚಿತ್ರಾಸು**—ನಾನಾವರ್ಣಾತ್ಮಕವಾದ । **ಆಸು ಜಗತೀಷು**—ಈ ಗೋವುಗಳ । **ಅಂತಃ**—ಮಧ್ಯಭಾಗದಲ್ಲಿ । **ಅನಪಿನದ್ಧಂ**—ಯಾರಿಂದಲೂ ಬದ್ಧವಾಗಿಲ್ಲದಿರುವುದೂ । **ರುಶತ್**—ಶುಕ್ಲವರ್ಣವುಳ್ಳದ್ದೂ ಆದ ಹಾಲನ್ನು । **ಜಗೃಭಥುಃ**—ಧರಿಸುವಂತೆ ಮಾಡಿದ್ದೀರಿ.

॥ ಭಾವಾರ್ಥ ॥

ಎಲೈ ಇಂದ್ರ ಮತ್ತು ಸೋಮದೇವತೆಗಳೇ, ಗೋವುಗಳ ಅಪಕ್ವವಾದ ಕೆಚ್ಚಲುಗಳ ಮಧ್ಯಪ್ರದೇಶದಲ್ಲಿ ಪಕ್ವವಾದ ಕ್ಷೀರವನ್ನು ತುಂಬಿಟ್ಟದ್ದೀರಿ. ನಾನಾವರ್ಣಾತ್ಮಕವಾದ ಈ ಗೋವುಗಳ ಮಧ್ಯಭಾಗದಲ್ಲಿ ಯಾರಿಂದಲೂ ಬದ್ಧವಾಗಿಲ್ಲದಿರುವುದೂ ಶುಕ್ಲವರ್ಣವುಳ್ಳದ್ದೂ ಆದ ಪಯಸ್ಸನ್ನು ಧರಿಸುವಂತೆ ಮಾಡದ್ದೀರಿ.

## English Translation.

Indra and Soma, you have deposited the mature (milk) in the immature udders of the cows : you have retained the white (secretion), although not shut up within those many-coloured cattle.

॥ ಸಂಹಿತಾಪಾಠಃ ॥

ಇಂದ್ರಾಸೋಮಾ ಯುವಮಂಗ ತರುತ್ರಮಪತ್ಯಸಾಚಂ ಶ್ರುತ್ಯಂ ರರಾಥೇ।
ಯುವಂ ಶುಷ್ಮಂ ನರ್ಯಂ ಚರ್ಷಣಿಭ್ಯಃ ಸಂ ವಿವ್ಯಥುಃ ಪೃತನಾಷಾಹ-
ಮುಗ್ರಾ ॥ ೫ ॥

॥ ಪದಪಾಠಃ ॥

ಇಂದ್ರಾಸೋಮಾ । ಯುವಂ । ಅಂಗ । ತರುತ್ರಂ । ಅಪತ್ಯಽಸಾಚಂ । ಶ್ರುತ್ಯಂ । ರರಾಥೇ ಇತಿ ।
ಯುವಂ । ಶುಷ್ಮಂ । ನರ್ಯಂ । ಚರ್ಷಣಿಽಭ್ಯಃ । ಸಂ । ವಿವ್ಯಥುಃ । ಪೃತನಾಽಸಹಂ । ಉಗ್ರಾ ॥ ೫ ॥

॥ ಸಾಯಣಭಾಷ್ಯಂ ॥

**ಇಂದ್ರಾಸೋಮಾ ಹೇ ಇಂದ್ರಾಸೋಮೌ ಯುವಂ ಯುವಾಂ ತರುತ್ರಂ ತಾರಕಮಪತ್ಯಸಾಚಂ ಸಂತಾನಯುಕ್ತಂ ಶ್ರುತ್ಯಂ ಶ್ರವಣೀಯಂ ರಯಿಂ ಧನಮಂಗ ಕ್ಷಿಪ್ರಂ ರರಾಥೇ। ಅಸ್ಮಭ್ಯಂ ಧತ್ಥಃ। ಕಿಂಚೋಗ್ರಾ ಹೇ ಉದ್ಗೂರ್ಣಾವಿಂದ್ರಾಸೋಮೌ ಯುವಂ ಯುವಾಂ ನರ್ಯಂ ನೃಭ್ಯೋ ಹಿತಂ ಪೃತನಾಸಹಂ ಶತ್ರುಸೈನ್ಯಾಭಿಭಾವುಕಂ ಶುಷ್ಮಂ ಬಲಂ ಚರ್ಷಣಿಭ್ಯೋ ಮನುಷ್ಯೇಭ್ಯಃ। ಕೃಷ್ಟಯಶ್ಚರ್ಷಣಯ ಇತಿ ಮನುಷ್ಯನಾಮಸು ಪಾಠಾತ್। ಸಂ ವಿವ್ಯಥುಃ। ಸಮತನುತಂ। ಪರಿವೇಷ್ಟಯಥೋ ವಾ॥**

॥ ಪ್ರತಿಪದಾರ್ಥ ॥

**ಇಂದ್ರಾಸೋಮಾ**—ಎಲೈ ಇಂದ್ರ ಮತ್ತು ಸೋಮದೇವತೆಗಳೇ । **ಯುವಂ**—ನೀವಿಬ್ಬರೂ । **ತರುತ್ರಂ**—ರಕ್ಷಕವಾದುದೂ । **ಅಪತ್ಯಸಾಚಂ**—ಪುತ್ರಾದಿಸಹಿತವಾದುದೂ । **ಶ್ರುತ್ಯಂ**—ಪ್ರಸಿದ್ಧವಾದುದೂ ಆದ ಧನವನ್ನು । **ಅಂಗ**—ಕ್ಷಿಪ್ರವಾಗಿ । **ರರಾಥೇ**—ಕೊಡುತ್ತೀರಿ । **ಉಗ್ರಾ**—ಅತ್ಯಧಿಕವಾದ ಬಲವುಳ್ಳ ಎಲೈ ಇಂದ್ರಾಸೋಮರೇ । **ಯುವಂ**—ನೀವು । **ನರ್ಯಂ**—ಮಾನವನಿಗೆ ಹಿತಕಾರಿಯಾದುದೂ । **ಪೃತನಾಸಹಂ**—ಯುದ್ಧದಲ್ಲಿ ಶತ್ರುಗಳನ್ನು ಸೋಲಿಸತಕ್ಕದ್ದೂ ಆದ । **ಶುಷ್ಮಂ**—ಬಲವನ್ನು । **ಚರ್ಷಣಿಭ್ಯಃ**—ಮಾನವರಾದ ನಮಗೆ । **ಸಂ ವಿವ್ಯಥುಃ**—ತುಂಬಿಕೊಟ್ಟಿದ್ದೀರಿ.

॥ ಭಾವಾರ್ಥ ॥

ಎಲೈ ಇಂದ್ರ ಮತ್ತು ಸೋಮದೇವತೆಗಳೇ, ನೀವಿಬ್ಬರೂ ಸಹ ನಮಗೆ ರಕ್ಷಕವಾದುದೂ, ಪುತ್ರಾದಿಸಹಿತವಾದುದೂ, ಪ್ರಸಿದ್ಧವಾದುದೂ ಆದ ಧನವನ್ನು ಕ್ಷಿಪ್ರವಾಗಿ ಕೊಡುತ್ತೀರಿ. ಅತ್ಯಧಿಕವಾದ ಬಲವುಳ್ಳ ಎಲೈ ಇಂದ್ರಾ

ಸೋಮರೇ, ನೀವು ಮಾನವರಿಗೆ ಹಿತಕಾರಿಯಾದುದೂ, ಯುದ್ಧದಲ್ಲಿ ಶತ್ರುಗಳನ್ನು ಸೋಲಿಸತಕ್ಕದ್ದೂ ಆದ ಬಲವನ್ನು ಮಾನವರಾದ ನಮಗೆ ಒದಗಿಸಿ ಕೊಟ್ಟಿದ್ದೀರಿ.

English Translation.

Indra and Soma, promptly bestow upon us preservative, renowned (riches), accompanied by offspring; for you fierce (divinities), have disseminated amongst men, strength, useful to man, victorious over hostile hosts.



## ಎಪ್ಪತ್ತಮೂರನೆಯ ಸೂಕ್ತವು

॥ ಸಾಯಣಭಾಷ್ಯಂ ॥

**ಯೋ ಅದ್ರಿಭಿದಿತಿ ತೃಚಂ ದ್ವಾದಶಂ ಸೂಕ್ತಂ ಬಾರ್ಹಸ್ಪತ್ಯಂ ಭರದ್ವಾಜಸ್ಯಾರ್ಷಂ ತ್ರೈಷ್ಟುಭಂ। ತಥಾ ಚಾನುಕ್ರಾಂತಂ । ಯೋ ಅದ್ರಿಭಿತ್ತ್ರೃಚಂ ಬಾರ್ಹಸ್ಪತ್ಯಮಿತಿ ॥ ಅಭಿಪ್ಲವಿಕೇಷೂಕ್ಥ್ಯೇಷು ತೃತೀಯಸವನೇ ಬ್ರಾಹ್ಮಣಾಚ್ಛಂಸಿಶಸ್ತ್ರೇ ಸ್ತೋಮಾತಿಶಂಸನಾರ್ಥಮಿದಂ ಸೂಕ್ತಂ। ಸೂತ್ರ್ಯತೇ ಹಿ। ಯೋ ಅದ್ರಿಭಿದ್ಯಜ್ಞೇ ದಿವ ಇತಿ ಸೂಕ್ತೇ। ಆ. ೭-೯ ॥ ವಾಜಪೇಯೇ ಬಾರ್ಹಸ್ಪತ್ಯೇ ಚರೌ ಬೃಹಸ್ಪತಿಃ ಸಮಜಯದ್ವಸೂನೀತಿ....ತ್ವಾಮಿಳತೇ ಅಜಿರಂ ದೂತ್ಯಾಯ। ಆ. ೯-೯। ಇತಿ ॥**

ಅನುವಾದವು—**ಯೋ ಅದ್ರಿಭಿತ್** ಎಂಬ ಈ ಸೂಕ್ತವು ಆರನೆಯ ಅನುವಾಕದಲ್ಲಿ ಹನ್ನೆರಡನೆಯ ಸೂಕ್ತವು. ಇದರಲ್ಲಿ ಮೂರು ಋಕ್ಕುಗಳಿರುವವು. ಈ ಸೂಕ್ತಕ್ಕೆ ಭರದ್ವಾಜನು ಋಷಿಯು; ಬೃಹಸ್ಪತಿಯು ದೇವತೆಯು; ತ್ರಿಷ್ಟುಪ್‌ಛಂದಸ್ಸು. ಅನುಕ್ರಮಣಿಕೆಯಲ್ಲಿ—**ಯೋ ಅದ್ರಿಭಿತ್ತ್ರೃಚಂ ಬಾರ್ಹಸ್ಪತ್ಯಂ** ಎಂದು ಹೇಳಿರುವುದು. ಅಭಿಪ್ಲವಸಂಬಂಧವಾದ ಉಕ್ಥ್ಯಯಾಗಗಳಲ್ಲಿ ತೃತೀಯಸವನಕಾಲದಲ್ಲಿ ಬ್ರಾಹ್ಮಣಾಚ್ಛಂಸಿಯೆಂಬ ಋತ್ವಿಜನು ಪಠಿಸುವ ಶಸ್ತ್ರಮಂತ್ರಗಳಲ್ಲಿ ಈ ಸೂಕ್ತವನ್ನು ಸ್ತೋಮಾತಿಶಂಸನಾರ್ಥವಾಗಿ ಪಠಿಸಬೇಕೆಂದು ಆಶ್ವಲಾಯನ ಶ್ರೌತಸೂತ್ರದ—**ಯೋ ಅದ್ರಿಭಿದ್ಯಜ್ಞೇ ದಿವ ಇತಿ ಸೂಕ್ತೇ** ಎಂಬ ಸೂತ್ರದಿಂದ(ಆ. ೭-೯) ವಿವೃತವಾಗಿರುವುದು. ವಾಜಪೇಯಯಾಗದಲ್ಲಿಯೂ ಬೃಹಸ್ಪತಿದೇವತಾಕವಾದ ಚರುಹೋಮದಲ್ಲಿ **ಬೃಹಸ್ಪತಿಃ ಸಮಜಯದ್ವಸೂನಿ** ಎಂಬ ಮೂರನೆಯ ಋಕ್ಕನ್ನು ಪಠಿಸಬೇಕೆಂದು ಆಶ್ವಲಾಯನಶ್ರೌತಸೂತ್ರದ—**ಬೃಹಸ್ಪತಿಃ ಸಮಜಯದ್ವಸೂನೀತಿ ...............ತ್ವಾಮಿಳತೇ ಅಜಿತಂ ದೂತ್ಯಾಯ** ಎಂಬ ಸೂತ್ರದಿಂದ (ಆ. ೯-೯) ವಿವೃತವಾಗಿರುವುದು.

### ಸೂಕ್ತ—೭೩

ಮಂಡಲ—೬ ॥ ಅನುವಾಕ—೬ ॥ ಸೂಕ್ತ—೭೩ ॥
ಅಷ್ಟಕ—೫ ॥ ಅಧ್ಯಾಯ—೧ ॥ ವರ್ಗ—೧೭ ॥

॥ ಸೂಕ್ತದಲ್ಲಿರುವ ಋಕ್ಸಂಖ್ಯೆ—೩ ॥
॥ ಋಷಿಃ—ಭರದ್ವಾಜೋ ಬಾರ್ಹಸ್ಪತ್ಯಃ ॥
॥ ದೇವತಾ—ಬೃಹಸ್ಪತಿಃ ॥
॥ ಛಂದಃ—ತ್ರಿಷ್ಟುಪ್ ॥

॥ ಸಂಹಿತಾಪಾಠಃ ॥

ಯೋ ಅದ್ರಿಭಿತ್ಪ್ರಥಮಜಾ ಋತಾವಾ ಬೃಹಸ್ಪತಿರಾಂಗಿರಸೋ ಹವಿಷ್ಮಾನ್।
ದ್ವಿಬರ್ಹಜ್ಮಾ ಪ್ರಾಘರ್ಮಸತ್ಪಿತಾ ನ ಆ ರೋದಸೀ ವೃಷಭೋ ರೋರವೀತಿ ॥ ೧ ॥

॥ ಪದಪಾಠಃ ॥

ಯಃ । ಅದ್ರಿಽಭಿತ್ । ಪ್ರಥಮಽಜಾಃ । ಋತಽವಾ । ಬೃಹಸ್ಪತಿಃ । ಆಂಗಿರಸಃ । ಹವಿಷ್ಮಾನ್ ।
ದ್ವಿಬರ್ಹಽಜ್ಮಾ । ಪ್ರಾಘರ್ಮಽಸತ್ । ಪಿತಾ । ನಃ । ಆ । ರೋದಸೀ ಇತಿ । ವೃಷಭಃ । ರೋರವೀತಿ ॥ ೧ ॥

॥ ಸಾಯಣಭಾಷ್ಯಂ ॥

**ಯೋ ಬೃಹಸ್ಪತಿರದ್ರಿಭಿತ್ಪಾಣಿಭಿರ್ನಿರಚಿತಾನಾಂ ಶಿಲೋಚ್ಚಯಾನಾಂ ಭೇತ್ತಾ ಮೇಘಾನಾಂ ವಿದಾರಕೋ ವಾ । ಅದ್ರಿಗ್ರಾರ್ವೇತಿ ಮೇಘನಾಮಸು ಪಾಠಾತ್। ಪ್ರಥಮಜಾಃ ಪ್ರಜಾಪತೇರ್ವೀರ್ಯಾತ್ ಪ್ರಥಮಂ ಜಾತ ಋತಾವಾ ಸತ್ಯವಾನ್ ಉದಕವಾನ್ಯಾಂಗಿರಸಃ ಪಶ್ಚಾಜ್ಜಾತಃ । ತಥಾ ಚ ನಿಗಮಃ । ಯೇಽಂಗಾರಾ ಆಸಂಸ್ತೇಽಂಗಿರಸೋಽಭವನ್ಯದಂಗಾರಾಃ ಪುನರವಶಾಂತಾ ಉದದೀಪ್ಯಂತ ತದ್ಬೃಹಸ್ಪತಿರಭವತ್ । ಐ. ಬ್ರಾ. ೩-೩೪ । ಇತಿ । ಹವಿಷ್ಮಾನ್ ಯಜ್ಞಭಾಗವಾನ್ ದ್ವಿಬರ್ಹಜ್ಮಾ ದ್ವಯೋರ್ಲೋಕಯೋರ್ವ್ಯಂಹಿತಗಮನಃ ಪ್ರಾಘರ್ಮಸತ್ ಪ್ರಕರ್ಷೇಣ ದೀಪ್ತಸ್ಥಾನೇ ವರ್ತಮಾನೋ ನೋಽಸ್ಮಾಕಂ ಪಿತಾ ಪಾಲಯಿತಾ ಭವತಿ ಸ ಬೃಹಸ್ಪತಿರ್ವೃಷಭೋ ವರ್ಷಕಃ ಸನ್ ರೋದಸೀ ದ್ಯಾವಾಪೃಥಿವ್ಯಾವಾ ರೋರವೀತಿ । ಅಭಿಗರ್ಜತಿ ॥**

॥ ಪ್ರತಿಪದಾರ್ಥ ॥

**ಋತಾವಾ**--ಸತ್ಯಪಾಲಕನಾದ । **ಯಃ**—ಯಾವ । **ಬೃಹಸ್ಪತಿಃ**—ಬೃಹಸ್ಪತಿಯು । **ಅದ್ರಿಭಿತ್**—ಮೇಘಗಳನ್ನು ವೃಷ್ಟ್ಯರ್ಥವಾಗಿ ಸೀಳುವವನೂ । **ಪ್ರಥಮಜಾಃ**—ಸಕಲಭೂತಗಳಿಗಿಂತಲೂ ಮೊದಲು ಉತ್ಪನ್ನನಾದವನೂ । **ಆಂಗಿರಸಃ**—ಅಂಗಿರಸ್ಸಿನ ವಂಶೋತ್ಪನ್ನನೂ । **ಹವಿಷ್ಮಾನ್**—ಹವಿಷ್ಮಂತನೂ । **ದ್ವಿಬರ್ಹಜ್ಮಾ**—ದ್ಯಾವಾಪೃಥಿಗಳೆರಡರಲ್ಲೂ ಸಂಚಾರಮಾರ್ಗವುಳ್ಳವನೂ । **ಪ್ರಾಘರ್ಮಸತ್**—ಅತಿಯಾದ ಕಾಂತಿಸ್ಥಾನದಲ್ಲಿರುವವನೂ । **ನಃ**—ನಮಗೆ । **ಪಿತಾ**—ಪಾಲಕನೂ ಆಗಿರುವನೋ (ಆ ಬೃಹಸ್ಪತಿಯು) । **ವೃಷಭಃ**—ಕಾಮವರ್ಷಕನಾಗಿದ್ದುಕೊಂಡು । **ರೋದಸೀ**— ದ್ಯಾವಾಪೃಥಿವಿಗಳೆರಡರ ನಡುವೆಯಲ್ಲಿ । **ಆ ರೋರವೀತಿ**—ಗರ್ಜಿಸುತ್ತಾನೆ.

॥ ಭಾವಾರ್ಥ ॥

ಯಾವ ಬೃಹಸ್ಪತಿಯು ಸತ್ಯಪಾಲಕನಾಗಿಯೂ, ಮೇಘಗಳನ್ನು ವೃಷ್ಟ್ಯರ್ಥವಾಗಿ ಸೀಳುತ್ತಲೂ, ಸಕಲ ಭೂತಗಳಿಗಿಂತಲೂ ಮೊದಲೇ ಉತ್ಪನ್ನನಾಗಿಯೂ ಅಂಗಿರಸ್ಸಿನ ವಂಶೋತ್ಪನ್ನನಾಗಿಯೂ, ಹವಿಷ್ಮಂತನಾಗಿಯೂ,

ದ್ಯಾವಾಪೃಥಿವಿಗಳೆರಡರಲ್ಲೂ ಸಂಚಾರಮಾರ್ಗವುಳ್ಳವನಾಗಿಯೂ, ಅತ್ಯಂತ ಪ್ರಭಾಯುತವಾದ ಸ್ಥಾನದಲ್ಲಿರುತ್ತಲೂ ನಮಗೆ ಪಾಲಕನಾಗಿರುವನೋ ಅದೇ ಬೃಹಸ್ಪತಿಯು ನಮಗೆ ಇಷ್ಟಾರ್ಥಪ್ರದನಾಗಿದ್ದುಕೊಂಡು ದ್ಯಾವಾಪೃಥಿವಿಗಳೆರಡರ ನಡುವೆಯೂ ಗರ್ಜಿಸುತ್ತಾನೆ.

## English Translation.

Brihaspati, who is the breaker of the mountain, the first-born (of Prajapati), the observer of truth, the descendant of Angiras, the partaker of the oblation, the traverser of two worlds, abiding in the region of light, is to us a father: he, the showerer, thunders loud in heaven and earth.

। ಸಂಹಿತಾಪಾಠಃ ॥

ಜನಾಯ ಚಿದ್ಯ ಈವತ ಉ ಲೋಕಂ ಬೃಹಸ್ಪತಿರ್ದೇವಹೂತೌ ಚಕಾರ ।
ಘ್ನನ್ವೃತ್ರಾಣಿ ವಿ ಪುರೋ ದರ್ದರೀತಿ ಜಯಞ್ಛತ್ರೂರಮಿತ್ರಾನ್ಪೃತ್ಸು
ಸಾಹನ್ ॥ ೨ ॥

॥ ಪದಪಾಠಃ ॥

ಜನಾಯ । ಚಿತ್ । ಯಃ । ಈವತೇ । ಊಂ ಇತಿ । ಲೋಕಂ । ಬೃಹಸ್ಪತಿಃ । ದೇವಽಹೂತೌ । ಚಕಾರ ।
ಘ್ನನ್ । ವೃತ್ರಾಣಿ । ವಿ । ಪುರಃ । ದರ್ದರೀತಿ । ಜಯನ್ । ಶತ್ರೂನ್ । ಅಮಿತ್ರಾನ್ । ಪೃತ್ಽಸು ।
ಸಹನ್ ॥ ೨ ॥

। ಸಾಯಣಭಾಷ್ಯಂ ॥

ಅಪಿ ಚ ಯೋ ಬೃಹಸ್ಪತಿರ್ದೇವಹೂತೌ ಯಜ್ಞೇ ವರ್ತಮಾನಾಯೇವತ ಉಪಗಚ್ಛತೇ ಸ್ತೋತ್ರೇ ಜನಾಯ ಲೋಕಂ ಸ್ಥಾನಂ ಚಕಾರ ಕರೋತಿ । ಚಿದಿತಿ ಪೂರಣಃ । ಸ ವೃತ್ರಾಣ್ಯಾವರಕಾಣಿ ತಮಾಂಸಿ ಘ್ನನ್ನಿವಾರಯನ್ ಪೃತ್ಸು ಯುದ್ಧೇಷು ಶತ್ರೂನ್ ಜಯನ್ ಅಮಿತ್ರಾನ್ ಸಹನ್ ಅಭಿಭವನ್ ಪುರ ಆಸುರೀಃ ಪುರೀರ್ವಿ ದರ್ದರೀತಿ । ಭೃಶಂ ವಿದಾರಯತಿ ॥

॥ ಪ್ರತಿಪದಾರ್ಥ ॥

**ಯಃ**—ಯಾವ । **ಬೃಹಸ್ಪತಿಃ**—ಬೃಹಸ್ಪತಿಯು । **ದೇವಹೂತೌ**—ಯಜ್ಞದಲ್ಲಿ ನಿರತನೂ । **ಈವತೇ**—ಸ್ತುತಿಯ ಮೂಲಕ ಸಮೀಪಿಸುವವನೂ ಆದ । **ಜನಾಯ**—ಯಜಮಾನನಿಗೆ । **ಲೋಕಂ**—ಉತ್ತಮವಾದ ಸ್ಥಾನವನ್ನು । **ಚಕಾರ ಚಿತ್**—ನಿರ್ಮಿಸುವನೋ (ಅದೇ ಬೃಹಸ್ಪತಿಯು) । **ವೃತ್ರಾಣಿ**—

ಜಗತ್ತನ್ನು ಆವರಿಸಿರುವ ತಮಸ್ಸನ್ನು । **ಘ್ನನ್**--ನಾಶಪಡಿಸುತ್ತಲೂ । **ಪೃತ್ಸು**—ಯುದ್ಧಗಳಲ್ಲಿ । **ಶತ್ರೂನ್**—ಶತ್ರುಗಳನ್ನು । **ಜಯನ್**—ಜಯಿಸುತ್ತಲೂ । **ಅಮಿತ್ರಾನ್**—ವಿರೋಧಿಗಳನ್ನು । **ಸಹನ್**—ಸೋಲಿಸುತ್ತಲೂ । **ಪುರಃ**—ಶತ್ರುಪಟ್ಟಣಗಳನ್ನು । **ವಿದರ್ದರೀತಿ**—ಪೂರ್ಣವಾಗಿ ಸೀಳಿಹಾಕುತ್ತಾನೆ ।

॥ ಭಾವಾರ್ಥ ॥

ಯಜ್ಞದಲ್ಲಿ ನಿರತನೂ ಸ್ತುತಿಯ ಮೂಲಕ ದೇವತೆಗಳ ಸಾನ್ನಿಧ್ಯವನ್ನು ಪಡೆಯುವವನೂ ಆದ ಯಜಮಾನನಿಗೆ ಯಾವ ಬೃಹಸ್ಪತಿಯು ಉತ್ತಮವಾದ ಸ್ಥಾನವನ್ನು ನಿರ್ಮಿಸುವನೋ ಅದೇ ಬೃಹಸ್ಪತಿಯು ಜಗತ್ತನ್ನು ಆವರಿಸುವ ಕಗ್ಗತ್ತಲೆಗಳನ್ನು ನಾಶಪಡಿಸುತ್ತಲೂ, ಯುದ್ಧಗಳಲ್ಲಿ ಶತ್ರುಗಳನ್ನು ಜಯಿಸುತ್ತಲೂ, ವಿರೋಧಿಗಳನ್ನು ಸೋಲಿಸುತ್ತಲೂ ಶತ್ರುಪಟ್ಟಣಗಳನ್ನು ಪೂರ್ಣವಾಗಿ ನಾಶಮಾಡುತ್ತಾನೆ.

## English Translation.

Brihaspati, who has appointed a region for the man who attends diligently at divine worship, destroying, impediments, conquering foes, overcoming enemies, demolishes various cities (of the Asuras).

॥ ಸಂಹಿತಾಪಾಠಃ ॥

ಬೃಹಸ್ಪತಿಃ ಸಮಜಯದ್ವಸೂನಿ ಮಹೋ ವ್ರಜಾನ್ ಗೋಮತೋ ದೇವ ಏಷಃ ।
ಅಪಃ ಸಿಷಾಸನ್ತ್ಸ್ವ೧ರಪ್ರತೀತೋ ಬೃಹಸ್ಪತಿರ್ಹಂತ್ಯಮಿತ್ರಮರ್ಕೈಃ ॥ ೩ ॥

॥ ಪದಪಾಠಃ ॥

ಬೃಹಸ್ಪತಿಃ । ಸಂ । ಅಜಯತ್ । ವಸೂನಿ । ಮಹಃ । ವ್ರಜಾನ್ । ಗೋऽಮತಃ । ದೇವಃ । ಏಷಃ ।
ಅಪಃ । ಸಿಸಾಸನ್ । ಸ್ವಃ । ಅಪ್ರತಿऽಇತಃ । ಬೃಹಸ್ಪತಿಃ । ಹಂತಿ । ಅಮಿತ್ರಂ । ಅರ್ಕೈಃ ॥ ೩ ॥

॥ ಸಾಯಣಭಾಷ್ಯಂ ॥

ದೇವೋ ದ್ಯೋತಮಾನ ಏಷ ಪ್ರಸಿದ್ಧೋ ಬೃಹಸ್ಪತಿರ್ವಸೂನಿ ಪಣೇನಾಮಸುರಾಣಾಂ ವಲಸ್ಯ ವಾ ಧನಾನಿ ಮಹೋ ಮಹತೋ ಗೋಮತೋ ಗೋಸಹಿತಾನ್ ವ್ರಜಾಂಶ್ಚ ಸಮಜಯತ್ । ತಥಾ ಚ ನಿಗಮೌ । ಬೃಹಸ್ಪತಿರ್ಗೋವಪುಷೋ ವಲಸ್ಯ ನಿರ್ಮಜ್ಜಾನಂ ನ ಪರ್ವಣೋ ಜಭಾರ । ಋ. ೧೦-೬೮-೯। ಇತಿ । ದೂರಮಿತ ಪಣಯೋ ವರೀಯ ಉದ್ಗಾವೋ ಯಂತು ಮಿನತೀರೃತೇನ । ಬೃಹಸ್ಪತಿರ್ಯಾ ಅವಿಂದನ್ನಿಗೂಳ್ಹಾಃ ಸೋಮೋ ಗ್ರಾವಾಣ ಋಷಯಶ್ಚ ವಿಪ್ರಾಃ । ಋಗ್ವೇ. ೧೦-೧೦೮-೧೧ । ಇತಿ ।

**ಕಿಂಚ ಬೃಹಸ್ಪತಿರಪ್ರತೀತಃ ಕೇನಾಪ್ಯಪ್ರತಿಗತಃ ಸಿಷಾಸನ್ ಸಂಭಕ್ತುಕಾಮಃ ಸ್ವಃ ಸ್ವರ್ಗಸ್ಯಾಮಿತ್ರಮಸುರಮರ್ಕೈರರ್ಚನಸಾಧನೈರ್ಮಂತ್ರೈರ್ಹಂತಿ । ಅರ್ಕೋ ಮಂತ್ರೋ ಭವತಿ ಯದೇನೇನಾರ್ಚಂತಿ । ನಿ. ೫-೪ । ಇತಿ ಯಾಸ್ಕಃ ॥**

॥ ಪ್ರತಿಪದಾರ್ಥ ॥

**ದೇವಃ**—ಪ್ರಕಾಶಮಾನನೂ । **ಏಷಃ**—ಪ್ರಸಿದ್ಧನೂ ಆದ । **ಬೃಹಸ್ಪತಿಃ**—ಬೃಹಸ್ಪತಿಯು । **ವಸೂನಿ**—ಶತ್ರುಗಳ ಧನಗಳನ್ನೂ । **ಮಹಃ**—ಮಹತ್ತಾದವೂ । **ಗೋಮತಃ**—ಗೋಭರಿತವಾದವೂ ಆದ । **ವ್ರಜಾನ್**—ಕಾವಲುಗಳನ್ನೂ (ಕೊಟ್ಟಿಗೆಗಳನ್ನೂ) । **ಸಮಜಯತ್**—ಶತ್ರುಗಳಿಂದ ತನ್ನ ವಶಪಡಿಸಿಕೊಂಡನು । **ಬೃಹಸ್ಪತಿಃ**—ಬೃಹಸ್ಪತಿಯು । **ಅಪ್ರತೀತಃ**—ಅಪ್ರತಿಹತನಾಗಿ । **ಸ್ವಃ**—ಅಂತರಿಕ್ಷದ । **ಅಪಃ**—ಉದಕಗಳನ್ನೆಲ್ಲಾ । **ಸಿಷಾಸನ್**—ಪೂರ್ಣವಾಗಿ ತನ್ನಧೀನಕ್ಕೆ ಹೊಂದಬೇಕೆಂದು ಇಚ್ಛಿಸಿ । **ಅಮಿತ್ರಾನ್**—ಶತ್ರುಗಳನ್ನೆಲ್ಲಾ । **ಅರ್ಕೈಃ**—ಮಂತ್ರಗಳ ಸಹಾಯದಿಂದಲೇ । **ಹಂತಿ**—ನಾಶಪಡಿಸುತ್ತಾನೆ.

॥ ಭಾವಾರ್ಥ ॥

ಪ್ರಕಾಶಮಾನನೂ, ಪ್ರಸಿದ್ಧನೂ ಆದ ಬೃಹಸ್ಪತಿಯು ಶತ್ರುಗಳ ಧನಗಳನ್ನೂ, ಮಹತ್ತಾದವೂ ಗೋಭರಿತವಾದವೂ ಆದ ಕಾವಲುಗಳನ್ನೂ ಕೊಟ್ಟಿಗೆಗಳನ್ನೂ ಶತ್ರುಗಳಿಂದ ತನ್ನ ವಶಪಡಿಸಿಕೊಂಡನು. ಅಪ್ರತಿಹತನಾದ ಬೃಹಸ್ಪತಿಯು ಅಂತರಿಕ್ಷದ ಉದಕಗಳನ್ನೆಲ್ಲಾ ತನ್ನ ಅಧೀನಕ್ಕೆ ಪೂರ್ಣವಾಗಿ ಹೊಂದಬೇಕೆಂದಾಶಿಸಿ ಶತ್ರುಗಳನ್ನೆಲ್ಲಾ ಮಂತ್ರಗಳ ಸಹಾಯದಿಂದಲೇ ನಾಶಪಡಿಸುತ್ತಾನೆ.

English Translation.

This divine Brihaspati has conquered the treasures (of the enemy), and the spacious pastures with the cattle: purposing to appropriate the waters (of the firmament), he destroys with sacred prayers the adversary of heaven.



# ಎಪ್ಪತ್ತನಾಲ್ಕನೆಯ ಸೂಕ್ತವು

॥ ಸಾಯಣಭಾಷ್ಯಂ ॥

**ಸೋಮಾರುದ್ರೇತಿ ಚತುರ್ಋಚಂ ತ್ರಯೋದಶಂ ಸೂಕ್ತಂ ಭರದ್ವಾಜಸ್ಯಾರ್ಷಂ ತ್ರೈಷ್ಟುಭಂ ಸೋಮಾರುದ್ರದೇವತಾಕಂ । ಅನುಕ್ರಮ್ಯತೇ ಚ । ಸೋಮಾರುದ್ರಾ ಚತುಷ್ಕಂ ಸೋಮಾರೌದ್ರಮಿತಿ ॥ ವಿನಿಯೋಗೋ ಲೈಂಗಿಕಃ ॥**

ಅನುವಾದವು—**ಸೋಮಾರುದ್ರಾ** ಎಂಬ ಈ ಸೂಕ್ತವು ಆರನೆಯ ಅನುವಾಕದಲ್ಲಿ ಹದಿಮೂರನೆಯ ಸೂಕ್ತವು. ಇದರಲ್ಲಿ ನಾಲ್ಕು ಋಕ್ಕುಗಳಿರುವವು. ಈ ಸೂಕ್ತಕ್ಕೆ ಭರದ್ವಾಜನು ಋಷಿಯು; ಸೋಮಾರುದ್ರರು

ದೇವತೆಯು; ತ್ರಿಷ್ಟುಪ್‌ಛಂದಸ್ಸು. ಅನುಕ್ರಮಣಿಕೆಯಲ್ಲಿ—**ಸೋಮಾರುದ್ರಾ ಚತುಷ್ಕಂ ಸೋಮಾರೌದ್ರಂ** ಎಂದು ಹೇಳಿರುವುದು. ವಿನಿಯೋಗವು ಲೈಂಗಿಕವು.

## ಸೂಕ್ತ—೭೪

ಮಂಡಲ—೬ ‖ ಅನುವಾಕ—೬ ‖ ಸೂಕ್ತ—೭೪ ‖
ಅಷ್ಟಕ—೫ ‖ ಅಧ್ಯಾಯ—೧ ‖ ವರ್ಗ—೧೮ ‖
‖ ಸೂಕ್ತದಲ್ಲಿರುವ ಋಕ್ಸಂಖ್ಯೆ—೪ ‖
‖ ಋಷಿಃ—ಭರದ್ವಾಜೋ ಬಾರ್ಹಸ್ಪತ್ಯಃ ‖
‖ ದೇವತಾ—ಸೋಮಾರುದ್ರೌ ‖
‖ ಛಂದಃ—ತ್ರಿಷ್ಟುಪ್ ‖

‖ ಸಂಹಿತಾಪಾಠಃ ‖

ಸೋಮಾರುದ್ರಾ ಧಾರಯೇಥಾಮಸುರ್ಯ೧ಂ ಪ್ರ ವಾಮಿಷ್ಟಯೋಽರ-
ಮಶ್ನುವಂತು ।
ದಮೇದಮೇ ಸಪ್ತ ರತ್ನಾ ದಧಾನಾ ಶಂ ನೋ ಭೂತಂ ದ್ವಿಪದೇ ಶಂ
ಚತುಷ್ಪದೇ ‖ ೧ ‖

‖ ಪದಪಾಠಃ ‖

ಸೋಮಾರುದ್ರಾ । ಧಾರಯೇಥಾಂ । ಅಸುರ್ಯಂ । ಪ್ರ । ವಾಂ । ಇಷ್ಟಯಃ । ಅರಂ । ಅಶ್ನುವಂತು ।
ದಮೇಽದಮೇ । ಸಪ್ತ । ರತ್ನಾ । ದಧಾನಾ । ಶಂ । ನಃ । ಭೂತಂ । ದ್ವಿಽಪದೇ । ಶಂ । ಚತುಃಽಪದೇ ‖

‖ ಸಾಯಣಭಾಷ್ಯಂ ‖

**ಸೋಮಾರುದ್ರಾ ಹೇ ಸೋಮಾರುದ್ರಾವಸುರ್ಯಮಸುರಸಂಬಂಧಿ ಬಲಮಸ್ಮಾಸು ಧಾರಯೇಥಾಂ । ಕಿಂಚ ದಮೇ ದಮೇ ಸರ್ವೇಷ್ವಸ್ಮದ್ಗೃಹೇಷ್ವಿಷ್ಟಯೋ ಯಜ್ಞಾ ವಾಂ ಯುವಾಮರಮಲಂ ಪರ್ಯಾಪ್ತಂ ಪ್ರಾಶ್ನುವಂತು । ಪ್ರಕರ್ಷೇಣ ವ್ಯಾಪ್ನುವಂತು । ಅಪಿ ಚ ಯುವಾಂ ಸಪ್ತ ರತ್ನಾ ರತ್ನಾನಿ ದಧಾನಾ ಧಾರಯಂತೌ ನೋಽಸ್ಮಭ್ಯಂ ಶಂ ಸುಖಕರೌ ಸುಖರೂಪೌ ವಾ ಭೂತಂ । ಭವತಂ । ದ್ವಿಪದೇಽಸ್ಮದೀಯಾಯ ಪುತ್ರಾದಯೇ ಚತುಷ್ಪದೇ ಪಶ್ವಾದಯೇ ಚ ಶಂ ಭೂತಂ । ಭವತಂ ‖**

‖ ಪ್ರತಿಪದಾರ್ಥ ‖

**ಸೋಮಾರುದ್ರಾ**—ಎಲೈ ಸೋಮ ಮತ್ತು ರುದ್ರದೇವತೆಗಳೇ । **ಅಸುರ್ಯಂ**—ಅಸುರರಲ್ಲಿ ಯಾವ ಬಲ ವಿದೆಯೋ ಆ ಬಲವನ್ನು । **ಧಾರಯೇಥಾಂ**—ನಮ್ಮಲ್ಲಿ ಸ್ಥಾಪಿಸಿರಿ । **ದಮೇದಮೇ**—ಪ್ರತಿಯೊಂದು ಯಜ್ಞ

ಗೃಹದಲ್ಲಿಯೂ | **ಇಷ್ಟಯಃ**—ಯಜ್ಞಗಳು | **ವಾಂ**—ನಿಮ್ಮನ್ನು | **ಅರಂ**—ತೃಪ್ತಿಪಡಿಸುವಂತೆ | **ಪ್ರ ಅಶ್ನುವಂತು**—ಪೂರ್ಣವಾಗಿ ಸಮಾಪಿಸಿ ವ್ಯಾಪಿಸಲಿ | **ಸಪ್ತ ರತ್ನಾ**—ಸಪ್ತ ರತ್ನಗಳನ್ನೂ | **ದಧಾನಾ**—ಹೊಂದಿರುವ ನೀವು | **ನಃ**—ನಮಗೆ | **ಶಂ**—ಸುಖಕಾರಕರಾಗಿ | **ಭೂತಾಂ**—ಆಗಿರಿ | **ದ್ವಿಪದೇ**—ನಮ್ಮ ಪುತ್ರಾದಿಗಳಿಗೂ | **ಚತುಷ್ಪದೇ**—ಪಶ್ವಾದಿಗಳಿಗೂ | **ಶಂ**—ಸುಖಕಾರಕರಾಗಿರಿ.

॥ ಭಾವಾರ್ಥ ॥

ಎಲೈ ಸೋಮ ಮತ್ತು ರುದ್ರದೇವತೆಗಳೇ, ಅಸುರರಲ್ಲಿ ಯಾವ ಬಲವಿದೆಯೋ ಆ ಬಲವನ್ನು ನಮ್ಮಲ್ಲಿ ಸ್ಥಾಪಿಸಿರಿ. ಪ್ರತಿಯೊಂದು ಗೃಹದಲ್ಲಿಯೂ ಯಜ್ಞಗಳು ನಿಮ್ಮನ್ನು ತೃಪ್ತಿಪಡಿಸುವಂತೆ ನಿಮ್ಮನ್ನು ಪೂರ್ಣವಾಗಿ ಸಮಾಪಿಸಿ ವ್ಯಾಪಿಸಲಿ. ಸಪ್ತ ರತ್ನಗಳನ್ನೂ ಹೊಂದಿರುವ ನೀವು ನಮಗೆ ಸುಖಕಾರಕರಾಗಿರಿ. ನಮ್ಮ ಪುತ್ರಾದಿಗಳಿಗೂ ಪಶ್ವಾದಿಗಳಿಗೂ ಸುಖಕಾರಕರಾಗಿರಿ.

English Translation.

Soma and Rudra, confirm (in us the strength) of Asuras; may sacrifices in every dwelling adequately reach you: possessors of the seven precious things, bestow happiness upon our bipeds and quadrupeds.

॥ ಸಂಹಿತಾಪಾಠಃ ॥

ಸೋಮಾರುದ್ರಾ ವಿ ವೃಹತಂ ವಿಷೂಚೀಮಮೀವಾ ಯಾ ನೋ ಗಯಮಾವಿವೇಶ ।
ಆರೇ ಬಾಧೇಥಾಂ ನಿರ್ಋತಿಂ ಪರಾಚೈರಸ್ಮೇ ಭದ್ರಾ ಸೌಶ್ರವಸಾನಿ ಸಂತು ॥

॥ ಪದಪಾಠಃ ॥

ಸೋಮಾರುದ್ರಾ । ವಿ । ವೃಹತಂ । ವಿಷೂಚೀಂ । ಅಮೀವಾ । ಯಾ । ನಃ । ಗಯಂ । ಆऽವಿವೇಶ ।
ಆರೇ । ಬಾಧೇಥಾಂ । ನಿಃऽಋತಿಂ । ಪರಾಚೈಃ । ಅಸ್ಮೇ ಇತಿ । ಭದ್ರಾ । ಸೌಶ್ರವಸಾನಿ । ಸಂತು ॥ ೨ ॥

॥ ಸಾಯಣಭಾಷ್ಯಂ ॥

ಸೋಮಾರುದ್ರಾ ಹೇ ಸೋಮಾರುದ್ರೌ ನೋऽಸ್ಮಾಕಂ ಗಯಂ ಗೃಹಂ:ಗೃಹಗತಂ ಪ್ರಾಣಿಜಾತಂ ವಾ ಯಾಮೀವಾ ಯೋ ರೋಗ ಆವಿವೇಶ ತಾಂ ವಿಷೂಚೀಂ ವಿಷ್ವಕ್ ಸರ್ವತೋ ಗಚ್ಛಂತೀಮಮೀವಾಂ ವಿ ವೃಹತಂ । ವಿಯೋಜಯತಂ । ಅಪಿ ಚ ನಿರ್ಋತಿಮಲಕ್ಷ್ಮೀಂ ಪರಾಚೈಃ ಪರಾಗ್ಯಥಾ ಭವತಿ ತಥಾರೇ

ದೂರೇ ಬಾಧೇಥಾಂ। ನಿವಾರಯತಂ। ಅಸ್ಮೇ ಅಸ್ಮಾಕಂ ಭದ್ರಾ ಭದ್ರಾಣಿ ಸೌಶ್ರವಸಾನ್ಯನ್ನಾನಿ ಯಶಾಂಸಿ ಚ ಸಂತು। ಭವಂತು। ಸುಶ್ರವಸೋ ಭಾವಃ ಸೌಶ್ರವಸಂ। ಶ್ರವೋಽನ್ನಂ ಯಶಶ್ಚ ॥

॥ ಪ್ರತಿಪದಾರ್ಥ ॥

**ಸೋಮಾರುದ್ರಾ**—ಎಲೈ ಸೋಮ ಮತ್ತು ರುದ್ರದೇವತೆಗಳೇ। **ಯಾ ಅಮೀವಾ**—ಯಾವ ಯಾವ ರೋಗವು। **ನಃ**—ನಮ್ಮ। **ಗಯಂ**—ಗೃಹವನ್ನು। **ಆವಿವೇಶ**—ಪ್ರವೇಶಿಸಿದೆಯೋ। **ವಿಷೂಚೀಂ**—ಸರ್ವತ್ರ ವ್ಯಾಪಿಸುವ ಆಯಾ ರೋಗವನ್ನೆಲ್ಲಾ। **ವಿ ವೃಹತಂ**—ಪೂರ್ಣವಾಗಿ ನಾಶಪಡಿಸಿರಿ। **ನಿರ್ಋತಿಂ**—ದೌರ್ಭಾಗ್ಯದೇವತೆಯನ್ನು। **ಪರಾಚೈಃ**—ಹಿಂದಿರುಗುವಂತೆ ಮಾಡಿ। **ಆರೇ**—ಬಹಳ ದೂರಕ್ಕೆ। **ಬಾಧೇಥಾಂ**—ತಳ್ಳಿಬಿಡಿರಿ। **ಅಸ್ಮೇ**—ನಮಗೆ। **ಭದ್ರಾ**—ಮಂಗಳಗಳು। **ಸೌಶ್ರವಸಾನಿ**—ಅನ್ನ ಮತ್ತು ಯಶಸ್ಸಂಪತ್ತುಳ್ಳವುಗಳಾಗಿ। **ಸಂತು**—ಆಗಿರಲಿ.

॥ ಭಾವಾರ್ಥ ॥

ಎಲೈ ಸೋಮ ಮತ್ತು ರುದ್ರದೇವತೆಗಳೇ, ಯಾವ ಯಾವ ರೋಗವು ನಮ್ಮ ಗೃಹವನ್ನು ಪ್ರವೇಶಿಸಿದೆಯೋ ಸರ್ವತ್ರ ಸಾಂಕ್ರಾಮಿಕವಾದ ಆಯಾ ರೋಗವನ್ನೆಲ್ಲಾ ಪೂರ್ಣವಾಗಿ ನಾಶಮಾಡಿರಿ. ದೌರ್ಭಾಗ್ಯದೇವತೆಯನ್ನು ಹಿಂತಿರುಗುವಂತೆ ಮಾಡಿ ಬಹಳ ದೂರಕ್ಕೆ ತಳ್ಳಿಬಿಡಿರಿ. ನಮಗೆ ಅನ್ನ ಮತ್ತು ಯಶಸ್ಸಂಪತ್ತುಗಳನ್ನು ಹೊಂದಿರುವ ಮಂಗಳಗಳುಂಟಾಗಲಿ.

## English Translation.

Soma and Rudra, expel the wide-spread sickness that has entered into our dwellings; keep off Nirriti, so that she may be far away, and may prosperous means of sustenance be ours.

॥ ಸಂಹಿತಾಪಾಠಃ ॥

ಸೋಮಾರುದ್ರಾ ಯುವಮೇತಾನ್ಯಸ್ಮೇ ವಿಶ್ವಾ ತನೂಷು ಭೇಷಜಾನಿ ಧತ್ತಂ।
ಅವ ಸ್ಯತಂ ಮುಂಚತಂ ಯನ್ನೋ ಅಸ್ತಿ ತನೂಷು ಬದ್ಧಂ ಕೃತಮೇನೋ ಅಸ್ಮತ್ ॥ ೩ ॥

॥ ಪದಪಾಠಃ ॥

ಸೋಮಾರುದ್ರಾ। ಯುವಂ। ಏತಾನಿ। ಅಸ್ಮೇ ಇತಿ। ವಿಶ್ವಾ। ತನೂಷು। ಭೇಷಜಾನಿ। ಧತ್ತಂ।
ಅವ। ಸ್ಯತಂ। ಮುಂಚತಂ। ಯತ್। ನಃ। ಅಸ್ತಿ। ತನೂಷು। ಬದ್ಧಂ। ಕೃತಂ। ಏನಃ। ಅಸ್ಮತ್ ॥

॥ ಸಾಯಣಭಾಷ್ಯಂ ॥

ಹೇ ಸೋಮಾರುದ್ರಾ ಸೋಮಾರುದ್ರೌ ಯುವಂ ಯುವಾಮಸ್ಮೇ ಅಸ್ಮಾಕಂ ತನೂಷ್ವಂಗೇಷ್ವೇತಾನಿ ಪ್ರಸಿದ್ಧಾನಿ ವಿಶ್ವಾ ಸರ್ವಾಣಿ ಭೇಷಜಾನಿ ಧತ್ತಂ । ಧಾರಯತಂ । ಕಿಂಚ ನೋಽಸ್ಮಾಕಂ ತನೂಷ್ವಂಗೇಷ್ವಸ್ಮಾಭಿಃ ಕೃತಂ ಬದ್ಧಂ ಚ ಯದೇನಃ ಪಾಪಮಸ್ತಿ ವಿದ್ಯತೇ ತತ್ಪಾಪಮವ ಸ್ಯತಂ । ಕ್ಷಪಯತಂ । ಶ್ಲಥಯತಂ । ಶಿಥಿಲಬಂಧಂ ಕುರುತಮಿತ್ಯರ್ಥಃ । ಅಸ್ಮದಸ್ಮತ್ತೋ ಮುಂಚತಂ ಚ ॥

॥ ಪ್ರತಿಪದಾರ್ಥ ॥

**ಸೋಮಾರುದ್ರಾ**— ಎಲೈ ಸೋಮ ಮತ್ತು ರುದ್ರದೇವತೆಗಳೇ । **ಯುವಂ**— ನೀವಿಬ್ಬರೂ । **ಅಸ್ಮೇ**— ನಮ್ಮ । **ತನೂಷು**— ಶರೀರಗಳಲ್ಲಿ । **ಏತಾನಿ**— ಪ್ರಸಿದ್ಧವಾದ । **ವಿಶ್ವಾ ಭೇಷಜಾನಿ**—ಸಮಸ್ತ ರೋಗನಿವಾರಕ ಸಾಧನಗಳನ್ನು । **ಧತ್ತಂ**—ತುಂಬಿಡಿರಿ । **ನಃ**—ನಮ್ಮ । **ತನೂಷು**— ಅಂಗಗಳಲ್ಲಿ । **ಕೃತಂ**—ಸ್ವಯಂಸಂಪಾದಿತವೂ । **ಬದ್ಧಂ**— ಹೊರಗಡೆಯ ಸಂಪರ್ಕದಿಂದ ಅಂಟಿಕೊಂಡಿರುವುದೂ ಆದ । **ಯತ್ ಏನಃ ಅಸ್ತಿ**— ಯಾವ ಯಾವ ಪಾಪವಿರುವುದೋ ಅದೆಲ್ಲವನ್ನೂ । **ಅವ ಸ್ಯತಂ**—ಪೂರ್ಣವಾಗಿ ನಾಶಮಾಡಿರಿ । **ಅಸ್ಮತ್**— ನಮ್ಮಿಂದ । **ಮುಂಚತಂ**—ಪೂರ್ಣವಾಗಿ ಬಿಡಿಸಿರಿ.

॥ ಭಾವಾರ್ಥ ॥

ಎಲೈ ಸೋಮ ಮತ್ತು ರುದ್ರದೇವತೆಗಳೇ ನೀವಿಬ್ಬರೂ ಸಹ ನಮ್ಮ ಶರೀರಗಳಲ್ಲಿ ಸಕಲ ಪ್ರಸಿದ್ಧವಾದ ರೋಗನಿವಾರಕ ಸಾಮಗ್ರಿಗಳನ್ನು ತುಂಬಿಡಿರಿ. ನಮ್ಮ ಅಂಗಗಳಲ್ಲಿ ಸ್ವಯಂಸಂಪಾದಿತವೂ ಹೊರಗಡೆಯ ಸಂಪರ್ಕದಿಂದ ಅಂಟಿಕೊಂಡಿರುವುದೂ ಆದ ಯಾವ ಯಾವ ಪಾಪವಿರುವುದೋ ಅದೆಲ್ಲವನ್ನೂ ಪೂರ್ಣವಾಗಿ ನಾಶಮಾಡಿರಿ. ಅವನ್ನು ನಮ್ಮಿಂದ ಪೂರ್ಣವಾಗಿ ಬಿಡಿಸಿರಿ.

## English Translation.

Soma and Rudra, grant all these medicaments (for the ailments of) our bodies : detach, set free, the perpetrated iniquity that has been bound up in our persons.

॥ ಸಂಹಿತಾಪಾಠಃ ॥

ತಿಗ್ಮಾಯುಧೌ ತಿಗ್ಮಹೇತೀ ಸುಶೇವೌ ಸೋಮಾರುದ್ರಾವಿಹ ಸು ಮೃಳತಂ ನಃ ।
ಪ್ರನೋ ಮುಂಚತಂ ವರುಣಸ್ಯ ಪಾಶಾದ್ಗೋಪಾಯತಂ ನಃ ಸುಮನಸ್ಯಮಾನಾ ॥ ೪ ॥

॥ ಪದಪಾಠಃ ॥

ತಿಗ್ಮऽಆಯುಧೌ । ತಿಗ್ಮಹೇತೀ ಇತಿ ತಿಗ್ಮऽಹೇತೀ । ಸುऽಶೇವೌ । ಸೋಮಾರುದ್ರೌ । ಇಹ । ಸು । ಮೃಳತಂ । ನಃ ।

ಪ್ರ । ನಃ । ಮುಂಚತಂ । ವರುಣಸ್ಯ । ಪಾಶಾತ್ । ಗೋಪಾಯತಂ । ನಃ । ಸುऽಮನಸ್ಯಮಾನಾ ॥ ೪ ॥

॥ ಸಾಯಣಭಾಷ್ಯಂ ॥

ಹೇ ಸೋಮಾರುದ್ರೌ ತಿಗ್ಮಾಯುಧೌ ದೀಪ್ತಧನುಷ್ಕೌ ತಿಗ್ಮಹೇತೀ ತೀಕ್ಷ್ಣಶರೌ ಸುಶೇವೌ ಶೋಭನಸುಖಪ್ರದೌ ಸುಮನಸ್ಯಮಾನಾ ಶೋಭನಂ ಮನಃ ಸ್ತೋತ್ರಮಿಚ್ಛಂತೌ ಸುಮನಸ್ಯಮಾನೌ ಸ್ತೂಯಮಾನೌ ಸುಮನಸೌ ವಾ ಸಂತೌ ಯುವಾಮಿಹ ಲೋಕೇ ನೋऽಸ್ಮಾನ್ ಸು ಅತ್ಯಂತಂ ಮೃಳತಂ । ಸುಖಯತಂ । ನೋऽಸ್ಮಾನ್ವರುಣಸ್ಯ ಪಾಶಾತ್ಪ್ರ ಮುಂಚತಂ । ನೋऽಸ್ಮಾನ್ ಗೋಪಾಯತಂ । ಅಪದ್ಭ್ಯೋ ರಕ್ಷತಂ ಚ ॥

॥ ಪ್ರತಿಪದಾರ್ಥ ॥

**ತಿಗ್ಮಾಯುಧೌ**— ಹರಿತವಾದ ಆಯುಧವುಳ್ಳವರೂ । **ತಿಗ್ಮಹೇತೀ**—ಚೂಪಾದ ಬಾಣವುಳ್ಳವರೂ । **ಸುಶೇವೌ**—ಉತ್ತಮವಾದ ಸುಖಪ್ರದರೂ । **ಸುಮನಸ್ಯಮಾನಾ**— ಅನುಗ್ರಹಾತ್ಮಕವಾದ ಬುದ್ಧಿಯುಳ್ಳವರೂ ಆದ । **ಸೋಮಾರುದ್ರೌ**— ಎಲೈ ಸೋಮ ಮತ್ತು ರುದ್ರದೇವತೆಗಳೇ । **ಇಹ**— ಈ ಲೋಕದಲ್ಲಿ । **ನಃ**— ನಮ್ಮನ್ನು । **ಸು**—ಅತಿಶಯವಾಗಿ । **ಮೃಳತಂ**—ಸುಖಪಡಿಸಿರಿ । **ನಃ**—ನಮ್ಮನ್ನು । **ವರುಣಸ್ಯ**— ವರುಣನ । **ಪಾಶಾತ್**—ಬಂಧನದಿಂದ । **ಪ್ರ ಮುಂಚತಂ**—ಬಿಡಿಸಿರಿ । **ನಃ**— ನಮ್ಮನ್ನು । **ಗೋಪಾಯತಂ**— ರಕ್ಷಿಸಿರಿ.

॥ ಭಾವಾರ್ಥ ॥

ಹರಿತವಾದ ಆಯುಧವುಳ್ಳವರೂ, ಚೂಪಾದ ಬಾಣವುಳ್ಳವರೂ, ಉತ್ತಮವಾದ ಸುಖಪ್ರದರೂ, ಅನುಗ್ರಹಾತ್ಮಕವಾದ ಬುದ್ಧಿಯುಳ್ಳವರೂ ಆದ ಎಲೈ ಸೋಮ ಮತ್ತು ರುದ್ರದೇವತೆಗಳೇ, ಈ ಲೋಕದಲ್ಲಿ ನಮ್ಮನ್ನು ಅತಿಶಯವಾಗಿ ಸುಖಪಡಿಸಿರಿ. ನಮ್ಮನ್ನು ವರುಣನ ಬಂಧನದಿಂದ ಬಿಡಿಸಿರಿ. ನಮ್ಮನ್ನು ಸಂರಕ್ಷಿಸಿರಿ.

## English Translation.

Sharp-weaponed, sharp-arrowed, profoundly-honoured Soma and Rudra, grant us happiness in this world: propitiated by our praise, preserve us: liberate us from the bonds of Varuna.



# ಎಪ್ಪತ್ತೈದನೆಯ ಸೂಕ್ತವು

॥ ಸಾಯಣಭಾಷ್ಯಂ ॥

ಜೀಮೂತಸ್ಯೇತ್ಯೇಕೋನವಿಂಶತ್ಯೃಚಂ ಚತುರ್ದಶಂ ಸೂಕ್ತಂ ಭಾರದ್ವಾಜಸ್ಯ ಪಾಯೋ-ರಾರ್ಷಂ । ಅನುಕ್ರಮ್ಯತೇ ಚ । ಜೀಮೂತಸ್ಯೈಕೋನಾ ಪಾಯುರ್ಭಾರದ್ವಾಜಃ ಸಂಗ್ರಾ-ಮಾಂಗಾನ್ಯೃಕ್ಶೋಽಭಿತುಷ್ಟಾವ ವರ್ಮ ಧನುರ್ಜ್ಯಾರ್ತ್ನೀ ಇಷುಧಿಂ ಜಗತ್ಯರ್ಧೇ ಸಾರಥಿಮರ್ಧೇ ರಶ್ಮೀನಶ್ವಾನ್ ರಥಂ ರಥಗೋಪಾನ್ ಜಗತ್ಯಾಂ ಲಿಂಗೋಕ್ತದೇವತಾ ದ್ವಾಭ್ಯಾಮಿಷೂಃ ಪ್ರತೋದಂ ಹಸ್ತಘ್ನಂ ದ್ವಾಭ್ಯಾಮಿಷೂಃ ಪರಾಃ ಪಂಕ್ತ್ಯಾದಯೋ ಲಿಂಗೋಕ್ತದೇವತಾಃ ಸಂಗ್ರಾಮಾಶಿಷೋಽಂ-ತ್ಯಾಽನುಷ್ಟುಬ್ಬೃಹತೀ ಆಲಾಕ್ತೇತಿ ಚ ದ್ವೇ ದ್ವೇ ಇತಿ । ರಥೇ ತಿಷ್ಠನ್ ಬ್ರಾಹ್ಮಣಾಸ ಇತಿ ಷಷ್ಠೀದಶಮ್ಯೌ ಜಗತ್ಯಾವಂತ್ಯಾ ಯೋ ನಃ ಸ್ವ ಇತ್ಯೇಷಾನುಷ್ಟುಬ್ಬೃಹತೀ ಆ ಜಂಘಂತ್ಯಾಲಾಕ್ತಾವಸೃಷ್ಟಾ ಯೋ ನಃ ಸ್ವ ಇತಿ ಪಂಚಾನುಷ್ಟುಭೋ ಯತ್ರ ಬಾಣಾ ಇತಿ ಪಂಕ್ತಿಃ ಶಿಷ್ಟಾಸ್ತ್ರಿಷ್ಟುಭಃ । ಆದ್ಯಯಾ ವರ್ಮ ಸ್ತೂಯತೇ ದ್ವಿತೀಯಯಾ ಧನುಸ್ತೃತೀಯಯಾ ಜ್ಯಾ ಚತುರ್ಥ್ಯಾರ್ತ್ನೀ ಪಂಚಮ್ಯೇಷುಧಿಃ । ಅತಃ ಪಂಚಾನಾಂ ವರ್ಮಾದ್ಯಾ ದೇವತಾಃ । ಷಷ್ಠ್ಯಾಃ ಪೂರ್ವಾರ್ಧೇನ ಸಾರಥಿಃ ಸ್ತೂಯತೇ । ಅತಃ ಸೋಽರ್ಧಸ್ತದ್ದೇವತಾಕಃ । ಉತ್ತರಾರ್ಧೇನ ರಶ್ಮಯಃ ಸ್ತೂಯಂತೇ । ಸಪ್ತಮ್ಯಾಶ್ವಾ ಅಷ್ಟಮ್ಯಾ ರಥೋ ನವಮ್ಯಾ ರಥಗೋಪಾಃ । ಅತಸ್ತಾಸ್ತದ್ದೇವತಾಕಾಃ । ಬ್ರಾಹ್ಮಣಾಸ ಇತ್ಯಸ್ಯಾಂ ಬ್ರಾಹ್ಮಣಪಿತೃ-ಸೋಮ್ಯದ್ಯಾವಾಪೃಥಿವೀಪೂಷಾಣೋ ಲಿಂಗೋಕ್ತದೇವತಾಃ । ಏಕಾದಶೀದ್ವಾದಶ್ಯಾವಿಷುಸ್ತುತಿರೂಪ-ತ್ವಾದಿಷುದೇವತಾಕೇ । ತ್ರಯೋದಶ್ಯಾ ಪ್ರತೋದಃ । ಚತುರ್ದಶ್ಯಾ ಹಸ್ತಘ್ನಃ । ಪಂಚದಶೀಷೋಡಶ್ಯಾ-ವಿಷುದೇವತಾಕೇ । ಸಪ್ತದಶ್ಯಾ ಯುದ್ಧಭೂಮಿಬ್ರಹ್ಮಣಸ್ಪತ್ಯದಿತಿರೂಪಾ ಲಿಂಗೋಕ್ತದೇವತಾಃ । ಅಷ್ಟಾದಶ್ಯಾಃ ಕವಚಸೋಮವರುಣಾ ದೇವತಾಃ । ಅಂತ್ಯಾಯಾ ದೇವಾ ಬ್ರಹ್ಮ ಚ ದೇವತಾಃ ॥ ಯುದ್ಧೇಽನೇನ ಸೂಕ್ತೇನ ರಾಜಾನಂ ಸಂನಾಹಯೇತ್ । ತಥಾ ಚಾಶ್ವಲಾಯನಃ । ಸಂಗ್ರಾಮೇ ಸಮುಪೋಢೇ ರಾಜಾನಂ ಸಂನಾಹಯೇದಾ ತ್ವಾಹಾರ್ಷಮಂತರೇಧೀತಿ ಪಶ್ಚಾದ್ರಥಸ್ಯಾವಸ್ಥಾಯ ಜೀಮೂತಸ್ಯೇವ ಭವತಿ ಪ್ರತೀಕಮಿತಿ ಕವಚಂ ಪ್ರಯಚ್ಛೇತ್ ಉತ್ತರಯಾ ಧನುರುತ್ತರಾಂ ವಾಚಯೇ-ತ್ಸ್ವಯಂ ಚತುರ್ಥೀಂ ಜಪೇತ್ಪಂಚಮ್ಯೇಷುಧಿಂ ಪ್ರಯಚ್ಛೇದಭಿಪ್ರವರ್ತಮಾನೇ ಷಷ್ಠೀಂ ಸಪ್ತಮ್ಯಾ-ಶ್ವಾನಷ್ಟಮೀಮಿಷೂನವೇಕ್ಷಮಾಣಂ ವಾಚಯತ್ಯಹಿರಿವ ಭೋಗೈಃ ಪರ್ಯೇತಿ ಬಾಹುಮಿತಿ ತಲಂ ನಹ್ಯಮಾನಂ । ಗೃ. ೩-೧೨ । ಇತಿ । ತಥಾ ಚಾವಸೃಷ್ಟಾ ಪರಾ ಪತೇತೀಷೂನ್ವಿಸರ್ಜಯೇದ್ಯತ್ರ ಬಾಣಾಃ ಸಂಪತಂತಿ ಯುಧ್ಯಮಾನೇಷು ಜಪೇತ್ಸಂಶಿಷ್ಯಾದ್ವಾ । ಗೃ. ೩-೧೨ । ಇತಿ ॥ ಅಧ್ಯಾಯೋ-ಪಾಕರಣೋತ್ಸರ್ಜನಯೋರ್ಮಂಡಲಾಂತ್ಯಹೋಮೇ ಯೋ ನಃ ಸ್ವ ಇತ್ಯೇಷಾ । ಆ. ಗೃ. ೩-೫ ॥

ಅನುವಾದವು—**ಜೀಮೂತಸ್ಯ** ಎಂಬ ಈ ಸೂಕ್ತವು ಆರನೆಯ ಅನುವಾಕದಲ್ಲಿ ಹದಿನಾಲ್ಕನೆಯ ಸೂಕ್ತವು. ಇದರಲ್ಲಿ ಹತ್ತೊಂಭತ್ತು ಋಕ್ಕುಗಳಿರುವವು. ಈ ಸೂಕ್ತಕ್ಕೆ ಭರದ್ವಾಜಗೋತ್ರೋದ್ಭವನಾದ ಪಾಯುವೆಂಬುವನು ಋಷಿಯು; ಅನುಕ್ರಮಣಿಕೆಯಲ್ಲಿ—**ಜೀಮೂತಸ್ಯೈಕೋನಾ ಪಾಯುರ್ಭಾರದ್ವಾಜಃ ಸಂಗ್ರಾಮಾಂಗಾ-**

**ನ್ಯೃಕ್ಥ್ಯೋಽಭಿತುಷ್ಟ್ವಾವ ವರ್ಮ ಧನುರ್ಜ್ಯಾಮಾರ್ತ್ನೀ ಇಷುಧಿಂ ಜಗತ್ಯರ್ಧೇ ಸಾರಥಿಮರ್ಧೇ ರಶ್ಮೀ-ನಶ್ವಾನ್ ರಥಂ ರಥಗೋಪಾನ್ ಜಗತ್ಯಾಂ ಲಿಂಗೋಕ್ತದೇವತಾ ದ್ವಾಭ್ಯಾಮಿಷೂಃ ಪ್ರತೋದಂ ಹಸ್ತಘ್ನಂ ದ್ವಾಭ್ಯಾಮಿಷೂಃ ಪರಾಃ ಪಂಕ್ತ್ಯಾದಯೋ ಲಿಂಗೋಕ್ತದೇವತಾಃ ಸಂಗ್ರಾಮಾಶಿಷೋಽನ್ತ್ಯಾನುಷ್ಟು-ಬೃಜೀತ ಅಲಾಕ್ತೇತಿ ಚ ದ್ವೇ ದ್ವೇ** ಎಂದು ಹೇಳಿರುವುದು. **ರಥೇ ತಿಷ್ಠನ್, ಬ್ರಾಹ್ಮಣಾಸಃ** ಎಂಬ ೬ ಮತ್ತು ೧೦ ನೆಯ ಋಕ್ಕುಗಳು ಜಗತೀಛಂದಸ್ಕವು. **ಯೋ ನಃ ಸ್ವಃ** ಎಂಬ ೧೯ ನೆಯ ಋಕ್ಕು ಅನುಷ್ಟುಪ್‌ಛಂದಸ್ಕವು; **ಋಜೀತೇ, ಆ ಜಂಘಂತಿ, ಅಲಾಕ್ತಾ, ಅವಸೃಷ್ಟಾ, ಯೋ ನಃ ಸ್ವಃ** ಎಂಬ ಈ ಐದು ಋಕ್ಕುಗಳು ಎಂದರೆ ೧೨, ೧೩, ೧೫, ೧೬, ೧೯ ನೆಯ ಋಕ್ಕುಗಳು ಅನುಷ್ಟುಪ್‌ಛಂದಸ್ಕವು; **ಯತ್ರ ಬಾಣಾಃ** ಎಂಬ ೧೭ ನೆಯ ಋಕ್ಕು ಪಂಕ್ತಿಶ್ಛಂದಸ್ಕವು; ಉಳಿದ ಋಕ್ಕುಗಳು ತ್ರಿಷ್ಟುಪ್‌ಛಂದಸ್ಕವು. ಮೊದಲನೆಯ ಋಕ್ಕಿನಲ್ಲಿ **ವರ್ಮ,** ಎರಡನೆಯದರಲ್ಲಿ **ಧನುಸ್ಸು,** ಮೂರನೆಯದರಲ್ಲಿ **ಜ್ಯಾ,** ನಾಲ್ಕರಲ್ಲಿ **ಆರ್ತ್ನೀ,** ಐದನೆಯದರಲ್ಲಿ **ಇಷುಧಿಃ** ಎಂಬ ಯುದ್ಧಸಾಧನಗಳು ಸ್ತುತಿಸಲ್ಪಟ್ಟಿರುವವು. ಆದ್ದರಿಂದ ಆ ಋಕ್ಕುಗಳಿಗೆ ಅವುಗಳೇ ದೇವತೆಯು; ಆರನೆಯ ಋಕ್ಕಿನ ಪೂರ್ವಾರ್ಧದಲ್ಲಿ ಸಾರಥಿಯೂ, ಉತ್ತರಾರ್ಧದಲ್ಲಿ **ರಶ್ಮಯಃ** ಎಂಬಿವೂ ಸ್ತುತರಾಗಿರುವುದರಿಂದ ಆ ಋಕ್ಕಿಗೆ ಅವುಗಳೇ ದೇವತೆಯು; ಏಳನೆಯ ಋಕ್ಕಿನಲ್ಲಿ **ಅಶ್ವಗಳು,** ಎಂಟರಲ್ಲಿ **ರಥ,** ಒಂಭತ್ತರಲ್ಲಿ **ರಥಗೋಪಾಃ** ಎಂಬುವರು ಸ್ತುತರಾಗಿರುವುದರಿಂದ ಆ ಋಕ್ಕುಗಳಿಗೆ ಅವುಗಳೇ ದೇವತೆಯು; **ಬ್ರಾಹ್ಮಣಾಸಃ** ಎಂಬ ೧೦ ನೆಯ ಋಕ್ಕಿಗೆ ಆ ಋಕ್ಕಿನಲ್ಲಿ ಪ್ರಶಂಸಿತ ರಾಗಿರುವ **ಬ್ರಾಹ್ಮಣ, ಪಿತೃ, ಸೋಮ್ಯ, ದ್ಯಾವಾಪೃಥಿವೀ, ಪೂಷಾ** ಎಂಬಿವರು ಆ ಋಕ್ಕಿಗೆ ದೇವತೆಗಳು; ಹನ್ನೊಂದು ಮತ್ತು ಹನ್ನೆರಡನೆಯ ಋಕ್ಕುಗಳಲ್ಲಿ ಇಷುಸ್ತುತಿ ಇರುವುದರಿಂದ ಆ ಎರಡು ಋಕ್ಕುಗಳಿಗೆ **ಇಷುವೇ** ದೇವತೆಯು; ಹದಿಮೂರನೆಯ ಋಕ್ಕಿಗೆ **ಪ್ರತೋದಃ,** ಹದಿನಾಲ್ಕನೆಯ ಋಕ್ಕಿಗೆ **ಹಸ್ತಘ್ನಃ** ಎಂಬಿವು ದೇವತೆಗಳು; ಹದಿನೈದು ಮತ್ತು ಹದಿನಾರನೇ ಋಕ್ಕುಗಳಿಗೆ ಇಷುವು ದೇವತೆಯು; ಹದಿನೇಳನೆಯ ಋಕ್ಕಿಗೆ ಯುದ್ಧಭೂಮಿ, ಬ್ರಹ್ಮಣಸ್ಪತಿ, ಅದಿತಿ ಎಂಬುವರೇ ದೇವತೆಯು; ಹದಿನೆಂಟನೆಯ ಋಕ್ಕಿಗೆ ಕವಚ, ಸೋಮ, ವರುಣ ಎಂಬುವರು ದೇವತೆಯು; ಕೊನೆಯ ಋಕ್ಕಿಗೆ ದೇವತೆಗಳು, ಮತ್ತು ಬ್ರಹ್ಮನು ದೇವತೆಯು. ಯುದ್ಧವು ಸನ್ನಿಹಿತವಾದಾಗ ಈ ಸೂಕ್ತದ ಋಕ್ಕುಗಳಿಂದ ರಾಜನನ್ನು ಸಂಸ್ಕರಿಸಿ ಯುದ್ಧಸನ್ನಾಹಾಹ-ನನ್ನಾಗಿ (ಯುದ್ಧಕ್ಕೆ ಸಿದ್ಧನಾಗುವಂತೆ) ಮಾಡಬೇಕು. ಈ ವಿಷಯದಲ್ಲಿ ಆಶ್ವಲಾಯನಗೃಹ್ಯಸೂತ್ರದಲ್ಲಿ (ಆ. ೩-೧೨) ಈ ರೀತಿ ಹೇಳಿರುವುದು— **ಸಂಗ್ರಾಮೇ ಸಮುಪೋಢ್ಗೇ ರಾಜಾನಂ ಸಂನಾಹಯೇದಾ ತ್ವಾಹಾರ್ಷಮಂತರೇಧೀತಿ ಪಶ್ಚಾದ್ರಥಸ್ಯಾವ-ಸ್ಥಾಯ ಜೀಮೂತಸ್ಯೇವ ಭವತಿ ಪ್ರತೀಕಮಿತಿ ಕವಚಂ ಪ್ರಯಚ್ಛೇತ್ ಉತ್ತರಯಾ ಧನುರುತ್ತರಾಂ ವಾಚಯೇತ್ಸ್ವಯಂ ಚತುರ್ಥೀಂ ಜಪೇತ್ಪಂಚಮ್ಯೇಷುಧಿಂ ಪ್ರಯಚ್ಛೇದಭಿಪ್ರವರ್ತಮಾನೇ ಷಷ್ಠೀಂ ಸಪ್ತಮ್ಯಾಶ್ವಾನಷ್ಟಮೀಮಿಷೂನವೇಕ್ಷಮಾಣಂ ವಾಚಯತ್ಯಹಿರಿವ ಭೋಗೈಃ ಪರ್ಯೇತಿ ಬಾಹುಮಿತಿ ತಲಂ ನಹ್ಯಮಾನಂ** ಎಂದೂ ಮತ್ತು **ಅವಸೃಷ್ಟಾ ಪರಾ ಪತೇತೀಷೂನ್ವಿಸರ್ಜಯೇದ್ಯತ್ರ ಬಾಣಾಃ ಸಂಪತಂತೀತಿ ಯುಧ್ಯಮಾನೇಷು ಜಪೇತ್ಸಂಶಿಷ್ಯಾದ್ವಾ** (ಆ. ಗೃ. ೩-೧೨) ಎಂದೂ ಹೇಳಿರುವುದು. ಎಂದರೆ, ಯುದ್ಧವು ಸಂನಿಹಿತವಾದಾಗ ರಾಜಪುರೋಹಿತನು ರಾಜನನ್ನು ಯುದ್ಧಸಿದ್ಧತೆಯಲ್ಲಿ ಸಂಸ್ಕೃತನನ್ನಾಗಿ ಮಾಡಲು ಈ ಸೂಕ್ತದ ಋಕ್ಕುಗಳಿಂದ ಸಂನಾಹನನ್ನಾಗಿ ಮಾಡಬೇಕು. ಮೊದಲು **ಆ ತ್ವಾಹಾರ್ಷಮಂತರೇಧಿ** (ಋ. ಸಂ. ೧೦-೧೭೩) ಎಂಬ ಸೂಕ್ತಪಠನದಿಂದ ರಾಜನನ್ನು ರಥದಲ್ಲಿ ಕುಳ್ಳಿರಿಸಿ ಆನಂತರ **ಜೀಮೂತಸ್ಯೇವ ಭವತಿ ಪ್ರತೀಕಂ** ಎಂಬ ೧ ನೇ ಋಕ್ಕಿನಿಂದ ಎಂದರೆ ಈ ಋಕ್ಕನ್ನು ಪಠಿಸುತ್ತಾ ಕವಚವನ್ನು (Armour) ಕೊಡಬೇಕು. ಮುಂದಿನ

**ಧನ್ವನಾ ಗಾ** ಎಂಬ ೨ ನೆಯ ಋಕ್ಕಿನಿಂದ ಧನುಸ್ಸನ್ನೂ ಕೊಡಬೇಕು. ಅನಂತರ **ವಕ್ಷ್ಯಂತೀವ** ಎಂಬ ೩ ನೆಯ ಋಕ್ಕನ್ನು ರಾಜನಿಂದ ಹೇಳಿಸಿ ತಾನು **ತೇ ಆಚರಂತೀ** ಎಂಬ ೪ ನೆಯ ಋಕ್ಕನ್ನು ಪಠಿಸಬೇಕು. **ಬಹ್ವೀನಾಂ ಪಿತಾ** ಎಂಬ ೫ ನೇ ಋಕ್ಕಿನಿಂದ ಇಷುಧಿ (ಬತ್ತಳಿಕೆ) ಯನ್ನು ಕೊಟ್ಟು ಹೊರಡುವುದಕ್ಕೆ ಸಿದ್ಧವಾದಾಗ **ರಥೇ ತಿಷ್ಠನ್** ಎಂಬ ೬ ನೆಯ ಋಕ್ಕನ್ನು ಪಠಿಸಬೇಕು. **ತೀವ್ರಾನ್ ಘೋಷಾನ್** ಎಂಬ ೭ ನೆಯ ಋಕ್ಕಿನಿಂದ ಅಶ್ವಗಳನ್ನೂ, **ರಥ ವಾಹನಂ** ಎಂಬ ೮ ನೆಯ ಋಕ್ಕಿನಿಂದ **ಇಷು** ಎಂದರೆ ಬಾಣಗಳನ್ನು ನೋಡಬೇಕು. ಮತ್ತು ಈ ಮಂತ್ರಗಳನ್ನು ರಾಜನಿಂದ ಹೇಳಿಸಬೇಕು. **ಅಹಿರಿವ ಭೋಗೈಃ ಪರ್ಯೇತಿ** ಎಂಬ ೧೪ ನೆಯ ಋಕ್ಕಿನಿಂದ ದೇವತೆಗಳನ್ನು ಪ್ರಾರ್ಥಿಸಿ, **ಅವಸೃಷ್ಟಾ** ಎಂಬ ೧೬ ನೆಯ ಋಕ್ಕನ್ನು ಪಠಿಸಿ ಬಾಣಗಳನ್ನು ಶತ್ರುಗಳ ಮೇಲೆ ಪ್ರಯೋಗಿಸಬೇಕು. **ಯತ್ರ ಬಾಣಾಃ ಸಂಪತಂತಿ** ಎಂಬ ೧೭ ನೆಯ ಋಕ್ಕನ್ನು ಯದ್ಧವನ್ನು ಮಾಡುತ್ತಿರುವಾಗ ಪಠಿಸಬೇಕು ಎಂದು ಸೂತ್ರಾರ್ಥವು. ಮತ್ತು **ಯೋ ನಃ ಸ್ವಃ** ಎಂಬ ಈ ಸೂಕ್ತದ ಕೊನೆಯ ಋಕ್ಕನ್ನು ಅಧ್ಯಾಯೋಪಾಕರಣ, ಉತ್ಸರ್ಜನಕರ್ಮಗಳ ಪ್ರಧಾನಹೋಮಗಳಲ್ಲಿ ಮಂಡಲಾಂತಋಕ್ಕನ್ನಾಗಿ ಪಠಿಸಿ ಹೋಮಮಾಡಬೇಕೆಂದು ಆಶ್ವಲಾಯನಗೃಹ್ಯಸೂತ್ರದ **ಯೋ ನಃ ಸ್ವಃ** ಎಂಬ ಸೂತ್ರದಿಂದ (ಆ. ಗೃ. ೩-೫-೭) ವಿವೃತವಾಗಿರುವುದು.

## ಸೂಕ್ತ—೭೫

ಮಂಡಲ—೬ ‖ ಅನುವಾಕ—೬ ‖ ಸೂಕ್ತ—೭೫ ‖

ಅಷ್ಟಕ—೫ ‖ ಅಧ್ಯಾಯ—೧ ‖ ವರ್ಗ—೧೯, ೨೦, ೨೧, ೨೨ ‖

‖ ಸೂಕ್ತದಲ್ಲಿರುವ ಋಕ್ಸಂಖ್ಯೆ—೧೯ ‖

‖ ಋಷಿಃ—ಪಾಯುರ್ಭಾರದ್ವಾಜಃ ‖

‖ ದೇವತಾಃ—೧. ವರ್ಮ । ೨. ಧನುಃ । ೩. ಜ್ಯಾ । ೪. ಆರ್ತ್ನೀ । ೫. ಇಷುಧಿಃ । ೬ ರಲ್ಲಿ ಪೂರ್ವಾರ್ಧ. ಸಾರಥಿಃ । ೬ ರಲ್ಲಿ ಉತ್ತರಾರ್ಧ. ರಶ್ಮಯಃ । ೭. ಅಶ್ವಾಃ ೮. ರಥಃ । ೯. ರಥಗೋಪಾಃ । ೧೦. ಲಿಂಗೋಕ್ತದೇವತಾಃ । ೧೧, ೧೨, ೧೫, ೧೬. ಇಷವಃ । ೧೩. ಪ್ರತೋದಃ । ೧೪. ಹಸ್ತಘ್ನಃ । ೧೭–೧೯. ಲಿಂಗೋಕ್ತದೇವತಾಃ ಸಂಗ್ರಾಮಾಶಿಷಃ ‖ (೧೭. ಯುದ್ಧಭೂಮಿರ್ಬ್ರಹ್ಮಣಸ್ಪತಿರದಿತಿಶ್ಚ । ೧೮. ಕವಚಸೋಮವರುಣಾಃ । ೧೯. ದೇವಾ ಬ್ರಹ್ಮಚ) ‖

‖ ಛಂದಃ—೧–೫, ೭–೯, ೧೧, ೧೪, ೧೮. ತ್ರಿಷ್ಟುಪ್ । ೬, ೧೦. ಜಗತೀ । ೧೨, ೧೩, ೧೫, ೧೬, ೧೯. ಅನುಷ್ಟುಪ್ । ೧೭. ಪಂಕ್ತಿಃ ‖

‖ ಸಂಹಿತಾಪಾಠಃ ‖

ಜೀಮೂತಸ್ಯೇವ ಭವತಿ ಪ್ರತೀಕಂ ಯದ್ವರ್ಮೀ ಯಾತಿ ಸಮದಾಮುಪಸ್ಥೇ।
ಅನಾವಿದ್ಧಯಾ ತನ್ವಾ ಜಯ ತ್ವಂ ಸ ತ್ವಾ ವರ್ಮಣೋ ಮಹಿಮಾ ಪಿಪರ್ತು ‖ ೧ ‖

॥ ಪದಪಾಠಃ ॥

ಜೀಮೂತಸ್ಯಽಇವ । ಭವತಿ । ಪ್ರತೀಕಂ । ಯತ್ । ವರ್ಮೀ । ಯಾತಿ । ಸಽಮದಾಂ । ಉಪಽಸ್ಥೇ ।

ಅನಾವಿದ್ಧಯಾ । ತನ್ವಾ । ಜಯ । ತ್ವಂ । ಸಃ । ತ್ವಾ । ವರ್ಮಣಃ । ಮಹಿಮಾ । ಪಿಪರ್ತು ॥ ೧ ॥

॥ ಸಾಯಣಭಾಷ್ಯಂ ॥

ಸಮದಾಂ ಸಂಗ್ರಾಮಾಣಾಮುಪಸ್ಥ ಉಪಸ್ಥಾನೇ ಸತಿ ಯದ್ಯದಾಯಂ ರಾಜಾ ವರ್ಮೀ ಕವಚೀ ಯಾತಿ ತದಾ ಲೋಹಮಯೇನ ವರ್ಮಣಾ ಸಂನದ್ಧಸ್ಯ ರಾಜ್ಞಃ ಪ್ರತೀಕಂ ರೂಪಂ ಜೀಮೂತಸ್ಯೇವ ಮೇಘಸ್ಯೇವ ಭವತಿ । ಮೇಘಸ್ಯ ಯಾದೃಶಂ ರೂಪಂ ತಾದೃಶಮಸ್ಯ ಭವತೀತ್ಯರ್ಥಃ । ಹೇ ರಾಜನ್ ತ್ವಮನಾವಿದ್ಧಯಾ ಶತ್ರುಭಿರಬಾಧಿತಯಾ ತನ್ವಾ ಶರೀರೇಣ ಶತ್ರೂನ್ ಜಯ । ವರ್ಮಣಃ ಸ ತಾದೃಶೋ ಮಹಿಮಾ ತ್ವಾ ತ್ವಾಂ ಪಿಪರ್ತು । ಪಾಲಯತು ॥

॥ ಪ್ರತಿಪದಾರ್ಥ ॥

**ಸಮದಾಂ ಉಪಸ್ಥೇ**—ಸಂಗ್ರಾಮಗಳ ಸಾನಿಧ್ಯದಲ್ಲಿ (ಯುದ್ಧಕಾಲಗಳಲ್ಲಿ) । **ಯತ್**—ಯಾವಾಗ । **ವರ್ಮೀ**—ಲೋಹಕವಚವನ್ನು ಧರಿಸಿದ ರಾಜನು । **ಯಾತಿ**—ಸಂಚರಿಸುವನೋ (ಆಗ) । **ಪ್ರತೀಕಂ**—ಈ ರಾಜನ ರೂಪವು । **ಜೀಮೂತಸ್ಯೇವ**—ಮೇಘದಂತೆ ಗಭೀರವಾಗಿ । **ಭವತಿ**—ಆಗಿರುತ್ತದೆ (ಎಲೈ ರಾಜನೇ) । **ತ್ವಂ**—ನೀನು ।. **ಅನಾವಿದ್ಧಯಾ**—ಶತ್ರುಗಳ ಏಟುಗಳಿಗೆ ಸಿಕ್ಕದಿರುವ । **ತನ್ವಾ**—ಶರೀರದೊಡನೆ । **ಜಯ**—ಜಯವನ್ನು ಸಂಪಾದಿಸು । **ವರ್ಮಣಃ**—ಲೋಹಕವಚದ । **ಸಃ**—ಪ್ರಸಿದ್ಧವಾದ । **ಮಹಿಮಾ**—ಮಾಹಾತ್ಮ್ಯವು । **ತ್ವಾ**—ನಿನ್ನನ್ನು । **ಪಿಪರ್ತು**—ಪಾಲಿಸಲಿ.

॥ ಭಾವಾರ್ಥ ॥

ಯುದ್ಧಕಾಲಗಳಲ್ಲಿ ಲೋಹಕವಚವನ್ನು ಧರಿಸಿದ ರಾಜನು ಯುದ್ಧರಂಗದಲ್ಲಿ ಸಂಚರಿಸುವಾಗ ಅವನ ರೂಪವು ಮೇಘದಂತೆ ಗಂಭೀರವಾಗಿರುತ್ತದೆ. ಎಲೈ ರಾಜನೇ, ನೀನು ಶತ್ರುಗಳ ಏಟುಗಳಿಗೆ ಸಿಕ್ಕದಿರುವ ಶರೀರದೊಡನೆ ಜಯವನ್ನು ಸಂಪಾದಿಸು. ಲೋಹಕವಚದ ಪ್ರಸಿದ್ಧವಾದ ಮಾಹಾತ್ಮ್ಯವು ನಿನ್ನನ್ನು ಪಾಲಿಸಲಿ.

## English Translation.

When the mailed warrior advances in the front of battles, his form is like that of a cloud : with his body unwounded do you conquer ; may the strength of the armour defend you.

॥ ವಿಶೇಷವಿಷಯಗಳು ॥

ಯುದ್ಧವು ಸನ್ನಿಹಿತವಾಗಿರುವ ಸಮಯದಲ್ಲಿ ಎಂದರೆ ಯುದ್ಧದ ಹಿಂದಿನ ದಿನ ಈ ಸೂಕ್ತವನ್ನು ರಚಿಸಿದಂತೆ ಕಂಡುಬರುತ್ತದೆ. ಈ ಸೂಕ್ತದಲ್ಲಿ ಧನುಸ್ಸು, ಹೆದೆ, ರಥ ಮೊದಲಾದ ಯುದ್ಧೋಪಕರಣಗಳ ಪ್ರಾರ್ಥನೆ ಮತ್ತು ವಿವರಣೆ ಇವೆ. ಯುದ್ಧಸಮಯದಲ್ಲಿ ರಾಜನನ್ನು ಯುದ್ಧಕ್ಕೆ ಸಜ್ಜುಗೊಳಿಸಿ ಮಂತ್ರಪೂರ್ವಕವಾಗಿ ಸಂಸ್ಕರಿಸು

ವುದಕ್ಕಾಗಿ ಈ ಸೂಕ್ತದ ವಿನಿಯೋಗವಿರುವುದೆಂದು ಪೀಠಿಕೆಯಲ್ಲಿಯೇ ಹೇಳಲಾಗಿದೆ. ಈ ಸೂಕ್ತದ ಅನೇಕ ಋಕ್ಕುಗಳಿಗೆ ಯಾಸ್ಕರು ನಿರ್ವಚನವನ್ನು ಹೇಳಿ ಅರ್ಥವಿವರಣೆಮಾಡಿದಾರೆ. ಅವುಗಳನ್ನೆಲ್ಲಾ ಆಯಾ ಋಕ್ಕುಗಳ ವಿಶೇಷ ವಿವರಣೆಯಲ್ಲಿ ವರ್ಣಿಸಲಾಗಿದೆ. ಯಜುರ್ವೇದದಲ್ಲಿ ಎಂದರೆ ಕೃಷ್ಣಯಜುರ್ವೇದದ ತೈತ್ತಿರೀಯಸಂಹಿತೆಯಲ್ಲಿಯೂ ಈ ಸೂಕ್ತವು ಅಲ್ಪ ಸ್ವಲ್ಪ ವ್ಯತ್ಯಾಸಗಳೊಡನೆ ಪಠಿತವಾಗಿದೆ. (ತೈ. ಸಂ. ೪-೬-೬) ಅಲ್ಲಿ ಈ ಸೂಕ್ತದ ೯ ಮತ್ತು ೧೫ ನೆಯ ಋಕ್ಕುಗಳಿಲ್ಲ. ಕ್ರಮದಲ್ಲಿಯೂ ವ್ಯತ್ಯಾಸವಿದೆ. **ಸಮದ** ಎಂಬ ಶಬ್ದದ ನಿರ್ವಚನ ಮತ್ತು ಅರ್ಥ ವಿವರಣೆಯನ್ನು ಇದೇ ಸೂಕ್ತದ ಎರಡನೇ ಋಕ್ಕಿನ ವಿಶೇಷವಿಷಯಗಳಲ್ಲಿ ವಿವರಿಸಲಾಗಿದೆ.

॥ ಸಂಹಿತಾಪಾಠಃ ॥

ಧನ್ವನಾ ಗಾ ಧನ್ವನಾಜಿಂ ಜಯೇಮ ಧನ್ವನಾ ತೀವ್ರಾಃ ಸಮದೋ ಜಯೇಮ ।
ಧನುಃ ಶತ್ರೋರಪಕಾಮಂ ಕೃಣೋತಿ ಧನ್ವನಾ ಸರ್ವಾಃ ಪ್ರದಿಶೋ ಜಯೇಮ ॥ ೨ ॥

॥ ಪದಪಾಠಃ ॥

ಧನ್ವನಾ । ಗಾಃ । ಧನ್ವನಾ । ಆಜಿಂ । ಜಯೇಮ । ಧನ್ವನಾ । ತೀವ್ರಾಃ । ಸಽಮದಃ । ಜಯೇಮ ।
ಧನುಃ । ಶತ್ರೋಃ । ಅಪಽಕಾಮಂ । ಕೃಣೋತಿ । ಧನ್ವನಾ । ಸರ್ವಾಃ । ಪ್ರಽದಿಶಃ । ಜಯೇಮ ॥ ೨ ॥

॥ ಸಾಯಣಭಾಷ್ಯಂ ॥

ಧನ್ವನಾ ಚಾಪೇನ ಗಾಃ ಶತ್ರೂಣಾಂ ಜಯೇಮ । ವಯಂ ವಶೀಕರವಾಮ । ಧನ್ವನಾಜಿಂ ಸಂಗ್ರಾಮಂ ಚ ಜಯೇಮ । ಧನ್ವನಾ ತೀವ್ರಾ ಉದ್ಧತಾಃ ಸಮದೋಽತ್ಯಂತಂ ಮದವತೀಃ ಶತ್ರುಸೇನಾಶ್ಚ ಜಯೇಮ । ತಥಾ ಚ ಯಾಸ್ಕಃ । ಸಮದಃ ಸಮದೋ ವಾತ್ತೇಃ ಸಂಮದೋ ವಾ ಮದತೇಃ । ನಿ. ೯-೧೭ । ಇತಿ । ಧನುಃ ಶತ್ರೋರಪಕಾಮಂ ಕಾಮಸ್ಯಾಪಾಯಂ ಕೃಣೋತಿ । ಕರೋತು ॥ ಕಿಂಚ ಧನ್ವನಾ ವಯಂ ಸರ್ವಾಃ ಪ್ರದಿಶಃ ಸರ್ವಾಸು ದಿಕ್ಷು ವರ್ತಮಾನಾನ್ ಶತ್ರೂನ್ ಜಯೇಮ । ಪ್ರದಿಕ್‌ಶಬ್ದೋ ಲಕ್ಷಣಯಾ ತತ್ಸ್ಥೇಷು ಪುರುಷೇಷು ವರ್ತತೇ ಮಂಚಾಃ ಕ್ರೋಶಂತೀತಿವತ್ । ಧನ್ವಜ್ಯಾಬ್ದಸ್ಯ ಜಯತೇಶ್ಚಾವೃತ್ತಿರಾದರಾರ್ಥಾ ॥

॥ ಪ್ರತಿಪದಾರ್ಥ ॥

**ಧನ್ವನಾ**—ಧನುಸ್ಸಿನ ಸಹಾಯದಿಂದ । **ಗಾಃ**—ಶತ್ರುಗಳ ಗೋವುಗಳನ್ನು । **ಜಯೇಮ**—ನಾವು ಜಯಿಸುವಂತಾಗಲಿ । **ಧನ್ವನಾ**—ಅದೇ ಧನುಸ್ಸಿನಿಂದಲೇ । **ಆಜಿಂ**—ಯುದ್ಧವನ್ನೂ ಜಯಿಸುವಂತಾಗಲಿ । **ಧನ್ವನಾ**—ಧನುಸ್ಸಿನಿಂದಲೇ । **ತೀವ್ರಾಃ**—ದರ್ಪದಿಂದ ತೀಕ್ಷ್ಣವಾದವೂ । **ಸಮದಃ**—ಉನ್ಮತ್ತವಾದವೂ ಆದ ಶತ್ರುಸೇನೆಗಳನ್ನು । **ಜಯೇಮ**—ನಾವು ಜಯಿಸುವಂತಾಗಲಿ । **ಧನುಃ**—ನಮ್ಮ ಧನುಸ್ಸು । **ಶತ್ರೋಃ**—

ಶತ್ರುವಿನ | **ಅಪಕಾಮಂ**—ಆಶಾಭಂಗವನ್ನು | **ಕೃಣೋತಿ**—ಉಂಟುಮಾಡಲಿ | **ಧನ್ವನಾ**—ಧನುಸ್ಸಿನಿಂದ | **ಸರ್ವಾಃ**—ಸಕಲವಾದ | **ಪ್ರದಿಶಃ**—ದಿಗಂತಗಳಲ್ಲಿರುವ ಶತ್ರುಗಳನ್ನು | **ಜಯೇಮ**—ಜಯಿಸುವಂತಾಗಲಿ.

॥ ಭಾವಾರ್ಥ ॥

ನಾವು ಧನುಸ್ಸಿನ ಸಹಾಯದಿಂದ ಶತ್ರುಗಳ ಗೋವುಗಳನ್ನು ಜಯಿಸುವಂತಾಗಲಿ. ಅದೇ ಧನುಸ್ಸಿನಿಂದಲೇ ಯುದ್ಧವನ್ನು ಜಯಿಸುವೆವು. ದರ್ಪದಿಂದ ತೀಕ್ಷ್ಣವಾದವೂ, ಉನ್ಮತ್ತವಾದವೂ ಆದ ಶತ್ರುಸೇನೆಗಳನ್ನು ಧನುಸ್ಸಿನಿಂದಲೇ ಜಯಿಸೋಣ. ನಮ್ಮ ಧನುಸ್ಸು ಶತ್ರುವಿಗೆ ಆಶಾಭಂಗವನ್ನುಂಟುಮಾಡಲಿ. ಧನುಸ್ಸಿನ ಸಹಾಯದಿಂದ ನಾವು ದಿಗಂತಗಳಲ್ಲೂ ಶತ್ರುಗಳನ್ನು ಜಯಿಸುವಂತಾಗಲಿ.

॥ ವಿಶೇಷವಿಷಯಗಳು ॥

**ಧನುಃ** ಎಂಬ ಶಬ್ದಕ್ಕೆ ನಿರ್ವಚನವನ್ನು ಹೇಳುವ ಸಂದರ್ಭದಲ್ಲಿ ಯಾಸ್ಕರು ಈ ಋಕ್ಕಿಗೆ ಈ ರೀತಿ ನಿರ್ವಚನವನ್ನು ಹೇಳಿದಾರೆ—

**ಧನುಃ । ಧನುರ್ಧನ್ವತೇರ್ಗತಿಕರ್ಮಣಃ ವಧಕರ್ಮಣೋ ವಾ ಧನ್ವಂತ್ಯಸ್ಮಾದಿಷವಃ ॥ ತಸ್ಯೈಷಾ ಭವತಿ । ಧನ್ವನಾ ಗಾ ಧನ್ವನಾಜಿಂ ಜಯೇಮ ಧನ್ವನಾ ತೀವ್ರಾಃ ಸಮದೋ ಜಯೇಮ । ಧನುಃ ಶತ್ರೋರಪಕಾಮಂ ಕೃಣೋತಿ ಧನ್ವನಾಃ ಸರ್ವಾಃ ಪ್ರದಿಶೋ ಜಯೇಮ ॥ ಇತಿ ಸಾ ನಿಗದವ್ಯಾಖ್ಯಾತಾ । ಸಮದಃ ಸಮದೋ ವಾತ್ತೇಃ ಸಂಮದೋ ವಾ ಮದತೇಃ ॥**

(ನಿ. ೯-೧೭)

**ಧನುಃ**ಶಬ್ದವು, ಗಮನ ಅಥವಾ ಹೋಗು ಎಂಬರ್ಥವನ್ನು ಸೂಚಿಸುವ ಧನ್ವತಿಧಾತುವಿನಿಂದ ನಿಷ್ಪನ್ನವಾಗಬಹುದು ಅಥವಾ ಧನ್ವತಿಧಾತುವಿಗೆ ಕೊಲ್ಲು ಎಂಬ ಅರ್ಥವೂ ಇರುವುದು. ಆದ್ದರಿಂದ ಧನುಸ್ಸಿನಿಂದ ಬಾಣಗಳು ಬಿಡಲ್ಪಟ್ಟು ಶತ್ರುಗಳ ಬಳಿಗೆ ಹೋಗುವುದರಿಂದ ಧನುಸ್ಸೆಂದು ಹೆಸರು ಅಥವಾ ವಧಾರ್ಥದಲ್ಲಿ ಧನುಸ್ಸು ಶತ್ರುಗಳನ್ನು ಕೊಲ್ಲುವುದಕ್ಕೆ ಸಾಧನಭೂತವಾಗಿರುವುದರಿಂದ ಧನುಸ್ಸು ಎಂದೂ ಹೆಸರು. ಧನುಶ್ಶಬ್ದದ ಅರ್ಥವಿವರಣೆಗಾಗಿ **ಧನ್ವನಾ** ಎಂಬ ಪ್ರಕೃತ ಋಕ್ಕನ್ನೇ ಉದಾಹರಣೆಯಾಗಿ ತೆಗೆದುಕೊಂಡಿರುವರು. ಈ ಋಕ್ಕನ್ನು ಸುಮ್ಮನೆ ಓದುವುದರಿಂದಲೇ ಅರ್ಥವು ಸ್ಪಷ್ಟವಾಗಿರುವುದರಿಂದ ಇದಕ್ಕೆ ಹೆಚ್ಚು ವಿವರಣೆಯು ಅವಶ್ಯಕವಿಲ್ಲ. ಈ ಋಕ್ಕಿನಲ್ಲಿರುವ **ಸಮದ** ಶಬ್ದಕ್ಕೆ ಯುದ್ಧವೆಂದು ಅರ್ಥವಿರುವುದು **ಸಂ** ಎಂಬ ಉಪಸರ್ಗಸಹಿತವಾದ **ಅದ್** ತಿನ್ನು ಎಂಬ ಧಾತುವಿನಿಂದ **ಸಮದ** ಶಬ್ದವು ನಿಷ್ಪನ್ನವಾಗಿ ಈ ಯುದ್ಧದಲ್ಲಿ ಒಬ್ಬರನ್ನೊಬ್ಬರು ತಿನ್ನುವುದು ಎಂದರೆ ಧ್ವಂಸಮಾಡುವುದು, ನಾಶಮಾಡುವುದು, ಕೊಲ್ಲುವುದು ಇತ್ಯಾದಿ ಕಾರ್ಯಗಳಿರುವುದರಿಂದ **ಸಮದ** ಶಬ್ದಕ್ಕೆ ಯುದ್ಧವೆಂಬ ಅರ್ಥವು ರೂಢಿಯಲ್ಲಿ ಬಂದಿರುವುದು. ಅಥವಾ ಕೋಪದಿಂದ ಹೋರಾಡು ಎಂಬರ್ಥವುಳ್ಳ ಮದತಿಧಾತುವಿನಿಂದಲಾದರೂ ನಿಷ್ಪನ್ನವಾಗಬಹುದು. ಆಗಲೂ ಮದಶಬ್ದಕ್ಕೆ **ಸಂ** ಎಂಬ ಉಪಸರ್ಗವು ಸೇರಿ **ಸಂಮದ** ಅಥವಾ **ಸಮದ** ಎಂದಾಗಿ **ಸಮದ**ಶಬ್ದಕ್ಕೆ ಪರಸ್ಪರ ಕೋಪದಿಂದ ಹೋರಾಡುವ ಯುದ್ಧ ಎಂಬರ್ಥವಿರುವುದು.

## English Translation.

May we conquer the cattle (of the enemies) with the bow : with the bow may we be victorious in battle : may we overcome our fierce-exulting

(enemies) with the bow : may the bow disappoint the hope of the foe: may we subdue with the bow all (hostile) countries.

॥ ಸಂಹಿತಾಪಾಠಃ ॥

ವಕ್ಷ್ಯಂತೀವೇದಾ ಗನೀಗಂತಿ ಕರ್ಣಂ ಪ್ರಿಯಂ ಸಖಾಯಂ ಪರಿಷಸ್ವಜಾನಾ।
ಯೋಷೇವ ಶಿಂಕ್ತೇ ವಿತತಾಧಿ ಧನ್ವಂಜ್ಯಾ ಇಯಂ ಸಮನೇ ಪಾರ-
ಯಂತೀ ॥ ೩ ॥

॥ ಪದಪಾಠಃ ॥

ವಕ್ಷ್ಯಂತೀಽಇವ । ಇತ್ । ಆ । ಗನೀಗಂತಿ । ಕರ್ಣಂ । ಪ್ರಿಯಂ । ಸಖಾಯಂ । ಪರಿಽಸಸ್ವಜಾನಾ ।
ಯೋಷಾಽಇವ । ಶಿಂಕ್ತೇ । ವಿಽತತಾ । ಅಧಿ । ಧನ್ವನ್ । ಜ್ಯಾ । ಇಯಂ । ಸಮನೇ । ಪಾರಯಂತೀ ॥

॥ ಸಾಯಣಭಾಷ್ಯಂ ॥

ಪೂರ್ವತ್ರ ಋಗ್ದ್ವಯೇನ ಕವಚಧನುಷೀ ಸ್ತುತೇ । ಅತ್ರ ಜ್ಯಾಸ್ತುತಿಃ । ಇಯಂ ಜ್ಯಾ ಸಮನೇ ಸಂಗ್ರಾಮೇ ಧನ್ವನ್ ಧನ್ವನಿ । ಅಧೀತಿ ಸಪ್ತಮ್ಯರ್ಥಾನುವಾದಃ । ವಿತತಾ ವಿಸ್ತೃತಾ ಪಾರಯಂತೀ ಪಾರಂ ನಯಂತೀ ಪ್ರಿಯಂ ಪ್ರಿಯಕರಂ ವಾಕ್ಯಂ ವಕ್ಷ್ಯಂತೀವ ಕರ್ಣಂ ಧನ್ವಿನೋ ರಾಜ್ಞಃ ಕರ್ಣಪ್ರದೇಶಮಾ ಗನೀಗಂತಿ । ಆಗಚ್ಛತಿ । ಇದಿತಿ ಪೂರಣಃ । ಯೋಷಾ ನಾರೀ ಸಖಾಯಂ ಪತಿಮಿವ ಪರಿಷಸ್ವಜಾನೇಷುಂ ಪರಿಷ್ವಜಮಾನಾ ಶಿಂಕ್ತೇ ಶಬ್ದಾಯತೇ ಚ । ತಥಾ ಚ ಯಾಸ್ಕಃ । ವಕ್ಷ್ಯಂತೀವಾಗಚ್ಛತಿ ಕರ್ಣಂ ಪ್ರಿಯಮಿವ ಸಖಾಯಮಿಷುಂ ಪರಿಷ್ವಜಮಾನಾ ಯೋಷೇವ ಶಿಂಕ್ತೇ ಶಬ್ದಂ ಕರೋತಿ ವಿತತಾಧಿ ಧನುಷಿ ಜ್ಯೇಯಂ ಸಮನೇ ಸಂಗ್ರಾಮೇ ಪಾರಯಂತೀ ಪಾರಂ ನಯಂತೀ । ನಿ.೯-೧೮ । ಇತಿ ॥

॥ ಪ್ರತಿಪದಾರ್ಥ ॥

**ಇಯಂ ಜ್ಯಾ**—ಧನುಸ್ಸಿನ ಈ ಹೆದೆಯು । **ಸಮನೇ**—ಸಂಗ್ರಾಮದಲ್ಲಿ । **ಧನ್ವನ್ ಅಧಿ**—ಧನುಸ್ಸಿನಲ್ಲಿ। **ವಿತತಾ**—ವಿಸ್ತೃತವಾಗಿ । **ಪಾರಯಂತೀ**—ಎರಡು ತುದಿಗಳನ್ನೂ ಭದ್ರವಾಗಿ ಸೇರಿ ಕಟ್ಟುತ್ತಾ । **ಪ್ರಿಯಂ**—ಪ್ರಿಯವಾಕ್ಯವನ್ನು । **ವಕ್ಷ್ಯಂತೀವ**—ಹೇಳುವುದೋ ಎಂಬಂತೆ । **ಕರ್ಣಂ**— ರಾಜನ ಕರ್ಣಪ್ರದೇಶವನ್ನು । **ಆ ಗನೀಗಂತಿ ಇತ್**—ಸಮೀಪಿಸುತ್ತದೆ । **ಸಖಾಯಂ**—ಪ್ರಿಯನಾದ ಪತಿಯನ್ನು । **ಪರಿಷ್ವಜಾನಾ**—ಆಲಿಂಗಿಸಿ ಮಾತನಾಡುವ । **ಯೋಷಾ ಇವ**—ಸ್ತ್ರೀಯಂತೆ । **ಶಿಂಕ್ತೇ**—ರಾಜನ ಕಿವಿಯಹತ್ತಿರ ಶಬ್ದಮಾಡುತ್ತದೆ.

॥ ಭಾವಾರ್ಥ ॥

ಧನುಸ್ಸಿನ ಈ ಹೆದೆಯು ಸಂಗ್ರಾಮದಲ್ಲಿ ವಿಸ್ತೃತವಾಗಿ ಬೆಳೆದು ಧನುಸ್ಸಿನ ಎರಡು ತುದಿಗಳನ್ನು ಸೇರಿ ಭದ್ರವಾಗಿ ಕಟ್ಟುತ್ತಾ ಪ್ರಿಯವಾಕ್ಯವನ್ನು ಹೇಳುವಂತೆ ಧನುಸ್ಸನ್ನು ಹಿಡಿದಿರುವ ರಾಜನ ಕರ್ಣಪ್ರದೇಶವನ್ನು

ಸಮೀಪಿಸುತ್ತದೆ. ಪ್ರಿಯನಾದ ಪತಿಯನ್ನು ಆಲಿಂಗಿಸಿ ಮಾತನಾಡುವ ಸ್ತ್ರೀಯರಂತೆ ರಾಜನ ಕಿವಿಯ ಹತ್ತಿರ ಶಬ್ದಮಾಡುತ್ತದೆ.

## English Translation.

This bowstring, drawn tight upon the bow, and making way in battle, repeatedly approaches the ear (of the warrior), as if embracing its friend (the arrow), and proposing to say something agreeable, as a woman whispers (to her husband).

### ॥ ವಿಶೇಷವಿಷಯಗಳು ॥

ಹಿಂದಿನ ಎರಡು ಋಕ್ಕುಗಳಲ್ಲಿ ಯುದ್ಧದಲ್ಲಿ ಉಪಯೋಗಿಸುವ ಕವಚ (Armour) ಮತ್ತು ಧನುಸ್ಸನ್ನು (Bow) ಸ್ತುತಿಸಲಾಗಿದೆ. ಈ ಋಕ್ಕಿನಲ್ಲಿ ಧನುಸ್ಸಿನ ಅಥವಾ ಬಿಲ್ಲಿನ ಹೆದೆಯನ್ನು ವರ್ಣಿಸಲಾಗಿರುವುದು. ಹೆದೆ ಯೆಂದರೆ ದೆಬ್ಬೆಗೆ ಕಟ್ಟಿರುವ ದಾರ ಅಥವಾ ಹಗ್ಗವು (Bow-string). ಈ ದಾರ ಅಥವಾ ಹಗ್ಗಕ್ಕೆ ಬದಲಾಗಿ ಚರ್ಮದ ಪಟ್ಟಿಯನ್ನಾಗಲೀ (thin shrip of a hide) ನರವನ್ನಾಗಲೀ ಉಪಯೋಗಿಸುವುದುಂಟು. ಇದು ಬಹಳ ಬಲವಾಗಿರಬೇಕು. ಮತ್ತು ಬಿಲ್ಲಿನ ದೆಬ್ಬೆಯು ಬಗ್ಗುವ ಸ್ವಭಾವವುಳ್ಳದ್ದಾಗಿಯೂ ಇರಬೇಕು. ಅತಿ ಪ್ರಾಚೀನಕಾಲದಿಂದಲೂ ಬಿಲ್ಲು, ಬಾಣಗಳು ಯುದ್ಧಾದಿಗಳಲ್ಲಿ ಉಪಯೋಗಿಸುವ ಮುಖ್ಯ ಆಯುಧಗಳಾಗಿವೆ. ಈಗಲೂ ಅನೇಕ ದೇಶಗಳಲ್ಲಿ ಬೆಟ್ಟಗುಡ್ಡಗಳಲ್ಲಿಯೂ, ಕಾಡುಗಳಲ್ಲಿಯೂ ವಾಸಿಸುವ ನಾಗರಿಕತೆ ಇಲ್ಲದ ಕಾಡುಜನರಿಗೆ ಬಿಲ್ಲು ಬಾಣಗಳೇ ಮುಖ್ಯವಾದ ಆಯುಧಗಳಾಗಿವೆ. ಇವುಗಳನ್ನು ಉಪಯೋಗಿಸುವುದರಲ್ಲಿ ಈ ಜನರು ಬಹಳ ಕುಶಲತೆಯನ್ನು ಪ್ರದರ್ಶಿಸುತ್ತಾರೆ. ಮತ್ತು ದೊಡ್ಡ ದೊಡ್ಡ ಮೃಗಗಳಾದ ಆನೆ ಮೊದಲಾದವುಗಳನ್ನು ಸಹ ಬಿಲ್ಲಿನಿಂದ ಕೊಲ್ಲುವುದೂ ಉಂಟು. ಅನೇಕ ಸಂದರ್ಭದಲ್ಲಿ ಬಾಣಗಳ ತುದಿಯನ್ನು ಕೆಲವುಜಾತಿ ಮೂಲಿಕೆಗಳಿಂದ ಸಿದ್ಧಪಡಿಸಿದ ರಸ ಅಥವಾ ವಿಷದಲ್ಲಿ ಅದ್ದಿ ಉಪಯೋಗಿಸುವುದೂ ಉಂಟು. ಕಾಡುಜನರಲ್ಲಿ ಇದು ಈಗಲೂ ರೂಢಿಯಲ್ಲಿದೆ. ಇಂತಹ ವಿಷಸಿಕ್ತವಾದ ಬಾಣವು ಬಹಳ ಕ್ರೂರವಾದ ವ್ರಣಾದಿಗಳನ್ನುಂಟುಮಾಡಿ ಶತ್ರುವನ್ನು ಬಹು ಬೇಗನೆ ಕೊಲ್ಲುವುದು. ಅನೇಕ ಸಂದರ್ಭಗಳಲ್ಲಿ ಇದಕ್ಕೆ ಸರಿಯಾದ ಪರಿಹಾರವನ್ನು ಮಾಡುವುದಕ್ಕೂ ಅವಕಾಶವಿರುವುದಿಲ್ಲ. ಈ ಪದ್ಧತಿಯೂ ಸಹ ಋಗ್ವೇದಕಾಲದಲ್ಲಿ ರೂಢಿಯಲ್ಲಿದ್ದಂತೆ ಈ ಸೂಕ್ತದ ೧೫ ನೇ ಋಕ್ಕಿನಲ್ಲಿ ಹೇಳಿರುವ ವಿಷಯದಿಂದ ಕಂಡುಬರುವುದು. ಇಂತಹ ವಿಷಸಿಕ್ತವಾದ ಬಾಣಗಳಿಂದ ಸಜ್ಜಿತರಾದ ಈ ದೇಶದ ಪೂರ್ವನಿವಾಸಿಗಳಾದ ಕಾಡುಜನರೊಡನೆ (ದಸ್ಯು) ಆರ್ಯಜನಾಂಗದವರು ಯುದ್ಧಮಾಡಬೇಕಾಗಿತ್ತು.

**ಇಯೆಂ ಜ್ಯಾ ಸಮನೇ ಧನ್ವನ್ ಅಧಿ ವಿತತಾ ಪಾರಯಂತೀ**—ಧನುಸ್ಸಿಗೆ ಕಟ್ಟಿರುವ ಈ ಹೆದೆಯು ಯುದ್ಧದಲ್ಲಿ ಠಂಕಾರಶಬ್ದವನ್ನು ಮಾಡುತ್ತಾ ಎಲ್ಲೆಲ್ಲಿಯೂ ಈ ಶಬ್ದದಿಂದ ವಿಸ್ತೃತವಾಗಿ ಹರಡಿದೆ. ಧನುಸ್ಸಿನ ಹೆದೆಯಲ್ಲಿ ಬಾಣವನ್ನು ಹೂಡಿ ಕಿವಿಯವರೆಗೆ ಎಳೆದು ಶತ್ರುಗಳ ಮೇಲೆ ಗುರಿಯಿಟ್ಟು ಬಿಡುವಾಗ ಒಂದು ವಿಧವಾದ ಠಂಕಾರಶಬ್ದವನ್ನು ಮಾಡುವುದು. ಯುದ್ಧದಲ್ಲಿ ಉಭಯಸೇನೆಗಳಲ್ಲಿ ನೂರಾರು, ಸಾವಿರಾರು ಧನುಸ್ಸುಗಳು ಈ ಶಬ್ದಮಾಡುವುದರಿಂದ ಈ ಶಬ್ದವು ಎಲ್ಲೆಲ್ಲಿಯೂ ಹರಡಿ ಯುದ್ಧಭೂಮಿಯನ್ನೆಲ್ಲಾ ವ್ಯಾಪಿಸುವುದು ಎಂದು ಮುಖ್ಯಾಭಿಪ್ರಾಯವು.

**ಪ್ರಿಯಂ ವಕ್ಷ್ಯಂತೀವ ಇತ್ ಆ ಗನೀಗಂತಿ ಕರ್ಣಂ**— **ಪ್ರಿಯಕರಂ ವಾಕ್ಯಂ ವಕ್ಷ್ಯಂತೀವ ಧನ್ವಿನೋ ರಾಜ್ಞಃ ಕರ್ಣಪ್ರದೇಶಂ ಆಗಚ್ಛಂತಿ** । ಧನುಸ್ಸಿನಲ್ಲಿ ಬಾಣವನ್ನು ಹೂಡಿ ಶತ್ರುಗಳಮೇಲೆ ಬಿಡುವಾಗ ಆ ಬಾಣವನ್ನು ಕಿವಿಯವರೆವಿಗೂ ಎಳೆದು ಬಿಡುವುದು ರೂಢಿಯು. ಎಷ್ಟೆಷ್ಟು ಹಿಂದಕ್ಕೆ ಎಳೆದುಬಿಟ್ಟರೆ ಅಷ್ಟಷ್ಟು ಬಲವಾಗಿಯೂ, ವೇಗವಾಗಿಯೂ ಬಾಣವು ಶತ್ರುಸಮೀಪಕ್ಕೆ ಹೋಗಿ ಶತ್ರುವನ್ನು ಕೊಲ್ಲುವುದು. ಈ ರೀತಿ ಬಾಣ ವನ್ನು ಹೂಡಿ ಕಿವಿಯವರೆಗೆ ಎಳೆಯುದವುದನ್ನು ಋಷಿಯು ಎರಡುವಿಧವಾದ ಉಪಮಾನಗಳಿಂದ ಬಹುಚೆನ್ನಾಗಿ ವರ್ಣಿಸಿದ್ದಾನೆ. ಧನುಸ್ಸಿನಲ್ಲಿ ಹೂಡಿರುವ ಬಾಣವು ಧನುರ್ಧಾರಿಯಾದ ರಾಜನ ಕಿವಿಯಲ್ಲಿ ಪ್ರಿಯಕರವಾದ ಮಾತನ್ನು ಹೇಳುವಂತೆ ಅಥವಾ ಹೇಳುವುದಕ್ಕಾಗಿ ಕರ್ಣಪ್ರದೇಶದ ಸಮೀಪಕ್ಕೆ ಹೋಗುತ್ತದೆ ಎಂದು ಮೊದಲನೆಯ ಉಪಮಾನದ ಅರ್ಥವು. ಲೋಕವ್ಯವಹಾರದಲ್ಲಿ ಹಿತಕರವಾದ ಒಳ್ಳೆಯ ಮಾತನ್ನು ಹೇಳುವವರು ಪಕ್ಕದಲ್ಲಿರಬಹುದಾದ ಇತರರಿಗೆ ಕೇಳಿಸದಂತೆ ಕಿವಿಯ ಹತ್ತಿರಹೋಗಿ ಅವನೊಬ್ಬನಿಗೆ ಮಾತ್ರ ಕೇಳಿಸುವಂತೆ ಹೇಳುವುದು ರೂಢಿಯಷ್ಟೆ. ಅದರಂತೆ ಧನುಸ್ಸನ್ನು ಹಿಡಿದಿರುವ ರಾಜನಿಗೆ ಪ್ರಿಯವಾಕ್ಯನ್ನು ಹೇಳುವುದಕ್ಕಾಗಿ ಅವನ ಕರ್ಣಪ್ರದೇಶಕ್ಕೆ ಹೋಗಿ ಶಬ್ದಮಾಡುತ್ತಿದೆಯೋ ಎಂಬಂತೆ ಬಾಣಸಹಿತವಾದ ಈ ಹೆದೆಯು ಕಾಣುತ್ತಿದೆ ಎಂದು ಈ ಉಪಮಾನದ ಮುಖ್ಯಾಭಿಪ್ರಾಯವು.

**ಸಖಾಯಂ ಪರಿಷಸ್ವಜಾನಾ ಯೋಷೇವ ಶಿಂಕ್ತೇ**— ಈಗ ಇನ್ನೊಂದು ಉಪಮಾನವನ್ನು ಹೇಳುವರು. ಪ್ರಿಯನಾದ ತನ್ನ ಪತಿಯನ್ನು ಆಲಂಗಿಸಿಕೊಂಡು ಅವನ ಕಿವಿಯಲ್ಲಿ ರಹಸ್ಯವಾದ ಮಾತನ್ನು ಹೇಳುವ ತರುಣಸ್ತ್ರೀ ಯಂತೆ ಈ ಧನುಸ್ಸಿನ ಹೆದೆಯು ರಾಜನ ಕಿವಿಯ ಸಮೀಪಕ್ಕೆ ಹೋಗಿ ಅಲ್ಲಿ ಪ್ರಿಯಕರವಾದ ಶಬ್ದವನ್ನುಂಟುಮಾಡು ತ್ತದೆ ಎಂದು ಈ ವಾಕ್ಯದ ಅಭಿಪ್ರಾಯವು. ಅಥವಾ ಈ ಎರಡು ವಾಕ್ಯಗಳನ್ನು ಒಂದೇ ವಾಕ್ಯದಂತೆ ಪರಿಗಣಿಸಿ ಅರ್ಥವನ್ನೂ ಹೇಳಬಹುದು. ಯುದ್ಧದಲ್ಲಿ ರಾಜನು ಅಥವಾ ಯೋಧನು ಧನುಸ್ಸಿನ ಹೆದೆಯಲ್ಲಿ ಬಾಣವನ್ನು ಹೂಡಿ ತನ್ನ ಕಿವಿಯವರೆಗೆ ಎಳೆದು ಶತ್ರುವಿನ ಮೇಲೆ ಬಿಡುವಾಗ ಉಂಟಾಗುವ ಧ್ವನಿಯು, ತನ್ನ ಪ್ರಿಯಸಖಿಯಾದ ಪತ್ನಿಯು ತನ್ನನ್ನು ಆಲಂಗಿಸಿಕೊಂಡು ರಹಸ್ಯವೂ, ಪ್ರಿಯಕರವೂ ಆದ ಮಾತುಗಳನ್ನು ಇತರರಿಗೆ ಕೇಳಿಸದಂತೆ ರಹಸ್ಯವಾಗಿ ಹೇಳುವುದಕ್ಕಾಗಿ ಕಿವಿಯ ಸಮೀಪಕ್ಕೆ ಹೋಗಿ ಹೇಳುವಂತೆ ಇರುವುದು ಎಂಬ ಅಭಿಪ್ರಾಯವನ್ನೂ ಹೇಳಬಹುದು.

ಯಾಸ್ಕರು **ಜ್ಯಾ** ಶಬ್ದಕ್ಕೆ ನಿರ್ವಚನವನ್ನು ಹೇಳುವುದಕ್ಕಾಗಿ ಈ ಋಕ್ಕನ್ನೇ ಉದಾಹರಣೆಯಾಗಿ ತೆಗೆದು ಕೊಂಡು ಈ ಋಕ್ಕಿಗೆ ನಿರ್ವಚನವನ್ನು ಹೇಳಿರುವರು—

> **ಜ್ಯಾ । ಜ್ಯಾ ಜಯತೇರ್ವಾ, ಜಿನಾತೇರ್ವಾ, ಪ್ರಜಾವಯತೀಷೂನಿತಿ ವಾ । ತಸ್ಯೈಷಾ ಭವತಿ । ವಕ್ಷ್ಯಂತೀವೇದಾ ಗನೀಗಂತಿ ಕರ್ಣಂ ಪ್ರಿಯಂ ಸಖಾಯಂ ಪರಿಷಸ್ವಜಾನಾ । ಯೋಷೇವ ಶಿಂಕ್ತೇ ವಿತತಾಧಿ ಧನ್ವನ್ ಜ್ಯಾ ಇಯಂ ಸಮನೇ ಪಾರಯಂತೀ ॥ ವಕ್ಷ್ಯಂತೀವಾಗಚ್ಛತಿ ಕರ್ಣಂ ಪ್ರಿಯಮಿವ ಸಖಾಯಮಿಷುಂ ಪರಿಷ್ವಜಾನಾ ಯೋಷೇವ ಶಿಂಕ್ತೇ ಶಬ್ದಂ ಕರೋತಿ ವಿತತಾಧಿ ಧನುಷಿ ಜ್ಯೇಯಂ ಸಮನೇ ಸಂಗ್ರಾಮೇ ಪಾರಯಂತೀ ಪಾರಂ ನಯಂತೀ ॥**
>
> (ನಿ. ೯-೧೮)

ಜ್ಯಾ (ಹೆದೆ) ಎಂಬ ಶಬ್ದವು ಜಿ (ಜಯ್) ಎಂಬ ಧಾತುವಿನಿಂದಾಗಲಿ, ಗೆಲ್ಲು ಎಂಬರ್ಥವುಳ್ಳ ಜಿನಾತಿ ಧಾತುವಿನಿಂದ ಲಾಗಲಿ ನಿಷ್ಪನ್ನವಾಗಬಹುದು. ಅಥವಾ ಈ ಹೆದೆಯಿಂದ ಬಾಣಗಳು ಬೇಗಬೇಗನೆ ಹೊರಹೊರಡುವುದರಿಂದ ಇದಕ್ಕೆ ಜ್ಯಾ ಎಂಬ ಹೆಸರು. ಈ ಋಕ್ಕಿನಲ್ಲಿ (ವಕ್ಷ್ಯಂತೀವ ಎಂಬ ಪ್ರಕೃತ ಋಕ್ಕು) ಇದರ ಅರ್ಥಪ್ರಯೋಗಗಳನ್ನು ವಿವರಿಸಲಾಗಿದೆ. ಈ ಹೆದೆಯಲ್ಲಿ ಬಾಣವನ್ನು ಹೂಡಿ ಕಿವಿಯವರೆಗೆ ಎಳೆದು ಬಿಡುವಾಗ ಈ ಹೆದೆಯು ಪ್ರಿಯ ವಾಕ್ಯವನ್ನು ಹೇಳುವುದಕ್ಕಾಗಿ ಬಿಡುವವನ ಕರ್ಣಪ್ರದೇಶವನ್ನು ಸಮೀಪಿಸುತ್ತದೆ. ಅಥವಾ ತನ್ನ ಪ್ರಿಯಸಖನನ್ನು ಅಥವಾ ಪ್ರಿಯಪತಿಯನ್ನು ಆಲಿಂಗನಮಾಡಿಕೊಂಡು ಗುಟ್ಟಾದ ಮಾತನ್ನು ಕಿವಿಯಲ್ಲಿ ಹೇಳುವ ಯುವತಿಯಂತೆ ಅವ್ಯಕ್ತಶಬ್ದವನ್ನು ಮಾಡುತ್ತದೆ. ಸ್ತ್ರೀಯರ ಧ್ವನಿಯು ಪುರುಷರಂತೆ ಗಡುಸಾಗಿಲ್ಲದೆ ಮೃದುವಾಗಿಯೂ ಸ್ವಲ್ಪ ಮಟ್ಟಿಗೆ ಕೀಚುಧ್ವನಿಯಂತೆಯೂ ಇರುತ್ತದೆ. ಈ ಹೆದೆಯ ಧ್ವನಿಯೂ ಅದರಂತೆ ಹೆಂಗಸಿನ ಧ್ವನಿಯಂತೆ ಕೀಚು ಧ್ವನಿಯಿಂದ ಕೂಡಿ ಮೃದುಮಧುರವಾಗಿ ಇರುತ್ತದೆ. ಬಾಣವನ್ನು ಹೂಡಿ ಎಳೆಯುವಾಗ ಈ ಹೆದೆಯೂ ವಿಸ್ತೃತ ವಾಗಿ (ಉದ್ದವಾಗಿ) ಹರಡುತ್ತದೆ (stretches) **ಸಮನೇ** ಎಂದರೆ ಯುದ್ಧ ಅಥವಾ ಕದನ. ಇಂತಹ ಧನುಸ್ಸಿನ ಹೆದೆಯು ಯುದ್ಧಾದಿಗಳಲ್ಲಿ ನಮಗೆ ಜಯವನ್ನು ಗಳಿಸಿಕೊಟ್ಟು ಗಂಡಾಂತರಗಳಿಂದ ಪಾರುಮಾಡಲಿ ಎಂದು ನಿರ್ವಚನದ ಮುಖ್ಯಾಭಿಪ್ರಾಯವು.

॥ ಸಂಹಿತಾಪಾಠಃ ॥

ತೇ ಆಚರಂತೀ ಸಮನೇವ ಯೋಷಾ ಮಾತೇವ ಪುತ್ರಂ ಬಿಭೃತಾ-
ಮುಪಸ್ಥೇ ।
ಅಪ ಶತ್ರೂನ್ವಿಧ್ಯತಾಂ ಸಂವಿದಾನೇ ಆರ್ತ್ನೀ ಇಮೇ ವಿಷ್ಫುರಂತೀ ಅಮಿ-
ತ್ರಾನ್ ॥ ೪ ॥

॥ ಪದಪಾಠಃ ॥

ತೇ ಇತಿ । ಆಚರಂತೀ ಇತ್ಯಾಽಚರಂತೀ । ಸಮನಾಽಇವ । ಯೋಷಾ । ಮಾತಾಽಇವ । ಪುತ್ರಂ ।
ಬಿಭೃತಾಂ । ಉಪಽಸ್ಥೇ ।
ಅಪ । ಶತ್ರೂನ್ । ವಿಧ್ಯತಾಂ । ಸಂವಿದಾನೇ ಇತಿ ಸಂಽವಿದಾನೇ । ಆರ್ತ್ನೀ ಇತಿ । ಇಮೇ ಇತಿ ।
ವಿಸ್ಫುರಂತೀ ಇತಿ ವಿಽಸ್ಫುರಂತೀ । ಅಮಿತ್ರಾನ್ ॥ ೪ ॥

॥ ಸಾಯಣಭಾಷ್ಯಂ ॥

ಅತ್ರ ಧನುಷ್ಕೋಟ್ಯೋಃ ಸ್ತುತಿಃ । ತೇ ಧನುಷ್ಕೋಟ್ಯೌ ಸಮನೇವ ಸಮನಸ್ಕೇವ ಯೋಷಾ ಪತಿಸಮೀಪಂ ನ ತ್ಯಜತಿ ತದ್ವದಾಚರಂತೀ ಅಭಿತಶ್ಚರಂತ್ಯಾವುಪಸ್ಥ ಉಪಸ್ಥಾನೇ ಮಾತೇವ ಪುತ್ರಂ

ಯಥಾ ಮಾತಾ ಪುತ್ರಂ ಧಾರಯತಿ ತದ್ವದ್ಬಿಭೃತಾಂ। ರಾಜಾನಂ ಧಾರಯೇತಾಂ। ಕಿಂಚೇಮೇ ಧನುಷ್ಕೋಟ್ಯೌ ಸಂವಿದಾನೇ ಸಂಜಾನಾನೇ ವಿಸಂವಾದರಹಿತೇ ಆರ್ತ್ನೀ ಗಚ್ಛಂತ್ಯೌ ॥ ಋ ಗತಾವಿತಿ ಧಾತೋಶ್ಛಾರ್ಯರ್ಗಿಭ್ಯಾಂ ನಿರಿತಿ ಬಾಹುಲಕಾತ್ ನಿಪ್ರತ್ಯಯೋ ಧಾತೋರಾರ್ತಭಾವಶ್ಚ । ತತಃ ಕೃದಿಕಾರಾದಕ್ತಿನಃ। ಪಾ. ೪-೧-೪೫। ಇತಿ ಙೀಷ್। ದ್ವಿವಚನಸ್ಯ ಪೂರ್ವಸವರ್ಣಃ॥ ಅಸ್ಯ ರಾಜ್ಞೋಽಮಿತ್ರಾನ್ ವಿಷ್ಫುರಂತೀ ವಿಹಿಂಸಂತ್ಯೌ ಶತ್ರೂಂಶ್ಚಾಪ ವಿಧ್ಯತಾಂ। ತಥಾ ಚ ಯಾಸ್ಕಃ। ತೇ ಆಚರಂತ್ಯೌ ಸಮನಸಾವಿವ ಯೋಷೇ ಮಾತೇವ ಪುತ್ರಂ ಬಿಭೃತಾಮುಪಸ್ಥ ಉಪಸ್ಥಾನೇಽಪವಿಧ್ಯತಾಂ ಶತ್ರೂನ್ ಸಂವಿದಾನೇ ಆರ್ತ್ನ್ಯಾವಿಮೇ ವಿಘ್ನತ್ಯಾವಮಿತ್ರಾನ್। ನಿ. ೯-೪೦। ಇತಿ॥

॥ ಪ್ರತಿಪದಾರ್ಥ ॥

**ಸಮನಾ**—ಪ್ರಿಯಮನಸ್ಕಳಾದ । **ಯೋಷಾ ಇವ**—ಪತ್ನಿಯಂತೆ । **ಆಚರಂತೀ**—ಸರ್ವದಾ ಸಮೀಪದಲ್ಲಿಯೇ ಇರುತ್ತಲೂ। **ಮಾತಾ**—ತಾಯಿಯು । **ಉಪಸ್ಥೇ**—ಸಮೀಪದಲ್ಲಿಯೇ ಇರುವ। **ಪುತ್ರಂ ಇವ**—(ತೊಡೆಯಮೇಲಿರುವ) ಪುತ್ರನನ್ನು ಧರಿಸುವಂತೆಯೂ। **ತೇ**—ಈ ಧನುಷ್ಕೋಟಿಗಳು (ಅಗ್ರ ಭಾಗಗಳು)। **ಬಿಭೃತಾಂ**—ರಾಜನನ್ನು ಧರಿಸಲಿ। **ಇಮೇ**—ಇದೇ ಧನುಷ್ಕೋಟಿಗಳು। **ಸಂವಿದಾನೇ**—ಒಂದೇ ಪ್ರಕಾರವಾಗಿ। **ಆರ್ತ್ನೀ**—ಚಲಿಸುತ್ತಾ। **ಅಮಿತ್ರಾನ್**—ವಿರೋಧಿಗಳನ್ನು। **ವಿಷ್ಫುರಂತೀ**—ಹಿಂಸಿಸುತ್ತಾ। **ಶತ್ರೂನ್**—ಶತ್ರುಗಳನ್ನು। **ಅಪ ವಿಧ್ಯತಾಂ**—ದೂರಕ್ಕೆ ಓಡಿಸಲಿ.

॥ ಭಾವಾರ್ಥ ॥

ಪ್ರಿಯಮನಸ್ಕಳಾದ ಪತ್ನಿಯಂತೆ ಸರ್ವದಾ ಸಮೀಪದಲ್ಲಿಯೇ ಇರುತ್ತಲೂ, ತಾಯಿಯು ತನ್ನ ತೊಡೆಯ ಮೇಲಿರುವ ಪುತ್ರನನ್ನು ಧರಿಸುವಂತೆಯೂ ಈ ಧನುಸ್ಸಿನ ಅಗ್ರಭಾಗಗಳು ರಾಜನನ್ನು ಧರಿಸಲಿ. ಇದೇ ಧನುಷ್ಕೋಟಿಗಳು ಒಂದೇ ಪ್ರಕಾರವಾಗಿ ಚಲಿಸುತ್ತಾ ವಿರೋಧಿಗಳನ್ನು ಹಿಂಸಿಸುತ್ತಾ ಶತ್ರುಗಳನ್ನು ದೂರಕ್ಕೆ ಓಡಿಸಲಿ.

## English Translation.

May the two extremities of the bow, acting consentaneously, like a wife sympathizing (with her husband), uphold (the warrior), as a mother nurses her child upon her lap; and may they, moving concurrently, and harassing the foe, scatter his enemies.

॥ ವಿಶೇಷವಿಷಯಗಳು ॥

ಈ ಋಕ್ಕಿನಲ್ಲಿ ಆರ್ತ್ನೀ ಎಂಬ ಧನುಸ್ಸಿನ ಎರಡು ತುದಿಗಳನ್ನು ಸ್ತುತಿಸಲಾಗಿದೆ. ಋಷಿಯು ಇವುಗಳನ್ನು ವರ್ಣಿಸುವಾಗ ಸ್ತ್ರೀಯರ ಉಪಮಾನವನ್ನೇ ಉದಾಹರಣೆಯಾಗಿ ಕೊಟ್ಟಿರುವನು. ಈ ಋಕ್ಕಿಗೂ ಯಾಸ್ಕರು ನಿರ್ವಚನವನ್ನು ಹೇಳಿದ್ದಾರೆ—

**ಆರ್ತ್ನೀ । ಆರ್ತ್ನೀ ಅರ್ತನ್ಯೌ ವಾರಣ್ಯೌ ವಾರಿಷಣ್ಯೌ ವಾ । ತಯೋರೇಷಾ ಭವತಿ॥ ತೇ ಆಚರಂತೀ ಸಮನೇವ ಯೋಷಾ ಮಾತೇವ ಪುತ್ರಂ ಬಿಭೃತಾಮುಪಸ್ಥೇ । ಅಪ ಶತ್ರೂನ್ವಿಧ್ಯತಾಂ ಸಂವಿ- ದಾನೇ ಆರ್ತ್ನೀ ಇಮೇ ವಿಷ್ಫುರಂತೀ ಅಮಿತ್ರಾನ್ ॥ ತೇ ಆಚರಂತ್ಯೌ ಸಮನಸಾವಿವ ಯೋಷೇ ಮಾತೇವ ಪುತ್ರಂ ಬಿಭೃತಾಮುಪಸ್ಥ ಉಪಸ್ಥಾನೇಽಪವಿಧ್ಯತಾಂ ಶತ್ರೂನ್ ಸಂವಿದಾನೇ ಆರ್ತ್ನ್ಯಾವಿಮೇ ವಿಘ್ನತ್ಯಾವಮಿತ್ರಾನ್ ॥** (ನಿ. ೯-೪೦)

ಈ ಋಕ್ಕಿನಲ್ಲಿಯೂ ಎರಡು ಉಪಮಾನಗಳಿವೆ. ಮೊದಲು ಆರ್ತ್ನೀ ಎಂಬ ಶಬ್ದಕ್ಕೆ ರೂಪನಿಷ್ಪತ್ತಿಯನ್ನು ಹೇಳಲಾಗುವುದು. ಆರ್ತ್ನೀ ಎಂಬುದು ಪ್ರಥಮಾವಿಭಕ್ತಿಯ। ದ್ವಿವಚನಾಂತಪದವು. ಹೋಗು ಎಂಬರ್ಥವಿರುವ ಋ-ಗತೌ ಎಂಬ ಧಾತುವಿನಿಂದಾಗಲಿ, (ಅರ್ತನ್ಯೌ) ಅಥವಾ ಮರದಿಂದ (ಮರ ಅಥವಾ ಬಿದಿರುದೆಬ್ಬೆ) ನಿರ್ಮಿಸ ಲ್ಪಟ್ಟಿರುವುದರಿಂದಾಗಲಿ (ಅರಣ್ಯೌ) ಅಥವಾ ಶತ್ರುಗಳನ್ನು ಕೊಲ್ಲು ಎಂಬರ್ಥವಿರುವ ಅರಿಷಣ್ಯೌ ಎಂಬ ಶಬ್ದದಿಂದ ಲಾಗಲಿ ಆರ್ತ್ನೀ ಶಬ್ದವು ನಿಷ್ಪನ್ನವಾಗಬಹುದು. ಎಂದರೆ, ಈ ಧನುಸ್ಸಿನ ತುದಿಗಳು (ಆರ್ತ್ನಿಗಳು) ಬಾಣಗಳನ್ನು ಧನುಸ್ಸಿನಿಂದ ಹೊರಡಿಸುವುದರಿಂದ ಹೋಗು ಎಂಬರ್ಥವುಳ್ಳ ಋಧಾತುವಿನಿಂದ ನಿಷ್ಪನ್ನವಾಗಬಹುದು. ಅಥವಾ ಅರಣ್ಯೌ ಎಂದರೆ ಅರಣ್ಯದಲ್ಲಿ ಉತ್ಪನ್ನವಾದ ವೃಕ್ಷವಿಶೇಷದಿಂದ ಈ ಧನುಸ್ಸನ್ನು ನಿರ್ಮಿಸುತ್ತಾರಾದ್ದರಿಂದ ಈ ಧನು ಸ್ಸಿನ ತುದಿಗಳು ವೃಕ್ಷಮಯವಾಗಿದೆ ಎಂಬರ್ಥವನ್ನು ಸೂಚಿಸುವ ಅರಣಿಶಬ್ದದಿಂದ ನಿಷ್ಪನ್ನವಾಗಬಹುದು. ಅಥವಾ ವಾರಿಷಣ್ಯೌ ಎಂಬ ಶಬ್ದದಲ್ಲಿ ಸೂಚಿತವಾಗಿರುವ ಅರ್ಥದಂತೆ ಅರಿಗಳನ್ನು ಎಂದರೆ ಶತ್ರುಗಳನ್ನು ಈ ಬಿಲ್ಲಿನ ತುದಿಗಳ ಸಹಾಯದಿಂದ ಹೊರ ಹೊರಟ ಬಾಣಗಳು ಕೊಲ್ಲುವುದರಿಂದ ಆರ್ತ್ನೀ ಎಂಬ ಹೆಸರು ಬಂದಿರುವುದೆಂದು ನಿರ್ವಚನದ ಅಭಿಪ್ರಾಯವು.

ಈ ಆರ್ತ್ನೀ ಎಂಬ ಶಬ್ದದ ಅರ್ಥ ಮತ್ತು ಪ್ರಯೋಗಗಳನ್ನು ವಿಶದಪಡಿಸುವುದಕ್ಕಾಗಿ **ತೇ ಆಚರಂತೀ** ಎಂಬ ಪ್ರಕೃತ ಋಕ್ಕನ್ನೇ ಉದಾಹರಣೆಯಾಗಿ ತೆಗೆದುಕೊಂಡು ಇದಕ್ಕೆ ನಿರ್ವಚನವನ್ನು ಹೇಳಿದ್ದಾರೆ. ಧನುಸ್ಸಿನಲ್ಲಿ ಮೇಲಿನ ಮತ್ತು ಕೆಳಗಿನ ಎಂಬ ಎರಡು ತುದಿಗಳಿರುವವು. ಈ ಎರಡು ತುದಿಗಳೂ ಇಬ್ಬರು ಸ್ತ್ರೀಯರಂತಿವೆ. ಒಬ್ಬ ಪತಿಗೆ ಇಬ್ಬರು ಪತ್ನಿಯರಿದ್ದು ಅವರಿಬ್ಬರೂ ತಮ್ಮಿಬ್ಬರಿಗೂ ಸಮನಾಗಿ ಸೇರಿದ ಪತಿಯನ್ನು ಉಪಚರಿಸುವಾಗ ಯಾವ ರೀತಿ ತಮ್ಮ ಪತಿಯಲ್ಲಿ ಇಬ್ಬರ ಮನಸ್ಸೂ ಒಂದೇ ವಿಧವಾಗಿ ಸಹಕರಿಸಿ ಆಚರಿಸುವುದೋ ಅದರಂತೆ ಧನುಸ್ಸಿನ ಎರಡು ತುದಿಗಳೂ ಹೆದೆಯಿಂದ ಬಾಣವನ್ನು ಬಿಡುವಾಗ ಸಹಕರಿಸಿ ಕೆಲಸಮಾಡುವವು. ಎರಡು ತುದಿಗಳೂ ಒಂದೇ ಸಮನಾಗಿ, ಒಂದೇ ಮಟ್ಟಕ್ಕೆ ಬಗ್ಗುವವು. ಒಂದು ಹೆಚ್ಚಾಗಿಯೂ ಮತ್ತೊಂದು ಕಮ್ಮಿಯಾಗಿಯೂ ಬಗ್ಗುವ ಸಂಭವ ವಿಲ್ಲ. ಪರಸ್ಪರ ಸಹಕಾರವಿದ್ದಂತೆ ಎರಡು ತುದಿಗಳೂ ಏಕಕಾಲದಲ್ಲಿ ಒಂದೇ ಮಟ್ಟಕ್ಕೆ ಬಗ್ಗಿ ಬಾಣವನ್ನು ಧನುಸ್ಸಿ ನಿಂದ ಹೊರಹೊರಡುವಂತೆ ಸಹಾಯಮಾಡುವವು. ಈ ವಿಷಯವನ್ನೇ ಋಷಿಯು **ತೇ (ಆರ್ತ್ನೀ) ಆಚರಂತೀ ಸಮನೇವ ಯೋಷಾ** ಎಂಬ ಉಪಮಾನ ವಾಕ್ಯದಿಂದ ವಿವರಿಸಿರುವನು. ಇದು ಮೊದಲನೆಯ ಉಪಮಾನವು.

**ಮಾತೇವ ಪುತ್ರಂ ಬಿಭೃತಾಮುಪಸ್ಥೇ** ಇತ್ಯಾದಿ ವಾಕ್ಯವು ಎರಡನೆಯ ಉಪಮಾನವು. ತಾಯಿ ಯಾದವಳು ತನ್ನ ಶಿಶುವನ್ನು ತನ್ನ ತೊಡೆಗಳ ಮೇಲೆ ಧರಿಸುವಂತೆ ಈ ಧನುಸ್ಸಿನ ತುದಿಗಳು ತಮ್ಮ ಶಕ್ತಿಸಾಮರ್ಥ್ಯ ಗಳಿಂದ ರಾಜನ ಶತ್ರುಗಳನ್ನು ಯುದ್ಧದಲ್ಲಿ ಹಿಂಸಿಸುತ್ತಾ ಅವರನ್ನು ಕೊಲ್ಲುವುದಕ್ಕೆ ಸಹಾಯಮಾಡಿ ತಮ್ಮ ಪುತ್ರ ಪ್ರಾಯನಾದ ರಾಜನನ್ನು ಧರಿಸುವವು ಎಂದರೆ ರಕ್ಷಿಸುವವು. ತಾಯಿಯು ತನ್ನ ಮಗುವನ್ನು ನಾನಾ ತೊಂದರೆ

ಗಳಿಂದಲೂ ಅಪಾಯಗಳಿಂದ ರಕ್ಷಿಸುವವಳು. ಆದರಂತೆ ಈ ಧನುಸ್ಸಿನ ತುದಿಗಳು ರಾಜನಿಗೆ ತಾಯಿಯಂತಿದ್ದು ಅವನಿಗೆ ತೊಂದರೆಯನ್ನುಂಟುಮಾಡುವ ಶತ್ರುಜನರನ್ನು ತಮ್ಮ ಸಹಾಯದಿಂದ ಹೊರಹೊರಡುವ ಬಾಣಗಳ ಮೂಲಕ ಯುದ್ಧದಲ್ಲಿ ಹಿಂಸಿಸುತ್ತಾ ಅವರನ್ನು ಸಂಹರಿಸಿ ರಾಜನನ್ನು ಕಷ್ಟದಿಂದ ರಕ್ಷಿಸುವವು ಎಂದು ನಿರ್ವಚನದ ಮತ್ತು ಉಪಮಾನವಾಕ್ಯದ ಮುಖ್ಯಾಭಿಪ್ರಾಯವು.

॥ ಸಂಹಿತಾಪಾಠಃ ॥

ಬ॒ಹ್ವೀ॒ನಾಂ ಪಿ॒ತಾ ಬ॒ಹುರ॑ಸ್ಯ ಪು॒ತ್ರಶ್ಚಿ॒ಶ್ಚಾ ಕೃ॑ಣೋತಿ॒ ಸಮ॑ನಾವ॒ಗತ್ಯ॑ ।
ಇ॒ಷು॒ಧಿಃ ಸಂಕಾಃ॒ ಪೃತ॑ನಾಶ್ಚ॒ ಸರ್ವಾಃ॑ ಪೃ॒ಷ್ಠೇ ನಿನ॑ದ್ಧೋ ಜಯತಿ॒
ಪ್ರಸೂ॑ತಃ ॥ ೫ ॥

॥ ಪದಪಾಠಃ ॥

ಬ॒ಹ್ವೀ॒ನಾಂ । ಪಿ॒ತಾ । ಬ॒ಹುಃ । ಅ॒ಸ್ಯ॒ । ಪು॒ತ್ರಃ । ಚಿ॒ಶ್ಚಾ । ಕೃ॒ಣೋ॒ತಿ॒ । ಸಮ॑ನಾ । ಅ॒ವ॒ಽಗತ್ಯ॑ ।
ಇ॒ಷು॒ಽಧಿಃ । ಸಂಕಾಃ॑ । ಪೃತ॑ನಾಃ । ಚ॒ । ಸರ್ವಾಃ॑ । ಪೃ॒ಷ್ಠೇ । ನಿಽನ॑ದ್ಧಃ । ಜ॒ಯ॒ತಿ॒ । ಪ್ರಽಸೂ॑ತಃ ॥ ೫ ॥

॥ ಸಾಯಣಭಾಷ್ಯಂ ॥

ಇಷುಧಿರತ್ರ ಸ್ತೂಯತೇ । ಇಷುಧಿರ್ಬಹ್ವೀನಾಮಿಷೂಣಾಂ ಪಿತಾ ಭವತಿ । ರಕ್ಷಣಹೇತುತ್ವಾ-ತ್ಪಿತೇತ್ಯುಚ್ಯತೇ । ಇಷುಶಬ್ದಸ್ಯೋಭಯಲಿಂಗತ್ವಾದ್ಬಹ್ವೀನಾಮಿತಿ ಪ್ರಯೋಗಃ । ಅಸ್ಯೇಷುಧೇಃ ಪುತ್ರ ಇಷುರ್ಬಹುರ್ಭವತಿ । ಬಹವ ಇಷವೋ ಹೀಷುಧೌ ನಿಧೀಯಂತೇ । ಇಷೂಣಾಂ ನಿಧಾನತ್ವಾದಿಷುಧಿಃ । ತಥಾ ಚ ಯಾಸ್ಕಃ । ಇಷುಧಿರಿಷೂಣಾಂ ನಿಧಾನಂ । ನಿ. ೯-೧೩ । ಇತಿ । ಚಿಶ್ಚಾ ಕೃಣೋತಿ । ಚಿಶ್ಚೇತಿ ಶಬ್ದಾನುಕೃತಿಃ । ಇಷುಷೂದ್ಧ್ರಿಯಮಾಣೇಷ್ವಿಷುಧಿಶ್ಚಿಶ್ಚಾಶಬ್ದಂ ಕರೋತಿ । ಕಿಂಚೇಷುಧಿಃ ಪೃಷ್ಠೇ ನಿನದ್ಧೋ ಧನ್ವಿನೋ ರಾಜ್ಞಃ ಪೃಷ್ಠಭಾಗೇ ಬದ್ಧಃ ಸಮನಾ ಯುದ್ಧಾನ್ಯವಗತ್ಯ ಪ್ರಾಪ್ಯ ಪ್ರಸೂತಃ ಪ್ರಸುವನ್ ॥ ಕರ್ತರಿ ನಿಷ್ಠಾ ॥ ಇಷೂನ್ಪ್ರೇರಯನ್ ಸಂಕಾಃ । ಸಹ ಕಾಯಂತಿ ಶಬ್ದಾಯಂತ ಇತಿ ಸಂಕಾಃ ಪೃತನಾಃ । ಸರ್ವಾಃ ಸೇನಾ ಜಯತಿ ॥

॥ ಪ್ರತಿಪದಾರ್ಥ ॥

**ಇಷುಧಿಃ**—ಬತ್ತಳಿಕೆಯು । **ಬಹ್ವೀನಾಂ**—ಅನೇಕ ಬಾಣಗಳಿಗೆ । **ಪಿತಾ**—ತಂದೆಯಂತೆ ಆಶ್ರಯ ಸ್ಥಾನವಾಗಿರುತ್ತದೆ । **ಅಸ್ಯ**—ಈ ಬತ್ತಳಿಕೆಯ । **ಪುತ್ರಃ**—ಪುತ್ರರೂಪನಾದ ಬಾಣವು । **ಬಹುಃ**—ಅನೇಕ ಸಂಖ್ಯೆ ಯುಳ್ಳದ್ದಾಗಿರುತ್ತದೆ । **ಚಿಶ್ಚಾ**—ಬಾಣಗಳನ್ನು ಹೊರಕ್ಕೆ ತೆಗೆಯುವಾಗ ಚಿಃ ಚಿಃ ಎಂಬ ಶಬ್ದವನ್ನು । **ಕೃಣೋತಿ**—ಮಾಡುತ್ತದೆ । **ಪೃಷ್ಠೇ**—ಧನ್ವಿಯ ಬೆನ್ನುಭಾಗದಲ್ಲಿ । **ನಿನದ್ಧಃ**—ಕಟ್ಟಲ್ಪಟ್ಟು । **ಸಮನಾ**—ಯುದ್ಧಗಳನ್ನು ।

**ಅವಗತ್ಯ**—ಸಮಿಾಪಿಸಿ । **ಪ್ರಸೂತಃ**—ಬಾಣಗಳನ್ನು ಪ್ರೇರಿಸುತ್ತಾ । **ಸಂಕಾಃ**—ಶಬ್ದಮಾಡುತ್ತಿರುವ । **ಸರ್ವಾಃ ಪೃತನಾಃ**—ಸಕಲ ಸೇನೆಗಳನ್ನೂ । **ಜಯತಿ**—ಜಯಿಸುತ್ತದೆ ।

॥ ಭಾವಾರ್ಥ ॥

ಇದೇ ಬತ್ತಳಿಕೆಯು ಅನೇಕಬಾಣಗಳಿಗೆ ತಂದೆಯಂತೆ ಆಶ್ರಯಸ್ಥಾನವಾಗಿರುತ್ತದೆ. ಈ ಬತ್ತಳಿಕೆಯ ಪುತ್ರರೂಪನಾದ ಬಾಣವು ಅನೇಕ ಸಂಖ್ಯೆಯುಳ್ಳದ್ದಾಗಿರುತ್ತದೆ. ಬಾಣಗಳನ್ನು ಹೊರಕ್ಕೆ ತೆಗೆಯುವಾಗ ಶಬ್ದವನ್ನು ಮಾಡುತ್ತದೆ. ಧನ್ವಿಯ ಬೆನ್ನುಭಾಗದಲ್ಲಿ ಕಟ್ಟಲ್ಪಟ್ಟು ಯುದ್ಧಗಳನ್ನು ಸಮಿಾಪಿಸಿ ಬಾಣಗಳನ್ನು ಪ್ರೇರಿಸುತ್ತ, ಶಬ್ದಮಾಡುತ್ತಿರುವ ಸಕಲಸೇನೆಗಳನ್ನೂ ಜಯಿಸುತ್ತದೆ.

## English Translation.

The quiver, the parent of many, of whom many are the sons, clangs as it enters into the battle : slung at the back (of the warrior), prolific (of its shafts), it overcomes all shouting hosts.

॥ ವಿಶೇಷವಿಷಯಗಳು ॥

ಈ ಋಕ್ಕಿನಲ್ಲಿ **ಇಷುಧಿಃ** ಎಂದರೆ ಬಾಣಗಳನ್ನಿಡುವ ಬತ್ತಳಿಕೆಯು ವರ್ಣಿತವಾಗಿದೆ. **ಈ ಋಕ್ಕಿಗೂ** ಯಾಸ್ಕರು ನಿರ್ವಚನವನ್ನು ಹೇಳಿದಾರೆ—

> **ಇಷುಧಿಃ । ಇಷುಧಿರಿಷೂಣಾಂ ನಿಧಾನಂ । ತಸ್ಯೈಷಾ ಭವತಿ । ಬಹ್ವೀನಾಂ ಪಿತಾ ಬಹುರಸ್ಯ ಪುತ್ರಶ್ಚಿಶ್ಚಾ ಕೃಣೋತಿ ಸಮನಾವಗತ್ಯ । ಇಷುಧಿಃ ಸಂಕಾಃ ಪೃತನಾಶ್ಚ :ಸರ್ವಾಃ ಪೃಷ್ಠೇ ನಿನದ್ಧೋ ಜಯತಿ ಪ್ರಸೂತಃ ॥ ಬಹೂನಾಂ ಪಿತಾ ಬಹುರಸ್ಯ ಪುತ್ರ ಇತೀಷೂನಭಿಪ್ರೇತ್ಯ ಪ್ರಸ್ಮಯತ ಇವಾಪಾವ್ರಿಯಮಾಣಃ ಶಬ್ದಾನುಕರಣಂ ವಾ । ಸಂಕಾಃ ಸಚತೇಃ ಸಂಪೂರ್ವಾದ್ವಾ ಕಿರತೇಃ । ಪೃಷ್ಠೇ ನಿನದ್ಧೋ ಜಯತಿ । ಪ್ರಸೂತ ಇತಿ ವ್ಯಾಖ್ಯಾತಂ ॥**
>
> (ನಿ. ೯-೧೪)

ಇಷು ಎಂದರೆ ಬಾಣವು. ಆದ್ದರಿಂದ **ಇಷುಧಿರಿಷೂಣಾಂ ನಿಧಾನಂ**—ಬಾಣಗಳನ್ನು ಇಡುವ ಚರ್ಮದ **ಚೀಲಕ್ಕೆ** ಅಥವಾ ಬತ್ತಳಿಕೆಗೆ ಇಷುಧಿಃ ಎಂದು ಹೆಸರು. ಇಷುಶಬ್ದಕ್ಕೆ ಪುಲ್ಲಿಂಗಸ್ತ್ರೀಲಿಂಗಗಳೆರಡರಲ್ಲಿಯೂ ಪ್ರಯೋಗವಿರುವುದರಿಂದ ಈ ಋಕ್ಕಿನಲ್ಲಿ ಬಹ್ವೀನಾಂ (ಇಷೂಣಾಂ) ಎಂಬ ಸ್ತ್ರೀಲಿಂಗಶಬ್ದವಿಶೇಷಣವೂ ಪುತ್ರಃ ಎಂಬ ಪುಲ್ಲಿಂಗವಾಚಕಶಬ್ದವೂ ಉಪಯೋಗಿಸಲ್ಪಟ್ಟದೆ. **ಬಹ್ವೀನಾಂ ಪಿತಾ** ಎಂದರೆ **ಬಹೂನಾಂ ಪಿತಾ** ಇಲ್ಲಿ ಬಹ್ವೀ ಎಂದರೆ ಬಹಳವಾಗಿರುವ ಬಾಣಗಳು. ಈ ಇಷುಧಿಯಲ್ಲಿ ಅಥವಾ ಬತ್ತಳಿಕೆಯಲ್ಲಿ ಬಹಳ ಬಾಣಗಳಿರುವವು. ಅವುಗಳಿಗೆ ಈ ಇಷುಧಿಯು ಪಿತಾ-ಎಂದರೆ ತಂದೆ ಅಥವಾ ಪಾಲಕನಂತಿರುವುದು. ಬಾಣಗಳ ಚೂಪಾದ ಅಲಗು (ಮೊನೆ) ಗಳನ್ನು ಮೊಂಡವಾಗದಂತೆ ಕಾಪಾಡುವುದರಿಂದ ಪಾಲಕನೆಂದು ಹೇಳಲ್ಪಡುವುದು. ಆದ್ದರಿಂದ ಬಹ್ವೀನಾಂ ಪಿತಾ ಬಹುರಸ್ಯ ಪುತ್ರಃ ಎಂಬ ವಾಕ್ಯಕ್ಕೆ ಈ ಇಷುಧಿಯು ಅನೇಕ ಪುತ್ರಿಯರಿಗೆ (ಬಾಣಗಳಿಗೆ) ತಂದೆ ಅಥವಾ ಪಾಲಕನಾಗಿರುವನು ಮತ್ತು ಈ ಇಷುಧಿಗೆ ಪುತ್ರರು (ಬಾಣಗಳು) ಅನೇಕರಿರುವರು ಎಂದರ್ಥವು. ಇಲ್ಲಿ ಪುತ್ರಶಬ್ದವು

ಜಾತ್ಯೇಕವಚನವನ್ನು ಸೂಚಿಸುವುದರಿಂದ ಈ ಶಬ್ದಕ್ಕೆ ಅನೇಕಪುತ್ರರು ಎಂದು ಬಹುವಚನಾರ್ಥವನ್ನು ಹೇಳಬೇಕು. ಇಷುಶಬ್ದಕ್ಕೆ ಸ್ತ್ರೀಲಿಂಗ ಮತ್ತು ಪುಲ್ಲಿಂಗಗಳಲ್ಲಿ ಪ್ರಯೋಗವಿರುವುದರಿಂದ ಇಲ್ಲಿ ಸ್ತ್ರೀಲಿಂಗಶಬ್ದಕ್ಕೆ ಪುತ್ರಿಯರೆಂದೂ ಪುಲ್ಲಿಂಗಶಬ್ದಕ್ಕೆ ಪುತ್ರರೆಂದೂ ಅರ್ಥಮಾಡಿದೆ. ಲಿಂಗವ್ಯತ್ಯಾಸವಿದ್ದರೂ ಅರ್ಥವ್ಯತ್ಯಾಸವಿಲ್ಲ. ಬಾಣಗಳೆಂದೇ ಅರ್ಥವು. ಹೇಗೆಂದರೆ ಒಬ್ಬ ಪುರುಷನಿಗೆ ಅನೇಕ ಪುತ್ರಿ ಅಥವಾ ಹೆಣ್ಣುಮಕ್ಕಳು ಮಾತ್ರ ಇದ್ದರೂ, ಅವನಿಗೆ ಅನೇಕ ಮಕ್ಕಳ ತಂದೆ ಎಂದು ಹೇಳುವರು ಅಥವಾ ಒಬ್ಬ ಪುರುಷನಿಗೆ ಅನೇಕ ಪುತ್ರರು ಅಥವಾ ಗಂಡುಮಕ್ಕಳಿದ್ದರೂ ಅವನಿಗೂ ಅನೇಕಮಕ್ಕಳ ತಂಡೆ ಅಥವಾ ಇವನಿಗೆ ಅನೇಕಮಂದಿ ಮಕ್ಕಳಿರುವರು ಎಂದು ಹೇಳುವರು. ಮಕ್ಕಳು ಗಳು ಗಂಡಾಗಲಿ, ಹೆಣ್ಣಾಗಲಿ ಅವರನ್ನು ಮಕ್ಕಳುಗಳೆಂದೇ ಭಾವಿಸಿ ಮಕ್ಕಳ ತಂದೆ ಎಂದುಮಾತ್ರ ಹೇಳುವಂತೆ ಇಲ್ಲಿ ಇಷುಶಬ್ದವು ಪುಲ್ಲಿಂಗದಲ್ಲಿ ಉಪಯೋಗಿಸಿರಲಿ ಅಥವಾ ಸ್ತ್ರೀಲಿಂಗದಲ್ಲಿ ಉಪಯೋಗಿಸಿರಲಿ, ಅರ್ಥಮಾತ್ರ ಒಂದೇ ಆಗಿರುವುದರಿಂದ ಅವುಗಳನ್ನು ಇಡುವ ಚೀಲಕ್ಕೆ **ಇಷುಧಿಃ** ಎಂಬ ಹೆಸರು ಪ್ರಸಿದ್ಧವಾಗಿರುವುದು. ಈ ಬತ್ತಳಿಕೆಯಿಂದ ಯುದ್ಧಕಾಲದಲ್ಲಿ ಬಾಣಗಳನ್ನು ಬೇಗಬೇಗನೆ ಹೊರಕ್ಕೆ ಒಂದೊಂದಾಗಿ ತೆಗೆಯುವಾಗ **ಚಿಃ ಚಿಃ** ಎಂದು ಒಂದು ವಿಧವಾದ ಶಬ್ದವುಂಟಾಗುವುದು. ಈ ಶಬ್ದದಿಂದ ಬತ್ತಳಿಕೆಯು (ಕಿಲಕಿಲನೆ) ನಗುತ್ತಿರುವುದೋ ಎಂಬ ಭಾವನೆ ಯುಂಟಾಗುವುದು. ಇದನ್ನೇ ಋಷಿಯು **ಚಿಶ್ಚಾ ಕೃಣೋತಿ** ಎಂಬ ವಾಕ್ಯದಿಂದ ವರ್ಣಿಸಿರುವನು. ಅಥವಾ **ಚಿಶ್ಚಾ-ಕೃಣೋತಿ** ಎಂಬ ವಾಕ್ಯಕ್ಕೆ ಇಸುಧಿಯು **ಚಿಃ ಚಿಃ** ಎಂದು ಅನುಕರಣಶಬ್ದವನ್ನು ಮಾಡುತ್ತಿರುವುದು ಎಂಬರ್ಥವನ್ನಾದರೂ ಹೇಳಬಹುದು. **ಚಿಶ್ಚಾ** ಎಂದರೆ **ಚಿಃ ಚಿಃ** ಎಂದು ಅನುಕರಣಶಬ್ದವು. ಈ ಋಕ್ಕಿನಲ್ಲಿರುವ **ಸಂಕಾಃ** ಎಂಬ ಶಬ್ದವು ಸಂಕಟಪಡು ಎಂಬರ್ಥವಿರುವ ಸಚತಿಧಾತುವಿನಿಂದಾಗಲಿ ಅಥವಾ ಚದುರಿಸು ಎಂಬರ್ಥವುಳ್ಳ **ಸಂ** ಎಂಬ ಉಪಸರ್ಗಪೂರ್ವಕವಾದ ಕಿರತಿಧಾತುವಿನಿಂದಲಾಗಲಿ ನಿಷ್ಪನ್ನವಾಗಬಹುದು. ಯುದ್ಧದಲ್ಲಿ ನಾನಾವಿಧ ಆಯುಧಗಳ ಪ್ರಹಾರದಿಂದ ಸಂಕಟಪಡುವುದೂ, ಶತ್ರುಗಳ ಏಟಿಗೆ ಹೆದರಿ ನಾನಾದಿಕ್ಕುಗಳಿಗೆ ಚದರಿ ಓಡಿಹೋಗುವುದೂ ಸ್ವಾಭಾವಿಕವಾದ್ದರಿಂದ ಈ ಕಾರ್ಯಗಳು ಸಂಭವಿಸುವ ಸೇನೆಗಳಿಗೆ **ಸಂಕಾಃ** ಸೇನೆಗಳು ಎಂದರ್ಥವು ಅಥವಾ ಭಾಷ್ಯಕಾರರು ವಿವರಿಸಿರುವಂತೆ **ಸಹ ಕಾಯಂತಿ ಶಬ್ದಾಯಂತೆ ಇತಿ ಸಂಕಾಃ ಪೃತನಾಃ** ಎಂದರೆ ಯುದ್ಧಭೂಮಿಯಲ್ಲಿ ಒಟ್ಟಿಗೆ ಕಲೆತು ವೀರಗರ್ಜನೆ, ನೋವಿನಿಂದ ನರಳುವುದು ಮೊದಲಾದ ಶಬ್ದಗಳನ್ನು ಮಾಡುವುದರಿಂದ **ಸಂಕಾಃ** ಎಂದರೆ ಸೇನೆಗಳು ಎಂದೂ ಅರ್ಥಮಾಡಬಹುದು. **ಪೃಷ್ಠೇ ನಿನದ್ಧೋ ಜಯತಿ ಪ್ರಸೂತಃ**—ಯುದ್ಧಮಾಡುವಾಗ ಯೋಧರು ಬಿಲ್ಲಿಸಿಂದ ಬಾಣಗಳನ್ನು ಶತ್ರುವಿನ ಮೇಲೆ ಪ್ರಯೋಗಿಸುವಾಗ ಬೇಗಬೇಗನೆ ಬಾಣಗಳು ತಮ್ಮ ಕೈಸೇರಬೇಕಾದುದು ಅವಶ್ಯಕವಾದ್ದರಿಂದ ಅವರು ಬಾಣಗಳಿರುವ ಈ ಬತ್ತಳಿಕೆಯನ್ನು ತಮ್ಮ ಹಿಂಭಾಗದಲ್ಲಿ ಬೆನ್ನಿಗೆ ಕಟ್ಟಿಕೊಂಡು ಅದರಿಂದ ಬಾಣಗಳನ್ನು ಒಂದೊಂದಾಗಿ ಎಳೆದುಕೊಂಡು ಬಿಲ್ಲಿನ ಹೆದೆಗೆ ಹೂಡಿ ಶತ್ರುವಿನ ಮೇಲೆ ಪ್ರಯೋಗಿಸುವುದು ರೂಢಿಯು. ಆದ್ದರಿಂದ ಇಲ್ಲಿ ಬತ್ತಳಿಕೆಯನ್ನು ಬೆನ್ನಿಗೆ ಕಟ್ಟಿಕೊಂಡಿರುವುದು ಎಂದು ಹೇಳಿದೆ. ಇಂತಹ ಬತ್ತಳಿಕೆಯು ಯುದ್ಧದಲ್ಲಿ ಯೋಧನನ್ನು ಯುದ್ಧದಲ್ಲಿ ಪ್ರೇರಿಸಿ ಉತ್ಸಾಹಗೊಳಿಸುತ್ತಾ ಅದನ್ನು ಉಪಯೋಗಿಸುವ ಭಟನಿಗೆ ಜಯವನ್ನುಂಟುಮಾಡುವುದು ಎಂದು ಮುಖ್ಯಾಭಿಪ್ರಾಯವು

॥ ಸಂಹಿತಾಪಾಠಃ ॥

ರಥೇ᳚ ತಿಷ್ಠ᳚ನ್ನಯತಿ ವಾ॒ಜಿನಃ᳚ ಪು॒ರೋ᳚ ಯತ್ರ᳚ಯತ್ರ ಕಾ॒ಮಯ॑ತೇ ಸುಷಾ॒ರಥಿಃ᳚ ।

ಅಭೀಶೂನಾಂ ಮಹಿಮಾನಂ ಪನಾಯತ ಮನಃ ಪಶ್ಚಾದನು ಯಚ್ಛಂತಿ

ರಶ್ಮಯಃ ॥ ೬ ॥

॥ ಪದಪಾಠಃ ॥

ರಥೇ । ತಿಷ್ಠನ್ । ನಯತಿ । ವಾಜಿನಃ । ಪುರಃ । ಯತ್ರಽಯತ್ರ । ಕಾಮಯತೇ । ಸುಽಸಾರಥಿಃ ।

ಅಭೀಶೂನಾಂ । ಮಹಿಮಾನಂ । ಪನಾಯತ । ಮನಃ । ಪಶ್ಚಾತ್ । ಅನು । ಯಚ್ಛಂತಿ । ರಶ್ಮಯಃ ॥ ೬॥

॥ ಸಾಯಣಭಾಷ್ಯಂ ॥

ಅತ್ರ ಪೂರ್ವಾರ್ಧೇ ಸಾರಥಿಸ್ತುತಿರುತ್ತರಾರ್ಧೇಽಭೀಶೂನಾಂ ಸ್ತುತಿಃ । ಸುಷಾರಥಿಃ ಶೋಭನಸಾರಥೀ ರಥೇ ತಿಷ್ಠನ್ ಪುರಃ ಪುರಸ್ತಾದ್ವರ್ತಮಾನಾನ್ವಾಜಿನೋಽಶ್ವಾನ್ಯತ್ರ ಯತ್ರ ನೇತುಂ ಕಾಮಯತೇ ತತ್ರ ತತ್ರ ನಯತಿ । ಯೇ ರಥೇ ರಶ್ಮಯೋಽಶ್ವಗ್ರೀವಾಭ್ಯಾಂ ವ್ಯಾಪ್ಯ ವರ್ತಮಾನಾಃ ಪಾಶಾಃ ಪಶ್ಚಾತ್ ರಥಸ್ಯ ಪೃಷ್ಠಭಾಗೇ ವಿದ್ಯಮಾನಾ ಆಶ್ವಾನ್ ಮನಃ ಸಾರಥೇರ್ಮನೋಽನುಕೂಲಮನು ಯಚ್ಛಂತಿ । ನಿಯಚ್ಛಂತಿ । ತೇಷಾಮಭೀಶೂನಾಂ ರಶ್ಮೀನಾಂ ಮಹಿಮಾನಂ ಮಹತ್ತ್ವಂ ಪನಾಯತ । ಹೇ ಜನಾಃ ಸ್ತುತ । ತಥಾ ಚ ಯಾಸ್ಕಃ । ರಥೇ ತಿಷ್ಠನ್ನಯತಿ ವಾಜಿನಃ ಪುರಸ್ತಾತ್ಸತೋ ಯತ್ರ ಯತ್ರ ಕಾಮಯತೇ ಸುಷಾರಥಿಃ ಕಲ್ಯಾಣಸಾರಥಿರಭೀಶೂನಾಂ ಮಹಿಮಾನಂ ಪೂಜಯತ ಮನಃ ಪಶ್ಚಾತ್ಸತೋಽನುಯಚ್ಛಂತಿ ರಶ್ಮಯಃ । ನಿ. ೯-೧೬ । ಇತಿ ॥

॥ ಪ್ರತಿಪದಾರ್ಥ ॥

**ಸುಸಾರಥಿಃ**—ಉತ್ತಮನಾದ ಸಾರಥಿಯು । **ರಥೇ**—ರಥದಲ್ಲಿ । **ತಿಷ್ಠನ್**—ಕುಳಿತವನಾಗಿ । **ಪುರಃ**—ತನ್ನ ಮುಂಭಾಗದಲ್ಲಿರುವ । **ವಾಜಿನಃ**—ಅಶ್ವಗಳನ್ನು । **ಯತ್ರಯತ್ರ**—ತಾನು ಎಲ್ಲೆಲ್ಲಿಗೆ ಹೋಗಬೇಕೆಂದು । **ಕಾಮಯತೇ**—ಅಪೇಕ್ಷಿಸುವನೋ ಅಲ್ಲೆಲ್ಲಾ । **ನಯತಿ**—ಹೊಡೆಯುತ್ತಾನೆ । **ರಶ್ಮಯಃ**—ಆ ಕುದುರೆಗಳ ರಶ್ಮಿಗಳು (ಲಗಾಮು) । **ಪಶ್ಚಾತ್**—ರಥದ ಪೃಷ್ಠಭಾಗಕ್ಕೆ ಯೋಜಿತವಾದ ಅಶ್ವಗಳನ್ನು । **ಮನಃ**—ಸಾರಥಿಯ ಮನಸ್ಸಂಕಲ್ಪಕ್ಕನುಗುಣವಾಗಿ । **ಅನು ಯಚ್ಛಂತಿ**—ನಿಯಮಿಸುತ್ತವೆ (ಎಲೈ ಸ್ತೋತೃಗಳೇ) । **ಅಭೀಶೂನಾಂ**—ಈ ರಶ್ಮಿಗಳ (ಹಗ್ಗ ಅಥವಾ ಲಗಾಮು) । **ಮಹಿಮಾನಂ**—ಮಹತ್ವವನ್ನು । **ಪನಾಯತ**—ಸ್ತುತಿಸಿರಿ.

॥ ಭಾವಾರ್ಥ ॥

ಉತ್ತಮನಾದ ಸಾರಥಿಯು ರಥದಲ್ಲಿ ಕುಳಿತವನಾಗಿ ತನ್ನ ಮುಂಭಾಗದಲ್ಲಿರುವ ಅಶ್ವಗಳನ್ನು ತಾನು ಎಲ್ಲಿಗೆ ಹೋಗಬೇಕೆಂದರೆ ಅಲ್ಲಿಗೆಲ್ಲಾ ಹೊಡೆಯುತ್ತಾನೆ. ಆ ಕುದುರೆಗಳ ಪಾಶಗಳು ರಥದ ಪೃಷ್ಠಭಾಗಕ್ಕೆ ಯೋಜಿತವಾದ ಅಶ್ವಗಳನ್ನು ಸಾರಥಿಯ ಮನಸ್ಸಂಕಲ್ಪನುಗುಣವಾಗಿ ನಿಯಮಿಸುತ್ತವೆ. ಎಲೈ ಸ್ತೋತೃಗಳೇ, ಈ ರಶ್ಮಿಗಳ (ಲಗಾಮುಗಳ) ಮಹತ್ವವನ್ನು ಸ್ತುತಿಸಿರಿ.

## English Translation.

The skilful charioteer, standing in the car, drives his horses before him wherever he will : praise the efficacy of the reins; for the reins from the back (of the car compel the steeds) to follow the intention of the driver).

॥ ವಿಶೇಷವಿಷಯಗಳು ॥

ಈ ಋಕ್ಕಿನ ಪೂರ್ವಾರ್ಧದಲ್ಲಿ ಸಾರಥಿಯನ್ನೂ ಉತ್ತರಾರ್ಧದಲ್ಲಿ ಅಶ್ವಗಳ ಕಡಿವಾಣ ಅಥವಾ ಲಗಾಮುಗಳನ್ನೂ ಸ್ತುತಿಸಲಾಗಿದೆ. ಯಾಸ್ಕರು ಈ ಋಕ್ಕಿಗೆ ನಿರ್ವಚನವನ್ನು ಹೇಳುತ್ತಾ—

**ಅಭೀಶವೋ ವ್ಯಾಖ್ಯಾತಾಃ । ತೇಷಾಮೇಷಾ ಭವತಿ । ರಥೇ ತಿಷ್ಠನ್ನಯತಿ ವಾಜಿನಃ ಪುರೋ ಯತ್ರ ಯತ್ರ ಕಾಮಯತೇ ಸುಷಾರಥಿಃ । ಅಭೀಶೂನಾಂ ಮಹಿಮಾನಂ ಪನಾಯತ ಮನಃ ಪಶ್ಚಾದನು ಯಚ್ಛಂತಿ ರಶ್ಮಯಃ ॥ ರಥೇ ತಿಷ್ಠನ್ನಯತಿ ವಾಜಿನಃ ಪುರಸ್ತಾತ್ ಸತೋ ಯತ್ರ ಯತ್ರ ಕಾಮಯತೇ । ಸುಷಾರಥಿಃ ಕಲ್ಯಾಣಸಾರಥಿಃ । ಅಭೀಶೂನಾಂ ಮಹಿಮಾನಂ ಪೂಜಯಾಮಿ ಮನಃ ಪಶ್ಚಾತ್ ಸಂತೋಽನುಯಚ್ಛಂತಿ ರಶ್ಮಯಃ ॥** (ನಿ. ೯-೧೬)

ಎಂದು ಹೇಳಿದಾರೆ. ರಥವನ್ನು ನಡೆಸುವ ಸಾರಥಿಯು ರಥದಲ್ಲಿ ಕುಳಿತುಕೊಂಡೇ ರಥದ ಮುಂಭಾಗದಲ್ಲಿ ಹೂಡಿರುವ ಕುದುರೆಗಳನ್ನು ತಾನು ಎಲ್ಲೆಲ್ಲಿಗೆ ಹೋಗಬೇಕೋ ಅಲ್ಲಲ್ಲಿಗೆ ಒಯ್ಯುತ್ತಾನೆ ಎಂದರೆ ಹೋಗುವಂತೆ ಪ್ರೇರಿಸುತ್ತಾನೆ. ಈ ಸಾರಥಿಯು ಕುದುರೆಗಳನ್ನು ಹತೋಟಿಯಲ್ಲಿಟ್ಟುಕೊಂಡು ನಡೆಸುವುದರಲ್ಲಿ ಕುಶಲನು, ಚತುರನು (skilful, well-trained). ರಥದಲ್ಲಿ ಸಾರಥಿಯು ಹಿಂಭಾಗದಲ್ಲಿ ಕುಳಿತಿದ್ದು ಅವನ ಮುಂದೆ ಅಶ್ವಗಳಿರುವವು. ಹೀಗಿರುವಾಗ ಆ ಕುದುರೆಗಳನ್ನು (ಸಂಜ್ಞಾದಿಗಳಿಂದ ಅಥವಾ ಶಬ್ದಗಳಿಂದ ಪ್ರಚೋದಿಸಿ) ಬೇಕಾದ ಕಡೆಗೆ ನಡೆಯುವಂತೆ ಮಾಡಲು ಹೇಗೆ ಸಾಧ್ಯವು ಎಂದರೆ ಸಾರಥಿಯು ಕುದುರೆಗಳನ್ನು ಪ್ರೇರಿಸುವುದಕ್ಕಾಗಿ ಸಂಜ್ಞೆಗಳನ್ನಾಗಲಿ, ಶಬ್ದಗಳನ್ನಾಗಲಿ ಉಪಯೋಗಿಸುವುದಿಲ್ಲ. ಅವುಗಳಿಗೆ ಬದಲಾಗಿ ಕಡಿವಾಣ ಅಥವಾ ಲಗಾಮುಗಳನ್ನು (reins) ಉಪಯೋಗಿಸುವನು. ಈ ಲಗಾಮುಗಳಿಗೆ ಅಭೀಶು ಅಥವಾ ರಶ್ಮಿ, (ಹಗ್ಗ) ಎಂದು ಹೆಸರು. ಅಶ್ವಗಳನ್ನು ಕಟ್ಟಿರುವ ಈ ಲಗಾಮುಗಳು ಸಾರಥಿಯ ಕೈಯಲ್ಲಿರುವುದು. ಈ ಲಗಾಮುಗಳ ಚಲನವಲನೆಗಳಿಂದ ಸಾರಥಿಯು ತಾನು ಅಶ್ವಗಳ ಹಿಂದೆ ಕುಳಿತ್ತಿದ್ದರೂ ಅವುಗಳನ್ನು ತನಗೆ ಬೇಕಾದಕಡೆ ಹೋಗುವಂತೆ ಮಾಡಬಲ್ಲನು. ಲಗಾಮುಗಳ ಈ ವಿಧವಾದ ಮಹಿಮೆಯನ್ನು ಎಂದರೆ ಶಕ್ತಿಸಾಮರ್ಥ್ಯಗಳನ್ನು ನಾನು ಬಹಳವಾಗಿ ಪ್ರಶಂಸಿಸುತ್ತೇನೆ ಎಂದು ನಿರ್ವಚನದ ಮುಖ್ಯಾಭಿಪ್ರಾಯವು.

॥ ಸಂಹಿತಾಪಾಠಃ ॥

ತೀವ್ರಾನ್ಘೋಷಾನ್ಕೃಣ್ವತೇ ವೃಷಪಾಣಯೋಽಶ್ವಾ ರಥೇಭಿಃ ಸಹ ವಾಜ-
ಯಂತಃ ।
ಅವಕ್ರಾಮಂತಃ ಪ್ರಪದೈರಮಿತ್ರಾನ್ ಕ್ಷಿಣಂತಿ ಶತ್ರೂಁರನಪವ್ಯಯಂತಃ ॥೭॥

॥ ಪದಪಾಠಃ ॥

ತೀವ್ರಾನ್ । ಘೋಷಾನ್ । ಕೃಣ್ವತೇ । ವೃಷಽಪಾಣಯಃ । ಅಶ್ವಾಃ । ರಥೇಭಿಃ । ಸಹ । ವಾಜಯಂತಃ ।
ಅವಽಕ್ರಾಮಂತಃ । ಪ್ರಽಪದೈಃ । ಅಮಿತ್ರಾನ್ । ಕ್ಷಿಣಂತಿ । ಶತ್ರೂನ್ । ಅನಪಽವ್ಯಯಂತಃ ॥ ೭ ॥

॥ ಸಾಯಣಭಾಷ್ಯಂ ॥

ಅತ್ರಾಶ್ವಸ್ತುತಿಃ । ಅಶ್ವಾ ವೃಷಪಾಣಯಃ ಪಾಂಸೂನಾಂ ವರ್ಷಕಖುರಾ ರಥೇಭೀ ರಥೈಃ ಸಹ ವಾಜಯಂತೋ ವೇಗಮಾಚರಂತಸ್ತೀವ್ರಾನುಚ್ಚೈತರಾನ್ಘೋಷಾನ್ ಶಬ್ದಾನ್ ಕೃಣ್ವತೇ । ಕುರ್ವತೇ । ಕಿಂಚಾನಪವ್ಯಯಂತೋಽಪಲಾಯಮಾನಾ ಅಮಿತ್ರಾನ್ ಹಿಂಸಕಾನ್ ಶತ್ರೂನ್ ಪ್ರಪದೈಃ ಪಾದಾಗ್ರೈ-ರವಕ್ರಾಮಂತಃ ಕ್ಷಿಣಂತಿ । ಹಿಂಸಂತಿ ॥

॥ ಪ್ರತಿಪದಾರ್ಥ ॥

**ಅಶ್ವಾಃ**—ಅಶ್ವಗಳು । **ವೃಷ ಪಾಣಯಃ**—ಗೊರಸುಗಳಿಂದ ಧೂಳನ್ನೆಬ್ಬಿಸುತ್ತಲೂ । **ರಥೇಭಿಃ ಸಹ**—ರಥಗಳೊಡನೆ । **ವಾಜಯಂತಃ**—ಓಡುತ್ತಲೂ । **ತೀವ್ರಾನ್**— ಅತ್ಯಧಿಕವಾದ । **ಘೋಷಾನ್**—ಶಬ್ದಗಳನ್ನು । **ಕೃಣ್ವತೇ**—ಮಾಡುತ್ತವೆ । **ಅನಪವ್ಯಯಂತಃ**—ತಮ್ಮ ಮಾರ್ಗಗಳನ್ನು ಬಿಟ್ಟೋಡದೆ । **ಅಮಿತ್ರಾನ್**—ವಿರೋಧಿಗಳನ್ನೂ । **ಶತ್ರೂನ್**—ಶತ್ರುಗಳನ್ನೂ । **ಪ್ರಪದೈಃ**—ತಮ್ಮ ಕಾಲುಗಳ ಅಗ್ರಭಾಗಗಳಿಂದ (ಗೊರಸುಗಳಿಂದ) । **ಅವಕ್ರಾಮಂತಃ**—ತುಳಿಯುತ್ತಾ । **ಕ್ಷಿಣಂತಿ**— ಹಿಂಸಿಸುತ್ತವೆ.

॥ ಭಾವಾರ್ಥ ॥

ಅಶ್ವಗಳು ತಮ್ಮ ಗೊರಸುಗಳಿಂದ ಧೂಳನ್ನೆಬ್ಬಿಸುತ್ತಲೂ ರಥಗಳೊಡನೆ ಓಡುತ್ತಲೂ ಅತ್ಯಧಿಕವಾದ ಶಬ್ದಗಳನ್ನು ಮಾಡುತ್ತವೆ. ತಮ್ಮ ಮಾರ್ಗಗಳನ್ನು ಬಿಟ್ಟೋಡದೆ ವಿರೋಧಿಗಳನ್ನೂ, ಶತ್ರುಗಳನ್ನೂ ತಮ್ಮ ಕಾಲುಗಳ ಅಗ್ರಭಾಗಗಳಿಂದ ತುಳಿಯುತ್ತಾ ಹಿಂಸಿಸುತ್ತವೆ.

## English Translation.

The horses raising the dust with their hoofs, rushing on with the chariots, utter loud neighings, retreating not (from the charge), but trampling with their fore feet upon the enemies, they destroy them.

॥ ವಿಶೇಷವಿಷಯಗಳು ॥

ಈ ಋಕ್ಕಿನಲ್ಲಿ ಅಶ್ವಸ್ತುತಿ ಇರುವುದು. ಎಂದರೆ ಯುದ್ಧಭೂಮಿಯಲ್ಲಿ ಅಶ್ವಗಳ ಕಾರ್ಯಾಚರಣೆಯನ್ನು ವರ್ಣಿಸಿರುವುದು. ಯುದ್ಧಕಾಲದಲ್ಲಿ ಸಾರಥಿಗಳಿಂದ ಪ್ರೇರಿತವಾದ ರಥದ ಅಶ್ವಗಳು ವೇಗವಾಗಿ ಓಡುತ್ತಾ ಶತ್ರು ಸೇನೆಗಳ ಮೇಲೆ ನುಗ್ಗಿ ಹೋಗುವವು. ಹೀಗೆ ಮುನ್ನುಗ್ಗುವಾಗ ವೇಗಗಮನದಿಂದ ಭೂಮಿಯಲ್ಲಿರುವ ಧೂಳು ಮೇಲಕ್ಕೇಳುವುದು. ಎಂದರೆ ಅನೇಕ ಕುದುರೆಗಳ ಗೊರಸುಗಳಿಂದ ಭೂಮಿಯ ಧೂಳು ಮೇಲೇಳುವುದು. ಮತ್ತು

ಅಶ್ವಗಳು ಅತ್ಯುತ್ಸಾಹದಿಂದ ತಾವು ಯುದ್ಧದಲ್ಲಿ ಆಸಕ್ತಿಯನ್ನು ವಹಿಸಿರುವವೋ ಎಂಬಂತೆ ಗಟ್ಟಿಯಾಗಿ ಹೇಷಾಧ್ವನಿಯನ್ನು ಮಾಡುವವು. ವೇಗವಾಗಿ ಸಂಚರಿಸುತ್ತಿರುವಾಗಲೂ ಸಿಕ್ಕಿದ ಕಡೆ ಹೋಗದೆ ಸಾರಥಿಯ ಇಷ್ಟಾನುಸಾರವಾಗಿಯೇ ಶತ್ರುಸೈನ್ಯದ ಮೇಲೆ ನುಗ್ಗಿಹೋಗುವವು. ಇವುಗಳ ಪದಾಘಾತಕ್ಕೆ ಶತ್ರುಸೈನಿಕರು ಸಿಕ್ಕಿ ನಾಶವನ್ನೈದುವರು. ಎಂದರೆ ಕುದುರೆಗಳ ಕಾಲಿನ ತುಳಿತಕ್ಕೆ ಅನೇಕ ಶತ್ರುಸೈನಿಕರು ಸಿಕ್ಕಿ ಮೃತರಾಗುವರು ಎಂಬ ಅಶ್ವಸ್ತುತಿಯು ಈ ಋಕ್ಕಿನಲ್ಲಿ ವರ್ಣಿತವಾಗಿದೆ.

॥ ಸಂಹಿತಾಪಾಠಃ ॥

ರಥವಾಹನಂ ಹವಿರಸ್ಯ ನಾಮ ಯತ್ರಾಯುಧಂ ನಿಹಿತಮಸ್ಯ ವರ್ಮ ।
ತತ್ರಾ ರಥಮುಪ ಶಗ್ಮಂ ಸದೇಮ ವಿಶ್ವಾಹಾ ವಯಂ ಸುಮನಸ್ಯಮಾನಾಃ ॥

॥ ಪದಪಾಠಃ ॥

ರಥಽವಾಹನಂ । ಹವಿಃ । ಅಸ್ಯ । ನಾಮ । ಯತ್ರ । ಆಯುಧಂ । ನಿಽಹಿತಂ । ಅಸ್ಯ । ವರ್ಮ ।
ತತ್ರ । ರಥಂ । ಉಪ । ಶಗ್ಮಂ । ಸದೇಮ । ವಿಶ್ವಾಹಾ । ವಯಂ । ಸುಽಮನಸ್ಯಮಾನಾಃ ॥ ೮ ॥

॥ ಸಾಯಣಭಾಷ್ಯಂ ॥

ಅಸ್ಯ ರಾಜ್ಞೋ ರಥವಾಹನಂ ಶತ್ರೂನ್ ಜಿತ್ವಾ ರಥೇನೋಹ್ಯಮಾನಂ ಧನಂ ಹವಿರ್ಭವತಿ । ಅಗ್ನೇರ್ಹವಿರಿವ ವರ್ಧಕಂ ಭವತೀತ್ಯರ್ಥಃ । ನಾಮೇತಿ ಸಂಮತಿಃ । ಯತ್ರ ರಥೇಽಸ್ಯ ರಾಜ್ಞ ಆಯುಧಂ ಧನುಃಶರಾದಿಕಂ ವರ್ಮ ಕವಚಂ ಚ ನಿಹಿತಂ ಭವತಿ ತತ್ರ ತಂ ॥ ತತ್ರೇತ್ಯವ್ಯಯಸ್ಯ ಸರ್ವವಿಭಕ್ತಿಕತ್ವಾತ್ ॥ ಶಗ್ಮಂ ಸುಖಕರಂ ವಿಶ್ವಾಹಾ ಸರ್ವದಾ ಸುಮನಸ್ಯಮಾನಾಃ ಸುಖಮನಸೋ ಭವಂತೋ ವಯಂ ಪಾಯವೋ ಭರದ್ವಾಜಾ ಉಪ ಸದೇಮ । ಉಪಗಚ್ಛೇಮ ॥

॥ ಪ್ರತಿಪದಾರ್ಥ ॥

**ಅಸ್ಯ**—ಈ ರಾಜನ । **ರಥವಾಹನಂ**—(ಶತ್ರುಗಳನ್ನು ಜಯಿಸಿ) ರಥದಲ್ಲಿ ಹೊತ್ತುಕೊಂಡು ಬರುವ ಧನವು । **ಹವಿಃ**—ಹವಿಸ್ಸಿಗೆ ಯೋಗ್ಯವಾಗಿರುತ್ತದೆ ! **ನಾಮ**—ಇದು ಖಂಡಿತ । **ಯತ್ರ**—ಯಾವ ರಥದಲ್ಲಿ । **ಅಸ್ಯ**—ಈ ರಾಜನ । **ಆಯುಧಂ**—ಧನುರಾದ್ಯಾಯುಧಗಳೂ । **ವರ್ಮ**—ಲೋಹನಿರ್ಮಿತವಾದ ಕವಚಗಳೂ । **ನಿಹಿತಂ**—ಇಡಲ್ಪಟ್ಟಿವೆಯೋ । **ಶಗ್ಮಂ**—ಸುಖಸಾಧಕವಾದ । **ತತ್ರ ರಥಂ**—ಅದೇ ರಥವನ್ನು । **ವಿಶ್ವಾಹಾ**—ಸಕಲ ದಿನಗಳಲ್ಲಿಯೂ । **ಸುಮನಸ್ಯಮಾನಾಃ**—ಸುಖಮನಸ್ಕರಾಗಿದ್ದು । **ವಯಂ**—ಭರದ್ವಾಜವಂಶಪವರಾದ ನಾವು । **ಉಪ ಸದೇಮ**—ಸಮೀಪಿಸೋಣ (ಪೂಜಿಸೋಣ).

॥ ಭಾವಾರ್ಥ ॥

ಶತ್ರುಗಳನ್ನು ಜಯಿಸಿ ರಥದಲ್ಲಿ ಹೊತ್ತುಕೊಂಡು ಬರುವ ಈ ರಾಜನ ಧನವು ಹವಿಸ್ಸಿಗೆ ಯೋಗ್ಯವಾಗಿರುತ್ತದೆ. ಇದು ಖಂಡಿತ. ಯಾವ ರಥದಲ್ಲಿ ಈ ರಾಜನ ಧನುಸ್ಸೇ ಮುಂತಾದ ಆಯುಧಗಳೂ, ಲೋಹನಿರ್ಮಿತವಾದ

ಕವಚಗಳೂ ಇಡಲ್ಪಟ್ಟಿವೆಯೋ, ಸುಖಸಾಧಕವಾದ ಅದೇ ರಥವನ್ನು ಸಕಲ ದಿನಗಳಲ್ಲಿಯೂ ಸಂತೋಷಚಿತ್ತರಾಗಿದ್ದು ಭರದ್ವಾಜಸಂತತಿಯವರಾದ ನಾವು ಪೂಜಿಸೋಣ.

English Translation.

The spoil borne off in his car, in which his weapons and armour are deposited, is the appropriate oblation of the warrior; therefore let us, exulting, daily do honour to the joy-bestowing car.

|| ವಿಶೇಷವಿಷಯಗಳು ||

ಈ ಋಕ್ಕಿನಲ್ಲಿ ರಥದ ಸ್ತುತಿ ಇರುವುದು. ಯುದ್ಧಮಾಡಿ ಗೆದ್ದು ಜಯಶಾಲಿಯಾಗಿ ಹಿಂತಿರುಗಿ ಬಂದ ರಾಜನ ರಥದ ವರ್ಣನೆಯು ಇಲ್ಲಿ ವರ್ಣಿತವಾಗಿರುವುದು.

**ರಥವಾಹನಂ ಹವಿರಸ್ಯ ನಾಮ—ರಥೇನೋಹ್ಯಮಾನಂ ಧನಂ ।** ಯುದ್ಧದಲ್ಲಿ ಶತ್ರುಗಳನ್ನು ಗೆದ್ದು ಅವರಲ್ಲಿದ್ದ ಧನಾದಿ ವಸ್ತುಗಳನ್ನು ತಮ್ಮ ರಥಾದಿಗಳಲ್ಲಿ ತುಂಬಿಕೊಂಡು ತಮ್ಮ ನಗರಕ್ಕೆ ಹಿಂತಿರುಗಿ ಬರುವುದು ಪೂರ್ವಕಾಲದಲ್ಲಿ ರೂಢಿಯಲ್ಲಿತ್ತು. ಅದರಂತೆ ರಾಜನು ಯುದ್ಧದಲ್ಲಿ ಜಯಶಾಲಿಯಾಗಿ ಶತ್ರುಗಳ ಧನಗಳನ್ನು ತನ್ನ ರಥದಲ್ಲಿ ತುಂಬಿಕೊಂಡು ಬರುವಾಗ ಅಂತಹ ಧನಾದಿಗಳು ತಾವು ಮಾಡುವ ಯಜ್ಞದಲ್ಲಿ ಹವಿರಾದಿಗಳಿಗಾಗಿ ಉಪಯೋಗಿಸಲ್ಪಡುವವು ಎಂಬರ್ಥವನ್ನು ಋಷಿಯು ಸೂಚಿಸಿದಾನೆ. ಇದು ನಿಶ್ಚಯವು ಎಂದು ನಾಮಶಬ್ದಕ್ಕೆ ಭಾಷ್ಯಕಾರರು ಅರ್ಥವಿವರಣೆ ಮಾಡಿದಾರೆ.

**ಯತ್ರ ಆಯುಧಂ ನಿಹಿತಮಸ್ಯ ವರ್ಮ—** ಮತ್ತು ಆ ರಥದಲ್ಲಿ ಶತ್ರುಗಳಿಂದ ಪಡೆದ ಧನಾದಿಗಳಲ್ಲದೆ, ಯುದ್ಧಾರ್ಥವಾಗಿ ತೆಗೆದುಕೊಂಡು ಹೋಗಿದ್ದ ಧನುರಾದಿ ಆಯುಧಗಳೂ, ಶರೀರ ರಕ್ಷಣೆಗೆ ಎಂದರೆ—ಶತ್ರುಗಳ ಆಯುಧಗಳ ಪ್ರಹಾರಕ್ಕೆ ತನ್ನ ಶರೀರವು ಸಿಲುಕದಂತೆ ಕಾಪಾಡುವುದಕ್ಕಾಗಿ ಧರಿಸಿದ್ದ ಅಥವಾ ತೆಗೆದುಕೊಂಡು ಹೋಗಿದ್ದ ಕವಚವೂ ಇಡಲ್ಪಟ್ಟಿರುವುದು.

**ತತ್ರ ರಥಂ ಉಪ ಶಗ್ಮಂ ಸದೇಮ ವಿಶ್ವಾಹಾ ವಯಂ ಸುಮನಸ್ಯಮಾನಾಃ—** ಯುದ್ಧದಲ್ಲಿ ನಮಗೆ ಜಯವನ್ನು ಗಳಿಸಿಕೊಟ್ಟು ಉಪಕಾರಮಾಡಿದ ಇಂತಹ ರಥವನ್ನು ನಾವು ಯಾವಾಗಲೂ ಸಂತೋಷಚಿತ್ತದಿಂದ ಸಮೀಪಿಸುವೆವು ಎಂದರೆ ಪೂಜ್ಯಭಾವನೆಯಿಂದ ನೋಡುವೆವು.

॥ ಸಂಹಿತಾಪಾಠಃ ॥

ಸ್ವಾದುಷಂಸದಃ ಪಿತರೋ ವಯೋಧಾಃ ಕೃಚ್ಛ್ರೇಶ್ರಿತಃ ಶಕ್ತೀವಂತೋ ಗಭೀರಾಃ ।

ಚಿತ್ರಸೇನಾ ಇಷುಬಲಾ ಅಮೃಧ್ರಾಃ ಸತೋವೀರಾ ಉರವೋ ವ್ರಾತಸಾಹಾಃ ॥

|| ಪದಪಾಠಃ ||

ಸ್ವಾದುಽಸಂಸದಃ । ಪಿತರಃ । ವಯಃಽಧಾಃ । ಕೃಚ್ಛ್ರೇಽಶ್ರಿತಃ । ಶಕ್ತಿಽವಂತಃ । ಗಭೀರಾಃ ।
ಚಿತ್ರಽಸೇನಾಃ । ಇಷುಽಬಲಾಃ । ಅಮೃಧ್ರಾಃ । ಸತಃಽವೀರಾಃ । ಉರವಃ । ವ್ರಾತಽಸಹಾಃ ॥ ೯ ॥

॥ ಸಾಯಣಭಾಷ್ಯಂ ॥

ಅತ್ರ ರಥಗೋಪಸ್ತುತಿಃ । ಪಿತರೋ ರಥಸ್ಯ ಪಾಲಯಿತಾರಃ ಸ್ವಾದುಷಂಸದಃ ಶತ್ರೂಣಾಂ ಸ್ವಾದುನ್ಯನ್ನೇ ಸಂಸೀದಂತಃ ಶತ್ರೂಣಾಮನ್ನಮವಸಾದಯಂತೋ ವಾ ವಯೋಧಾ ಅನ್ನಸ್ಯ ದಾತಾರಃ ಕೃಚ್ಛ್ರೇಶ್ರಿತ ಆಪದಿ ಶ್ರಯಂತಃ ಶಕ್ತೀವಂತಃ । ಶಕ್ತಿರಾಯುಧವಿಶೇಷಃ । ತದ್ವಂತಃ । ಶಕ್ತೀವಂತಃ ಶಕ್ತೀಹಸ್ತಾ ಇತಿ ಯಾವತ್ । ಯದ್ವಾ ಶಕ್ತಿರ್ಬಲಂ । ತದ್ವಂತಃ । ಗಭೀರಾ ಅನಾಧೃಷ್ಯಾಶ್ಚಿತ್ರಸೇನಾ ದರ್ಶನೀಯಸೇನಾ ಇಷುಬಲಾ ಬಾಣಬಲಾ ಅಮೃಧ್ರಾ ಹಿಂಸಿತುಮಶಕ್ಯಾಃ ಸತೋವೀರಾಃ ಪ್ರಾಪ್ತವೀರ್ಯಾಃ । ತಥಾ ಚ ಯಾಸ್ಕಃ । ತಿರಃ ಸತ ಇತಿ ಪ್ರಾಪ್ತಸ್ಯ ತಿರಸ್ತೀರ್ಣಂ ಭವತಿ ಸತಃ ಸಂಸೃತಂ ಭವತಿ । ನಿ. ೩-೨೦ । ಇತಿ । ಉರವೋ ಮಹಾಂತೋ ವ್ರಾತಸಾಹಾಃ ಸಮೂಹಾನಾಮಭಿಭವಿತಾರೋ ಭವಂತೀತಿ ॥

॥ ಪ್ರತಿಪದಾರ್ಥ ॥

**ಪಿತರಃ**— ಈ ರಥದ ಪಾಲಕರು । **ಸ್ವಾದುಷಂಸದಃ**—ಶತ್ರುಗಳ ಅನ್ನವನ್ನು ಕಸಿದುಕೊಂಡು ಸ್ವಾಧೀನದಲ್ಲಿಟ್ಟುಕೊಂಡವರಾಗಿಯೂ । **ವಯೋಧಾಃ**—ನಮಗೆಲ್ಲಾ ಅನ್ನದಾತೃಗಳಾಗಿಯೂ । **ಕೃಚ್ಛ್ರೇಶ್ರಿತಃ**—ಆಪತ್ಕಾಲದಲ್ಲಿ ಆಶ್ರಯದಾತರಾಗಿಯೂ । **ಶಕ್ತೀವಂತಃ**—ಶಕ್ತಿಯುತವಾದ ಆಯುಧವಂತರಾಗಿಯೂ । **ಗಭೀರಾಃ**—ದೃಢಚಿತ್ತರಾಗಿಯೂ । **ಚಿತ್ರಸೇನಾಃ**—ಆಕರ್ಷಕವಾದ ಸೇನೆಯುಳ್ಳವರಾಗಿಯೂ । **ಇಷುಬಲಾಃ**—ಬಾಣರೂಪವಾದ ಬಲವುಳ್ಳವರಾಗಿಯೂ । **ಅಮೃಧ್ರಾಃ**—ಅಹಿಂಸಿತರಾಗಿಯೂ । **ಸತೋವೀರಾಃ**—ವೀರ್ಯಸಂಪತ್ತುಳ್ಳವರಾಗಿಯೂ । **ಉರವಃ**—ವಿಸ್ತೃತವಾದ ದೇಹವುಳ್ಳವರಾಗಿಯೂ । **ವ್ರಾತಸಾಹಾಃ**—ಶತ್ರುಗಳ ಗುಂಪನ್ನೆಲ್ಲಾ ಸೋಲಿಸುವವರಾಗಿಯೂ ಇದ್ದಾರೆ.

॥ ಭಾವಾರ್ಥ ॥

ಈ ರಥದ ಪಾಲಕರು ಶತ್ರುಗಳ ಅನ್ನವನ್ನು ಕಸಿದುಕೊಂಡು ಸ್ವಾಧೀನನಲ್ಲಿಟ್ಟುಕೊಂಡವರಾಗಿಯೂ, ನಮಗೆಲ್ಲಾ ಅನ್ನದಾತೃಗಳಾಗಿಯೂ, ಆಪತ್ಕಾಲದಲ್ಲಿ ಆಶ್ರಯದಾತರಾಗಿಯೂ, ಶಕ್ತಿಯುತವಾದ ಆಯುಧವಂತರಾಗಿಯೂ, ದೃಢಚಿತ್ತರಾಗಿಯೂ, ಆಕರ್ಷಕವಾದ ಸೇನೆಯುಳ್ಳವರಾಗಿಯೂ, ಬಾಣರೂಪವಾದ ಬಲವುಳ್ಳವರಾಗಿಯೂ, ಅಹಿಂಸಿತರಾಗಿಯೂ, ವೀರ್ಯಸಂಪತ್ತುಳ್ಳವರಾಗಿಯೂ, ವಿಸ್ತೃತವಾದ ದೇಹವುಳ್ಳವರಾಗಿಯೂ, ಶತ್ರುಗಳ ಗುಂಪನ್ನೆಲಾ ಸೋಲಿಸುವವರಾಗಿಯೂ ಇದ್ದಾರೆ.

## English Translation.

The guards (of chariot), revelling in the savoury (spoil), distributors of food, protectors in calamity, armed with spears, resolute, beautifully

arranged, strong in arrows, invincible, of heroic valour, robust, and conquerors of numerous hosts.

|| ವಿಶೇಷವಿಷಯಗಳು ||

ಈ ಋಕ್ಕಿನಲ್ಲಿ ರಥಗೋಪರ ಎಂದರೆ ರಥಕ್ಕೆ ಅಪಾಯ ತಟ್ಟದಂತೆ ಅದನ್ನು ಸರಿಯಾಗಿ ನೋಡಿಕೊಂಡು ಕಾಪಾಡುವವರ (Guards) ವರ್ಣನೆ ಇದೆ.

ಪೂರ್ವಕಾಲದಲ್ಲಿ ಎರಡು ಸೈನ್ಯಗಳಿಗೆ ಯುದ್ಧ ನಡೆಯುವಾಗ ಆಯಾ ಸೈನ್ಯಗಳಲ್ಲಿ ಮುಖಂಡರಾದವರು, ಅನೇಕ ಸಂದರ್ಭಗಳಲ್ಲಿ ಆಯಾ ದೇಶದ ರಾಜರು ಸಹ ರಥಗಳಲ್ಲಿ ಕುಳಿತು ಯುದ್ಧಮಾಡುವುದು ರೂಢಿಯಲ್ಲಿದ್ದಿತು. ಸಾಮಾನ್ಯ ಯೋಧರು ರಥಗಳಲ್ಲಿ ಕುಳಿತು ಯುದ್ಧಮಾಡುತ್ತಿರಲಿಲ್ಲ. ಹೆಸರುವಾಸಿಯಾದ ಅತಿರಥರು, ಮಹಾರಥರು, ಸೇನಾನಾಯಕರು, ರಾಜರು, ಮಹಾರಾಜರು, ಚಕ್ರವರ್ತಿ ಮೊದಲಾದ ಪ್ರಸಿದ್ಧ ಪುರುಷರೇ, ರಥಗಳಲ್ಲಿ ಕುಳಿತು ಯುದ್ಧಮಾಡುತ್ತಿದ್ದರು. ಆದುದರಿಂದ ರಾಜರನ್ನು ಅಥವಾ ಅವರು ಕುಳಿತಿರುವ ರಥವನ್ನು ರಕ್ಷಿಸುವುದಕ್ಕಾಗಿಯೇ ಶಸ್ತ್ರಾಯುಧಸಜ್ಜಿತರೂ, ಯುದ್ಧಕಾರ್ಯದಲ್ಲಿ ಕುಶಲರೂ, ಪರಾಕ್ರಮಶಾಲಿಗಳೂ ಆದ ಉತ್ತಮ ಯೋಧರನ್ನು ಮಾತ್ರವೇ ಈ ಕಾರ್ಯಕ್ಕಾಗಿ ನಿಯಮಿಸಲಾಗುತ್ತಿತ್ತು. ಆದುದರಿಂದ ಈ ರಥಗೋಪರು ರಾಜರ ಅಂಗರಕ್ಷಕರಾಗಿರುತ್ತಿದ್ದರು. (Body-Guards) ಯುದ್ಧದಲ್ಲಿ ರಾಜನನ್ನು ಪ್ರಾಣಾಪಾಯಗಳಿಂದ ರಕ್ಷಿಸುವುದೇ ಇವರ ಮುಖ್ಯ ಕರ್ತವ್ಯವಾಗಿತ್ತು. ಏಕೆಂದರೆ ಯುದ್ಧದಲ್ಲಿ ಭಾಗವಹಿಸುವ ರಾಜರ ಅಳಿವುಉಳಿವುಗಳೇ ಯುದ್ಧದ ಜಯಾಪಜಯಗಳಿಗೆ ಮುಖ್ಯ ಕಾರಣವಾಗಿತ್ತು. ಆದುದರಿಂದ ಈ ರಥಗೋಪರ ಕರ್ತವ್ಯನಿರ್ವಹಣೆಗೆ ಎಷ್ಟು ಪ್ರಾಮುಖ್ಯವಿದ್ದಿತೆಂದು ಸುಲಭವಾಗಿ ಊಹಿಸಬಹುದು. ಈ ರಥಪಾಲಕರೂ ಕೂಡ, ಯುದ್ಧರಂಗದಲ್ಲಿ ಶತ್ರುಗಳೊಡನೆ ಹೋರಾಡುತ್ತಾ ಅವರಲ್ಲಿರುವ ಆಹಾರಾದಿಗಳನ್ನು ಕಸಿದುಕೊಂಡು ತಮ್ಮ ವಶಪಡಿಸಿಕೊಳ್ಳುವವರು. ಆದ್ದರಿಂದ ತಮ್ಮ ಕಡೆಯವರಿಗೆ ಶತ್ರುಗಳ ಅನ್ನ (ಆಹಾರವನ್ನು) ಒದಗಿಸುವವರು. ಭಯಂಕರವಾದ ಯುದ್ಧವು ನಡೆಯುತ್ತಿರುವಾಗಲೂ ಇವರು ಸ್ವಲ್ಪವೂ ಹೆದರದೆ ಗಂಭೀರಭಾವದಿಂದ ದೃಢಚಿತ್ತರಾಗಿ ತಮ್ಮ ಶಕ್ತಿಸಾಮರ್ಥ್ಯಗಳನ್ನು ಪ್ರದರ್ಶಿಸುತ್ತಿರುವರು. ಇವರ ಸಹಾಯಕ್ಕೆ ವಿಶೇಷ ರೀತಿಯ ಸೇನಾ ಬೆಂಬಲವಿರುವುದಲ್ಲದೆ ತಮ್ಮಲ್ಲಿರುವ ಧನುಸ್ಸು, ಬಾಣ ಮೊದಲಾದ ಆಯುಧಗಳ ಸಹಾಯವೂ ಇರುವುದು. ಇಂತಹ ಆಯುಧಗಳಿಂದ ಸಜ್ಜಿತರಾಗಿರುವ ಈ ಯೋಧರನ್ನು ಶತ್ರುಭಟರು ಹಿಂಸಿಸಲು ಸಾಧ್ಯವಿಲ್ಲ. ಇವರು ಮಹಾಬಲಪರಾಕ್ರಮವುಳ್ಳವರು ಎಂದು ಈ ಋಕ್ಕಿನ ಮುಖ್ಯಾಭಿಪ್ರಾಯವು.

**ಸತೋವೀರಾಃ—ಪ್ರಾಪ್ತವೀರ್ಯಾಃ**—ವೀರ್ಯ ಅಥವಾ ಶಕ್ತಿಸಾಮರ್ಥ್ಯಗಳನ್ನು ಪಡೆದಿರುವವರು. **ಸತಃ** ಎಂಬ ಶಬ್ದಕ್ಕೆ **ಪ್ರಾಪ್ತ**-ಪಡೆದಿರುವ ಎಂಬ ಅರ್ಥವನ್ನು ಸಮರ್ಥಿಸುವುದಕ್ಕಾಗಿ ಭಾಷ್ಯಕಾರರು ಯಾಸ್ಕರ ನಿರ್ವಚನವನ್ನು ಹೇಳಿದ್ದಾರೆ—

**ತಿರಃ ಸತ ಇತಿ ಪ್ರಾಪ್ತಸ್ಯ । ತಿರಸ್ತೀರ್ಣಂ ಭವತಿ । ಸತಃ ಸಂಸೃತಂ ಭವತಿ । ತಿರಶ್ಚಿದರ್ಯಯಾ ಪರಿವರ್ತಿರ್ಯಾತಮದಾಭ್ಯಾ। ಪಾತ್ರೇವ ಭಿಂದನ್ ಸತ ಏತಿ ರಕ್ಷಸಃ। ಇತ್ಯಪಿ ನಿಗಮೌ ಭವತಃ॥**

(ನಿ. ೩-೨೦)

**ತಿರಃ ಸತಃ** ಎಂಬ ಎರಡು ಶಬ್ದಗಳೂ ಒಂದೇ ಅರ್ಥವನ್ನು ಸೂಚಿಸುವ ಪರ್ಯಾಯಪದಗಳು. ಇದಕ್ಕೆ **ಪ್ರಾಪ್ತ**—ಎಂದರೆ ಪಡೆದು, ಹೊಂದಲ್ಪಟ್ಟ ಎಂದರ್ಥವಿರುವುದು. **ತಿರಃ** ಎಂಬ ಶಬ್ದಕ್ಕೆ **ತೀರ್ಣಂ**—ದಾಟಲ್ಪಟ್ಟ ಎಂದರ್ಥವು;

ಒಂದು ಸ್ಥಳದಿಂದ ಮತ್ತೊಂದೆಡೆಗೆ ಹೋಗುವುದು ಎಂದರೆ ಎರಡು ಪ್ರದೇಶಗಳ ನಡುವೆ ಇರುವ ಅಂತರವನ್ನೂ ದಾಟು ವುದು ಎಂದರ್ಥವು; **ಸತಃ** ಎಂಬ ಶಬ್ದಕ್ಕೆ **ಸಂಸೃತಂ**—ಒಟ್ಟಿಗೆ ಸೇರಿ ಒಂದಾಗಿರುವುದು ಎಂದರ್ಥವು; ಈ ಎರಡು ಶಬ್ದಗಳೂ ಒಂದಾಗಿ ಸೇರಿ ಸರಿ ಎಂಬರ್ಥವುಳ್ಳ **ಸೃ** ಧಾತುವಿನಿಂದ ನಿಷ್ಪನ್ನವಾಗಿವೆ. ಪ್ರಕೃತ ಋಕ್ಕಿನಲ್ಲಿ ಸತಃ ಎಂಬ ಶಬ್ದಕ್ಕೆ ವೀರ್ಯವು (ಪರಾಕ್ರಮವು) ಇವರಲ್ಲಿ ಸೇರಿರುವುದು ಎಂಬರ್ಥವನ್ನು ಸೂಚಿಸುವುದು. ನಿರ್ವಚನದಲ್ಲಿ ಉದಾಹರಣೆಯಾಗಿ ಕೊಟ್ಟಿರುವ **ತಿರಶ್ಚಿದರ್ಯಾಮಾ** ಮತ್ತು **ಪಾತ್ರೇವ ಭಿಂದನ್** ಎಂಬ ಎರಡು ವಾಕ್ಯಗಳೂ ಶ್ರುತಿ ವಾಕ್ಯಗಳು. ಈ ವಾಕ್ಯಗಳು ಆ ಶಬ್ದಗಳಿಗೆ ಮೇಲೆ ಹೇಳಿದ ಅರ್ಥವನ್ನು ಸಮರ್ಥಿಸುವವು ಎಂದು ನಿರ್ವಚನದ ಮುಖ್ಯಾಭಿಪ್ರಾಯವು.

**ಉರವಃ—ಮಹಾಂತಃ** । ಆಜಾನುಬಾಹುಗಳು, ಎತ್ತರವಾಗಿಯೂ ಧಷ್ಟಪುಷ್ಟವಾದ ಶರೀರಗಳಿಂದಲೂ ಕೂಡಿ ಮಹಾಬಲ ಪರಾಕ್ರಮಶಾಲಿಗಳಾದವರು ಅಥವಾ ಶ್ರೇಷ್ಠವಾದ ಗುಣವುಳ್ಳವರು.

**ವ್ರಾತಸಾಹಾಃ**—ಯುದ್ಧಗಳಲ್ಲಿ ಶತ್ರು ಜನಸಮೂಹವನ್ನು ಸೋಲಿಸಿ ಓಡಿಸುವವರು ಅಥವಾ ಅನೇಕ ಶತ್ರು ಜನರು ಗುಂಪಾಗಿ ಮುನ್ನುಗ್ಗಿ ಬಂದರೂ ಅವರನ್ನು ಧೈರ್ಯವಾಗಿ ಎದುರಿಸುವವರು.

॥ ಸಂಹಿತಾಪಾಠಃ ॥

**ಬ್ರಾಹ್ಮಣಾಸಃ ಪಿತರಃ ಸೋಮ್ಯಾಸಃ ಶಿವೇ ನೋ ದ್ಯಾವಾಪೃಥಿವೀ ಅನೇ-ಹಸಾ ।**
**ಪೂಷಾ ನಃ ಪಾತು ದುರಿತಾದೃತಾವೃಧೋ ರಕ್ಷಾ ಮಾಕಿರ್ನೋ ಅಘಶಂಸ ಈಶತ ॥ ೧೦ ॥**

॥ ಪದಪಾಠಃ ॥

**ಬ್ರಾಹ್ಮಣಾಸಃ । ಪಿತರಃ । ಸೋಮ್ಯಾಸಃ । ಶಿವೇ ಇತಿ । ನಃ । ದ್ಯಾವಾಪೃಥಿವೀ ಇತಿ । ಅನೇಹಸಾ ।**
**ಪೂಷಾ । ನಃ । ಪಾತು । ದುಃऽಇತಾತ್ । ಋತಽವೃಧಃ । ರಕ್ಷ । ಮಾಕಿಃ । ನಃ । ಅಘಽಶಂಸಃ । ಈಶತ ॥**

॥ ಸಾಯಣಭಾಷ್ಯಂ ॥

ಬ್ರಾಹ್ಮಣಾಸೋ ಹೇ ಬ್ರಾಹ್ಮಣಾಃ ಪಿತರ ಋತಾವೃಧ ಋತಸ್ಯ ಋಜ್ಞಸ್ಯ ಸತ್ಯಸ್ಯ ವಾ ವರ್ಧಯಿತಾರಃ ಸೋಮ್ಯಾಸಃ ಸೋಮಾರ್ಹಾಃ ಸೋಮಸಂಪಾದಿನೋ ವಾ । ತಥಾ ಚ ಯಾಸ್ಕಃ ಸೋಮ್ಯಾಃ ಸೋಮಸಂಪಾದಿನಃ । ನಿ. ೧೧-೧೮ । ಇತಿ । ನೋಽಸ್ಮಾನ್ರಕ್ಷತ । ರಕ್ಷೇತ್ಯುಪರಿತನಮೇಕ-ವಚನಾಂತಂ ಸತ್ಯಪಿ ವ್ಯವಧಾನೇ ಬಹುವಚನಾಂತತಯಾ ವಿಪರಿಣತಂ ಸದತ್ರ ಸಂಬಧ್ಯತೇಽಧ್ಯಾಹಾರ-

ಸ್ಯಾತಿಜಘನ್ಯತ್ವಾತ್ । ಕಿಂಚಾನೇಹಸಾಪಾಪೇ ದ್ಯಾವಾಪೃಥಿವೀ ದ್ಯಾವಾಪೃಥಿವ್ಯೌ ನೋಽಸ್ಮಾಕಂ ಶಿವೇ ಸುಖಕೃತೌ ಭವತಾಂ। ಪೂಷಾ ಪೋಷಕೋ ದೇವೋಽಪಿ ನೋಽಸ್ಮಾನ್ದುರಿತಾದ್ದುಷ್ಕೃತಾತ್ಪಾತು। ರಕ್ಷತು। ನೋಽಸ್ಮಾಕಮಘಶಂಸಃ ಪಾಪಶಂಸಃ ಶತ್ರುರಪಿ ಮಾಕಿರೀಶತ। ಮೈಶಿಷ್ಟ॥

॥ ಪ್ರತಿಪದಾರ್ಥ ॥

ಪಿತರಃ—ಪಾಲಕರೂ। **ಋತಾವೃಧಃ**—ಸತ್ಯವರ್ಧಕರೂ। **ಸೋಮ್ಯಾಸಃ**—ಸೋಮಸಂಪಾದಕರೂ ಆದ। **ಬ್ರಾಹ್ಮಣಾಸಃ**—ಎಲೈ ಬ್ರಾಹ್ಮಣರೇ। **ರಕ್ಷ**—ನಮ್ಮನ್ನು ರಕ್ಷಿಸಿ। **ಅನೇಹಸಾ**—ಪಾಪರಹಿತರಾದ। **ದ್ಯಾವಾಪೃಥಿವೀ**—ದ್ಯಾವಾಪೃಥಿವಿಗಳು। **ನಃ**—ನಮಗೆ। **ಶಿವೇ**—ಮಂಗಳಕಾರಕರಾಗಿರಲಿ। **ಪೂಷಾ**—ಪೂಷದೇವನು। **ನಃ**—ನಮ್ಮನ್ನು। **ದುರಿತಾತ್**—ಪಾಪದಿಂದ। **ಪಾತು**—ರಕ್ಷಿಸಲಿ। **ನಃ**—ನಮಗೆ। **ಅಘಶಂಸಃ**—ಕೇಡನ್ನು ಬಯಸುವ ಶತ್ರುಗಳು। **ಮಾಕಿಃ ಈಶತೆ**—ಖಂಡಿತ ನಮ್ಮ ಮೇಲೆ ಪ್ರಭುತ್ವವನ್ನು ಮಾಡದಿರಲಿ.

॥ ಭಾವಾರ್ಥ ॥

ಪಾಲಕರೂ ಸತ್ಯವರ್ಧಕರೂ, ಸೋಮಸಂಪಾದಕರೂ ಆದ ಎಲೈ ಬ್ರಾಹ್ಮಣರೇ, ನಮ್ಮನ್ನು ರಕ್ಷಿಸರಿ. ಪಾಪ ರಹಿತರಾದ ದ್ಯಾವಾಪೃಥಿವಿಗಳು ನಮಗೆ ಮಂಗಳಕಾರಕರಾಗಿರಲಿ. ನಮಗೆ ಕೇಡನ್ನು ಬಯಸುವ ಶತ್ರುಗಳು ನಮ್ಮ ಮೇಲೆ ಖಂಡಿತ ಪ್ರಭುತ್ವವನ್ನು ಮಾಡದಿರುವಂತಾಗಲಿ.

## English Translation.

May the Brahmins, the progenitors, presenters of the Soma, the observers of truth, protect us: may the faultless heaven and earth be propitious to us: may Pushan preserve us from misfortune, let no calumniator prevail over us.

॥ ವಿಶೇಷವಿಷಯಗಳು ॥

ಯುದ್ಧಭೂಮಿಯಲ್ಲಿ ತಮ್ಮನ್ನು ಶತ್ರುಭಯದಿಂದಲೂ, ಅಪಾಯದಿಂದಲೂ ರಕ್ಷಿಸಬೇಕೆಂದು ಋಷಿಯು ಈ ಋಕ್ಕಿನಲ್ಲಿ ಯಜ್ಞಕಾರ್ಯಾನುಷ್ಠಾನನಿರತರಾದ ಬ್ರಾಹ್ಮಣರನ್ನೂ, ದ್ಯಾವಾಪೃಥಿವಿಗಳನ್ನೂ ಪೂಷದೇವನನ್ನೂ ಪ್ರಾರ್ಥಿಸಿರುವನು.

**ಪಿತರಃ**—ಈ ಶಬ್ದಕ್ಕೆ ಎರಡು ವಿಧವಾದ ಅರ್ಥಗಳನ್ನು ಹೇಳಬಹುದು. **ಪಿತರಃ—ಪಾಲಕಾಃ** ಶತ್ರುಗಳ ಹಿಂಸೆಯಿಂದ ನಮ್ಮನ್ನು ಕಾಪಾಡುವವರು. ಅಥವಾ ನಮ್ಮ ಪೂರ್ವಜರು, ಹಿರಿಯರು, ಅಂಗಿರಾಋಷಿಗಳು ಇತ್ಯಾದಿ.

**ಸೋಮ್ಯಾಸಃ— ಸೋಮಸಂಪಾದಿನಃ** (ನಿ. ೧೬-೧೯) ಯಜ್ಞಾದಿಗಳಲ್ಲಿ ಸೋಮಲತೆಗಳನ್ನು ಜಜ್ಜಿ ರಸವನ್ನು ಹಿಂಡಿ ಸವನಾದಿಗಳಿಗೆ ಸಿದ್ಧಪಡಿಸುವವರು ಅಥವಾ ಸೋಮಾಭಿಷವವೇ ಮುಖ್ಯವಾಗಿರುವ ಯಜ್ಞಾನುಷ್ಠಾನ ಕರ್ಮಗಳಲ್ಲಿ ನಿರತರಾಗಿರುವವರು, ಬ್ರಾಹ್ಮಣಶ್ರೇಷ್ಠರು.

॥ ಸಂಹಿತಾಪಾಠಃ ॥

ಸುಪರ್ಣಂ ವಸ್ತೇ ಮೃಗೋ ಅಸ್ಯಾ ದಂತೋ ಗೋಭಿಃ ಸಂನದ್ಧಾ ಪತತಿ ಪ್ರಸೂತಾ ।
ಯತ್ರಾ ನರಃ ಸಂ ಚ ವಿ ಚ ದ್ರವಂತಿ ತತ್ರಾಸ್ಮಭ್ಯಮಿಷವಃ ಶರ್ಮ ಯಂಸನ್ ॥ ೧೧ ॥

॥ ಪದಪಾಠಃ ॥

ಸುऽಪರ್ಣಂ । ವಸ್ತೇ । ಮೃಗಃ । ಅಸ್ಯಾಃ । ದಂತಃ । ಗೋಭಿಃ । ಸಂऽನದ್ಧಾ । ಪತತಿ । ಪ್ರऽಸೂತಾ ।
ಯತ್ರ । ನರಃ । ಸಂ । ಚ । ವಿ । ಚ । ದ್ರವಂತಿ । ತತ್ರ । ಅಸ್ಮಭ್ಯಂ । ಇಷವಃ । ಶರ್ಮ । ಯಂಸನ್ ॥೧೧॥

॥ ಸಾಯಣಭಾಷ್ಯಂ ॥

ಅಸ್ಯಾಮೃಚೀಷವಃ ಸ್ತೂಯಂತೇ । ಸುಪರ್ಣಂ ಶೋಭನಂ ವಾಜಂ ವಸ್ತೇ । ಇಯಮಿಷುರ್ಧಾರಯತಿ । ಅಸ್ಯಾ ಇಷೋರ್ಮೃಗೋ ಮೃಗಾವಯವಃ ಶೃಂಗಂ ದಂತೋ ಭವತಿ । ಇಷವಃ ಕಾಶ್ಚಿದ್ದಂತಮುಖಾ ಭವಂತಿ ಹಿ । ಅಥವಾಸ್ಯಾ ದಂತೋ ಮೃಗಃ ಶತ್ರೂನ್ಮೃಗಯಮಾಣೋ ಭವತಿ । ಕಿಂಚ ಗೋಭಿರ್ಗೋವಿಕಾರೈಃ ಸ್ನಾಯುಭಿಃ ಸಂನದ್ಧಾ ಸಮ್ಯಗ್ಬದ್ಧಾ । ಅಥವಾ ಗೌರಿತಿ ಜ್ಯಾನಾಮ । ತಯಾ ಸಂಬದ್ಧಾ । ಅತ್ರ ವಚನವ್ಯತ್ಯಯಃ । ತಥಾ ಚ ನಿಗಮಃ । ವೃಕ್ಷೇ ವೃಕ್ಷೇ ನಿಯತಾ ಮೀಮಯದ್ಗೌಃ । ಋಗ್ವೇ. ೧೦-೨೭-೨೨ । ಇತಿ । ಅಸ್ಯಾಯಮರ್ಥಃ । ವೃಕ್ಷೇ ವೃಕ್ಷೇ ಧನುಷಿ ಧನುಷಿ ಗೌರ್ಜ್ಯಾ ನಿಯತಾ ಮೀಮಯತ್ ಶಬ್ದಂ ಕರೋತೀತಿ । ತಥಾ ಚ ಯಾಸ್ಕಃ । ವೃಕ್ಷೇ ವೃಕ್ಷೇ ಧನುಷಿ ಧನುಷಿ । ವೃಕ್ಷೋ ವ್ರಶ್ಚನಾದ್ವೃತ್ವಾ ಕ್ಷಾಂ ತಿಷ್ಠತೀತಿ ವಾ । ಕ್ಷಾ ಕ್ಷಿಯತೇರ್ನಿವಾಸಕರ್ಮಣಃ । ನಿಯತಾ ಮೀಮಯದ್ಗೌಃ ಶಬ್ದಂ ಕರೋತಿ । ಮೀಮಯತಿಃ ಶಬ್ದಕರ್ಮಾ । ನಿ. ೨-೬ । ಇತಿ । ಪ್ರಸೂತಾ ಪ್ರೇರಿತಾ ಸತೀ ಪತತಿ । ಯತ್ರ ಯುದ್ಧೇ ನರಃ ಸಂ ಚ ಸಹ ಚ ವಿ ಚ ಪೃಥಕ್ಚ ದ್ರವಂತಿ ಚರಂತಿ ತತ್ರಾಸ್ಮಭ್ಯಮಿಷವಃ ಶರಾಃ ಶರ್ಮ ಸುಖಂ ಯಂಸನ್ । ಪ್ರಯಚ್ಛಂತು । ತಥಾ ಚ ಯಾಸ್ಕಃ । ಸುಪರ್ಣಂ ವಸ್ತ ಇತಿ ವಾಜಾನಭಿಪ್ರೇತ್ಯ ಮೃಗಮಯೋಽಸ್ಯಾ ದಂತೋ ಮೃಗಯತೇರ್ವಾ ಗೋಭಿಃ ಸಂನದ್ಧಾ ಪತತಿ ಪ್ರಸೂತೇತಿ ವ್ಯಾಖ್ಯಾತಂ । ಯತ್ರ ನರಾಃ ಸಂದ್ರವಂತಿ ಚ ವಿದ್ರವಂತಿ ಚ ತತ್ರಾಸ್ಮಭ್ಯಮಿಷವಃ ಶರ್ಮ ಶರಣಂ ಪ್ರಯಚ್ಛಂತು । ನಿ. ೯-೧೯ । ಇತಿ ॥

। ಪ್ರತಿಪದಾರ್ಥ ।

**ಸುಪರ್ಣಂ**— ಉತ್ತಮವಾದ ಪಕ್ಷವನ್ನು (ರೆಕ್ಕೆ) । **ವಸ್ತೇ**— ಈ ಬಾಣವು ಧರಿಸುತ್ತದೆ । **ಅಸ್ಯಾಃ**— ಈ ಬಾಣದ । **ದಂತಃ**— ಅಗ್ರಭಾಗವು । **ಮೃಗಃ**— ಜಿಂಕೆಯ ಕೊಂಬಾಗಿರುತ್ತದೆ । **ಗೋಭಿಃ**— ಹೆದೆಗಳೊಡನೆ ।

**ಸನ್ನದ್ಧಾ**—ಕೂಡಿಕೊಂಡು। **ಪ್ರಸೂತಾ**—ಪ್ರೇರಿಸಲ್ಪಟ್ಟು (ಪ್ರಯೋಗಿಸಲ್ಪಟ್ಟು) । **ಪತತಿ**—ಶತ್ರುಗಳ ಮೇಲೆ ಬೀಳುತ್ತದೆ। **ಯತ್ರ**—ಯಾವ ಯುದ್ಧದಲ್ಲಿ। **ನರಃ**—ಯೋಧರು। **ಸಂ ಚ**—ಗುಂಪುಕೂಡಿದವರಾಗಿಯೂ। **ವಿ ಚ**— ಪ್ರತ್ಯೇಕವಾಗಿಯೂ । **ದ್ರವಂತಿ**—ಓಡಾಡುವರೋ । **ತತ್ರ**—ಅಲ್ಲಿ । **ಅಸ್ಮಭ್ಯಂ**—ನಮಗೆ। **ಇಷವಃ**—ಈ ಶರಗಳು। **ಶರ್ಮ**—ಸುಖವನ್ನು। **ಯಂಸನ್**—ಕೊಡಲಿ.

॥ ಭಾವಾರ್ಥ ॥

ಈ ಬಾಣವು ಉತ್ತಮವಾದ ಪಕ್ಷವನ್ನು (ಗರಿಗಳನ್ನು) ಧರಿಸಿರುತ್ತದೆ. ಜಿಂಕೆಯ ಕೊಂಬೇ ಇದರ ಅಗ್ರಭಾಗ ವಾಗಿರುತ್ತದೆ. ಹೆದೆಗಳೊಡನೆ ಯೋಜಿತವಾಗಿ ಪ್ರೇರಿಸಲ್ಪಟ್ಟಾಗ ಶತ್ರುಗಳ ಮೇಲೆ ಬೀಳುತ್ತದೆ. ಯಾವ ಯುದ್ಧದಲ್ಲಿ ಯೋಧರು ಗುಂಪುಕೂಡಿದವರಾಗಿಯೂ, ಪ್ರತ್ಯೇಕವಾಗಿಯೂ ಓಡಾಡುವರೋ ಅಲ್ಲೆಲ್ಲಾ ನಮಗೆ ಈ ಬಾಣಗಳು ಸುಖವನ್ನುಂಟುಮಾಡಲಿ.

## English Translation.

The arrow puts on a (feathery) wing: the (horn of the) deer is its point: it is bound with the sinews of the cow: it alights where directed: whenever men assemble or disperse, there may the shafts fall for an advantage.

॥ ವಿಶೇಷವಿಷಯಗಳು ॥

ಈ ಋಕ್ಕಿನಲ್ಲಿಯೂ ಇದರ ಮುಂದಿನ ಋಕ್ಕಿನಲ್ಲಿಯೂ ಮತ್ತು ೧೫, ೧೬ ನೇ ಋಕ್ಕಿನಲ್ಲಿಯೂ ಇಷು ಎಂದರೆ ಬಾಣದ ಸ್ತುತಿ ಇರುವುದು. ಈ ಋಕ್ಕಿನಲ್ಲಿ ಕೆಲವು ಶಬ್ದಗಳ ವಿವರಣೆಯು ಅವಶ್ಯಕವು.

**ಸುಪರ್ಣಂ**—ಉತ್ತಮವಾದ ಗರಿ ಅಥವಾ ರೆಕ್ಕೆ. ಬಿಲ್ಲಿನಲ್ಲಿ ಹೂಡಿ ಶತ್ರುವಿನ ಮೇಲೆ ಬಿಡುವ ಬಾಣವು ವೇಗವಾಗಿ ಹೋಗುವುದಕ್ಕಾಗಿ ಅದಕ್ಕೆ ಪಕ್ಷಿಗಳ ಗರಿಗಳನ್ನು ಕಟ್ಟುವುದುಂಟು. ಆದ್ದರಿಂದ ಇಲ್ಲಿ ಸುಪರ್ಣಂ ವಸ್ತೇ ಈ ಬಾಣವು ಉತ್ತಮವಾದ ರೆಕ್ಕೆ ಅಥವಾ ಗರಿಗಳನ್ನು ಧರಿಸುವುದು ಎಂದು ವರ್ಣಿಸಿದೆ.

**ಮೃಗೋ ಅಸ್ಯಾ ದಂತಃ**—ಇಲ್ಲಿ ಸಾಯಣರು ದಂತಶಬ್ದಕ್ಕೆ ಶೃಂಗ ಎಂದರೆ ಕೊಂಬು ಎಂದರ್ಥಮಾಡಿ ದ್ದಾರೆ. **ಮೃಗೋ ದಂತಃ** ಎಂದರೆ ಜಿಂಕೆಯ ಕೊಂಬು ಎಂದರ್ಥವು. ಹರಿತವಾದ ಜಿಂಕೆಯ ಕೊಂಬನ್ನೇ ಬಾಣದ ಕಾಂಡ (ಕಡ್ಡಿ) ಯನ್ನಾಗಿ ಉಪಯೋಗಿಸಿದೆ ಎಂದು ಇಲ್ಲಿ ವರ್ಣಿಸಿದೆ. ಅಥವಾ ಕೆಲವು ಬಾಣಗಳ ತುದಿಯಲ್ಲಿ ಮೊನೆ ಚಾಪ (ಕೆಲವು ಮೃಗಗಳ) ಹಲ್ಲುಗಳನ್ನು ಸೇರಿಸಿ ಬಾಣವು ಹರಿತವಾಗಿರುವಂತೆ ಮಾಡುವರು. ಆದುದರಿಂದ ಮೃಗದ ಹಲ್ಲುಗಳಿಂದ ಹರಿತವಾಗಿ ಮಾಡಲ್ಪಟ್ಟಿರುವ ಬಾಣವು ಎಂದೂ ಹೇಳಬಹುದು. ಅಥವಾ **ಮೃಗ** ಶಬ್ದಕ್ಕೆ **ಮೃಗಯು** ಮಾಣಃ ಎಂಬರ್ಥವನ್ನು ಹೇಳುವುದಾದರೆ ಯುದ್ಧದಲ್ಲಿ ಧನುಸ್ಸಿನಿಂದ ಬಿಡಲ್ಪಡುವ ಈ ಬಾಣವು ಶತ್ರುಗಳನ್ನು ಹುಡುಕಿಕೊಂಡು ಹೋಗುವುದು ಎಂದರೆ ಗುರಿಯಿಟ್ಟ ಶತ್ರುಗಳ ಶರೀರಗಳಿಗೆ ತಾಕಿ ನಾಟಿಕೊಳ್ಳುವುದು ಎಂದಭಿಪ್ರಾಯವು.

**ಗೋಭಿಃ ಸಂನದ್ಧಾ ಪತತಿ ಪ್ರಸೂತಾ—ಗೋಭಿಃ ಗೋವಿಕಾರೈಃ ಸ್ನಾಯುಭಿಃ ಸಂನದ್ಧಾ ಸಮ್ಯಕ್-ಬದ್ಧಾ ಅಥವಾ ಗೌರಿತಿ ಜ್ಯಾನಾಮ ತಯಾ ಬದ್ಧಾ ।** ಇಲ್ಲಿ ಗೋಶಬ್ದಕ್ಕೆ ಗೋವಿಕಾರವಾದ ಎಂದರೆ ಗೋವಿನ ಶರೀರದಲ್ಲಿರುವ ದಾರದಂತಿರುವ ಸ್ನಾಯುಗಳಿಂದ ಬಿಗಿಯಾಗಿ ಕಟ್ಟಲ್ಪಟ್ಟಿರುವ ಎಂದರ್ಥವು. ಎಂದರೆ ಈ ಬಾಣಕ್ಕೆ ಪಕ್ಷಿಗಳ ಗರಿಗಳನ್ನು ಗೋವಿನ ಸ್ನಾಯು (ನರ) ಗಳಿಂದ ಬಿಗಿದುಕಟ್ಟಿರುವರು ಎಂದರ್ಥವು. ಅಥವಾ ಗೋಶಬ್ದಕ್ಕೆ ಜ್ಯಾ ಹೆದೆಯೆಂದೂ ಅರ್ಥವಾಗುವುದರಿಂದ ಹೆದೆ (ಬಿಲ್ಲಿನ ಹಗ್ಗ) ಯಿಂದ ಬಿಡಲ್ಪಟ್ಟ ಬಾಣವು ಎಂದೂ ಅರ್ಥವಾಗಬಹುದು. ಇಂತಹ ಬಾಣವು ಯುದ್ಧಮಾಡುವ ಯೋಧರಿಂದ ಪ್ರೇರಿತವಾಗಿ ಶತ್ರುಗಳ ಮೇಲೆ ಬೀಳುವುದು ಎಂದಭಿಪ್ರಾಯವು.

ಈ ಋಕ್ಕಿಗೆ ಯಾಸ್ಕರು ನಿರ್ವಚನವನ್ನು ಹೇಳಿದಾರೆ—

> **ಸುಪರ್ಣಂ ವಸ್ತೆ ಇತಿ ವಾಜಾನಭಿಪ್ರೇತ್ಯ ಮೃಗಮಯೋಽಸ್ಯಾ ದಂತೋ ಮೃಗಯತೇರ್ವಾ ಗೋಭಿಃ ಸಂನದ್ಧಾ ಪತತಿ ಪ್ರಸೂತೇತಿ ವ್ಯಾಖ್ಯಾತಂ ಯತ್ರ ನರಾಃ ಸಂದ್ರವಂತಿ ಚ ವಿದ್ರವಂತಿ ಚ ತತ್ರಾಸ್ಮಭ್ಯಮಿಷವಃ ಶರ್ಮ ಯಚ್ಛಂತು ಶರಣಂ ಸಂಗ್ರಾಮೇಷು ॥**
>
> (ನಿ. ೯-೧೯)

ಬಾಣಗಳು ಧನುಸ್ಸಿನಿಂದ ಹೊರಹೊರಟು ಶತ್ರುವಿನ ಬಳಿಗೆ ವೇಗವಾಗಿ ಹೋಗುವುದಕ್ಕಾಗಿ ಬಾಣಕ್ಕೆ ಕಟ್ಟಿರುವ ರೆಕ್ಕೆಗಳನ್ನು ಸೂಚಿಸುವುದಕ್ಕಾಗಿ ಇಲ್ಲಿ **ಸುಪರ್ಣಂ** ಎಂಬ ಶಬ್ದವನ್ನು ಪ್ರಯೋಗಿಸಿದೆ. ಆ ಬಾಣದ ಮೊನೆಯು ಜಿಂಕೆಯ ಕೊಂಬಿನಿಂದ ಮಾಡಿದ್ದಾಗಿದೆ. ಅಥವಾ ಮೃಗಶಬ್ದಪ್ರಯೋಗವು ಇಲ್ಲಿ–ಬಾಣವು ಶತ್ರುಗಳನ್ನು ಹುಡಿಕಿಕೊಂಡುಹೋಗುವುದು ಎಂಬರ್ಥವನ್ನು ಸೂಚಿಸುವುದು. ಈ ಬಾಣಕ್ಕೆ ರೆಕ್ಕೆಗಳನ್ನು ಗೋವಿನ ಸ್ನಾಯುಗಳಿಂದ ಬಿಗಿದು ಕಟ್ಟಿರುವರು. ಇಂತಹ ಬಾಣವು ಯುದ್ಧಭಟನಿಂದ ಪ್ರೇರಿತವಾಗಿ ಶತ್ರುವಿನ ಮೇಲೆ ಬೀಳುವುದು. ಯುದ್ಧವು ನಡೆಯುತ್ತಿರುವಾಗ ಉಭಯಸೇನೆಗಳ ಯೋಧರು ಈಕಡೆಯಿಂದ ಆಕಡೆಗೂ ಆಕಡೆಯಿಂದ ಈಕಡೆಗೂ ನುಗ್ಗಿ ಹೋಗುತ್ತಿರುವರು. ಈ ಶತ್ರು ಭಟರ ಧಾಳಿಯಿಂದ ನಮ್ಮ ಬಾಣಗಳು ನಮಗೆ ಯುದ್ಧಗಳಲ್ಲಿ ರಕ್ಷಣೆಯನ್ನು ನೀಡಲಿ ಎಂದು ನಿರ್ವಚನದ ಮುಖ್ಯಾಭಿಪ್ರಾಯವು.

॥ ಸಂಹಿತಾಪಾಠಃ ॥

ಋಜೀತೇ ಪರಿ ವೃಙ್ಧಿ ನೋಽಶ್ಮಾ ಭವತು ನಸ್ತನೂಃ ।
ಸೋಮೋ ಅಧಿ ಬ್ರವೀತು ನೋಽದಿತಿಃ ಶರ್ಮ ಯಚ್ಛತು ॥ ೧೨ ॥

॥ ಪದಪಾಠಃ ॥

ಋಜೀತೇ । ಪರಿ । ವೃಙ್ಧಿ । ನಃ । ಅಶ್ಮಾ । ಭವತು । ನಃ । ತನೂಃ ।
ಸೋಮಃ । ಅಧಿ । ಬ್ರವೀತು । ನಃ । ಅದಿತಿಃ । ಶರ್ಮ । ಯಚ್ಛತು ॥ ೧೨ ॥

॥ ಸಾಯಣಭಾಷ್ಯಂ ॥

**ಋಜೀತೇ । ಋಜು ಗಚ್ಛತೀತ್ಯೃಜೀತಿರಿಷುಃ । ಹೇ ಇಷೋ ನೋಽಸ್ಮಾನ್ಪರಿ ವೃಙ್ಧಿ । ಪರಿತೋ ವರ್ಧಯ । ನೋಽಸ್ಮಾಕಂ ತನೂಃ ಶರೀರಮಶ್ಮಾ ಭವತು । ಅಶ್ಮವದಭೇದ್ಯಾ ದೃಢಾ ಭವತು । ಕಿಂಚ ನೋಽಸ್ಮಭ್ಯಂ ಸೋಮೋಽಧಿ ಬ್ರವೀತು । ಪಕ್ಷಪಾತೇನ ಬ್ರವೀತು । ಅದಿತಿರಪಿ ಶರ್ಮ ಸುಖಂ ಯಚ್ಛತು ॥**

॥ ಪ್ರತಿಪದಾರ್ಥ ॥

**ಋಜೀತೇ**—ಎಲೈ ಬಾಣವೇ । **ನಃ**—ನಮ್ಮನ್ನು । **ಪರಿ ವೃಂಗ್ಧಿ**—ಸಾರ್ವತ್ರಿಕವಾಗಿ ವೃದ್ಧಿಪಡಿಸು । **ನಃ**—ನಮ್ಮ । **ತನೂಃ**—ಶರೀರಗಳು । **ಅಶ್ಮಾ ಭವತು**—ಶಿಲೆಯಂತೆ ದೃಢಶಕ್ತಿಯುಳ್ಳವಾಗಿರಲಿ । **ಸೋಮಃ**—ಸೋಮದೇವನು । **ನಃ**—ನಮಗೆ । **ಅಧಿ ಬ್ರವೀತು**—ಪ್ರೀತಿವಾಕ್ಯಗಳನ್ನು ಹೇಳಲಿ । **ಅದಿತಿಃ**—ಅದಿತಿಯೂ । **ಶರ್ಮ**—ಸುಖವನ್ನು । **ಯಚ್ಛತು**—ಕೊಡಲಿ.

॥ ಭಾವಾರ್ಥ ॥

ಎಲೈ ಬಾಣವೇ, ನಮ್ಮನ್ನು ಸಾರ್ವತ್ರಿಕವಾಗಿ ವೃದ್ಧಿಪಡಿಸು. ನಮ್ಮ ಶರೀರಗಳು ಶಿಲೆಯಂತೆ ದೃಢಶಕ್ತಿಯುಳ್ಳವಾಗಿರಲಿ. ಸೋಮದೇವನು ನಮಗೆ ಪ್ರೀತಿವಾಕ್ಯಗಳನ್ನು ಹೇಳಲಿ. ಅದಿತಿಯೂ ನಮಗೆ ಸುಖವನ್ನು ಕೊಡಲಿ.

## English Translation

Straight-flying (arrow), defend us: may our bodies be stone: may Soma speak to us encouragement: may Aditi grant us success.

॥ ವಿಶೇಷವಿಷಯಗಳು ॥

ಯುದ್ಧದಲ್ಲಿ ಶತ್ರುಬಾಣಗಳು ನಮಗೆ ತಾಕಿ ಹಿಂಸೆಯನ್ನುಂಟುಮಾಡದಂತೆ ನಮ್ಮ ಶರೀರಗಳು ಕಲ್ಲಿನಂತೆ ಗಟ್ಟಿಯಾಗಿರಬೇಕೆಂದೂ, ಸೋಮದೇವತೆಯೂ ಅದಿತಿದೇವಿಯೂ ನಮಗೆ ಸುಖವನ್ನುಂಟುಮಾಡಿ ಕಾಪಾಡಬೇಕೆಂದೂ ಬಾಣವನ್ನು (ಇಷು) ಈ ಋಕ್ಕಿನಲ್ಲಿಯೂ ಸ್ತುತಿಸಲಾಗಿದೆ.

॥ ಸಂಹಿತಾಪಾಠಃ ॥

ಆ ಜಙ್ಘಂತಿ ಸಾನ್ವೇಷಾಂ ಜಘನಾಁ ಉಪ ಜಿಘ್ನತೇ ।
ಅಶ್ವಾಜನಿ ಪ್ರಚೇತಸೋಽಶ್ವಾನ್ತ್ಸಮತ್ಸು ಚೋದಯ ॥ ೧೩ ॥

॥ ಪದಪಾಠಃ ॥

ಆ । ಜಂಘಂತಿ । ಸಾನು । ಏಷಾಂ । ಜಘನಾನ್ । ಉಪ । ಜಿಘ್ನತೇ ।
ಅಶ್ವಽಅಜನಿ । ಪ್ರಽಚೇತಸಃ । ಅಶ್ವಾನ್ । ಸಮತ್ಽಸು । ಚೋದಯ ॥ ೧೩ ॥

॥ ಸಾಯಣಭಾಷ್ಯಂ ॥

**ಅಶ್ವಾಜನ್ಯಶ್ವಾನಾಂ ಕ್ಷೇಪ್ತ್ರಿ ಕಶೇ ಯಯಾ ತ್ವಯಾ ಪ್ರಚೇತಸಃ ಪ್ರಕೃಷ್ಟಜ್ಞಾನಾಃ ಸಾದಿನಃ ಸಾರಥಯೋ ವ್ಯೇಷಾಮಶ್ವಾನಾಂ ಸಾನು ಸಾನೂನಿ ಸಕ್ಥೀನ್ಯಾ ಜಂಘಂತಿ ಆಘ್ನಂತಿ। ಜಘನಾನ್ ಜಘನಾನಿ ಚೋಪ ಜಿಘ್ನತೇ ಉಪಜಿಘ್ನತಿ ಸಾ ತ್ವಂ ಸಮತ್ಸು ಸಂಗ್ರಾಮೇಷ್ವಶ್ವಾನ್ ಚೋದಯ। ಪ್ರೇರಯ। ತಥಾ ಚ ಯಾಸ್ಕಃ। ಆಘ್ನಂತಿ ಸಾನೂನ್ಯೇಷಾಂ ಸರಣಾನಿ ಸಕ್ಥೀನಿ। ಸಕ್ಥಿ ಸಚತೇರಾಸಕ್ತೋಽಸ್ಮಿನ್ ಕಾಯಃ। ಜಘನಾನಿ ಚೋಪಘ್ನಂತಿ। ಜಘನಂ ಜಂಘನ್ಯತೇಃ। ಅಶ್ವಾಜನಿ ಪ್ರಚೇತಸಃ ಪ್ರವೃದ್ಧಚೇತಸೋಽಶ್ವಾನ್ ಸಮತ್ಸು ಸಮರಣೇಷು ಸಂಗ್ರಾಮೇಷು ಚೋದಯ। ನಿ. ೯-೨೦। ಇತಿ॥**

॥ ಪ್ರತಿಪದಾರ್ಥ ॥

**ಅಶ್ವಾಜನಿ**—ಅಶ್ವಗಳನ್ನು ನಿಯಮಿಸುವ ಎಲೈ ಕಶೆಯೇ (ಚಾವಟಿ)। **ಪ್ರಚೇತಸಃ**—ಉತ್ಕೃಷ್ಟಬುದ್ಧಿಯುಳ್ಳ ಸಾರಥಿಗಳು। **ಏಷಾಂ**—ಈ ಅಶ್ವಗಳ। **ಸಾನು**—ಬೆನ್ನುಭಾಗಗಳನ್ನು (ನಿನ್ನಿಂದಲೇ)। **ಆ ಜಂಘಂತಿ**—ಹೊಡೆಯುತ್ತಾರೆ। **ಜಘನಾನ್**—ಜಘನಪ್ರದೇಶಗಳನ್ನೂ। **ಉಪ ಜಿಘ್ನತೇ**—ಅಪ್ಪಳಿಸುತ್ತಾರೆ। (ಅಂತಹ ನೀನು) **ಸಮತ್ಸು**—ಸಂಗ್ರಾಮಗಳಲ್ಲಿ। **ಅಶ್ವಾನ್**—ಅಶ್ವಗಳನ್ನು। **ಚೋದಯ**—ಪ್ರೇರಿಸು.

॥ ಭಾವಾರ್ಥ ॥

ಅಶ್ವನಿಯಾಮಕನಾದ ಎಲೈ ಕಶೆಯೇ, ಕುಶಲಬುದ್ಧಿಯುಳ್ಳ ಸಾರಥಿಗಳು ಈ ಅಶ್ವಗಳ ಬೆನ್ನುಭಾಗಗಳನ್ನೂ, ಜಘನಪ್ರದೇಶಗಳನ್ನೂ ನಿನ್ನಿಂದಲೇ ಹೊಡೆಯುತ್ತಾರೆ. ಅಂತಹ ನೀನು ಸಂಗ್ರಾಮಗಳಲ್ಲಿ ಅಶ್ವಗಳನ್ನು ಪ್ರೇರಿಸು.

English Translation.

Whip, with which the skilful (charioteers) lash their thights and scourge their flanks, urge the horses in battles.

॥ ವಿಶೇಷವಿಷಯಗಳು ॥

ಈ ಋಕ್ಕಿನಲ್ಲಿ ಅಶ್ವಗಳನ್ನು ಪ್ರೇರಿಸುವುದಕ್ಕಾಗಿ ಉಪಯೋಗಿಸುವ ಕಶಾ ಅಥವಾ ಚಾವಟಿಯನ್ನು ಸ್ತುತಿಸಲಾಗಿದೆ. ಈ ಚಾವಟಿಗೆ ಅಶ್ವಾಜನಿ ಎಂದೂ ಹೆಸರು. ಈ ಶಬ್ದವನ್ನು ವಿವರಿಸುವುದಕ್ಕಾಗಿ ಯಾಸ್ಕರು ಈ ಶಬ್ದಕ್ಕೂ ಈ ಋಕ್ಕಿಗೂ ನಿರ್ವಚನವನ್ನು ಹೇಳಿದಾರೆ.

> **ಅಶ್ವಾಜನೀ। ಅಶ್ವಾಜನೀಂ ಕಶೇತ್ಯಾಹುಃ। ಕಶಾ ಪ್ರಕಾಶಯತಿ ಭಯಮಶ್ವಾಯ। ಕೃಷ್ಯತೇರ್ವಾಣೂಭಾವಾತ್। ವಾಕ್ ಪುನಃ ಪ್ರಕಾಶಯತ್ಯರ್ಥಾನ್। ಖಶಯಾ। ಕ್ರೋಶತೇರ್ವಾ। ಅಶ್ವಕಶಾಯಾ ಏಷಾ ಭವತಿ॥ ಆ ಜಂಘಂತಿ ಸಾನ್ವೇಷಾಂ ಜಘನಾँ ಉಪ ಜಿಘ್ನತೇ। ಅಶ್ವಾಜನಿ ಪ್ರಚೇತಸೋಽಶ್ವಾನ್ತ್ಸಮತ್ಸು ಚೋದಯ॥ ಆಘ್ನಂತಿ ಸಾನೂನ್ಯೇಷಾಂ ಸರಣಾನಿ ಸಕ್ಥೀನಿ। ಸಕ್ಥಿಃ ಸಚತೇರಾಸಕ್ತೋಽಸ್ಮಿನ್ ಕಾಯಃ। ಜಘನಾನಿ ಚೋಪಘ್ನಂತಿ।**

**ಜಘನಂ ಜಂಘನ್ಯತೇ । ಅಶ್ವಾಜನಿ ಪ್ರಚೇತಸಃ ಪ್ರವೃದ್ಧಚೇತಸೋಽಶ್ವಾನ್ ಸಮತ್ಸು ಸಮರಣೇಷು ಸಂಗ್ರಾಮೇಷು ಚೋದಯ ॥**

(ನಿ. ೯-೧೯, ೨೦)

**ಅಶ್ವಾಜನೀ** ಎಂದರೆ ಕುದುರೆಯನ್ನು ಹೊಡೆಯುವುದಕ್ಕಾಗಿ ಉಪಯೋಗಿಸುವ ಚಾವಟಿಯು. ಇದಕ್ಕೆ **ಕಶಾ** ಎಂದೂ ಹೆಸರಿರುವುದು. ಈ ಕಶಾ ಅಥವಾ ಚಾವಟಿಯು ಕುದುರೆಗೆ ಭಯವನ್ನುಂಟುಮಾಡುವುದು. ಎಂದರೆ— ಕುದುರೆಯು ಚಾವಟಿಯ ಏಟಿಗೆ ಭಯಪಡುವುದು. ಕಶಾ ಎಂಬ ಶಬ್ದವು ಎಳಿ ಎಂಬರ್ಥವುಳ್ಳ ಕೃಷ್ಯತಿ ಧಾತುವಿನಿಂದ ನಿಷ್ಪನ್ನವಾಗಿದೆ. ಇದು ಬಹಳ ಸಣ್ಣದಾಗಿರುವುದು. ಮತ್ತು ಕಶಾ ಎಂಬ ಶಬ್ದಕ್ಕೆ ವಾಕ್ಕು ಎಂಬರ್ಥವೂ ಇರುವುದು. ಏಕೆಂದರೆ—ವಾಕ್ಯವು ಅರ್ಥವನ್ನು ಪ್ರಕಾಶಪಡಿಸುವುದು ಆದ್ದರಿಂದ ಕಶಾ ಎಂದರೆ ವಾಕ್ಯವು. ಅಥವಾ ಕುದರೆಯನ್ನು ಹೊಡೆಯುವಾಗ ಇದನ್ನು ಮೇಲಕ್ಕೆತ್ತಿ ಹೊಡೆಯುವುದರಿಂದ ಇದು (ಚಾವಟಿಯು) ಮೇಲೆ ಅಥವಾ ಆಕಾಶದಲ್ಲಿ ಇರುವುದು. ಆದ್ದರಿಂದ ಖ-ಆಕಾಶದಲ್ಲಿ ಶಾ-ಇರುವುದೂ ಎಂದರ್ಥವು ಸೂಚಿತವಾಗುವುದರಿಂನ ಖಶಾ ಅಥವಾ ಕಶಾ ಎಂದು ಹೆಸರು. ಅಥವಾ ಕಿರಿಚು, ಕೂಗಿಕೊಳ್ಳು ಎಂಬರ್ಥವಿರುವ ಕ್ರೋಶತಿ ಧಾತುವಿನಿಂದಲಾಗಲೀ ಕಶಾ ಶಬ್ದವು ನಿಷ್ಪನ್ನವಾಗಬಹುದು. ಈ ಕಶಾಪ್ರಹಾರದಿಂದ ಕುದುರೆಯು ಕಿರಿಚಿಕೊಳ್ಳುವುದು ಎಂದರೆ ಧ್ವನಿಮಾಡುವುದು. ಆದ್ದರಿಂದ ಈ ಚಾವಟಿಗೆ ಕಶಾ ಎಂಬ ಹೆಸರು ಬಂದಿರುವುದು ಎಂದು ಕಶಾ ಶಬ್ದದ ರೂಪನಿಷ್ಪತ್ತಿ ಮತ್ತು ಅರ್ಥ ವಿವರಣೆಯು. ಇದನ್ನು ಸಮರ್ಥಿಸುವುಕ್ಕಾಗಿ **ಆ ಜಂಘಂತಿ** ಎಂಬ ಪ್ರಕೃತಋಕ್ಕನ್ನೇ ಯಾಸ್ಕರು ಉದಾಹರಣೆ ಯಾಗಿ ತೆಗೆದುಕೊಂಡು ನಿರ್ವಚನವನ್ನು ಹೇಳಿರುವರು.

ಈ ಕಶೆಯಿಂದ ಕುದುರೆಗಳ ಜಘನಪ್ರದೇಶ ಎಂದರೆ ತೊಡೆಗಳ ಪಕ್ಕದಲ್ಲಿರುವ ಪ್ರದೇಶವನ್ನು ಹೊಡೆಯು ವರು. ಈ ತೊಡೆಯ ಪ್ರದೇಶಗಳಿಗೆ **ಸಕ್ಥೀನಿ** ಎಂದು ಹೆಸರು. ಸಕ್ಥಿ ಶಬ್ದವು ಕೂಡಿಸು, ಒಂದಾಗಿ ಸೇರಿಸು ಎಂಬರ್ಥವುಳ್ಳ ಸಕ್ ಧಾತುವಿನಿಂದ ನಿಷ್ಪನ್ನವಾಗಿದೆ. ಎಂದರೆ ಶರೀರವು ಎರಡು ತೋಡೆಗಳಿಗೆ ಸೇರಿದಂತೆ ಅಥವಾ ಕೂಡಿರುವಂತೆ ಇದೆ. ಆದ್ದರಿಂದ ಇವುಗಳಿಗೆ **ಸಕ್ಥೀನಿ** ಎಂದು ಹೆಸರು. ಸಕ್ಥೀನಿ ಎಂದರೆ ಕಟಿಪ್ರದೇಶವು ತೊಡೆಗಳ ಮೂಲ ಮತ್ತು ಹಿಂಭಾಗದ ಪ್ರದೇಶವು. ಬೆನ್ನಿಗೆ ಸೇರಿದಂತಿರುವ ಈ ಪ್ರದೇಶಗಳನ್ನು ಚಾವಟಿಯಿಂದ ಹೊಡೆಯು ತ್ತಾರೆ. ಜಘನಶಬ್ದವು ಅನೇಕಸಾರಿ ಹೊಡಿ ಎಂಬ ಅರ್ಥವಿರುವ ಜಂಘನ್ಯತೆಧಾತುವಿನಿಂದ ನಿಷ್ಪನ್ನವಾಗಿದೆ. ಕಶೆ ಯನ್ನು ಪ್ರಾರ್ಥಿಸುತ್ತಾ ಋಷಿಯು ಈ ರೀತಿ ಆದನ್ನು ಸ್ತುತಿಸಿರುವನು. ಎಲೈ ಕಶೆಯೇ (ಚಾವಟಿಯೇ) ಬುದ್ಧಿ ಶಕ್ತಿಯುಳ್ಳವೂ, ಚುರುಕಾಗಿರುವವೂ ಆದ ಈ ಕುದುರೆಗಳನ್ನು ಯುದ್ಧಗಳಲ್ಲಿ ಪ್ರೇರಿಸು ಎಂದು ಪ್ರಕೃತ ಋಕ್ಕಿನ ಉತ್ತರಾರ್ಧದ ಅಭಿಪ್ರಾಯವು.

। ಸಂಹಿತಾಪಾಠಃ ।

ಅಹಿರಿವ ಭೋಗೈಃ ಪರ್ಯೇತಿ ಬಾಹುಂ ಜ್ಯಾಯಾ ಹೇತಿಂ ಪರಿಬಾಧಮಾನಃ ।
ಹಸ್ತಘ್ನೋ ವಿಶ್ವಾ ವಯುನಾನಿ ವಿದ್ವಾನ್ಪುಮಾನ್ಪುಮಾಂಸಂ ಪರಿ ಪಾತು
ವಿಶ್ವತಃ ॥ ೧೪ ॥

॥ ಪದಪಾಠಃ ॥

ಅಹಿಃऽಇವ । ಭೋಗೈಃ । ಪರಿ । ಏತಿ । ಬಾಹುಂ । ಜ್ಯಾಯಾಃ । ಹೇತಿಂ । ಪರಿऽಬಾಧಮಾನಃ ।

ಹಸ್ತಽಘ್ನಃ । ವಿಶ್ವಾ । ವಯುನಾನಿ । ವಿದ್ವಾನ್ । ಪುಮಾನ್ । ಪುಮಾಂಸಂ । ಪರಿ । ಪಾತು । ವಿಶ್ವತಃ ॥

॥ ಸಾಯಣಭಾಷ್ಯಂ ॥

ಅತ್ರ ಧನ್ವಿನಃ ಪ್ರಕೋಷ್ಠೇ ಬಂಧನೀಯಸ್ಯ ಹಸ್ತಘ್ನಸ್ಯ ಸ್ತುತಿಃ । ಹಸ್ತಘ್ನಃ । ಹಸ್ತೇ ಹಸ್ತ-ಸಮೀಪೇ ವರ್ತಿನಿ ಪ್ರಕೋಷ್ಠೇ ಸ್ಥಿತಃ ಸನ್ ಜ್ಯಯಾ ಹನ್ಯತ ಇತಿ ಹಸ್ತಘ್ನಃ ॥ ಘಞರ್ಥೇ ಕವಿಧಾನಮಿತಿ ಕಃ ॥ ಜ್ಯಾಯಾ ಹೇತಿಂ ಜ್ಯಾಹೇತುಕಾಂ ಹಿಂಸಾಂ ಪರಿಬಾಧಮಾನೋ ನಿವಾರಯನ್ ಭೋಗೈಃ ಶರೀರೇಣ ॥ ವಚನವ್ಯತ್ಯಯಃ ॥ ಅಹಿರಿವ ಸರ್ಪ ಇವ ಬಾಹುಂ ಪ್ರಕೋಷ್ಠಂ । ಲಕ್ಷಣಯಾ ಬಾಹುಶಬ್ದಃ ಪ್ರಕೋಷ್ಠೇ ವರ್ತತೇ । ಪರ್ಯೇತಿ । ಪರಿವೇಷ್ಟಯತಿ । ಕಿಂಚ ವಿಶ್ವಾ ವಿಶ್ವಾನಿ ವಯುನಾನಿ ಜ್ಞಾನಾನಿ ಜ್ಞಾತವ್ಯಾನಿ । ಮಾಯಾ ವಯುನಮಿತಿ ತನ್ನಾಮಸು ಪಾಠಾತ್। ವಿದ್ವಾನ್ ಜಾನನ್ ಪುಮಾನ್ಪೌರುಷೋ-ಪೇತಃ ಸ್ವಯಂ ಪುಮಾಂಸಂ ಧನ್ವಿನಂ ವಿಶ್ವತಃ ಸರ್ವತಃ ಪರಿ ಪಾತು । ರಕ್ಷತಿ । ತಥಾ ಚ ಯಾಸ್ಕಃ । ಅಹಿರಿವ ಭೋಗೈಃ ಪರಿವೇಷ್ಟಯತಿ ಬಾಹುಂ ಜ್ಯಾಯಾ ವಧಾತ್ಪರಿತ್ರಾಯಮಾಣೋ ಹಸ್ತಘ್ನಃ ಸರ್ವಾಣಿ ಪ್ರಜ್ಞಾನಾನಿ ಪ್ರಜಾನನ್ ಪುಮಾನ್ಪುರುಮನಾ ಭವತಿ ಪುಂಸತೇರ್ವಾ । ನಿ. ೯. ೧೫ । ಇತಿ ॥

॥ ಪ್ರತಿಪದಾರ್ಥ ॥

**ಹಸ್ತಘ್ನಃ**—ಮಣಿಬಂಧದಲ್ಲಿ (ಮುಂದೋಳಿನಲ್ಲಿ) ಕಟ್ಟಿರುವ ಕಂಕಣವು । **ಜ್ಯಾಯಾಃ**—ಬಿಲ್ಲಿನ ಹೆದೆಯ । **ಹೇತಿಂ**—ಪ್ರಹಾರವನ್ನು । **ಪರಿಬಾಧಮಾನಃ**—ತಪ್ಪಿಸುತ್ತಾ । **ಭೋಗೈಃ**—ತನ್ನ ಶರೀರದಿಂದ । **ಅಹಿರಿವ**—ಸರ್ಪವು ಸುತ್ತುವರಿಯುವಂತೆ । **ಬಾಹುಂ**—ಮುಂದೋಳನ್ನು । **ಪರ್ಯೇತಿ**—ಸುತ್ತುವರಿದು ಆಶ್ರಯಿಸಿದೆ । **ವಿಶ್ವಾ**—ಸಮಸ್ತವಾದ । **ವಯುನಾನಿ**—ಜ್ಞಾನಗಳನ್ನೂ । **ವಿದ್ವಾನ್**—ಅರಿತ । **ಪುಮಾನ್**—ಪುರುಷನು । **ಪುಮಾಂಸಂ**—ಧನ್ವಿಯನ್ನು । **ವಿಶ್ವತಃ**—ಸರ್ವತ್ರ । **ಪರಿ ಪಾತು**—ಪೂರ್ಣವಾಗಿ ರಕ್ಷಿಸಲಿ.

॥ ಭಾವಾರ್ಥ ॥

ಮುಂದೋಳಿನಲ್ಲಿ ಕಟ್ಟಿರುವ ಕಂಕಣವು ಬಿಲ್ಲಿನ ಹೆದೆಯ ಪ್ರಹಾರವನ್ನು ತಪ್ಪಿಸುತ್ತಾ ತನ್ನ ಶರೀರದಿಂದ ಸರ್ಪವು ಸುತ್ತುವರಿಯುವಂತೆ ಮುಂದೋಳನ್ನು ಸುತ್ತುವರಿದು ಆಶ್ರಯಿಸಿದೆ. ಸಮಸ್ತಜ್ಞಾನಗಳನ್ನೂ ಅರಿತ ಪುರುಷನು ಧನ್ವಿಯನ್ನು ಸರ್ವತ್ರ ಪೂರ್ಣವಾಗಿ ರಕ್ಷಿಸಲಿ.

English Translation.

The ward of the fore-arm protcting it from the abrasion of the bow-string, surrounds the arm like a snake with its convolutions: may the brave man, experienced in the arts of war, defend a combatant ou every side.

॥ ವಿಶೇಷವಿಷಯಗಳು ॥

ಈ ಋಕ್ಕಿನಲ್ಲಿ **ಹಸ್ತಘ್ನ** ಎಂಬ ಕೈಗೆ (ಹಸ್ತಭಾಗಕ್ಕೆ) ಕಟ್ಟಿಕೊಳ್ಳುವ ಒಂದು ವಿಧವಾದ ವಸ್ತುವಿಶೇಷವನ್ನು ಸ್ತುತಿಸಲಾಗಿದೆ. ಈ ಶಬ್ದಾರ್ಥವನ್ನು ವಿವರಿಸುವುದಕ್ಕಾಗಿ ಯಾಸ್ಕರು ಈ ಋಕ್ಕಿಗೆ ನಿರ್ವಚನವನ್ನು ಹೇಳಿದ್ದಾರೆ.

> **ಹಸ್ತಘ್ನಃ । ಹಸ್ತಘ್ನೋ ಹಸ್ತೇ ಹನ್ಯತೇ । ತಸ್ಯೈಷಾ ಭವತಿ ॥ ಅಹಿರಿವ ಭೋಗೈಃ ಪರ್ಯೇತಿ ಬಾಹುಂ ಜ್ಯಾಯಾ ಹೇತಿ ಪರಿಬಾಧಮಾನಃ । ಹಸ್ತಘ್ನೋ ವಿಶ್ವಾ ವಯುನಾನಿ ವಿದ್ವಾನ್ಪುಮಾನ್ಪುಮಾಂಸಂ ಪರಿಪಾತು ವಿಶ್ವತಃ ॥ ಅಹಿರಿವ ಭೋಗೈಃ ಪರಿವೇಷ್ಟಯತಿ ಬಾಹುಂ ಜ್ಯಾಯಾ ವಧಾತ್ ಪರಿತ್ರಾಯಮಾಣೋ ಹಸ್ತಘ್ನಃ ಸರ್ವಾಣಿ ಪ್ರಜ್ಞಾನಾನಿ ಪ್ರಜಾನನ್ । ಪುಮಾನ್ ಪುರುಮನಾ ಭವತಿ । ಪುಂಸತೇರ್ವಾ ॥** (ನಿ. ೯-೧೫)

**ಹಸ್ತಘ್ನ**ವೆಂದರೆ ಉದ್ದಕ್ಕಿರುವ (belt) ಚರ್ಮದ ಪಟ್ಟಿಯು. ಇದನ್ನು ಹಸ್ತದ ಮುಂಭಾಗದಲ್ಲಿ ಕಂಕಣದಂತೆ ಸುತ್ತಿಕಟ್ಟಿಕೊಳ್ಳುವರು. ಬತ್ತಳಿಕೆಯಿಂದ ಬಾಣಗಳನ್ನು ಬೇಗಬೇಗನೆ ಒಂದೊಂದಾಗಿ ಎಳೆದುಕೊಂಡು ಧನುಸ್ಸಿನ ಹೆದೆಯಲ್ಲಿ ಹೂಡಿ ಶತ್ರುವಿನ ಮೇಲೆ ಬಿಡುವಾಗ ಹಸ್ತದ ಒಂದು ಭಾಗವು ಪದೇಪದೆ ಹೆದೆಗೆ ತಾಕುತ್ತಿರುತ್ತದೆ. ಹಸ್ತವು ಬೇಗ ಬೇಗನೆ ಹೆದೆಗೆ ತಾಕುವುದರಿಂದ ತಾಕುವ ಹಸ್ತದ ಆ ಭಾಗವು ಗಾಯಗೊಂಡು ಅಪಾಯವಾಗುವ ಸಂಭವವುಂಟು. ಅದನ್ನು ತಪ್ಪಿಸುವುದಕ್ಕಾಗಿ ಹಸ್ತದ ಆ ಭಾಗವನ್ನು ಉದ್ದವಾಗಿರುವ ಚರ್ಮದ ಪಟ್ಟಿಯಿಂದ ಸುತ್ತುವರು. ಹೆದೆಗೆ ಚರ್ಮದ ಪಟ್ಟಿ ಮಾತ್ರ ತಾಕುವುದರಿಂದ ಹಸ್ತಕ್ಕೆ ಯಾವ ಬಾಧೆಯೂ ಉಂಟಾಗುವುದಿಲ್ಲ. ಯಾಸ್ಕರು **ಹಸ್ತಘ್ನ** ವೆಂಬ ಶಬ್ದಕ್ಕೆ ಹಸ್ತದಲ್ಲಿ ಬಿಗುವಾಗಿ ಕಟ್ಟಲ್ಪಟ್ಟಿರುವುದೆಂದೂ ಈ ಪಟ್ಟಿಯು **ಜ್ಯಾ** ಅಥವಾ ಹೆದೆಯನ್ನು ಪದೇಪದೇ ತಾಗಿ ಬಡಿಯುತ್ತಿರುವುದರಿಂದ ಈ ಪಟ್ಟಿಗೆ **ಹಸ್ತಘ್ನ**ವೆಂದು ಹೆಸರು ಎಂದು ಅರ್ಥವಿವರಣೆಮಾಡಿದಾರೆ. ಈ ಶಬ್ದದ ಪ್ರಯೋಗವಿರುವ **ಅಹಿರಿವ ಭೋಗೈಃ** ಎಂಬ ಪ್ರಕೃತಋಕ್ಕನ್ನೇ ಉದಾಹರಣೆಯಾಗಿ ತೆಗೆದುಕೊಂಡು ನಿರ್ವಚನ ವನ್ನು ಹೇಳಿದಾರೆ. ಈ ಹಸ್ತಘ್ನವು ಎಂದರೆ ಚರ್ಮದ ಪಟ್ಟಿಯು (Hand-guard) ಯೋಧನ ಹಸ್ತವನ್ನು ಹಾವು ಕೈಯನ್ನು ಸುತ್ತಿಕೊಳ್ಳುವಂತೆ ಸುತ್ತಿಕೊಂಡಿರುವುದು. ಇದು ಹೆದೆಗೆ ಹಸ್ತವು ತಗಲದಂತೆ ಹಸ್ತವನ್ನು ಕಾಪಾಡು ವುದು. ಹೇಗೆಂದರೆ ಸಮಸ್ತವನ್ನೂ ತಿಳಿದ ವಿವೇಕಿಯಾದ ಪುರುಷನು ತನಗೆ ಅಥವಾ ಇತರರಿಗೆ ಒದಗಬಹುದಾದ ಅಪಾಯವನ್ನು ತಪ್ಪಿಸುವಂತೆ ಈ **ಹಸ್ತಘ್ನ**ವೂ ಅದನ್ನು ಧರಿಸಿರುವ ಅವನಹಸ್ತವನ್ನು ಸಮಸ್ತ ಅಪಾಯಗಳಿಂದಲೂ ಕಾಪಾಡುತ್ತದೆ. ಇಲ್ಲಿ **ಪುಮಾನ್ ಪುಮಾಂಸಂ** ಎಂಬ ಶಬ್ದಗಳ ಪ್ರಯೋಗವಿದೆ. **ಪುಮಾನ್** ಎಂದರೆ **ಪುರುಮನಾಃ** ಬಹುವಿಧವಾದ ಮನಸ್ಸುಳ್ಳವನು, ಚೆನ್ನಾಗಿ ತಿಳುವಳಿಕೆ ಅಥವಾ ಶಕ್ತಿಸಾಮರ್ಥ್ಯಗಳುಳ್ಳವನು ಎಂದರೆ ಸ್ತ್ರೀಯಿರಿಗಿಂತ ಹೆಚ್ಚು ಪ್ರಾಜ್ಞನೂ ಶಕ್ತಿಯುತನೂ ಆದವನೆಂದು **ಪುಮಾನ್** ಶಬ್ದದ ಅವಯವಾರ್ಥವು. ಅಥವಾ ಈ ಶಬ್ದವು ಅದಮು, ತುಳಿ ಎಂಬರ್ಥವುಳ್ಳ **ಪುಂಸತಿ** ಧಾತುವಿನಿಂದಲಾಗಲಿ ನಿಷ್ಪನ್ನವಾಗಬಹುದು. ಬಹಳ ಬಲಶಾಲಿ ಯೆಂದರ್ಥವು.

॥ ಸಂಹಿತಾಪಾಠಃ ॥

ಆಲಾಕ್ತಾ ಯಾ ರುರುಶೀರ್ಷ್ಣ್ಯಥೋ ಯಸ್ಯಾ ಅಯೋ ಮುಖಂ ।
ಇದಂ ಪರ್ಜನ್ಯರೇತಸ ಇಷ್ವೈ ದೇವ್ಯೈ ಬೃಹನ್ನಮಃ ॥ ೧೫ ॥

॥ ಪದಪಾಠಃ ॥

ಆಲಽಅಕ್ತಾ । ಯಾ । ರುರುಽಶೀರ್ಷ್ಣೀ । ಅಥೋ ಇತಿ । ಯಸ್ಯಾಃ । ಅಯಃ । ಮುಖಂ ।
ಇದಂ । ಪರ್ಜನ್ಯಽರೇತಸೇ । ಇಷ್ವೈ । ದೇವ್ಯೈ । ಬೃಹತ್ । ನಮಃ ॥ ೧೫ ॥

॥ ಸಾಯಣಭಾಷ್ಯಂ ॥

ಯೇಷುರಾಲಾಕ್ತಾಲೇನ ವಿಷೇಣಾಕ್ತಾ ರುರುಶೀರ್ಷ್ಣೀ ಹಂತೃಶಿರಸ್ಕಾ ॥ ಅರ್ತೇರ್ಹಿಂಸಾಕರ್ಮಣೋ ರುರುಶಬ್ದೋತ್ಪತ್ತಿಃ ॥ ಶೃಂಗಶೀರ್ಷ್ಣೀ ವಾ । ಅಥೋ ಕಿಂಚ ಯಸ್ಯಾ ಇಷೋರ್ಮುಖಮಯೋಽಯೋಮಯಂ ಭವತಿ ಪರ್ಜನ್ಯರೇತಸೇ । ಪರ್ಜನ್ಯೋ ರೇತೋ ಯಸ್ಯಾಃ ಸಾ ಪರ್ಜನ್ಯರೇತಾಃ । ತಸ್ಯೈ ಪರ್ಜನ್ಯಕಾರ್ಯಭೂತಾಯೈ । ಶರಕಾಂಡಸ್ಯ ಪರ್ಜನ್ಯಜನ್ಯತ್ವಾತ್ । ಬೃಹತ್ ಬೃಹತ್ಯೈ ತಸ್ಯೈ ದೇವ್ಯಾ ಇಷ್ವಾ ಇದಂ ನಮಃ ಕ್ರಿಯತ ಇತಿ ॥

॥ ಪ್ರತಿಪದಾರ್ಥ ॥

**ಯಾ**—ಯಾವ ಬಾಣವು । **ಆಲಾಕ್ತಾ**—ವಿಷಮಿಶ್ರಿತವಾಗಿ । **ರುರುಶೀರ್ಷ್ಣೀ**—ಹಂತಕವಾಗಿರುತ್ತದೋ । **ಅಥೋ**—ಅಲ್ಲದೇ । **ಯಸ್ಯಾಃ**—ಯಾವ ಬಾಣದ । **ಮುಖಂ**—ಮೊನೆಯು । **ಅಯಃ**—ಲೋಹಮಯವಾಗಿರುವುದೋ (ಅಂತಹ) । **ಪರ್ಜನ್ಯರೇತಸೇ**—ಪರ್ಜನ್ಯ ಕಾರ್ಯಾತ್ಮಕವಾದುದೂ । **ಬೃಹತ್**—ಮಹತ್ಸ್ವರೂಪವುಳ್ಳದ್ದೂ । **ದೇವ್ಯೈ**—ದೇವತಾತ್ಮವಾದುದೂ ಆದ । **ಇಷ್ವೈ**—ಬಾಣಕ್ಕೆ । **ಇದಂ ನಮಃ**—ಈ ನಮಸ್ಕಾರಾರ್ಪಣೆಯು ।

॥ ಭಾವಾರ್ಥ ॥

ಯಾವ ಬಾಣವು ವಿಷಮಿಶ್ರಿತವಾಗಿ ಶತ್ರುನಾಶಕವಾಗಿರುವುದೋ, ಅಲ್ಲದೇ, ಯಾವ ಬಾಣದ ತುದಿಯು ಲೋಹಮಯವಾಗಿರುವುದೋ ಅಂತಹ ಪರ್ಜನ್ಯಕಾರ್ಯಾತ್ಮಕವಾದುದೂ, ಮಹತ್ಸ್ವರೂಪವುಳ್ಳದ್ದೂ, ದೇವತಾತ್ಮಕವಾದುದೂ ಆದ ಬಾಣಕ್ಕೆ ಈ ನಮಸ್ಕಾರಾರ್ಪಣೆಯಿರುತ್ತದೆ.

## English Translation.

This praise (be offered) to the large celestial arrow, the growth of Parjanya, whose point is anointed with venom, whose blade is iron.

॥ ವಿಶೇಷವಿಷಯಗಳು ॥

ಈ ಋಕ್ಕಿನಲ್ಲಿಯೂ ಮುಂದಿನ ಋಕ್ಕಿನಲ್ಲಿಯೂ **ಇಷು** ಎಂದರೆ ಬಾಣದ ಸಾಮಾನ್ಯ ವರ್ಣನೆಯೂ ಸ್ತುತಿಯೂ ಇರುವುದು. ಬಾಣದ ಮೊನೆಯನ್ನು ವಿಷದಲ್ಲಿ ಅದ್ದಿ ಪ್ರಯೋಗಿಸುವುದು ಬಹು ಹಿಂದಿನ ಕಾಲದಿಂದಲೂ ಬಂದ ಪದ್ಧತಿಯಾಗಿದೆ. ಅನೇಕ ದೇಶಗಳಲ್ಲಿ ಕಾಡುಜನರು ಈಗಲೂ ಈ ಪದ್ಧತಿಯನ್ನೇ ಅನುಸರಿಸುತ್ತಿರುವರು. ಬಾಣದ ತುದಿಯು ಶರೀರಕ್ಕೆ ತಗಲಿ ಹೆಚ್ಚು ಗಾಯವಾಗದಿದ್ದರೂ ವಿಷಸಿಕ್ತವಾದ ತುದಿಯು ರಕ್ತಕ್ಕೆ ಸ್ಪರ್ಶವಾಗುವು

ದರಿಂದ ಶತ್ರುವು ತಕ್ಷಣವೇ ಮೃತನಾಗುವನು. ಅನೇಕ ಸಂದರ್ಭಗಳಲ್ಲಿ ಬಾಣದ ತುದಿಯನ್ನು ಮೊನಚಾದ ಲೋಹದ ಅಲುಗಿನಿಂದ ಮಾಡಿರುವರು. ಇದಲ್ಲದೆ ಬಾಣಗಳನ್ನು ಮಂತ್ರಾದಿಗಳಿಂದ ಸಂಸ್ಕರಿಸಿದರೆ ಅದರ ಕೊಲ್ಲುವ ಶಕ್ತಿಯು ಹೆಚ್ಚುವುದೆಂಬ ನಂಬಿಕೆಯೂ ಇದ್ದಿತು. ಈ ವಿಧಾನಗಳೆಲ್ಲವೂ ಆಗಿನ ಕಾಲದಲ್ಲಿ ರೂಢಿಯಲ್ಲಿದ್ದವೆಂದು ಈ ಎರಡು ಋಕ್ಕುಗಳಲ್ಲಿರುವ ವರ್ಣನೆಗಳಿಂದ ನಿಸ್ಸಂಶಯವಾಗಿ ಹೇಳಬಹುದು.

॥ ಸಂಹಿತಾಪಾಠಃ ॥

ಅವಸೃಷ್ಟಾ ಪರಾ ಪತ ಶರವ್ಯೇ ಬ್ರಹ್ಮಸಂಶಿತೇ ।
ಗಚ್ಛಾಮಿತ್ರಾನ್ಪ್ರ ಪದ್ಯಸ್ವ ಮಾಮೀಷಾಂ ಕಂ ಚನೋಚ್ಛಿಷಃ ॥ ೧೬ ॥

॥ ಪದಪಾಠಃ ॥

ಅವಽಸೃಷ್ಟಾ । ಪರಾ । ಪತ । ಶರವ್ಯೇ । ಬ್ರಹ್ಮಽಸಂಶಿತೇ ।
ಗಚ್ಛ । ಅಮಿತ್ರಾನ್ । ಪ್ರ । ಪದ್ಯಸ್ವ । ಮಾ । ಅಮೀಷಾಂ । ಕಂ । ಚನ । ಉತ್ । ಶಿಷಃ ॥ ೧೬ ॥

॥ ಸಾಯಣಭಾಷ್ಯಂ ॥

ಬ್ರಹ್ಮಸಂಶಿತೇ ಮಂತ್ರೇಣ ತೀಕ್ಷ್ಣೀಕೃತೇ ಶರವ್ಯೇ ಹಿಂಸಾಕುಶಲ ಇಷೋ ತ್ವಮವಸೃಷ್ಟಾ ಕ್ಷಿಪ್ತಾ ಪರಾ ಪತ । ಪರಾಗಚ್ಛ । ಇತೋ ದೇಶಾದ್ಗಚ್ಛ ಚ । ಅಮಿತ್ರಾನ್ಹಿಂಸಕಾನ್ಪ್ರ ಪದ್ಯಸ್ವ । ಪ್ರಾಪ್ನುಹಿ ಚ । ಅಮೀಷಾಮಮಿತ್ರಾಣಾಂ ಮಧ್ಯೇ ಕಂ ಚನ ಕಂಚಿದಪಿ ಮೋಚ್ಛಿಷಃ । ಅವಶಿಷ್ಟಂ ಮಾ ಕುರು ॥

॥ ಪ್ರತಿಪದಾರ್ಥ ॥

**ಬ್ರಹ್ಮಸಂಶಿತೇ**—ಮಂತ್ರದ ಸಹಾಯದಿಂದ ತೀಕ್ಷ್ಣವಾಗಿ ಮಾಡಲ್ಪಟ್ಟುದೂ । **ಶರವ್ಯೇ**—ಶತ್ರುಹಿಂಸಕವೂ ಆದ ಎಲೈ ಬಾಣವೇ । **ಅವಸೃಷ್ಟಾ**—ನಮ್ಮಿಂದ ಪ್ರಯೋಗಿಸಲ್ಪಟ್ಟು । **ಪರಾಪತ**—ದೂರಹೋಗು । **ಗಚ್ಛ**—ಶತ್ರುವಿನಲ್ಲಿಗೆ ಹೋಗು । **ಅಮಿತ್ರಾನ್**—ಶತ್ರುಗಳನ್ನು । **ಪ್ರ ಪದ್ಯಸ್ವ**—ಸಮೀಪಿಸು । **ಅಮೀಷಾಂ**—ಶತ್ರುಗಳ ನಡುವೆ । **ಕಂ ಚನ**—ಯಾರನ್ನೂ ಸಹ । **ಮಾ ಉಚ್ಛಿಷಃ**—ಉಳಿಸಬೇಡ ।

॥ ಭಾವಾರ್ಥ ॥

ಮಂತ್ರಸಹಾಯದಿಂದ ತೀಕ್ಷ್ಣವಾಗಿ ಮಾಡಲ್ಪಟ್ಟುದೂ, ಶತ್ರುಹಿಂಸಕವೂ ಆದ ಎಲೈ ಬಾಣವೇ, ನಮ್ಮಿಂದ ಪ್ರಯೋಗಿಸಲ್ಪಟ್ಟು ದೂರಹೋಗು, ಶತ್ರುವನ್ನು ಸಮೀಪಿಸು. ಶತ್ರುಗಳ ನಡುವೆ ಯಾರನ್ನೂ ಉಳಿಸದೇ ಎಲ್ಲರನ್ನೂ ನಾಶಮಾಡು.

English Translation.

Arrow, whetted by charms, fly when discharged : go, light amongst the adversaries : spare not one of the enemy.

॥ ಸಂಹಿತಾಪಾಠಃ ॥

ಯತ್ರ ಬಾಣಾಃ ಸಂಪತಂತಿ ಕುಮಾರಾ ವಿಶಿಖಾಇವ ।

ತತ್ರಾ ನೋ ಬ್ರಹ್ಮಣಸ್ಪತಿರದಿತಿಃ ಶರ್ಮ ಯಚ್ಛತು ವಿಶ್ವಾಹಾ ಶರ್ಮ ಯಚ್ಛತು ॥ ೧೭ ॥

॥ ಪದಪಾಠಃ ॥

ಯತ್ರ । ಬಾಣಾಃ । ಸಂಽಪತಂತಿ । ಕುಮಾರಾಃ । ವಿಶಿಖಾಃಽಇವ ।

ತತ್ರ । ನಃ । ಬ್ರಹ್ಮಣಃ । ಪತಿಃ । ಅದಿತಿಃ । ಶರ್ಮ । ಯಚ್ಛತು । ವಿಶ್ವಾಹಾ । ಶರ್ಮ । ಯಚ್ಛತು ॥೧೭॥

॥ ಸಾಯಣಭಾಷ್ಯಂ ॥

ಯತ್ರ ಯುದ್ಧೇ ಕುಮಾರಾ ವಿಶಿಖಾ ಇವ ಮುಂಡಿತಾ ಇವ ಬಾಣಾಃ ಸಂಪತಂತಿ ತತ್ರ ನೋಽಸ್ಮಭ್ಯಂ ಬ್ರಹ್ಮಣಸ್ಪತಿಃ ಶರ್ಮ ಸುಖಂ ವಿಶ್ವಾಹಾ ಸರ್ವದಾ ಯಚ್ಛತು । ಅದಿತಿಶ್ಚ ಶರ್ಮ ಯಚ್ಛತು । ದ್ವಿರುಕ್ತಿರಾದರಾರ್ಥಾ ॥

॥ ಪ್ರತಿಪದಾರ್ಥ ॥

**ವಿಶಿಖಾ ಇವ**—ಶಿಖೆಯಿಲ್ಲದ । **ಕುಮಾರಾಃ** — (ಮುಂಡಿತರಾದ) ಕುಮಾರರು ಸಂಚರಿಸುವಂತೆ । **ಯತ್ರ**—ಯಾವ ಯುದ್ಧದಲ್ಲಿ । **ಬಾಣಾಃ**—ಬಾಣಗಳು । **ಸಂಪತಂತಿ**—ಅನುಸ್ಯೂತವಾಗಿ ಬೀಳುವುವೋ । **ತತ್ರ**—ಆ ಯುದ್ಧದಲ್ಲಿ । **ನಃ**—ನಮಗೆ । **ಬ್ರಹ್ಮಣಸ್ಪತಿಃ**—ಬ್ರಹ್ಮಣಸ್ಪತಿಯು । **ಶರ್ಮ**—ಸುಖವನ್ನು (ರಕ್ಷಣೆಯನ್ನು) । **ವಿಶ್ವಾಹಾ**—ಸಕಲದಿನಗಳಲ್ಲಿಯೂ । **ಯಚ್ಛತು**—ಕೊಡಲಿ । **ಅದಿತಿಃ**—ಅದಿತಿಯೂ । **ಶರ್ಮ**—ಸುಖವನ್ನು । **ಯಚ್ಛತು**—ಉಂಟುಮಾಡಲಿ ।

॥ ಭಾವಾರ್ಥ ॥

ಮುಂಡಿತರಾಗಿ ಶಿಖಾರಹಿತರಾದ ಕುಮಾರರು ಮನಸ್ವಿಯಾಗಿ ಸಂಚರಿಸುವಂತೆ ಯಾವ ಯುದ್ಧದಲ್ಲಿ ಬಾಣಗಳು ಪ್ರಯೋಗಿಸಲ್ಪಟ್ಟು ಅನುಸ್ಯೂತವಾಗಿ ಬೀಳುವುವೋ ಆ ಯುದ್ಧದಲ್ಲಿ ಬ್ರಾಹ್ಮಣಸ್ಪತಿಯು ನಮಗೆ ಸಕಲದಿನಗಳಲ್ಲಿಯೂ ಸುಖವನ್ನು ಎಂದರೆ ಅಪಾಯ ಒದಗದಂತೆ ರಕ್ಷಣೆಯನ್ನು ಕೊಡಲಿ. ಅದಿತಿಯೂ ನಮಗೆ ಸುಖವನ್ನುಂಟುಮಾಡಲಿ.

English Translation.

Where arrows alight like shaven-headed boys : may Brahmanaspati, may aditi, grant us happiness ; grant us happiness every day.

|| ವಿಶೇಷವಿಷಯಗಳು ||

**ಕುಮಾರಾ ವಿಶಿಖಾ ಇವ—ಮುಂಡಿತಾಃ ಕುಮಾರಾ ಇವ ।** ಮುಂಡನಮಾಡಲ್ಪಟ್ಟ ಬಾಲಕರು (Boys with shaved heads) ಎಂದು ಈ ಶಬ್ದಗಳಿಗೆ ಭಾಷ್ಯಕಾರರು ಅರ್ಥವಿವರಣೆ ಮಾಡಿದಾರೆ. ಇವರನ್ನು ಬಾಣಗಳಿಗೆ ಹೋಲಿಸಿರುವುದರಲ್ಲಿ ಯಾವ ವಿಶೇಷವೂ ಕಂಡುಬರುವುದಿಲ್ಲ. ಒಂದಕ್ಕೊಂದು ಸಂಬಂಧವಿರುವುದಿಲ್ಲ ಈ ವಿಷಯದಲ್ಲಿ Wilson ಪಂಡಿತನು ಈ ರೀತಿ ಬರೆಯುತ್ತಾನೆ—

ಕುಮಾರಾ ವಿಶಿಖಾ ಇವ-like boys without the lock of hair left at shaving; ಮುಂಡಿತಃ ಮುಂಡಃ shorn-headed ; the point of comparison is not very obvious, but it may mean, that the arrows fall where they list as boys before they are left with the lock of hair, before the religious tonsure, play about wherever they like.

ಈ ಉಪಮಾನವು ಇಲ್ಲಿ ಸರಿಯಾಗಿ ಹೊಂದುವುದಿಲ್ಲ. ಯುದ್ಧಭೂಮಿಯಲ್ಲಿ ಎಲ್ಲೆಲ್ಲಿಯೂ ಮಳೆಯು ಹನಿಗಳಂತೆ ಬೀಳುತ್ತಿರುವ ಬಾಣಗಳಿಗೂ, ಮುಂಡಿತರಾದ ಬಾಲಕರಿಗೂ ಯಾವ ಸಾದೃಶ್ಯವಿರುವುದೆಂದು ಹೇಳುವುದು ಸಾಧ್ಯವಿಲ್ಲ. ಋಷಿಯ ಅಭಿಪ್ರಾಯವು ಈ ರೀತಿ ಇರಲಾರದು. ಈ ಶಬ್ದಗಳಿಗೆ ಇನ್ನೊಂದು ವಿಧವಾಗಿ ಅರ್ಥ ಮಾಡಬಹುದು. **ಶಿಖಾ** ಎಂದರೆ ಬೆಂಕಿಯ ಜ್ವಾಲೆಯು **ವಿಶಿಖಾಃ** ಎಂದರೆ ವಿಶೇಷವಾಗಿ ಅಥವಾ ಚೆನ್ನಾ ಬೆಳಗುವ ಬೆಂಕಿಯ ಜ್ವಾಲೆ ಅಥವಾ ಕಿಡಿಗಳು. **ಕುಮಾರಾಃ** ಎಂದರೆ ಚೆನ್ನಾಗಿ ಬೆಳೆದ ಪುರುಷರಂತೆ ದೊಡ್ಡವರಲ್ಲದವರು, ಬಾಲಕರು, ಆಕಾರದಲ್ಲಿ ಚಿಕ್ಕವರು ಎಂದರ್ಥವು. ಎಂದರೆ **ಕುಮಾರಾ ವಿಶಿಖಾಃ** ಎಂಬ ಶಬ್ದಗಳಿಗೆ ಸಣ್ಣಸಣ್ಣ ಕಿಡಿಗಳು ಎಂದರ್ಥವು. ಕಾದಕಬ್ಬಿಣವನ್ನು ಕಮ್ಮಾರನು ಸುತ್ತಿಗೆಯಿಂದ ಬಡಿಯುವಾಗ ಸಣ್ಣಸಣ್ಣ ಕಿಡಿಗಳು ಸುತ್ತಲೂ ಎಂದರೆ ಎಲ್ಲಾ ಕಡೆಗಳಿಗೂ ಹಾರಿಬೀಳುವಂತೆ ಈ ಯುದ್ಧಭೂಮಿಯಲ್ಲಿ ಯೋಧರಿಂದ ಬಿಡಲ್ಪಟ್ಟ ಬಾಣಗಳು ಎಲಾ ಕಡೆಗೂ ಹೋಗಿ ಬೀಳುತ್ತವೆ. ಇಂತಹ ಬಾಣಗಳ ಭಯದಿಂದ ಇಂದ್ರನು ನಮ್ಮನ್ನು ಕಾಪಾಡಲಿ ಎಂದು ಒಂದು ವಿಧವಾಗಿ ಅರ್ಥವನ್ನು ಹೇಳಬಹುದು. ಆದರೆ ಈ ವಿಧವಾದ ಅರ್ಥವೂ ಒಂದು ಊಹೆಯೇ ಹೊರತು ಋಷಿಯ ಆಶಯವೇ ಇದೆಂದು ನಿಶ್ಚಯವಾಗಿ ಹೇಳಲು ಸಾಧ್ಯವಿಲ್ಲ.

|| ಸಂಹಿತಾಪಾಠಃ ||

ಮರ್ಮಾಣಿ ತೇ ವರ್ಮಣಾ ಛಾದಯಾಮಿ ಸೋಮಸ್ತ್ವಾ ರಾಜಾಮೃತೇ-
ನಾನು ವಸ್ತಾಂ ।
ಉರೋರ್ವರೀಯೋ ವರುಣಸ್ತೇ ಕೃಣೋತು ಜಯಂತಂ ತ್ವಾನು ದೇವಾ
ಮದಂತು ॥ ೧೮ ॥

॥ ಪದಪಾಠಃ ॥

ಮರ್ಮಾಣಿ । ತೇ । ವರ್ಮಣಾ । ಛಾದಯಾಮಿ । ಸೋಮಃ । ತ್ವಾ । ರಾಜಾ । ಅಮೃತೇನ । ಅನು ।
ವಸ್ತಾಂ ।

ಉರೋಃ । ವರೀಯಃ । ವರುಣಃ । ತೇ । ಕೃಣೋತು । ಜಯಂತಂ । ತ್ವಾ । ಅನು । ದೇವಾಃ ।
ಮದಂತು ॥ ೧೮ ॥

॥ ಸಾಯಣಭಾಷ್ಯಂ ॥

**ಹೇ ರಾಜನ್ ತೇ ತ್ವದೀಯಾನಿ ಮರ್ಮಾಣಿ । ಯೇಷು ಸ್ಥಾನೇಷು ವಿದ್ಧಃ ಸದ್ಯೋ ಮ್ರಿಯತೇ ತಾನಿ ಮರ್ಮಾಣಿ । ವರ್ಮಣಾ ಕವಚೇನ ಛಾದಯಾಮಿ । ಸೋಮೋ ರಾಜಾ ತ್ವಾ ತ್ವಾಮನು ಮರ್ಮಾಚ್ಛಾದನಾನಂತರಮಮೃತೇನ ವಸ್ತಾಂ । ಆಚ್ಛಾದಯತು । ಕಿಂಚ ವರುಣೋಽಪಿ ತೇ ತುಭ್ಯಮುರೋರ್ವರೀಯ ಉರುತರಂ ಸುಖಂ ಕೃಣೋತು । ಕರೋತು । ಜಯಂತಂ ತ್ವಾ ತ್ವಾಂ ದೇವಾಃ ಸರ್ವೇಽಪ್ಯನುಮದಂತು । ಅನುಹೃಷ್ಯಂತು ॥**

॥ ಪ್ರತಿಪದಾರ್ಥ ॥

(ಎಲೈ ರಾಜನೇ) **ತೇ**—ನಿನ್ನ । **ಮರ್ಮಾಣಿ**—ನಿನ್ನ ಮರ್ಮಸ್ಥಾನಗಳನ್ನು । **ವರ್ಮಣಾ**—ಲೋಹ ಕವಚದಿಂದ । **ಛಾದಯಾಮಿ**—ಹೊದಿಸುತ್ತೇನೆ । **ಅನು**—ಅನಂತರ । **ರಾಜಾ**—ರಾಜನಾದ । **ಸೋಮಃ**—ಸೋಮದೇವನು । **ತ್ವಾ**—ನಿನ್ನನ್ನು । **ಅಮೃತೇನ**—ಅಮೃತದಿಂದ । **ವಸ್ತಾಂ**—ವ್ಯಾಪಿಸುವಂತೆ ತುಂಬಲಿ । **ವರುಣಃ**—ವರುಣನೂ । **ತೇ**—ನಿನಗೆ । **ಉರೋರ್ವರೀಯಃ**—ಅತ್ಯಂತ ಮಹತ್ತಾದ ಸುಖವನ್ನು । **ಕೃಣೋತು**—ಮಾಡಲಿ । **ಜಯಂತಂ**—ಜಯಶೀಲನಾದ । **ತ್ವಾ**—ನಿನ್ನನ್ನು । **ದೇವಾಃ**—ಸಕಲ ದೇವತೆಗಳು । **ಅನು ಮದಂತು**—ಅಭಿನಂದಿಸಲಿ

॥ ಭಾವಾರ್ಥ ॥

ಎಲೈ ರಾಜನೇ, ನಿನ್ನ ಮರ್ಮಸ್ಥಾನಗಳನ್ನು ನಾನು ಲೋಹಕವಚದಿಂದ ಹೊದ್ದಿಸುತ್ತೇನೆ. ಅನಂತರ ರಾಜನಾದ ಸೋಮನು ನಿನ್ನ ದೇಹವನ್ನು ಅಮೃತದಿಂದ ಪೂರ್ಣವಾಗಿ ತುಂಬಲಿ. ವರುಣನು ನಿನಗೆ ಅತ್ಯಂತ ಮಹತ್ತಾದ ಸುಖವನ್ನುಂಟುಮಾಡಲಿ. ಜಯಶೀಲನಾದ ನಿನ್ನನ್ನು ಸಕಲ ದೇವತೆಗಳೂ ಅಭಿನಂದಿಸಲಿ.

English Translation.

I cover your vital parts with armour ; may the royal Soma invest you with ambarosia : may Varuna amplify your ample felicity : may the gods rejoice (at beholding you) triumphant.

। ಸಂಹಿತಾಪಾಠಃ ।

ಯೋ ನಃ ಸ್ವೋ ಅರಣೋ ಯಶ್ಚ ನಿಷ್ಟ್ಯೋ ಜಿಘಾಂಸತಿ ।

ದೇವಾಸ್ತಂ ಸರ್ವೇ ಧೂರ್ವಂತು ಬ್ರಹ್ಮ ವರ್ಮ ಮಮಾಂತರಂ ॥ ೧೯ ॥

। ಪದಪಾಠಃ ।

ಯಃ । ನಃ । ಸ್ವಃ । ಅರಣಃ । ಯಃ । ಚ । ನಿಷ್ಟ್ಯಃ । ಜಿಘಾಂಸತಿ ।

ದೇವಾಃ । ತಂ । ಸರ್ವೇ । ಧೂರ್ವಂತು । ಬ್ರಹ್ಮ । ವರ್ಮ । ಮಮ । ಅಂತರಂ ॥ ೧೯ ॥

। ಸಾಯಣಭಾಷ್ಯಂ ।

ಯಃ ಸ್ವೋ ಜ್ಞಾತಿರರಣೋಽರಮಮಾಣೋ ಯಶ್ಚ ನಿಷ್ಟ್ಯಸ್ತಿರೋಭೂತೋ ದೂರೇ ಸ್ಥಿತೋ ನೋಽಸ್ಮಾನ್ ಜಿಘಾಂಸತಿ ಹಂತುಮಿಚ್ಛತಿ ತಂ ದೇವಾಃ ಸರ್ವೇ ದೇವಾ ಧೂರ್ವಂತು । ಹಿಂಸಂತು । ಬ್ರಹ್ಮ ಮಂತ್ರೋ ಮಮಾಂತರಂ ಶರಾಣಾಂ ನಿವಾರಕಂ ವರ್ಮ ವಿದ್ಯತೇ ॥

। ಪ್ರತಿಪದಾರ್ಥ ।

**ಯಃ**—ಯಾವ । **ಸ್ವಃ**—ನಮಗೆ ಸೇರಿದ ಬಂಧುವಾಗಲಿ (ಅಥವಾ) । **ಅರಣಃ**—ಅಸಹನೆಯಿಂದ ತುಂಬಿದವನೂ । **ನಿಷ್ಟ್ಯಃ**—ಬಂಧುವಲ್ಲದ ದೂರಸ್ಥನೇ ಆಗಲಿ । **ಯಶ್ಚ**—ಯಾರು ಯಾರು । **ನಃ**—ನಮ್ಮನ್ನು । **ಜಿಘಾಂಸತಿ**— ಕೊಲ್ಲಲಿಚ್ಛಿಸುವನೋ । **ತಂ**— ಅವನನ್ನು । **ಸರ್ವೇ ದೇವಾಃ**—ಸಕಲ ದೇವತೆಗಳೂ । **ಧೂರ್ವಂತು**—ಹಿಂಸಿಸಲಿ । **ಬ್ರಹ್ಮ**—ದೇವತೆಗಳನ್ನು ಸ್ತುತಿಸುವ ಮಂತ್ರವೇ । **ಮಮ**—ನನಗೆ । **ಅಂತರಂ**—ಶತ್ರುಗಳನ್ನು ನಿವಾರಿಸುವ । **ವರ್ಮ**—ಲೋಹಕವಚವಾಗಿದೆ.

। ಭಾವಾರ್ಥ ।

ನಮಗೆ ಸ್ವಂತವಾದ ಬಂಧುಗಳಲ್ಲಿ ಯಾರೇ ಆಗಲಿ ಅಥವಾ ದೂರಸ್ಥರಲ್ಲಿ ಯಾರೇ ಆಗಲಿ ಯಾರು ಯಾರು ನಮ್ಮನ್ನು ಕೊಲ್ಲಲಿಚ್ಛಿಸುವರೋ ಅವರನ್ನೆಲ್ಲಾ ಸಕಲದೇವತೆಗಳೂ ಹಿಂಸಿಸಲಿ. ದೇವತೆಗಳನ್ನು ಸ್ತುತಿಸುವ ಮಂತ್ರವೇ ನಮಗೆ ಶತ್ರುಗಳ ಶರಗಳನ್ನು ನಿವಾರಿಸುವ ಲೋಹಕವಚವಾಗಿದೆ.

## English Translation.

Whoever, weather an unfriendly relative or a stranger, desires to kill us, may all the gods destroy him : prayer is my best armour.

। ವಿಶೇಷವಿಷಯಗಳು ।

ದೇವತೆಗಳನ್ನು ಸ್ತುತಿಸುವ ಮಂತ್ರವೇ ರಕ್ಷಾಕವಚದಂತೆ ನಮ್ಮನ್ನು ರಕ್ಷಿಸಲಿ ಎಂದು ಮಂತ್ರಗಳಲ್ಲಿರುವ ಶಕ್ತಿಸಾಮರ್ಥ್ಯಗಳಲ್ಲಿ ಋಷಿಯು ಶ್ರದ್ಧೆಯನ್ನಿಟ್ಟು ದೇವತೆಗಳನ್ನು ಸ್ತುತಿಸಿದಾನೆ.



ವೇದಾರ್ಥಸ್ಯ ಪ್ರಕಾಶೇನ ತಮೋ ಹಾರ್ದಂ ನಿವಾರಯನ್ ।
ಪುಮರ್ಥಾಂಶ್ಚತುರೋ ದೇಯಾದ್ವಿದ್ಯಾತೀರ್ಥಮಹೇಶ್ವರಃ ॥

**ಇತಿ ಶ್ರೀಮದ್ರಾಜಾಧಿರಾಜ ಪರಮೇಶ್ವರ ವೈದಿಕಮಾರ್ಗಪ್ರವರ್ತಕ ಶ್ರೀ ವೀರಬುಕ್ಕಭೂಪಾಲಸಾಮ್ರಾಜ್ಯ-ಧುರಂಧರೇಣ ಸಾಯಣಾಚಾರ್ಯೇಣ ವಿರಚಿತೇ ಮಾಧವೀಯೇ ವೇದಾರ್ಥಪ್ರಕಾಶೇ ಋಕ್ಸಂಹಿತಾಭಾಷ್ಯೇ ಷಷ್ಠಂ ಮಂಡಲಂ ಸಮಾಪ್ತಂ**

॥ ಓಂ ತತ್ಸತ್ ॥

ಇಲ್ಲಿಗೆ ಶ್ರೀಸಾಯಣಭಾಷ್ಯಸಹಿತವೂ ಕರ್ನಾಟಕ ಭಾಷಾನುವಾದಯುತವೂ ಆದ
ಋಗ್ವೇದಸಂಹಿತೆಯಲ್ಲಿ ಆರನೆಯ ಮಂಡಲವು
ಸಮಾಪ್ತವಾದುದು.

ಯದಕ್ಷರಪದಭ್ರಷ್ಟಂ ಮಾತ್ರಾಹೀನಂ ತು ಯದ್ಭವೇತ್ ।
ತತ್ಸರ್ವಂ ಕ್ಷಮ್ಯತಾಂ ದೇವ ವಾಗೀಶ್ವರ ನಮೋಽಸ್ತು ತೇ ॥

॥ ಶುಭಂ ಭೂಯಾತ್ ॥

॥ ಮಂಗಳಂ ॥





॥ ಶ್ರೀಃ ॥

॥ ಶ್ರೀ ಗಣಾಧಿಪತಯೇ ನಮಃ ॥

ವಾಗೀಶಾದ್ಯಾಃ ಸುಮನಸಃ ಸರ್ವಾರ್ಥಾನಾಮುಪಕ್ರಮೇ ।
ಯಂ ನತ್ವಾ ಕೃತಕೃತ್ಯಾಃ ಸ್ಯುಸ್ತಂ ನಮಾಮಿ ಗಜಾನನಂ ॥
ಯಸ್ಯ ನಿಃಶ್ವಸಿತಂ ವೇದಾ ಯೋ ವೇದೇಭ್ಯೋಽಖಿಲಂ ಜಗತ್ ।
ನಿರ್ಮಮೇ ತಮಹಂ ವಂದೇ ವಿದ್ಯಾತೀರ್ಥಮಹೇಶ್ವರಂ ॥
ವೇದಃ ಶಿವಃ ಶಿವೋ ವೇದೋ ವೇದಾಧ್ಯಾಯೀ ಸದಾಶಿವಃ ।
ತಸ್ಮಾತ್ಸರ್ವಪ್ರಯತ್ನೇನ ವೇದಮೇವ ಸದಾ ಜಪೇತ್ ॥

## ಸಾಯಣಭಾಷ್ಯಸಹಿತಾ

# ಋಗ್ವೇದಸಂಹಿತಾ

(ಕರ್ನಾಟಕ ಭಾಷಾರ್ಥಾನುವಾದ ವಿವರಣೆ ಸಹಿತವಾಗಿ)

## ॥ ಪಂಚಮಾಷ್ಟಕೇ ಪ್ರಥಮೋಽಧ್ಯಾಯಃ ॥

### ಐದನೆಯ ಅಷ್ಟಕದಲ್ಲಿ ಒಂದನೆಯ ಅಧ್ಯಾಯವು

## ಏಳನೆಯ ಮಂಡಲವು

### ಪೀಠಿಕೆ.

ಋಗ್ವೇದಸಂಹಿತೆಯ ಏಳನೆಯ ಮಂಡಲಕ್ಕೆ ವಸಿಷ್ಠನು ಮಂಡಲದ್ರಷ್ಟೃವಾದ ಋಷಿಯು. ಈ ಮಂಡಲದಲ್ಲಿ ಒಟ್ಟು ೧೦೪ ಸೂಕ್ತಗಳಿರುವವು. ಇತರ ಮಂಡಲಗಳಲ್ಲಿರುವಂತೆ ಈ ಮಂಡಲದಲ್ಲಿ ಅನೇಕ ಋಷಿಗಳಿರುವುದಿಲ್ಲ. ವಸಿಷ್ಠನೊಬ್ಬನೇ ಋಷಿಯು; ಇದೇ ಈ ಮಂಡಲದ ವೈಶಿಷ್ಟ್ಯವು. ಪುರಾಣಾದಿಗಳಲ್ಲಿಯೂ ವಸಿಷ್ಠ ಋಷಿಯು ಸಪ್ತರ್ಷಿಗಳಲ್ಲಿ ಒಬ್ಬನೆಂದೂ, ಮಹಾತೇಜಸ್ವಿಯೆಂದೂ ಪ್ರಸಿದ್ಧವಾಗಿದೆ. ಈ ವಸಿಷ್ಠ ಋಷಿಗೂ, ವಿಶ್ವಾಮಿತ್ರ ಋಷಿಗೂ ಕಾರಣಾಂತರದಿಂದ ವಿರೋಧವು ಪ್ರಾಪ್ತವಾಗಿ ಇವರು ನಡೆಸಿದ ಕಾರ್ಯಾಚರಣೆ ಮೊದಲಾದ ವಿಷಯಗಳು ಪುರಾಣಾದಿಗಳಲ್ಲಿ ವಿಸ್ತಾರವಾಗಿ ವಿವರಿಸಲ್ಪಟ್ಟಿದೆ. ಈ ವಿಷಯಕ್ಕೆ ಮೂಲಕಾರಣವು ಋಗ್ವೇದದಲ್ಲಿ ಸ್ವಲ್ಪಮಟ್ಟಿಗೆ ಸೂಚಿತವಾಗಿದೆ. ಅದನ್ನೇ ವಿಸ್ತಾರವಾಗಿ ಪುರಾಣಾದಿಗಳಲ್ಲಿ ಹೇಳಿದೆ. ಈಗ ಈ ಪೀಠಿಕೆಯಲ್ಲಿ ವಸಿಷ್ಠ ಋಷಿಯ ಸೂಕ್ಷ್ಮ ಪರಿಚಯವನ್ನು ಉಲ್ಲೇಖಿಸುವೆವು.

## ವಸಿಷ್ಠ ಋಷಿಯ ಸೂಕ್ಷ್ಮ ಪರಿಚಯ

ವಸಿಷ್ಠ ಮಹರ್ಷಿಯು ಋಗಾದಿಸಂಹಿತೆಗಳಲ್ಲೂ ಬ್ರಾಹ್ಮಣಾದಿಗಳಲ್ಲೂ ಅತ್ಯಂತ ಪ್ರಶಂಸಿತನಾಗಿದ್ದಾನೆ. ಋಕ್ಸಂಹಿತೆಯಲ್ಲಿ ಏಳನೆಯ ಮಂಡಲವು ಪೂರ್ಣವಾಗಿ ವಸಿಷ್ಠಮಂಡಲವೆಂದೇ ಪ್ರಖ್ಯಾತವಾಗಿದೆ. ಈ ಮಹರ್ಷಿಯು ಆಧ್ಯಾತ್ಮಿಕ ತತ್ತ್ವದ ಸಾಕ್ಷಾತ್ಕಾರವನ್ನು ಹೊಂದಿ ತನ್ನ ಕೃತಿಗಳ ಮೂಲಕ ವಿಶ್ವರಹಸ್ಯಗಳನ್ನೂ, ಈಶ್ವರವಿಭೂತಿವಿಶೇಷ ಗಳನ್ನೂ ಅನೇಕ ವಿಧವಾಗಿ ವರ್ಣಿಸಿ ಪ್ರಶಂಸಿಸಿದ್ದಾನೆ. ಪ್ರಕೃತದಲ್ಲಿ ಈ ಮಹರ್ಷಿಯ ದಿವ್ಯ ಚರಿತ್ರೆಯನ್ನು ಮೂರು ವಿಭಾಗವಾಗಿ ವಿಂಗಡಿಸಿ ವಿವರಿಸಲಾಗುತ್ತದೆ. (೧) ಮೊದಲನೆಯದಾಗಿ ಈತನ ದಿವ್ಯಾಂಶತ್ವ, ಉತ್ಪತ್ತಿ ಮತ್ತು ವೈಯಕ್ತಿಕವಾದ ಮಾಹಾತ್ಮ್ಯ. (೨) ಎರಡನೆಯದಾಗಿ ಇವನಿಗೂ ಸುದಾಸನೆಂಬ ರಾಜನಿಗೂ ಇರುವ ಸಂಬಂಧ ಮತ್ತು ಅದರ ಪರಿಣಾಮಗಳು. (೩) ಮೂರನೆಯದಾಗಿ, ಈತನಿಗೂ ಮತ್ತು ವಿಶ್ವಾಮಿತ್ರನಿಗೂ ಸಂಭವಿಸಿದ ಪರಸ್ಪರ ವೈಷಮ್ಯ ಮತ್ತು ತತ್ಪರಿಣಾಮ. ಹೀಗೆ ವಿಭಾಗಮಾಡಿ ವೈದಿಕ ವಾಕ್ಯಗಳಲ್ಲಿ ಈ ಪ್ರಕರಣಗಳನ್ನು ಯಾವ ರೀತಿ ವರ್ಣಿಸಿದೆಯೆಂದು ತಿಳಿಸಿ ನಂತರ ಪುರಾಣಾದಿಗಳಲ್ಲಿ ಹೇಳಿರುವ ಅಂಶಗಳನ್ನೂ ಸೂಕ್ಷ್ಮವಾಗಿ ತಿಳಿಸಲಾಗುತ್ತದೆ.

## ವಸಿಷ್ಠನ ಉತ್ಪತ್ತಿ ಮತ್ತು ಅತಿಶಯವಾದ ಮಾಹಾತ್ಮ್ಯ

ವಸಿಷ್ಠನು ದಿವ್ಯಾಂಶಸಂಭೂತನೆಂದೂ, ವೈಯಕ್ತಿಕವಾದ ಮಾಹಾತ್ಮ್ಯವನ್ನು ಹೊಂದಿದ್ದವನೆಂದೂ, ಋಕ್ಸಂಹಿತೆಯಲ್ಲಿ ಅನೇಕ ಕಡೆಗಳಲ್ಲಿ ಪ್ರಶಂಸಿಸಿದೆ. ಅವನ ಉತ್ಪತ್ತಿ ಕ್ರಮವನ್ನು ಈ ರೀತಿ ತಿಳಿಸಿದೆ.

**ವಿದ್ಯುತೋ ಜ್ಯೋತಿಃ ಪರಿ ಸಂಜಿಹಾನಂ ಮಿತ್ರಾವರುಣಾ ಯದಪಶ್ಯತಾಂ ತ್ವಾ ।**
**ತತ್ತೇ ಜನ್ಮೋತೈಕಂ ವಸಿಷ್ಠಾಗಸ್ತ್ಯೋ ಯತ್ತ್ವಾ ವಿಶ ಆಜಭಾರ ॥**

(ಋ ಸಂ. ೭-೩೩-೧೦)

ಎಲೈ ವಸಿಷ್ಠನೇ, ನೀನು ನಿನ್ನ ಆತ್ಮೀಯವಾದ ಪ್ರಭೆಯನ್ನು ಬೀರಿ ನಿನ್ನ ಪ್ರಭಾವವನ್ನು ಯಾವಾಗ ಪ್ರಕಟಿಸಿದೆಯೋ ಆಗ ನಿನ್ನನ್ನು ಮಿತ್ರಾವರುಣರು ನೋಡಿದರು. ಆ ಒಡನೆಯೇ ಪೃಥ್ವಿಯಲ್ಲಿ ನಿನ್ನ ಜನ್ಮವುಂಟಾಯಿತು. ಇದು ನಿನ್ನ ಅನೇಕ ವಿಧವಾದ ಆವಿರ್ಭಾವಗಳಲ್ಲಿ ಒಂದು ಮಾತ್ರ.

**ಉತಾಸಿ ಮೈತ್ರಾವರುಣೋ ವಸಿಷ್ಠೋರ್ವಶ್ಯಾ ಬ್ರಹ್ಮನ್ ಮನಸೋಧಿ ಜಾತಃ ।**
**ದ್ರಪ್ಸಂ ಸ್ಕನ್ನಂ ಬ್ರಹ್ಮಣಾ ದೈವ್ಯೇನ ವಿಶ್ವೇ ದೇವಾಃ ಪುಷ್ಕರೇ ತ್ವಾದದಂತ ॥**

(ಋ. ಸಂ ೭-೩೩-೧೧)

ಎಲೈ ವಸಿಷ್ಠನೇ, ಊರ್ವಶಿಯ ದರ್ಶನವಾದೊಡನೆಯೇ ಸ್ಖಲಿತವಾದ ಮಿತ್ರಾವರುಣರ ರೇತಃಪ್ರಭಾವದಿಂದ ಅವಳ ಸಂಕಲ್ಪಾನುಸಾರವಾಗಿ ನೀನು ಉತ್ಪನ್ನನಾದೆ. ಆ ಒಡನೆಯೇ ಸಕಲ ದೇವತೆಗಳೂ ಸಹ ದಿವ್ಯಾಂಶಸಂಭೂತನೂ, ವೇದರಾಶಿಯಿಂದ ಯುಕ್ತನೂ ಆದ ನಿನ್ನನ್ನು ಪುಷ್ಕರದಲ್ಲಿ ಸ್ಥಾಪಿಸಿದರು.

**ಸ ಪ್ರಕೇತ ಉಭಯಸ್ಯ ಪ್ರವಿದ್ವಾನ್ತ್ಸಹಸ್ರದಾನ ಉತ ವಾ ಸದಾನಃ ।**
**ಯಮೇನ ತತಂ ಪರಿಧಿಂ ವಯಿಷ್ಯನ್ನಪ್ಸರಸಃ ಪರಿ ಜಜ್ಞೇ ವಸಿಷ್ಠಃ ॥**

(ಋ. ಸಂ ೭-೩೩-೧೨)

ಈ ವಸಿಷ್ಠನೇ ದ್ಯಾವಾಪೃಥಿವಿಗಳೆರಡರ ತತ್ತ್ವಗಳನ್ನೂ ಪೂರ್ಣವಾಗಿ ಅರಿತವನಾಗಿ ಅನೇಕ ವಿಧವಾದ ದಾನಪ್ರದ ನಾಗಿದ್ದಾನೆ. ಅಥವಾ ಸ್ವಯಂದಾನರೂಪನಾಗಿಯೇ ಇದ್ದಾನೆ. ಸಕಲಜಗತ್ತಿಗೂ ನಿಯಂತೃವಾದ ಯಮನಿಂದ ವಿಸ್ತೃತವಾಗಿ ಹರಡಲ್ಪಟ್ಟ ಸಂಸಾರವೆಂಬ ವಸ್ತ್ರದಿಂದ ಆಚ್ಛಾದಿತನಾಗಿ ಉರ್ವಶಿಯ ಉದರದಲ್ಲಿ ಪೃಥ್ವಿಯ ಮೇಲೆ ಜನಿಸಿದನು.

**ಸತ್ರೇ ಹ ಜಾತಾವಿಷಿತಾ ನಮೋಭಿಃ ಕುಂಭೇ ರೇತಃ ಸಿಷಿಚತುಃ ಸಮಾನಂ ।**
**ತತೋ ಹ ಮಾನ ಉದಿಯಾಯ ಮಧ್ಯಾತ್ತತೋ ಜಾತಮೃಷಿಮಾಹುರ್ವಸಿಷ್ಠಂ ॥**
(ಋ. ಸಂ. ೭-೩೩-೧೩)

ಯಜ್ಞದೀಕ್ಷಿತರಾದ ಮಿತ್ರಾವರುಣರು ಸ್ತುತಿಪೂರ್ವಕವಾಗಿ ಸ್ಥಾಪಿಸಿದ ಸಮಾನವಾದ ಕಲಶಪಾತ್ರೆಯಲ್ಲಿ ತಮ್ಮ ರೇತಸ್ಸನ್ನು ಸೇಚನಮಾಡಿದಾಗ ಆ ವಸತೀವರೀಸಂಜ್ಞಕವಾದ ಪಾತ್ರೆಯಿಂದ ಮಧ್ಯಭಾಗದಲ್ಲಿ ಅಗಸ್ತ್ಯನ ಉತ್ಪತ್ತಿಯೂ ಅನಂತರ ಅದೇ ಪಾತ್ರೆಯಿಂದ ವಸಿಷ್ಠನ ಉತ್ಪತ್ತಿಯೂ ಆಯಿತು.

**ಉಕ್ಥಭೃತಂ ಸಾಮಭೃತಂ ಬಿಭರ್ತಿ ಗ್ರಾವಾಣಂ ಬಿಭ್ರತ್ಪ್ರ ವದಾತ್ಯಗ್ರೇ ।**
**ಉಪೈನಮಾಧ್ವಂ ಸುಮನಸ್ಯಮಾನಾ ಆ ವೋ ಗಚ್ಛಾತಿ ಪ್ರತೃದೋ ವಸಿಷ್ಠಃ ॥**
(ಋ. ಸಂ. ೭-೩೩-೧೪)

ಎಲೈ ಪ್ರತೃತ್ಸಂಜ್ಞಕರಾದ ಯಜಮಾನರೇ, ಪೂಜ್ಯನಾದ ವಸಿಷ್ಠನು ನಿಮ್ಮಲ್ಲಿಗೆ ಬರುತ್ತಾನೆ. ಇಂತಹ ವಸಿಷ್ಠನನ್ನು ಗೌರವಿಸಿರಿ. ಈತನು ನಿಮ್ಮ ಯಜ್ಞದಲ್ಲಿ ಬ್ರಹ್ಮಸ್ಥಾನವನ್ನಾಕ್ರಮಿಸಿ ಶಸ್ತ್ರಮಂತ್ರಪಾಠಕರಿಗೂ, ಉದ್ಗಾತೃಗಳಿಗೂ, ಅಭಿಷವ ಕರ್ಮನಿರತರಿಗೂ ಮಾರ್ಗದರ್ಶಕನಾಗಿರುತ್ತಾನೆ. ಆದುದರಿಂದ ಅವನನ್ನು ಗೌರವಿಸಿ ಸನ್ಮಾನಿಸಿರಿ ಎಂಬ ಪ್ರಶಂಸಾ ವಾಕ್ಯಗಳಿರುತ್ತವೆ. ಇದೇ ವಿಷಯವನ್ನು ಬೃಹದ್ದೇವತಾಕಾರರು ಕೆಳಗೆ ಕಂಡಂತೆ ವಿವರಿಸಿದ್ದಾರೆ.

**ಪ್ರಾಜಾಪತ್ಯೋ ಮರೀಚಿರ್ಹಿ ಮಾರೀಚಃ ಕಶ್ಯಪೋ ಮುನಿಃ ।**
**ತಸ್ಯ ದೇವ್ಯೋಽಭವಜ್ಜಾಯಾ ದಾಕ್ಷಾಯಣ್ಯಸ್ತ್ರಯೋದಶ ॥**
**ಅದಿತಿರ್ದಿತಿರ್ದನುಃ ಕಾಲಾ ದನಾಯುಃ ಸಿಂಹಿಕಾ ಮುನಿಃ ।**
(ಬೃ. ದೇ. ೫. ೧೪೩,೧೪೪)

ಪ್ರಜಾಪತಿಯು ಮರೀಚಿಯೆಂಬ ಪುತ್ರನನ್ನು ಪಡೆದನು. ಮರೀಚಿಯ ಪುತ್ರನೇ ಮಹರ್ಷಿಯಾದ ಕಶ್ಯಪನು. ಈ ಕಶ್ಯಪನು ದಕ್ಷಪುತ್ರಿಯರಾದ ಹದಿಮೂರು ದಿವ್ಯಕನ್ಯೆಯರನ್ನು ವಿವಾಹಮಾಡಿಕೊಂಡನು. ಅದಿತಿ; ದಿತಿ, ದನು, ಕಾಲಾ, ದನಾಯು, ಸಿಂಹಕಾ ಇತ್ಯಾದಿ ನಾಮಾಂಕಿತರೇ ಆ ಕನ್ಯೆಯರು.

**ತತ್ರೈಕಾ ತ್ವದಿತಿರ್ದೇವೀ ದ್ವಾದಶಾಜನಯತ್ಸುತಾನ್ ।**
**ಭಗಶ್ಚೈವಾರ್ಯಮಾಂಶಶ್ಚ ಮಿತ್ರೋ ವರುಣ ಏವ ಚ ।**
**ಧಾತಾ ಚೈವ ವಿಧಾತಾ ಚ ವಿವಸ್ವಾಂಶ್ಚ ಮಹಾದ್ಯುತಿಃ ॥**
(ಬೃ. ದೇ. ೫. ೧೪೬,೪೪೭)

ಈ ಪುತ್ರಿಯರಲ್ಲಿ ದೇವತಾತ್ಮಳಾದ ಅದಿತಿಯು ಹನ್ನೆರಡುಜನ ಪುತ್ರರನ್ನು ಹಡೆದಳು. ಭಗ, ಅರ್ಯಮ, ಅಂಶ, ಮಿತ್ರ, ವರುಣ, ಧಾತೃ, ವಿಧಾತೃ, ಮಹಾದ್ಯುತಿಯುಕ್ತನಾದ ವಿವಸ್ವಾನ್ ಮತ್ತು,

**ತ್ವಷ್ಟಾ ಪೂಷಾ ತಥೈವೇಂದ್ರೋ ದ್ವಾದಶೋ ವಿಷ್ಣುರುಚ್ಯತೇ ।**
**ದ್ವಂದ್ವಂ ತಸ್ಯಾಸ್ತು ತಜ್ಜಜ್ಞೇ ಮಿತ್ರಶ್ಚ ವರುಣಶ್ಚ ಹ ॥**

(ಬೃ. ದೇ. ೫–೧೪೮)

ತ್ವಷ್ಟೃ, ಪೂಷ, ಇಂದ್ರ ಮತ್ತು ವಿಷ್ಣು ಇವರೇ ಈ ಹನ್ನೆರಡುಮಂದಿ ಮಕ್ಕಳು. ವಿಷ್ಣುವೇ ಹನ್ನೆರಡನೆಯವನು. ಹೀಗೆ ಈ ಅದಿತಿಯಲ್ಲಿ ಮಿತ್ರಾವರುಣರೆಂಬ ದ್ವಂದ್ವರು (ಅವಳೀಮಕ್ಕಳು) ಉತ್ಪನ್ನರಾದರು.

**ತಯೋರಾದಿತ್ಯಯೋಸ್ಸತ್ರೇ ದೃಷ್ಟ್ವಾಪ್ಸರಸಮುರ್ವಶೀಂ ।**
**ರೇತಶ್ಚಸ್ಕಂದ ತತ್ಕುಂಭೇ ನ್ಯಪತದ್ವಾಸತೀವರೇ ॥**

(ಬೃ. ದೇ. ೫–೧೪೯)

ಈ ದ್ವಾದಶಾದಿತ್ಯರಲ್ಲಿ ಮಿತ್ರಾವರುಣರಿಬ್ಬರೂ ಸಹ ಸತ್ರಾತ್ಮಕವಾದ ಯಾಗಕಾಲದಲ್ಲಿ ದಿವ್ಯಸ್ತ್ರೀಯಾದ ಊರ್ವಶಿಯನ್ನು ನೋಡಿದರು. ಅವಳನ್ನು ನೋಡಿದೊಡನೆಯೇ ಅವರಿಗೆ ರೇತಸ್ಸ್ಖಲನವಾಯಿತು. ಆಗ ಅದು ವಸತೀವರೀಸಂಜ್ಞಕವಾದ ಪಾತ್ರೆಯಲ್ಲಿ ಒಟ್ಟಿಗೆ ಬಿದ್ದಿತು.

**ತೇನೈವ ತು ಮುಹೂರ್ತೇನ ವೀರ್ಯವಂತೌ ತಪಸ್ವಿನೌ ।**
**ಅಗಸ್ತ್ಯಶ್ಚ ವಸಿಷ್ಠಶ್ಚ ತತ್ರರ್ಷೀ ಸಂಬಭೂವತುಃ ॥**

(ಬೃ. ದೇ. ೫–೧೫೦)

ಆ ವೀರ್ಯವು ಆ ಪಾತ್ರೆಯಲ್ಲಿ ಬಿದ್ದೊಡನೆಯೇ ವೀರ್ಯವಂತರೂ ತಪಸ್ವಿಗಳೂ ಆದ ಅಗಸ್ತ್ಯ ಮತ್ತು ವಸಿಷ್ಠ ಋಷಿಗಳು ಅದರಿಂದ ಉತ್ಪನ್ನರಾದರು. ಅವರ ಉತ್ಪತ್ತಿಕ್ರಮವೇನೆಂದರೆ,

**ಬಹುಧಾ ಪತಿತೇ ಶುಕ್ರೇ ಕಲಶೇಽಥ ಜಲೇ ಸ್ಥಲೇ ।**
**ಸ್ಥಲೇ ವಸಿಷ್ಠಸ್ತು ಮುನಿಃ ಸಂಭೂತ ಋಷಿಸತ್ತಮಃ ॥**

(ಬೃ. ದೇ. ೫–೧೫೧)

ಮಿತ್ರಾವರುಣರಿಂದ ಸ್ಖಲಿತವಾದ ಆ ವೀರ್ಯವು ಅನೇಕ ವಿಧವಾಗಿ ವಿಭಕ್ತವಾಯಿತು. ಕುಂಭದಲ್ಲಿಯೂ, ಉದಕದಲ್ಲಿಯೂ ಮತ್ತು ಪೃಥ್ವಿಯ ಮೇಲೂ ಚೆಲ್ಲಿತು. ಪೃಥ್ವಿಯ ಮೇಲೆ ಚೆಲ್ಲಿದ ಅಂಶದಿಂದ ಋಷಿಗಳಲ್ಲೆಲ್ಲಾ ಅತಿ ಶ್ರೇಷ್ಠನಾದ ವಸಿಷ್ಠಮಹರ್ಷಿಯು ಪೃಥ್ವಿಯ ಮೇಲೆ ಉತ್ಪನ್ನನಾದನು. (ಅಗಸ್ತ್ಯನು ಕುಂಭದಲ್ಲಿಯೂ, ಮತ್ಸ್ಯವು ಉದಕದಲ್ಲಿಯೂ ಉತ್ಪನ್ನರಾದರು.)

**ಕುಂಭ ಇತ್ಯಭಿಧಾನಂ ತು ಪರಿಮಾಣಸ್ಯ ಲಕ್ಷ್ಯತೇ ।**
**ತತೋಽಪ್ಸು ಗೃಹ್ಯಮಾಣಾಸು ವಸಿಷ್ಠಃ ಪುಷ್ಕರೇ ಸ್ಥಿತಃ ॥**

(ಬೃ. ದೇ. ೫–೧೫)

ಅಗಸ್ತ್ಯಋಷಿಯ ಉತ್ಪನ್ನಕ್ಕೆ ಮೂಲವಾದ ಕುಂಭವು ಪರಿಮಾಣಸಾಧನವಾದುದರಿಂದ ಆ ಸಂಜ್ಞೆಯಿಂದ ವ್ಯವಹೃತವಾಯಿತು. ಉದಕವು ಉದ್ಧೃತವಾಗುವ ಕಾಲದಲ್ಲಿ ವಸಿಷ್ಠ ಮಹರ್ಷಿಯು ಪುಷ್ಕರದ ಮೇಲೆ ನಿಂತಿದ್ದುದು ಗೋಚರವಾಯಿತು. ಇದನ್ನೇ ಮೇಲೆ ಉದಾಹರಿಸಿರುವ ಋಗ್ವಾಕ್ಯದಲ್ಲಿ “ **ವಿಶ್ವೇ ದೇವಾಃ ಪುಷ್ಕರೇ ತ್ವಾದದಂತ** ” (ಋ. ಸಂ. ೭–೩೩–೧೧) ಎಂದು ವರ್ಣಿಸಿದೆ. ಈ ಋಗ್ವಾಕ್ಯವನ್ನು ನಿರುಕ್ತಕಾರರು ವಿವರಿಸುತ್ತಾ

**" ಸರ್ವೇ ದೇವಾಃ ಪುಷ್ಕರೇ ತ್ವಾಧಾರಯಂತ "** ಎಂದು ತಿಳಿಸಿದ್ದಾರೆ (ನಿ. ೫-೧೪).

**ಸರ್ವತ್ರ ಪುಷ್ಕರಂ ತತ್ರ ವಿಶ್ವೇ ದೇವಾ ಅಧಾರಯನ್ ।**
**ಉತ್ಥಾಯ ಸಲಿಲಾತ್ತಸ್ಮಾದಥ ತೇಪೇ ಮಹತ್ತಪಃ ॥**
(ಬೃ. ದೇ. ೫-೧೫೫)

ಆ ಕಾಲದಲ್ಲಿ ಸರ್ವ ದಿಕ್ಕುಗಳಲ್ಲಿಯೂ ಸಕಲ ದೇವತೆಗಳೂ ಈ ವಸಿಷ್ಠನನ್ನು ಎತ್ತಿ ಧರಿಸಿದುದರಿಂದ ವಸಿಷ್ಠನು ಪುಷ್ಕರದಿಂದ ಉತ್ಥಾಪಿತನಾದನು. ಆಗ ಅದರಿಂದ ಎದ್ದು ವಸಿಷ್ಠನು ಅತಿ ಮಹತ್ತಾದ ತಪಸ್ಸನ್ನಾಚರಿಸಿದನು.

**ನಾಮಾಸ್ಯ ಗುಣತೋ ಜಜ್ಞೇ ವಸತೇಃ ಶ್ರೈಷ್ಠ್ಯಕರ್ಮಣಃ ।**
**ಅದೃಶ್ಯಮೃಷಿಭಿರ್ಹೀಂದ್ರಂ ಸೋಽಪಶ್ಯತ್ತಪಸಾ ಪುರಾ ॥**
(ಬೃ. ದೇ. ೫-೧೫೬)

ಅತ್ಯಂತ ಶ್ರೇಷ್ಠವಾದ ಕರ್ಮವನ್ನು ಸೂಚಿಸತಕ್ಕ **ವಸ್** ಧಾತುವಿನಿಂದ **ವಸಿಷ್ಠ** ಎಂಬ ಪದವು ನಿಷ್ಪನ್ನವಾಗಿ ಈ ಮಹರ್ಷಿಯ ಉತ್ತಮವಾದ ಗುಣಗಳನ್ನೂ, ಕರ್ಮಗಳನ್ನೂ :ಸೂಚಿಸುವ ನಾಮವಾಗಿರುತ್ತದೆ. ಹಿಂದೆ ಇತರ ಯಾವ ಋಷಿಗಳಿಗೂ ಕಾಣಲಾಗದಿದ್ದ **ಇಂದ್ರ**ನ ದರ್ಶನವನ್ನು ಈ ಮಹರ್ಷಿಯು ಪಡೆದ ವಿಷಯವು ಪ್ರಸಿದ್ಧವಾಗಿದೆ. ಈ ಕಾರಣದಿಂದಲೇ,

**ಸೋಮಭಾಗಾನಥೋ ತಸ್ಮೈ ಪ್ರೋವಾಚ ಹರಿವಾಹನಃ ।**
**ಋಷಯೋ ವಾ ಇಂದ್ರಮಿತಿ ಬ್ರಾಹ್ಮಣಾತ್ತದ್ಧಿ ದೃಶ್ಯತೇ ॥**
(ಬೃ. ದೇ. ೫-೧೫೭)

ಆ ಮಹದ್ಗುಣಗಳಿರುವುದರಿಂದಲೇ, ಹರಿನಾಮಕವಾದ ಅಶ್ವಗಳಿಗೆ ಒಡೆಯನಾದ ಇಂದ್ರನು " ಈ ವಸಿಷ್ಠನೂ ಸೋಮದಲ್ಲಿ ಭಾಗವನ್ನು ಹೊಂದಬೇಕು" ಎಂದು ಘೋಷಿಸಿದನು. ಈ ಸನ್ನಿವೇಶವನ್ನೇ ಬ್ರಾಹ್ಮಣಾದಿಗಳಲ್ಲಿ **' ಋಷಯೋ ವಾ ಇಂದ್ರಂ '** ಇತ್ಯಾದಿಯಾಗಿ ತಿಳಿಸಿದೆ. ಈ ವಿವರಣೆಯನ್ನು ಮುಂದೆ ವಿಶದಪಡಿಸಲಾಗುತ್ತದೆ.

**ವಸಿಷ್ಠಶ್ಚ ವಸಿಷ್ಠಾಶ್ಚ ಬ್ರಾಹ್ಮಣಾ ಬ್ರಹ್ಮಕರ್ಮಣಿ ।**
**ಸರ್ವಕರ್ಮಸು ಯಜ್ಞೇಷು ದಕ್ಷಿಣೀಯತಮಾಸ್ತಥಾ ॥**
(ಬೃ. ದೇ. ೫-೧೫೮)

ಆದುದರಿಂದಲೇ ವಸಿಷ್ಠನೂ ಮತ್ತು ವಸಿಷ್ಠಗೋತ್ರೋತ್ಪನ್ನರಾದ ಸಕಲಋಷಿಗಳೂ ಸಹ ಸಕಲ ಕರ್ಮಗಳಿಗೂ ಬ್ರಹ್ಮನೆಂಬ ಋತ್ವಿಕ್ಕಿನ ಸ್ಥಾನವನ್ನು ಹೊಂದುತ್ತಿದ್ದರು. ಸಕಲ ಕರ್ಮಗಳಲ್ಲಿಯೂ ಅತ್ಯುತ್ತಮವಾದ ದಕ್ಷಿಣೆಗೆ ಪಾತ್ರವಾದ ಈ ಸ್ಥಾನವು ಇವರಿಗಲ್ಲದೆ ಬೇರೆಯವರಿಗಿರಲಿಲ್ಲ.

**ತಸ್ಮಾದ್ಯೇಽದ್ಯಾಪಿ ವಾಸಿಷ್ಠಾಃ ಸದಸ್ಯಾಃ ಸ್ಯುಸ್ತು ಕರ್ಹಿಚಿತ್ ।**
**ಅರ್ಹಯೇದ್ದಕ್ಷಿಣಾಭಿಸ್ತಾನ್ ಭಾಲ್ಲವೇಯೀ ಶ್ರುತಿಸ್ತ್ವಿಯಂ ॥**
(ಬೃ. ದೇ. ೫-೧೫೯)

ಇಂತಹ ಪ್ರಭಾವವಿರುವುದರಿಂದ ಈ ಕಾಲದಲ್ಲೂ ಸಹ ಸಕಲ ಯಾಗಸಭೆಗಳಲ್ಲೂ ಸಹ ವಸಿಷ್ಠಗೋತ್ರೋತ್ಪನ್ನರಾದವರನ್ನೇ ಈ ಉತ್ತಮವಾದ ಸ್ಥಾನಕ್ಕೆ ಆರಿಸಬೇಕು ಎಂಬುದಾಗಿ ಛಾಲ್ಲವೀ ಶ್ರುತಿವಾಕ್ಯವು ತಿಳಿಸುತ್ತದೆ.

ಹೀಗೆ ವಸಿಷ್ಠನ ಮಾಹಾತ್ಮ್ಯವನ್ನು ತಿಳಿಸುವ ಇನ್ನೂ ಒಂದು ಪ್ರಕರಣವು ಈ ಋಷಿಯ ಕೃತಿಕೌಶಲ್ಯವನ್ನು ಪ್ರಶಂಸಿಸುವುದಾಗಿದೆ. ಅದರ ವಿವರವು ಈ ರೀತಿಯಿದೆ.

**ವರುಣಸ್ಯ ಗೃಹಾನ್ರಾತ್ರೌ ವಸಿಷ್ಠಃ ಸ್ವಪ್ನ ಆಚರತ್ ।**
**ಸ್ಪ್ರಾವಿವೇಶಾಥ ತಂ ತತ್ರ ಶ್ವಾ ನದನ್ನಭ್ಯಧಾವತ ।**
**ಕ್ರಂದಂತಂ ಸಾರಮೇಯಂ ಸ ಧಾವಂತಂ ದಷ್ಟುಮುದ್ಯತಂ ॥**

(ಬೃ. ದೇ. ೬–೧೧, ೧೨)

ರಾತ್ರಿಕಾಲದಲ್ಲಿ ಸ್ವಪ್ನದಲ್ಲಿ ವಸಿಷ್ಠನು ವರುಣನ ಗೃಹಕ್ಕೆ ಪ್ರವೇಶಿಸಿದನು. ಆ ವೇಳೆಯಲ್ಲಿ ಒಂದು ನಾಯಿಯು ಅವನನ್ನು ಅಟ್ಟಿಸಿಕೊಂಡು ಬಂದಿತು. ಆ ನಾಯಿಯು ಇವನನ್ನು ನೋಡಿ ಬೊಗಳುತ್ತ ಕಚ್ಚುವ ಉದ್ದಿಶ್ಯದಿಂದ ಓಡಿ ಬರುತ್ತಿದ್ದಾಗ ಅದನ್ನು ಸಮಾಧಾನ ಪಡಿಸಲುದ್ದೇಶಿಸಿ.

**ಯದರ್ಜುನೇತಿ ಚ ದ್ವಾಭ್ಯಾಂ ಸಾಂತ್ವಯಿತ್ವಾ ವ್ಯಸುಷ್ವಪತ್ ।**
**ಸ ತಂ ಪ್ರಸ್ವಾಪಯಾಮಾಸ ಜನಮನ್ಯಂ ಚ ವಾರುಣಂ ॥**

(ಬೃ. ದೇ. ೬–೧೩)

ಋಕ್ಸಂಹಿತೆಯಲ್ಲಿ ಪ್ರಸಿದ್ಧವಾಗಿರುವ "**ಯದರ್ಜುನ**" (ಋ. ಸಂ. ೭–೫೫–೨) ಇತ್ಯಾದಿ ಮಂತ್ರಗಳನ್ನು ಪಠಿಸಿ ಆ ನಾಯಿಯನ್ನು ನಿದ್ರಿಸುವಂತೆ ಮಾಡಿದನು. ಅದರಂತೆಯೇ ವರುಣನ ಇತರ ಸೇವಕರನ್ನೂ ನಿದ್ರೆಮಾಡುವಂತೆ ಮೋಹಗೊಳಿಸಿದನು.

**ತತಸ್ತು ವರುಣೋ ರಾಜಾ ಸ್ವೈಃ ಪಾಶೈಃ ಪ್ರತ್ಯಬಧ್ಯತ ।**
**ಸ ಬದ್ಧಃ ಪಿತರಂ ಸೂಕ್ತೈಶ್ಚತುರ್ಭಿರಿತ ಉತ್ತರೈಃ ॥**

(ಬೃ. ದೇ. ೬–೧೪)

ಹೀಗೆ ಸಾರಮೇಯುವನ್ನೂ, (ನಾಯಿಯನ್ನೂ) ಸೇವಕರನ್ನು ಮೋಹಗೊಳಿಸಿದುದನ್ನು ವರುಣನು ನೋಡಿ ತಾನೇ ಸಾಕ್ಷಾತ್ತಾಗಿ ಬಂದು ವಸಿಷ್ಠನನ್ನು ಬಂಧಿಸಿದನು. ಆಗ ವಸಿಷ್ಠನು ತನ್ನನ್ನು ಬಂಧಿಸಿದ ಪಿತೃವನ್ನು (ವರುಣನನ್ನು) ನಾಲ್ಕು ಸೂಕ್ತಗಳಿಂದ ಸ್ತುತಿಸಿ ಪ್ರಶಂಸಿಸಿದನು.

**ಅಭಿತುಷ್ಟಾವ ಧೀರೇತಿ ಮುಮೋಚೈನಂ ತತಃ ಪಿತಾ ।**
**ಧ್ರುವಾಸು ತ್ವೇತಿ ಚೋಕ್ತಾಯಾಂ ಪಾಶಾ ಅಸ್ಮಾತ್ಪ್ರಮೋಚಿರೇ ॥**

(ಬೃ. ದೇ. ೬–೧೫)

ಆಗ ವಸಿಷ್ಠನು "**ಧೀರಾ ತ್ವಸ್ಯ ಮಹಿನಾ**" ಎಂಬ ಮಂತ್ರದಿಂದ ಪ್ರಾರಂಭವಾಗುವ ಸೂಕ್ತದೊಡನೆ ನಾಲ್ಕು ಸೂಕ್ತಗಳನ್ನು ಪಠಿಸಿ ವರುಣನನ್ನು ಸ್ತುತಿಸಿದನು. ಅದರಿಂದ ಸಂತುಷ್ಟನಾದ ವರುಣನು ವಸಿಷ್ಠನ ಬಂಧನವನ್ನು ಬಿಡಿಸಿದನು. "**ಧ್ರುವಾಸು ತ್ವಾಸು**" ಎಂಬ ಮಂತ್ರವನ್ನು (ಋ. ಸಂ. ೭–೮೮–೭) ಪಠಿಸಿದೊಡನೆಯೇ ವರುಣನಿಂದ ಕಟ್ಟಲ್ಪಟ್ಟ ಪಾಶವು ಬಿಚ್ಚಿಹೋಯಿತು ಎಂಬುದಾಗಿ ವಸಿಷ್ಠನ ಕೃತಿಕೌಶಲ್ಯದ ಪ್ರಶಂಸೆಯಿರುತ್ತದೆ.

ಹೀಗೆ ವಸಿಷ್ಠನು ಪಿತೃವಾದ ವರುಣನ ಆಗ್ರಹಕ್ಕೆ ಪಾತ್ರನಾದುದೂ, ಅದೇ ವರುಣನ ಅನುಗ್ರಹಕ್ಕೆ ಪಾತ್ರನಾದುದೂ ಆದ ಸಂದರ್ಭಗಳೂ ಋಕ್ಸಂಹಿತೆಯಲ್ಲಿಯೇ ಅನೇಕ ಕಡೆಗಳಲ್ಲಿ ನಿರ್ದಿಷ್ಟವಾಗಿವೆ.

**ಉವಾಚ ಮೇ ವರುಣೋ ಮೇಧಿರಾಯ ತ್ರಿಃ ಸಪ್ತ ನಾಮಾಘ್ನ್ಯಾ ಬಿಭರ್ತಿ ।**
**ವಿದ್ವಾನ್ ಪದಸ್ಯ ಗುಹ್ಯಾ ನ ವೋಚದ್ಯುಗಾಯ ವಿಪ್ರ ಉಪರಾಯ ಶಿಕ್ಷನ್ ॥**

(ಋ. ಸಂ. ೭-೮೭-೪)

ಎಂಬ ಈ ಮಂತ್ರದಲ್ಲಿ ವಸಿಷ್ಠನು ವರುಣನಿಂದ ಸ್ವೀಕರಿಸಿದ ಜ್ಞಾನೋಪದೇಶದ ಸ್ವರೂಪವನ್ನು ತಿಳಿಸಿದಾನೆ. "ಮೇಧಾವಿಯಾದ ನನಗೆ ವರುಣನು ಏಕವಿಂಶತಿ (೨೧) ಸಂಖ್ಯಾಕವಾದ ನಾಮಪ್ರಭೇದಗಳುಳ್ಳ **ಅಘ್ನ್ಯೆ**ಯನ್ನು ಧರಿಸಿದ್ದಾನೆ ಎಂದರೆ ಉಪದೇಶಿಸಿದ್ದಾನೆ. ಸರ್ವಜ್ಞನಾದ ಅವನೇ ಯೋಗಯುಕ್ತನಾದ ನನಗೆ ಅತ್ಯುತ್ಕೃಷ್ಟವಾದ ಬ್ರಹ್ಮಲೋಕದ ರಹಸ್ಯವನ್ನೂ ಸಹ ಉಪದೇಶಿಸಿದ್ದಾನೆ" ಎಂದು ವಸಿಷ್ಠನು ತನ್ನ ಪಿತೃವನ್ನು ಪ್ರಶಂಸಿದ್ದಾನೆ. "**ಆ ಯದ್ರುಹಾವ ವರುಣಶ್ಚ ನಾವಂ** (ಋ. ಸಂ. ೭-೮೮-೩) ಇತ್ಯಾದಿ ಮಂತ್ರಗಳಿಂದ ಕೆಳಗೆ ವಿವರಿಸಿರುವಂತೆ ವರುಣ ಮತ್ತು ವಸಿಷ್ಠರ ನಿಕಟವಾದ ಸಂಬಂಧವು ವರ್ಣಿತವಾಗಿದೆ.

"ನಾನೂ (ವಸಿಷ್ಠ) ಮತ್ತು ವರುಣನೂ ಒಟ್ಟಿಗೆ ನೌಕೆಯನ್ನು ಹತ್ತಿ ಅದನ್ನು ಸಮುದ್ರಮಧ್ಯಕ್ಕೆ ಬಿಟ್ಟು ಜಲಮಧ್ಯದಲ್ಲಿ ಯಾವಾಗ ವಿಹರಿಸುವೆವೋ ಆಗ ನಾವು ಜಲಮಧ್ಯದಲ್ಲಿ ಆಂದೋಳನದ ಸೌಖ್ಯವನ್ನು ಅನುಭವಿಸುತ್ತೇವೆ.

ವರುಣನು ಪುತ್ರಾಭಿಮಾನದಿಂದ ವಸಿಷ್ಠನನ್ನು ತನ್ನ ನಾವೆಯಲ್ಲಿ ಕುಳ್ಳಿರಿಸಿ ತನ್ನ ರಕ್ಷಣೆಯನ್ನು ನೀಡಿ ಅವನಿಂದ ಅತ್ಯುತ್ತಮವಾದ ಕರ್ಮಗಳು ನೆರವೇರುವಂತೆ ಸಹಾಯಮಾಡಿದನು. ತನ್ನ ಪೂಜಕನಾದ ಅದೇ ವಸಿಷ್ಠನ ದಿನಗಳೆಲ್ಲವೂ ಅತ್ಯಂತ ಸುಖತಮವಾಗಿರುವಂತೆ ಮಾಡಿದನು.

(೭-೮೮-೩, ೪)

ಇತ್ಯಾದ್ಯನೇಕ ಕಡೆಗಳಲ್ಲಿ ವರುಣನ ಅನುಗ್ರಹದಿಂದ ವಸಿಷ್ಠನು ಸತ್ಕರ್ಮಗಳನ್ನು ನೆರವೇರಿಸಿ ತತ್ಫಲವಾದ ಸೌಖ್ಯವನ್ನನುಭವಿಸಿದುದನ್ನು ವರ್ಣಿಸಿದೆ. ಇವನ್ನೆಲ್ಲಾ ಆಯಾ ಸಂದರ್ಭಗಳಲ್ಲಿ ತಿಳಿಸಲಾಗುತ್ತದೆ. ಇದಲ್ಲದೇ, ಕೆಲವು ಸನ್ನಿವೇಶಗಳಲ್ಲಿ ವಸಿಷ್ಠನು ವರುಣನ ಆಗ್ರಹಕ್ಕೂ ಪಾತ್ರನಾದ ವಿಷಯವೂ ಸೂಚಿತವಾಗಿದೆ.

**ಕಿಮಾಗ ಆಸ ವರುಣ ಜ್ಯೇಷ್ಠಂ ಯತ್ ಸ್ತೋತಾರಂ ಜಿಘಾಂಸಸಿ ಸಖಾಯಂ ।**
**ಪ್ರ ತನ್ಮೇ ವೋಚೋ ದೂಳಭ ಸ್ವಧಾವೋಽವ ತ್ವಾನೇನಾ ನಮಸಾ ತುರ ಇಯಾಂ ॥**

(ಋ. ಸಂ. ೭-೮೬-೪)

ಎಲೈ ವರುಣನೇ, ನಿನ್ನಲ್ಲಿ ಭಕ್ತನಾದ ನಾನು ಆಚರಿಸಿರುವ ಪಾಪವಾದರೂ ಏನು? ಯಾವಕಾರಣಕ್ಕಾಗಿ ನಿನ್ನ ಮಿತ್ರನಾದ ನನ್ನನ್ನು ಹಿಂಸಿಸಲು ಇಚ್ಛಿಸಿರುವೆ? ಪ್ರಭಾಯುತನಾದ ಎಲೈ ವರುಣನೇ, ಆ ಪಾಪದ ಸ್ವರೂಪವನ್ನಾದರೂ ತಿಳಿಸು. ನಾನು ಅದಕ್ಕೆ ಪಶ್ಚಾತ್ತಾಪಪೂರ್ವಕವಾಗಿ ನಿನ್ನ ಕ್ಷಮೆಯನ್ನು ಯಾಚಿಸುತ್ತೇನೆ ಇತ್ಯಾದಿಯಾಗಿ ಮೊರೆಯಿಡುತ್ತಾನೆ. ಆದರೆ, ಇಂತಹ ಸನ್ನಿವೇಶವು ವರ್ಣಿತವಾಗಿರುವುದು ಇದೊಂದೇ ಸ್ಥಳದಲ್ಲಿ. ಉಳಿದೆಡೆಗಳಲ್ಲೆಲ್ಲಾ ವಸಿಷ್ಠನು ಅತ್ಯಂತ ಶ್ರೇಷ್ಠನಾದ ಬ್ರಹ್ಮಜ್ಞಾನಿಯೆಂದೂ ಸಕಲ ದೇವಮಾನವಾದಿಗಳ ಗೌರವಕ್ಕೆ ಪಾತ್ರನಾದ ಋಷಿಯೆಂದೂ ಪ್ರಶಂಸಿತವಾಗಿದೆ. ಇತರ ಋಷಿಗಳಿಗೆ ಸಾಧ್ಯವಿಲ್ಲದ ಮರುತ್ತತ್ತ್ವಸಾಕ್ಷಾತ್ಕಾರವೂ ವಸಿಷ್ಠನಿಂದ ಮಾತ್ರ

ಸಾಧ್ಯವಾಯಿತೆಂದೂ ವಸಿಷ್ಠನ ಮಹಾತ್ಮ್ಯವು ಸ್ತುತವಾಗಿದೆ. ಇಂತಹ ವಸಿಷ್ಠನ ಮಾಹಾತ್ಮ್ಯವನ್ನು ಬ್ರಾಹ್ಮಣಾದಿಗಳಲ್ಲಿ ಅನೇಕ ಕಡೆಗಳಲ್ಲಿ ಕೆಳಗೆ ಕಂಡಂತೆ ಪ್ರಶಂಸಿಸಿದೆ. ಉದಾಹರಣೆಗೆ—

> **ಋಷಯೋ ವಾ ಇಂದ್ರಂ ಪ್ರತ್ಯಕ್ಷಂ ನಾಪಶ್ಯಂಸ್ತಂ ವಸಿಷ್ಠ ಏವ ಪ್ರತ್ಯಕ್ಷಮಪಶ್ಯತ್ । ಸೋಽಬಿಭೇದಿತರೇಭ್ಯೋ ಮಾ ಋಷಿಭ್ಯಃ ಪ್ರವಕ್ಷ್ಯತೀತಿ । ಸೋಽಬ್ರವೀದ್ಬ್ರಾಹ್ಮಣಂ ತೇ ವಕ್ಷ್ಯಾಮಿ ಯಥಾ ತ್ವತ್ಪುರೋಹಿತಾಃ ಪ್ರಜಾಃ ಪ್ರಜನಿಷ್ಯಂತೇ । ಅಥ ಮಾ ಇತರೇಭ್ಯ ಋಷಿಭ್ಯೋ ಮಾ ಪ್ರವೋಚ ಇತಿ ತಸ್ಮಾ ಏತಾನ್ಸ್ತೋಮಭಾಗಾನಬ್ರವೀತ್ತತೋ ವಸಿಷ್ಠಪುರೋಹಿತಾಃ ಪ್ರಜಾಃ ಪ್ರಾಜಾಯಂತ ॥**

(ಕಾಠಕ. ೩೭-೧೭)

ಋಷಿಗಳಿಗಾರಿಗೂ ಇಂದ್ರನು ಸಾಕ್ಷಾತ್ತಾಗಿ ಪ್ರತ್ಯಕ್ಷನಾಗಲಿಲ್ಲ. ಅವರೂ ಅವನನ್ನು ದರ್ಶಿಸಲಾಗಲಿಲ್ಲ. ವಸಿಷ್ಠನು ಮಾತ್ರ ಇಂದ್ರನ ರೂಪವನ್ನು ಸಾಕ್ಷಾತ್ಕರಿಸಲು ಶಕ್ತನಾದನು. ಆಗ ಇಂದ್ರನು "ಈ ವಸಿಷ್ಠನು ನನ್ನ ಸ್ವರೂಪವನ್ನು ಇತರ ಋಷಿಗಳಿಗೂ ಎಲ್ಲಿ ವಿವರಿಸಿಬಿಡುವನೋ" ಎಂಬ ಭೀತಿಯಿಂದ ವಸಿಷ್ಠನಿಗೆ ಒಂದು ವಾಗ್ದಾನಮಾಡಿದನು. ಅದೇನೆಂದರೆ "ನೀನು ನನ್ನ ಸ್ವರೂಪವನ್ನು ಇತರರಿಗೆ ವಿವರಿಸಕೂಡದು. ನಿನ್ನನ್ನು ಪುರೋಹಿತನನ್ನಾಗಿ ಸ್ವೀಕರಿಸುವ ಮಾನವರಿಗೆಲ್ಲಾ ಪುತ್ರಸಂತಾನವಾಗುತ್ತದೆ" ಎಂದು ಕೇಳಿಕೊಂಡನು. ಆಗ ವಸಿಷ್ಠನು ಅದಕ್ಕೆ ಒಪ್ಪಿದನು. ಇಂದ್ರನು ಈ ಬ್ರಾಹ್ಮಣವಾಕ್ಯವನ್ನುಪದೇಶಿಸಿದನು. ಆ ಫಲವಾಗಿ ವಸಿಷ್ಠನನ್ನು ಪುರೋಹಿತನನ್ನಾಗಿ ವರಿಸಿದ ಪ್ರಜೆಗಳಿಗೆಲ್ಲಾ ಸಂತಾನಸಂಪತ್ತು ಲಭಿಸಿತು. ಇದೇ ಇಂದ್ರ ಮತ್ತು ವಸಿಷ್ಠರ ಮೈತ್ರಿಯ ಸಂಬಂಧವಾದ ಕಥೆಯನ್ನು ಶತಪಥದ ಬ್ರಾಹ್ಮಣದಲ್ಲಿ ಈ ರೀತಿಯಲ್ಲಿ ತಿಳಿಸಿದೆ

> **ವಸಿಷ್ಠೋ ಹ ವಿರಾಜಂ ವಿದಾಂ ಚಕಾರ ತಾಗ್ಂ ಹೈಂದ್ರೋಽಭಿದಧ್ಯೌ । ಸ ಹೋವಾಚ । ಋಷೇ ವಿರಾಜಂ ಹ ವೈ ವೇತ್ಥ ತಾಂ ನೋ ಬ್ರೂಹೀತಿ ಸ ಹೋವಾಚ ಕಿಂ ಮಮ ತತಃ ಸ್ಯಾದಿತಿ ಸರ್ವಸ್ಯ ಚ ತೇ ಯಜ್ಞಸ್ಯ ಪ್ರಾಯಶ್ಚಿತ್ತಿಂ ಬ್ರೂಯಾಗ್ಂ ರೂಪಂ ಚ ತ್ವಾ ದರ್ಶಯೇಯೇತಿ ಸ ಹೋವಾಚ.....................॥**

(ಶ. ಬ್ರಾ. ೧೨-೬-೧-೩೮)

ವಿರಾಟ್‌ಛಂದಸ್ಸಿನ ಸ್ವರೂಪವನ್ನು ವಸಿಷ್ಠನು ಮಾತ್ರ ಅರಿತಿದ್ದನು. ಇಂದ್ರನಿಗೂ ಅದನ್ನು ಅರಿಯಬೇಕೆಂಬಿಚ್ಛೆಯುಂಟಾಯಿತು. ಆಗ ಅವನು ವಸಿಷ್ಠನನ್ನು ಸಮೀಪಿಸಿ "ನಿನಗೆ ವಿರಾಟ್‌ಛಂದಸ್ಸಿನ ಸ್ವರೂಪಜ್ಞಾನವುಂಟಾಗಿದೆ. ಅದನ್ನು ನನಗೂ ತಿಳಿಸು" ಎಂದನು. ಆಗ ವಸಿಷ್ಠನು "ಅದಕ್ಕೆ ನನಗೆ ಪ್ರತಿಫಲವೇನು" ಎಂದನು. "ಅದಕ್ಕೆ ಪ್ರತಿಯಾಗಿ ನಿನಗೆ ಯಜ್ಞದಲ್ಲಿ ಸಂಭವಿಸುವ ನ್ಯೂನತೆಗಳನ್ನೆಲ್ಲಾ ಸರಿಪಡಿಸುವ ಶಕ್ತಿಯನ್ನುಂಟುಮಾಡುತ್ತೇನೆ" ಎಂದನು. ಅಷ್ಟೇ ಅಲ್ಲದೆ ಯಜ್ಞರೂಪವಾದ ಸಾಧನದಿಂದ ಸ್ವರ್ಗಕ್ಕೆ ತಲಪುವ ಕ್ರಮವನ್ನು ಅರುಹುವೆನೆಂದನು. ಆಗ ವಸಿಷ್ಠನು ಇಂದ್ರನಿಗೆ ವಿರಾಟ್‌ಛಂದಸ್ಸಿನ ಸ್ವರೂಪವನ್ನರುಹಿದನು. ಅದಕ್ಕೆ ಪ್ರತಿಯಾಗಿ ಇಂದ್ರನು ವಸಿಷ್ಠನಿಗೆ ಯಜ್ಞದ ಪೂರ್ಣವಾದ ರಹಸ್ಯವನ್ನು ತಿಳಿಸಿದನು. ವ್ಯಾಹೃತಿಗಳನ್ನೆಲ್ಲಾ ತಿಳಿಸಿದನು. ಆದುದರಿಂದಲೇ, ಪ್ರಥಮತಃ ವಸಿಷ್ಠನು ಮಾತ್ರ ಯಜ್ಞದಲ್ಲಿ ಬ್ರಹ್ಮಸ್ಥಾನವನ್ನು ಹೊಂದುತ್ತಿದ್ದನು ಎಂದಿರುತ್ತದೆ. ಈ ಉಪದೇಶ ಕ್ರಮವನ್ನು ಷಡ್ವಿಂಶಬ್ರಾಹ್ಮಣದಲ್ಲಿ ಇನ್ನೊಂದು ವಿಧವಾಗಿ ತಿಳಿಸಿದೆ.

**ಇಂದ್ರೋ ಹ ವಿಶ್ವಾಮಿತ್ರಾಯೋಕ್ಥಮುವಾಚ ವಸಿಷ್ಠಾಯ ಬ್ರಹ್ಮ ವಾಗುಕ್ಥಮಿತ್ಯೇವ ವಿಶ್ವಾಮಿತ್ರಾಯ ಮನೋ ಬ್ರಹ್ಮ ವಸಿಷ್ಠಾಯ । ತದ್ವಾ ಏತದ್ವಾಸಿಷ್ಠಂ ಬ್ರಹ್ಮ । ಅಪಿ ಹ ಏವಂ ವಿಥಃ ವಾ ವಾಸಿಷ್ಠಂ ವಾ ಬ್ರಹ್ಮಾಣಂ ಕುರ್ವೀತ ।**

(ಷ. ಬ್ರಾ. ೧-೫)

ಇಂದ್ರನು ವಿಶ್ವಾಮಿತ್ರನಿಗೆ ಉಕ್ಥಮಂತ್ರವನ್ನೂ ವಸಿಷ್ಠನಿಗೆ ಬ್ರಹ್ಮ(ಭಕ್ತಿ)ವನ್ನು ಉಪದೇಶಿಸಿದನು. ಉಕ್ಥವೇ ವಾಗ್ರೂಪವು. ವಿಶ್ವಾಮಿತ್ರನಿಗೆ ವಾಕ್ಕಿನ ರಹಸ್ಯವೆಲ್ಲವೂ ಅರ್ಥವಾಗುವಂತೆ ಮಾಡಿದನು. ಬ್ರಹ್ಮವೇ ಆತ್ಮವು. ಈ ಆತ್ಮಸ್ವರೂಪವು ವಸಿಷ್ಠನಿಗೆ ಅರ್ಥವಾಗುವಂತೆ ಮಾಡಿದನು. ಆದುದರಿಂದ ಆಧ್ಯಾತ್ಮಿಕಶಕ್ತಿಯು ವಸಿಷ್ಠನದಾಯಿತು. ಅದಕ್ಕಾಗಿಯೇ ವಸಿಷ್ಠವಂಶದವರೇ ಬ್ರಹ್ಮತ್ವಕ್ಕೆ ಅರ್ಹರಾದರೆಂದೂ ವಿವೃತವಾಗಿದೆ. ಇಂತಹ ಸಂದರ್ಭಗಳು, ವಿಶ್ವಾಮಿತ್ರನಿಗಿಂತಲೂ ವಸಿಷ್ಠನೇ ಅಧಿಕವಾದ ಮಹಿಮೆಯುಳ್ಳವನು ಎಂಬ ವಿಷಯವನ್ನು ತಿಳಿಸುವುದಾಗಿದೆ. ಮತ್ತು ಬ್ರಹ್ಮಜ್ಞಾನಿಯಾದ ಈ ವಸಿಷ್ಠನನ್ನೇ ಮಹಾಭಾರತಾದಿಗಳಲ್ಲೆಲ್ಲಾ ಪ್ರಶಂಸಿಸಿದೆ.

**ವಸಿಷ್ಠಂ ಶ್ರೇಷ್ಠಮಾಸೀನಂ ಋಷೀಣಾಂ ಭಾಸ್ಕರದ್ಯುತಿಂ ।**
**ಪಪ್ರಚ್ಛ ಜನಕೋ ರಾಜಾ ಜ್ಞಾನಂ ನೈಶ್ರೇಯಸಂ ಪರಂ ॥**
**ಪರಮಧ್ಯಾತ್ಮಕುಶಲಂ ಅಧ್ಯಾತ್ಮಗತಿನಿಶ್ಚಯಂ ।**
**ಮೈತ್ರಾವರುಣಿಮಾಸೀನಮಭಿವಾದ್ಯ ಕೃತಾಂಜಲಿಃ ॥**

(ಮ. ಭಾ. ಶಾ. ಪ. ೧೨೦-೧೨)

ಜನಕರಾಜನು ಅಂಜಲಿಬದ್ಧನಾಗಿ ಮಿತ್ರಾವರುಣರ ಪುತ್ರನಾದ ವಸಿಷ್ಠನನ್ನು ಸಮೀಪಿಸಿ ತನಗೆ ಬ್ರಹ್ಮಜ್ಞಾನವನ್ನುಪದೇಶಿಸಬೇಕೆಂದನು. ಋಷಿಗಳಲ್ಲೆಲ್ಲಾ ಅತ್ಯಂತ ಶ್ರೇಷ್ಠನೂ, ಸೂರ್ಯನಿಗೆ ಸಮಾನವಾದ ತೇಜಸ್ಸುಳ್ಳವನೂ, ಅಧ್ಯಾತ್ಮಜ್ಞಾನವನ್ನು ಪೂರ್ಣವಾಗಿ ಹೊಂದಿದ್ದವನೂ ಆದ ವಸಿಷ್ಠನು ಮೋಕ್ಷಸಾಧಕವಾದ ಬ್ರಹ್ಮಜ್ಞಾನವನ್ನುಪದೇಶಿಸಿದನು ಎಂದಿರುತ್ತದೆ.

ಪ್ರಕಾಶ, ವಾಸ ಮತ್ತು ಆಚ್ಛಾದನ ಎಂಬ ಅರ್ಥಗಳನ್ನು ಕೊಡತಕ್ಕ **ವಸ್** ಧಾತುವಿನಿಂದ ವಸಿಷ್ಠ ಶಬ್ದಾರ್ಥವು ನಿಷ್ಪನ್ನವಾಗಿದೆ. ಅತಿಶಯವಾಗಿ ಪ್ರಕಾಶಿಸುವವನೂ, ವಸತಿದಾಯಕನೂ ಮತ್ತು ಜಗತ್ತನ್ನೆಲ್ಲಾ ಆಚ್ಛಾದನ ಮಾಡುವ ಶಕ್ತಿಯುಳ್ಳವನೂ ಆದ **ಅಗ್ನಿಗೂ ವಸಿಷ್ಠನೆಂಬ** ವಿಶೇಷಣಪದವು ಅವನ ಈ ಗುಣಗಳನ್ನು ವರ್ಣಿಸುವುದಾಗಿದೆ. ಇಂತಹ ಕೆಲವು ಸಂದರ್ಭಗಳಲ್ಲಿ ವಸಿಷ್ಠನಿಗೂ ಅಗ್ನಿಗೂ ತಾದಾತ್ಮ್ಯವನ್ನೇ ಹೇಳಿದೆಯೆಂದರೂ ತಪ್ಪಾಗಲಾರದು.

ಯಾವ ವಸಿಷ್ಠನು ಅತ್ಯುತ್ತಮವಾದ ಪ್ರಭೆಯಿಂದ ಕೂಡಿ ಪುಷ್ಕರದಲ್ಲಿ ಸ್ಥಿತನಾಗಿದ್ದನು ಎಂದು ವರ್ಣಿತನಾಗಿದ್ದಾನೆಯೋ ಅದೇ ವರ್ಣನೆಯು ಅಗ್ನಿಪರವಾಗಿಯೂ ಇರುತ್ತದೆ.

**ತ್ವಾಮಗ್ನೇ ಪುಷ್ಕರಾದಧ್ಯಥರ್ವಾ ನಿರಮಂಥತ । ಮೂರ್ಧ್ನೋ ವಿಶ್ವಸ್ಯ ವಾಘತಃ ॥**

( ಋ. ಸಂ. ೬-೧೬-೧೩)

ಎಲೈ ಅಗ್ನಿಯೇ, ನಿನ್ನನ್ನು ಅಥರ್ವಾಂಗಿರಸಋಷಿಯು ಪುಷ್ಕರದ ಮೇಲೆ ಮಥನಮಾಡಿ ಸ್ಥಾಪಿಸಿದನು ಎಂದಿರುವ ಈ ವಾಕ್ಯವನ್ನು ತೈತ್ತಿರೀಯಸಂಹಿತೆಯಲ್ಲಿಯೂ ಉದಾಹರಿಸಿರುತ್ತದೆ. (ತೈ. ಸಂ. ೪–೧–೩ ; ೫–೧–೪) ಅಲ್ಲದೇ, ಋಕ್ಸಂಹಿತೆಯಲ್ಲಿಯೇ ಯಾವ ಅಗ್ನಿಯನ್ನು ವರ್ಣಿಸುತ್ತಾ,

**ನಿ ಹೋತಾ ಹೋತೃಷದನೇ ವಿದಾನಸ್ತ್ವೇಷೋ ದೀದಿವಾँ ಅಸಾದತ್ಸುದಕ್ಷಃ ।**
**ಅದಬ್ಧವ್ರತಪ್ರಮತಿರ್ವಸಿಷ್ಠಃ ಸಹಸ್ರಂಭರಃ ಶುಚಿಜಿಹ್ವೋ ಅಗ್ನಿಃ ॥**

(ಋ. ಸಂ. ೨–೯–೧)

ಅಹಿಂಸಿತವಾದ ವ್ರತಗಳುಳ್ಳವನೂ, ವಸಿಷ್ಠನೂ ಆದ ಅಗ್ನಿಯು ಉತ್ತರವೇದಿಯಲ್ಲಿ ಸ್ಥಾಪಿತನಾಗುತ್ತಾನೆಂದು ತಿಳಿಸಿದೆಯೋ, ಅದೇ ವಾಕ್ಯವನ್ನು ತೈತ್ತಿರೀಯಸಂಹಿತೆಯಲ್ಲಿಯೂ ಅನುವಾದಿಸಿದೆ. ಇಲ್ಲಿ **ಹೋತೃಷದನ** ವೆಂದರೆ, **ಉತ್ತರವೇದಿ** ಯೆಂದು ಸಾಯಣರು ವಿವರಿಸಿದ್ದಾರೆ. ಇದೇ ಉತ್ತರವೇದಿಯ ಅಲಂಕಾರವನ್ನು ವರ್ಣಿಸುತ್ತಾ, ತೈತ್ತಿರೀಯಾರಣ್ಯಕದಲ್ಲಿ ಈ ರೀತಿ ತಿಳಿಸಿರುತ್ತದೆ.

**ಜಾನುದಘ್ನೀಮುತ್ತರವೇದೀಂ ಖಾತ್ವಾ । ಅಪಾಂ ಪೂರಯತಿ । ಅಪಾಂಗ್ ಸರ್ವತ್ವಾಯ । ಪುಷ್ಕರಪರ್ಣಗ್ಂ ರುಕ್ಮಂ ಪುರುಷಮಿತ್ಯುಪದಧಾತಿ । ತಪೋ ವೈ ಪುಷ್ಕರಪರ್ಣಂ । ಸತ್ಯಗ್ಂ ರುಕ್ಮಃ ॥**

(ತೈ. ಆ. ೧–೨೫)

ಉತ್ತರವೇದಿಯ ಖನನವಾದನಂತರ ಸರ್ವವ್ಯಾಪಕವಾದ ಉದಕದಿಂದ ತುಂಬಿ ಪುಷ್ಕರಪರ್ಣವನ್ನು ಹರಡಿಡಬೇಕು ಎಂದೂ, ಈ ಪುಷ್ಕರಪರ್ಣದ ಮೇಲೆ ಅಗ್ನಿಯನ್ನು ಸ್ಥಾಪಿಸಬೇಕು ಎಂದೂ ವಿಧಿಸಿದೆ. ಬೃಹದ್ದೇವತೆಯಲ್ಲಿ "ವಸಿಷ್ಠನು ಪುಷ್ಕರಸ್ಥನಾಗಿ ಮಹತ್ತಪವನ್ನಾಚರಿಸಿದನು" ಎಂದಿದೆ. ಪ್ರಕೃತದಲ್ಲಿ ಉದಾಹೃತವಾಗಿರುವ ವಾಕ್ಯದಲ್ಲಿ ಪುಷ್ಕರಪರ್ಣಕ್ಕೂ ತಪಸ್ಸಿಗೂ ತಾದಾತ್ಮ್ಯವನ್ನೇ ಹೇಳಿದೆ. (ಇಂತಹ ಸಂದರ್ಭಗಳಲ್ಲಿ ಕೇವಲ ವಾಕ್ಯಸಾಮ್ಯದ ದೃಷ್ಟಿಯಿಂದ ತಾತ್ಪರ್ಯವನ್ನು ಕಲ್ಪಿಸಬಹುದೇ ವಿನಹ ಇದೇ ನಿಷ್ಕೃಷ್ಟವಾದ ತಾತ್ಪರ್ಯವೆಂದು ಯಾರೂ ಹೇಳುವಂತಿಲ್ಲ. ಸಾಯಣಾದಿಗಳೇ ಇಂತಹ ಸನ್ನಿವೇಶಗಳಲ್ಲಿ ವೈಕಲ್ಪಿಕವಾದ ತಾತ್ಪರ್ಯಗಳನ್ನು ಹೇಳಿರುತ್ತಾರೆ).

ಅಗ್ನಿಯನ್ನು ಮೇಲೆ ಉದಾಹರಿಸಿರುವ ಋಕ್ಸಂಹಿತೆಯ (೨–೯–೧) ಯಾವ ವಾಕ್ಯದಲ್ಲಿ ವಸಿಷ್ಠನೆಂದು ವರ್ಣಿಸಿದೆಯೋ ಅದೇ ವಾಕ್ಯವನ್ನೇ ಐತರೇಯಬ್ರಾಹ್ಮಣದಲ್ಲಿಯೂ ಉದಾಹರಿಸಿ.

**" ಅಗ್ನಿರ್ವೈ ದೇವಾನಾಂ ಹೋತಾ .... .... ಅಗ್ನಿರ್ವೈ ದೇವಾನಾಂ ವಸಿಷ್ಠಃ "**

(ಐ. ಬ್ರಾ. ೧–೨೮)

ಎಂದು ವಿವರಿಸಿದೆ. **" ಆ ಯಸ್ತೇ ಅಗ್ನ ಇಧತೇ ಅನೀಕಂ ವಸಿಷ್ಠ "** (ಋ. ಸಂ. ೭–೧–೮) ಇತ್ಯಾದಿ ವಾಕ್ಯಗಳಲ್ಲಿ ವಸಿಷ್ಠಶಬ್ದಕ್ಕೆ ಯಾವ ಅರ್ಥವನ್ನು ಹೇಳಿದೆಯೋ ಅದೇ ಅರ್ಥವೇ ಬ್ರಾಹ್ಮಣಾದಿಗಳಲ್ಲಿಯೂ ಪ್ರಸಿದ್ಧ ವಾಗಿದೆ. ಪ್ರಭಾಮಹತ್ವದಿಂದ ಕೂಡಿದ ಭಾಸ್ಕರಾದಿಗಳ ಯಾವ ಮಹದ್ಗುಣವಿರುವುದೋ ಆ ಗುಣವೇ ಈವಸಿಷ್ಠ ಪದದಿಂದ ಸೂಚಿತವಾಗುತ್ತದೆ. ಈ ಪ್ರಭೆಯು ಪೃಥಿವೀ, ಅಂತರಿಕ್ಷ ಮತ್ತು ದ್ಯುಲೋಕ ಎಂಬ ಈ ಮೂರು ಲೋಕ ಗಳಲ್ಲೂ ಮೂರುವಿಧವಾಗಿ ಪ್ರಸಿದ್ಧವಾಗಿರುತ್ತದೆ. **ಅಗ್ನಿ, ವಾಯು** ಮತ್ತು **ಸೂರ್ಯ** ಎಂಬಈ ಮೂರು ಸಂಜ್ಞೆಗಳಿಂದ

ಒಬ್ಬನೇ ಅಗ್ನಿಯು ನಿರ್ದಿಷ್ಟನಾಗಿದ್ದಾನೆಂಬ ವಿಷಯವನ್ನು ಹಿಂದೆ ಅನೇಕ ಸನ್ನಿವೇಶಗಳಲ್ಲಿ ತಿಳಿಸಿದೆ. ಈ ತೇಜಸ್ತತ್ವಗಳ ಅತಿಶಯವಾದ ಮಹತ್ತ್ವವನ್ನು ತೇಜೋರೂಪನಾದ ವಸಿಷ್ಠನಲ್ಲದೇ ಇತರಾರೂ ಸಾಕ್ಷಾತ್ಕರಿಸಲಾಗಲಿಲ್ಲ. ಇದೇ ವಿಷಯವನ್ನು ಋಕ್ಸಂಹಿತೆಯಲ್ಲಿಯೂ ಈ ರೀತಿ ಪ್ರಶಂಸಿಸಿದೆ.

**ತ್ರಯಃ ಕೃಣ್ವಂತಿ ಭುವನೇಷು ರೇತಸ್ತಿಸ್ರಃ ಪ್ರಜಾ ಆರ್ಯಾ ಜ್ಯೋತಿರಗ್ರಾಃ ।**
**ತ್ರಯೋ ಘರ್ಮಾಸ ಉಷಸಂ ಸಚಂತೇ ಸರ್ವಾ ಇತ್ತಾ ಅನು ವಿದುರ್ವಸಿಷ್ಠಾಃ ॥**
(ಋ. ಸಂ. ೭-೩೩-೭)

ಮೂರು ಲೋಕಗಳಲ್ಲಿಯೂ (ಪೃಥಿವೀ, ಅಂತರಿಕ್ಷ ಮತ್ತು ದ್ಯುಲೋಕ) ಅಗ್ನಿ, ವಾಯು ಮತ್ತು ಸೂರ್ಯರು ತಮ್ಮ ಪ್ರಭಾವಗಳಿಂದ ವಿಶ್ವಧಾರಕತ್ವವನ್ನು ಹೊಂದಿರುವ ಉದಕವನ್ನು ಉತ್ಪನ್ನಮಾಡುತ್ತಾರೆ. ಆ ಮೂವರಿಗೂ ಆದಿತ್ಯಪ್ರಮುಖರಾದ ಮೂವರು ಪ್ರಜೆಗಳು ಉತ್ಪನ್ನರಾಗಿದ್ದಾರೆ. ಪ್ರಕಾಶಮಾನರಾದ ಈ ಮೂವರೂ ಉಷಸ್ಸನ್ನು ಸೇವಿಸುತ್ತಾರೆ. ಈ ತತ್ತ್ವವು ವಸಿಷ್ಠರಿಗಲ್ಲದೇ ಇನ್ಯಾರಿಗೂ ಸಾಕ್ಷಾತ್ಕೃತವಾಗುವುದಿಲ್ಲ ಎಂಬ ತಾತ್ಪರ್ಯವಿರುವ ಈ ವಾಕ್ಯಗಳಿಗೆ ವಿವರಣೆಯನ್ನು ಹೇಳುವಾಗ ಸಾಯಣರು ಶಾಟ್ಯಾಯನಶ್ರುತಿವಾಕ್ಯವನ್ನೂ ಉದಾಹರಿಸಿದ್ದಾರೆ. ಆದುದರಿಂದಲೇ,

**ಸೂರ್ಯಸ್ಯೇವ ವಕ್ಷಥೋ ಜ್ಯೋತಿರೇಷಾಂ ಸಮುದ್ರಸ್ಯೇವ ಮಹಿಮಾ ಗಭೀರಃ ॥**
(ಋ. ಸಂ. ೭-೩೩-೮)

ಈ ವಸಿಷ್ಠರ ಪ್ರಭೆಯು ಆದಿತ್ಯನಪ್ರಭೆಯಂತೆ ಮಹತ್ತ್ವವುಳ್ಳದ್ದಾಗಿದೆ. ಅವರ ಮಹಿಮೆಯು ಸಾಗರದಂತೆ ಆಳವಾಗಿದೆಯೆಂದು ಸ್ತುತಿಸಿದೆ. ಇಲ್ಲೆಲ್ಲಾ **ವಸಿಷ್ಠಾಃ** ಎಂಬ ಬಹುವಚನ ಪ್ರಯೋಗವು ಪೂಜಾರ್ಥದಲ್ಲಿದೆಯೆಂದೂ ಇವೆಲ್ಲವೂ ವಸಿಷ್ಠನ ವರ್ಣನೆಯೆಂದು ತಿಳಿಯಬೇಕೆಂದೂ ಸಾಯಣರು ತಮ್ಮ ಭಾಷ್ಯದಲ್ಲಿ ತಿಳಿಸಿದ್ದಾರೆ. (ಋ. ಸಂ. ೭-೩೩-೯) ಹೀಗೆ **ವಸಿಷ್ಠ**ನ ವರ್ಣನೆಯಿರುವುದರಿಂದ ವಸಿಷ್ಠನ ದಿವ್ಯಾಂಶತ್ವವು ಸೂಚಿತವಾಗುವುದೇ ಅಲ್ಲದೇ, ಸೂರ್ಯಾದಿ ನಾನಾ ರೂಪಗಳಿಂದ ಪ್ರಕಾಶಿಸುವವನೂ, ವಿಶ್ವವನ್ನೇ ವ್ಯಾಪಿಸಿರುವವನೂ, ಜಗತ್ತಿನ ಸ್ಥಿತಿಗೆ ಕಾರಣವಾದ ಯಜ್ಞಾದಿಗಳಿಗೆಲ್ಲಾ ಪ್ರಧಾನಸ್ಥಾನವನ್ನಾಕ್ರಮಿಸುವವನೂ ಆದ ಅಗ್ನಿಯ ವಿಭೂತಿವಿಶೇಷವೇ ವಸಿಷ್ಠನ ರೂಪದಲ್ಲಿ ಉದ್ಭವವಾಯಿತು ಎಂದು ಹೇಳಬಹುದು. ಈ ಸಿದ್ಧಾಂತವು ಕೇವಲ ಕಲ್ಪಿತವಾಗಿರದೆ, ಋಕ್ಸಂಹಿತಾವಾಕ್ಯಗಳ ಆಧಾರದ ಮೇಲೆಯೇ ನಿಶ್ಚಿತವಾಗಿರುತ್ತದೆ.

**ತ ಇನ್ನಿಣ್ಯಂ ಹೃದಯಸ್ಯ ಪ್ರಕೇತೈಃ ಸಹಸ್ರವಲ್ಶಮಭಿ ಸಂ ಚರಂತಿ ।**
**ಯಮೇನ ತತಂ ಪರಿಧಿಂ ವಯಂತೋಽಪ್ಸರಸ ಉಪ ಸೇದುರ್ವಸಿಷ್ಠಾಃ ॥**
(ಋ. ಸಂ. ೭-೩೩-೯)

ಅದೇ ವಸಿಷ್ಠನು (ವಸಿಷ್ಠಾಃ ಎಂಬ ಬಹುವಚನಪ್ರಯೋಗವು ಪೂಜಾರ್ಥವಾಗಿ) ಇತರರ ಜ್ಞಾನಕ್ಕೆ ಸಿಲುಕದ ರಹಸ್ಯವುಳ್ಳದ್ದೂ ಸಹಸ್ರಾರು ಶಾಖಾತ್ಮಕವಾದುದೂ ಆದ ಸಂಸಾರದಲೆಲ್ಲಾ ಸಂಚರಿಸುತ್ತಾ ಜಗತ್ತಿಗೆಲ್ಲಾ ಕಾರಣಾತ್ಮಕನಾದ ಯಮನಿಂದ ವಿಸ್ತೃತವಾಗಿ ಹರಡಲ್ಪಟ್ಟ ಜಗತ್ಪ್ರವಾಹದಲ್ಲಿ ಉರ್ವಶಿಯ ದ್ವಾರಾ ಆವಿರ್ಭೂತನಾಗಿದ್ದಾನೆ. ಹಿಂದೆ ಇದ್ದ ಪ್ರಜಾಪತಿಪುತ್ರತ್ವವನ್ನು ಬಿಟ್ಟು ಈಗ ಅಪ್ಸರಸ್ಸಿನ ಉದರದಲ್ಲಿ ಜನಿಸಿದ್ದಾನೆ ಎಂದು ಅವನ ಮಹಿಮೆಯನ್ನು ಸ್ತುತಿಸಿದೆ. ಈ ವಸಿಷ್ಠನೇ ದೇಹಾಂತರ ಪ್ರಾಪ್ತಿಗಾಗಿ ತನ್ನ ಸ್ವಾಭಾವಿಕವಾದ ಜ್ಯೋತಿಯನ್ನು ಪರಿತ್ಯಜಿಸಿದನು ಎಂದು ಮೇಲೆ ಉದಹರಿಸಿದ "**ವಿದ್ಯುತೋ ಜ್ಯೋತಿಃ ಪರಿ ಸಂಜಿಹಾನಂ**" (ಋ. ಸಂ. ೭-೩೩-೧೦) ಎಂಬ ವಾಕ್ಯದಲ್ಲಿ ತಿಳಿಸಿದೆ.

## ವಸಿಷ್ಠ ಮತ್ತು ಸುದಾಸ

ಈ ವಿಧವಾಗಿ ದಿವ್ಯಾಂಶಸಂಭೂತನೆಂದೂ, ದಿವ್ಯಜ್ಞಾನಿಯೆಂದೂ ವರ್ಣಿತನಾಗಿರುವ ವಸಿಷ್ಠನೂ ಸಹ ದುಃಖಕ್ಕೆ ಭಾಗಿಯಾಗಿರುವ ವಿಷಯವು ಕೆಲವೆಡೆಗಳಲ್ಲಿ ನಿರ್ದಿಷ್ಟವಾಗಿದೆ. ಮೇಲೆ ಉದಾಹರಿಸಿರುವ **"ಕಿಮಾಗ ಆಸ ವರುಣ"** (೭-೮೬-೪) ಎಂಬ ವಾಕ್ಯದಲ್ಲಿ ವಸಿಷ್ಠನು ವರುಣನ ಆಗ್ರಹಕ್ಕೆ ಪಾತ್ರನಾದುದೂ ಅದಕ್ಕಾಗಿ ವರುಣನ ಕ್ಷಮೆಯನ್ನು ಬೇಡಿದುದೂ ವ್ಯಕ್ತವಾಗಿದೆ. ಇದೇ ಅಲ್ಲದೇ, ಮಾನವರಿಂದಲೂ ಅವನು ಹಿಂಸೆಯನ್ನನುಭವಿಸುವ ಸನ್ನಿವೇಶಗಳೂ ಇರುತ್ತವೆ. ಸಾಯಣರು ಋ. ಸಂ. ೭-೧೦೪ ನೇ ಸೂಕ್ತದ ಪೀಠಿಕೆಯನ್ನು ಬರೆಯುವಾಗ ಈ ವಿಷಯವನ್ನು ತಿಳಿಸುತ್ತಾರೆ ಮತ್ತು ಬೃಹದ್ದೇವತಾವಾಕ್ಯವನ್ನು ಉದಾಹರಿಸಿದ್ದಾರೆ.

**ಋಷಿರ್ದದರ್ಶ ರಾಕ್ಷೋಘ್ನಂ ಪುತ್ರಶೋಕಪರಿಪ್ಲುತಃ ।**
**ಹತೇ ಪುತ್ರಶತೇ ಕ್ರುದ್ಧಃ ಸೌದಾಸೈರ್ದುಃಖಿತಸ್ತದಾ ॥**

(ಬೃ. ದೇ. ೬-೨೮)

ಸುದಾಸನ ಅನುಚರರಿಂದ ಯಾವಾಗ ವಸಿಷ್ಠನ ನೂರುಮಂದಿ ಮಕ್ಕಳೂ ಹತರಾದರೋ ಆಗ ವಸಿಷ್ಠನು ಅತಿ ದುಃಖದಿಂದ ಸಂತಪ್ತನಾಗಿ ರಾಕ್ಷಸರ ದಮನಕ್ಕಾಗಿ ಶಕ್ತಿಯುತವಾದ ಈ ಸೂಕ್ತವನ್ನು ನಿರ್ಮಿಸಿದನು. ಋಷಿಯಿಂದ ದೃಷ್ಟವಾದ ಈ ಸೂಕ್ತದಲ್ಲಿರುವ ಮಂತ್ರಗಳಿಗೆ ರಾಕ್ಷೋಘ್ನಮಂತ್ರಗಳೆಂದು ಹೆಸರು, ಎಂದು ಸಾಯಣವಾಕ್ಯವು ತಿಳಿಸುತ್ತದೆ. ಆದರೆ ಇಲ್ಲಿ ಕೇವಲ ರಾಕ್ಷಸರನ್ನು ಮಾತ್ರ ನಿರ್ದೇಶಿಸಿದೆಯೇ ಅಥವಾ ವಿಶ್ವಾಮಿತ್ರಾದಿ ಶತ್ರುಗಳನ್ನೂ ನಿರ್ದೇಶಿಸಿದೆಯೇ ಎಂಬುದು ವಿಮರ್ಶಾರ್ಹವಾಗಿದೆ.

ಸುದಾಸನಿಗೂ ವಸಿಷ್ಠನಿಗೂ ಅತಿಯಾದ ಮಿತ್ರತ್ವವಿದ್ದು ವಸಿಷ್ಠನಿಂದ ಸುದಾಸನು ಅನೇಕ ಉಪಕಾರಗಳನ್ನು ಪಡೆದನೆಂಬುದು ಸಂಹಿತಾದಿಗಳಲ್ಲೆಲ್ಲಾ ಪ್ರಸಿದ್ಧವಾಗಿದೆ. ಆದರೆ **"ಸೌದಾಸೈಃ ದುಃಖಿತಸ್ತದಾ"** ಎಂಬ ವಾಕ್ಯದಿಂದ ತೋರುವ ಶತ್ರುತ್ವವು ಹೇಗೆ, ಯಾವ ಕಾರಣದಿಂದ ಎಂಬುದು ನಿಷ್ಕೃಷ್ಟವಾಗಿ ತಿಳಿಯುವುದಿಲ್ಲ. ಸುದಾಸಪುತ್ರರು ವಸಿಷ್ಠನಿಗೆ ಹಿಂಸೆಯನ್ನುಂಟುಮಾಡಿದರೇ ಅಥವಾ ಸುದಾಸ ಮತ್ತು ಅವನ ಪುತ್ರರು ಸೇರಿಕೊಂಡು ಹಿಂಸಿಸಿದರೇ ಎಂಬುದನ್ನೂ ಸುಲಭವಾಗಿ ಹೇಳಲಾಗುವುದಿಲ್ಲ. ಋಕ್ಸಂಹಿತಾ ವಾಕ್ಯಗಳು ವಸಿಷ್ಠನಿಗೂ ಸುದಾಸನಿಗೂ ಇದ್ದ ಮಿತ್ರತ್ವವನ್ನೇ ಪ್ರಶಂಸಿಸುತ್ತವೆ. ಋಕ್ಸಂಹಿತೆಯ ೭ನೇ ಮಂಡಲದ ೧೮ನೇ ಸೂಕ್ತದಲ್ಲಿ ಸುದಾಸನಿಗೆ ಸಹಾಯಮಾಡಬೇಕೆಂಬ ಉದ್ದಿಶ್ಯದಿಂದ ವಸಿಷ್ಠನು ಇಂದ್ರನನ್ನು ಸ್ತುತಿಸಿ ಇಂದ್ರನ ಸಹಾಯವು ಸುದಾಸನಿಗೆ ಲಭಿಸುವಂತೆ ಮಾಡಿದನು ಎಂದು ವರ್ಣಿಸಲಾಗಿದೆ. ಮತ್ತು ಸುದಾನ ಪ್ರಶಂಸೆಯೂ ಇರುತ್ತದೆ.

**ಅರ್ಣಾಂಸಿ ಚಿತ್ರಪ್ರಥಾನಾ ಸುದಾಸ ಇಂದ್ರೋ ಗಾಧಾನ್ಯಕೃಣೋತ್ಸುಪಾರಾ ।**
**ಶರ್ಧಂತಂ ಶಿಮ್ಯುಮುಚಥಸ್ಯ ನವ್ಯಃ ಶಾಪಂ ಸಿಂಧೂನಾಮಕೃಣೋದಶಸ್ತೀಃ ॥**

(ಋ. ಸಂ. ೭-೧೮-೫)

ಪೂಜ್ಯನಾದ ಇಂದ್ರನು ವಸಿಷ್ಠನ ಪ್ರಾರ್ಥನೆಯ ಮೇರೆ ಸುದಾಸನಲ್ಲಿ ಅನುಗ್ರಹವನ್ನಿಟ್ಟು, ಅತ್ಯಂತ ಆಳವಾದ ಪ್ರವಾಹವುಳ್ಳ ಪರುಷ್ಣೀನದಿಯನ್ನು ಸಹ ಸುದಾಸನು ಸುಲಭವಾಗಿ ದಾಟುವಂತೆ ಮಾಡಿದನು. ಶತ್ರುಗಳ ಶಾಪಗಳನ್ನೆಲ್ಲಾ ತನ್ನ ಸ್ತೋತೃವಿಗೆ ಅನುಕೂಲವಾಗುವಂತೆ ನದೀರೂಪದಲ್ಲಿ ಪ್ರವಹಿಸುವಂತೆ ಪರಿವರ್ತಿಸಿದನು ಎಂದಿದೆ

ಯಾವ ಸುದಾಸನಿಗಾಗಿ ವಸಿಷ್ಠನು ದೇವತೆಗಳನ್ನು ಪೂಜಿಸಿದನೋ ಆ ಸುದಾಸನ ಗುಣಾತಿಶಯಗಳನ್ನು ಈ ರೀತಿ ವರ್ಣಿಸಿದ್ದಾನೆ.

**ದ್ವೇ ನಪ್ತುರ್ದೇವವತಃ ಶತೇ ಗೋರ್ದ್ವಾ ರಥಾ ವಧೂಮಂತಾ ಸುದಾಸಃ ।**
**ಅರ್ಹನ್ನಗ್ನೇ ಪೈಜವನಸ್ಯ ದಾನಂ ಹೋತೇವ ಸದ್ಮ ಪರ್ಯೇಮಿ ರೇಭನ್ ॥**
(ಋ. ಸಂ. ೭-೧೮-೨೨)

ಎಲೈ ಅಗ್ನಿಯೇ, ದೇವವತನ ಪೌತ್ರನೂ, ಪಿಜವನನ ಪುತ್ರನೂ ಆದ ಸುದಾಸನಿಂದ ದತ್ತವಾದ ಎರಡು ನೂರು ಗೋವುಗಳನ್ನೂ, ಎರಡು ರಥಗಳನ್ನೂ ಮತ್ತು ತದುಪಯುಕ್ತವಾದ ಅಶ್ವಗಳನ್ನೂ ದಾನವಾಗಿ ಪಡೆದು ನಾನು (ಅವನಿಗೆ ನನ್ನ ಅನುಗ್ರಹವನ್ನು ಸಂಪಾದಿಸಲು) ನಿನ್ನ ಯಜ್ಞಸದನದ ಪ್ರದಕ್ಷಿಣೆಯಿಂದ ನಿನ್ನನ್ನು ಆರಾಧಿಸುತ್ತೇನೆ.

**ಚತ್ವಾರೋ ಮಾ ಪೈಜವನಸ್ಯ ದಾನಾಃ ಸ್ಮದ್ದಿಷ್ಟಯಃ ಕೃಶನಿನೋ ನಿರೇಕೇ ।**
**ಋಜ್ರಾಸೋ ಮಾ ಪೃಥಿವಿಷ್ಠಾಃ ಸುದಾಸಸ್ತೋಕಂ ತೋಕಾಯ ಶ್ರವಸೇ ವಹಂತಿ ॥**
(ಋ. ಸಂ. ೭-೧೮-೨೩)

ಪಿಜವನಪುತ್ರನಿಂದ ದತ್ತವಾದವೂ, ಪ್ರಭಾಯುತವಾದವೂ, ದುರ್ಗಮವಾದ ಪ್ರದೇಶಗಳಲ್ಲೂ ಸುಲಭವಾಗಿ ಸಂಚರಿಸ ಬಲ್ಲವೂ, ಋಜುಗಾಮಿಗಳೂ, ಪೃಥ್ವಿಯಮೇಲೆ ಸುಪ್ರತಿಷ್ಠಿತವಾದವೂ ಆದ ನಾಲ್ಕು ಅಶ್ವಗಳೂ ಸಹ ನನ್ನನ್ನೂ (ವಸಿಷ್ಠ) ಮತ್ತು ನನ್ನ ಪುತ್ರಪೌತ್ರಾದಿಗಳನ್ನೂ ವಂಶಪಾರಂಪರ್ಯವಾಗಿ ಅನ್ನಲಾಭಾರ್ಥವಾಗಿ ವಹಿಸುತ್ತವೆ.

**ಯಸ್ಯ ಶ್ರವೋ ರೋದಸೀ ಅಂತರುರ್ವೀ ಶೀರ್ಷ್ಣೇಶೀರ್ಷ್ಣೇ ವಿಬಭಾಜಾ ವಿಭಕ್ತಾ ।**
**ಸಪ್ತೇದಿಂದ್ರಂ ನ ಸ್ರವತೋ ಗೃಣಂತಿ ನಿ ಯುಧ್ಯಾಮಧಿಮಶಿಶಾದಭೀಕೇ ॥**
(ಋ. ಸಂ. ೭-೧೮-೨೪)

ಯಾವ ಸುದಾಸನ ಕೀರ್ತಿಯು ದ್ಯಾವಾಪೃಥಿವಿಗಳೆಲ್ಲೆಲ್ಲಾ ವ್ಯಾಪಿಸಿ ಪ್ರಸಿದ್ಧವಾಗಿರುವುದೋ ಅಂತಹ ಸುದಾಸನು ಶ್ರೇಷ್ಠರಾದವರೆಲ್ಲರಿಗೂ ವೈಯಕ್ತಿಕವಾಗಿ ದಾನಮಾಡುತ್ತಾನೆ. ಇಂತಹ ಉದಾರವಾಗಿ ದಾನಮಾಡುವ ಸುದಾಸನನ್ನು ಅವನೇ ಇಂದ್ರನೋ ಎಂಬಂತೆ ಸಪ್ತಲೋಕಗಳೂ ಪ್ರಶಂಸಿಸುತ್ತವೆ ಎಂದು ವಸಿಷ್ಠನು ಸುದಾಸನ ಮಹತ್ತ್ವವನ್ನು ಕೊಂಡಾಡಿದ್ದಾನೆ. ಹಾಗೆಯೇ ೭ನೇ ಮಂಡಲದ ೮೩ನೇ ಸೂಕ್ತದಲ್ಲಿ ಮೊದಲಿನಿಂದಲೂ ಕೊನೆಯವರೆಗೂ ಸಹ ಸುದಾಸನ ಪ್ರಶಂಸೆಯೂ, ಸುದಾಸನಿಗೆ ಸಹಾಯಮಾಡಬೇಕೆಂದು ವಸಿಷ್ಠನು ಇಂದ್ರ ಮತ್ತು ವರುಣರನ್ನು ಪ್ರಾರ್ಥಿಸುವುದೂ, ಆ ಪ್ರಾರ್ಥನೆಗೆ ಪ್ರತಿಯಾಗಿ ಸುದಾಸನು ಆ ದೇವತೆಗಳ ಸಹಾಯವನ್ನು ಪಡೆದು ನಾನಾ ಯುದ್ಧಗಳಲ್ಲಿ ಜಯವನ್ನು ಗಳಿಸಿದನೆಂದೂ ವರ್ಣಿಸಿದೆ. ಸುದಾಸನಿಗೆ ಸಹಾಯಮಾಡಿದ ವಸಿಷ್ಠನ ಪ್ರಶಂಸೆಯೂ ಸಹ ಇರುತ್ತದೆ. ಉದಾಹರಣೆಗೆ—

**ಏವೇನ್ನು ಕಂ ಸಿಂಧುಮೇಭಿಸ್ತತಾರೇವೇನ್ನು ಕಂ ಭೇದಮೇಭಿರ್ಜಘಾನ ।**
**ಏವೇನ್ನು ಕಂ ದಾಶರಾಜ್ಞೇ ಸುದಾಸಂ ಪ್ರಾವದಿಂದ್ರೋ ಬ್ರಹ್ಮಣಾ ವೋ ವಸಿಷ್ಠಾಃ ॥**
(ಋ. ಸಂ. ೭-೩೩-೩)

ಎಲೈ ವಸಿಷ್ಠರೇ, ನಿಮ್ಮ ಪೌರೋಹಿತ್ಯವಿದ್ದುದರಿಂದಲೇ ಸುದಾಸನು ಸಿಂಧುವನ್ನು ದಾಟಲು ಶಕ್ತನಾದನು. ಆದುದ ರಿಂದಲೇ ಶತ್ರುಗಳನ್ನು ನಾಶಮಾಡಬಲ್ಲವನಾದನು. ಅವನಿಗೆ ಪುರೋಹಿತರಾದ ನೀವು ಇಂದ್ರನನ್ನು ಸ್ತುತಿಸಿದುದ

ರಿಂದ ಮಾತ್ರ ಇಂದ್ರನು ಹತ್ತುಮಂದಿ ರಾಜರೊಡನೆ ನಡೆದ ಯುದ್ಧದಲ್ಲಿ ಸಹಾಯಮಾಡಿ ರಕ್ಷಿಸಿದನು ಎಂದಿದೆ. ಇದೇ ವಸಿಷ್ಠ ಮತ್ತು ಸುದಾಸರ ಸಂಬಂಧವು ಐತರೇಯಬ್ರಾಹ್ಮಣದಲ್ಲಿ ಈ ರೀತಿ ವರ್ಣಿತವಾಗಿದೆ.

**"........ಇತ್ಯೇತೇನ ಹ ವಾ ಐಂದ್ರೇಣ ಮಹಾಭಿಷೇಕೇಣ ವಸಿಷ್ಠಃ ಸುದಾಸಂ ಪೈಜವನಮಭಿಷಿಷೇಚ ತಸ್ಮಾದು ಸುದಾಃ ಪೈಜವನಃ ಸಮಂತಂ ಸರ್ವತಃ ಪೃಥಿವೀಂ ಜಯನ್ಪರೀಯಾಯಾಶ್ವೇನ ಚ ಮೇಧ್ಯೇನೇಜೇ"** (ಐ. ಬ್ರಾ. ೮-೨೧)

ವಸಿಷ್ಠನು ಐಂದ್ರಾಭಿಷೇಕದ ಮಂತ್ರಗಳನ್ನು ಪಠಿಸಿ ಪಿಜವನ ಪುತ್ರನಾದ ಸುದಾಸನಿಗೆ ರಾಜ್ಯಾಭಿಷೇಕವನ್ನು ಮಾಡಿದನು. ಆದುದರಿಂದಲೇ ಸುದಾಸನು ಸಕಲಪೃಥ್ವಿಯನ್ನೂ ಜಯಿಸಿ ಅಶ್ವಮೇಧಯಜ್ಞವನ್ನಾಚರಿಸಿದನು ಎಂಬುದಾಗಿ ವಸಿಷ್ಠನ ಸಹಾಯದಿಂದ ಸುದಾಸನು ಸಾರ್ವಭೌಮತ್ವವನ್ನು ಪಡೆದ ವಿಷಯವನ್ನು ತಿಳಿಸಿದೆ.

ಆದರೆ ಸೌದಾಸರಿಂದ ವಸಿಷ್ಠಪುತ್ರನ ಹನನವಾದುದೂ ಅದಕ್ಕಾಗಿ ವಸಿಷ್ಠನು ದುಃಖಿಸಿ ಪುನಃ ಮಂತ್ರಸಹಾಯದಿಂದ ಆ ಸುದಾಸಪುತ್ರರನ್ನು ಜಯಿಸಿದುದೂ ಸಂಹಿತಾದಿಗಳಲ್ಲೇ ಉಕ್ತವಾಗಿದೆ. ಉದಾಹರಣೆಗೆ— ತೈತ್ತಿರೀಯ ಸಂಹಿತೆಯಲ್ಲಿ ಈ ರೀತಿ ತಿಳಿಸಿದೆ.

**ವಸಿಷ್ಠೋ ಹತಪುತ್ರೋಽಕಾಮಯತ ವಿಂದೇಯ ಪ್ರಜಾಮಭಿ ಸೌದಾಸಾನ್ಭವೇಯಮಿತಿ ಸ ಏತಮೇಕಸ್ಮಾನ್ನಪಂಚಾಶಮಪಶ್ಯತ್ತಮಾಹರತ್ತೇನಾಯಜತ ತತೋ ವೈ ಸೋಽವಿಂದತ ಪ್ರಜಾಮಭಿ ಸೌದಾಸಾನಭವತ್ ॥** (ತೈ. ಸಂ. ೭-೪-೭-೧)

ತನ್ನ ಪುತ್ರರು ಸೌದಾಸರಿಂದ ಹತರಾದಾಗದ ವಸಿಷ್ಠನು "ಪುನಃ ನನಗೆ ಸಂತತಿಯುಂಟಾಗಿ ಆ ಪುತ್ರನ ಸಹಾಯದಿಂದ ಸುದಾಸರನ್ನು ಜಯಿಸುವಂತಾಗಲಿ'' ಎಂದು ಆಶಿಸಿ "**ಏಕಸ್ಮಾನ್ನಪಂಚಾಶಂ**" ಎಂಬ ಮಂತ್ರವನ್ನು ಸಾಕ್ಷಾತ್ಕರಿಸಿ ಅದರ ಪ್ರಭಾವದಿಂದ ಯಜ್ಞವನ್ನಾಚರಿಸಿದನು. ಅದರ ಫಲವಾಗಿ ಅವನಿಗೆ ಪುತ್ರೋತ್ಪತ್ತಿಯುಂಟಾಗಿ ಆ ಪುತ್ರನ ಸಹಾಯದಿಂದ ಸುದಾಸನನ್ನು ಜಯಿಸಿದನು ಎಂದಿರುತ್ತದೆ.

"**ಮೋ ಷು ತ್ವಾ**" (ಋ. ಸಂ. ೭-೩೨) ಎಂಬ ಮಂತ್ರದಿಂದ ಆರಂಭವಾಗುವ ಸೂಕ್ತಕ್ಕೆ ಉಪೋದ್ಘಾತವನ್ನು ಬರೆಯುವ ಕಾಲದಲ್ಲಿ ಸಾಯಣರು ಅನುಕ್ರಮಣಿಕೆಯಿಂದ ಕೆಳಗಿನ ವಾಕ್ಯಗಳನ್ನುದಾಹರಿಸಿ ಈ ಸಂದರ್ಭವನ್ನು ತಿಳಿಸಿದ್ದಾರೆ.

**ಸೌದಾಸೈರಗ್ನೌ ಪ್ರಕ್ಷಿಪ್ಯಮಾಣಃ ಶಕ್ತಿರನ್ತ್ಯಂ ಪ್ರಗಾಥಮಾಲೇಭೇ ಸೋಽರ್ಧರ್ಚ ಉಕ್ತೇಽದಹ್ಯತ । ತಂ ಪುತ್ರೋಕ್ತಂ ವಸಿಷ್ಠಃ ಸಮಾಪಯತೇತಿ ಶಾಟ್ಯಾಯನಕಂ ವಸಿಷ್ಠಸ್ಯೈವ ಹತಪುತ್ರಸ್ಯಾರ್ಷಮಿತಿ ತಾಂಡಕಮ್ ॥**

ಸುದಾಸಪುತ್ರರಿಂದ ಅಗ್ನಿಯಲ್ಲಿ ಪ್ರಕ್ಷಿಪ್ತನಾಗುತ್ತಿದ್ದಾಗ ವಸಿಷ್ಠಪುತ್ರನಾದ **ಶಕ್ತಿಯು** ಈ ಸೂಕ್ತದ ಅಂತ್ಯಪ್ರಗಾಥವನ್ನು ಸಾಕ್ಷಾತ್ಕರಿಸಿದನು. ಅದರಲ್ಲಿ ಅರ್ಧಋಕ್ಕನ್ನು ಪಠಿಸಿದಾಗಲೇ ದಗ್ಧನಾದನು. ಆಗ ವಸಿಷ್ಠನು ತನ್ನ ಪುತ್ರನಿಂದ ಪಠಿತವಾಗದಿರುವ ಉಳಿದರ್ಧವನ್ನು ಪಠಿಸಿದನು ಎಂಬುದಾಗಿ ಶಾಟ್ಯಾಯನಬ್ರಾಹ್ಮಣದ ವಾಕ್ಯವಿರುತ್ತದೆ. 'ವಸಿಷ್ಠನೇ ಪೂರ್ಣವಾದ ಋಕ್ಕನ್ನು ಪಠಿಸಿದನೆಂದೂ' ಸಹ ತಾಂಡ್ಯಬ್ರಾಹ್ಮಣವು ಹೇಳುತ್ತದೆ ಎಂದು ಸಾಯಣರ ಪೀಠಿಕೆಯು ತಿಳಿಸುತ್ತದೆ. ಇದೇ ಸಂದರ್ಭವನ್ನು ಮನುವೂ ಸಹ ಈ ರೀತಿ ತಿಳಿಸಿದ್ದಾನೆ.

**ಮಹರ್ಷಿಭಿಶ್ಚ ದೇವೈಶ್ಚ ಕಾರ್ಯಾರ್ಥಂ ಶಪಥಾಃ ಕೃತಾಃ ।**
**ವಸಿಷ್ಠೈಶ್ಚಾಪಿ ಶಪಥಂ ಶೇಪೇ ಪೈಜವನೇ ನೃಪೇ ॥**
(ಮ. ಸಂ. ೮-೧೧೦)

ಮಹರ್ಷಿಗಳೂ ಮತ್ತು ದೇವತೆಗಳೂ ಸಹ ಕಾರ್ಯಸಿದ್ಧಿಗಾಗಿ ಶಪಥವನ್ನು ಮಾಡುತ್ತಾರೆ. ಉದಾಹರಣೆಗಾಗಿ ವಸಿಷ್ಠನು ಪಿಜವನ ಪುತ್ರನ ಮೇಲೆ ಸೇಡನ್ನು ತೀರಿಸಲು ಶಪಥಮಾಡಿದನು ಎಂದು ಮೇಲಿನ ಅಂಶವನ್ನು ತಿಳಿಸಿದೆ. ಇದೇ ಭಾಗಕ್ಕೆ ವ್ಯಾಖ್ಯಾಕರ್ತನಾದ ಕುಲ್ಲೂಕನು ಇವರ ವಿವರವನ್ನು ಹೇಳಿದ್ದಾನೆ. ಆದರೆ ಈ ವಿವರವು ಮೇಲೆ ತಿಳಿಸಿದ ವಿವರಣೆಗೆ ವ್ಯತ್ಯಸ್ತವಾಗಿದೆ.. ಹೇಗೆಂದರೆ—

**ವಸಿಷ್ಠೋಽಪ್ಯನೇನ ಪುತ್ರಶತಂ ಭಕ್ಷಿತಮಿತಿ ವಿಶ್ವಾಮಿತ್ರೇಣಾಕ್ರುಷ್ಟೋ ಸ್ವಪರಿಶುದ್ಧಯೇ ಸುದಾಮ್ನಿ ರಾಜನಿ ಶಪಥಂ ಚಕಾರ**

ತನ್ನ ನೂರು ಮಂದಿ ಮಕ್ಕಳ ಕೊಲೆಗೂ ವಸಿಷ್ಠನೇ ಕಾರಣನೆಂದು ವಿಶ್ವಾಮಿತ್ರನು ವಸಿಷ್ಠನ ಮೇಲೆ ಆಗ್ರಹವನ್ನು ತೋರಿಸಿದಾಗ ವಸಿಷ್ಠನು ತನ್ನ ಶುದ್ಧಿಗಾಗಿ ಸುದಾಸ (ಸುರಾಃ) ನಲ್ಲಿ ಎಂದರೆ ಅವನ ಮುಂದೆ ಶಪಥಮಾಡಿದನು ಎಂದಿರುತ್ತದೆ. ಇದು ವಸಿಷ್ಠ ಮತ್ತು ಸುದಾಸನಿಗಿರುವ ಮೈತ್ರಿಯನ್ನು ತೋರಿಸುವುದೇ ಹೊರತು ದ್ವೇಷವನ್ನು ತೋರಿಸುವುದಿಲ್ಲ. ಅಥವಾ **ಪೈಜವನೇ ನೃಪೇ ಶಪಥಂ ಶೇಪೇ** ಎಂಬ ವಾಕ್ಯಕ್ಕೂ ಸಹ ಪಿಜವನ ಪುತ್ರನಾದ ಸುದಾಸನ ಮುಂದೆ ಶಪಥಮಾಡಿದನು (ಆತ್ಮಶುದ್ಧಿಗಾಗಿ) ಎಂಬ ಅರ್ಥವನ್ನು ಹೇಳಬಹುದು. ಈ ಎಲ್ಲ ಅಂಶಗಳಿಂದಲೂ ಇವನ ಪೂರ್ಣವಾದ ಸಖ್ಯವು ವ್ಯಕ್ತಪಡುತ್ತದೆ. ಆದರೆ ಸೌದಾಸರಿಂದ ವಸಿಷ್ಠನೂ ಮತ್ತು ವಸಿಷ್ಠ ಪುತ್ರರೂ ಹಿಂಸಿತರಾಗಿ ವಸಿಷ್ಠನು ಕೊರತೆಗಳಲ್ಲಿ ಈ ದುಃಖವನ್ನು ಪ್ರಕಟಿಸಿ ವ್ಯಥೆಪಡುವುದೂ ಸಹ ಸ್ಪಷ್ಟವಾಗಿದೆ.

## ವಸಿಷ್ಠ ಮತ್ತು ವಿಶ್ವಾಮಿತ್ರ

ಸುದಾಸನಿಗೆ ಸಹಾಯ ಮಾಡಬೇಕೆಂದು ವಸಿಷ್ಠನು ಇಂದ್ರನನ್ನು ಪ್ರಾರ್ಥಿಸಿದಾಗ ಇಂದ್ರನ ಆದೇಶದ ಮೇರೆ ಪರುಷ್ಣೀನದಿಯ ಪ್ರವಾಹವು ಇಳಿದು ಸುದಾಸನ ಪ್ರಯಾಣಕ್ಕೆ ಅನುಕೂಲ ಮಾಡಿಕೊಟ್ಟಿತೆಂದು ಹೇಳಿದೆ. ಅದೇ ಸುದಾಸನ ಪ್ರಯಾಣಕಾಲದಲ್ಲಿ ಅಡ್ಡಲಾಗಿ ಪ್ರವಹಿಸುತ್ತಾ ಅವನಿಗೆ ವಿಘ್ನವನ್ನುಂಟುಮಾಡಿದ **ವಿಪಾಟ್** ಮತ್ತು **ಶುತುದ್ರೀ** ನದಿಗಳನ್ನು ವಿಶ್ವಾಮಿತ್ರನು ಪ್ರಾರ್ಥಿಸಿ ಅವುಗಳ ಪ್ರವಾಹಗಳು ಇಳಿಯುವಂತೆ ಮಾಡಿದನು. ಎಂದು ಇತಿಹಾಸವಿರುತ್ತದೆ. ಈ ಇತಿಹಾಸವನ್ನು ನಿರುಕ್ತಕಾರರು ಈ ರೀತಿ ತಿಳಿಸಿರುತ್ತಾರೆ.

**ತತ್ರೇತಿಹಾಸಮಾಚಕ್ಷತೇ । ವಿಶ್ವಾಮಿತ್ರಋಷಿಃ ಸುದಾಸಃ ಪೈಜವನಸ್ಯ ಪುರೋಹಿತೋ ಬಭೂವ।...........ಸ ವಿತ್ತಂ ಗೃಹೀತ್ವಾ ವಿಪಾಟ್ಛುತುದ್ರ್ಯೋಃ ಸಂಭೇದಮಾಯಯೌ । ಅನುಯಯುರಿತರೇ। ಸ ವಿಶ್ವಾಮಿತ್ರೋ ನದೀಸ್ತುಷ್ಟಾವ। ಗಾಥಾ ಭವತ ಇತಿ ।**
(ನಿ. ೨-೨೪)

ಈ ಸಂದರ್ಭದಲ್ಲಿ ಒಂದು ಇತಿಹಾಸವು ಆಖ್ಯಾತವಾಗಿರುತ್ತದೆ. ಪಿಜವನನ ಪುತ್ರನಾದ ಸುದಾಸನು ಒಂದು ಸಲ ವಿಪಾಟ್ ಮತ್ತು ಶುತುದ್ರೀ ನದಿಗಳ ಸಂಗಮಕ್ಕೆ ಬಂದು ಅವನು ದಾಟಲಾರದವನಾಗಿದ್ದನು. ಆಗ ಆ ಸುದಾಸನ ಪುರೋಹಿತನಾದ ವಿಶ್ವಾಮಿತ್ರನು ಸುದಾಸನಿಂದ ಅನೇಕ ವಿಧವಾದ ಧನಗಳನ್ನು ಪಡೆದ ಪ್ರತಿಫಲವಾಗಿ ಅವನಿಗೆ

ಸಹಾಯಮಾಡಲು ಆ ನದಿಗಳನ್ನು ಪ್ರಾರ್ಥಿಸಿ ಅವುಗಳ ಪ್ರವಾಹವು ದಾಟಲು ಅನುಕೂಲವಾಗುವಂತೆ ಮಾಡಿದನು ಎಂಬ ಸನ್ನಿವೇಶವು ಋಕ್ಸಂಹಿತೆಯ ೩ ನೇ ಮಂಡಲದ ೩೩ ನೇ ಸೂಕ್ತದಲ್ಲಿ ವಿಶ್ವಾಮಿತ್ರ ಮತ್ತು ನದಿಗಳ ಸಂಭಾಷಣೆಯು ವರ್ಣಿತವಾಗಿರುವ ಭಾಗದಿಂದ ಸೂಚಿತವಾಗುತ್ತದೆ.

ಹೀಗೆ ವಸಿಷ್ಠ ಮತ್ತು ವಿಶ್ವಾಮಿತ್ರ ಈ ಇಬ್ಬರೂ ಒಬ್ಬನೇ ರಾಜನಲ್ಲಿ ಪುರೋಹಿತರಾಗಿರುವಾಗ ಅವರವರಿಗೆ ಮೈತ್ರಿಯಿದ್ದಿತೇ ಅಥವಾ ದ್ವೇಷವಿದ್ದಿತೇ ಅಥವಾ ಅವರಿಬ್ಬರೂ ಬೇರೆ ಬೇರೆ ಕಾಲದಲ್ಲಿ ಈ ರಾಜನ ಪುರೋಹಿತರಾಗಿದ್ದರೇ ಎಂಬ ವಿಷಯವನ್ನು ಋಕ್ಸಂಹಿತೆಯ ಮೂರನೇ ಮಂಡಲದ ಪೂರ್ವಪೀಠಿಕೆಯಲ್ಲಿ ಚರ್ಚಿಸಿದೆ.

ಪುರಾಣಾದಿಗಳಲ್ಲಿ ವರ್ಣಿತವಾಗಿರುವಂತೆ ವಸಿಷ್ಠ ಮತ್ತು ವಿಶ್ವಾಮಿತ್ರರಿಗೆ ಸಾಕ್ಷಾತ್ತಾಗಿ ಸಂಭವಿಸಿದ ತೀವ್ರವಾದ ದ್ವೇಷವು ಋಕ್ಸಂಹಿತೆಯಲ್ಲಿ ಸ್ಪಷ್ಟವಾಗಿ ತಿಳಿಸಿಲ್ಲ. ಆದರೆ ಅನೇಕ ಸಂದರ್ಭಗಳು ಈ ಅಂಶವನ್ನು ಸಮರ್ಥಿಸಿವೆ. ಋಕ್ಸಂಹಿತೆಯಲ್ಲಿ ೧ ನೇ ಮಂಡಲದ ೧೧೨ ನೇ ಸೂಕ್ತದ ೯ ನೇ ಮಂತ್ರಕ್ಕೆ ಭಾಷ್ಯವನ್ನು ಬರೆಯುವಾಗ ವಸಿಷ್ಠ ಮತ್ತು ವಿಶ್ವಾಮಿತ್ರರಿಗಿದ್ದ ತೀವ್ರವಾದ ದ್ವೇಷವನ್ನು ತಿಳಿಸುವ ಕಥಾಸಂದರ್ಭವನ್ನು ಈ ರೀತಿ ವಿವರಿಸಿದ್ದಾರೆ. ಋಕ್ಸಂಹಿತೆಯಲ್ಲಿ,

**ಯಾಭಿಃ ಸಿಂಧುಂ ಮಧುಮಂತಮಸಶ್ಚತಂ ವಸಿಷ್ಠಂ ಯಾಭಿರಜರಾವಜಿನ್ವತಂ ।**
**ಯಾಭಿಃ ಕುತ್ಸಂ ಶ್ರುತರ್ಯಂ ನರ್ಯಮಾವತಂ ತಾಭಿರೂ ಷು ಊತಿಭಿರಶ್ವಿನಾ ಗತಂ ॥**
(ಋ. ಸಂ.೧-೧೧೨-೯)

ಕ್ಷಯರಹಿತರಾದ ಎಲೈ ಅಶ್ವಿನೀದೇವತೆಗಳೇ, ಯಾವ ನಿಮ್ಮ ರಕ್ಷಣೆಗಳಿಂದ ಅತ್ಯಂತ ಮಧುರವಾದ ಉದಕವುಳ್ಳ (ಸರಸ್ವತೀ) ನದಿಯನ್ನು ಪ್ರವಹಿಸುವಂತೆ ಮಾಡಿದಿರೋ, ಯಾವ ರಕ್ಷಣೆಗಳಿಂದ ವಸಿಷ್ಠನಿಗೆ ಮನಸ್ತೃಪ್ತಿಯನ್ನು ಒದಗಿಸಿದಿರೋ ಮತ್ತು ಯಾವ ರಕ್ಷಣೆಗಳಿಂದ ಕುತ್ಸಾದಿಗಳನ್ನು ರಕ್ಷಿಸಿದಿರೋ, ಆ ಎಲ್ಲಾ ರಕ್ಷಣೆಗಳಿಂದಲೂ ಕೂಡಿ ನಮ್ಮಲ್ಲಿಗೆ ಬನ್ನಿರಿ ಎಂದು ಪ್ರಾರ್ಥಿಸಿದೆ. ಅಶ್ವಿನೀದೇವತೆಗಳು ಸರಸ್ವತೀ ನದಿಯನ್ನು ಪ್ರವಹಿಸುವಂತೆ ಮಾಡಿದರು ಎಂದರೆ ಆ ಪ್ರವಾಹಕ್ಕೆ ಭಂಗಬಂದುದು ಯಾವಾಗ ಮತ್ತು ಹೇಗೆ ಎಂಬ ವಿಷಯವನ್ನು ಸ್ಕಂದಸ್ವಾಮಿಗಳು ಈ ರೀತಿ ತಿಳಿಸಿದ್ದಾರೆ.

**ಅತ್ರೇತಿಹಾಸಮಾಚಕ್ಷತೇ । ವಿಶ್ವಾಮಿತ್ರೋ ವಸಿಷ್ಠಂ ಜಿಘಾಂಸುಃ ಸರಸ್ವತೀಮಾಹೂಯೋವಾಚ । ಮತ್ಸಮೀಪಂ ವಸಿಷ್ಠಂ ಶೀಘ್ರಮಾನಯ ಇತಿ । ಸಾ ತಚ್ಛ್ರುತ್ವಾ ವಿಶ್ವಾಮಿತ್ರಾದಪಿ ವಸಿಷ್ಠಾದಪಿ ಶಾಪಾತ್ ಬಿಭ್ಯತೀ ಕಿಂಚಿದಪ್ಯಪ್ರತಿಪದ್ಯಮಾನಾ ಚಿಂತಾಕೃಶಾ ವಿವರ್ಣಾ ಬಭೂವ । ಅಥೈನಾಮೇವಂರೂಪಾಂ ಜ್ಞಾತ್ವಾ ಕೃಪಾಶೀಲತಯಾ ವಸಿಷ್ಠ ಉವಾಚ ।**

**ರಕ್ಷಾತ್ಮಾನಂ ಸರಿಚ್ಛ್ರೇಷ್ಠೇ ವಹ ಮಾಂ ಶೀಘ್ರಗಾಮಿನಿ ।**
**ವಿಶ್ವಾಮಿತ್ರಃ ಶಪೇದ್ಧಿ ತ್ವಾ ಮಾಕೃಥಾಸ್ತ್ವಂ ವಿಚಾರಣಾಂ ॥**

ವಿಶ್ವಾಮಿತ್ರನು ವಸಿಷ್ಠನ ಮೇಲಿನ ತೀವ್ರವಾದ ದ್ವೇಷದಿಂದ ಅವನನ್ನು ಕೊಲ್ಲಲಪೇಕ್ಷಿಸಿದನು. ಆಗ ಸರಸ್ವತೀನದಿಯನ್ನು ಬರಮಾಡಿಕೊಂಡು "ವಸಿಷ್ಠನನ್ನು ನನ್ನಲ್ಲಿಗೆ ಶೀಘ್ರವಾಗಿ ಕರೆದುಕೊಂಡು ಬಾ" ಎಂದು

ಆಜ್ಞಾಪಿಸಿದನು. ಆಗ ಸರಸ್ವತಿಗೆ ಸಂದಿಗ್ಧಾವಸ್ಥೆಯುಂಟಾಯಿತು. ವಿಶ್ವಾಮಿತ್ರನ ಆಜ್ಞೆಯನ್ನನುಸರಿಸಿ ವಸಿಷ್ಠನನ್ನು ಕರೆತಂದರೆ ಆಗ ವಸಿಷ್ಠನಿಗೆ ಕೋಪಬಂದು ಶಪಿಸುವನು ಎಂದು ಬೆದರಿ ಚಿಂತಾಕ್ರಾಂತಳಾದಳು. ಆಗ ಅವಳ ಯೋಚನೆಗೆ ಕಾರಣವನ್ನು ತಿಳಿದ ವಸಿಷ್ಠನು ಅವಳನ್ನು ಕುರಿತು "ಎಲೈ ಶ್ರೇಷ್ಠಳಾದ ಸರಸ್ವತಿಯೇ, ನನ್ನನ್ನು ವಿಶ್ವಾಮಿತ್ರನಲ್ಲಿಗೆ ಕರೆದುಕೊಂಡು ಹೋಗು, ಇಲ್ಲದಿದ್ದರೆ ನೀನು ಅವನ ಶಾಪಕ್ಕೆ ಪಾತ್ರಳಾಗುತ್ತೀಯೆ" ಎಂದು ದಯೆಯಿಂದ ಹೇಳಿದನು.

**ಅಥ ತಂ ಸ್ವಕೂಲೇ ಜಪಂತಂ ಸರಸ್ವತೀ ಮಹತಾ ಜಲೌಘೇನ ವಿಶ್ವಾಮಿತ್ರಾಶ್ರಮಂ ಪ್ರತ್ಯುವಾಹ । ಊಢ್ವಾ ಚ ವಿಶ್ವಾಮಿತ್ರಾಯ ನಿವೇದಯಾಮಾಸ ।**

ಆಗ ಸರಸ್ವತಿಯು ತನ್ನ ದಡದಲ್ಲಿ ಜಪವನ್ನು ಮಾಡುತ್ತಿದ್ದ ವಸಿಷ್ಠನನ್ನು ವಿಶ್ವಾಮಿತ್ರನಲ್ಲಿಗೆ ಕರೆದುಕೊಂಡು ಹೋಗಿ ತಾನು ವಸಿಷ್ಠನನ್ನು ವಿಶ್ವಾಮಿತ್ರನ ಆಜ್ಞೆಯಮೇರೆ ಕರೆದುಕೊಂಡು ಬಂದ ವಿಷಯವನ್ನು ಅವನಿಗೆ ತಿಳಿಸಿ ಆಜ್ಞೆಯನ್ನು ಪಾಲಿಸಿನಿಂತಳು.

**ನಿವೇದ್ಯ ಚ ಪ್ರಹರಣಾನ್ವೇಷಣವ್ಯಾಕುಲೇ ವಿಶ್ವಾಮಿತ್ರೇ ಕೃತಂ ಮಯಾ ಸ್ವಕಾರ್ಯಮಿತಿ ಮನ್ಯಮಾನಾ ಬ್ರಹ್ಮಹತ್ಯಾಭಯಾತ್ ಸರಸ್ವತೀ ವಸಿಷ್ಠಂ ತತೋ ದೂರಮಪೋಹ । ಅಥ ತತ್ ಜ್ಞಾತ್ವಾ ವಿಶ್ವಾಮಿತ್ರಃ ಕ್ರುದ್ಧಃ ಸರಸ್ವತೀಂ ಶಶಾಪ ॥**

ಆ ಸಮಾಚಾರವನ್ನು ತಿಳಿದೊಡನೆಯೇ ವಿಶ್ವಾಮಿತ್ರನು ವಸಿಷ್ಠನನ್ನು ಕೊಲ್ಲಲು ಅಣಿಮಾಡಿಕೊಂಡನು. ಆಗ ಪುನಃ ಸರಸ್ವತಿಯು ತನಗೆ ಬ್ರಹ್ಮಹತ್ಯಾದೋಷವು ಎಲ್ಲಿ ಬರುವುದೋ ಎಂದು ತಿಳಿದವಳಾಗಿ ಅಲ್ಲಿಂದ ಬಹು ದೂರಕ್ಕೆ ವಸಿಷ್ಠನನ್ನು ಕರೆದುಕೊಂಡು ಹೋಗಿ ವಿಶ್ವಾಮಿತ್ರನ ಏಟನಿಂದ ತಪ್ಪಿಸಿದಳು. ಆಗ ವಿಶ್ವಾಮಿತ್ರನು ಅವಳಿಗೆ ಅವಳ ಪ್ರವಾಹವೆಲ್ಲವೂ ರಕ್ತದಿಂದ ತುಂಬಲಿ ಎಂಬ ಶಾಪವನ್ನು ಕೊಟ್ಟನು ಎಂಬುದೇ ಕಥಾಸಂದರ್ಭ. ಅಶ್ವಿನೀ ದೇವತೆಗಳು ಅವಳನ್ನು ಆ ಶಾಪದಿಂದ ವಿಮುಕ್ತಳನ್ನಾಗಿ ಮಾಡಿದರು ಎಂದು ಉದಾಹೃತವಾಗಿರುವ ಮಂತ್ರದಲ್ಲಿ ಹೇಳಿದೆ. (ಅದರಂತೆಯೇ ಪುತ್ರಾರ್ಥಿಯಾದ ವಸಿಷ್ಠನಿಗೂ ಪುತ್ರನ್ನನುಗ್ರಹಿಸಿದರು ಎಂದೂ ತಿಳಿಸಿದೆ).

ಹೀಗೆ ವಸಿಷ್ಠವಿಶ್ವಾಮಿತ್ರರ ವೈಮನಸ್ಯವು ಭಾಷ್ಯಾದಿಗ್ರಂಥಗಳಲ್ಲಿ ಸ್ಪಷ್ಟವಾಗಿ ವರ್ಣಿತವಾಗಿರುವುದೇ ವಿನಹ ಸಂಹಿತೆಗಳಲ್ಲಿ ಕೇವಲ ಸೂಚಿತವಾಗಿರುತ್ತದೆ. ಬೃಹದ್ದೇವತಾವಾಕ್ಯಗಳು ಮಾತ್ರ ಈ ವಿಷಯವನ್ನು ನಿಷ್ಕೃಷ್ಟವಾಗಿ ತಿಳಿಸುತ್ತವೆ. ಋಕ್ಸಂಹಿತೆಯಲ್ಲಿ ೩-೫೩-೨೧ ರಿಂದ ೨೪ ನೇ ಮಂತ್ರಗಳು ವಸಿಷ್ಠನಿಗೂ ವಿಶ್ವಾಮಿತ್ರನಿಗೂ ಇರುವ ಪರಮದ್ವೇಷವನ್ನು ಸೂಚಿಸುವುದೆಂದು ತಿಳಿಸಿದೆ. ಈ ವಿಷಯವನ್ನು ತಿಳಿಸುವ ಬೃಹದ್ದೇವತಾವಾಕ್ಯಗಳು ಈ ರೀತಿಯಿರುತ್ತವೆ.

**ಪರಾಸ್ತ್ವತಸ್ರೋ ತಾಸ್ತ್ವತ್ರ ವಸಿಷ್ಠದ್ವೇಷಿಣ್ಯಃ ಸ್ಮೃತಾಃ ।**
**ವಿಶ್ವಾಮಿತ್ರೇಣ ತಾಃ ಪ್ರೋಕ್ತಾ ಅಭಿಶಾಪಾ ಇತಿ ಸ್ಮೃತಾಃ ॥**

(ಬೃ. ದೇ. ೪-೧೧೭)

ಮುಂದಿನ ನಾಲ್ಕು ಮಂತ್ರಗಳೂ ಎಂದರೆ ೩-೫೩-೨೧ ರಿಂದ ೨೪ ರ ವರೆಗೆ ವಸಿಷ್ಠನನ್ನು ದ್ವೇಷಿಸತಕ್ಕವೂ ಮತ್ತು ಆ ದ್ವೇಷವನ್ನು ಪ್ರಕಟಿಸತಕ್ಕವೂ ಆದ ಮಂತ್ರಗಳು ಎಂದು ಪ್ರಸಿದ್ಧವಾಗಿವೆ. ಈ ನಾಲ್ಕು ಮಂತ್ರಗಳೂ ಸಹ ವಸಿಷ್ಠನಿಗೆ ಶಾಪರೂಪದಲ್ಲಿರತಕ್ಕವು ಎಂದೂ ವಿಶದವಾಗಿದೆ.

**ದ್ವಿಷದ್ವೇಷಾಸ್ತು ತಾಃ ಪ್ರೋಕ್ತಾ ವಿದ್ಯಾಚ್ಚೈವಾಭಿಚಾರಿಕಾಃ ।**
**ವಸಿಷ್ಠಾಸ್ತಾ ನ ಶೃಣ್ವಂತಿ ತದಾಚಾರ್ಯಕಸಂಮತಂ ॥**
(ಬೃ. ದೇ. ೪-೧೧೮)

ತನ್ನನ್ನು ದ್ವೇಷಿಸುವ ಶತ್ರುವನ್ನು ಹಿಂಸಿಸುವ ಆಭಿಚಾರಕಮಂತ್ರಗಳೇ ಇವು ಎಂದು ತಿಳಿದಿರುವುದರಿಂದ ವಸಿಷ್ಠ ವಂಶೋತ್ಪನ್ನರು ಗುರುವಿನಿಂದ ಪಠಿತವಾದರೂ ಆ ಮಂತ್ರಗಳನ್ನು ಕಿವಿಯಿಂದ ಸಹ ಕೇಳುವುದಿಲ್ಲ. ಒಂದು ವೇಳೆ ಇದನ್ನು ಶ್ರವಣಮಾಡಿದ್ದೇ ಆದರೆ, ಎಂದರೆ

**ಕೀರ್ತನಾಚ್ಛ್ರವಣಾಚ್ಚಾಪಿ ಮಹದ್ದೋಷಶ್ಚ ಜಾಯತೇ ।**
**ಶತಧಾ ಬಿಧ್ಯತೇ ಮೂರ್ಧಾ ಕೀರ್ತನೇನ ಶ್ರುತೇನ ವಾ ।**
**ತೇಷಾಂ ಬಾಲಾಃ ಪ್ರಮೀಯಂತೇ ತಸ್ಮಾತ್ತಾಸ್ತು ನ ಕೀರ್ತಯೇತ್ ॥**
(ಬೃ. ದೇ. ೪-೧೧೯)

ಈ ವಸಿಷ್ಠವಿದ್ವೇಷಿಣಿಗಳೆಂದು ಪ್ರಸಿದ್ಧವಾಗಿರುವ ಈ ಮಂತ್ರಗಳನ್ನು ಪಠಿಸುವುದರಿಂದಾಗಲಿ ಅಥವಾ ಅವುಗಳ ಪಠನವನ್ನು ಕೇಳುವುದರಿಂದಲಾಗಲಿ ಮಹತ್ಪಾಪವು ಸಂಭವಿಸುತ್ತದೆ. ಅಥವಾ ಅದನ್ನು ಕೀರ್ತನಮಾಡುವುದರಿಂದಾಗಲಿ ಅಥವಾ ಶ್ರವಣಮಾಡುವುದರಿಂದಾಗಲಿ, ಅಂತಹವರ ತಲೆಯೇ ಸಿಡಿದು ಬೀಳುತ್ತದೆ. ಅಂತಹವರು ಪುತ್ರಾದಿಗಳನ್ನು ಕಳೆದುಕೊಳ್ಳುವರು. ಆದುದರಿಂದ ಅವನ್ನು ಪಠಿಸಬಾರದು, ಕೇಳಲೂಬಾರದು ಇತ್ಯಾದಿಯಾಗಿ ತಿಳಿಸಿದೆ. ಆ ಮಂತ್ರಗಳ ತಾತ್ಪರ್ಯವೇನೆಂದರೆ—

**ಇಂದ್ರೋತಿಭಿರ್ಬಹುಲಾಭಿರ್ನೋ ಅದ್ಯ ಯಾಚ್ಛ್ರೇಷ್ಠಾಭಿರ್ಮಘವಞ್ಛೂರ ಜಿನ್ವ ।**
**ಯೋ ನೋ ದ್ವೇಷ್ಟ್ಯಧರಃ ಸಸ್ಪದೀಷ್ಟ ಯಮು ದ್ವಿಷ್ಮಸ್ತಮು ಪ್ರಾಣೋ ಜಹಾತು ॥**
(ಋ. ಸಂ. ೩-೫೩-೨೧)

ಎಲೈ ಇಂದ್ರನೇ, ಈ ಕಾಲದಲ್ಲಿ ನಮ್ಮನ್ನು ನಿನ್ನ ಸಕಲವಿಧವಾದ ರಕ್ಷಣೆಗಳಿಂದಲೂ ರಕ್ಷಿಸಿ ತೃಪ್ತಿಗೊಳಿಸು. ನಮ್ಮನ್ನು ದ್ವೇಷಿಸುವ ಶತ್ರುವು ಕೆಳಕ್ಕೆ ಬೀಳಲಿ, ಅಂತಹ ಶತ್ರುವನ್ನು ಅವನ ದೇಹಾಂತರ್ವರ್ತಿಗಳಾದ ಪ್ರಾಣವಾಯುಗಳು ಪರಿತ್ಯಜಿಸಲಿ ಎಂದರೆ ಅವನು ನಾಶವಾಗಲಿ.

**ಪರಶುಂ ಚಿದ್ವಿ ತಪತಿ ಶಿಂಬಲಂ ಚಿದ್ವಿ ವೃಶ್ಚತಿ ।**
**ಉಖಾ ಚಿದಿಂದ್ರ ಯೇಷಂತೀ ಪ್ರಯಸ್ತಾ ಫೇನಮಸ್ಯತಿ ॥**
(ಋ. ಸಂ. ೩-೫೩-೨೨)

ಎಲೈ ಇಂದ್ರನೇ, ಕೊಡಲಿಯ ಏಟಿನಿಂದ ವೃಕ್ಷವು ಕೆಳಕ್ಕುರುವಂತೆ ನನ್ನ ಶತ್ರುವು ಕೆಳಕ್ಕುರುಳಿ ಬೀಳಲಿ. ಶಾಲ್ಮಲೀ ಪುಷ್ಪವು ಎಷ್ಟು ಸುಲಭವಾಗಿ ಕೆಳಕ್ಕೆ ಉದುರಿಬೀಳುವುದೋ ಅದರಂತೆಯೇ ನನ್ನ ಶತ್ರುವು ಬೀಳಲಿ. ಅವನ ದೇಹವು ಚೂರ್ಣವಾಗಲಿ. ಮತ್ತು ಮಂತ್ರಸಾಮರ್ಥ್ಯದಿಂದ ನನ್ನ ಶತ್ರುವು ಬಾಯಿನಿಂದ ಜೊಲ್ಲನ್ನು ಸುರಿಸುತ್ತಾ ಮೃತಿಯನ್ನು ಹೊಂದಲಿ.

**ನ ಸಾಯಕಸ್ಯ ಚಿಕಿತೇ ಜನಾಸೋ ಲೋಧಂ ನಯಂತಿ ಪಶು ಮನ್ಯಮಾನಾಃ ।**
**ನಾವಾಜಿನಂ ವಾಜಿನಾ ಹಾಸಯಂತಿ ನ ಗರ್ದಭಂ ಪುರೋ ಅಶ್ವಾನ್ನಯಂತಿ ॥**

(ಋ. ಸಂ. ೩-೫೩-೨೩)

ಹಿಂದೆ ತಪಸ್ಸಿಗೆ ಭಂಗವುಂಟಾಗಬಹುದೆಂಬ ಭೀತಿಯಿಂದ ಮೌನವನ್ನು ಆಶ್ರಯಿಸಿದ್ದ ನನ್ನನ್ನು (ವಿಶ್ವಾಮಿತ್ರನನ್ನು) ವಸಿಷ್ಠನು ಪಶುವಿನಂತೆ ಎಳೆದುಕೊಂಡು ಬಂದು ತಂದಾಗ ಅವನು ನನ್ನ ಮಂತ್ರದ ಪ್ರಭಾವವನ್ನು ಅರಿಯಲಾಗಲಿಲ್ಲ. ಆದರೆ ನಾನೂ ಸಹ ಅವನಿಗೆ ಎದುರು ಬೀಳಲಿಲ್ಲ. ಶ್ರೇಷ್ಠವಾದ ಅಶ್ವಗಳು ಗರ್ದಭಗಳನ್ನು ತಿರಸ್ಕರಿಸಿ ಕಾಣುವಂತೆ ನಾನೂ ಸಹ ಅವನೊಂದಿಗೆ ಸ್ಪರ್ಧಿಸಲಿಷ್ಟಪಡಲಿಲ್ಲ.

**ಇಮ ಇಂದ್ರ ಭರತಸ್ಯ ಪುತ್ರಾ ಅಪಪಿತ್ವಂ ಚಿಕಿತುರ್ನ ಪ್ರಪಿತ್ವಂ ।**
**ಹಿನ್ವಂತ್ಯಶ್ವಮರಣಂ ನ ನಿತ್ಯಂ ಜ್ಯಾವಾಜಂ ಪರಿ ಣಯಂತ್ಯಾಜೌ ॥**

(ಋ. ಸಂ. ೩-೫೩-೨೪)

ಎಲೈ ಇಂದ್ರನೇ, ಭರತವಂಶೀಯರೂ ವಿಶ್ವಾಮಿತ್ರಸಂಜ್ಞಕರೂ ಆದ ನಾವು ವಸಿಷ್ಠರೊಂದಿಗೆ ಬೇರೆಯಾಗುವುದನ್ನು ನಿರೀಕ್ಷಿಸುವೆವೇ ಹೊರತು ಅವರೊಡನೆ ಸಂಗಮವನ್ನು ಖಂಡಿತ ಇಚ್ಛಿಸುವುದಿಲ್ಲ. ಸಂಗ್ರಾಮಗಳಲ್ಲಿ ಅವರನ್ನು ನಾಶಪಡಿಸಲು ನಮ್ಮ ಆಯುಧಗಳು ಸರ್ವದಾ ಕಾತುರವುಳ್ಳವಾಗಿವೆ.

ಹೀಗೆ ದ್ವೇಷವನ್ನು ಪ್ರಕಟಿಸುವ ಈ ಮಂತ್ರಗಳೇ ವಸಿಷ್ಠವಿದ್ವೇಷಿಣಿಗಳೆಂದು ನಿರ್ದಿಷ್ಟವಾಗಿವೆ. ಈ ಮಂತ್ರಗಳಿಗೆ ನಿರುಕ್ತಕ್ಕೆ ವ್ಯಾಖ್ಯಾಕರ್ತರಾದ ದುರ್ಗಾಚಾರ್ಯರು ಟೀಕೆಯನ್ನು ಬರೆಯಲು ನಿರಾಕರಿಸಿದ್ದಾರೆ. ತಾನು ವಸಿಷ್ಠ ಗೋತ್ರೋತ್ಪನ್ನನೆಂದೂ, ಇವಕ್ಕೆ ಟೀಕೆಯೂ ಅನುಚಿತವೆಂದೂ ತಿಳಿಸಿದ್ದಾರೆ.

**ಯಸ್ಮಿನ್ನಿಗಮೇ ಏಷ ಶಬ್ದಃ ಸಾ ವಸಿಷ್ಠದ್ವೇಷಿಣೀ ಋಕ್। ಅಹಂ ಚ ಕಾಪಿಷ್ಠಲೋ ವಾಸಿಷ್ಠಃ। ಅತಸ್ತಾನ್ನ ನಿಬ್ರ್ರವೀಮಿ ॥**

ಈ ಪದದ ಪ್ರಯೋಗವಿರುವ ಮಂತ್ರವು ವಸಿಷ್ಠವಿದ್ವೇಷಿಗಳೆಂಬ ಮಂತ್ರಗಳಲ್ಲಿ ಸೇರಿದೆ. ನಾನಾದರೋ ಕಾಪಿಷ್ಠಲವಂಶಕ್ಕೆ ಸೇರಿದವನು. ಅದೂ ವಾಸಿಷ್ಠ ಗೋತ್ರವೇ ಆಗಿದೆ. ಆದುದರಿಂದ ನಾನು ಇದಕ್ಕೆ ವಿವರಣೆಯನ್ನು ಹೇಳುವುದಿಲ್ಲ. ಎಂದು ತಿಳಿಸಿದ್ದಾರೆ.

ಋಕ್ಸಂಹಿತೆಯ ೭ ನೇ ಮಂಡಲದ ೧೦೪ನೇ ಸೂಕ್ತದ ವಿವರಣೆಯೂ ಸಹ ವಸಿಷ್ಠ ಮತ್ತು ವಿಶ್ವಾಮಿತ್ರರ ವೈಮನಸ್ಯವನ್ನು ತಿಳಿಸುವುದಾಗಿದೆ ಎಂದು ಕೆಲವು ಪಂಡಿತರ ಮತವಾಗಿದೆ. ಪರಮದ್ವೇಷಿಯಾದ ವಿಶ್ವಾಮಿತ್ರನೇ '**ಯಾತುಧಾನ**' ನೆಂದು ನಿರ್ದಿಷ್ಟನಾಗಿದ್ದಾನೆಂದೂ ಅವರು ಅಭಿಪ್ರಾಯಪಡುತ್ತಾರೆ.

"The Verses may, as Professor Max-Muller supposes, have arisen out of Vasistas' Contest with Viswamitra and it may have been the latter Personage who brought these charges of heresay and of murderous and demoniacal Character against his rival'

(Muir. Original Sanskrir Texts, Vol. I. P. 327-28.)

ಮ್ಯಾಕ್ಸ್‌ಮುಲ್ಲರ್ ಎಂಬ ಪಂಡಿತನು ಮೇಲೆ ತಿಳಿಸಿರುವ ಪ್ರಕಾರ ಈ ಸಂದರ್ಭವು ವಸಿಷ್ಠವಿಶ್ವಾಮಿತ್ರರ ದ್ವೇಷವನ್ನು ತಿಳಿಸುತ್ತದೆಂಬ ಅಭಿಪ್ರಾಯವನ್ನು ಸೂಚಿಸಿದ್ದಾನೆ. ಆ ಅಭಿಪ್ರಾಯವೇ ಸರಿಯಾಗಿರುವುದೆಂದು Muir ಎಂಬ ಪಂಡಿತನೂ ಉದಾಹೃತವಾಗಿರುವ ಈ ವಾಕ್ಯಗಳಲ್ಲಿ ಸ್ಪಷ್ಟಪಡಿಸಿದ್ದಾನೆ. ಆದರೆ ಸಾಯಣರಾಗಲಿ ಬೃಹದ್ದೇವತಾಕಾರರಾಗಲಿ ಈ ಅಭಿಪ್ರಾಯವನ್ನು ತಿಳಿಸಿಲ್ಲ. "ತನ್ನ ಶತಪುತ್ರರು ಹತರಾದಾಗ ವಸಿಷ್ಠನು ಇಂದ್ರಾದಿದೇವತೆಗಳನ್ನು ಪ್ರಾರ್ಥಿಸಿ ಆ ಶತಪುತ್ರರ ಮರಣಕ್ಕೆ ಕಾರಣನಾದ ಯಾತುಧಾನನು ಮೃತಿಯನ್ನು ಹೊಂದಲಿ" ಎಂದು ಶಪಿಸಿದೆಯೆಂದು ಮಾತ್ರ ತಿಳಿಸಿದ್ದಾರೆ.

ಮಹಾಭಾರತದ ವಿವರಣೆಯಿಂದ, ಈ ಶತಪುತ್ರರೂ ವಿಶ್ವಾಮಿತ್ರನಿಂದಲೇ ಹತರಾದರೆಂದೂ, ಆ ಕಾಲದಲ್ಲಿ ವಸಿಷ್ಠನು ದುಃಖಿತನಾದುದೂ ತಿಳಿಯುತ್ತದೆ ಆದರೆ, ತನ್ನ ದುಃಖವನ್ನು ಅಡಗಿಸಿಕೊಂಡನೇ ವಿನಹ, ವಿಶ್ವಾಮಿತ್ರನನ್ನು ಶಪಿಸಲಿಲ್ಲವೆಂದೂ ತಿಳಿಸಿದೆ. ಪ್ರಕೃತಸಂದರ್ಭಕ್ಕೆ ಉಪಯುಕ್ತವಾದಷ್ಟು ಮಾತ್ರ ಆ ಕಥಾಸಂದರ್ಭವನ್ನು ಇಲ್ಲಿ ತಿಳಿಸಲಾಗುತ್ತದೆ.

**ಇಂದ್ರಿಯಾಣಾಂ ವಶಕರೋ ವಸಿಷ್ಠ ಇತಿ ಚೋಚ್ಯತೇ ।**
**ಯಸ್ತು ನೋಚ್ಛೇದನಂ ಚಕ್ರೇ ಕುಶಿಕಾನಾಮುದಾರಧೀಃ ॥**
**ವಿಶ್ವಾಮಿತ್ರಾಪರಾಧೇನ ಧಾರಯನ್ಮನ್ಯುಮುತ್ತಮಂ ।**
**ಪುತ್ರವ್ಯಸನಸಂತಪ್ತಃ ಶಕ್ತಿಮಾನಪ್ಯಶಕ್ತವತ್ ॥**
**ವಿಶ್ವಾಮಿತ್ರವಿನಾಶಾಯ ನ ಚಕ್ರೇ ಕರ್ಮ ದಾರುಣಂ ।**
**ಮೃತಾಂಶ್ಚ ಪುನರಾಹರ್ತುಂ ಶಕ್ತಃ ಪುತ್ರಾನ್ಯಮಕ್ಷಯಾತ್ ॥**
**ಯಂ ಪ್ರಾಪ್ಯ ವಿಜಿತಾತ್ಮಾನಂ ಮಹಾತ್ಮಾನಂ ನರಾಧಿಪಾಃ ।**
**ಇಕ್ಷ್ವಾಕವೋ ಮಹೀಪಾಲಾ ಲೇಭಿರೇ ಪೃಥಿವೀಮಿಮಾಂ ॥**

(ಮ. ಭಾ. ಆ. ಪ. ೧೯೦-೬ ರಿಂದ ೧೦)

ಇಂದ್ರಿಯಗಳನ್ನು ಪೂರ್ಣವಾಗಿ ತನ್ನ ವಶದಲ್ಲಿಟ್ಟುಕೊಂಡ ಈ ಮಹರ್ಷಿಗೆ **'ವಸಿಷ್ಠ'** ಎಂಬ ಹೆಸರು ಪ್ರಸಿದ್ಧವಾಯಿತು. ಇವನು ಕುಶಿಕವಂಶದವರ ನಾಶಕ್ಕೆ ಪ್ರಯತ್ನಿಸಲಿಲ್ಲ. ಕುಶಿಕವಂಶೋತ್ಪನ್ನನಾದ ವಿಶ್ವಾಮಿತ್ರನು ಇವನಿಗೆ ಕೇಡನ್ನು ಬಗೆದರೂ ಇವನು ತನ್ನ ಕೋಪವನ್ನು ತಡೆದು ಅವನ ನಾಶಕ್ಕೆ ಶಕ್ತನಾಗಿದ್ದರೂ ಸಹ ತಾನು ಅಶಕ್ತನಂತೆಯೇ ನಟಿಸಿ ವಿಶ್ವಾಮಿತ್ರನ ಕುಲಕ್ಷಯವನ್ನುಂಟುಮಾಡುವ ದಾರುಣಕರ್ಮವನ್ನು ಮಾಡಲಿಲ್ಲ. ಆದರೆ, ಅವನಿಂದ ಹತರಾದ ತನ್ನ ಪುತ್ರರನ್ನು ಬೇರೆ ಉಪಾಯದಿಂದ ಯಮನ ಗೃಹದಿಂದ ಬರಮಾಡಿಕೊಳ್ಳಲು ಶಕ್ತನಾಗಿದ್ದನು. ಇಂತಹ ಜಿತಾತ್ಮನೂ, ಮಹಾತ್ಮನೂ ಆದ ಮಹರ್ಷಿಯನ್ನು ಪುರೋಹಿತನನ್ನಾಗಿ ಹೊಂದಿ ಇಕ್ಷ್ವಾಕುವಂಶದ ರಾಜರೆಲ್ಲರೂ ಪೂರ್ಣಪೃಥ್ವೀಪಾಲಕರಾಗಿ ಜಯವನ್ನು ಗಳಿಸಿದರು ಎಂದು ತಿಳಿಸಿದೆ.

ಈ ಎಲ್ಲಾ ಆಧಾರಗಳಿಂದಲೂ ವಸಿಷ್ಠ ಮತ್ತು ವಿಶ್ವಾಮಿತ್ರರ ವೈಮನಸ್ಯವು ಆದಿಯಿಂದಲೂ ಇದ್ದಿತೆಂದು ತಿಳಿದುಬರುತ್ತದೆ. ಆದರೆ, ಪ್ರಾರಂಭದಲ್ಲಿ ಇವರಿಗಿದ್ದ ಮೈತ್ರಿಯು ಯಾವುದೋ ಕಾರಣಕ್ಕಾಗಿ ನಾಶವಾಯಿತು ಎಂದು ರಾಮಾಯಣದ ಕಥಾ ಸಂದರ್ಭವು ತಿಳಿಸುತ್ತವೆ. ಪ್ರಕೃತದಲ್ಲಿ ಆ ವಿವರಣವು ಅವಶ್ಯವಿದ್ದರೂ ಗ್ರಂಥವಿಸ್ತಾರಕ್ಕೆ

ಅವಕಾಶವಿಲ್ಲದಿರುವುದರಿಂದ ಅದನ್ನು ತಿಳಿಸಲಾಗುವುದಿಲ್ಲ. ಹಿಂದೆ ವಿಶ್ವಾಮಿತ್ರರ ವಿಷಯವನ್ನು ತಿಳಿಸುವಾಗ ಈ ಅಂಶವನ್ನು ಸೂಕ್ಷ್ಮವಾಗಿ ತಿಳಿಸಿದೆ.

ಹೀಗೆ ವಸಿಷ್ಠನ ಅಸಾಧಾರಣವಾದ ಶಕ್ತಿಯು ಅನೇಕ ಕಡೆಗಳಲ್ಲಿ ಪ್ರಶಂಸಿತವಾಗಿದೆ. ಋಷಿಗಳಲ್ಲೆಲ್ಲಾ ಅತ್ಯಂತ ಶ್ರೇಷ್ಠನಾದ ಋಷಿಯೆಂದು ವೇದವಾಕ್ಯಗಳೇ ತಿಳಿಸುತ್ತವೆ. ಇತರ ಋಷಿಗಳಿಗೆ ಸಾಧ್ಯವಿಲ್ಲದ ಮಹತ್ತತ್ತ್ವದ ಸಾಕ್ಷಾತ್ಕಾರವು ಅವನೊಬ್ಬನಿಗೆ ಮಾತ್ರ ಸಾಧ್ಯವಾಯಿತು ಎಂದು ಬ್ರಾಹ್ಮಣಾದಿಗಳು ಪ್ರಶಂಸಿಸಿವೆ. ಮೇಲೆ ಉದಾಹರಿಸಿರುವ ಸಂಹಿತಾವಾಕ್ಯಗಳ ಆಧಾರದ ಮೇಲೆ, ಈ ದಿವ್ಯ ಪ್ರಭಾಯುತನಾದ ವಸಿಷ್ಠನು ಪೃಥಿವ್ಯಾದಿ ಲೋಕಗಳಲ್ಲೆಲ್ಲಾ ವ್ಯಾಪ್ತಿಯನ್ನು ಹೊಂದಿರುವ ಅಗ್ನಿಯ ವಿಭೂತಿವಿಶೇಷವೆಂದೇ ತಿಳಿಯಬೇಕು.

ಇಂತಹ ಮಾಹಾತ್ಮ್ಯವುಳ್ಳ ವಸಿಷ್ಠನ ಉತ್ಪತ್ತಿವಿಷಯವಾದ ಐತಿಹ್ಯವು ಪುರಾಣಾದಿಗಳಲ್ಲಿ ಅತ್ಯಂತ ಪ್ರಸಿದ್ಧವಾಗಿದೆ. ಪ್ರಕೃತದಲ್ಲಿ ಪುರಾಣಾದಿಗಳಲ್ಲಿ ವರ್ಣಿತವಾಗಿರುವಂತೆ ವಸಿಷ್ಠನ ಮಾಹಾತ್ಮ್ಯವರ್ಣನವನ್ನು ತಿಳಿಸುವುದು ಅನವಶ್ಯವಾಗಿರುತ್ತದೆ. ಕೇವಲ ವೈದಿಕಸಂಪ್ರದಾಯದಲ್ಲಿ ಯಾವ ಗುಣಾತಿಶಯಗಳು ವರ್ಣಿತವಾಗಿರುವವೋ ಅಂತಹ ಗುಣಾತಿಶಯಗಳನ್ನು ತಿಳಿಸುವ ಒಂದೆರಡು ಸಂದರ್ಭಗಳನ್ನು ಮಾತ್ರ ತಿಳಿಸಲಾಗುತ್ತದೆ.

ಸ್ವಾಯಂಭುವಮನುವಿನಿಂದ ಸೃಷ್ಟರಾದ ಹತ್ತು ಜನ ಮಹರ್ಷಿಗಳಲ್ಲಿ ವಸಿಷ್ಠನೂ ಒಬ್ಬನು ಎಂದು ಮನುಸ್ಮೃತಿಯು ತಿಳಿಸುತ್ತದೆ. **"ಪ್ರಚೇತಸಂ ವಸಿಷ್ಠಂ ಚ"** (ಮನು ೧-೩೫). ಬ್ರಹ್ಮನ ಮಾನಸಪುತ್ರರಾದ ಭೃಗ್ವಾದಿ ಒಂಭತ್ತು ಋಷಿಗಳಲ್ಲಿ ವಸಿಷ್ಠನೂ ಒಬ್ಬನೆಂದು ವಿಷ್ಣುಪುರಾಣದ ವಿವರಣೆಯಿದೆ (ವಿ. ಪು. ೧-೭-೫). ಆದರೆ ಅದೇ ಪುರಾಣದಲ್ಲಿ (೩-೧-೧೪) ವೈವಸ್ವತಮನ್ವಂತರದ ಸಪ್ತರ್ಷಿಗಳಲ್ಲಿ ವಸಿಷ್ಠನೂ ಒಬ್ಬನೆಂದು ತಿಳಿಸುತ್ತದೆ. ಮತ್ತು—

**ಊರ್ಜಾಯಾಂ ಚ ವಸಿಷ್ಠಸ್ಯ ಸಪ್ತಾಜಾಯಂತ ವೈ ಸುತಾಃ ।**
**ರಜೋ ಗಾತ್ರೋರ್ಧ್ವಬಾಹುಶ್ಚ ಸವನಶ್ಚಾನಘಸ್ತಥಾ ॥**
**ಸುತಪಾಃ ಶುಕ್ರ ಇತ್ಯೇತೇ ಸರ್ವೇ ಸಪ್ತರ್ಷಯೋಽಮಲಾಃ ।**

(ಬೃ. ದೇ. ೧-೧೦)

ಊರ್ಜಾ ಎಂಬ ಪತ್ನಿಯಲ್ಲಿ ವಸಿಷ್ಠನಿಗೆ, ರಜಃ, ಗಾತ್ರ, ಊರ್ಧ್ವಬಾಹು, ಸವನ, ಅನಘ, ಸುತಪಾಃ ಮತ್ತು ಶುಕ್ರಃ ಎಂಬ ಏಳು ಪುತ್ರರಾದರೆಂದು ಅದೇ ವಿಷ್ಣುಪುರಾಣವು ತಿಳಿಸುತ್ತದೆ. ವಸಿಷ್ಠನ ಪುತ್ರರಾದುದರಿಂದ ಅವರೆಲ್ಲರೂ ಅತ್ಯಂತ ಪರಿಶುದ್ಧರಾದ ಋಷಿಗಳೆಂದೂ ಆನುಷಂಗಿಕವಾಗಿ ವಸಿಷ್ಠನ ಪ್ರಶಂಸೆಯನ್ನೇ ಮಾಡಿದೆ. ಒಟ್ಟಿನಲ್ಲಿ ಮಾನವ ರೂಪವನ್ನು ಧರಿಸಿ ಪೃಥ್ವಿಯಲ್ಲಿ ಉತ್ಪನ್ನನಾಗಿದ್ದರೂ ಸಹ ವಸಿಷ್ಠನು ದಿವ್ಯಸ್ವರೂಪ ಮತ್ತು ದಿವ್ಯತೇಜಸ್ಸನ್ನು ಹೊಂದಿ ದಿವ್ಯಜ್ಞಾನವನ್ನು ಪ್ರಸರಿಸಿದ ಮಹಾಮುನಿಯೆಂದು ವರ್ಣಿಸಿದೆ.

ಈ ವೈವಸ್ವತಮನ್ವಂತರದಲ್ಲಿ ವೇದವಿಭಾಗವು ೨೮ ಸಲ ನಡೆದಿದೆಯೆಂದೂ ಈ ವಿಭಾಗಗಳು ಪ್ರಾಯಃ ದ್ವಾಪರಯುಗದಲ್ಲಿಯೇ ನಡೆದಿವೆಯೆಂದೂ ವಿಷ್ಣುಪುರಾಣವು ತಿಳಿಸುತ್ತದೆ.

ದ್ವಾಪರೇ ಪ್ರಥಮೇ ವ್ಯಸ್ತಾಸ್ಸ್ವಯಂ ವೇದಾಸ್ಸ್ವಯಂಭುವಾ ।
.... .... .... .... .... .... .... ।
.... .... ... .... .... **ವಸಿಷ್ಠಸ್ತ್ವಷ್ಟಮೋ ಸ್ಮೃತಃ ॥**

(ವಿ. ಪು. ೩-೩-೯-೧೧)

ಪ್ರಥಮದ್ವಾಪರದಲ್ಲಿ ಸ್ವಯಂಭುವಿನಿಂದಲೂ, ಆರನೆಯದರಲ್ಲಿ ಮೃತ್ಯು (ಯಮ) ವಿನಿಂದಲೂ, ಎಂಟನೆಯದರಲ್ಲಿ ವಸಿಷ್ಠನಿಂದಲೂ ವೇದವಿಭಾಗವಾಯಿತೆಂದೂ ತಿಳಿಸಿದೆ.

ಪೀಠಿಕೆ ಸಮಾಪ್ತವು.

# ಏಳನೆಯ ಮಂಡಲದಲ್ಲಿ
# ಮೊದಲನೆಯ ಸೂಕ್ತವು

॥ ಸಾಯಣಭಾಷ್ಯಂ ॥

**ಅಥ ಸಪ್ತಮಂ** ಮಂಡಲಮಾರಭ್ಯತೇ । ತಸ್ಮಿನ್ಮಂಡಲೇ ಷಡನುವಾಕಾಃ । ಪ್ರಥಮೇಽನುವಾಕೇ ಸಪ್ತದಶ ಸೂಕ್ತಾನಿ । ತತ್ರಾಗ್ನಿಂ ನರ ಇತಿ ಪಂಚವಿಂಶತ್ಯೃಚಂ ಪ್ರಥಮಂ ಸೂಕ್ತಂ । ಅತ್ರೇಯಮನುಕ್ರಮಣಿಕಾ । ಅಗ್ನಿಂ ಪಂಚಾಧಿಕಾ ವಿರಾಜೋಽಷ್ಟಾದಶಾದ್ಯಾ ಇತಿ । ಸಪ್ತಮಂ ಮಂಡಲಂ ವಸಿಷ್ಠೋಽಪಶ್ಯದಿತ್ಯುಕ್ತತ್ವಾನ್ಮಂಡಲದ್ರಷ್ಟಾ ವಸಿಷ್ಠ ಋಷಿಃ । ಆದಿತೋಽಷ್ಟಾದಶ ವಿರಾಜಸ್ತ್ರ್ಯೇಕಾದಶಕಾಃ ಶಿಷ್ಟಾ ಅನಾದೇಶಪರಿಭಾಷಯಾ ತ್ರಿಷ್ಟುಭಃ । ಮಂಡಲಾದಿಪರಿಭಾಷಯಾಗ್ನಿರ್ದೇವತಾ ॥ ವಿಶ್ವಜಿತೀದಂ ಸೂಕ್ತಮಾಜ್ಯಶಸ್ತ್ರಂ । ಸೂತ್ರಿತಂ ಚ । ವಿಶ್ವಜಿತೋಽಗ್ನಿಂ ನರ ಇತ್ಯಾಜ್ಯಂ । ಆ. ೮-೭ । ಇತಿ ॥ ಅತ್ರೇಶ್ಚತುರ್ವೀರಾಖ್ಯೇ ಚತೂರಾತ್ರೇ ಚತುರ್ಥೇಽಹನೀದಮೇವ ಸೂಕ್ತಮಾಜ್ಯಶಸ್ತ್ರಂ । ಸೂತ್ರ್ಯತೇ ಹಿ । ಅಗ್ನಿಂ ನರ ಇತಿ ಚತುರ್ಥೇ । ಆ. ೧೦-೨ । ಇತಿ ॥ ವ್ಯೂಳ್ಹೇ ದಶರಾತ್ರೇ ಚತುರ್ಥೇಽಹನೀದಂ ಸೂಕ್ತಂ ಜಾತವೇದಸ್ಯನಿವಿದ್ಧಾನಂ । ಸೂತ್ರಿತಂ ಚ । ಅಗ್ನಿಂ ನರ ಇತ್ಯಾಗ್ನಿಮಾರುತಂ । ಆ. ೮-೮ । ಇತಿ ॥ ಮಹಾವ್ರತೇಽಪೀದಮಾಜ್ಯಶಸ್ತ್ರಂ । ತಥೈವ ಪಂಚಮಾರಣ್ಯಕೇ ಸೂತ್ರ್ಯತೇ । ಆಜ್ಯಪ್ರಉಗೇ ವಿಶ್ವಜಿತಃ । ಐ. ಆ. ೫-೧-೧ । ಇತಿ ॥ ಅವಿವಾಕ್ಯೇಽಹನಿ ಪ್ರಾತರನುವಾಕೇ ತ್ವಮಗ್ನೇ ವಸೂನಿತ್ಯಾದೀನಾಮನುಷ್ಟುಭಾಂ ಸ್ಥಾನ ಆದ್ಯಸ್ತ್ರ್ಯೃಚಃ ಪ್ರಕ್ಷೇಪಣೀಯಃ । ಸೂತ್ರ್ಯತೇ ಹಿ । ದಶಮೇಽಹನ್ಯನುಷ್ಟುಭಾಂ ಸ್ಥಾನೇಽಗ್ನಿಂ ನರೋ ದೀಧಿತಿಭಿರರಣ್ಯೋರಿತಿ ತೃಚಮಾಗ್ನೇಯೇ ಕ್ರತೌ । ಆ. ೮-೧೨ । ಇತಿ ॥ ಆದ್ಯಃ ಷಡೃಚಸ್ತಸ್ಮಿನ್ನೇವಾಹನ್ಯಾಗ್ನಿಮಾರುತೇ ಶಸ್ತ್ರೇ ಸ್ತೋತ್ರಿಯಾನುರೂಪಾರ್ಥಃ । ಸೂತ್ರಿತಂ ಚ । ಅಗ್ನಿಂ ನರೋ ದೀಧಿತಿಭಿರರಣ್ಯೋರಿತಿ ಸ್ತೋತ್ರಿಯಾನುರೂಪೌ । ಆ. ೮-೧೨ । ಇತಿ ॥ ಮಂಡಲಾದಿಹೋಮೇಽಪ್ಯೇಷಾ ॥ ಆಧಾನೇ ತೃತೀಯಾಯಾಮಿಷ್ಟೌ ಪ್ರೇದ್ಧ ಇತಿ ಸ್ವಿಷ್ಟಕೃತೋಽನುವಾಕ್ಯಾ । ಸೂತ್ರಿತಂ ಚ । ಪ್ರೇದ್ಧೋ ಅಗ್ನ ಇಮೋ ಅಗ್ನ ಇತಿ ಸಂಯಾಜ್ಯೇ । ಆ. ೨-೧ । ಇತಿ ॥ ಏವಮನ್ಯತ್ರಾಪಿ ದೀಕ್ಷಣೀಯಾದಿಷು ಸ್ವಿಷ್ಟಕೃತೋಽನುವಾಕ್ಯಾ ॥ ಪ್ರಾಯಣೀಯೇಷ್ಟೌ ಸೇದಗ್ನಿರಗ್ನೀನಿತ್ಯಾದಿಕೇ ದ್ವೇ ಸ್ವಿಷ್ಟಕೃತೋ ಯಾಜ್ಯಾನುವಾಕ್ಯೇ । ಸೂತ್ರಿತಂ ಚ । ಸೇದಗ್ನಿರಗ್ನೀँರತ್ಯಸ್ತ್ವನ್ಯಾನಿತಿ ದ್ವೇ ಸಂಯಾಜ್ಯೇ । ಆ. ೪-೩ । ಇತಿ ॥ ಆಧಾನೇ ತೃತೀಯಾಯಾಮಿಷ್ಟಾವಿಮೋ ಅಗ್ನ ಇತಿ ಸ್ವಿಷ್ಟಕೃತೋ ಯಾಜ್ಯಾ । ಸೂತ್ರಿತಂ ಚ । ಇಮೋ ಅಗ್ನ ಇತಿ ಸಂಯಾಜ್ಯೇ । ಆ. ೨-೧ । ಇತಿ ॥ ಏವಮನ್ಯತ್ರಾಪಿ ದೀಕ್ಷಣೀಯಾದಿಷ್ವೇಷಾ ಸೌವಿಷ್ಟಕೃತೀ ಯಾಜ್ಯಾ ॥ ಪ್ರಾತರನುವಾಕ ಆಗ್ನೇಯೇ ಕ್ರತೌ ತ್ರೈಷ್ಟುಭೇ ಛಂದಸ್ಯಾಶ್ವಿನಶಸ್ತ್ರೇ ಚ ತ್ವಮಗ್ನೇ ಸುಹವ ಇತ್ಯಾದ್ಯಾಃ ಪಂಚರ್ಚಃ । ಸೂತ್ರಿತಂ ಚ । ತ್ವಮಗ್ನೇ ಸುಹವೋ ರಣ್ವಸಂದೃಕ್ । ಆ. ೪-೧೩ । ಇತಿ ॥

ಈಗ ಋಗ್ವೇದಸಂಹಿತೆಯ ಏಳನೆಯ ಮಂಡಲವನ್ನು ಪ್ರಾರಂಭಿಸಲಾಗುವುದು. ಈ ಮಂಡಲದಲ್ಲಿ ಆರು ಅನುವಾಕಗಳಿರುವವು. ಮೊದಲನೆಯ ಅನುವಾಕದಲ್ಲಿ ಹದಿನೇಳು ಸೂಕ್ತಗಳಿರುವವು. ಅವುಗಳಲ್ಲಿ **ಅಗ್ನಿಂ ನರಃ** ಎಂಬ ಈ ಸೂಕ್ತವು ಮೊದಲನೆಯದು. ಇದರಲ್ಲಿ ಇಪ್ಪತ್ತೈದು ಋಕ್ಕುಗಳಿರುವವು. ಅನುಕ್ರಮಣಿಕೆಯಲ್ಲಿ—**ಅಗ್ನಿಂ ಪಂಚಾಧಿಕಾ ವಿರಾಜೋಽಷ್ಟಾದಶಾದ್ಯಾಃ** ಎಂದು ಹೇಳಿರುವುದು. ಈ ಸಪ್ತಮಮಂಡಲಕ್ಕೆ ಮಂಡಲ ದ್ರಷ್ಟೃವಾದ ವಸಿಷ್ಠನೇ ಋಷಿಯು. ಈ ಸೂಕ್ತದ ಮೊದಲಿನ ಹದಿನೆಂಟು ಋಕ್ಕುಗಳು ವಿರಾಟ್‌ಛಂದಸ್ಕವು. ಉಳಿದ ಋಕ್ಕುಗಳು ತ್ರಿಷ್ಟುಪ್‌ಛಂದಸ್ಕವು. ಈ ಸೂಕ್ತವು ಮಂಡಲದ ಪ್ರಾರಂಭಸೂಕ್ತವಾದ್ದರಿಂದ ಇದಕ್ಕೆ ಅಗ್ನಿಯು ದೇವತೆಯು. ಯಾಗದ **ವಿಶ್ವಜಿತ್** ಎಂಬ ದಿನದಲ್ಲಿ ಪಠಿಸುವ ಆಜ್ಯಶಸ್ತ್ರಮಂತ್ರಗಳಿಗಾಗಿ ಈ ಸೂಕ್ತದ ವಿನಿಯೋಗ ವಿರುವುದೆಂದು ಆಶ್ವಲಾಯನಶ್ರೌತಸೂತ್ರದ—**ವಿಶ್ವಜಿತೋಽಗ್ನಿಂ ನರ ಇತ್ಯಾಜ್ಯಂ** ಎಂಬ ಸೂತ್ರದಿಂದ (ಆ. ೮-೭) ವಿವೃತವಾಗಿರುವುದು. ಅತ್ರಿಋಷಿಯು ಪ್ರಥಮದಲ್ಲಿ ಆಚರಿಸಿದ ಚತುರ್ವೀರವೆಂಬ ನಾಲ್ಕುದಿವಸ ಪರ್ಯಂತ ಮಾಡುವ ಯಾಗದ ನಾಲ್ಕನೆಯ ದಿವಸದಲ್ಲಿಯೂ ಈ ಸೂಕ್ತವು ಆಜ್ಯಶಸ್ತ್ರಮಂತ್ರಗಳಿಗಾಗಿ ವಿನಿಯೋಗವಿರುವುದೆಂದು ಆಶ್ವಲಾಯನಶ್ರೌತಸೂತ್ರದ—**ಅಗ್ನಿಂ ನರ ಇತಿ ಚತುರ್ಥೇ** ಎಂಬ ಸೂತ್ರದಿಂದ (ಆ. ೧೦-೨) ವಿವೃತವಾಗಿರುವುದು. **ವ್ಯೂಳ್ಹ**ವೆಂಬ ದಶರಾತ್ರಯಾಗದಲ್ಲಿ ನಾಲ್ಕನೆಯ ದಿವಸದಲ್ಲಿ ಈ ಸೂಕ್ತವನ್ನು ಜಾತವೇದಸ್ಯನಿವಿದ್ಧಾನಸೂಕ್ತವನ್ನಾಗಿ ಪಠಿಸಬೇಕೆಂದು ಆಶ್ವಲಾಯನಶ್ರೌತಸೂತ್ರದ—**ಅಗ್ನಿಂ ನರ ಇತ್ಯಾಗ್ನಿಮಾರುತೇ** ಎಂಬ ಸೂತ್ರದಿಂದ (ಆ. ೮-೮) ವಿವೃತವಾಗಿರುವುದು. ಮಹಾವ್ರತೇಷ್ಟಿಯಲ್ಲಿಯೂ ಈ ಸೂಕ್ತವನ್ನು ಆಜ್ಯಶಸ್ತ್ರಮಂತ್ರಗಳಿಗಾಗಿ ಉಪಯೋಗಿಸ ಬೇಕೆಂದು ಐತರೇಯಾರಣ್ಯಕದ ಪಂಚಮಾರಣ್ಯಕದಲ್ಲಿ—**ಆಜ್ಯಪ್ರಉಗೇ ವಿಶ್ವಜಿತಃ** ಎಂಬ ವಾಕ್ಯದಿಂದ (ಐ. ಆ. ೫-೧-೧) ನಿರ್ದಿಷ್ಟವಾಗಿರುವುದು. ಯಾಗದ ಅವಿವಾಕ್ಯವೆಂಬ ದಿನದಲ್ಲಿ ಪಠಿಸುವ ಪ್ರಾತರನುವಾಕಮಂತ್ರಪಠನ ಕಾಲದಲ್ಲಿ **ತ್ವಮಗ್ನೇ ವಸೂನ್**—ಎಂದು ಮೊದಲಾಗಿ ಪಠಿಸುವ ಅನುಷ್ಟುಪ್‌ಛಂದಸ್ಸಿನ ಮಂತ್ರಗಳಿಗೆ ಬದಲಾಗಿ ಈ ಸೂಕ್ತದ ಮೊದಲ ಮೂರು ಋಕ್ಕುಗಳನ್ನು ಸೇರಿಸಿ ಪಠಿಸಬೇಕೆಂದು ಆಶ್ವಲಾಯನಶ್ರೌತಸೂತ್ರದ—**ದಶಮೇಽಹನ್ಯನುಷ್ಟುಭಾಂ ಸ್ಥಾನೇಽಗ್ನಿಂ ನರೋ ದೀಧಿತಿಭಿರರಣ್ಯೋರಿತಿ ತೃಚಮಾಗ್ನೇಯೇ ಕ್ರತೌ** ಎಂಬ ಸೂತ್ರದಿಂದ (ಆ. ೮-೧೨) ವಿವೃತವಾಗಿರುವುದು. ಮತ್ತು ಅದೇ ದಿವಸ ಪಠಿಸುವ ಆಗ್ನಿಮಾರುತಶಸ್ತ್ರಮಂತ್ರಗಳಲ್ಲಿ ಈ ಸೂಕ್ತದ ಮೊದಲಿನ ಆರು ಋಕ್ಕುಗಳನ್ನು ಸ್ತೋತ್ರಿಯಾನುರೂಪಮಂತ್ರಗಳನ್ನಾಗಿ ಪಠಿಸಬೇಕೆಂದು ಆಶ್ವಲಾಯನ ಶ್ರೌತಸೂತ್ರದ—**ಅಗ್ನಿಂ ನರೋ ದೀಧಿತಿಭಿರರಣ್ಯೋರಿತಿ ಸ್ತೋತ್ರಿಯಾನುರೂಪೌ** ಎಂಬ ಸೂತ್ರದಿಂದ (ಆ. ೮-೧೨) ವಿವೃತವಾಗಿರುವುದು. ಉತ್ಸರ್ಜನೋಪಾಕರಣಗಳ ಮಂಡಲಾದಿಹೋಮದಲ್ಲಿ ಈ ಸೂಕ್ತದ ಮೊದಲ ನೆಯ ಋಕ್ಕನ್ನು ಪಠಿಸಿ ಹೋಮಮಾಡಬೇಕು. **ಅಗ್ನ್ಯಾಧಾನದ** ತೃತೀಯೇಷ್ಟಿಯಲ್ಲಿ **ಪ್ರೇದ್ಧಃ** ಎಂಬ ಮೂರನೆಯ ಋಕ್ಕನ್ನು ಸ್ವಿಷ್ಟಕೃದ್ಧೋಮದಲ್ಲಿ ಅನುವಾಕ್ಯಾಮಂತ್ರವನ್ನಾಗಿ ಪಠಿಸಬೇಕೆಂದು ಆಶ್ವಲಾಯನಶ್ರೌತಸೂತ್ರದ—**ಪ್ರೇದ್ಧೋ ಅಗ್ನ ಇಮೋ ಅಗ್ನ ಇತಿ ಸಂಯಾಜ್ಯೇ** ಎಂಬ ಸೂತ್ರದಿಂದ (ಆ. ೨ ೧) ವಿವೃತವಾಗಿರುವುದು. ಇದೇ ರೀತಿಯಾಗಿ ದೀಕ್ಷಣೀಯಾದಿಯಾಗಗಳ ಸ್ವಿಷ್ಟಕೃದ್ಧೋಮಗಳಲ್ಲಿಯೂ ಈ ಋಕ್ಕನ್ನು ಅನುವಾಕ್ಯಾಮಂತ್ರ ವನ್ನಾಗಿ ಉಪಯೋಗಿಸಬೇಕು. ಪ್ರಾಯಣೀಯೇಷ್ಟಿಯಲ್ಲಿ **ಸೇದಗ್ನಿರಗ್ನೀನ್** ಎಂದು ಮೊದಲಾಗುವ ಈ ಸೂಕ್ತದ ೧೪ ಮತ್ತು ೧೫ನೆಯ ಋಕ್ಕುಗಳನ್ನು ಕ್ರಮವಾಗಿ ಯಾಜ್ಯಾ ಮತ್ತು ಅನುವಾಕ್ಯಾಮಂತ್ರಗಳನ್ನಾಗಿ ಉಪಯೋಗಿಸ ಬೇಕೆಂದು ಆಶ್ವಲಾಯನಶ್ರೌತಸೂತ್ರದ **ಸೇದಗ್ನಿರಗ್ನೀँರತ್ಯಸ್ತ್ವನ್ಯಾನಿತಿ ದ್ವೇ ಸಂಯಾಜ್ಯೇ** ಎಂಬ ಸೂತ್ರದಿಂದ (ಆ. ೪-೩) ವಿವೃತವಾಗಿರುವುದು. ಅಗ್ನ್ಯಾಧಾನದ ಮೂರನೆಯ ಇಷ್ಟಿಯಲ್ಲಿ **ಇಮೋ ಅಗ್ನೇ** ಎಂಬ ಈ ಸೂಕ್ತದ

೧೮ ನೇ ಋಕ್ಕನ್ನು ಸ್ವಿಷ್ಟಕೃದ್ಧೋಮದಲ್ಲಿ ಯಾಜ್ಯಾಮಂತ್ರವನ್ನಾಗಿ ಪಠಿಸಬೇಕೆಂದು ಆಶ್ವಲಾಯನಶ್ರೌತಸೂತ್ರದ **ಇಮೋ ಅಗ್ನ ಇತಿ ಸಂಯಾಜ್ಯೇ** ಎಂಬ ಸೂತ್ರದಿಂದ (ಆ. ೨-೧) ವಿವೃತವಾಗಿರುವುದು. ಇದೇ ರೀತಿ ಇತರ ಕಡೆಗಳಲ್ಲಿಯೂ ದೀಕ್ಷಣೀಯಾದಿ ಇಷ್ಟಿಗಳ ಸ್ವಿಷ್ಟಕೃದ್ಧೋಮಗಳಲ್ಲಿ ಈ ಋಕ್ಕನ್ನು ಯಾಜ್ಯಾಮಂತ್ರವನ್ನಾಗಿ ಉಪಯೋಗಿಸಬೇಕು. ಪ್ರಾತರನುವಾಕಮಂತ್ರಪಠನದಲ್ಲಿ ಆಗ್ನೇಯಕ್ರತುಸಂಬಂಧವಾದ ತ್ರಿಷ್ಟುಪ್ ಛಂದಸ್ಸಿನ ಋಕ್ಕುಗಳಿಗಾಗಿಯೂ ಮತ್ತು ಆಶ್ವಿನಶಸ್ತ್ರಮಂತ್ರಗಳಿಗಾಗಿಯೂ **ತ್ವಮಗ್ನೇ ಸುಹವಃ** ಎಂದು ಮೊದಲಾಗುವ ಈ ಸೂಕ್ತದ ೨೧-೨೫ ಎಂಬ ಐದು ಋಕ್ಕುಗಳನ್ನು ಪಠಿಸಬೇಕೆಂದು ಆಶ್ವಲಾಯನಶ್ರೌತಸೂತ್ರದ--**ತ್ವಮಗ್ನೇ ಸುಹವೋ ರಣ್ವಸಂದೃಕ್** ಎಂಬ ಸೂತ್ರದಿಂದ (ಆ. ೪-೧೩) ವಿವೃತವಾಗಿರುವುದು.

## ಸೂಕ್ತ—೧

ಮಂಡಲ—೭ ॥ ಅನುವಾಕ—೧ ॥ ಸೂಕ್ತ—೧ ॥
ಅಷ್ಟಕ—೫ ॥ ಅಧ್ಯಾಯ—೧ ॥ ವರ್ಗ—೨೩, ೨೪, ೨೫, ೨೬, ೨೭ ॥

॥ ಸೂಕ್ತದಲ್ಲಿರುವ ಋಕ್ಸಂಖ್ಯೆ—೨೫ ॥
॥ ಋಷಿಃ—ವಸಿಷ್ಠಃ ॥
॥ ದೇವತಾ—ಅಗ್ನಿಃ ॥
॥ ಛಂದಃ—೧-೧೮, ವಿರಾಟ್ । ೧೯-೨೫. ತ್ರಿಷ್ಟುಪ್ ॥

॥ ಸಂಹಿತಾಪಾಠಃ ॥

ಅಗ್ನಿಂ ನರೋ ದೀಧಿತಿಭಿರರಣ್ಯೋರ್ಹಸ್ತಚ್ಯುತೀ ಜನಯಂತ ಪ್ರಶಸ್ತಂ ।
ದೂರೇದೃಶಂ ಗೃಹಪತಿಮಥರ್ಯುಂ ॥ ೧ ॥

॥ ಪದಪಾಠಃ ॥

ಅಗ್ನಿಂ । ನರಃ । ದೀಧಿತಿಽಭಿಃ । ಅರಣ್ಯೋಃ । ಹಸ್ತಽಚ್ಯುತೀ । ಜನಯಂತ । ಪ್ರಽಶಸ್ತಂ ।
ದೂರೇಽದೃಶಂ । ಗೃಹಽಪತಿಂ । ಅಥರ್ಯುಂ ॥ ೧ ॥

॥ ಸಾಯಣಭಾಷ್ಯಂ ॥

ನರೋ ನೇತಾರ ಋತ್ವಿಜಃ ಪ್ರಶಸ್ತಂ ಪ್ರಕರ್ಷೇಣ ಸ್ತುತಂ ದೂರೇದೃಶಂ ದೂರೇ ದೃಶ್ಯಮಾನಂ ದೂರೇ ಪಶ್ಯಂತಂ ವಾ ಗೃಹಪತಿಂ ಗೃಹಾಣಾಂ ಪಾಲಕಮಥರ್ಯುಮಾಗಮ್ಯುಮತನವಂತಂ ವಾಗ್ನಿಮ-ರಣ್ಯೋರ್ವಿದ್ಯಮಾನಂ ಹಸ್ತಚ್ಯುತೀ ಹಸ್ತಪ್ರಚ್ಯುತ್ಯಾ ಹಸ್ತಗತ್ಯಾ ದೀಧಿತಿಭಿರಂಗುಲಿಭಿರ್ಜನಯಂತ । ದೀಧಿತಯೋಽಂಗುಲಯೋ ಭವಂತಿ ಧೀಯಂತೇ ಕರ್ಮಸು । ಅರಣೀ ಪ್ರತ್ಯೃತ ಏನೇ ಅಗ್ನಿಃ ಸಮರಣಾಜ್ಜಾಯತ ಇತಿ ವಾ । ಹಸ್ತಚ್ಯುತೀ ಹಸ್ತಪ್ರಚ್ಯುತ್ಯಾ ಜನಯಂತ ಪ್ರಶಸ್ತಂ ದೂರೇದರ್ಶನಂ ಗೃಹಪತಿಮತನವಂತಂ । ನಿ. ೫-೧೦ । ಇತಿ ॥

॥ ಪ್ರತಿಪದಾರ್ಥ ॥

**ನರಃ**—ಅಧ್ವರ್ಯುಗಳು । **ಪ್ರಶಸ್ತಂ**—ಪ್ರಶಂಸಾರ್ಹನೂ । **ದೂರೇದೃಶಂ**—ದೂರದಿಂದಲೇ ಗೋಚರ ನಾಗುವವನೂ । **ಗೃಹಪತಿಂ**—ಗೃಹಪಾಲಕನೂ । **ಅಥರ್ಯುಂ**—ಸುಲಭವಾಗಿ ಸಮಿಾಪಿಸಲ್ಪಡುವವನೂ ಆದ । **ಅಗ್ನಿಂ**—ಅಗ್ನಿಯನ್ನು । **ಅರಣ್ಯೋಃ**—ಇಂಧನ ಕಾಷ್ಠಗಳಿಂದ । **ಹಸ್ತಚ್ಯುತೀ**—ಹಸ್ತಗಳ ಕ್ರಿಯಾಕಲಾಪ ಗಳುಳ್ಳ । **ದೀಧಿತಿಭಿಃ**—ಅಂಗುಲಗಳಿಂದ । **ಜನಯಂತ**—ಉತ್ಪನ್ನಮಾಡುತ್ತಾರೆ.

॥ ಭಾವಾರ್ಥ ॥

ಪ್ರಶಂಸಾರ್ಹನೂ, ದೂರದಿಂದಲೇ ಗೋಚರನಾಗುವವನೂ, ಗೃಹಪಾಲಕನೂ, ಸುಲಭವಾಗಿ ಸಮಿಾಪಿಸ ಲ್ಪಡುವವನೂ ಆದ ಅಗ್ನಿಯನ್ನು ಇಂಧನ ಕಾಷ್ಠಗಳಾದ ಅರಣಿಗಳಲ್ಲಿ ಹಸ್ತಗಳ ಕ್ರಿಯಾಕಲಾಪಗಳ ಮೂಲಕ ಅಂಗುಲಿಗಳ ಸಹಾಯದಿಂದ ಉತ್ಪನ್ನಮಾಡುತ್ತಾರೆ.

## English Translation.

Men generate the excellent, far-gleaming master of the mansion, the accessible Agni, present in the two sticks, by attrition with their fingers.

॥ ವಿಶೇಷವಿಷಯಗಳು ॥

**ಅಥರ್ಯುಂ**—ಈ ಶಬ್ದವನ್ನು ವಿವರಿಸುವುದಕ್ಕಾಗಿ ಯಾಸ್ಕರು ಪ್ರಕೃತ ಋಕ್ಕನ್ನೇ ಉದಾಹರಣೆಯಾಗಿ ತೆಗೆದುಕೊಂಡು ನಿರ್ವಚನವನ್ನು ಹೇಳಿದಾರೆ—

> **ಅಥರ್ಯುಂ । ಅಗ್ನಿಂ ನರೋ ದೀಧಿತಿಭಿರರಣ್ಯೋರ್ಹಸ್ತಚ್ಯುತೀ ಜನಯಂತ ಪ್ರಶಸ್ತಂ । ದೂರೇದೃಶಂ ಗೃಹಪತಿಮಥರ್ಯುಂ ॥ ದೀಧತಯೋಽಙ್ಗುಲಯೋ ಭವಂತಿ ಧೀಯಂತೇ ಕರ್ಮಸ್ವರಣೀ ಪ್ರತ್ಯೃತ ಏನೇ । ಅಗ್ನಿಃ ಸಮರಣಾಜ್ಜಾಯತ ಇತಿ ವಾ । ಹಸ್ತಚ್ಯುತೀ ಹಸ್ತಪ್ರಚ್ಯುತ್ಯಾ । ಜನಯಂತ ಪ್ರಶಸ್ತಂ ದೂರೇ ದರ್ಶನಂ ಗೃಹಪತಿಮತನವಂತಂ ॥**
>
> (ನಿ. ೫-೧೦)

**ದೀಧಿತಯಃ** ಎಂದರೆ ಅಂಗುಲಿಗಳು, ಬೆರಳುಗಳು ; ಜನರು ಯಾವ ಕೆಲಸ ಕಾರ್ಯಗಳನ್ನು ಮಾಡಬೇಕಾದರೂ ಬೆರಳುಗಳನ್ನು ಉಪಯೋಗಿಸಿ ಎಂದರೆ ಬೆರಳುಗಳ ಸಹಾಯದಿಂದಲೇ ಮಾಡುವರು. ಅರಣಿಗಳಲ್ಲಿ (ಅಗ್ನಿಯನ್ನು ಉತ್ಪಾದನೆ ಮಾಡುವುದಕ್ಕಾಗಿ ಉಪಯೋಗಿಸುವ ಎರಡು ಮರದ ತುಂಡುಗಳು) ಅಗ್ನಿಯು ಅಂತರ್ಗತನಾಗಿರುವುದರಿಂದ ಎಂದರೆ ಈ ಅರಣಿಗಳನ್ನು ಒಂದರಮೇಲೊಂದನ್ನಿಟ್ಟು ಕಡೆಯುವುದರಿಂದ ಅಗ್ನಿಯು ಅರಣಿಗಳಿಂದ ಹೊರಡುವುದು. ಅಗ್ನಿಯು ಅರಣಿಗಳಲ್ಲಿ ಉತ್ಪನ್ನವಾಗುವುದರಿಂದ ಹಾಗೆ ಉತ್ಪನ್ನವಾಗುವುದಕ್ಕೆ ಪೂರ್ವದಲ್ಲಿ ಅಗ್ನಿಯು ಅರಣಿ ಗಳಲ್ಲಿಯೇ ಅಂತರ್ಗತನಾಗಿರುವನೆಂದು ಭಾವಿಸಲಾಗಿರುವುದು. ಅರಣಿಗಳನ್ನು ಕಡೆದನಂತರ ಎಲ್ಲರಿಗೂ ಕಾಣಿಸುವಂತೆ ಅಗ್ನಿಯು ಪ್ರತ್ಯಕ್ಷವಾಗಿ ಗೋಚರಿಸುವುದು. (ಋತ್ವಿಕ್ಕುಗಳು) ತಮ್ಮ ಕೈ ಬೆರಳುಗಳನ್ನು ಉಪಯೋಗಿಸಿ ಅರಣಿ ಗಳಲ್ಲಿ ಶಕ್ತಿಯನ್ನುಪಯೋಗಿಸಿ ಕಡೆಯುವುದರಿಂದ ಅಗ್ನಿಯನ್ನು ಉತ್ಪತ್ತಿಮಾಡುವರು. ಅರಣಿಗಳ ಮಧ್ಯದಲ್ಲಿ ಮರೆಯಾಗಿದ್ದ ಅಗ್ನಿಯು ಕಡೆದನಂತರ ಎಲ್ಲರಿಗೂ ಕಾಣಿಸುವಂತೆ ಗೋಚರನಾಗುವನು. ಕೈಬೆರಳುಗಳನ್ನು ಹಿಂದಕ್ಕೂ

ಮುಂದಕ್ಕೂ ಚಲಿಸುವಂತೆ ಮಾಡಿ ಕಡೆಯುವುದಕ್ಕೆ **ಹಸ್ತಚ್ಯುತೀ** ಅಥವಾ **ಹಸ್ತಪ್ರಚ್ಯುತ್ಯಾ** ಎಂದು ಹೆಸರು. ಈ ಅಗ್ನಿಯು ದೂರದಿಂದಲೇ ಎಲ್ಲರಿಗೂ ಕಾಣಿಸುತ್ತಾ ಸ್ತುತಿಸಲ್ಪಡುವನು. ಗೃಹ ಅಥವಾ ಯಜ್ಞಗೃಹಕ್ಕೆ ಪ್ರಭುವು, ಮತ್ತು ಬಹಳ ವೇಗವುಳ್ಳವನು ಎಂದರೆ ಕ್ಷಣಮಾತ್ರದಲ್ಲಿ ಎಲ್ಲೆಲ್ಲಿಯೂ ವ್ಯಾಪಿಸುವ ಸಾಮರ್ಥ್ಯವುಳ್ಳವನು. ಅಥವಾ ಋತ್ವಿಗಾದಿ ಜನರಿಂದ ಸುಲಭವಾಗಿ ಸಮಿಾಪಿಸಲ್ಪಡುವವನು ಎಂದು ನಿರ್ವಚನದ ಮುಖ್ಯಾಭಿಪ್ರಾಯವು.

॥ ಸಂಹಿತಾಪಾಠಃ ॥

**ತಮ॒ಗ್ನಿಮಸ್ತೇ॒ ವಸ॑ವೋ॒ ನ್ಯೃ॑ಣ್ವನ್ತ್ಸುಪ್ರ॒ತಿ॒ಚಕ್ಷ॒ಮವ॑ಸೇ॒ ಕುತ॑ಶ್ಚಿತ್ ।**

**ದ॒ಕ್ಷಾಯ್ಯೋ॒ ಯೋ ದಮ॒ ಆಸ॒ ನಿತ್ಯಃ॑ ॥ ೨ ॥**

॥ ಪದಪಾಠಃ ॥

**ತಂ । ಅ॒ಗ್ನಿಂ । ಅಸ್ತೇ॑ । ವಸ॑ವಃ । ನಿ । ಋ॒ಣ್ವ॒ನ್ । ಸು॒ಽಪ್ರ॒ತಿ॒ಚಕ್ಷ॑ಂ । ಅವ॑ಸೇ । ಕುತ॑ಃ । ಚಿ॒ತ್ ॥**

**ದ॒ಕ್ಷಾಯ್ಯ॑ಃ । ಯಃ । ದಮೇ॑ । ಆಸ॑ । ನಿತ್ಯ॑ಃ ॥ ೨ ॥**

॥ ಸಾಯಣಭಾಷ್ಯಂ ॥

**ಯೋಽಗ್ನಿರ್ದಮೇ ಗೃಹೇ ದಕ್ಷಾಯ್ಯಃ ಪೂಜನೀಯೋ ಹವಿರ್ಭಿಃ ಸಮರ್ಧನೀಯೋ ವಾ ನಿತ್ಯೋಽಜಸ್ರ ಆಸ ಬಭೂವ ತಂ ಸುಪ್ರತಿಚಕ್ಷಂ ಸುಪ್ರತಿದರ್ಶನಮಗ್ನಿಂ ಕುತಶ್ಚಿತ್ ಸರ್ವಸ್ಮಾದಪಿ ಭಯಹೇತೋರವಸೇ ರಕ್ಷಣಾಯ ವಸವೋ ವಾಸಕಾ ಯೇ ವಸಿಷ್ಠಾ ಅಸ್ತೇ ಗೃಹೇ ನ್ಯೃಣ್ವನ್ । ನ್ಯದಧುಃ ॥**

॥ ಪ್ರತಿಪದಾರ್ಥ ॥

**ಯಃ**—ಯಾವ ಅಗ್ನಿಯು । **ದಮೇ**—ಯಜ್ಞಗೃಹದಲ್ಲಿ । **ದಕ್ಷಾಯ್ಯಃ**—ಪೂಜ್ಯನೂ । **ನಿತ್ಯಃ**—ಶಾಶ್ವತ ಸ್ಥಿತಿಯುಳ್ಳವನೂ ಆಗಿ । **ಆಸ**—ಇರುವನೋ । **ಸುಪ್ರತಿಚಕ್ಷಂ**—ಆಕರ್ಷಕವಾದ ದರ್ಶನವುಳ್ಳ । **ತಂ ಅಗ್ನಿಂ**—ಆ ಅಗ್ನಿಯನ್ನು । **ಕುತಶ್ಚಿತ್**—ಸಂಭವಿಸಬಹುದಾದ ಎಲ್ಲಾ ಅಪಾಯಗಳಿಂದಲೂ । **ಅವಸೇ**—ರಕ್ಷಣಾರ್ಥವಾಗಿ । **ವಸವಃ**—ವಾಸಕರಾದ ವಸಿಷ್ಠರು । **ಅಸ್ತೇ**—ತಮ್ಮ ಗೃಹದಲ್ಲಿ । **ನ್ಯೃಣ್ವನ್**—ಸ್ಥಾಪಿಸಿದ್ದಾರೆ.

॥ ಭಾವಾರ್ಥ ॥

ಯಾವ ಅಗ್ನಿಯು ಗೃಹದಲ್ಲಿ ಪೂಜ್ಯನೂ, ಶಾಶ್ವತವಾದ ಸ್ಥಿತಿಯುಳ್ಳವನೂ ಆಗಿರುವನೋ, ಆಕರ್ಷಕವಾದ ರೂಪವುಳ್ಳ ಅದೇ ಅಗ್ನಿಯನ್ನು ತಮಗೆ ಸಂಭವಿಸಬಹುದಾದ ಎಲ್ಲಾ ಅಪಾಯಗಳಿಂದಲೂ ರಕ್ಷಿಸುವುದಕ್ಕಾಗಿ ವಾಸಕರಾದ ವಸಿಷ್ಠರು ತಮ್ಮ ಗೃಹದಲ್ಲಿ ಸ್ಥಾಪಿಸಿದ್ದಾರೆ.

English Translation.

The dwellers have placed in the mansion, for its constant protection, that visible Agni, who has been from ever, who is to be honoured in every house.

॥ ಸಂಹಿತಾಪಾಠಃ ॥

ಪ್ರೇದ್ಧೋ ಅಗ್ನೇ ದೀದಿಹಿ ಪುರೋ ನೋಽಜಸ್ರಯಾ ಸೂರ್ಮ್ಯಾ ಯವಿಷ್ಠ।

ತ್ವಾಂ ಶಶ್ವಂತ ಉಪ ಯಂತಿ ವಾಜಾಃ ॥ ೩ ॥

॥ ಪದಪಾಠಃ ॥

ಪ್ರಽಇದ್ಧಃ । ಅಗ್ನೇ । ದೀದಿಹಿ । ಪುರಃ । ನಃ । ಅಜಸ್ರಯಾ । ಸೂರ್ಮ್ಯಾ । ಯವಿಷ್ಠ ।

ತ್ವಾ । ಶಶ್ವಂತಃ । ಉಪ । ಯಂತಿ । ವಾಜಾಃ ॥ ೩ ॥

॥ ಸಾಯಣಭಾಷ್ಯಂ ॥

ಯವಿಷ್ಠ ಯುವತಮ ಹೇ ಅಗ್ನೇ ಪ್ರೇದ್ಧಃ ಪ್ರಕರ್ಷೇಣ ಸಮಿದ್ಧಸ್ತ್ವಮಜಸ್ರಯಾಽಕ್ಷರಣಶೀಲಯಾ ಸೂರ್ಮ್ಯಾ ಜ್ವಾಲಯಾ ನೋಽಸ್ಮದರ್ಥಂ ಪುರಃ ಪುರಸ್ತಾದಾಹವನೀಯಾಯತನೇ ದೀದಿಹಿ । ದೀಪ್ಯಸ್ವ । ತ್ವಾಂ ಶಶ್ವಂತೋ ಬಹವೋ ವಾಜಾ ಅನ್ನಾನಿ ಹವೀಂಷ್ಯುಪ ಯಂತಿ । ಉಪಗಚ್ಛಂತಿ ॥

॥ ಪ್ರತಿಪದಾರ್ಥ ॥

**ಯವಿಷ್ಠ**—ಅತ್ಯಂತ ಯುವಕನಾದ । **ಅಗ್ನೇ**—ಎಲೈ ಅಗ್ನಿಯೇ । **ಪ್ರೇದ್ಧಃ**—ಅತಿಶಯವಾಗಿ ಪ್ರಜ್ವಲಿತನಾದ ನೀನು । **ಅಜಸ್ರಯಾ**—ಕ್ಷಯವಿಲ್ಲದೆ ನಿತ್ಯವಾದ । **ಸೂರ್ಮ್ಯಾ**—ಜ್ವಾಲೆಯೊಡನೆ । **ನಃ**—ನಮಗಾಗಿ । **ಪುರಃ**—ಮುಂಭಾಗದಲ್ಲಿ ಸ್ಥಾಪಿತವಾಗಿರುವ ಆಹವನೀಯಕುಂಡದಲ್ಲಿ । **ದೀದಿಹಿ**—ಪ್ರಕಾಶಿಸು । **ಶಶ್ವಂತಃ**—ಅನೇಕ ವಿಧವಾದ । **ವಾಜಾಃ**—ಅನ್ನಗಳು । **ತ್ವಾಂ**—ನಿನ್ನನ್ನು । **ಉಪ ಯಂತಿ**—ಸಮೀಪಿಸುತ್ತವೆ.

॥ ಭಾವಾರ್ಥ ॥

ಅತ್ಯಂತ ಯುವಕನಾದ ಎಲೈ ಅಗ್ನಿಯೇ, ಅತಿಶಯವಾಗಿ ಪ್ರಜ್ವಲಿತನಾದ ನೀನು ಕ್ಷಯವಿಲ್ಲದೆ ನಿತ್ಯವಾದ ಜ್ವಾಲೆಯೊಡನೆ ನಮಗಾಗಿ ಮುಂಭಾಗದಲ್ಲಿ ಸ್ಥಾಪಿತವಾದ ಆಹವನೀಯಕುಂಡದಲ್ಲಿ ಪ್ರಕಾಶಿಸು. ನಿನ್ನನ್ನು ಅನೇಕ ವಿಧವಾದ ಹವಿಸ್ಸುಗಳು ಸಮೀಪಿಸುತ್ತವೆ.

English Translation.

Well-kindled, youthful Agni, shine before us with undecaying radiance : to you abundant sacrificial viands proceed.

॥ ಸಂಹಿತಾಪಾಠಃ ॥

ಪ್ರ ತೇ ಅಗ್ನಯೋಽಗ್ನಿಭ್ಯೋ ವರಂ ನಿಃ ಸುವೀರಾಸಃ ಶೋಶುಚಂತ ದ್ಯುಮಂತಃ ।

ಯತ್ರಾ ನರಃ ಸಮಾಸತೇ ಸುಜಾತಾಃ ॥ ೪ ॥

॥ ಪದಪಾಠಃ ॥

ಪ್ರ । ತೇ । ಅಗ್ನಯಃ । ಅಗ್ನಿಽಭ್ಯಃ । ವರಂ । ನಿಃ । ಸುಽವೀರಾಸಃ । ಶೋಶುಚಂತ । ದ್ಯುಽಮಂತಃ ।
ಯತ್ರ । ನರಃ । ಸಂಽಆಸತೇ । ಸುಽಜಾತಾಃ ॥ ೪ ॥

॥ ಸಾಯಣಭಾಷ್ಯಂ ॥

ಅಗ್ನಿಭ್ಯೋ ಲೌಕಿಕೇಭ್ಯೋಽಗ್ನಿಭ್ಯೋ ವರಮತ್ಯಂತಂ ದ್ಯುಮಂತೋ ದೀಪ್ತಿಮಂತಃ ಸುವೀರಾಸಃ ಕಲ್ಯಾಣಪುತ್ರಪೌತ್ರಪ್ರದಾಸ್ತೇಽಗ್ನಯೋ ಪ್ರ ನಿಃ ಶೋಶುಚಂತ । ಪ್ರಕರ್ಷೇಣ ನಿತರಾಂ ದೀಪ್ಯಂತೇ । ಯತ್ರ ಯೇಷ್ವಗ್ನಿಷು ಸುಜಾತಾಃ ಸುಜನ್ಮಾನೋ ನರಃ ಕರ್ಮಣಾಂ ನೇತಾರೋ ಯಜಮಾನಾ ಋತ್ವಿಜೋ ವಾ ಸಮಾಸತೇ ಸಹಾಸತೇ ॥

॥ ಪ್ರತಿಪದಾರ್ಥ ॥

**ಯತ್ರ**—ಯಾವ ಅಗ್ನಿಗಳ ಮುಂಭಾಗದಲ್ಲಿ । **ಸುಜಾತಾಃ**—ಉತ್ತಮವಾದ ಜನ್ಮವುಳ್ಳ । **ನರಃ**—ಯಜಮಾನರೂ ಋತ್ವಿಕ್ಕುಗಳೂ । **ಸಮಾಸತೇ**—(ಪೂಜೆಗಾಗಿ) ಒಟ್ಟಿಗೆ ಸೇರಿಕೊಳ್ಳುವರೋ । **ತೇ ಅಗ್ನಯಃ**—ಆ ಯಜ್ಞಾಗ್ನಿಗಳು । **ಅಗ್ನಿಭ್ಯಃ**—ಲೌಕಿಕವಾದ ಅಗ್ನಿಗಳಿಂತಲೂ । **ವರಂ**—ಅತ್ಯಧಿಕವಾಗಿ । **ದ್ಯುಮಂತಃ**—ಕಾಂತಿಯುತವಾಗಿಯೂ । **ಸುವೀರಾಸಃ**—ಉತ್ತಮವಾದ ಪುತ್ರಪ್ರದರಾಗಿಯೂ । **ಪ್ರ ನಿಃ ಶೋಶುಚಂತ**—ಅತ್ಯಧಿಕವಾಗಿ ಪ್ರಕಾಶಿಸುತ್ತಾರೆ.

॥ ಭಾವಾರ್ಥ ॥

ಯಾವ ಅಗ್ನಿಗಳ ಮುಂಭಾಗದಲ್ಲಿ ಉತ್ತಮವಾದ ಜನ್ಮವುಳ್ಳ ಯಜಮಾನರೂ ಋತ್ವಿಕ್ಕುಗಳೂ ಪೂಜೆಗಾಗಿ ಒಟ್ಟಿಗೆ ಸೇರಿಕೊಳ್ಳುವರೋ ಆ ಯಜ್ಞಾಗ್ನಿಗಳು ಲೌಕಿಕವಾದ ಅಗ್ನಿಗಳಿಗಿಂತಲೂ ಅತ್ಯಧಿಕವಾಗಿ ಕಾಂತಿಯುತವಾಗಿಯೂ ಉತ್ತಮವಾದ ಪುತ್ರಪ್ರದರಾಗಿಯೂ ಅಧಿಕವಾಗಿ ಪ್ರಕಾಶಿಸುತ್ತಾರೆ.

## English Translation

Those radiant fires, at which the well-born sacrificers assemble, shine more brightly, and are more bountiful bestowers of progeny (and other blessings), than the fires (of common life).

॥ ಸಂಹಿತಾಪಾಠಃ ॥

ದಾ ನೋ ಅಗ್ನೇ ಧಿಯಾ ರಯಿಂ ಸುವೀರಂ ಸ್ವಪತ್ಯಂ ಸಹಸ್ಯ ಪ್ರಶಸ್ತಂ ।
ನ ಯಂ ಯಾವಾ ತರತಿ ಯಾತುಮಾವಾನ್ ॥ ೫ ॥

‖ ಪದಪಾಠಃ ‖

ದಾಃ । ನಃ । ಅಗ್ನೇ । ಧಿಯಾ । ರಯಿಂ । ಸುऽವೀರಂ । ಸುऽಅಪತ್ಯಂ । ಸಹಸ್ಯ । ಪ್ರऽಶಸ್ತಂ ।
ನ । ಯಂ । ಯಾವಾ । ತರತಿ । ಯಾತುऽಮಾವಾನ್ ‖ ೫ ‖

‖ ಸಾಯಣಭಾಷ್ಯಂ ‖

ಸಹಾಸ್ಯಾಭಿಭವಕುಶಲ ಹೇ ಅಗ್ನೇ ಸುವೀರಂ ಶೋಭನಪುತ್ರಪೌತ್ರೋಪೇತಂ ಸ್ವಪತ್ಯಂ ಶೋಭನ-ಪೌತ್ರೋಪೇತಂ ಪ್ರಶಸ್ತಂ ಶ್ರೇಷ್ಠಂ ರಯಿಂ ಧನಂ ಧಿಯಾ ಸ್ತೋತ್ರೇಣ ನೋऽಸ್ಮಭ್ಯಂ ದಾಃ । ದೇಹಿ । ಯಂ ರಯಿಂ ಯಾವಾಭಿಗಂತಾ ಶತ್ರುರ್ಯಾತುಮಾವಾನ್ ಹಿಂಸಾಯಾ ನಿರ್ಗತಃ ‖ ನಲೋಪಾಭಾವಶ್ಛಾಂ-ದಸಃ ‖ ಯದ್ವಾ । ಹಿಂಸಾಯುಕ್ತಃ ‖ ಪರೋ ವತಿರ್ಮತ್ವರ್ಥೀಯಃ ಪೂರಕಃ ‖ ನ ತರತಿ ನ ಬಾಧತೇ ‖

‖ ಪ್ರತಿಪದಾರ್ಥ ‖

**ಸಹಸ್ಯ**—ಶತ್ರುಗಳನ್ನು ಸೋಲಿಸುವ ಶಕ್ತಿಯುಳ್ಳ । **ಅಗ್ನೇ**—ಎಲೈ ಅಗ್ನಿಯೇ । **ಯಂ**—ಯಾವ ಧನವನ್ನು । **ಯಾತುಮಾವಾನ್**—ಹಿಂಸಾಯುಕ್ತನೂ । **ಯಾವಾ**—ಅಪಹರಿಸಲೆತ್ನಿಸುವವನೂ ಆದ ಶತ್ರುವು । **ನ ತರತಿ**—ಅಪಹರಿಸಲು ಸಾಧ್ಯವಿಲ್ಲವೋ ಅಂತಹ । **ಸುವೀರಂ**—ವೀರಪುತ್ರರೊಡಗೂಡಿನುದೂ । **ಸ್ವಪತ್ಯಂ**—ಉತ್ತಮವಾದ ಪೌತ್ರಾದಿಗಳಿಂದ ಕೂಡಿದುದೂ । **ಪ್ರಶಸ್ತಂ**—ಶ್ರೇಷ್ಠವಾದುದೂ ಆದ । **ರಯಿಂ**—ಧನವನ್ನು । **ಧಿಯಾ**—ನಮ್ಮ ಸ್ತುತಿಗಳಿಗೆ ಪ್ರತಿಫಲವಾಗಿ । **ನಃ**—ನಮಗೆ । **ದಾಃ**—ಕೊಡು.

‖ ಭಾವಾರ್ಥ ‖

ಶತ್ರುಗಳನ್ನು ಸೋಲಿಸುವ ಶಕ್ತಿಯುಳ್ಳ ಎಲೈ ಅಗ್ನಿಯೇ, ಹಿಂಸಾಯುಕ್ತನೂ, ಅಪಹರಿಸಲೆತ್ನಿಸುವನೂ ಆದ ಶತ್ರುವು ಯಾವ ಧನವನ್ನು ಅಪಹರಿಸಲು ಸಾಧ್ಯವಿಲ್ಲವೋ ಅಂತಹ ವೀರಪುತ್ರರೊಡಗೂಡಿದುದೂ, ಉತ್ತಮರಾದ ಪೌತ್ರಾದಿಗಳಿಂದ ಕೂಡಿದುದೂ ಶೇಷ್ಠವಾದುದೂ ಆದ ಧನವನ್ನು ನಮ್ಮ ಸ್ತುತಿಗಳಿಗೆ ಪ್ರತಿಫಲವಾಗಿ ನಮಗೆ ಕೊಡು.

## English Translation.

Vigorous Agni, graut to us, (in requital) of our praises, excellent riches, worthy male offspring, and descendants : (wealth), which an enemy attempting to assail, may not despoil.

‖ ಸಂಹಿತಾಪಾಠಃ ‖

ಉಪ ಯಮೇತಿ ಯುವತಿಃ ಸುದಕ್ಷಂ ದೋಷಾ ವಸ್ತೋರ್ಹವಿಷ್ಮತೀ ಘೃತಾಚೀ ।
ಉಪ ಸ್ವೈನಮರಮತಿರ್ವಸೂಯುಃ ‖ ೬ ‖

॥ ಪದಪಾಠಃ ॥

ಉಪ । ಯಂ । ಏತಿ । ಯುವತಿಃ । ಸುಽದಕ್ಷಂ । ದೋಷಾ । ವಸ್ತೋಃ । ಹವಿಷ್ಮತೀ । ಘೃತಾಚೀ ।

ಉಪ । ಸ್ವಾ । ಏನಂ । ಅರಮತಿಃ । ವಸುಽಯುಃ ॥ ೬ ॥

॥ ಸಾಯಣಭಾಷ್ಯಂ ॥

ಸುದಕ್ಷಂ ಸುಬಲಂ ಯಮಗ್ನಿಂ ಹವಿಷ್ಮತೀ ಹವಿಷಾ ಯುಕ್ತಾ ಘೃತಾಚೀ । ಘೃತಮಂಚತೀತಿ ಘೃತಾಚೀ ಜುಹೂಃ । ಯುವತಿರಗ್ನಿನಾ ನಿತ್ಯಯುಕ್ತಾ ದೋಷಾ ವಸ್ತೋಃ ರಾತ್ರಾವಹನಿ ಚೋಪೈತಿ ಉಪಗಚ್ಛತಿ ತಮೇನಂ ಸ್ವಾ ಸ್ವಕೀಯಾರಮತಿರ್ದೀಪ್ತಿರ್ವಸೂಯುಃ ಸ್ತೋತೄಣಾಂ ಧನಮಿಚ್ಛಂತ್ಯುಪೈತಿ ॥

॥ ಪ್ರತಿಪದಾರ್ಥ ॥

**ಸುದಕ್ಷಂ**—ಅತ್ಯಂತ ಶಕ್ತಿಯುತನಾದ । **ಯಂ**—ಯಾವ ಅಗ್ನಿಯನ್ನು । **ಹವಿಷ್ಮತೀ**—ಹವಿಸ್ಸಿನಿಂದ ಕೂಡಿದುದೂ । **ಘೃತಾಚೀ**—ಘೃತಪೂರ್ಣವಾದುದೂ । **ಯುವತಿಃ**—ತಾರುಣ್ಯವುಳ್ಳದ್ದೂ ಆದ ಜುಹೂಪಾತ್ರೆಯು । **ದೋಷಾ ವಸ್ತೋಃ**—ರಾತ್ರಿಹಗಲುಗಳಲ್ಲೆಲ್ಲಾ । **ಉಪ ಏತಿ**—ಹವಿಸ್ಸನ್ನರ್ಪಿಸಲು ಸಮೀಪಿಸುವುದೋ । **ಏನಂ**—ಅದೇ ಅಗ್ನಿಯನ್ನು । **ಸ್ವಾ**—ತನ್ನದೇ ಆದ । **ಅರಮತಿಃ**—ಪ್ರಭೆಯು । **ವಸೂಯುಃ**—ಸ್ತೋತೃಗಳಿಗೆ ಧನವನ್ನು ಒದಗಿಸಬೇಕೆಂಬಿಚ್ಛೆಯಿಂದ । **ಉಪ (ಏತಿ)**—ಸಮೀಪಿಸುತ್ತದೆ.

॥ ಭಾವಾರ್ಥ ॥

ಅತ್ಯಂತ ಶಕ್ತಿಯುತನಾದ ಯಾವ ಅಗ್ನಿಯನ್ನು ಹವಿಸ್ಸಿನಿಂದ ಕೂಡಿದುದೂ, ಘೃತಪೂರ್ಣವಾದುದೂ, ತಾರುಣ್ಯವುಳ್ಳದ್ದೂ ಆದ ಜುಹೂ ಪಾತ್ರೆಯು ರಾತ್ರಿಹಗಲುಗಳಲ್ಲೆಲ್ಲಾ ಹವಿಸ್ಸನ್ನರ್ಪಿಸಲು ಸಮೀಪಿಸುವುದೋ ಅದೇ ಅಗ್ನಿಯನ್ನು ತನ್ನದೇ ಆದ ಪ್ರಭೆಯು ಸ್ತೋತೃಗಳಿಗೆ ಧನವನ್ನೊದಗಿಸಬೇಕೆಂಬಿಚ್ಛೆಯಿಂದ ಸಮೀಪಿಸುತ್ತದೆ.

English Translation.

Whom vigorous, the young damsel (the ladle) chargad with the oblation, presenting the melted butter, day and night approaches; him his own lustre approaches, favourable to (the bestowal of) wealth.

॥ ಸಂಹಿತಾಪಾಠಃ ॥

ವಿಶ್ವಾ ಅಗ್ನೇಽಪ ದಹಾರಾತೀರ್ಯೇಭಿಸ್ತಪೋಭಿರದಹೋ ಜರೂಥಂ ।

ಪ್ರ ನಿಸ್ವರಂ ಚಾತಯಸ್ವಾಮೀವಾಂ ॥ ೭ ॥

॥ ಪದಪಾಠಃ ॥

ವಿಶ್ವಾಃ । ಅಗ್ನೇ । ಅಪ । ದಹ । ಅರಾತೀಃ । ಯೇಭಿಃ । ತಪಃऽಭಿಃ । ಅದಹಃ । ಜರೂಥಂ ।

ಪ್ರ । ನಿಃऽಸ್ವರಂ । ಚಾತಯಸ್ವ । ಅಮೀವಾಂ ॥ ೭ ॥

॥ ಸಾಯಣಭಾಷ್ಯಂ ॥

ಹೇ ಅಗ್ನೇ ವಿಶ್ವಾ ವಿಶ್ವಾನರಾತೀಃ ಶತ್ರೂನ್ ತಪೋಭಿಸ್ತೇಜೋಭಿರಪ ದಹ । ಯೇಭಿರ್ಯೈಸ್ತಪೋಭಿರ್ಜರೂಥಂ ಪರುಷಶಬ್ದಕಾರಿಣಂ ರಾಕ್ಷಸಂ ॥ ಗೃಣಾತೇರೂಥನ್ಪ್ರತ್ಯಯೇ ಸತಿ ಜರೂಥಶಬ್ದನಿಷ್ಪತ್ತಿಃ ॥ ಅದಹಃ ದಹಸಿ । ಕಿಂಚಾಮೀವಾಂ ರೋಗಂ ನಿಸ್ವರಂ ನ್ಯಕ್ಕೃತೋಪತಾಪಂ ಯಥಾ ಭವತಿ ತಥಾ ॥ ಸ್ವೃ ಶಬ್ದೋಪತಾಪಯೋರಿತಿ ಧಾತುಃ ॥ ಪ್ರ ಚಾತಯಸ್ವ । ಪ್ರಕರ್ಷೇಣ ನಾಶಯ ॥ ಚತತಿರ್ಗತ್ಯರ್ಥೋ ವೇತಿ ಭಟ್ಟಭಾಸ್ಕರಮಿಶ್ರಃ ॥

॥ ಪ್ರತಿಪದಾರ್ಥ ॥

**ಅಗ್ನೇ**—ಎಲೈ ಅಗ್ನಿಯೇ । **ಯೇಭಿಃ**—ಯಾವ ನಿನ್ನ ತೇಜಸ್ಸುಗಳಿಂದ । **ಜರೂಥಂ**—ವಿಕಾರವಾದ ಶಬ್ದವನ್ನು ಮಾಡತಕ್ಕ ಅಸುರನನ್ನು । **ಅದಹಃ**—ದಹಿಸಿದೆಯೋ । **ತಪೋಭಿಃ**—ಅದೇ ತೇಜಸ್ಸುಗಳಿಂದ । **ವಿಶ್ವಾಃ**—ಸಮಸ್ತರಾದ । **ಅರಾತೀಃ**—ಶತ್ರುಗಳನ್ನೂ । **ಅಪ ದಹ**—ದಹಿಸು । **ಅಮೀವಾಂ**—ರೋಗವನ್ನು । **ನಿಸ್ವರಂ**—ಅದರ ಶಕ್ತಿಯೆಲ್ಲಾ ಕುಗ್ಗುವಂತೆ । **ಪ್ರ ಚಾತಯಸ್ವ**—ನಾಶಮಾಡು.

॥ ಭಾವಾರ್ಥ ॥

ಎಲೈ ಅಗ್ನಿಯೇ, ಯಾವ ನಿನ್ನ ತೇಜಸ್ಸುಗಳಿಂದ ವಿಕಾರವಾದ ಶಬ್ದವನ್ನು ಮಾಡತಕ್ಕ ಅಸುರನನ್ನು ದಹಿಸಿದೆಯೋ ಅದೇ ತೇಜಸ್ಸುಗಳಿಂದ ಸಮಸ್ತವಾದ ಶತ್ರುಗಳನ್ನೂ ದಹಿಸು. ರೋಗದ ಶಕ್ತಿಯೆಲ್ಲಾ ಕುಗ್ಗುವಂತೆ ಅದನ್ನು ನಾಶಮಾಡು.

English Translation.

Consume, Agni, all enemies ; with the same flames with which you have consumen Jarutha, drive away febrile disease.

॥ ಸಂಹಿತಾಪಾಠಃ ॥

ಆ ಯಸ್ತೇ ಅಗ್ನ ಇಧತೇ ಅನೀಕಂ ವಸಿಷ್ಠ ಶುಕ್ರ ದೀದಿವಃ ಪಾವಕ ।

ಉತೋ ನ ಏಭಿಃ ಸ್ತವಥೈರಿಹ ಸ್ಯಾಃ ॥ ೮ ॥

॥ ಪದಪಾಠಃ ॥

ಆ । ಯಃ । ತೇ । ಅಗ್ನೇ । ಇಧತೇ । ಅನೀಕಂ । ವಸಿಷ್ಠ । ಶುಕ್ರ । ದೀದಿऽವಃ । ಪಾವಕ ।

ಉತೋ ಇತಿ । ನಃ । ಏಭಿಃ । ಸ್ತವಥೈಃ । ಇಹ । ಸ್ಯಾಃ ॥ ೮ ॥

॥ ಸಾಯಣಭಾಷ್ಯಂ ॥

ವಸಿಷ್ಠ ಶ್ರೇಷ್ಠ ಶುಕ್ರ ಶುಭ್ರ ದೀದಿವೋ ದೀಪ್ತ ಪಾವಕ ಶೋಧಕ ಹೇ ಅಗ್ನೇ ತೇ ತವಾನೀಕಂ ತೇಜೋ ಯ ಐಧತೇ ಸಮೇಧಯತಿ ತಸ್ಯೇವ ನೋऽಸ್ಮಾಕಮುತೋ ಅಪಿ ಚೈಭಿಃ ಸ್ತವಥೈಃ ಸ್ತೋತ್ರೈರಿಹಾಸ್ಮಿನ್ಯಜ್ಞೇ ಸ್ಯಾಃ । ಭವ ॥

॥ ಪ್ರತಿಪದಾರ್ಥ ॥

ವಸಿಷ್ಠ—ಅತ್ಯಂತ ಶ್ರೇಷ್ಠನೂ । ಶುಕ್ರ—ಶುಭ್ರವರ್ಣವುಳ್ಳವನೂ । ದೀದಿವಃ—ಕಾಂತಿಯುತನೂ । ಪಾವಕ—ಶುದ್ಧಿಕಾರಕನೂ ಆದ । ಅಗ್ನೇ—ಎಲೈ ಅಗ್ನಿಯೇ । ತೇ—ನಿನ್ನ । ಅನೀಕಂ—ತೇಜಸ್ಸನ್ನು । ಯಃ—ಯಾವ ಯಜಮಾನನು । ಆ ಇಧತೇ—ಪ್ರಜ್ವಲಿತವನ್ನಾಗಿ ಮಾಡುವನೋ ಅವನಿಗಾಗಿಯೂ । ಉತೋ—ಮತ್ತು । ಏಭಿಃ ಸ್ತವಥೈಃ—ಈ ಸ್ತುತಿಗಳಿಂದ ಪ್ರಶಂಸಿಸುವ । ನಃ—ನಮಗಾಗಿಯೂ । ಇಹ—ಈ ಯಜ್ಞದಲ್ಲಿ । ಸ್ಯಾಃ—ಸ್ಥಾಪಿತನಾಗಿರು.

॥ ಭಾವಾರ್ಥ ॥

ಅತ್ಯಂತಶ್ರೇಷ್ಠನೂ, ಶುಭ್ರವರ್ಣವುಳ್ಳವನೂ, ಕಾಂತಿಯುತನೂ, ಶುದ್ಧಿಕಾರಕನೂ ಆದ ಎಲೈ ಅಗ್ನಿಯೇ, ಯಾವ ಯಜಮಾನನು ನಿನ್ನ ತೇಜಸ್ಸನ್ನು ಪ್ರಜ್ವಲಿತವನ್ನಾಗಿ ಮಾಡುವನೋ ಅವನಿಗಾಗಿಯೂ ಮತ್ತು ಈ ಸ್ತುತಿಗಳಿಂದ ನಿನ್ನನ್ನು ಪ್ರಶಂಸಿಸುವ ನಮಗಾಗಿಯೂ ಈ ಯಜ್ಞದಲ್ಲಿ ಸ್ಥಾಪಿತನಾಗಿರು.

English Translation.

Eminent, pure, radiating purifier, Agni, be present (at the sacrifice) of him who lights up your blaze, and at ours, (who address you) with these praises.

॥ ಸಂಹಿತಾಪಾಠಃ ॥

ವಿ ಯೇ ತೇ ಅಗ್ನೇ ಭೇಜಿರೇ ಅನೀಕಂ ಮರ್ತಾ ನರಃ ಪಿತ್ರ್ಯಾಸಃ ಪುರುತ್ರಾ ।

ಉತೋ ನ ಏಭಿಃ ಸುಮನಾ ಇಹ ಸ್ಯಾಃ ॥ ೯ ॥

॥ ಪದಪಾಠಃ ॥

ವಿ । ಯೇ । ತೇ । ಅಗ್ನೇ । ಭೇಜಿರೇ । ಅನೀಕಂ । ಮರ್ತಾಃ । ನರಃ । ಪಿತ್ರ್ಯಾಸಃ । ಪುರುऽತ್ರಾ ।

ಉತೋ ಇತಿ । ನಃ । ಏಭಿಃ । ಸುऽಮನಾಃ । ಇಹ । ಸ್ಯಾಃ ॥ ೯ ॥

॥ ಸಾಯಣಭಾಷ್ಯಂ ॥

ಹೇ ಅಗ್ನೇ ತೇ ತವಾನೀಕಂ ತೇಜಃ ಪಿತ್ರ್ಯಾಸಃ ಪಿತೃಹಿತಾ ಆರ್ಷೇಯಾ ವಾ ಮರ್ತಾ ಮನುಷ್ಯಾ ನರಃ ಕರ್ಮಣಾಂ ನೇತಾರೋ ಯೇ ಯಜಮಾನಾಃ ಪುರುತ್ರಾ ಬಹುಷು ದೇಶೇಷು ವಿ ಭೇಜಿರೇ ವಿಭಜಂತೇ । ಆದಧುರಿತಿ ಯಾವತ್ । ತೇಷಾಮಿವ ನೋऽಸ್ಮಾಕಮುತೋ ಅಪ್ಯೇಭಿಃ ಸ್ತುತ್ಯೈಃ ಸಹ ಸ್ತೋತ್ರೈರ್ವಾ ಸುಮನಾ ಅನುಗ್ರಾಹಕಮನಾಃ ಸನ್ ಇಹ ಯಜ್ಞೇ ಸ್ಯಾಃ । ಭವ ॥

॥ ಪ್ರತಿಪದಾರ್ಥ ॥

**ಅಗ್ನೇ**—ಎಲೈ ಅಗ್ನಿಯೇ । **ಪಿತ್ರ್ಯಾಸಃ**—ನಮ್ಮ ಪಿತೃಪಿತಾಮಹಾದಿಗಳೂ । **ನರಃ**—ಕರ್ಮನೇತೃಗಳೂ ಆದ । **ಯೇ ಮರ್ತಾಃ**—ಯಾವ ಯಜಮಾನರು । **ಪುರುತ್ರಾ**—ಅನೇಕ ಪ್ರದೇಶಗಳಲ್ಲಿ । **ತೇ**—ನಿನ್ನ । **ಅನೀಕಂ**—ತೇಜಸ್ಸಿನ । **ವಿ ಭೇಜಿರೇ**—ಭಾಗವನ್ನು ತಾವೂ ವಹಿಸಿ ಪ್ರಕಾಶಿಸಿದರೋ । **ಉತೋ**—ಅದರಂತೆಯೇ । **ಏಭಿಃ**—ಈ ಸ್ತುತಿಗಳಿಂದ ಪೂಜಿಸುವ । **ನಃ**—ನಮ್ಮ ಪ್ರಕಾಶಕ್ಕಾಗಿಯೂ । **ಸುಮನಾಃ**—ಅನುಗ್ರಹ ಬುದ್ಧಿಯುಳ್ಳವನಾಗಿ । **ಇಹ**—ಈ ಯಜ್ಞದಲ್ಲಿ । **ಸ್ಯಾಃ**—ಸ್ಥಾಪಿತನಾಗು.

॥ ಭಾವಾರ್ಥ ॥

ಎಲೈ ಅಗ್ನಿಯೇ, ನಮ್ಮ ಪಿತೃಪಿತಾಮಹಾದಿಗಳೂ, ಕರ್ಮನೇತೃಗಳೂ ಆದ ಯಾವ ಯಜಮಾನರು ಅನೇಕ ಪ್ರದೇಶಗಳಲ್ಲಿ ನಿನ್ನ ತೇಜಸ್ಸಿನ ಭಾಗವನ್ನು ತಾವೂ ವಹಿಸಿ ಪ್ರಕಾಶಿಸಿದರೋ ಅದರಂತೆಯೇ, ಈ ಸ್ತುತಿಗಳಿಂದ ಪೂಜಿಸುವ ನಮ್ಮ ಪ್ರಕಾಶಕ್ಕಾಗಿಯೂ ಸಹ ಅನುಗ್ರಹಬುದ್ಧಿಯುಳ್ಳವನಾಗಿ ಈ ಯಜ್ಞದಲ್ಲಿ ಸ್ಥಾಪಿತನಾಗು.

English Translation.

Patriarchal mortals, leaders of rites have shared, Agni, your radiance in many places : (propitiated) by these our (praises, as by theirs), be present at this sacrifice.

॥ ಸಂಹಿತಾಪಾಠಃ ॥

ಇಮೇ ನರೋ ವೃತ್ರಹತ್ಯೇಷು ಶೂರಾ ವಿಶ್ವಾ ಅದೇವೀರಭಿ ಸಂತು ಮಾಯಾಃ ।

ಯೇ ಮೇ ಧಿಯಂ ಪನಯಂತ ಪ್ರಶಸ್ತಾಂ ॥ ೧೦ ॥

॥ ಪದಪಾಠಃ ॥

ಇಮೇ । ನರಃ । ವೃತ್ರಽಹತ್ಯೇಷು । ಶೂರಾಃ । ವಿಶ್ವಾಃ । ಅದೇವೀಃ । ಅಭಿ । ಸಂತು । ಮಾಯಾಃ ।

ಯೇ । ಮೇ । ಧಿಯಂ । ಪನಯಂತ । ಪ್ರಽಶಸ್ತಾಂ ॥ ೧೦ ॥

॥ ಸಾಯಣಭಾಷ್ಯಂ ॥

ಯೇ ಮನುಷ್ಯಾ ಮೇ ಮದೀಯಾಂ ಪ್ರಶಸ್ತಾಂ ಪ್ರಕೃಷ್ಟಾಂ ಧಿಯಂ ಕರ್ಮ ಸ್ತುತಿಂ ವಾ ಪನಯಂತ ಸ್ತುವಂತಿ ಬ್ರುವಂತಿ ವಾ ತ ಇಮೇ ಮಯಿ ಸ್ನಿಗ್ಧಾ ನರೋ ಮನುಷ್ಯಾ ವೃತ್ರಹತ್ಯೇಷು ಸಂಗ್ರಾಮೇಷು ಶೂರಾ ಅದೇವೀರಾಸುರೀರ್ವಿಶ್ವಾಃ ಸರ್ವಾ ಮಾಯಾ ಅಭಿ ಸಂತು । ಅಭಿಭವಂತು ॥

॥ ಪ್ರತಿಪದಾರ್ಥ ॥

**ಯೇ**—ಯಾವ ಮಾನವರು । **ಮೇ**—ನನ್ನ । **ಪ್ರಶಸ್ತಾಂ**—ಉತ್ತಮವಾದ । **ಧಿಯಂ**—ಕರ್ಮವನ್ನು । **ಪನಯಂತ**—ಸ್ತುತಿಸುವರೋ । **ಇಮೇ ನರಃ**—ನನಗೆ ಆಪ್ತರಾದ ಇದೇ ಮಾನವರು । **ವೃತ್ರಹತ್ಯೇಷು**—ಸಂಗ್ರಾಮಗಳಲ್ಲಿ । **ಶೂರಾಃ**—ಪರಾಕ್ರಮಿಗಳಾಗಿದ್ದು । **ಅದೇವೀಃ**—ಅಸುರಸಂಬಂಧಿಯಾದ । **ವಿಶ್ವಾಃ ಮಾಯಾಃ**—ಸಮಸ್ತ ವಂಚಕ ಕೃತ್ಯಗಳನ್ನೂ । **ಅಭಿ ಸಂತು**—ನಾಶಪಡಿಸಲಿ.

॥ ಭಾವಾರ್ಥ ॥

ಯಾವ ಮಾನವರು ನನ್ನ ಉತ್ತಮವಾದ ಕರ್ಮವನ್ನು ಸ್ತುತಿಸುವರೋ, ನನಗೆ ಆಪ್ತರಾದ ಅದೇ ಮಾನವರು ಸಂಗ್ರಾಮಗಳಲ್ಲಿ ಪರಾಕ್ರಮಿಗಳಾಗಿದ್ದುಕೊಂಡು ಅಸುರಸಂಬಂಧಿಯಾದ ಸಮಸ್ತವಂಚಕ ಕೃತ್ಯಗಳನ್ನೂ ನಾಶಪಡಿಸಲಿ.

English Translation.

May those men who commend this my sacred rite, heroes, in battles with foes, overcome all impious devices.

॥ ಸಂಹಿತಾಪಾಠಃ ॥

ಮಾ ಶೂನೇ ಅಗ್ನೇ ನಿ ಷದಾಮ ನೃಣಾಂ ಮಾಶೇಷಸೋಽವೀರತಾ ಪರಿ ತ್ವಾ ।
ಪ್ರಜಾವತೀಷು ದುರ್ಯಾಸು ದುರ್ಯ ॥ ೧೧ ॥

॥ ಪದಪಾಠಃ ॥

ಮಾ । ಶೂನೇ । ಅಗ್ನೇ । ನಿ । ಸದಾಮ । ನೃಣಾಂ । ಮಾ । ಅಶೇಷಸಃ । ಅವೀರತಾ । ಪರಿ । ತ್ವಾ ।

ಪ್ರಜಾಽವತೀಷು । ದುರ್ಯಾಸು । ದುರ್ಯ ॥ ೧೧ ॥

‖ ಸಾಯಣಭಾಷ್ಯಂ ‖

**ಹೇ ಅಗ್ನೇ ಶೂನೇ ಶೂನ್ಯೇ ಪುತ್ರಾದಿರಹಿತೇ ಗೃಹೇ ಮಾ ನಿ ಷದಾಮ । ನ ನಿವಸಾಮ । ನೃಣಾಮನ್ಯೇಷಾಂ ಚ ಗೃಹೇ ಮಾ ನಿ ಷದಾಮ । ದುರ್ಯ ಗೃಹೇಭ್ಯೋ ಹಿತ ಹೇ ಅಗ್ನೇ ಅಶೇಷಸೋಽಪುತ್ರಾಃ । ತೋಕ್ಮ ಶೇಷ ಇತಿ ಪುತ್ರನಾಮಸು ಪಾಠಾತ್ । ಅವೀರತಾವೀರತಯಾ ಯುಕ್ತಾಶ್ಚ ಸಂತಸ್ತ್ವಾ ತ್ವಾಂ ಪರಿ ಚರಂತಃ ಪ್ರಜಾವತೀಷ್ವೇವ ದುರ್ಯಾಸು ಗೃಹೇಷು ನಿವಸಾಮ ‖**

‖ ಪ್ರತಿಪದಾರ್ಥ ‖

**ಅಗ್ನೇ**—ಎಲೈ ಅಗ್ನಿಯೇ । **ಶೂನೇ**—ಪುತ್ರಾದಿರಹಿತವಾದ ಶೂನ್ಯಗೃಹದಲ್ಲಿ । **ಮಾ ನಿ ಷದಾಮ**—ನಾವು ಕುಳಿತುಕೊಳ್ಳುವಂತೆ ಮಾಡಬೇಡ । **ನೃಣಾಂ**—ಬೇರೆಯವರ ಮನೆಯಲ್ಲಿ । **ಮಾ**—ಆಶ್ರಯವನ್ನು ಪಡೆಯುವಂತಾಗದಿರಲಿ । **ದುರ್ಯ**—ವಸತಿಪ್ರಿಯನಾದ ಎಲೈ ಅಗ್ನಿಯೇ । **ಅಶೇಷಸಃ**—ಪುತ್ರರಹಿತರಾಗಿಯೂ । **ಅವೀರತಾ**—ವೀರ್ಯರಹಿತರಾಗಿಯೂ ಇರುವ ನಾವು । **ತ್ವಾ**—ನಿನ್ನನ್ನು । **ಪರಿ**—ಪೂಜಿಸುತ್ತಾ (ತತ್ಫಲವಾಗಿ) । **ಪ್ರಜಾವತೀಷು**—ಪುತ್ರಾದಿಗಳಿಂದ ತುಂಬಿದ । **ದುರ್ಯೋಸು**—ಗೃಹಗಳಲ್ಲಿ (ವಾಸಮಾಡುವಂತೆ ಅನುಗ್ರಹಿಸು).

‖ ಭಾವಾರ್ಥ ‖

ಎಲೈ ಅಗ್ನಿಯೇ, ಪುತ್ರಾದಿರಹಿತವಾದ ಶೂನ್ಯಗೃಹದಲ್ಲಿ ನಮ್ಮನ್ನು ಕುಳಿತುಕೊಳ್ಳುವಂತೆ ಮಾಡಬೇಡ. ನಾವು ಬೇರೆಯವರ ಮನೆಯಲ್ಲಿ ಆಶ್ರಯವನ್ನು ಪಡೆಯದಂತಾಗಲಿ. ವಸತಿಪ್ರಿಯನಾದ ಎಲೈ ಅಗ್ನಿಯೇ, ಪುತ್ರರಹಿತರಾಗಿಯೂ ವೀರ್ಯರಹಿತರಾಗಿಯೂ ಇರುವ ನಾವು ನಿನ್ನನ್ನು ಪೂಜಿಸುತ್ತಾ ತತ್ಫಲವಾಗಿ ಪುತ್ರಾದಿಗಳಿಂದ ತುಂಬಿದ ಗೃಹಗಳಲ್ಲಿ ವಾಸಮಾಡುವಂತೆ ಅನುಗ್ರಹಿಸು.

## English Translation.

Let us not sit down, Agni, in an emyty dwelling, (nor in those) of (other) men : let us not be without successors ; or, being without male posterity, let us, friend of dwellings, (by) worshipping you, (come to abide) in houses filled with progeny.

‖ ಸಂಹಿತಾಪಾಠಃ ‖

**ಯಮ॒ಶ್ವೀ ನಿತ್ಯ॑ಮುಪ॒ಯಾತಿ॑ ಯ॒ಜ್ಞಂ ಪ್ರ॒ಜಾವಂ॑ತಂ ಸ್ವಪ॒ತ್ಯಂ ಕ್ಷಯಂ॑ ನಃ ।**

**ಸ್ವಜ॑ನ್ಮನಾ॒ ಶೇಷ॑ಸಾ ವಾವೃಧಾ॒ನಂ ‖ ೧೨ ‖**

॥ ಪದಪಾಠಃ ॥

ಯಂ । ಅಶ್ವೀ । ನಿತ್ಯಂ । ಉಪऽಯಾತಿ । ಯಜ್ಞಂ । ಪ್ರಜಾऽವಂತಂ । ಸುऽಅಪತ್ಯಂ । ಕ್ಷಯಂ । ನಃ ॥

ಸ್ವऽಜನ್ಮನಾ । ಶೇಷಸಾ । ವವೃಧಾನಂ ॥ ೧೨ ॥

॥ ಸಾಯಣಭಾಷ್ಯಂ ॥

ಯಂ ಯಜ್ಞಂ ಯಜ್ಞಾಶ್ರಯಮಶ್ವ್ಯಶ್ವವಾನಗ್ನಿರ್ನಿತ್ಯಮುಪಯಾತಿ ತಂ ಪ್ರಜಾವಂತಂ ಭೃತ್ಯಾದಿಸಹಿತಂ ಸ್ವಪತ್ಯಂ ಶೋಭನಸಂತಾನೋಪೇತಂ ಸ್ವಜನ್ಮನೌರಸೇನ ಶೇಷಸಾ ಪುತ್ರೇಣ ವವೃಧಾನಂ ವರ್ಧಮಾನಂ ಕ್ಷಯಂ ಗೃಹಂ ನೋऽಸ್ಮಭ್ಯಂ ಹೇ ಅಗ್ನೇ ದೇಹೀತಿ ಶೇಷಃ ॥

॥ ಪ್ರತಿಪದಾರ್ಥ ॥

(ಎಲೈ ಅಗ್ನಿಯೇ) **ಯಂ**—ಯಾವ । **ಯಜ್ಞಂ**—ಯಜ್ಞಾಶ್ರಯವಾದ ಗೃಹವನ್ನು । **ಅಶ್ವೀ**—ಅಶ್ವ ವಂತನಾದ ಅಗ್ನಿಯು । **ನಿತ್ಯಂ**—ಯಾವಾಗಲೂ । **ಉಪಯಾತಿ**—ಪ್ರವೇಶಿಸುವನೋ (ಅಂತಹ) । **ಪ್ರಜಾವಂತಂ**—ಭೃತ್ಯಾದಿಗಳಿಂದ ಕೂಡಿದುದೂ । **ಸ್ವಪತ್ಯಂ**—ಉತ್ತಮವಾದ ಸಂತಾನಯುಕ್ತವಾದುದೂ । **ಸ್ವಜನ್ಮನಾ**—ತನ್ನ ದೇಹದಿಂದಲೇ ಜನಿಸಿದ । **ಶೇಷಸಾ**—ಪುತ್ರನಿಂದ । **ವವೃಧಾನಂ**—ವೃದ್ಧಿಯನ್ನು ಹೊಂದತಕ್ಕದ್ದೂ ಆದ । **ಕ್ಷಯಂ**—ಗೃಹವನ್ನು । **ನಃ**—ನಮಗೆ ಕೊಡು.

॥ ಭಾವಾರ್ಥ ॥

ಎಲೈ ಅಗ್ನಯೇ, ಯಾವ ಯಜ್ಞಾಶ್ರಯವಾದ ಗೃಹವನ್ನು ಅಶ್ವವಂತನಾದ ಅಗ್ನಿಯು ಯಾವಾಗಲೂ ಪ್ರವೇಶಿಸುವನೋ ಅಂತಹ ಭೃತ್ಯಾದಿಗಳಿಂದ ಕೂಡಿದುದೂ ಉತ್ತಮವಾದ ಸಂತಾನಯುಕ್ತವಾದುದೂ ತನ್ನ ದೇಹ ದಿಂದಲೇ ಜನಿಸಿದ ಪುತ್ರನಿಂದ ವೃದ್ಧಿಯನ್ನು ಹೊಂದತಕ್ಕದ್ದೂ ಆದ ಗೃಹವನ್ನು ನಮಗೆ ಕೊಡು.

## English Translation.

To whatsoever sacrifice the lord of horses regularly repairs, render, (Agni), our dwelling blessed with progeny, with excellent posterity, with lineal successors.

॥ ಸಂಹಿತಾಪಾಠಃ ॥

ಪಾಹಿ ನೋ ಅಗ್ನೇ ರಕ್ಷಸೋ ಅಜುಷ್ಟಾತ್ಪಾಹಿ ಧೂರ್ತೇರರರುಷೋ ಅಘಾಯೋಃ ।

ತ್ವಾ ಯುಜಾ ಪೃತನಾಯೂँರಭಿ ಷ್ಯಾಂ ॥ ೧೩ ॥

॥ ಪದಪಾಠಃ ॥

ಪಾಹಿ । ನಃ । ಅಗ್ನೇ । ರಕ್ಷಸಃ । ಅಜುಷ್ಟಾತ್ । ಪಾಹಿ । ಧೂರ್ತೇಃ । ಅರರುಷಃ । ಅಘsಯೋಃ । ತ್ವಾ । ಯುಜಾ । ಪೃತನಾsಯೂನ್ । ಅಭಿ । ಸ್ಯಾಂ ॥ ೧೩ ॥

॥ ಸಾಯಣಭಾಷ್ಯಂ ॥

ಹೇ ಅಗ್ನೇ ನೋಽಸ್ಮಾನಜುಷ್ಟಾದಪ್ರೀತಿವಿಷಯಾದ್ರಕ್ಷಸೋ ರಾಕ್ಷಸಾತ್ಪಾಹಿ । ರಕ್ಷ । ಕಿಂಚಾರರುಷೋಽದಾತುರಘಾಯೋಃ ಪಾಪಮಿಚ್ಛತೋ ಧೂರ್ತೇರ್ಹಿಂಸಕಾತ್ಪಾಹಿ । ಅಪಿ ಚ ತ್ವಾ ತ್ವಯಾ ಯುಜಾ ಸಹಾಯಭೂತೇನ ಪೃತನಾಯೂನ್ ಪೃತನಾಕಾಮಾನಭಿ ಷ್ಯಾಂ । ಅಹಮಭಿಭವೇಯಂ ॥

॥ ಪ್ರತಿಪದಾರ್ಥ ॥

**ಅಗ್ನೇ**—ಎಲೈ ಅಗ್ನಿಯೇ । **ನಃ**—ನಮ್ಮನ್ನು । **ಅಜುಷ್ಟಾತ್**—ದ್ವೇಷಕ್ಕೆ ಪಾತ್ರನಾದ । **ರಕ್ಷಸಃ**—ರಾಕ್ಷಸನಿಂದ । **ಪಾಹಿ**—ರಕ್ಷಿಸು । **ಅರರುಷಃ**—ದಾತೃವಲ್ಲದವನೂ । **ಅಘಾಯೋಃ**—ಕೇಡನ್ನು ಬಯಸುವವನೂ ಆದ । **ಧೂರ್ತೇಃ**—ಹಿಂಸಕನಿಂದಲೂ । **ಪಾಹಿ**—ರಕ್ಷಿಸು । **ತ್ವಾ ಯುಜಾ**—ನಿನ್ನೊಡಗೂಡಿ । **ಪೃತನಾಯೂನ್**—ಯುದ್ಧದಲ್ಲಿಯೇ ಆಸಕ್ತರಾದ ಅಸುರರನ್ನು । **ಅಭಿ ಷ್ಯಾಂ**—ಸೋಲಿಸುವಂತಾಗಲಿ.

॥ ಭಾವಾರ್ಥ ॥

ಎಲೈ ಅಗ್ನಿಯೇ, ದ್ವೇಷಕ್ಕೆ ಪಾತ್ರನಾದ ರಾಕ್ಷಸನಿಂದ ನಮ್ಮನ್ನು ರಕ್ಷಿಸು. ದಾತೃವಲ್ಲದವನೂ, ಕೇಡನ್ನು ಬಯಸುವವನೂ ಆದ ಹಿಂಸಕನಿಂದಲೂ ರಕ್ಷಿಸು. ಯಾವಾಗಲೂ ಯುದ್ಧದಲ್ಲಿಯೇ ಆಸಕ್ತರಾದ ಅಸುರರನ್ನು ನಿನ್ನ ಸಹಾಯದಿಂದ ನಾವು ಸೋಲಿಸುವಂತಾಗಲಿ.

## English Translation.

Protect us, Agni, from the odious Rakshasas; protect us from the malignant, the illiberal, the iniquitous; may, I, with you for my ally, triumph over the hostile.

॥ ಸಂಹಿತಾಪಾಠಃ ॥

ಸೇದಗ್ನಿರಗ್ನೀರತ್ಯಸ್ತ್ವನ್ಯಾನ್ಯತ್ರ ವಾಜೀ ತನಯೋ ವೀಳುಪಾಣಿಃ ।

ಸಹಸ್ರಪಾಥಾ ಅಕ್ಷರಾ ಸಮೇತಿ ॥ ೧೪ ॥

॥ ಪದಪಾಠಃ ॥

ಸಃ । ಇತ್ । ಅಗ್ನಿಃ । ಅಗ್ನೀನ್ । ಅತಿ । ಅಸ್ತು । ಅನ್ಯಾನ್ । ಯತ್ರ । ವಾಜೀ । ತನಯಃ । ವೀಳುऽಪಾಣಿಃ ।

ಸಹಸ್ರऽಪಾಥಾಃ । ಅಕ್ಷರಾ । ಸಂऽಏತಿ ॥ ೧೪ ॥

॥ ಸಾಯಣಭಾಷ್ಯಂ ॥

ಸ ಇತ್ ಸ ಏವಾಗ್ನಿರಾಹವನೀಯಾದಿರಸ್ಮದೀಯೋऽನ್ಯಾನಿತರಾನನ್ಯದೀಯಾನಗ್ನೀನತ್ಯಸ್ತು । ಅತಿಭವತು । ಯತ್ರ ಯಸ್ಮಿನ್ನಗ್ನೌ ವಾಜ್ಯಶನವಾನ್ ಬಲವಾನ್ವಾ ವೀಳುಪಾಣಿರ್ದೃಢಹಸ್ತಃ । ವೀಳು ಚ್ಯೌತ್ನ್ಯಮಿತಿ ಬಲನಾಮಸು ಪಾಠಾತ್ । ಸಹಸ್ರಪಾಥಾ ಬಹ್ವನ್ನೋ ಬಹುಸ್ಥಾನೋ ವಾ ಬಹೂದಕೋ ವಾ ತನಯೋऽಸ್ಮತ್ಪುತ್ರೋऽಕ್ಷರಾಕ್ಷರೇಣ ಕ್ಷಯರಹಿತೇನ ಸ್ತೋತ್ರೇಣ ಸಮೇತಿ ಸಮ್ಯಕ್ ಪರಿಚರನ್ನೇತಿ । ಸಮರ್ಥಪುತ್ರವತ ಏವಾಗ್ನಿರನ್ಯದೀಯಾನಗ್ನೀನಭಿಭವತೀತಿ ಭಾವಃ ॥

॥ ಪ್ರತಿಪದಾರ್ಥ ॥

**ಯತ್ರ**—ಯಾವ ಅಗ್ನಿಯಲ್ಲಿ । **ವಾಜೀ**—ಶಕ್ತಿಯುತನೂ । **ವೀಳುಪಾಣಿಃ**—ದೃಢವಾದ ಹಸ್ತವುಳ್ಳವನೂ । **ಸಹಸ್ರಪಾಥಾಃ**—ಪ್ರಭೂತವಾದ ಅನ್ನಸಂಪತ್ತುಳ್ಳವನ್ನೂ ಆದ । **ತನಯಃ**—ಪುತ್ರನು । **ಅಕ್ಷರಾ**—ಕ್ಷಯರಹಿತವಾದ ಸ್ತುತಿಯಿಂದ । **ಸಮೇತಿ**—ಸಮೀಪಿಸಿ ಪೂಜೆಯನ್ನರ್ಪಿಸುವನೋ । **ಸ ಇತ್ ಅಗ್ನಿಃ**—ಅದೇ ಅಗ್ನಿಯು । **ಅನ್ಯಾನ್**—ಇತರ ಯಜಮಾನರಿಗೆ ಸೇರಿದ । **ಅಗ್ನೀನ್**—ಅಗ್ನಿಗಳನ್ನು । **ಅತ್ಯಸ್ತು**—ಮೀರಿಸಿ ಪ್ರಕಾಶಿಸಲಿ.

॥ ಭಾವಾರ್ಥ ॥

ಯಾವ ಅಗ್ನಿಯಲ್ಲಿ ಶಕ್ತಿಯುತನೂ, ದೃಢವಾದ ಹಸ್ತವುಳ್ಳವನೂ, ಪ್ರಭೂತವಾದ ಅನ್ನಸಂಪತ್ತುಳ್ಳವನೂ ಆದ ಪುತ್ರನು ಕ್ಷಯರಹಿತವಾದ ಸ್ತುತಿಯಿಂದ ಸಮೀಪಿಸಿ ಪೂಜೆಯನ್ನರ್ಪಿಸುವನೋ ಅದೇ ಅಗ್ನಿಯು ಇತರ ಯಜಮಾನರಿಗೆ ಸೇರಿದ ಅಗ್ನಿಗಳನ್ನು ಮೀರಿಸಿ ಪ್ರಕಾಶಿಸಲಿ.

## English Translation.

May that fire (kindled by me) surpass all other fires, at which a vigorous son, firm-handed, possessing a thousand means (of living), co-operates in imperishable (praise).

॥ ಸಂಹಿತಾಪಾಠಃ ॥

ಸೇದಗ್ನಿರ್ಯೋ ವನುಷ್ಯತೋ ನಿಪಾತಿ ಸಮೇದ್ಧಾರಮಂಹಸ ಉರುಷ್ಯಾತ್ ।

ಸುಜಾತಾಸಃ ಪರಿ ಚರಂತಿ ವೀರಾಃ ॥ ೧೫ ॥

|| ಪದಪಾಠಃ ||

**ಸಃ । ಇತ್ । ಅಗ್ನಿಃ । ಯಃ । ವನುಷ್ಯತಃ । ನಿऽಪಾತಿ । ಸಂऽಏದ್ಧಾರಂ । ಅಂಹಸಃ । ಉರುಷ್ಯಾತ್ ।**

**ಸುऽಜಾತಾಸಃ । ಪರಿ । ಚರಂತಿ । ವೀರಾಃ ॥ ೧೫ ॥**

|| ಸಾಯಣಭಾಷ್ಯಂ ||

**ಯಃ ಸಮೇದ್ಧಾರಂ ಪ್ರಬೋಧಕಂ ವನುಷ್ಯತೋ ಹಿಂಸಕಾತ್ । ವನುಷ್ಯತಿರ್ಹಂತಿಕರ್ಮೇತಿ ಯಾಸ್ಕಃ । ಉರುಷ್ಯಾತ್ ಅಧಿಕಾದಂಹಸಃ ಪಾಪಾಚ್ಚ ನಿಪಾತಿ ಅತ್ಯಂತಂ ರಕ್ಷತಿ । ಯಂ ಚ ಸುಜಾತಾಸಃ ಸುಜನ್ಮಾನ ಏವ ವೀರಾಃ ಸ್ತೋತಾರಃ ಸುತಾ ವಾ ಪರಿ ಚರಂತಿ ಸ ಇತ್ ಸ ಏವಾಗ್ನಿಃ ॥**

|| ಪ್ರತಿಪದಾರ್ಥ ||

**ಯಃ**—ಯಾವ ಅಗ್ನಿಯು । **ಸಮೇದ್ಧಾರಂ**—ಪ್ರಜ್ವಲಿತನನ್ನಾಗಿ ಮಾಡುವ ಯಜಮಾನನನ್ನು । **ವನುಷ್ಯತಃ**—ಹಿಂಸಕನಾದ ಶತ್ರುವಿನಿಂದಲೂ । **ಉರುಷ್ಯಾತ್**—ಅತ್ಯಧಿಕವಾದ । **ಅಂಹಸಃ**—ಪಾಪದಿಂದಲೂ । **ನಿಪಾತಿ**—ಅಧಿಕವಾಗಿ ರಕ್ಷಿಸುವನೋ । **ಯಂ**—ಯಾವ ಅಗ್ನಿಯನ್ನು । **ಸುಜಾತಾಸಃ**—ಉತ್ತಮವಾದ ಜನ್ಮವುಳ್ಳ । **ವೀರಾಃ**—ಸ್ತುತಿಕರ್ತರು । **ಪರಿ ಚರಂತಿ**—ಉಪಚರಿಸುವರೋ । **ಸ ಇತ್ ಅಗ್ನಿಃ**—ಅದೇ ಅಗ್ನಿಯು (ಪೂಜಾರ್ಹನು).

॥ ಭಾವಾರ್ಥ ॥

ಯಾವ ಅಗ್ನಿಯು ತನ್ನನ್ನು ಪ್ರಜ್ವಲಿತನನ್ನಾಗಿ ಮಾಡುವ ಯಜಮಾನನ್ನು ಹಿಂಸಕನಾದ ಶತ್ರುವಿನಿಂದಲೂ ಅತ್ಯಧಿಕವಾದ ಪಾಪದಿಂದಲೂ ಅಧಿಕವಾಗಿ ರಕ್ಷಿಸುವನೋ, ಯಾವ ಅಗ್ನಿಯನ್ನು ಉತ್ತಮವಾದ ಜನ್ಮವುಳ್ಳ ಸ್ತುತಿಕರ್ತರು ಉಪಚರಿಸುವರೋ ಅದೇ ಅಗ್ನಿಯು ಪೂಜಾರ್ಹನು.

English Translation.

Verily he is Agni, who defends from the malevolent and from heinous sin (the worshipper) kindling (the fire): he (it is) whom the well-born worshippers adore.

॥ ಸಂಹಿತಾಪಾಠಃ ॥

ಅಯಂ ಸೋ ಅಗ್ನಿರಾಹುತಃ ಪುರುತ್ರಾ ಯಮೀಶಾನಃ ಸಮಿದಿಂಧೇ ಹವಿಷ್ಮಾನ್ ।

ಪರಿ ಯಮೇತ್ಯಧ್ವರೇಷು ಹೋತಾ ॥ ೧೬ ॥

॥ ಪದಪಾಠಃ ॥

ಅಯಂ । ಸಃ । ಅಗ್ನಿಃ । ಆऽಹುತಃ । ಪುರುऽತ್ರಾ । ಯಂ । ಈಶಾನಃ । ಸಂ । ಇತ್ । ಇಂಧೇ ।

ಹವಿಷ್ಮಾನ್ ।

ಪರಿ । ಯಂ । ಏತಿ । ಅಧ್ವರೇಷು । ಹೋತಾ ॥ ೧೬ ॥

॥ ಸಾಯಣಭಾಷ್ಯಂ ॥

ಯಮಗ್ನಿಮೀಶಾನಃ ಸಮೃದ್ಧ ಐಶ್ವರ್ಯಮಿಚ್ಛನ್ ವಾ ಹವಿಷ್ಮಾನ್ ಯಜಮಾನಃ ಸಮಿಂಧೇ ಸಮ್ಯಕ್ ದೀಪಯಂತಿ । ಯಂ ಚಾಧ್ವರೇಷು ಹಿಂಸಾರಹಿತೇಷು ಯಜ್ಞೇಷು ಹೋತಾ ದೇವಾನಾ-ಮಾಹ್ವಾತಾ ಪರ್ಯೇತಿ ಪರಿಗಚ್ಛತಿ । ಸೋऽಯಮಗ್ನಿಃ ಪುರುತ್ರಾ ಬಹುಷು ದೇಶೇಷು ಬಹುಷು ಯಜ್ಞೇಷು ವಾಹುತ ಆಹುತಿಭಿರಭಿಹುತಃ ॥

॥ ಪ್ರತಿಪದಾರ್ಥ ॥

**ಯಂ**—ಯಾವ ಅಗ್ನಿಯನ್ನು । **ಈಶಾನಃ**—ಸಂಪತ್ತಿಗೆಲ್ಲಾ ಪ್ರಭುವಾದವನೂ । **ಹವಿಷ್ಮಾನ್**—ಹವಿಷ್ಮಂತನೂ ಆದ ಯಜಮಾನನು । **ಸಮಿಂಧೇ**—ಪ್ರಜ್ವಲಿತನನ್ನಾಗಿ ಮಾಡುವನೋ । **ಯಂ ಇತ್**—ಯಾವ ಅಗ್ನಿಯನ್ನೇ । **ಅಧ್ವರೇಷು**—ಯಜ್ಞಗಳಲ್ಲಿ । **ಹೋತಾ**—ಹೋತೃವು । **ಪರಿ ಏತಿ**—ಪ್ರದಕ್ಷಿಣೆ ಮಾಡಿ ಪೂಜಿಸುವನೋ । **ಸಃ**—ಅಂತಹ । **ಅಯಂ ಅಗ್ನಿಃ**—ಈ ಅಗ್ನಿಯು । **ಪುರುತ್ರಾ**—ಅನೇಕ ಪ್ರದೇಶಗಳಲ್ಲಿ । **ಆಹುತಃ**—ಆಹುತಿಗಳನ್ನರ್ಪಿಸಲ್ಪಡುತ್ತಾನೆ.

॥ ಭಾವಾರ್ಥ ॥

ಸಂಪತ್ತಿಗೆ ಪ್ರಭುವಾದವನೂ, ಹವಿಷ್ಮಂತನೂ ಆದ ಯಜಮಾನನು ಯಾವ ಅಗ್ನಿಯನ್ನು ಪ್ರಜ್ವಲಿತನನ್ನಾಗಿ ಮಾಡುವನೋ ಯಾವ ಅಗ್ನಿಯನ್ನೇ ಯಜ್ಞಗಳಲ್ಲಿ ಹೋತೃವು ಪ್ರದಕ್ಷಿಣೆಮಾಡಿ ಪೂಜಿಸುವನೋ ಅಂತಹ ಈ ಅಗ್ನಿಯಲ್ಲಿಯೇ ಅನೇಕ ಪ್ರದೇಶಗಳಲ್ಲಿ ಎಲ್ಲರೂ ಆಹುತಿಗಳನ್ನರ್ಪಿಸುತ್ತಾರೆ.

English Translation.

This is the Agni invoked in many places: whom the prince, presenting oblations to, kindles, whom the ministrant priest circumambulates at sacrifices.

॥ ಸಂಹಿತಾಪಾಠಃ ॥

ತ್ವೇ ಅಗ್ನ ಆಹವನಾನಿ ಭೂರೀಶಾನಾಸ ಆ ಜುಹುಯಾಮ ನಿತ್ಯಾ ।

ಉಭಾ ಕೃಣ್ವಂತೋ ವಹತೂ ಮಿಯೇಧೇ ॥ ೧೭ ॥

॥ ಪದಪಾಠಃ ॥

**ತ್ವೇ ಇತಿ । ಅಗ್ನೇ । ಆಽಹವನಾನಿ । ಭೂರಿ । ಈಶಾನಾಸಃ । ಆ । ಜುಹುಯಾಮ । ನಿತ್ಯಾ ।**

**ಉಭಾ । ಕೃಣ್ವಂತಃ । ವಹತೂ ಇತಿ । ಮಿಯೇಧೇ ॥ ೧೭ ॥**

॥ ಸಾಯಣಭಾಷ್ಯಂ ॥

**ಹೇ ಅಗ್ನೇ ತ್ವೇ ತ್ವಯಿಶಾನಾಸೋ ಧನಾನಾಮೀಶ್ವರಾಃ ಸಂತೋ ನಿತ್ಯಾ ನಿತ್ಯಾನ್ಯಗ್ನಿಹೋತ್ರಾದೀನ್ಯುಭೋಭೌ ವಹತೂ ವಹನಹೇತೂ ಸ್ತೋತ್ರಂ ಶಸ್ತ್ರಂ ಚ ಕೃಣ್ವಂತಃ ಕುರ್ವಂತೋ ಮಿಯೇಧೇ ಯಜ್ಞೇ ಭೂರಿ ಬಹೂನ್ಯಾಹವನಾನಿ ಹವೀಂಷ್ಯಾ ಜುಹುಯಾಮ । ಆಜುಹವಾಮ ॥**

॥ ಪ್ರತಿಪದಾರ್ಥ ॥

**ಅಗ್ನೇ**—ಎಲೈ ಅಗ್ನಿಯೇ । **ಈಶಾನಾಸಃ**—ಸಂಪತ್ತಿಗೆ ಪ್ರಭುಗಳಾದ ನಾವು । **ನಿತ್ಯಾ**—ನಿತ್ಯವಾಗಿ ಅಗ್ನಿಹೋತ್ರಾದಿಗಳನ್ನೂ । **ವಹತೂ**—ನಿನ್ನನ್ನು ವಹಿಸಲು ಯೋಗ್ಯವಾದ । **ಉಭಾ**—ಶಸ್ತ್ರ ಮತ್ತು ಸ್ತೋತ್ರರೂಪವಾದ ಸ್ತುತಿಗಳನ್ನೂ । **ಕೃಣ್ವಂತಃ**—ಅರ್ಪಿಸುತ್ತಾ । **ಮಿಯೇಧೇ**—ಯಜ್ಞದಲ್ಲಿ । **ತ್ವೇ**—ನಿನ್ನಲ್ಲಿಯೇ । **ಭೂರಿ**—ಅತ್ಯಧಿಕವಾದ । **ಆಹವನಾನಿ**—ಹವಿಸ್ಸುಗಳನ್ನು । **ಆ ಜುಹುಯಾಮ**—ಅರ್ಪಿಸುವೆವು.

॥ ಭಾವಾರ್ಥ ॥

ಎಲೈ ಅಗ್ನಿಯೇ, ಸಂಪತ್ತಿಗೆ ಪ್ರಭುಗಳಾದ ನಾವು ಪ್ರತಿನಿತ್ಯವೂ ಅಗ್ನಿಹೋತ್ರಾದಿಗಳಲ್ಲಿ, ನಿನ್ನನ್ನು ವಹಿಸಲು ಯೋಗ್ಯವಾದ ಶಸ್ತ್ರ ಮತ್ತು ಸ್ತೋತ್ರರೂಪವಾದ ಸ್ತುತಿಗಳನ್ನು ಅರ್ಪಿಸುತ್ತಾ ಯಜ್ಞದಲ್ಲಿ ಅತ್ಯಧಿಕವಾದ ಹವಿಸ್ಸುಗಳನ್ನು ನಿನ್ನಲ್ಲಿಯೇ ಅರ್ಪಿಸುವೆವು.

English Translation.

To you, Agni, may we, who are of exalted rank, offer many perpetual oblations, (employing) means, (prayer and praise), attracting you to the sacrifice.

॥ ಸಂಹಿತಾಪಾಠಃ ॥

ಇಮೋ ಅಗ್ನೇ ವೀತತಮಾನಿ ಹವ್ಯಾಜಸ್ರೋ ವಕ್ಷಿ ದೇವತಾತಿಮಚ್ಛ ।

ಪ್ರತಿ ನ ಈಂ ಸುರಭೀಣಿ ವ್ಯಂತು ॥ ೧೮ ॥

॥ ಪದಪಾಠಃ ॥

ಇಮೋ ಇತಿ । ಅಗ್ನೇ । ವೀತತ್ಽತಮಾನಿ । ಹವ್ಯಾ । ಅಜಸ್ರಃ । ವಕ್ಷಿ । ದೇವಽತಾತಿಂ । ಅಚ್ಛ ।

ಪ್ರತಿ । ನಃ । ಈಂ । ಸುರಭೀಣಿ । ವ್ಯಂತು ॥ ೧೮ ॥

॥ ಸಾಯಣಭಾಷ್ಯಂ ॥

ಹೇ ಅಗ್ನೇ ತ್ವಮಜಸ್ರೋಽನವರತಃ ಸನ್ ಇಮೋ ಇಮಾನಿ ವೀತತಮಾನ್ಯತಿಶಯೇನ ಕಾಂತಾನಿ ಹವ್ಯಾ ಹವ್ಯಾನಿ ದೇವತಾತಿಂ ದೇವಾನಾಂ ಸಮೂಹಮಭಿ ವಕ್ಷಿ । ವಹ । ಅಚ್ಛ ಗಚ್ಛ ಚ । ನೋಽಸ್ಮದೀಯಾನಿ ಸುರಭೀಣಿ ಶೋಭನಾನೀಮೇತಾನಿ ಹವ್ಯಾನಿ ದೇವಾಃ ಪ್ರತಿ ವ್ಯಂತು । ಪ್ರತ್ಯೇಕಂ ಕಾಮಯಂತಾಂ ॥

॥ ಪ್ರತಿಪದಾರ್ಥ ॥

ಅಗ್ನೇ— ಎಲೈ ಅಗ್ನಿಯೇ । ಅಜಸ್ರಃ— ನಿತ್ಯನಾದ ನೀನು । ವೀತತಮಾನಿ— ಅತ್ಯಂತ ಕಾಂತಿಯುತವಾದ । ಇಮೋ ಹವ್ಯಾ— ಈ ಹವಿಸ್ಸುಗಳನ್ನು । ದೇವತಾತಿಂ ಅಚ್ಛ— ದೇವತೆಗಳ ಸಮೂಹಕ್ಕೆ । ವಕ್ಷಿ— ವಹಿಸಿಕೊಂಡು ಹೋಗು । ನಃ - ನಮ್ಮಿಂದ ಅರ್ಪಿತವಾದವೂ । ಸುರಭೀಣಿ— ಸುಗಂಧಯುಕ್ತವಾದವೂ ಆದ । ಈಂ— ಈ ಹವಿಸ್ಸುಗಳನ್ನು । ಪ್ರತಿ ವ್ಯಂತು— ದೇವತೆಗಳೆಲ್ಲರೂ ಪ್ರತ್ಯೇಕವಾಗಿ ಭುಜಿಸಲಿ.

॥ ಭಾವಾರ್ಥ ॥

ಎಲೈ ಅಗ್ನಿಯೇ, ನಿತ್ಯನಾದ ನೀನು ಅತ್ಯಂತ ಕಾಂತಿಯುತವಾದ ಈ ಹವಿಸ್ಸುಗಳನ್ನು ದೇವತೆಗಳ ಸಮೂಹಕ್ಕೆ ವಹಿಸಿಕೊಂಡು ಹೋಗು. ನಮ್ಮಿಂದ ಅರ್ಪಿತವಾದವೂ, ಸುಗಂಧಯುಕ್ತವಾದವೂ ಆದ ಈ ಹವಿಸ್ಸುಗಳನ್ನು ದೇವತೆಗಳೆಲ್ಲರೂ ಪ್ರತೇಕವಾಗಿ ಭುಜಿಸಲಿ.

English Translation.

Do you, who are imperishable, bear these most acceptable oblations to the presence of the assembly of the gods ; and may our fragrant (offering) gratify them severally.

॥ ಸಂಹಿತಾಪಾಠಃ ॥

ಮಾ ನೋ ಅಗ್ನೇಽವೀರತೇ ಪರಾ ದಾ ದುರ್ವಾಸಸೇಽಮತಯೇ ಮಾ ನೋ ಅಸ್ಯೈ ।

ಮಾ ನಃ ಕ್ಷುಧೇ ಮಾ ರಕ್ಷಸ ಋತಾವೋ ಮಾ ನೋ ದಮೇ ಮಾ ವನ ಆ ಜುಹೂರ್ಥಾಃ ॥ ೧೯ ॥

॥ ಪದಪಾಠಃ ॥

ಮಾ । ನಃ । ಅಗ್ನೇ । ಅವೀರತೇ । ಪರಾ । ದಾಃ । ದುಃऽವಾಸಸೇ । ಅಮತಯೇ । ಮಾ । ನಃ । ಅಸ್ಯೈ ಮಾ । ನಃ । ಕ್ಷುಧೇ । ಮಾ । ರಕ್ಷಸೇ । ಋತೇऽವಃ । ಮಾ । ನಃ । ದಮೇ । ಮಾ । ವನೇ । ಆ । ಜುಹೂರ್ಥಾಃ ॥ ೧೯ ॥

॥ ಸಾಯಣಭಾಷ್ಯಂ ॥

ಹೇ ಅಗ್ನೇ ನೋऽಸ್ಮಾನವೀರತೇऽಪುತ್ರತಾಯೈ ಮಾ ಪರಾ ದಾಃ । ಮಾ ದೇಹಿ । ದುರ್ವಾಸಸೇ ದುಷ್ಟವಸ್ತ್ರಾಯ ಚ ನೋ ಮಾ ಪರಾ ದಾಃ। ಅಸ್ಯಾ ಅಮತಯೇऽಭಿಹಾನ್ಯೈ ನೋऽಸ್ಮಾನ್ಮಾ ಪರಾ ದಾಃ। ಕ್ಷುಧೇऽಶನಾಯಾಯೈ ನೋऽಸ್ಮಾನ್ಮಾ ಚ ಪರಾ ದಾಃ । ರಕ್ಷಸೇ ಬಲಿನೇ ಚಾಸ್ಮಾನ್ಮಾ ಪರಾ ದಾಃ । ಹೇ ಋತಾವಃ ಸತ್ಯವನ್ನಗ್ನೇ ನೋऽಸ್ಮಾನ್ ದಮೇ ಗೃಹೇ ಮಾ ಜುಹೂರ್ಥಾಃ ಮಾ ಹಿಂಸೀಃ ॥ ಹುರ್ಛಾ ಕೌಟಿಲ್ಯ ಇತಿ ಧಾತುಃ ॥ ವನೇ ಚಾಸ್ಮಾನ್ಮಾ ಜುಹೂರ್ಥಾಃ ॥

॥ ಪ್ರತಿಪದಾರ್ಥ ॥

**ಅಗ್ನೇ**—ಎಲೈ ಅಗ್ನಿಯೇ । **ನಃ**—ನಮ್ಮನ್ನು । **ಅವೀರತೇ**—ಪುತ್ರರಹಿತವಾದ ಸ್ಥಿತಿಗೆ । **ಮಾ ಪರಾ ದಾಃ**—ಬಿಟ್ಟುಕೊಡಬೇಡ । **ದುರ್ವಾಸಸೇ**—ಜೀರ್ಣವಾದ ವಸ್ತ್ರಗಳನ್ನು ಹೊದೆಯುವಂತೆ ಮಾಡಬೇಡ । **ನಃ**—ನಮ್ಮನ್ನು । **ಅಸ್ಯೈ ಅಮತಯೇ**—ನಾಶಕರವಾದ ಸ್ಥಿತಿಗೂ । **ಮಾ**—ಎಡೆಮಾಡಬೇಡ । **ಕ್ಷುಧೇ**—ಹಸಿವಿನ ಸಂಕಟಕ್ಕೂ । **ನಃ**—ನಮ್ಮನ್ನು । **ಮಾ**—ಬಿಟ್ಟುಕೊಡಬೇಡ । **ರಕ್ಷಸೇ**—ಈ ರಾಕ್ಷಸನಿಗೂ । **ಮಾ**—ಬಿಟ್ಟು ಕೊಡಬೇಡ । **ಋತಾವಃ**—ಸತ್ಯವಂತನಾದ ಎಲೈ ಅಗ್ನಿಯೇ । **ನಃ**—ನಮ್ಮನ್ನು । **ದಮೇ**—ಗೃಹದಲ್ಲಿ । **ಮಾ ಆ ಜುಹೂರ್ಥಾಃ**—ಹಿಂಸಿಸಬೇಡ । **ವನೇ**—ವನದಲ್ಲಿಯೂ । **ಮಾ**—ಹಿಂಸಿಸಬೇಡ.

॥ ಭಾವಾರ್ಥ ॥

ಎಲೈ ಅಗ್ನಿಯೇ, ನಮ್ಮನ್ನು ಪುತ್ರರಹಿತವಾದ ಸ್ಥಿತಿಗೆ ಬಿಟ್ಟುಕೊಡಬೇಡ. ಜೀರ್ಣವಾದ ವಸ್ತ್ರಗಳನ್ನು ಹೊದೆಯುವಂತೆ ಮಾಡಬೇಡ. ನಾಶಕರವಾದ ಸ್ಥಿತಿಯಲ್ಲೂ ಇಡಬೇಡ. ಹಸಿವಿನ ಸಂಕಟಕ್ಕೆ ಪಾತ್ರರನ್ನಾಗಿ ಮಾಡಬೇಡ. ಈ ರಾಕ್ಷಸನಿಗೂ ಬಿಟ್ಟುಕೊಡಬೇಡ. ಸತ್ಯವಂತನಾದ ಎಲೈ ಅಗ್ನಿಯೇ, ನಮ್ಮನ್ನು ಗೃಹದಲ್ಲಾಗಲಿ ಅಥವಾ ವನದಲ್ಲಾಗಲಿ ಹಿಂಸಿಸಬೇಡ.

English Translation.

Relinquish us not, Agni, to the want of male offspring : nor to deficient clothing : nor to such destruction : leave us not to hunger, nor to the Rakshasas : expose us not, observer of truth, to evil, whether in the house or in the forest.

|| ಸಂಹಿತಾಪಾಠಃ ||

ನೂ ಮೇ ಬ್ರಹ್ಮಾಣ್ಯಗ್ನ ಉಚ್ಛಶಾಧಿ ತ್ವಂ ದೇವ ಮಘವದ್ಭ್ಯಃ ಸುಷೂದಃ।
ರಾತೌ ಸ್ಯಾಮೋಭಯಾಸ ಆ ತೇ ಯೂಯಂ ಪಾತ ಸ್ವಸ್ತಿಭಿಃ ಸದಾ ನಃ ||

|| ಪದಪಾಠಃ ||

ನು । ಮೇ । ಬ್ರಹ್ಮಾಣಿ । ಅಗ್ನೇ । ಉತ್ । ಶಶಾಧಿ । ತ್ವಂ । ದೇವ । ಮಘವತ್ऽಭ್ಯಃ । ಸುಸೂದಃ ।
ರಾತೌ । ಸ್ಯಾಮ । ಉಭಯಾಸಃ । ಆ । ತೇ । ಯೂಯಂ । ಪಾತ । ಸ್ವಸ್ತಿऽಭಿಃ । ಸದಾ । ನಃ || ೨೦ ||

|| ಸಾಯಣಭಾಷ್ಯಂ ||

ಹೇ ಅಗ್ನೇ ಮೇ ಮಮ ಮದರ್ಥಂ ಬ್ರಹ್ಮಾಣ್ಯನ್ನಾನಿ ನು ಕ್ಷಿಪ್ರಮುಚ್ಛಶಾಧಿ । ಉತ್ಕರ್ಷೇಣ ಶೋಧಿತಾನಿ ಕುರು । ಕಿಂಚ ಹೇ ದೇವ ದ್ಯೋತಮಾನಾಗ್ನೇ ಮಘವದ್ಭ್ಯೋऽಸ್ಮಭ್ಯಂ ಸುಷೂದಃ । ಅನ್ನಾನಿ ಪ್ರೇರಯ । ತೇ ತ್ವದೀಯಾಯಾಂ ರಾತೌ ದಾನ ಉಭಯಾಸಃ ಸ್ತೋತ್ರಿಣಃ ಶಸ್ತ್ರಿಣಶ್ಚ ಅಥವಾ ಸ್ತುವಂತೋ ಯಜಮಾನಶ್ಚ ವಯಮಾ ಸ್ಯಾಮ । ಆತ್ಯರ್ಥಂ ಭವೇಮ । ನೋऽಸ್ಮಾನ್ಯೂಯಂ ತ್ವತ್ಪರಿವಾರಾಶ್ಚ ಸರ್ವೇ ಸ್ವಸ್ತಿಭಿರವಿನಾಶಿಭಿರ್ಮಂಗಲೈಃ । ತಥಾ ಚ ಯಾಸ್ಕಃ । ಸ್ವಸ್ತೀತ್ಯವಿನಾಶನಾಮಾಸ್ತಿರಭಿಪೂಜಿತಃ ಸ್ವಸ್ತೀತಿ । ನಿ. ೩-೨೧ । ಸದಾ ಪಾತ । ರಕ್ಷತ ||

|| ಪ್ರತಿಪದಾರ್ಥ ||

**ಅಗ್ನೇ**—ಎಲೈ ಅಗ್ನಿಯೇ । **ಮೇ**—ನನಗಾಗಿ । **ಬ್ರಹ್ಮಾಣಿ**—ಅನ್ನಗಳನ್ನು । **ನು**—ಕ್ಷಿಪ್ರವಾಗಿ । **ಉಚ್ಛಶಾದಿ**—ಪವಿತ್ರಗೊಳಿಸು । **ದೇವ**—ಪ್ರಕಾಶಮಾನನಾದ ಎಲೈ ಅಗ್ನಿಯೇ । **ಮಘವದ್ಭ್ಯಃ**—ಹವಿಸ್ಸನ್ನು ಹೊಂದಿರುವ ನಮಗೆ । **ತ್ವಂ**—ನೀನು । **ಸುಷೂದಃ**—ಅನ್ನವನ್ನು ಒದಗಿಸು । **ತೇ**—ನಿನ್ನಿಂದ ಕೊಡಲ್ಪಡುವ । **ರಾತೌ**—ದಾನಕ್ಕೆ । **ಉಭಯಾಸಃ**—ಸ್ತುತಿಕರ್ತರೂ ಮತ್ತು ಯಜಮಾನರೂ ಸಹ । **ಆ ಸ್ಯಾಮ**—ಪಾತ್ರರಾಗಿರುವಂತಾಗಲಿ । **ಯೂಯಂ**—ನೀವೆಲ್ಲರೂ । **ನಃ**—ನಮ್ಮನ್ನು । **ಸದಾ**—ಯಾವಾಗಲೂ । **ಸ್ವಸ್ತಿಭಿಃ**—ಕಲ್ಯಾಣಗಳಿಂದ । **ಪಾತ**—ರಕ್ಷಿಸಿರಿ.

|| ಭಾವಾರ್ಥ ||

ಎಲೈ ಅಗ್ನಿಯೇ, ನನಗಾಗಿ ಅನ್ನಗಳನ್ನು ಕ್ಷಿಪ್ರವಾಗಿ ಪವಿತ್ರಗೊಳಿಸು. ಪ್ರಕಾಶಮಾನನಾದ ಎಲೈ ಅಗ್ನಿಯೇ, ಹವಿಸ್ಸನ್ನು ಹೊಂದಿರುವ ನಮಗೆ ನೀನು ಅನ್ನವನ್ನು ಒದಗಿಸು. ನಿನ್ನಿಂದ ಕೊಡಲ್ಪಡುವ ದಾನಕ್ಕೆ ಸ್ತುತಿಕರ್ತರೂ ಮತ್ತು ಯಜಮಾನರೂ ಸಹ ಪಾತ್ರರಾಗುವಂತಾಗಲಿ. ಎಲೈ ಅಗ್ನಿಯೇ, ನೀವೆಲ್ಲರೂ ನಮ್ಮನ್ನು ಯಾವಾಗಲೂ ಕಲ್ಯಾಣಗಳಿಂದ ರಕ್ಷಿಸಿರಿ.

English Translation.

Bestow upon me, Agni, quickly, abundant wholesome food: send sustenance, divine Agni, to those who are opuleut in oblations: may we, both (priests and employer), be comprehended in your munificence: ever cherish us with blessings.

॥ ಸಂಹಿತಾಪಾಠಃ ॥

ತ್ವಮಗ್ನೇ ಸುಹವೋ ರಣ್ವಸಂದೃಕ್ಸುದೀತೀ ಸೂನೋ ಸಹಸೋ ದಿದೀಹಿ ।
ಮಾ ತ್ವೇ ಸಚಾ ತನಯೇ ನಿತ್ಯ ಆ ಧಙ್ಮಾ ವೀರೋ ಅಸ್ಮನ್ನರ್ಯೋ ವಿ ದಾಸೀತ್ ॥ ೨೧ ॥

॥ ಪದಪಾಠಃ ॥

ತ್ವಂ । ಅಗ್ನೇ । ಸುಽಹವಃ । ರಣ್ವಽಸಂದೃಕ್ । ಸುಽದೀತೀ । ಸೂನೋ ಇತಿ । ಸಹಸಃ । ದಿದೀಹಿ ।
ಮಾ । ತ್ವೇ ಇತಿ । ಸಚಾ । ತನಯೇ । ನಿತ್ಯೇ । ಆ । ಧಕ್ । ಮಾ । ವೀರಃ । ಅಸ್ಮತ್ । ನರ್ಯಃ । ವಿ । ದಾಸೀತ್ ॥ ೨೧ ॥

॥ ಸಾಯಣಭಾಷ್ಯಂ ॥

ಸಹಸಃ ಸೂನೋ ಸಹಸಃ ಸುತ ಹೇ ಅಗ್ನೇ ಸುಹವಃ ಸ್ವಾಹ್ವಾನೋ ರಣ್ವಸಂದೃಕ್ ರಮಣೀಯಸಂದರ್ಶನಸ್ತ್ವಂ ಸುದೀತೀ ಶೋಭನಯಾ ದೀಪ್ತ್ಯಾ ದಿದೀಹಿ । ದೀಪ್ಯಸ್ವ । ಕಿಂಚ ತನಯೇ ನಿತ್ಯ ಔರಸೇ ಪುತ್ರೇ ತ್ವೇ ತ್ವಂ ಸಚಾ ಸಹಾಯಭೂತೋ ಮಾ ಆ ಧಕ್ । ಮಾಭಿಧಾಕ್ಷೀಃ । ಅಪಿ ಚಾಸ್ಮತ್ ಪೃಥಗ್ಭೂತೋಽಸ್ಮಾಕಂ ವಾ ॥ ಷಷ್ಠ್ಯರ್ಥೇ ಪಂಚಮೀ ॥ ವೀರಃ ಪುತ್ರೋ ನರ್ಯೋ ನರಹಿತೋ ಮಾ ವಿ ದಾಸೀತ್ । ನೋಪಕ್ಷೀಯೇತ ॥

॥ ಪ್ರತಿಪದಾರ್ಥ ॥

**ಸಹಸಃ ಸೂನೋ**—ಶಕ್ತಿಪುತ್ರನಾದ । **ಅಗ್ನೇ**—ಎಲೈ ಅಗ್ನಿಯೇ । **ಸುಹವಃ**—ಉತ್ತಮವಾದ ಆಹ್ವಾನಕ್ಕೆ ಪಾತ್ರನಾದವನೂ । **ರಣ್ವಸಂದೃಕ್**—ರಮಣೀಯವಾದ ದರ್ಶನವುಳ್ಳವನೂ ಆದ । **ತ್ವಂ**—ನೀನು **ಸುದೀತೀ**—ಅತ್ಯುತ್ತಮವಾದ ಕಾಂತಿಯಿಂದ । **ದೀದಿಹಿ**—ಪ್ರಕಾಶಿಸು । **ನಿತ್ಯೇ ತನಯೇ**—ಹೊಟ್ಟೆಯಲ್ಲಿ ಹುಟ್ಟಿದ ಮಗನ ವಿಷಯದಲ್ಲಿ ॥ **ತ್ವಂ**—ನೀನು । **ಸಚಾ**—ಅವನಿಗೆ ಸಹಾಯಮಾಡುವವನಾಗಿದ್ದು । **ಮಾ ಆ ಧಕ್**—ಅವನನ್ನು ಹಿಂಸಿಸಬೇಡ (ದಹಿಸಬೇಡ) । **ನರ್ಯಃ**—ಉಳಿದ ಮಾನವರಿಗೆ ಹಿತಕಾರಿಯೂ । **ವೀರಃ**—ವೀರನೂ ಆದ । **ಅಸ್ಮತ್**—ನಮ್ಮ ಪುತ್ರನು । **ಮಾ ವಿ ದಾಸೀತ್**—ನಾಶವನ್ನು ಹೊಂದದಿರಲಿ.

॥ ಭಾವಾರ್ಥ ॥

ಶಕ್ತಿಪುತ್ರನಾದ ಎಲೈ ಅಗ್ನಿಯೇ, ಉತ್ತಮವಾದ ಆಹ್ವಾನಕ್ಕೆ ಪಾತ್ರನಾದವನೂ, ರಮಣೀಯವಾದ ದರ್ಶನವುಳ್ಳವನೂ, ಆದ ನೀನು ಅತ್ಯುತ್ತಮವಾದ ಕಾಂತಿಯಿಂದ ಪ್ರಕಾಶಿಸು. ಹೊಟ್ಟೆಯಲ್ಲಿ ಹುಟ್ಟಿದ ಮಗನ ವಿಷಯದಲ್ಲಿ ನೀನು ಅವನಿಗೆ ಸಹಾಯಮಾಡುವವನಾಗಿದ್ದು ಅವನನ್ನು ಹಿಂಸಿಸಬೇಡ. ಉಳಿದ ಮಾನವರಿಗೆ ಹಿತಕಾರಿಯೂ ಶೂರನೂ ಆದ ನಮ್ಮ ಪುತ್ರನು ನಾಶವನ್ನು ಹೊಂದದಿರಲಿ.

English Translation.

Shine with bright lustre, Agni, son of strength, you who are earnestly invoked, and of pleasant aspect : consume not the begotten son with whom you are associated : let not our male offspring, beneficial to man, perish.

॥ ಸಂಹಿತಾಪಾಠಃ ॥

ಮಾ ನೋ ಅಗ್ನೇ ದುರ್ಭೃತಯೇ ಸಚೈಷು ದೇವೇದ್ಧೇಷ್ವಗ್ನಿಷು ಪ್ರ ವೋಚಃ ।
ಮಾ ತೇ ಅಸ್ಮಾನ್ದುರ್ಮತಯೋ ಭೃಮಾಚ್ಚಿದ್ದೇವಸ್ಯ ಸೂನೋ ಸಹಸೋ ನಶಂತ ॥ ೨೨ ॥

॥ ಪದಪಾಠಃ ॥

ಮಾ । ನಃ । ಅಗ್ನೇ । ದುಃಽಭೃತಯೇ । ಸಚಾ । ಏಷು । ದೇವಽಇದ್ಧೇಷು । ಅಗ್ನಿಷು । ಪ್ರ । ವೋಚಃ । ಮಾ । ತೇ । ಅಸ್ಮಾನ್ । ದುಃಽಮತಯಃ । ಭೃಮಾತ್ । ಚಿತ್ । ದೇವಸ್ಯ । ಸೂನೋ ಇತಿ । ಸಹಸಃ । ನಶಂತ ॥ ೨೨ ॥

॥ ಸಾಯಣಭಾಷ್ಯಂ ॥

ಹೇ ಅಗ್ನೇ ಸಚಾ ಸಹಾಯಭೂತಸ್ತ್ವಂ ದೇವೇದ್ಧೇಷ್ವೃತ್ವಿಗ್ಭಿಃ ಸಮಿದ್ಧೇಷ್ವೇಷ್ವಗ್ನಿಷು ದುರ್ಭೃತಯೇ ಕೃಚ್ಛ್ರಭರಣಾಯ ನೋಽಸ್ಮಾನ್ಮಾ ಪ್ರ ವೋಚಃ । ನ ಬ್ರೂಹಿ । ತ್ವತ್ಸಹಾಯಭೂತಾ ಅಗ್ನಯೋ ಯಥಾ ಮಾಮಕೃಚ್ಛ್ರೇಣ ಬಿಭೃಯುಸ್ತಥಾ ಬ್ರೂಹೀತ್ಯರ್ಥಃ । ಕಿಂಚ ಸಹಸಃ ಸೂನೋ ಹೇ ಬಲಸ್ಯ ಪುತ್ರಾಗ್ನೇ ದೇವಸ್ಯ ದ್ಯೋತಮಾನಸ್ಯ ತೇ ತವ ದುರ್ಮತಯೋ ನಿಗ್ರಹಬುದ್ಧಯೋ ಭೃಮಾಚ್ಚಿತ್ ಭ್ರಮಾದಪಿ ॥ ಅತ ಸಂಪ್ರಸಾರಣಂ ಛಾಂದಸಂ ॥ ಪ್ರಮಾದಾದಪೀತ್ಯರ್ಥಃ । ಅಸ್ಮಾನ್ಮಾ ನಶಂತ । ಮಾ ವ್ಯಾಪ್ನುವಂತು । ನಶದಿತಿ ವ್ಯಾಪ್ತಿಕರ್ಮಸು ಪಾಠಾತ್ ॥

॥ ಪ್ರತಿಪದಾರ್ಥ ॥

**ಅಗ್ನೇ**—ಎಲೈ ಅಗ್ನಿಯೇ | **ಸಚಾ**—ನಮಗೆ ಸಹಾಯಕನಾಗಿರುವ ನೀನು | **ದೇವೇದ್ಧೇಷು**—ಋತ್ವಿಕ್ಕುಗಳಿಂದ ಪ್ರಜ್ವಲಿತವಾದ | **ಏಷು ಅಗ್ನಿಷು**—ಈ ಅಗ್ನಿಗಳಲ್ಲಿ | **ದುರ್ಭೃತಯೇ**—ನಮಗೆ ಕಠಿನವಾದ ಸನ್ನಿವೇಶವೊದಗುವಂತೆ | **ನಃ**—ನಮ್ಮನ್ನು | **ಮಾ ಪ್ರ ವೋಚಃ**—ಶಪಿಸಬೇಡ (ಅಥವಾ ನನಗೆ ಕಷ್ಟವನ್ನುಂಟು ಮಾಡುವಂತೆ ಹೇಳಬೇಡ) | **ಸಹಸಃ ಸೂನೋ**—ಶಕ್ತಿಪುತ್ರನಾದ ಎಲೈ ಅಗ್ನಿಯೇ | **ದೇವಸ್ಯ**—ದೇವತಾತ್ಮನಾದ | **ತೇ**—ನಿನ್ನ | **ದುರ್ಮತಯಃ**—ನಿಗ್ರಹಾತ್ಮಕವಾದ ಬುದ್ಧಿಯು | **ಭ್ರಮಾಚ್ಚಿತ್**—ನಿನಗೆ ಮರೆವಿನ ಕಾಲದಲ್ಲಿಯೂ ಕೂಡ | **ಅಸ್ಮಾನ್**—ನಮ್ಮನ್ನು | **ಮಾ ನಶಂತ**—ಸಮೀಪಿಸದಿರಲಿ.

॥ ಭಾವಾರ್ಥ ॥

ಎಲೈ ಅಗ್ನಿಯೇ, ಋತ್ವಿಕ್ಕುಗಳಿಂದ ಪ್ರಜ್ವಲಿತರಾದ ಈ ಅಗ್ನಿಗಳಲ್ಲಿ ನಮಗೆ ಕಠಿನವಾದ ಸನ್ನಿವೇಶವನ್ನು ಒದಗಿಸುವಂತೆ ತಿಳಿಸಬೇಡ. ಅಥವಾ ನಮಗೆ ಆ ರೀತಿ ಶಾಪವನ್ನು ಕೊಡಬೇಡ. ಶಕ್ತಿಪುತ್ರನಾದ ಎಲೈ ಅಗ್ನಿಯೇ, ದೇವತಾತ್ಮನಾದ ನಿನ್ನ ನಿಗ್ರಹಾತ್ಮಕವಾದ ಬುದ್ಧಿಯು ನಿನಗೆ ಮರೆವಿನ ಕಾಲದಲ್ಲಿಯೂ ಸಹ ನಮ್ಮನ್ನು ಸಮೀಪಿಸದಿರಲಿ.

English Translation.

Command not the fires kindled by the priests with which you are united to work us evil : let not the displeasure, even in error, of you, the son of strength, who are divine, fall upon us.

॥ ಸಂಹಿತಾಪಾಠಃ ॥

ಸ ಮರ್ತೋ॑ ಅಗ್ನೇ ಸ್ವನೀಕ ರೇ॒ವಾನಮ॑ರ್ತ್ಯೇ॒ ಯ ಆ॑ಜು॒ಹೋತಿ॑ ಹ॒ವ್ಯಂ ।
ಸ ದೇ॒ವತಾ॑ ವ॒ಸುವನಿಂ॑ ದಧಾತಿ॒ ಯಂ ಸೂ॒ರಿರ॒ರ್ಥೀ ಪೃ॒ಚ್ಛಮಾ॑ನ॒ ಏತಿ॑ ॥೨೩॥

॥ ಪದಪಾಠಃ ॥

ಸಃ । ಮರ್ತಃ॑ । ಅ॒ಗ್ನೇ॒ । ಸು॒ಽಅ॒ನೀ॒ಕ॒ । ರೇ॒ವಾನ್ । ಅಮ॑ರ್ತ್ಯೇ । ಯಃ । ಆ॒ಽಜು॒ಹೋತಿ॑ । ಹ॒ವ್ಯಂ ।
ಸಃ । ದೇ॒ವತಾ॑ । ವ॒ಸು॒ಽವನಿಂ॑ । ದ॒ಧಾ॒ತಿ॒ । ಯಂ । ಸೂ॒ರಿಃ । ಅ॒ರ್ಥೀ । ಪೃ॒ಚ್ಛಮಾ॑ನಃ । ಏತಿ॑ ॥ ೨೩ ॥

॥ ಸಾಯಣಭಾಷ್ಯಂ ॥

ಸ್ವನೀಕ ಸುತೇಜಸ್ಕ ಹೇ ಅಗ್ನೇ ಅಮರ್ತ್ಯೇಽಮನುಷ್ಯೇ ದೇವತಾತ್ಮನಿ ತ್ವಯಿ ಹವ್ಯಂ ಹವಿರ್ಯ ಆಜುಹೋತಿ ಸ ಮರ್ತೋ ಮನುಷ್ಯೋ ರೇವಾನ್ ಧನವಾನ್ಭವತಿ । ಯಂ ಮರ್ತ್ಯಂ ಸೂರಿಃ

ಪ್ರಾಜ್ಞೋಽರ್ಥೀ ಧನಾದಿಕಾಮಃ ಪೃಚ್ಛಮಾನೋಽಸಾವುದಾರಃ ಕ್ವಾಸ್ತ ಇತಿ ಪೃಚ್ಛನ್ನೇತಿ ಅಭಿಗಚ್ಛತಿ ಸ ಏವ ಮನುಷ್ಯೋ ದೇವತಾ ದೇವತಾಭ್ಯೋ ವಸುವನಿಂ ಧನಪೋಷಂ ದದಾತಿ। ಯದ್ವಾ। ಸ ದೇವತಾಗ್ನಿರ್ವಸುವನಿಂ ಯಜಮಾನಂ ದಧಾತಿ ಧಾರಯತಿ ಯಮಗ್ನಿಂ ಸೂರಿಃ ಸ್ತೋತಾರ್ಥೀ ಪ್ರಯೋಜನವಾನ್ ಪೃಚ್ಛಮಾನಃ ಕೋಽಸಾವಗ್ನಿರಿತಿ ಪೃಚ್ಛಮಾನ ಏತಿ ॥

॥ ಪ್ರತಿಪದಾರ್ಥ ॥

**ಸ್ವನೀಕ**—ಉತ್ತಮವಾದ ತೇಜಸ್ಸುಳ್ಳ । **ಅಗ್ನೇ**—ಎಲೈ ಅಗ್ನಿಯೇ । **ಅಮರ್ತ್ಯೇ**—ದೇವತಾತ್ಮನಾದ ನಿನ್ನಲ್ಲಿ। **ಹವ್ಯಂ**—ಹವಿಸ್ಸನ್ನು । **ಯಃ**—ಯಾವ ಯಜ್ಞಕರ್ತನು। **ಆಜುಹೋತಿ**—ಅರ್ಪಿಸುವನೋ। **ಸಃ ಮರ್ತಃ**—ಅದೇ ಮಾನವನು । **ರೇವಾನ್**—ಧನವಂತನಾಗುತ್ತಾನೆ। **ಯಂ**—ಯಾವ ಮಾನವನನ್ನು । **ಸೂರಿಃ**—ಪ್ರಾಜ್ಞನಾದ । **ಅರ್ಥೀ**—ಯಾಚಕನು । **ಪೃಚ್ಛಮಾನಃ**—ಆ ಉದಾರಿಯೆಲ್ಲಿ ಎಂದು ಪ್ರಶ್ನಿಸುತ್ತಾ । **ಏತಿ**—ಅವನ ಸಹಾಯವನ್ನು ಪಡೆಯಲು ಬರುವನೋ । **ಸಃ**—ಅವನು । **ದೇವತಾ**—ದೇವತೆಗಳಿಗೆ। **ವಸುವನಿಂ**—ಧನಾಧಿಕ್ಯವನ್ನು । **ದಧಾತಿ**—ಧರಿಸುತ್ತಾನೆ (ಹವಿಸ್ಸಿನ ರೂಪದ ಧನವನ್ನು ಹೊಂದುತ್ತಾನೆ).

॥ ಭಾವಾರ್ಥ ॥

ಉತ್ತಮವಾದ ತೇಜಸ್ಸುಳ್ಳ ಎಲೈ ಅಗ್ನಿಯೇ, ದೇವತಾತ್ಮನಾದ ನಿನ್ನಲ್ಲಿ ಹವಿಸ್ಸನ್ನು ಯಾವ ಯಜ್ಞಕರ್ತನು ಅರ್ಪಿಸುವನೋ, ಆ ಮಾನವನು ಧನವಂತನಾಗುತ್ತಾನೆ. ಯಾವ ಮಾನವನನ್ನು ಪ್ರಾಜ್ಞನಾದ ಯಾಚಕನು ಆ ಉದಾರಿಯೆಲ್ಲಿ ಎಂದು ಪ್ರಶ್ನಿಸುತ್ತಾ ಅವನ ಸಹಾಯವನ್ನು ಪಡೆಯಲು ಬರುವನೋ, ಅವನಿಗೆ ಅಗ್ನಿಯು ದೇವತೆಗಳಿಗೆ ಅರ್ಪಿಸಲು ಹವಿಸ್ಸಿನ ರೂಪದ ಧನವನ್ನು ಒದಗಿಸಿಕೊಡುತ್ತಾನೆ.

## English Translation

Radiant Agni, the mortal who offers oblations to the immortal becomes affluent : that deity (Agni) favours the presenter of (sacrificial) wealth, to whom the devout solicitant inquiring applies.

॥ ಸಂಹಿತಾಪಾಠಃ ॥

ಮಹೋ ನೋ ಅಗ್ನೇ ಸುವಿತಸ್ಯ ವಿದ್ವಾನ್ರಯಿಂ ಸೂರಿಭ್ಯ ಆ ವಹಾ ಬೃಹಂತಂ ।

ಯೇನ ವಯಂ ಸಹಸಾವನ್ಮದೇಮಾವಿಕ್ಷಿತಾಸ ಆಯುಷಾ ಸುವೀರಾಃ॥೨೪॥

|| ಪದಪಾಠಃ ||

**ಮಹಃ । ನಃ । ಅಗ್ನೇ । ಸುವಿತಸ್ಯ । ವಿದ್ವಾನ್ । ರಯಿಂ । ಸೂರಿಽಭ್ಯಃ । ಆ । ವಹ । ಬೃಹಂತಂ ।**

**ಯೇನ । ವಯಂ । ಸಹಸಾವನ್ । ಮದೇಮ । ಅವಿಽಕ್ಷಿತಾಸಃ । ಆಯುಷಾ । ಸುಽವೀರಾಃ ॥ ೨೪ ॥**

॥ ಸಾಯಣಭಾಷ್ಯಂ ॥

**ಹೇ ಅಗ್ನೇ ನೋಽಸ್ಮದೀಯಸ್ಯ ಮಹೋ ಮಹತಃ ಸುವಿತಸ್ಯ ಕಲ್ಯಾಣಸ್ಯ ಕರ್ಮಣೋ ವಿದ್ವಾನ್ । ಅಸ್ಮದೀಯಂ ಕಲ್ಯಾಣಂ ಕರ್ಮ ಜಾನನ್ನಿತ್ಯರ್ಥಃ । ತ್ವಂ ಸೂರಿಭ್ಯಃ ಸ್ತೋತೃಭ್ಯೋಽಸ್ಮಭ್ಯಂ ಬೃಹಂತಂ ಮಹಾಂತಂ ರಯಿಂ ಧನಮಾ ವಹ । ರಯಿಮೇವ ವಿಶಿನಷ್ಟಿ । ಹೇ ಸಹಸಾವನ್ ಬಲವನ್ನಗ್ನೇ ಯೇನ ಧನೇನ ವಯಂ ಸ್ತೋತಾರೋಽವಿಕ್ಷಿತಾಸೋಽವಿಕ್ಷೀಣಾ ಆಯುಷಾ ಪೂರ್ಣಾಯುಷಃ ಸುವೀರಾಃ ಕಲ್ಯಾಣಪುತ್ರಪೌತ್ರಾಶ್ಚ ಸಂತೋ ಮದೇಮ ಹೃಷ್ಯೇಮ ॥**

॥ ಪ್ರತಿಪದಾರ್ಥ ॥

**ಅಗ್ನೇ**—ಎಲೈ ಅಗ್ನಿಯೇ । **ನಃ** ನಮ್ಮ । **ಮಹಃ**—ಮಹತ್ತಾದುದೂ । **ಸುವಿತಸ್ಯ**—ಕಲ್ಯಾಣ ರೂಪವಾದುದೂ ಆದ ಕರ್ಮದ ಸ್ವರೂಪವನ್ನು । **ವಿದ್ವಾನ್**—ಅರಿತವನಾಗಿ । **ಸೂರಿಭ್ಯಃ**—ಸ್ತೋತೃಗಳಾದ ನಮಗೆ । **ಬೃಹಂತಂ**—ಅತ್ಯಂತ ಪ್ರಭೂತವಾದ । **ರಯಿಂ**—ಧನವನ್ನು । **ಆ ವಹ**—ವಹಿಸಿ ತಂದುಕೊಡು । **ಸಹಸಾವನ್**—ಶಕ್ತಿಯುತನಾದ ಎಲೈ ಅಗ್ನಿಯೇ । **ಯೇನ**—ಯಾವ ಆದೇ ಧನದಿಂದ । **ವಯಂ**—ಸ್ತುತಿ ಕರ್ತರಾದ ನಾವು । **ಅವಿಕ್ಷಿತಾಸಃ**—ಯಾವ ನಾಶವನ್ನೂ ಹೊಂದದೆಯೂ । **ಆಯುಷಾ**—ಪೂರ್ಣವಾದ ಆಯುಸ್ಸುಳ್ಳವರಾಗಿಯೂ । **ಸುವೀರಾಃ**—ಮತ್ತು ಉತ್ತಮವಾದ ಪುತ್ರಾದಿಗಳುಳ್ಳವರಾಗಿಯೂ । **ಮದೇಮ**—ಹರ್ಷವನ್ನು ಹೊಂದುವಂತಾಗಲಿ.

|| ಭಾವಾರ್ಥ ||

ಎಲೈ ಅಗ್ನಿಯೇ, ನಮ್ಮ ಮಹತ್ತಾದುದೂ, ಕಲ್ಯಾಣಾತ್ಮಕವೂ ಆದ ಕರ್ಮದ ಸ್ವರೂಪವನ್ನು ಅರಿತವನಾಗಿ ಸ್ತೋತೃಗಳಾದ ನಮಗೆ ಅತಿ ಪ್ರಭೂತವಾದ ಧನವನ್ನು ವಹಿಸಿ ತಂದುಕೊಡು. ಶಕ್ತಿಯುತನಾದ ಎಲೈ ಅಗ್ನಿಯೇ, ಯಾವ ಅದೇ ಧನದಿಂದ ಸ್ತುತಿಕರ್ತರಾದ ನಾವು ಯಾವ ನಾಶವನ್ನೂ ಹೊಂದದೆಯೂ ಪೂರ್ಣವಾಗಿ ಆಯುಸ್ಸುಳ್ಳವರಾಗಿಯೂ ಮತ್ತು ಉತ್ತಮವಾದ ಪುತ್ರಾದಿಗಳುಳ್ಳವರಾಗಿಯೂ, ಹರ್ಷವನ್ನು ಹೊಂದುವಂತಾಗಲಿ.

English Translation.

Agni, you are cognizant of our solemn and auspicious (worship); bring to the worshippers abundant riches, whereby, mighty Agni, we, blessed with uncontracted life, and excellent male descendants, may be happy.

|| ಸಂಹಿತಾಪಾಠಃ ||

ನೂ ಮೇ ಬ್ರಹ್ಮಾಣ್ಯಗ್ನ ಉಚ್ಛಶಾಧಿ ತ್ವಂ ದೇವ ಮಘವದ್ಭ್ಯಃ ಸುಷೂದಃ।
ರಾತೌ ಸ್ಯಾಮೋಭಯಾಸ ಆ ತೇ ಯೂಯಂ ಪಾತ ಸ್ವಸ್ತಿಭಿಃ ಸದಾ ನಃ ||

|| ಪದಪಾಠಃ ||

ನು । ಮೇ । ಬ್ರಹ್ಮಾಣಿ । ಅಗ್ನೇ । ಉತ್ । ಶಶಾಧಿ । ತ್ವಂ । ದೇವ । ಮಘವತ್ಽಭ್ಯಃ । ಸುಸೂದಃ ।
ರಾತೌ । ಸ್ಯಾಮ । ಉಭಯಾಸಃ । ಆ । ತೇ । ಯೂಯಂ । ಪಾತ । ಸ್ವಸ್ತಿಽಭಿಃ । ಸದಾ । ನಃ ॥ ೨೦ ॥

॥ ಸಾಯಣಭಾಷ್ಯಂ ॥

ಹೇ ಅಗ್ನೇ ಮೇ ಮಮ ಮದರ್ಥಂ ಬ್ರಹ್ಮಾಣ್ಯನ್ನಾನಿ ನು ಕ್ಷಿಪ್ರಮುಚ್ಛಶಾಧಿ । ಉತ್ಕರ್ಷೇಣ ಶೋಧಿತಾನಿ ಕುರು । ಕಿಂಚ ಹೇ ದೇವ ದ್ಯೋತಮಾನಾಗ್ನೇ ಮಘವದ್ಭ್ಯೋಽಸ್ಮಭ್ಯಂ ಸುಷೂದಃ । ಅನ್ನಾನಿ ಪ್ರೇರಯ । ತೇ ತ್ವದೀಯಾಯಾಂ ರಾತೌ ದಾನ ಉಭಯಾಸಃ ಸ್ತೋತ್ರಿಣಃ ಶಸ್ತ್ರಿಣಶ್ಚ ಅಥವಾ ಸ್ತುವಂತೋ ಯಜಮಾನಶ್ಚ ವಯಮಾ ಸ್ಯಾಮ । ಅತ್ಯರ್ಥಂ ಭವೇಮ । ನೋಽಸ್ಮಾನ್ಯೂಯಂ ತ್ವತ್ಪರಿವಾರಾಶ್ಚ ಸರ್ವೇ ಸ್ವಸ್ತಿಭಿರವಿನಾಶಿಭಿರ್ಮಂಗಲೈಃ । ತಥಾ ಚ ಯಾಸ್ಕಃ । ಸ್ವಸ್ತೀತ್ಯವಿನಾಶನಾಮಾಸ್ತಿರಭಿಪೂಜಿತಃ ಸ್ವಸ್ತೀತಿ । ನಿ. ೩-೨೧ । ಸದಾ ಪಾತ । ರಕ್ಷತ ॥

॥ ಪ್ರತಿಪದಾರ್ಥ ॥

**ಅಗ್ನೇ**—ಎಲೈ ಅಗ್ನಿಯೇ । **ಮೇ**—ನನಗಾಗಿ । **ಬ್ರಹ್ಮಾಣಿ**—ಅನ್ನಗಳ್ನು । **ನು**—ಕ್ಷಿಪ್ರವಾಗಿ । **ಉಚ್ಛಶಾಧಿ**—ಪವಿತ್ರಗೊಳಿಸು । **ದೇವ**—ಪ್ರಕಾಶಮಾನನಾದ ಎಲೈ ಅಗ್ನಿಯೇ । **ಮಘವದ್ಭ್ಯಃ**—ಹವಿಸ್ಸನ್ನು ಹೊಂದಿರುವ ನಮಗೆ । **ತ್ವಂ**—ನೀನು । **ಸುಷೂದಃ**—ಅನ್ನವನ್ನು ಒದಗಿಸು । **ತೇ**—ನಿನ್ನಿಂದ ಕೊಡಲ್ಪಡುವ । **ರಾತೌ**—ದಾನಕ್ಕೆ । **ಉಭಯಾಸಃ**—ಸ್ತುತಿಕರ್ತರೂ ಮತ್ತು ಯಜಮಾನರೂ ಸಹ । **ಆ ಸ್ಯಾಮ**—ಪಾತ್ರರಾಗಿರುವಂತಾಗಲಿ । **ಯೂಯಂ**—ನೀವೆಲ್ಲರೂ । **ನಃ**—ನಮ್ಮನ್ನು । **ಸದಾ**—ಯಾವಾಗಲೂ । **ಸ್ವಸ್ತಿಭಿಃ**—ಕಲ್ಯಾಣಗಳಿಂದ । **ಪಾತ**—ರಕ್ಷಿಸಿರಿ.

॥ ಭಾವಾರ್ಥ ॥

ಎಲೈ ಅಗ್ನಿಯೇ, ನನಗಾಗಿ ಅನ್ನಗಳನ್ನು ಕ್ಷಿಪ್ರವಾಗಿ ಪವಿತ್ರಗೊಳಿಸು. ಪ್ರಕಾಶಮಾನನಾದ ಎಲೈ ಅಗ್ನಿಯೇ, ಹವಿಸ್ಸನ್ನು ಹೊಂದಿರುವ ನಮಗೆ ನೀನು ಅನ್ನವನ್ನು ಒದಗಿಸು. ನಿನ್ನಿಂದ ಕೊಡಲ್ಪಡುವ ದಾನಕ್ಕೆ ಸ್ತುತಿಕರ್ತರೂ ಮತ್ತು ಯಜಮಾನರೂ ಸಹ ಪಾತ್ರರಾಗುವಂತಾಗಲಿ. ಎಲೈ ಅಗ್ನಿಯೇ, ನೀವೆಲ್ಲರೂ ನಮ್ಮನ್ನು ಯಾವಾಗಲೂ ಕಲ್ಯಾಣಗಳಿಂದ ರಕ್ಷಿಸಿರಿ.

## English Translation.

Bestow upon me, Agni, quickly, abundant wholesome food: send sustenance, divine Agni, to those who are opuleut in oblations: may we, both (priests and employer), be comprehended in your munificence: ever cherish us with blessings.

ವೇದಾರ್ಥಸ್ಯ ಪ್ರಕಾಶೇನ ತಮೋ ಹಾರ್ದಂ ನಿವಾರಯನ್ ।
ಪುಮರ್ಥಾಂಶ್ಚತುರೋ ದೇಯಾದ್ವಿದ್ಯಾತೀರ್ಥಮಹೇಶ್ವರಃ ॥

ಇತಿ ಶ್ರೀಮದ್ರಾಜಾಧಿರಾಜ ಪರಮೇಶ್ವರ ವೈದಿಕಮಾರ್ಗಪ್ರವರ್ತಕ ಶ್ರೀ ವೀರಬುಕ್ಕಭೂಪಾಲಸಾಮ್ರಾಜ್ಯ-
ಧುರಂಧರೇಣ ಸಾಯಣಾಚಾರ್ಯೇಣ ವಿರಚಿತೇ ಮಾಧವೀಯೇ ವೇದಾರ್ಥಪ್ರಕಾಶೇ
ಋಕ್ಸಂಹಿತಾಭಾಷ್ಯೇ ಪಂಚಮಾಷ್ಟಕೇ ಪ್ರಥಮೋಽಧ್ಯಾಯಃ ಸಮಾಪ್ತಃ

॥ ಓಂ ತತ್ಸತ್ ॥

ಇಲ್ಲಿಗೆ ಶ್ರೀಸಾಯಣಭಾಷ್ಯಸಹಿತವೂ ಕರ್ನಾಟಕ ಭಾಷಾನುವಾದಯುತವೂ ಆದ ಋಗ್ವೇದಸಂಹಿತೆಯಲ್ಲಿ
ಐದನೆಯ ಅಷ್ಟಕದಲ್ಲಿ ಮೊದಲನೆಯ ಅಧ್ಯಾಯವು ಸಮಾಪ್ತವಾದುದು.

ಯದಕ್ಷರಪದಭ್ರಷ್ಟಂ ಮಾತ್ರಾಹೀನಂ ತು ಯದ್ಭವೇತ್ ।
ತತ್ಸರ್ವಂ ಕ್ಷಮ್ಯತಾಂ ದೇವ ವಾಗೀಶ್ವರ ನಮೋಽಸ್ತು ತೇ ॥

॥ ಶುಭಂ ಭೂಯಾತ್ ॥

॥ ಮಂಗಳಂ ॥





॥ ಶ್ರೀಃ ॥

॥ ಶ್ರೀ ಗಣಾಧಿಪತಯೇ ನಮಃ ॥

ವಾಗೀಶಾದ್ಯಾಃ ಸುಮನಸಃ ಸರ್ವಾರ್ಥಾನಾಮುಪಕ್ರಮೇ ।
ಯಂ ನತ್ವಾ ಕೃತಕೃತ್ಯಾಃ ಸ್ಯುಸ್ತಂ ನಮಾಮಿ ಗಜಾನನಂ ॥
ಯಸ್ಯ ನಿಃಶ್ವಸಿತಂ ವೇದಾ ಯೋ ವೇದೇಭ್ಯೋಽಖಿಲಂ ಜಗತ್ ।
ನಿರ್ಮಮೇ ತಮಹಂ ವಂದೇ ವಿದ್ಯಾತೀರ್ಥಮಹೇಶ್ವರಂ ॥
ವೇದಃ ಶಿವಃ ಶಿವೋ ವೇದೋ ವೇದಾಧ್ಯಾಯೀ ಸದಾಶಿವಃ ।
ತಸ್ಮಾತ್ಸರ್ವಪ್ರಯತ್ನೇನ ವೇದಮೇವ ಸದಾ ಜಪೇತ್ ॥

## ಸಾಯಣಭಾಷ್ಯಸಹಿತಾ

# ಋಗ್ವೇದಸಂಹಿತಾ

**(ಕರ್ನಾಟಕ ಭಾಷಾರ್ಥಾನುವಾದ ವಿವರಣೆ ಸಹಿತವಾಗಿ)**

## ॥ ಪಂಚಮಾಷ್ಟಕೇ ದ್ವಿತಿಯೋಽಧ್ಯಾಯಃ ॥

**ಐದನೆಯ ಅಷ್ಟಕದಲ್ಲಿ ಎರಡನೆಯ ಅಧ್ಯಾಯವು**

## ಏಳನೆಯ ಮಂಡಲದಲ್ಲಿ ಎರಡನೆಯ ಸೂಕ್ತವು

### ಪೀಠಿಕೆ.

ಋಗ್ವೇದದಲ್ಲಿ ಒಟ್ಟು ೧೦ ಆಪ್ರೀ ಸೂಕ್ತಗಳಿವೆ. ಇವುಗಳಲ್ಲಿ ಇಧ್ಮಃ (ಸಮಿದ್ಧೋಗ್ನಿರ್ವಾ) ನರಾಶಂಸಃ, ತನೂನಪಾತ್, ಇಳಃ, ಬರ್ಹಿಃ, ದೇವೀರ್ದ್ವಾರಃ, ಉಷಾಸಾನಕ್ತಾ, ದೈವ್ಯಾ ಹೋತಾರೌ ಪ್ರಚೇತಸೌ, ತಿಸ್ರೋ ದೇವ್ಯಃ ಸರಸ್ವತೀಳಾಭಾರತ್ಯಃ, ತ್ವಷ್ಟಾ, ವನಸ್ಪತಿಃ, ಸ್ವಾಹಾಕೃತಯಃ ಎಂಬ ದೇವತಾಕವಾದ ಮಂತ್ರಗಳಿವೆ. ಆದರೆ ನರಾಶಂಸಃ ಮತ್ತು ತನೂನಪಾತ್ ಎಂಬ ದೇವತೆಗಳ ವಿಷಯವಾಗಿ ಕೆಲವು ಸೂಕ್ತಗಳಲ್ಲಿ ನರಾಶಂಸಃ ಎಂಬ ಒಂದೇ ದೇವತೆಯನ್ನೂ ಮತ್ತೆ ಕೆಲವು ಸೂಕ್ತಗಳಲ್ಲಿ ತನೂನಪಾತ್ ಎಂಬ ಒಂದೇ ದೇವತೆಯನ್ನೂ ಮತ್ತೆ ಕೆಲವು ಸೂಕ್ತಗಳಲ್ಲಿ ನರಾಶಂಸಃ ಮತ್ತು ತನೂನಪಾತ್ ಎಂಬ ಉಭಯದೇವತೆಗಳನ್ನೂ ಸ್ತುತಿಸಲಾಗಿದೆ. ಈ ಅರ್ಥಕ್ಕನು ಸಾರವಾಗಿ ಈ ಆಪ್ರೀಸೂಕ್ತಗಳನ್ನು ಮೂರು ವಿಧವಾಗಿ ವಿಂಗಡಿಸಿದ್ದಾರೆ. ಹೇಗೆಂದರೆ— ವಸಿಷ್ಠ, ಅತ್ರಿ, ವಾಧ್ರ್ಯಶ್ವ, ಗೃತ್ಸಮದ ಎಂಬ ಋಷಿಪ್ರಣೀತಗಳಾದ ಆಪ್ರೀಸೂಕ್ತಗಳು ಎಂದರೆ—

೧. **ಜುಷಸ್ವ ನಃ ಸಮಿಧಮಗ್ನೇ**—ಋ. ಸಂ. ೭-೨ (ಮೈತ್ರಾವರುಣಿರ್ವಸಿಷ್ಠಃ)

೨. **ಸುಸಮಿದ್ಧಾಯ ಶೋಚಿಷೇ**—ಋ. ಸಂ ೫-೫ (ವಸುಶ್ರುತ ಆತ್ರೇಯಃ)

೩. **ಇಮಾಂ ಮೇ ಅಗ್ನೇ ಸಮಿಧಂ**—ಋ. ಸಂ. ೧೦-೭೦ (ಸುಮಿತ್ರೋ ವಾಧ್ರ್ಯಶ್ವಃ)

೪. **ಸಮಿದ್ಧೋ ಅಗ್ನಿರ್ನಿಹಿತಃ**—ಋ. ಸಂ. ೨-೩ (ಗೃತ್ಸಮದಃ)

ಎಂಬ ಈ ನಾಲ್ಕು ಸೂಕ್ತಗಳೂ ಒಂದು ಗುಂಪಿಗೆ ಸೇರಿದವು. ಇವುಗಳಲ್ಲಿ ನರಾಶಂಸಃ ಎಂಬ ದೇವತಾಕವಾದ ಒಂದೊಂದು ಋಕ್ಕುಗಳಿವೆ. ಆದುದರಿಂದ ಈ ನಾಲ್ಕು ಸೂಕ್ತಗಳಿಗೆ **ನರಾಶಂಸವಂತಿ ಸೂಕ್ತಾನಿ**—ನರಾಶಂಸ ದೇವತೆಯನ್ನು ಮಾತ್ರ ಸ್ತುತಿಸುವ ಆಪ್ರೀ ಸೂಕ್ತಗಳೆಂದು ಹೆಸರು.

೧. **ಸುಸಮಿದ್ಧೋನ ಆ ವಹ**—ಋ. ಸಂ. ೧-೧೩ (ಮೇಧಾತಿಥಿಃ ಕಾಣ್ವಃ)

೨. **ಸಮಿದ್ಧೋ ಅಗ್ನ ಆ ವಹ**—ಋ. ಸಂ. ೧-೧೪೨ (ದೀರ್ಘತಮಾ ಔಚಥ್ಯಃ) ಎಂಬ ಈ ಎರಡು ಆಪ್ರೀ ಸೂಕ್ತಗಳು ಎರಡನೆಯ ಗುಂಪಿಗೆ ಸೇರಿದವು. ಇವುಗಳಲ್ಲಿ ನರಾಶಂಸ ಮತ್ತು ತನೂನಪಾತ್ ಎಂಬ ಉಭಯ ದೇವತೆಯ ಪರವಾಗಿ ಒಂದೊಂದು ಋಕ್ಕುಗಳಿವೆ. ಆದುದರಿಂದ ಈ ಆಪ್ರೀಸೂಕ್ತಗಳಲ್ಲಿ ಉಭಯ ದೇವತೆಗಳೂ ಇರುವುದರಿಂದ ೧-೧೪೨ನೆಯ ಸೂಕ್ತದಲ್ಲಿ ಇಂದ್ರನನ್ನು ಬಿಟ್ಟು ಹನ್ನೊಂದು ಪ್ರಯಾಜ ಹೋಮಗಳಿಗೆ ಬದಲಾಗಿ ಹನ್ನೆರಡು ಹೋಮಗಳಿದ್ದಂತಾಯಿತು.

೧. **ಸಮಿದ್ಧೋ ಅದ್ಯ ರಾಜಸಿ**—ಋ. ಸಂ ೧-೧೧೮ (ಅಗಸ್ತ್ಯೋ ಮೈತ್ರಾವರುಣಿಃ)

೨. **ಸಮಿತ್ಸಮಿತ್ಸುಮನಾ**—ಋ. ಸಂ. ೩-೪ (ಗಾಥಿನೋ ವಿಶ್ವಾಮಿತ್ರಃ)

೩. **ಸಮಿದ್ಧೋ ವಿಶ್ವತಸ್ಪತಿಃ**—ಋ. ಸಂ. ೯-೫ (ಕಾಶ್ಯಪೋಽಸಿತೋ ದೇವಲೋ ವಾ)

೪. **ಸಮಿದ್ಧೋ ಅದ್ಯ ಮನುಷೋ**—ಋ ಸಂ. ೧೦-೧೧೦ (ಜಮದಗ್ನಿರ್ಭಾರ್ಗವಃ)

ಎಂಬ ಸೂಕ್ತಗಳು ಮೂರನೆಯ ಗುಂಪಿಗೆ ಸೇರಿದವು. ಇವುಗಳಲ್ಲಿ ತನೂನಪಾತ್ ಎಂಬ ದೇವತಾಕವಾದ ಋಕ್ಕುಗಳು ಮಾತ್ರವಿರುವುವು. (ನರಾಶಂಸದೇವತಾಕವಾದ ಋಕ್ಕುಗಳಿರುವುದಿಲ್ಲ). ಆದುದರಿಂದ ಇವುಗಳಿಗೆ **ತನೂನಪಾತ್ವಂತಿ ಸೂಕ್ತಾನಿ** ಎಂದರೆ ತನೂನಪಾತ್ ಎಂಬ ದೇವತಾಕವಾದ ಮಂತ್ರಗಳನ್ನೊಳಗೊಂಡ ಆಪ್ರೀಸೂಕ್ತಗಳೆಂದು ಹೆಸರು.

ಈ ಆಪ್ರೀ ಸೂಕ್ತಗಳನ್ನು ಪಶುಹೋಮಮಾಡುವಾಗ ಏಕಾದಶ (ಹನ್ನೊಂದು) ಪ್ರಯಾಜಹೋಮಗಳನ್ನು ಮಾಡುವುದಕ್ಕಾಗಿ ಪಠಿಸುವರು. **ಏಕಾದಶಾವದಾನಾನ್ಯವದ್ಯತಿ ದಶ ವೈ ಪಶೋಃ ಪ್ರಾಣಾ ಆತ್ಮೈಕಾದಶಃ** (ತೈ. ಸಂ. ೬-೩-೧೦-೩) ಎಂದು ತೈತ್ತಿರೀಯಸಂಹಿತಾವಾಕ್ಯವಿರುವುದು. ಈ ಆಪ್ರೀ ಸೂಕ್ತಗಳನ್ನು ಪಠಿಸಿ ಪಶುಹೋಮ ಮಾಡುವಾಗ ಒಂದು ವಿಶೇಷನಿಯಮವಿರುವುದು. ಆಯಾ ಗೋತ್ರೋತ್ಪನ್ನರಾದ ಯಜ್ಞಕರ್ತರು ಯಜ್ಞಮಾಡುವಾಗ ಆಯಾ ಋಷಿಪ್ರಣೀತವಾದ ಆಪ್ರೀ ಸೂಕ್ತಗಳನ್ನೇ ಪಠಿಸಬೇಕೆಂದು ನಿಯಮವಿರುವುದು (ಆ. ೩-೨) ಪ್ರಕೃತವಾದ ಆಪ್ರೀ ಸೂಕ್ತವು ಕಣ್ವಋಷಿಗೋತ್ರೋತ್ಪನ್ನರಾದವರು ಪಠಿಸಬೇಕಾಗಿರುವುದು.

ಆಪ್ರೀಸೂಕ್ತಗಳ ಸ್ವರೂಪ ಮತ್ತು ಕರ್ಮಾಚರಣೆಯಲ್ಲಿ ಅವುಗಳು ಹೊಂದಿರುವ ಸ್ಥಾನಗಳನ್ನು ತಿಳಿಯ ಬೇಕಾದರೆ ನಮಗಿರುವ ಆಧಾರಗಳು ಎರಡು ಬಗೆಯಾಗಿವೆ. ಒಂದನೆಯದು, ಬ್ರಾಹ್ಮಣಾದಿ ಶ್ರುತಿವಾಕ್ಯಗಳು;

ಎರಡನೆಯದಾಗಿ ನಿರುಕ್ತಾದಿನಿರ್ವಚನಗಳ ವಾಕ್ಯಗಳು. ಈ ಎರಡು ಬಗೆಯ ಆಧಾರಗಳಲ್ಲಿ ನಿರುಕ್ತಾದಿನಿರ್ವಚನ ವಾಕ್ಯಗಳು ಹೆಚ್ಚು ಯುಕ್ತಿಯುಕ್ತವಾಗಿಯೂ ಶಾಸ್ತ್ರೀಯವಾದ ವಿವರಣೆಗಳಿಂದಲೂ ಕೂಡಿವೆ.

ಐತರೇಯಾದಿಬ್ರಾಹ್ಮಣಗಳಲ್ಲಿ ಉಕ್ತವಾಗಿರುವ **ಆಪ್ರೀ** ಪದದ ನಿಷ್ಪತ್ತಿಯನ್ನು ಗಮನಿಸಿದರೆ ಅವೆಲ್ಲವೂ ಯಜ್ಞಯಾಗಾದಿಕರ್ಮಾಚರಣೆಯ ದೃಷ್ಟಿಯಿಂದಲೇ ಈ ಪದವನ್ನು ಅರ್ಥಮಾಡಿಕೊಂಡು ವಿವರಿಸಿದೆಯೆಂದು ಹೇಳಬಹುದು. ಉದಾಹರಣೆಗೆ—

**ತದ್ಯದಾ ಪ್ರೀಣಾತಿ ತಸ್ಮಾದಾಪ್ರಿಯೋ ನಾಮ ।**

(ಕೌ. ಬ್ರಾ. ೧೦-೩)

ತೃಪ್ತಿಪಡಿಸುವ ಸಾಧನವಾದ್ದರಿಂದ ಈ ಹೆಸರೆಂದು ಕೌಶೀತಕೀಬ್ರಾಹ್ಮಣದಲ್ಲೂ,

**ಆಪ್ರೀಭಿರಾಪ್ನುವನ್ । ತದಾಪ್ರೀಣಾಮಾಪ್ರಿತ್ವಂ ॥**

(ತೈ. ಬ್ರಾ. ೨-೨-೮-೬)

ಎಂದು ಮೇಲಿನ ಅಭಿಪ್ರಾಯವನ್ನೇ ಹೇಳಿ ತೈತ್ತಿರೀಯಬ್ರಾಹ್ಮಣದಲ್ಲೂ,

**ಯದೇತಾನ್ಯಾಪ್ರಿಯಾ ಆಜ್ಯಾನಿ ಭವಂತಿ । ಆತ್ಮಾನಾಮೇವೇತೈರಾಪ್ರೀಣಾತಿ ।**

(ತಾಂ. ಬ್ರಾ. ೧೫-೮-೨)

ಎಂದು ತಾಂಡ್ಯಬ್ರಾಹ್ಮಣದಲ್ಲೂ **ಆಪ್ರೀ** ಎಂಬ ಪದದ ಸ್ವರೂಪವನ್ನು ತಿಳಿಸಿದೆ.

ಐತರೇಯಬ್ರಾಹ್ಮಣದಲ್ಲಿ ಅಗ್ನಿಷ್ಟೋಮಯಾಗಕಾಲದಲ್ಲಿ ಹೋತೃವು ಆಚರಿಸಬೇಕಾದ ಕರ್ತವ್ಯಗಳನ್ನು ನಿರ್ದೇಶಿಸುವಾಗ ಆಪ್ರಿಗಳ ವಿವರಣೆಯನ್ನು ಹೇಳಿದೆ. **ಅಗ್ನಿ**ಯನ್ನೂ **ಸೋಮ**ವನ್ನೂ ಉದ್ದೇಶಿಸಿ ಯಾಗಮಾಡ ಬೇಕಾದ ಪಶುವಿನ ವರ್ಣನೆಯಾದಮೇಲೆ (೨-೩) ಹನ್ನೊಂದು ಪ್ರಯಾಜಮಂತ್ರಗಳು ಉಕ್ತವಾಗಿವೆ (೨-೪) ಆ ಸಂದರ್ಭದಲ್ಲಿ—

**ಆಪ್ರೀಭಿರಾಪ್ರೀಣಾತಿ। ತೇಜೋ ವೈ ಬ್ರಹ್ಮವರ್ಚಸಮಾಪ್ರಿಯಸ್ತೇಜಸೈವೇನಂ ತದ್ಬ್ರಹ್ಮವರ್ಚ-ಸೇನ ಸಮರ್ಧಯತಿ ।**

ಆಪ್ರೀ ಋಕ್ಕುಗಳು ತೇಜೋಮಯವಾದವೂ ಬ್ರಹ್ಮವರ್ಚಸ್ಸಿನಿಂದ ಕೂಡಿದವೂ ಆಗಿವೆ. ಅಂತಹ ಋಕ್ಕುಗಳಿಂದ (ಹೋತೃವು) ತೃಪ್ತಿಕಾರಣನಾಗುತ್ತಾನೆ ಎಂದು ಅಲ್ಲಿಯೂ ಆತ್ಮತೃಪ್ತಿಗೆ ಸಾಧನವಾಗಿರುವುದನ್ನು ತಿಳಿಸಿದೆ. ಅನಂತರ **ಸಮಿಧ್**, **ತನೂನಪಾತ್** ಇತ್ಯಾದಿ ದೇವತೆಗಳನ್ನು **ಪ್ರಾಣಾದಿತತ್ತ್ವ**ಗಳೊಡನೆ ತಾದಾತ್ಮ್ಯವನ್ನು ಹೊಂದಿರುವುದಾಗಿ ತಿಳಿಸಿದೆ

ಋಕ್ಸಂಹಿತೆಯ ಬೇರೆ ಬೇರೆ ಮಂಡಲಗಳಲ್ಲಿ ಉಕ್ತವಾಗಿರುವ ಈ ಸೂಕ್ತಗಳನ್ನೂ ಇವುಗಳ ಫಲವನ್ನೂ ಹೇಳುತ್ತಾ ಇವುಗಳನ್ನು ಪಠಿಸಿರುವ ಋಷಿಗಳ ವಿಷಯವನ್ನೂ ಐತರೇಯಬ್ರಾಹ್ಮಣದಲ್ಲೇ ಎಲ್ಲಕ್ಕಿಂತ ಮೊದಲು ಹೇಳಿದೆ.

**ತಾಭಿರ್ಯಥರ್ಷ್ಯಾಪ್ರೀಣೀಯಾದ್ಯದ್ಯಥಋಷ್ಯಾ ಪ್ರೀಣಾತಿ ಯಜಮಾನಮೇವ ತದ್ಬಂಧು-ತಾಯಾ ನೋತ್ಸೃಜತಿ ।**

(ಐ. ಬ್ರಾ. ೨-೪)

ಋಷಿಪ್ರಣೀತವಾದ ಈ ಋಕ್ಕುಗಳ ಪಠನದಿಂದ ಯಜಮಾನನನ್ನು ಯಜ್ಞಸಂಬಂಧದಿಂದ ಬಿಡಿಸದೆ ಕಾಪಾಡು ತ್ತಾನೆಂದು ಈ ಋಕ್ಕುಗಳನ್ನು ಪಠಿಸುವುದರ ಫಲವನ್ನು ತಿಳಿಸಿದೆ. ಈ ಸೂಕ್ತಗಳು ಒಂದೇ ಋಷಿಯಿಂದ ದೃಷ್ಟ ವಾದವಲ್ಲ. ಬೇರೆಬೇರೆ ಋಷಿಗಳು ಈ ಸೂಕ್ತಗಳನ್ನು ತಮ್ಮತಮ್ಮ ವೈಯಕ್ತಿಕವಾದ ಸನ್ನಿವೇಶಗಳಲ್ಲಿ ದರ್ಶನಮಾಡಿದರು. ಆದರೂ ಸಹ ಈ ಸೂಕ್ತಗಳ ಸ್ವರೂಪವೂ, ಇವುಗಳ ಪಠನದ ಫಲವೂ ಎಲ್ಲದರಲ್ಲಿಯೂ ಒಂದೇವಿಧವಾಗಿ ಕಾಣುತ್ತದೆ.

ಈ ಆಪ್ರೀಸೂಕ್ತಗಳ ವಿಷಯದಲ್ಲೂ ಈ ಸೂಕ್ತಗಳ ದೇವತೆಗಳ ವಿಷಯದಲ್ಲೂ **ಬ್ರಾಹ್ಮಣಾದಿ** ಪ್ರಾಚೀನ ಕಾಲದಿಂದಲೇ ಅಭಿಪ್ರಾಯಭೇದವಿದ್ದಿತೆಂದು ನಿರುಕ್ತಕಾರರ ವಿವರಣೆಯಿಂದಲೇ ತಿಳಿಯುತ್ತದೆ.

**ಅಥಾತ ಆಪ್ರಿಯಃ । ಆಪ್ರಿಯಃ ಕಸ್ಮಾದಾಪ್ನೋತೇಃ ಪ್ರೀಣಾತೇರ್ವಾ । ಆಪ್ರೀಭಿರಾಪ್ರೀಣಾತೀತಿ ಚ ಬ್ರಾಹ್ಮಣಂ ।**

(ನಿ. ೮-೪)

ಎಂದು ನಿರುಕ್ತಕಾರರು ಆಪ್ರೀಸೂಕ್ತಗಳ ವಿಷಯದಲ್ಲಿ ತಮ್ಮ ಅಭಿಪ್ರಾಯಕ್ಕಿಂತ ಬ್ರಾಹ್ಮಣಾದಿಗಳ ಅಭಿಪ್ರಾಯವು ಬೇರೆಯೆಂದು ತೋರಿಸಿದ್ದಾರೆ. ಅಲ್ಲದೇ, **ಕಾತ್ಥಕ್ಯ, ಶಾಕಪೂಣಿ, ಮಾಧ್ಯಮಿಕ** ಇತ್ಯಾದಿ ಋಷಿಗಳ ಅಭಿಪ್ರಾಯ ಗಳನ್ನು ಆಗಾಗ್ಗೆ ಉದಹರಿಸಿದ್ದಾರೆ. ಕಾತ್ಥಕ್ಯಾದಿಗಳು ಯಾಜ್ಞಿಕರೇ ಆದರೂ ಸಹ ಅವರು ಬ್ರಾಹ್ಮಣಾದಿಗಳಲ್ಲಿ ಹೇಳಿರತಕ್ಕ ನಿರ್ವಚನಗಳನ್ನು ಅನೇಕ ಸಂದರ್ಭಗಳಲ್ಲಿ ಒಪ್ಪುವುದಿಲ್ಲವೆಂಬುದನ್ನು ಆಯಾ ಋಕ್ಕಿನ ವಿಶೇಷವಿಷಯ ಗಳಲ್ಲಿ ತಿಳಿಸಿದೆ. ಈ ಎಲ್ಲಾ ಅಭಿಪ್ರಾಯಗಳನ್ನೂ ತಿಳಿಸಿ ಯಾಸ್ಕರು ಕೊನೆಗೆ ತಮ್ಮ ಖಚಿತವಾದ ಅಭಿಪ್ರಾಯವನ್ನು ತಿಳಿಸಿದ್ದಾರೆ. ಉದಾಹರಣೆಗೆ—ಆಪ್ರೀ ದೇವತೆಗಳ ವಿಚಾರವಾಗಿ ಬ್ರಾಹ್ಮಣಾದಿಗಳು ಹೇಳಿರುವ ಅಭಿಪ್ರಾಯಗಳು ಹೇಗಿವೆಯೆಂದು ಮೊದಲು ಅವನ್ನೆಲ್ಲಾ ಸಂಗ್ರಹಿಸಿದ್ದಾರೆ.

**ಇತೀಮಾ ಆಪ್ರೀದೇವತಾ ಅನುಕ್ರಾಂತಾಃ । ಅಥ ಕಿಂ ದೇವತಾಃ ಪ್ರಯಾಜಾನುಯಾಜಾಃ । ಆಗ್ನೇಯಾ ಇತ್ಯೇಕೇ । ಆಗ್ನೇಯಾ ವೈ ಪ್ರಯಾಜಾ ಆಗ್ನೇಯಾ ಅನುಯಾಜಾ ಇತಿ ಚ ಬ್ರಾಹ್ಮಣಂ । ಛಂದೋದೇವತಾ ಇತ್ಯಪರಂ । ಛಂದಾಂಸಿ ವೈ ಪ್ರಯಾಜಾಶ್ಛಂದಾಂಸ್ಯನು- ಯಾಜಾ ಇತಿ ಚ ಬ್ರಾಹ್ಮಣಂ । ಋತುದೇವತಾ ಇತ್ಯಪರಂ । ಋತವೋ ವೈ ಪ್ರಯಾಜಾ ಋತವೋಽನುಯಾಜಾ ಇತಿ ಚ ಬ್ರಾಹ್ಮಣಂ । ಪಶುದೇವತಾ ಇತ್ಯಪರಂ । ಪಶವೋ ವೈ ಪ್ರಯಾಜಾಃ ಪಶವೋಽನುಯಾಜಾ ಇತಿ ಚ ಬ್ರಾಹ್ಮಣಂ । ಪ್ರಾಣದೇವತಾ ಇತ್ಯಪರಂ । ಪ್ರಾಣಾವೈ ಪ್ರಯಾಜಾ ಪ್ರಾಣಾ ವಾ ಅನುಯಾಜಾ ಇತಿ ಚ ಬ್ರಾಹ್ಮಣಂ । ಆತ್ಮದೇವತಾ ಇತ್ಯಪರಂ । ಆತ್ಮಾ ವೈ ಪ್ರಯಾಜಾಃ ಆತ್ಮಾ ವಾ ಅನುಯಾಜಾ ಇತಿ ಚ ಬ್ರಾಹ್ಮಣಂ । ಆಗ್ನೇಯಾ ಇತಿ ತು ಸ್ಥಿತಿಃ । ಭಕ್ತಿಮಾತ್ರಮಿತರಂ ॥**

(ನಿ. ೮-೨೨)

ಎಂದು ಆಯಾ ಮತವನ್ನು ಹೇಳುತ್ತಾ ಮೊದಲು,

**ತವ ಪ್ರಯಾಜಾ ಅನುಯಾಜಾಶ್ಚ ಕೇವಲ ಊರ್ಜಸ್ವಂತೋ ಹವಿಷಃ ಸಂತು ಭಾಗಾಃ ।**
**ತವಾಗ್ನೇ ಯಜ್ಞೋಽಯಮಸ್ತು ಸರ್ವಸ್ತುಭ್ಯಂ ನಮಂತಾಂ ಪ್ರದಿಶಶ್ಚತಸ್ರಃ ॥**

(ಋ. ಸಂ. ೧೦-೫೧-೯)

ಎಂಬ ಋಕ್ಕನ್ನುದಹರಿಸಿ ಇದರಲ್ಲಿ ಹೇಳಿರುವಂತೆ **ಪ್ರಯಾಜ** ಮತ್ತು **ಅನುಯಾಜ** ಮಂತ್ರಗಳು ಅಗ್ನಿಯನ್ನೇ ಉದ್ದೇಶಿಸಿವೆ ಎಂದು ತಾವು ತಮ್ಮ ವಿವರಣೆಯನ್ನು ಕೊಟ್ಟು, ಅನಂತರ ಇತರ ಅಭಿಪ್ರಾಯಗಳನ್ನು ಹೇಳಿದ್ದಾರೆ. ಅವರಲ್ಲಿ ಬ್ರಾಹ್ಮಣವಾಕ್ಯದಿಂದ ಇದೇ ಅಭಿಪ್ರಾಯವು ಸಮರ್ಥಿತವಾಗುತ್ತದೆ. ಆದರೆ ಕೆಲವರು **ಛಂದೋದೇವತೆ** ಯನ್ನುದ್ದೇಶಿಸಿದೆಯೆಂದೂ (ಶ. ಬ್ರಾ. ೧-೩-೨-೯) ಇನ್ನು ಕೆಲವರು **ಋತ್ವಾತ್ಮಕ**ವಾದ ದೇವತೆಗಳನ್ನುದ್ದೇಶಿಸಿದೆ ಯೆಂದೂ (ಶ. ಬ್ರಾ. ೧ ೩-೨-೮) ಇತರರು **ಯಾಗಪಶು**ವನ್ನುದ್ದೇಶಿಸಿದೆಯೆಂದೂ (ಕೌ. ಬ್ರಾ. ೩-೪) ಕೆಲವರು **ಪ್ರಾಣಾತ್ಮಕ**ವಾದ ದೇವತೆಯನ್ನುದ್ದೇಸಿದೆಯೆಂದೂ (ಐ. ಬ್ರಾ ೧-೧೧, ಶ. ಬ್ರಾ. ೧೧-೨-೭-೨೭) ಮತ್ತು ಇನ್ನೂ ಕೆಲವರು **ಆತ್ಮ**ನನ್ನೇ ಉದ್ದೇಶಿಸಿದೆಯೆಂದೂ (ತೈ. ಸಂ. ೬-೧-೫-೪) ಹೇಳಿರುವುದನ್ನೆಲ್ಲಾ ಸಂಗ್ರಹಿಸಿ ಹೇಳಿ ಅನಂತರ ಅಗ್ನಿಯನ್ನುದ್ದೇಶಿಸಿದೆಯೆಂಮ ಹೇಳುವುದೇ ಸಾಧುವಾದ ಮತವೆಂದು ತಮ್ಮ ಉಚಿತವಾದ ಅಭಿಪ್ರಾಯವನ್ನು ಹೇಳಿದ್ದಾರೆ.

ಕಾತ್ಯಾಯನರ ಸರ್ವಾನುಕ್ರಮಣಿಯಲ್ಲಿ **ಆಪ್ರ** ಮತ್ತು **ಆಪ್ರೀ** ಎಂಬ ಶಬ್ದಗಳಿಗೆ ವ್ಯತ್ಯಾಸವನ್ನು ತಿಳಿಸಿ (ಈ ವ್ಯತ್ಯಾಸವನ್ನು **ಆಪ್ರೀ** ಸೂಕ್ತದ ಎಂದರೆ ೧-೧೪೨ ನೇ ಸೂಕ್ತದ ಕೊನೆಯಲ್ಲಿ ತಿಳಿಸಿರುತ್ತದೆ.) **ನರಾಶಂಸ** ದೇವತೆಯನ್ನು ಉದ್ದೇಶಿಸಿರುವ ಋಕ್ಕುಗಳಿಗೆ **ಆಪ್ರ** ಮಂತ್ರಗಳೆಂದೂ ಮತ್ತು **ತನೂನಪಾತ್** ಎಂಬ ದೇವತೆಯನ್ನು ಉದ್ದೇಶಿಸಿರುವ ಋಕ್ಕುಗಳಿಗೆ ಆಪ್ರೀ ಮಂತ್ರಗಳೆಂದೂ ಪ್ರಸಿದ್ಧಿಯಿದೆಯೆಂದು ತೋರಿಸಿದ್ದಾರೆ. **ಬೃಹದ್ದೇವತೆ**ಯಲ್ಲಿ,

> **ದ್ವಿತೀಯೇ ದ್ವಾದಶರ್ಚೇ ತು ಪ್ರತ್ಯೃಚಂ ಯಾಸ್ತು ದೇವತಾಃ ।**
> **ಸ್ತೂಯಂತೇ ಹ್ಯಗ್ನಿನಾ ಸಾರ್ಧಂ ತಾಸಾಂ ನಾಮಾನಿ ಮೇ ಶೃಣು ॥**
> **ಪ್ರಥಮಾಯಾಂ ಸ್ತುತಶ್ಚೇಧ್ಮೋ ದ್ವಿತೀಯಾಯಾಂ ತನೂನಪಾತ್ ।**
> **ನರಾಶಂಸಸ್ತ್ರಿತೀಯಾಯಾಂ ಚತುರ್ಥ್ಯಾಂ ಸ್ತೂಯತೇ ತ್ವಿಳಃ ॥**
> **ಬರ್ಹಿರೇವ ತು ಪಂಚಮ್ಯಾಂ ದ್ವಾರೋ ದೇವ್ಯಸ್ತತೋಽನ್ಯಯಾ ।**
> **ನಕ್ತೋಷಾಸಾ ತು ಸಪ್ತಮ್ಯಾಮುಷ್ಟಮ್ಯಾಂ ಸಂಸ್ತುತೌ ಸಹ ॥**
> **ದೇವ್ಯಾವಿತಿ ತು ಹೋತಾರಾ ನವಮ್ಯಾಮೃಚಿ ಸಂಸ್ತುತಾಃ ।**
> **ತಿಸ್ರೋ ದೇವ್ಯೋ ದಶಮ್ಯಾಂ ತು ಜ್ಞೇಯಸ್ತ್ವಷ್ಟೈವ ತು ಸ್ತುತಃ ॥**
> **ಏಕಾದಶ್ಯಾಂ ತು ಸೂಕ್ತಸ್ಯ ಸ್ತುತಂ ವಿದ್ಯಾದ್ವನಸ್ಪತಿಂ ।**
> **ದ್ವಾದಶ್ಯಾಂ ತು ಸ್ತುತಾ ದೇವೀರ್ವಿದ್ಯಾತ್ಸ್ವಾಹಾಕೃತೀರಿತಿ ॥**
> **ಸೂಕ್ತೇಽಸ್ಮಿನ್ಪ್ರತ್ಯೃಚಂ ಯಾಸು ದೇವತಾಃ ಪರಿಕೀರ್ತಿತಾಃ ।**
> **ತಾ ಏವ ಸರ್ವಾಸ್ವಾಪ್ರೀಷು ದ್ವಿತೀಯಾ ತು ವಿಕಲ್ಪ್ಯತೇ ॥**
>
> (ಬೃ. ದೇ. ೨-೧೪೬ ರಿಂದ ೧೫೧)

ಎಂದು ಇಧ್ಮಾದಿ ಎಲ್ಲಾ ದೇವತೆಗಳ ಹೆಸರನ್ನೂ ನಿರ್ದೇಶಿಸಿ ಸೂಕ್ತದ ಕ್ರಮವನ್ನೂ ಅಲ್ಲಿ ಒಂದೊಂದು ಋಕ್ಕಿನಲ್ಲಿಯೂ ಪ್ರತ್ಯೇಕವಾದ ದೇವತೆಯನ್ನುದ್ದೇಶಿಸಿರುವುದನ್ನೂ ತಿಳಿಸಿದ್ದಾರೆ.

ಆಪ್ರೀ ಸೂಕ್ತಗಳೆಷ್ಟು ಎಂಬ ವಿಷಯದಲ್ಲಿ ವಿವರಣೆಯನ್ನು ಹೇಳುತ್ತಾ ನಿರುಕ್ತಕಾರರು—

**ಇತೀಮಾನ್ಯೇಕಾದಶಾಪ್ರೀಸೂಕ್ತಾನಿ । ತೇಷಾಂ ವಾಸಿಷ್ಠಮಾತ್ರೇಯಂ ವಾಧ್ರ್ಯಶ್ವಂ ಗಾರ್ತ್ಸ-ಮದಮಿತಿ ನಾರಾಶಂಸವಂತಿ । ಮ್ಯೆಧಾತಿಥಂ ದೈರ್ಘತಮಸಂ ಪ್ರೈಷಿಕಮಿತ್ಯುಭಯಂವಂತ್ಯ-ತೋಽನ್ಯಾನಿ ತನೂನಪಾತ್ವಂತಿ ತನೂನಪಾತ್ವಂತಿ ।**

(ನಿ. ೮-೨೨)

ಈ ಸೂಕ್ತಗಳಲ್ಲಿ **ವಸಿಷ್ಠ, ಅತ್ರಿ, ವಧ್ರ್ಯಶ್ವ** ಮತ್ತು **ಗೃತ್ಸಮದ** ಇವರಿಂದ ದೃಷ್ಟವಾದ ಸ್ತುತಿಗಳು ನರಾಶಂಸಪರವಾದವು; **ಮೇಧಾತಿಥಿ** ಮತ್ತು **ದೀರ್ಘತಮಸ್** ಈ ಋಷಿಗಳಿಂದ ದೃಷ್ಟವಾದವೂ ಮತ್ತು ಪ್ರೈಷಸೂಕ್ತವೂ ಸಹ **ತನೂಪಾತ್** ಮತ್ತು **ನರಾಸಂಶ** ಎಂಬ ಎರಡು ದೇವತೆಗಳನ್ನೂ ಉದ್ದೇಶಿಸಿದವು; ಉಳಿದ ನಾಲ್ಕು ಸೂಕ್ತಗಳೂ ಕೇವಲ **ತನೂನಪಾತ್** ಎಂಬ ದೇವತಾಪರವಾದವು. ಒಟ್ಟನಲ್ಲಿ (ಪ್ರೈಷಸೂಕ್ತವನ್ನೂ ಸೇರಿಸಿದರೆ) ಹನ್ನೊಂದು ಆಪ್ರೀಸೂಕ್ತಗಳು. ಇದೇ ಅಭಿಪ್ರಾಯವನ್ನು ಬೃಹದ್ದೇವತೆಯಲ್ಲಿಯೂ,

**ಪ್ರೈಷೈಃ ಸಹಾಪ್ರೀಸೂಕ್ತಾನಿ ತಾನ್ಯೇಕಾದಶ ಸಂತಿ ಚ ।**
**ಯಜೂಂಷಿ ಪ್ರೈಷಸೂಕ್ತಂ ವಾ ದಶೈತಾನೀತರಾಣಿ ತು ॥**
**ಸೌತ್ರಾಮಣ್ಯಾನಿ ತು ತ್ರೀಣಿ ಪ್ರಾಜಾಪತ್ಯಾಶ್ವಮೇಧಿಕೇ ।**
**ಪುರುಷಸ್ಯ ತು ಯನ್ಮೇಧೇ ಯಜುಷ್ಷ್ವೇವ ತು ತಾನಿ ಷಟ್ ॥**
**ಅತ್ರೈವ ಪ್ರೈಷಸೂಕ್ತಂ ಸ್ಯಾನ್ನಯಜುಷ್ವಾದ್ರಿಯೇತ ತತ್ ।**
**ತೇಷಾಂ ಪ್ರೈಷಗತಂ ಸೂಕ್ತಂ ಯಚ್ಚ ದೀರ್ಘತಮಾ ಜಗೌ ।**
**ಮೇಧಾತಿಥೌ ಯದುಕ್ತಂ ಚ ತ್ರೀಣ್ಯೇವೋಭಯವಂತಿ ತು ।**
**ಋಷೌ ಗೃತ್ಸಮದೇ ಯಚ್ಚ ವಾಧ್ರ್ಯಶ್ವೇ ಚ ಯದುಚ್ಯತೇ ॥**
**ನರಾಶಂಸವದತ್ರೇಶ್ಚ ದದರ್ಶ ಚ ಯದೌರ್ವಶಃ ।**
**ತನೂನಪಾದಗಸ್ತ್ಯಶ್ಚ ಜಮದಗ್ನಿಶ್ಚ ಯಜ್ಜಗೌ ॥**
**ವಿಶ್ವಾಮಿತ್ರ ಋಷಿರ್ಯಶ್ಚ ಜಗೌ ವೈ ಕಾಶ್ಯಪೋಽಸಿತಃ ।**
**ಮೇಧಾತಿಥೇರ್ಋಚಾಂ ಯಾಸ್ತು ಪ್ರೋಕ್ತಾ ದ್ವಾದಶ ದೇವತಾಃ ॥**
**ಸಂಪದ್ಯಂತೇ ಯಥಾಗ್ನಿಂ ತಾಃ ಸಂಪದಂ ತಾಂ ನಿಬೋಧತ ।**

(ಬೃ. ದೇ. ೨-೧೫೨ ರಿಂದ ೧೫೭)

ಎಂಬ ವಾಕ್ಯಗಳಲ್ಲಿ **ಪ್ರೈಷ**ಸೂಕ್ತವನ್ನು ಸೇರಿಸಿದರೆ ಒಟ್ಟು ಹನ್ನೊಂದು **ಆಪ್ರೀಸೂಕ್ತ**ಗಳೆಂದೂ, ಇಲ್ಲದಿದ್ದರೆ ಹತ್ತು ಸೂಕ್ತಗಳೆಂದೂ ಹೇಳಿದೆ. ಮತ್ತು ನಿರುಕ್ತವಾಕ್ಯವನ್ನೇ ಅನುಸರಿಸಿ **ನರಾಶಂಸ, ತನೂನಪಾತ್** ಇತ್ಯಾದಿ ದೇವತೆಗಳನ್ನುದ್ದೇಶಿಸಿದವೂ ಮತ್ತು ಮೇಧಾತಿಥ್ಯಾದಿ ಋಷಿಗಳಿಂದ ಪ್ರಣೀತವಾದವೂ ಆದ ಸೂಕ್ತಕ್ರಮಗಳನ್ನು ಕೊಟ್ಟಿದೆ.

**ಆಪ್ರೀ** ಮತ್ತು **ಆಪ್ರ** ಎಂಬ ಸಂಜ್ಞೆಯಿಂದ ಸೂಚಿತವಾಗುವ ಮಂತ್ರಗಳು—

ಕಾತ್ಯಾಯನರು ಸರ್ವಾನುಕ್ರಮಣಿಕೆಯಲ್ಲಿ **ಏತದಾಪ್ರೀಸೂಕ್ತಂ ಏತೇನಾನ್ಯುಕ್ತದೈವತಾನಿ ಏಕಾ-ದಶಕಾನಿ ತು ನಾರಾಶಂಸಾನಿ ಆಪ್ರಶಬ್ದೋಕ್ತಾನಿ ಆತನೂನಪಾತ್ವಂತಿ ।** ನರಾಶಂಸ ದೇವತೆಯನ್ನುದ್ದೇಶಿಸಿ

ಪಠಿಸುವ ಮಂತ್ರಗಳು **ಆಪ್ರ**ವೆಂಬ ಹೆಸರಿನಿಂದಲೂ, **ತನೂನಪಾತ್** ದೇವತೆಯನ್ನುದ್ದೇಶಿಸಿ ಪಠಿಸುವ ಮಂತ್ರಗಳು **ಆಪ್ರೀ** ಎಂಬ ಹೆಸರಿನಿಂದಲೂ ಪ್ರಸಿದ್ಧವಾಗಿವೆಯೆಂದು ಹೇಳಿದ್ದಾರೆ. ಆದರೆ ನಿರುಕ್ತಾದಿಗಳಲ್ಲಿ ಈ ವ್ಯತ್ಯಾಸವನ್ನು ತೋರಿಸುವ ವಾಕ್ಯಗಳೇ ಇಲ್ಲ.

ಆಪ್ರೀ ಸೂಕ್ತದಲ್ಲಿರುವ ದೇವತೆಗಳನ್ನು ನಾವು ಹಿಂದೆ ಅನೇಕಾವರ್ತಿ ವಿಸ್ತಾರವಾಗಿ ವಿವರಿಸಿರುವುದರಿಂದ ಅವುಗಳನ್ನು ಇಲ್ಲಿ ಪುನಃ ಪ್ರತ್ಯೇಕವಾಗಿ ವಿವರಿಸುವ ಅವಶ್ಯಕತೆ ಇಲ್ಲ. ಋ. ಸಂ. ಭಾಗ ೧೫ ಪುಟ 675 ರಲ್ಲಿರುವ ೪ ನೇ ಸೂಕ್ತದ ೧೧ ಋಕ್ಕುಗಳ ವಿಶೇಷವಿಷಯಗಳಲ್ಲಿ ಆಪ್ರೀ ಸೂಕ್ತದ ದೇವತೆಗಳ ವಿಷಯವನ್ನು ವಿಸ್ತಾರವಾಗಿ ವಿವರಿಸಲಾಗಿದೆ.

॥ ಸಾಯಣಭಾಷ್ಯಂ ॥

**ಜುಷಸ್ವ ನ ಇತ್ಯೇಕಾದಶರ್ಚಂ ದ್ವಿತೀಯಂ ಸೂಕ್ತಂ ವಸಿಷ್ಠಸ್ಯಾರ್ಷಂ ತ್ರೈಷ್ಟುಭಂ । ಆಪ್ರ-ಶಬ್ದೋಕ್ತತ್ವಾದಿದಂ ತನೂನಪಾದ್ರಹಿತಂ । ಸಮಿದ್ಧಾದ್ಯಾ ಅಗ್ನಿವಿಶೇಷಾಃ ಪ್ರತ್ಯೃಚಂ ದೇವತಾ ಉಕ್ತಾಃ । ತಥಾ ಚಾನುಕ್ರಮ್ಯತೇ । ಜುಷಸ್ವೈಕಾದಶಾಪ್ರಮಿತಿ ॥ ಪಶಾವಿಷ್ಟಾವಿದಮಾಪ್ರೀಸೂಕ್ತಂ । ಸೂತ್ರಿತಂ ಚ । ಜುಷಸ್ವ ನಃ ಸಮಿಧಮಿತಿ ವಸಿಷ್ಠಾನಾಂ । ಆ. ೩-೨ । ಇತಿ ॥ ಪತ್ನೀಸಂಯಾಜೇ ತ್ವಾಷ್ಟ್ರಯಾಗಸ್ಯ ಯಾಜ್ಯಾ ತ್ವಾಷ್ಟ್ರೇ ಪಶಾವಪಿ ಪುರೋಡಶಸ್ಯಾನುವಾಕ್ಯೇಯಮಿತಿ ಪೂರ್ವಮುಕ್ತಂ ॥**

ಅನುವಾದವು—**ಜುಷಸ್ವ** ನಃ ಎಂಬ ಈ ಸೂಕ್ತವು ಏಳನೆಯ ಮಂಡಲದ ಮೊದಲನೆಯ ಅನುವಾಕದಲ್ಲಿ ಎರಡನೆಯ ಸೂಕ್ತವು. ಇದರಲ್ಲಿ ಹನ್ನೊಂದು ಋಕ್ಕುಗಳಿರುವವು. ಈ ಸೂಕ್ತಕ್ಕೆ ವಸಿಷ್ಠನು ಋಷಿಯು; ತ್ರಿಷ್ಟುಪ್ ಛಂದಸ್ಸು ಅನುಕ್ರಮಣಿಕೆಯಲ್ಲಿ—**ಜುಷಸ್ವೈಕಾದಶಾಪ್ರಂ** ಎಂದು ಹೇಳಿರುವುದು. ಇಲ್ಲಿ **ಆಪ್ರ** ಎಂಬ ಶಬ್ದ ಪ್ರಯೋಗವಿರುವುದರಿಂದ ಈ ಸೂಕ್ತವು ಆಪ್ರಸೂಕ್ತವು. ಇದರಲ್ಲಿ **ತನೂನಪಾತ್** ಎಂಬ ದೇವತೆಯ ಸ್ತುತಿಯಿರುವುದಿಲ್ಲ. (ಆಪ್ರೀ ಸೂಕ್ತಕ್ಕೂ ಆಪ್ರ ಸೂಕ್ತಕ್ಕೂ ಇರುವ ವ್ಯತ್ಯಾಸವನ್ನು ನಾವು ಹಿಂದೆಯೇ ಹೇಳಿದೇವೆ.) ಈ ಸೂಕ್ತದಲ್ಲಿರುವ ಋಕ್ಕುಗಳಿಗೆ ಒಂದೊಂದು ಋಕ್ಕಿಗೆ ಒಬ್ಬೊಬ್ಬ ದೇವತೆಯಂತೆ ಸಮಿದ್ಧಾಗ್ನಿಯೇ ಮೊದಲಾದ ಹನ್ನೊಂದುಮಂದಿ ದೇವತೆಗಳು ಉಕ್ತವಾಗಿರುವರು (೧. ಸಮಿದ್ಧಾಗ್ನಿಃ । ೨. ನರಾಶಂಸಃ । ೩. ಇಳಃ । ೪. ಬರ್ಹಿಃ । ೫. ದೇವಿರ್ದ್ವಾರಃ । ೬. ಉಷಾಸಾನಕ್ತಾ । ೭. ದೈವ್ಯಾ ಹೋತಾರಾ ಪ್ರಚೇತಸಾ । ೮. ತಿಸ್ರೋ ದೇವ್ಯಃ ಸರಸ್ವತೀಳಾಭಾರತ್ಯಃ । ೯. ತ್ವಷ್ಟಾ । ೧೦. ವನಸ್ಪತಿಃ । ೧೧. ಸ್ವಾಹಾಕೃತಯಃ ಎಂಬ ಹನ್ನೊಂದು ಮಂದಿ ದೇವತೆಗಳಿರುವರು.) ಇದು ಪಶುಹೋಮದಲ್ಲಿ ವಸಿಷ್ಠಗೋತ್ರೋದ್ಭವರಾದ ಋಷಿಗಳು ಪಠಿಸುವ ಆಪ್ರಸೂಕ್ತವೆಂದು ಆಶ್ವಲಾಯನ ಶ್ರೌತಸೂತ್ರದ—**ಜುಷಸ್ವ ನಃ ಸಮಿಧಮಿತಿ ವಷಿಷ್ಠಾನಾಂ** ಎಂಬ ಸೂತ್ರದಿಂದ (ಆ. ೩-೨) ವಿವೃತವಾಗಿರುವುದು. ಪತ್ನೀಸಂಯಾಜಹೋಮದಲ್ಲಿ ತ್ವಷ್ಟೃವನ್ನುದ್ದೇಶಿಸಿ ಮಾಡುವ ಹೋಮದಲ್ಲಿ ಈ ಸೂಕ್ತದ **ತನ್ನಸ್ತುರೀಪಂ** ಎಂಬ ೯ ನೆಯ ಋಕ್ಕನ್ನು ಯಾಜ್ಯಾಮಂತ್ರವನ್ನಾಗಿಯೂ, ತ್ವಷ್ಟೃದೇವತೆಯನ್ನುದ್ದೇಶಿಸಿ ಮಾಡುವ ಪಶುಯಾಗದಲ್ಲಿಯೂ ಪುರೋಡಾಶಹೋಮಮಾಡುವಾಗ ಈ ಋಕ್ಕನ್ನು ಅನುವಾಕ್ಯಾಮಂತ್ರವನ್ನಾಗಿಯೂ ವಿವರಿಸಿರುವ ಸೂತ್ರವಾಕ್ಯವನ್ನು ಹಿಂದೆಯೇ ಹೇಳಲಾಗಿದೆ.

## ಸೂಕ್ತ—೨

ಮಂಡಲ—೭ ॥ ಅನುವಾಕ—೧ ॥ ಸೂಕ್ತ—೨ ॥
ಅಷ್ಟಕ—೫ ॥ ಅಧ್ಯಾಯ - ೨ ॥ ವರ್ಗ—೧, ೨ ॥

॥ ಸೂಕ್ತದಲ್ಲಿರುವ ಋಕ್ಸಂಖ್ಯೆ—೧೧ ॥
॥ ಋಷಿಃ—ವಸಿಷ್ಠಃ ॥
॥ ದೇವತಾಃ—ಆಪ್ರಸೂಕ್ತಂ ॥ ೧. ಇಧ್ಮಃ ಸಮಿದ್ಧೋಽಗ್ನಿರ್ವಾ । ೨. ನರಾಶಂಸಃ । ೩. ಇಳಃ । ೪. ಬರ್ಹಿಃ । ೫. ದೇವೀರ್ದ್ವಾರಃ । ೬. ಉಷಾಸಾನಕ್ತಾ । ೭. ದೈವ್ಯೌ ಹೋತಾರೌ ಪ್ರಚೇತಸೌ । ೮. ತಿಸ್ರೋ ದೇವ್ಯಃ ಸರಸ್ವತೀಳಾಭಾರತ್ಯಃ । ೯. ತ್ವಷ್ಟಾ । ೧೦. ವನಸ್ಪತಿಃ । ೧೧. ಸ್ವಾಹಾಕೃತಯಃ ॥
॥ ಛಂದಃ—ತ್ರಿಷ್ಟುಪ್ ॥

॥ ಸಂಹಿತಾಪಾಠಃ ॥

ಜುಷಸ್ವ ನಃ ಸಮಿಧಮಗ್ನೇ ಅದ್ಯ ಶೋಚಾ ಬೃಹದ್ಯಜತಂ ಧೂಮಮೃಣ್ವನ್ ।
ಉಪ ಸ್ಪೃಶ ದಿವ್ಯಂ ಸಾನು ಸ್ತೂಪೈಃ ಸಂ ರಶ್ಮಿಭಿಸ್ತತನಃ ಸೂರ್ಯಸ್ಯ ॥ ೧ ॥

॥ ಪದಪಾಠಃ ॥

ಜುಷಸ್ವ । ನಃ । ಸಂಽಇಧಂ । ಅಗ್ನೇ । ಅದ್ಯ । ಶೋಚ । ಬೃಹತ್ । ಯಜತಂ । ಧೂಮಂ । ಋಣ್ವನ್ ।
ಉಪ । ಸ್ಪೃಶ । ದಿವ್ಯಂ । ಸಾನು । ಸ್ತೂಪೈಃ । ಸಂ । ರಶ್ಮಿಽಭಿಃ । ತತನಃ । ಸೂರ್ಯಸ್ಯ ॥ ೧ ॥

॥ ಸಾಯಣಭಾಷ್ಯಂ ॥

ಹೇ ಅಗ್ನೇ ನೋಽಸ್ಮಾಕಂ ಸಮಿಧಮದ್ಯ ಜುಷಸ್ವ । ಸೇವಸ್ವ । ಯಜತಂ ಯಜನೀಯಂ ಪ್ರಶಸ್ತಂ ಧೂಮಮೃಣ್ವನ್ ಪ್ರೇರಯನ್ ಬೃಹದತ್ಯಂತಂ ಶೋಚ । ದೀಪ್ಯಸ್ವ ಚ । ಕಿಂಚ ದಿವ್ಯಮಂತರಿಕ್ಷಭವಂ ಸಾನು ಸಮುಚ್ಛ್ರಿತಂ ಸ್ತೂಪೈಸ್ತ್ವದೀಯೈ ರಶ್ಮಿಭಿರುಪ ಸ್ಪೃಶ । ಅಪಿ ಚ ಸೂರ್ಯಸ್ಯ ರಶ್ಮಿಭಿಸ್ತೇಜೋಭಿಃ ಸಂ ತತನಃ । ಸಂಗಚ್ಛಸ್ವ ॥

॥ ಪ್ರತಿಪದಾರ್ಥ ॥

**ಅಗ್ನೇ**—ಎಲೈ ಅಗ್ನಿಯೇ । **ನಃ**—ನಮ್ಮ । **ಸಮಿಧಂ**—ಸಮಿದಾದಿಗಳನ್ನು । **ಅದ್ಯ**—ಈಗ । **ಜುಷಸ್ವ**—ಸೇವಿಸು । **ಯಜತಂ**—ಪೂಜ್ಯವಾದ । **ಧೂಮಂ**—ಧೂಮವನ್ನು । **ಋಣ್ವನ್**—ಪ್ರಸರಿಸುತ್ತಾ । **ಬೃಹತ್**—ಪ್ರಭೂತವಾಗಿ । **ಶೋಚ**—ಪ್ರಕಾಶಿಸು । **ದಿವ್ಯಂ**—ಪ್ರಕಾಶಮಾನವಾದುದೂ । **ಸಾನು**—ಅತ್ಯುನ್ನತವಾದುದೂ ಆದ ಅಂತರಿಕ್ಷಪ್ರದೇಶವನ್ನು । **ಸ್ತೂಪೈಃ**—ನಿನ್ನ ರಶ್ಮಿಗಳಿಂದ । **ಉಪ ಸ್ಪೃಶ**—ಸ್ಪರ್ಶಮಾಡು । **ಸೂರ್ಯಸ್ಯ**—ಸೂರ್ಯನ । **ರಶ್ಮಿಭಿಃ**—ತೇಜಸ್ಸುಗಳೊಡನೆ । **ಸಂ ತತನಃ**—ಸೇರಿಕೊಂಡು ಐಕ್ಯನಾಗು.

॥ ಭಾವಾರ್ಥ ॥

ಎಲೈ ಅಗ್ನಿಯೇ, ನಮ್ಮಿಂದ ಅರ್ಪಿತವಾದ ಸಮಿದಾದಿಗಳನ್ನು ಸೇವಿಸು. ಪೂಜ್ಯವಾದ ಧೂಮವನ್ನು ಹರಡುತ್ತಾ ಅಧಿಕವಾಗಿ ಪ್ರಕಾಶಿಸು. ಪ್ರಕಾಶಮಾನವಾದುದೂ, ಅತ್ಯುನ್ನತವಾದುದೂ ಆದ ಅಂತರಿಕ್ಷಪ್ರದೇಶವನ್ನು ನಿನ್ನ ರಶ್ಮಿಗಳಿಂದ ಸ್ಪರ್ಶಿಸು. ಸೂರ್ಯನ ತೇಜಸ್ಸುಗಳೊಡನೆ ಸೇರಿಕೊಂಡು ಐಕ್ಯನಾಗು.

## English Translation.

Be gratified, Agni, by the (sacred fire) kindled by us to-day, emitting abundant adorable smoke: touch with your scorching flames the celestial summit : combine with the rays of the sun.

॥ ಸಂಹಿತಾಪಾಠಃ ॥

ನರಾಶಂಸಸ್ಯ ಮಹಿಮಾನಮೇಷಾಮುಪ ಸ್ತೋಷಾಮ ಯಜತಸ್ಯ ಯಜ್ಞೈಃ ।
ಯೇ ಸುಕ್ರತವಃ ಶುಚಯೋ ಧಿಯಂಧಾಃ ಸ್ವದಂತಿ ದೇವಾ ಉಭಯಾನಿ ಹವ್ಯಾ ॥ ೨ ॥

॥ ಪದಪಾಠಃ ॥

ನರಾಶಂಸಸ್ಯ । ಮಹಿಮಾನಂ । ಏಷಾಂ । ಉಪ । ಸ್ತೋಷಾಮ । ಯಜತಸ್ಯ । ಯಜ್ಞೈಃ ।
ಯೇ । ಸುಽಕ್ರತವಃ । ಶುಚಯಃ । ಧಿಯಂಽಧಾಃ । ಸ್ವದಂತಿ । ದೇವಾಃ । ಉಭಯಾನಿ । ಹವ್ಯಾ ॥ ೨ ॥

॥ ಸಾಯಣಭಾಷ್ಯಂ ॥

ಯೇ ದೇವಾಃ ಸುಕ್ರತವಃ ಸುಪ್ರಜ್ಞಾಃ ಸುಕರ್ಮಾಣೋ ವಾ ಶುಚಯೋ ದೀಪ್ತಿಮಂತೋ ಧಿಯಂಧಾಃ ಕರ್ಮಣಾಂ ಧಾರಯಿತಾರ ಉಭಯಾನಿ ಸೌಮಿಕಾನಿ ಚ ಹವಿಃಸಂಸ್ಥಾದೀನಿ ಚ ಹವ್ಯಾ ಹವ್ಯಾನಿ ಸ್ವದಂತಿ ಸ್ವದಯಂತಿ ಭಕ್ಷಯಂತಿ ತೇಷಾಮೇಷಾಂ ಮಧ್ಯೇ ಯಜ್ಞೈರ್ಹವಿರ್ಭಿಃ ಸ್ತೋತ್ರೈರ್ವಾ ಯಜತಸ್ಯ ಯಜನೀಯಸ್ಯ ನರಾಶಂಸಸ್ಯ ನರೈಃ ಪ್ರಶಂಸನೀಯಸ್ಯಾಗ್ನಿವಿಶೇಷಸ್ಯ ಮಹಿಮಾನಂ ಮಹತ್ತ್ವಮುಪ ಸ್ತೋಷಾಮ । ವಯಮುಪಸ್ತುಮಃ । ತಥಾ ಚ ಯಾಸ್ಕಃ । ನರಾ ಅಸ್ಮಿನ್ನಾಸೀನಾಃ ಶಂಸಂತಿ । ಅಗ್ನಿರಿತಿ ಶಾಕಪೂಣಿರ್ನರೈಃ ಪ್ರಶಸ್ಯೋ ಭವತಿ । ತಸ್ಯೈಷಾ ಭವತಿ । ನರಾಶಂಸಸ್ಯ ಮಹಿಮಾನಮೇಷಾಮುಪ ಸ್ತೋಷಾಮ ಯಜತಸ್ಯ ಯಜ್ಞೈರ್ಯೇ ಸುಕರ್ಮಾಣಃ ಶುಚಯೋ ಧಿಯಂ ಧಾರಯಿತಾರಃ ಸ್ವದಯಂತು ದೇವಾ ಉಭಯಾನಿ ಹವೀಂಷಿ ಸೋಮಂ ಚೇತರಾಣಿ ಚ । ನಿ. ೮-೬ । ಇತಿ ॥

॥ ಪ್ರತಿಪದಾರ್ಥ ॥

**ಯೇ ದೇವಾಃ**—ಯಾವ ದೇವತೆಗಳು। **ಸುಕ್ರತವಃ**—ಶ್ರೇಷ್ಠವಾದ ಕರ್ಮಕರ್ತರೂ। **ಶುಚಯಃ**—ಕಾಂತಿಯುತರೂ। **ಧಿಯಂಧಾಃ**—ಕರ್ಮಧಾರಕರೂ ಆಗಿ। **ಉಭಯಾನಿ**—ಸೋಮ ಮತ್ತು ಇತರ ವಿಧವಾದ। **ಹವ್ಯಾ**—ಹವಿಸ್ಸುಗಳನ್ನು। **ಸ್ವದಂತಿ**—ಭಕ್ಷಿಸುವರೋ। **ಏಷಾಂ**—ಅಂತಹ ದೇವತೆಗಳ ನಡುವೆ। **ಯಜ್ಞೈಃ**—ಯಜ್ಞಸಾಧನಗಳಾದ ಹವಿಸ್ಸುಗಳಿಂದ। **ಯಜತಸ್ಯ**—ಪೂಜಿಸಲ್ಪಡತಕ್ಕ। **ನರಾಶಂಸಸ್ಯ**—ನರಾಶಂಸನಾಮಕನಾದ ಅಗ್ನಿಯ। **ಮಹಿಮಾನಂ**—ಮಹತ್ತ್ವವನ್ನು। **ಉಪ ಸ್ತೋಷಾಮ**—ಸ್ತುತಿಸುವೆವು.

॥ ಭಾವಾರ್ಥ ॥

ಯಾವ ದೇವತೆಗಳು ಶ್ರೇಷ್ಠವಾದ ಕರ್ಮಕರ್ತರೂ, ಶಾಂತಿಯುತರೂ ಮತ್ತು ಕರ್ಮಧಾರಕರೂ ಆಗಿ ಸೋಮ ಮತ್ತು ಇತರ ವಿಧವಾದ ಹವಿಸ್ಸುಗಳನ್ನು ಭಕ್ಷಿಸುವರೋ ಅಂತಹ ದೇವತೆಗಳ ಮಧ್ಯದಲ್ಲಿ ಯಜ್ಞಸಾಧನಗಳಾದ ಹವಿಸ್ಸುಗಳಿಂದ ಪೂಜಿಸಲ್ಪಡತಕ್ಕ ನರಾಶಂಸನಾದ ಅಗ್ನಿಯ ಮಹತ್ತ್ವವನ್ನು ಸ್ತುತಿಸುವೆವು.

## English Translation.

We celebrate with sacrifices the greatness of the aborable Narashanasa amongst those who are divinities, the performers of good works, the bright-shining, the upholders of rites, who partake of both kinds of oblations.

॥ ವಿಶೇಷವಿಷಯಗಳು ॥

ಈ ಋಕ್ಕಿಗೆ ಯಾಸ್ಕರು ನಿರ್ವಚನವನ್ನು ಹೇಳಿದಾರೆ.—

**ನರಾಶಂಸಸ್ಯ ಮಹಿಮಾನಮೇಷಾಮುಪಸ್ತುಮೋ ಯಜ್ಞಿಯಸ್ಯ ಯಜ್ಞೈರ್ಯೇ ಸುಕರ್ಮಾಣಃ ಶುಚಯೋ ಧಿಯಂಧಾರಯಿತಾರಃ ಸ್ವದಯಂತು ದೇವಾ ಉಭಯಾನಿ ಹವೀಂಷಿ ಸೋಮಂ ಚೇತರಾಣಿ ಚೇತಿ ವಾ ತಾಂತ್ರಾಣಿ ಚಾವಾಪಿಕಾನಿ ಚೇತಿ ವಾ ॥**

(ನಿ. ೮–೭)

ಈ ದೇವತೆಗಳ ಮಧ್ಯದಲ್ಲಿ ಯಜ್ಞಾರ್ಹನಾದ ಈ ನರಾಶಂಸ ಎಂಬ ದೇವತೆಯ ಮಹಿಮೆಯನ್ನು ನಾವು ಪ್ರಶಂಸಿಸುವೆವು. ದೇವತೆಗಳು ಎಂಥವರು ಎಂದರೆ ಶ್ರೇಷ್ಠವಾದ ಕರ್ಮಗಳನ್ನು ಮಾಡುವವರು, ಕಾಂತಿಯಿಂದ ಪ್ರಕಾಶಮಾನವಾಗಿ ಬೆಳಗುವವನರು, ಕರ್ಮಗಳನ್ನು ಧರಿಸುವವರು ಎಂದರೆ ತಮಗೆ ಅಧಿಕಾರವಿರುವ ಕರ್ಮಗಳಲ್ಲಿ ತಿಳಿವಳಿಕೆಯಿಂದ ಪ್ರವರ್ತಿಸತಕ್ಕವರು. ಇಂತಹ ದೇವತೆಗಳು ಹವಿಸ್ಸು, ಸೋಮ ಎಂದು ಎರಡು ವಿಧವಾದ ಹವಿಸ್ಸುಗಳನ್ನು ಭಕ್ಷಿಸುವವರು. ಮತ್ತು ಈ ಎರಡು ವಿಧ ಹವಿಸ್ಸುಗಳನ್ನಲ್ಲದೆ ಪಶು, ಪುರೋಡಾಶ ಮೊದಲಾದ ದ್ರವ್ಯಗಳನ್ನು ಸ್ವೀಕರಿಸಿ ಭಕ್ಷಿಸುವವರು. ಮತ್ತು **ತಾಂತ್ರಾಣಿ** ಎಂದರೆ ಪ್ರಯಾಜ, ಆಜ್ಯಭಾಗ ಮೊದಲಾದ ಇತರ ಆಹುತಿಗಳನ್ನೂ ಸ್ವೀಕರಿಸಿ ಭಕ್ಷಿಸುವವರು. ಈ ಮೇಲೆ ಹೇಳಿದ ಆಹುತಿಗಳನ್ನಲ್ಲದೆ ಪ್ರಧಾನಾಹುತಿಗಳನ್ನೂ ಭಕ್ಷಿಸುವವರು. ಇಂತಹ ದೇವತೆಗಳ ಮಧ್ಯದಲ್ಲಿ ಯಜ್ಞಾರ್ಹನಾದ ನರಾಶಂಸನೆಂಬ ದೇವತೆಯ ಮಹಿಮೆಯನ್ನು ನಾವು ಸ್ತುತಿಸಿ ಪ್ರಶಂಸೆಮಾಡುವೆವು. ಎಂದು ನಿರ್ವಚನದ ಮುಖ್ಯಾಭಿಪ್ರಾಯವು.

॥ ಸಂಹಿತಾಪಾಠಃ ॥

ಈಳೇನ್ಯಂ ವೋ ಅಸುರಂ ಸುದಕ್ಷಮಂತರ್ದೂತಂ ರೋದಸೀ ಸತ್ಯವಾಚಂ ।
ಮನುಷ್ವದಗ್ನಿಂ ಮನುನಾ ಸಮಿದ್ಧಂ ಸಮಧ್ವರಾಯ ಸದಮಿನ್ಮಹೇಮ ॥೩॥

॥ ಪದಪಾಠಃ ॥

ಈಳೇನ್ಯಂ । ವಃ । ಅಸುರಂ । ಸುऽದಕ್ಷಂ । ಅಂತಃ । ದೂತಂ । ರೋದಸೀ ಇತಿ । ಸತ್ಯऽವಾಚಂ ।
ಮನುಷ್ವತ್ । ಅಗ್ನಿಂ । ಮನುನಾ । ಸಂऽಇದ್ಧಂ । ಸಂ । ಅಧ್ವರಾಯ । ಸದಂ । ಇತ್ । ಮಹೇಮ ॥೩॥

॥ ಸಾಯಣಭಾಷ್ಯಂ ॥

**ಹೇ ಅಧ್ವರ್ಯವೋ ವೋ ಯೂಯಮೀಳೇನ್ಯಂ ಸ್ತುತ್ಯಮಸುರಂ ಬಲವಂತಂ ಸುದಕ್ಷಂ ಸುಪ್ರಜ್ಞಂ ರೋದಸೀ ರೋದಸ್ಯೋರಂತರ್ಮಧ್ಯೇ ದೂತಂ ದೇವಾನಾಂ ಹವಿರ್ವಹನಾರ್ಥಂ ಚರಂತಂ ಸತ್ಯವಾಚಂ ಮನುಷ್ವನ್ಮನುಷ್ಯವನ್ಮನುನಾ ಸಮಿದ್ಧಂ ಯಥೇದಾನೀಂ ಮನುಷ್ಯಾಃ ಸಮಿಂಧತೇ ತಥಾ ಪೂರ್ವಂ ಮನುನಾ ಪ್ರಜಾಪತಿನಾ ಸಮಿದ್ಧಮಗ್ನಿಮಧ್ವರಾಯ ಯಜ್ಞಾಯ ಸದಮಿತ್ಸದೈವ ಸಂ ಮಹೇಮ । ಸಂಪೂಜಯತ ॥ ಮಧ್ಯಮಪುರುಷಸ್ಯ ವ್ಯತ್ಯಯೇನೋತ್ತಮಪುರುಷತ್ವಂ ॥**

॥ ಪ್ರತಿಪದಾರ್ಥ ॥

(ಎಲೈ ಅಧ್ವರ್ಯುಗಳೇ) **ವಃ**—ನೀವು । **ಈಳೇನ್ಯಂ**—ಅತ್ಯಂತ ಸ್ತುತ್ಯನೂ । **ಅಸುರಂ**—ಶಕ್ತಿಯುತನೂ । **ಸುದಕ್ಷಂ**—ಕರ್ತವ್ಯಪ್ರಜ್ಞೆಯುಳ್ಳವನೂ । **ರೋದಸ್ಯೋಃ**—ದ್ಯಾವಾಪೃಥಿವಿಗಳ । **ಅಂತಃ**—ಮಧ್ಯಭಾಗದಲ್ಲಿ (ದೇವಮಾನವರಿಗೆ) । **ದೂತಂ**—ದೂತರೂಪನೂ । **ಸತ್ಯವಾಚಂ**—ಸತ್ಯಾತ್ಮಕವಾದ ವಾಕ್ಕುಳ್ಳವನೂ । **ಮನುಷ್ವತ್**—ಈಗ ಮಾನವರು ಮಾಡುವಂತೆಯೇ । **ಮನುನಾ**—(ಹಿಂದೆ) ಮನುವಿನಿಂದಲೂ । **ಸಮಿದ್ಧಂ**—ಪ್ರಜ್ವಲಿತನಾದವನೂ ಆದ । **ಅಗ್ನಿಂ**—ಅಗ್ನಿಯನ್ನು । **ಅಧ್ವರಾಯ**—ಯಜ್ಞಕ್ಕಾಗಿ । **ಸದಮಿತ್**—ಸರ್ವದಾ । **ಸಂ ಮಹೇಮ**—ಪೂಜಿಸಿರಿ.

॥ ಭಾವಾರ್ಥ ॥

ಎಲೈ ಅಧ್ವರ್ಯುಗಳೇ, ನೀವು ಅತ್ಯಂತ ಸ್ತುತ್ಯನೂ, ಶಕ್ತಿಯುತನೂ, ಕರ್ತವ್ಯರೂಪವಾದ ಪ್ರಜ್ಞೆಯುಳ್ಳವನೂ, ದ್ಯಾವಾಪೃಥಿವಿಗಳ ಮಧ್ಯಭಾಗದಲ್ಲಿ ದೇವಮಾನವರಿಗೆಲ್ಲಾ ದೂತರೂಪನೂ, ಸತ್ಯಾತ್ಮಕವಾದ ವಾಕ್ಕುಳ್ಳವನೂ, ಈಗ ಮಾನವರು ಮಾಡುವಂತೆಯೇ ಹಿಂದೆ ಮನುವಿನಿಂದಲೂ ಪ್ರಜ್ವಲಿತನಾದವನೂ ಆದ ಅಗ್ನಿಯನ್ನು ಯಜ್ಞಕಾರ್ಯಕ್ಕಾಗಿ ಸರ್ವದಾ ಪೂಜಿಸಿರಿ.

## English Translation.

Let us ever worship the Agni who is to be adored by us; the mighty, the dextrous, the messenger passing between heaven and earth, the speaker of truth, kindled (of old) by Manu, as now by men, that (he may come) to the solemnity.

॥ ಸಂಹಿತಾಪಾಠಃ ॥

ಸಪರ್ಯವೋ ಭರಮಾಣಾ ಅಭಿಜ್ಞು ಪ್ರ ವೃಂಜತೇ ನಮಸಾ ಬರ್ಹಿರಗ್ನೌ ।
ಆಜುಹ್ವಾನಾ ಘೃತಪೃಷ್ಠಂ ಪೃಷದ್ವದಧ್ವರ್ಯವೋ ಹವಿಷಾ ಮರ್ಜಯಧ್ವಂ ॥ ೪ ॥

॥ ಪದಪಾಠಃ ॥

ಸಪರ್ಯವಃ । ಭರಮಾಣಾಃ । ಅಭಿಽಜ್ಞು । ಪ್ರ । ವೃಂಜತೇ । ನಮಸಾ । ಬರ್ಹಿಃ । ಅಗ್ನೌ ।
ಆಽಜುಹ್ವಾನಾಃ । ಘೃತಽಪೃಷ್ಠಂ । ಪೃಷತ್‌ಽವತ್ । ಅಧ್ವರ್ಯವಃ । ಹವಿಷಾ । ಮರ್ಜಯಧ್ವಂ ॥ ೪ ॥

॥ ಸಾಯಣಭಾಷ್ಯಂ ॥

**ಸಪರ್ಯವಃ ಪರಿಚರಣಮಿಚ್ಛಂತೋಽಭಿಜ್ಞು ಅಭಿಗತಜಾನುಕಂ ಭರಮಾಣಾಃ ಪಾದ್ಯೈರ್ಭರಂತೋ ಬರ್ಹಿರ್ನಮಸಾ ಹವಿಷಾ ಸಹಾಗ್ನೌ ಪ್ರ ವೃಂಜತೇ । ಪ್ರಭರಂತಿ । ತದೇವ ವಿಶದಯತಿ । ಹೇ ಅಧ್ವರ್ಯವೋ ಘೃತಪೃಷ್ಠಂ ಘೃತಸಂಸಿಕ್ತಪೃಷ್ಠಂ ಪೃಷದ್ವತ್ ಸ್ಥೂಲವಿಂದುಭಿರ್ಯುಕ್ತಂ ಬರ್ಹಿರ್ಹವಿಷಾ ಸಹಾಜುಹ್ವಾನಾ ಮರ್ಜಯಧ್ವಂ । ಅಗ್ನಿಂ ಪರಿಚರತ ॥**

॥ ಪ್ರತಿಪದಾರ್ಥ ॥

**ಸಪರ್ಯವಃ**—ಸೇವಾಕಾಂಕ್ಷಿಗಳು । **ಅಭಿಜ್ಞು**—ನಮ್ರತೆಯಿಂದ ಮೊಣಕಾಲನ್ನೂರಿದವರಾಗಿ । **ಭರಮಾಣಾಃ**—ಕೈಯಲ್ಲಿ ಹಿಡಿದುಕೊಂಡು । **ಬರ್ಹಿಃ**—ದರ್ಭಾಸನವನ್ನು । **ನಮಸಾ**—ಹವಿಸ್ಸಿನೊಡನೆ । **ಅಗ್ನೌ**—ಅಗ್ನ್ಯರ್ಥವಾಗಿ । **ಪ್ರ ವೃಂಜತೇ**—ಅರ್ಪಿಸುತ್ತಾರೆ । **ಅಧ್ವರ್ಯವಃ**—ಎಲೈ ಅಧ್ವರ್ಯುಗಳೇ । **ಘೃತಪೃಷ್ಠಂ**—ಘೃತದಿಂದ ಸಿಕ್ತವಾದ ಪೃಷ್ಠವುಳ್ಳದ್ದೂ । **ಪೃಷದ್ವತ್**—ಘೃತಬಿಂದುಗಳೊಡನೆ ಕೂಡಿದುದೂ ಆದ ಬರ್ಹಿಯನ್ನು । **ಹವಿಷಾ (ಸಹ)**—ಹವಿಸ್ಸಿನೊಡನೆ ಅರ್ಪಿಸಿ । **ಆಜುಹ್ವಾನಾಃ**—ಅಗ್ನಿಯನ್ನು ಪ್ರಾರ್ಥಿಸಿ ಕರೆಯುತ್ತಾ । **ಮರ್ಜಯಧ್ವಂ**—ಪೂಜಿಸಿರಿ

॥ ಭಾವಾರ್ಥ ॥

ಸೇವಾಕಾಂಕ್ಷಿಗಳು ನಮ್ರತೆಯಿಂದ ಮೊಣಕಾಲನ್ನೂರಿದವರಾಗಿ ಬರ್ಹಿಯನ್ನು ಕೈಯಲ್ಲಿ ಹಿಡಿದು ಹವಿಸ್ಸಿನೊಡನೆ ಅಗ್ನ್ಯರ್ಥವಾಗಿ ಅರ್ಪಿಸುತ್ತಾರೆ. ಎಲೈ ಅಧ್ವರ್ಯುಗಳೇ, ಘೃತದಿಂದ ಸಿಕ್ತವಾದ ಪೃಷ್ಠವುಳ್ಳದ್ದೂ,

ಘೃತಬಿಂದುಗಳೊಡನೆ ಕೂಡಿದುದೂ ಆದ ಬರ್ಹಿಯನ್ನು ಹವಿಸ್ಸಿನೊಡನೆ ಅರ್ಪಿಸಿ ಅಗ್ನಿಯನ್ನು ಪ್ರಾರ್ಥಿಸಿ ಕರೆಯುತ್ತಾ ಪೂಜಿಸಿರಿ.

English Translation.

The worshippers bearing the sacred grass offer it with revernce, upon their knees, to Agni: worship him, priests, with oblations, invoking him to (sit down) on the spotted (grass), smeared with clarified butter.

॥ ಸಂಹಿತಾಪಾಠಃ ॥

ಸ್ವಾಧ್ಯೋ೩ ವಿ ದುರೋ ದೇವಯಂತೋಽಶಿಶ್ರಯುೂ ರಥಯುರ್ದೇವತಾತಾ।
ಪೂರ್ವೀ ಶಿಶುಂ ನ ಮಾತರಾ ರಿಹಾಣೇ ಸಮಗ್ರುವೋ ನ ಸಮನೇಷ್ವಂ-
ಜನ್ ॥ ೫ ॥

॥ ಪದಪಾಠಃ ॥

ಸುಽಆಧ್ಯಃ । ವಿ । ದುರಃ । ದೇವಽಯಂತಃ । ಅಶಿಶ್ರಯುಃ । ರಥಽಯುಃ । ದೇವಽತಾತಾ ।
ಪೂರ್ವೀ ಇತಿ । ಶಿಶುಂ । ನ । ಮಾತರಾ । ರಿಹಾಣೇ ಇತಿ । ಸಂ । ಅಗ್ರುವಃ । ನ । ಸಮನೇಷು ।
ಅಂಜನ್ ॥ ೫ ॥

॥ ಸಾಯಣಭಾಷ್ಯಂ ॥

ಸ್ವಾಧ್ಯಃ ಸುಕರ್ಮಾಣೋ ದೇವಯಂತೋ ದೇವಕಾಮಾ ಯಜಮಾನಾ ರಥಯೂ ರಥಕಾಮಾಶ್ಚ ॥ ಜಸಿ ಪೂರ್ವಸವರ್ಣೋ ಹ್ರಸ್ವಶ್ಚ ॥ ದೇವತಾತಾ ದೇವತಾತೌ ಯಜ್ಞೇ ದುರೋ ಯಜ್ಞಗೃಹದ್ವಾರಾಣಿ ವ್ಯಶಿಶ್ರಯುಃ । ಆಶ್ರಿತವಂತಃ । ಕಿಂಚ ಸಮನೇಷು ಯಜ್ಞೇಷು ಪೂರ್ವೀ ಪ್ರಾಚೀನೇ ಪ್ರಾಗಗ್ರೇ ಜುಹೂಪಭೃತೌ ಶಿಶುಂ ನ ವತ್ಸಮಿವ ಮಾತರಾ ಗಾವೌ ರಿಹಾಣೇ ಅಗ್ನಿಂ ಲಿಹಾನೇ ಅಗ್ರುವೋ ನ ಯಥಾ ನದ್ಯಃ ಕ್ಷೇತ್ರಾಣ್ಯುದಕೇನ ತದ್ವತ್ಸಮಂಜನ್ । ಅಧ್ವರ್ಯವ ಆಜ್ಯೇನ ಸಮಂಜಂತಿ ॥

॥ ಪ್ರತಿಪದಾರ್ಥ ॥

**ಸ್ವಾಧ್ಯಃ**—ಉತ್ತಮವಾದ ಕರ್ಮಕರ್ತರೂ । **ದೇವಯಂತಃ**—ದೇವಪೂಜಾಕಾಂಕ್ಷಿಗಳೂ ಆದ ಯಜಮಾನರು । **ರಥಯುಃ**—ರಥವನ್ನು ಹೊಂದಲಪೇಕ್ಷಿಸಿದವರಾಗಿ । **ದೇವತಾತಾ**—ಯಜ್ಞದಲ್ಲಿ । **ದುರಃ**—ಯಜ್ಞಗೃಹದ್ವಾರಗಳನ್ನು । **ವಿ ಅಶಿಶ್ರಯುಃ**—ಆಶ್ರಯಿಸಿದ್ದಾರೆ । **ಮಾತರಃ**—ಮಾತೃಗಳಾದ ಗೋವುಗಳು । **ಶಿಶುಂ ನ**—ತಮ್ಮ ಕರುವನ್ನು ನೆಕ್ಕುವಂತೆಯೂ । **ಅಗ್ರುವೋ ನ**—ನದಿಗಳು ಸುತ್ತಲೂ ಇರುವ ಕ್ಷೇತ್ರಗಳನ್ನು ವ್ಯಾಪಿಸುವಂತೆಯೂ । **ಸಮನೇಷು**—ಯಜ್ಞಗಳಲ್ಲಿ । **ಪೂರ್ವೀ**—ಪೂರ್ವಾಭಿಮುಖವಾದ ಜುಹೂಪಾತ್ರೆಗಳು । **ರಿಹಾಣೇ**—ಅಗ್ನಿಯನ್ನು ಸ್ಪರ್ಶಿಸುತ್ತಾ । **ಸಂ ಅಂಜನ್**—ಆಜ್ಯದಿಂದ ಅಲಂಕರಿಸುತ್ತವೆ.

॥ ಭಾವಾರ್ಥ ॥

ಉತ್ತಮವಾದ ಕರ್ಮಕರ್ತರೂ, ದೇವಪೂಜಾಕಾಂಕ್ಷಿಗಳೂ ಆದ ಯಜಮಾನರು ರಥವನ್ನು ಹೊಂದಲಪೇಕ್ಷಿಸಿದವರಾಗಿ ಯಜ್ಞದಲ್ಲಿ ಯಜ್ಞಗೃಹದ್ವಾರಗಳನ್ನು ಆಶ್ರಯಿಸಿದ್ದಾರೆ. ಮಾತೃಗಳಾದ ಗೋವುಗಳು ತಮ್ಮ ಕರುಗಳನ್ನು ನೆಕ್ಕುವಂತೆಯೂ, ನದಿಗಳು ಸುತ್ತಲೂ ಇರುವ ಕ್ಷೇತ್ರಗಳನ್ನು ಆಕ್ರಮಿಸಿ ವ್ಯಾಪಿಸುವಂತೆಯೂ, ಯಜ್ಞಗಳಲ್ಲಿ ಪೂರ್ವಾಭಿಮುಖವಾದ ಜುಹೂಪಾತ್ರೆಗಳು ಅಗ್ನಿಯನ್ನು ಸ್ಪರ್ಶಿಸುತ್ತಾ ಅದನ್ನು ಆಜ್ಯದಿಂದ ಅಲಂಕರಿಸುತ್ತವೆ.

## English Translation.

The devout performers of holy rites, desirous of chariots, have had recourse to the doors (of the sacrificial chamber) : (the ladles), placed to the east, are plying the fire with ghee at sacrifices, as the mother cows lick the calf, or as rivers (water the fields).

॥ ಸಂಹಿತಾಪಾಠಃ ॥

**ಉತ ಯೋಷಣೇ ದಿವ್ಯೇ ಮಹೀ ನ ಉಷಾಸಾನಕ್ತಾ ಸುದುಘೇವ ಧೇನುಃ।**
**ಬರ್ಹಿಷದಾ ಪುರುಹೂತೇ ಮಘೋನೀ ಆ ಯಜ್ಞಿಯೇ ಸುವಿತಾಯ**
**ಶ್ರಯೇತಾಂ ॥ ೬ ॥**

॥ ಪದಪಾಠಃ ॥

**ಉತ । ಯೋಷಣೇ ಇತಿ । ದಿವ್ಯೇ ಇತಿ । ಮಹೀ ಇತಿ । ನಃ । ಉಷಸಾನಕ್ತಾ । ಸುದುಘಾಽಇವ । ಧೇನುಃ । ಬರ್ಹಿಽಸದಾ । ಪುರುಹೂತೇ ಇತಿ ಪುರುಽಹೂತೇ । ಮಘೋನೀ ಇತಿ । ಆ । ಯಜ್ಞಿಯೇ ಇತಿ । ಸುವಿತಾಯ । ಶ್ರಯೇತಾಂ ॥ ೬ ॥**

॥ ಸಾಯಣಭಾಷ್ಯಂ ॥

**ಉತಾಪಿ ಚ ಯೋಷಣೇ ಯುವತ್ಯೌ ಸ್ತ್ರೀರೂಪೇ ವಾ ದಿವ್ಯೇ ದಿವಿ ಭವೇ ಮಹೀ ಮಹತ್ಯೌ ಬರ್ಹಿಷದಾ ಬರ್ಹಿಷಿ ಸೀದಂತ್ಯೌ ಪುರುಹೂತೇಃ ಬಹುಭಿಃ ಸ್ತುತೇ ಮಘೋನೀ ಧನವತ್ಯೌ ಯಜ್ಞಿಯೇ ಯಜ್ಞಾರ್ಹೇ ಉಷಾಸಾನಕ್ತಾಹೋರಾತ್ರೇ ಸುದುಘೇವ ಧೇನುಃ ಕಾಮಧುಗ್ಧೇನುರಿವ ನೋಽಸ್ಮಾನ್ ಸುವಿತಾಯ ಕಲ್ಯಾಣಾಯಾ ಶ್ರಯೇತಾಂ ॥**

। ಪ್ರತಿಪದಾರ್ಥ ।

**ಉತ**—ಮತ್ತು । **ಯೋಷಣೇ**—ಉತ್ತಮವಾದ ಸ್ತ್ರೀರೂಪರೂ । **ದಿವ್ಯೇ**—ದೇವತಾತ್ಮರೂ । **ಮಹೀ**—ಮಹತ್ಸ್ವರೂಪವುಳ್ಳವರೂ । **ಬರ್ಹಿಷದಾ**—ದರ್ಭಾಸನದ ಮೇಲೆ ಕುಳಿತುಕೊಳ್ಳುವವರೂ । **ಪುರುಹೂತೇ**—

ರಿಂದ ಕರೆಯಲ್ಪಡತಕ್ಕವರೂ | **ಮಘೋನೀ**—ಧನವತಿಯರೂ | **ಯಜ್ಞಿಯೇ**—ಪೂಜಾರ್ಹರೂ ಆದ | **ಉಷಾಸಾನಕ್ತಾ**—ಅಹೋರಾತ್ರದೇವತೆಗಳು | **ಸುದುಘಾ ಧೇನುಃ ಇವ**—ಅತ್ಯುತ್ತಮವಾಗಿ ಕರೆಯುವ ಧೇನುವಿನಂತೆ | **ನಃ**—ನಮಗೆ | **ಸುವಿತಾಯ**—ಕಲ್ಯಾಣವನ್ನುಂಟುಮಾಡಲು | **ಆ ಶ್ರಯೇತಾಂ**—ನಮ್ಮೊಡನೆಯೇ ಇರಲಿ.

॥ ಭಾವಾರ್ಥ ॥

ಉತ್ತಮವಾದ ಸ್ತ್ರೀರೂಪರೂ, ಮಹತ್ಸ್ವರೂಪವುಳ್ಳವರೂ, ದರ್ಭಾಸನದ ಮೇಲೆ ಕುಳಿತಿರುವವರೂ, ಅನೇಕ ಅನೇಕರಿಂದ ಕರೆಯಲ್ಪಡತಕ್ಕವರೂ, ಧನವತಿಯರೂ, ಪೂಜಾರ್ಹರೂ ಆದ ಅಹೋರಾತ್ರದೇವತೆಗಳು ಅತ್ಯುತ್ತಮವಾಗಿ ಕರೆಯುವ ಧೇನುವಿನಂತೆ ನಮಗೆ ಕಲ್ಯಾಣವನ್ನುಂಟುಮಾಡಲು ನಮ್ಮೊಡನೆಯೇ ಇರಲಿ.

## English Translation.

May the two youthful females, the divine and mighty day and night, the invoked of many, the possessed of wealth, seated on the sacred grass, entitled to adoration, be with us like an easily-milked cow for our welfare.

॥ ಸಂಹಿತಾಪಾಠಃ ॥

ವಿಪ್ರಾ ಯಜ್ಞೇಷು ಮಾನುಷೇಷು ಕಾರೂ ಮನ್ಯೇ ವಾಂ ಜಾತವೇದಸಾ ಯಜಧ್ಯೈ ।
ಊರ್ಧ್ವಂ ನೋ ಅಧ್ವರಂ ಕೃತಂ ಹವೇಷು ತಾ ದೇವೇಷು ವನಥೋ ವಾರ್ಯಾಣಿ ॥ ೭ ॥

॥ ಪದಪಾಠಃ ॥

ವಿಪ್ರಾ । ಯಜ್ಞೇಷು । ಮಾನುಷೇಷು । ಕಾರೂ ಇತಿ । ಮನ್ಯೇ । ವಾಂ । ಜಾತऽವೇದಸಾ । ಯಜಧ್ಯೈ । ಊರ್ಧ್ವಂ । ನಃ । ಅಧ್ವರಂ । ಕೃತಂ । ಹವೇಷು । ತಾ । ದೇವೇಷು । ವನಥಃ । ವಾರ್ಯಾಣಿ ॥ ೭ ॥

॥ ಸಾಯಣಭಾಷ್ಯಂ ॥

ಹೇ ದೈವ್ಯಾ ಹೋತಾರೌ ವಿಪ್ರಾ ಮೇಧಾವಿನೌ ಜಾತವೇದಸಾ ಜಾತಧನೌ ಮಾನುಷೇಷು ಮನುಷ್ಯೈಃ ಕ್ರಿಯಮಾಣೇಷು ಯಜ್ಞೇಷು ಕಾರೂ ಕರ್ಮಣಾಂ ಕರ್ತಾರೌ ವಾಂ ಯುವಾಂ ಯಜಧ್ಯೈ ಯಷ್ಟುಂ ಮನ್ಯೇ । ಸ್ತೌಮಿ । ಕಿಂಚ ಹವೇಷು ಹವನೇಷು ಸ್ತೋತ್ರೇಷು ಸತ್ಸು ನೋಽಸ್ಮಾಕಮಧ್ವ-

**ಮಕುಟಿಲಂ ಯಜ್ಞಮೂರ್ಧ್ವಂ ದೇವಾಭಿಮುಖಂ ಕೃತಂ । ಕುರುತಂ ಚ । ಅಪಿ ಚ ತಾ ತೌ ಯುವಾಂ ದೇವೇಷು ವಿದ್ಯಮಾನಾನಿ ವಾರ್ಯಾಣಿ ಧನಾನಿ ವನಥಃ । ಸಂಭಜಥಃ । ತಾನ್ಯಸ್ಮಭ್ಯಂ ಸಂಪ್ರಯಚ್ಛಥ ಇತ್ಯರ್ಥಃ ॥**

॥ಪ್ರತಿಪದಾರ್ಥ॥

**ವಿಪ್ರಾ**—ಮೇಧಾವಿಗಳೂ । **ಜಾತವೇದಸಾ**—(ನಿಮ್ಮಲ್ಲೇ) ಉತ್ಪನ್ನವಾದ ಧನವುಳ್ಳವರೂ । **ಮಾನುಷೇಷು**—ಮಾನವರಿಂದ ಮಾಡಲ್ಪಡುವ । **ಯಜ್ಞೇಷು**—ಯಜ್ಞಗಳಲ್ಲಿ । **ಕಾರೂ**—ಕರ್ಮಕರ್ತರೂ ಆದ ಎಲೈ ದೇವಹೋತೃಗಳೇ । **ವಾಂ**—ನಿಮ್ಮನ್ನು । **ಯಜಧ್ಯೈ**—ಪೂಜಿಸಲು । **ಮನ್ಯೇ**—ಸ್ತುತಿಸುತ್ತೇನೆ । **ಹವೇಷು**—ನಮ್ಮ ಸ್ತೋತ್ರಕಾಲದಲ್ಲಿ । **ನಃ**—ನಮ್ಮ । **ಅಧ್ವರಂ**—ಯಜ್ಞವನ್ನು । **ಊರ್ಧ್ವಂ**—ಮೇಲಕ್ಕೆ ದೇವತಾಭಿಮುಖವಾಗಿ । **ಕೃತಂ**—ತಿರುಗಿಸಿರಿ । **ತಾ**—ನೀವಿಬ್ಬರೂ । **ದೇವೇಷು**—ದೇವತೆಗಳಲ್ಲಿರತಕ್ಕವೂ । **ವಾರ್ಯಾಣಿ**—ಅಪೇಕ್ಷಿತವೂ ಆದ ಧನಗಳನ್ನು । **ವನಥಃ**—ನಮಗೊದಗಿಸಿರಿ.

॥ ಭಾವಾರ್ಥ ॥

ಮೇಧಾವಿಗಳೂ, ನಿಮ್ಮಲ್ಲೇ ಉತ್ಪನ್ನವಾದ ಧನವುಳ್ಳವರೂ, ಮಾನವರಿಂದ ಮಾಡಲ್ಪಡುವ ಯಜ್ಞಗಳಲ್ಲಿ ಕರ್ಮಕರ್ತರೂ ಆದ ಎಲೈ ದೇವಹೋತೃಗಳೇ, ನಿಮ್ಮನ್ನು ಪೂಜಿಸಲು ನಿಮ್ಮನ್ನು ಸ್ತುತಿಸುತ್ತೇನೆ. ನಮ್ಮ ಸ್ತುತಿ ಕಾಲಗಳಲ್ಲಿ ನಮ್ಮ ಯಜ್ಞವನ್ನು ದೇವತಾಭಿಮುಖವಾಗುವಂತೆ ಮಾಡಿರಿ. ದೇವತೆಗಳಲ್ಲಿರತಕ್ಕವೂ, ಅಪೇಕ್ಷಿತವೂ ಆದ ಧನಗಳು ನಮಗೆ ಲಭಿಸುವಂತೆ ಮಾಡಿರಿ.

English Translation.

I am minded to adore you two sages, the ministrants at sacrifices of men, from whom wealth is derived : when the worship is being celebrated, convey our offspring aloft, and acquire (for ouruse) the precious (treasures preserved) amongst the gods.

॥ ಸಂಹಿತಾಪಾಠಃ ॥

ಆ ಭಾರತೀ ಭಾರತೀಭಿಃ ಸಜೋಷಾ ಇಳಾ ದೇವೈರ್ಮನುಷ್ಯೇಭಿರಗ್ನಿಃ ।
ಸರಸ್ವತೀ ಸಾರಸ್ವತೇಭಿರರ್ವಾಕ್ ತಿಸ್ರೋ ದೇವೀರ್ಬರ್ಹಿರೇದಂ ಸದಂತು ॥

॥ ಪದಪಾಠಃ ॥

ಆ । ಭಾರತೀ । ಭಾರತೀಭಿಃ । ಸ್ಽಜೋಷಾಃ । ಇಳಾ । ದೇವೈಃ । ಮನುಷ್ಯೇಭಿಃ । ಅಗ್ನಿಃ ।
ಸರಸ್ವತೀ । ಸಾರಸ್ವತೇಭಿಃ । ಅರ್ವಾಕ್ । ತಿಸ್ರಃ । ದೇವೀಃ । ಬರ್ಹಿಃ । ಆ । ಇದಂ । ಸದಂತು ॥ ೮ ॥

॥ ಸಾಯಣಭಾಷ್ಯಂ ॥

ಏತದಾದ್ಯೃಕ್ಚತುಷ್ಟಯಂ ದ್ವಿತೀಯೋಷ್ಟಕಸ್ಯಾಷ್ಟಮಾಧ್ಯಾಯೇ । ಋಗ್ವೇ. ೩. ೪. ೮–೧೧ । ಯದ್ಯಪಿ ವ್ಯಾಖ್ಯಾತಂ ತಥಾಪಿ ವ್ಯವಧಾನಾತ್ಸಂಕ್ಷೇಪತೋಽತ್ರಾಪಿ ವ್ಯಾಖ್ಯಾಯತೇ । ಭಾರತೀ ಭರತಸ್ಯಾದಿತ್ಯಸ್ಯ ಪತ್ನೀ ಭಾರತೀಭಿಃ ಸಜೋಷಾಃ ಸಹಿತೇಳಾ ಮನುಷ್ಯೇಭಿರ್ಮನುಷ್ಯಲೋಕಭವೈರ್ದೇವೈಃ ಸಾರ್ಧಮಗ್ನಿರಾಗಚ್ಛತು । ಸರಸ್ವತೀ ಸಾರಸ್ವತೇಭಿಃ ಸಾರಸ್ವತೈರ್ಮಧ್ಯಮಸ್ಥಾನೈರ್ದೇವೈಃ ಸಾರ್ಧಮರ್ವಾಗಸ್ಮದಭಿಮುಖಮಾಗಚ್ಛತು । ಆಗತ್ಯ ತಿಸ್ರೋ ದೇವೀರ್ದೇವ್ಯಃ ॥ ಪ್ರಥಮಾರ್ಥೇ ದ್ವಿತೀಯಾ ॥ ಬರ್ಹಿರಿದಮಾ ಸದಂತು ॥

॥ ಪ್ರತಿಪದಾರ್ಥ ॥

**ಭಾರತೀ**— ಭಾರತೀ ದೇವಿಯು | **ಭಾರತೀಭಿಃ**—ಭಾರತೀಸಂಬಂಧಿಯಾದ ದೇವತೆಗಳೊಡನೆ | **ಸಜೋಷಾಃ**—ಕೂಡಿಕೊಂಡವಳಾಗಿಯೂ | **ಇಳಾ**—ಇಳಾದೇವಿಯು | **ಮನುಷ್ಯೇಭಿಃ**—ಮಾನವಲೋಕೋತ್ಪನ್ನರಾದವರೊಡನೆಯೂ | **ಅಗ್ನಿಃ**—ಅಗ್ನಿಯು | **ದೇವೈಃ**—ಇತರ ದೇವತೆಗಳೊಡನೆಯೂ | **ಆ (ಗಚ್ಛತು)**—ಬರಲಿ **ಸರಸ್ವತೀ**—ಸ್ವರಸ್ವತೀದೇವಿಯು | **ಸಾರಸ್ವತೇಭಿಃ**—ಮಧ್ಯಮಸ್ಥಾನರಾದ ದೇವತೆಗಳೊಡನೆ ಕೂಡಿ | **ಅರ್ವಾಕ್**—ನಮಗಭಿಮುಖವಾಗಿ (ಬರಲಿ) | **ತಿಸ್ರಃ ದೇವೀಃ**—ಇಳಾ, ಸರಸ್ವತೀ ಮತ್ತು ಭಾರತೀ ಎಂಬ ಮೂರು ದೇವತೆಗಳೂ | **ಇದಂ ಬರ್ಹಿಃ**—ಈ ದರ್ಭಾಸನದ ಮೇಲೆ | **ಆ ಸದಂತು**—ಕುಳಿತುಕೊಳ್ಳಲಿ.

॥ ಭಾವಾರ್ಥ ॥

ಭಾರತೀದೇವಿಯು ಭಾರತೀಸಂಬಂಧಿಗಳಾದ ದೇವತೆಗಳೊಡನೆ ಕೂಡಿಕೊಂಡವಳಾಗಿಯೂ, ಇಳಾದೇವಿಯು ಮಾನವರೊಡನೆಯೂ (ಅಥವಾ ಮಾನವಲೋಕೋತ್ಪನ್ನರಾದ ದೇವತೆಗಳೊಡನೆಯೂ) ಅಗ್ನಿಯು ಇತರ ದೇವತೆಗಳೊಡನೆಯೂ ಬರಲಿ. ಸರಸ್ವತೀದೇವಿಯು ಮಧ್ಯಮಸ್ಥಾನದ ದೇವತೆಗಳೊಡಗೂಡಿ ನಮಗಭಿಮುಖವಾಗಿ ಬರಲಿ. ಇಳಾ, ಸರಸ್ವತೀ ಮತ್ತು ಭಾರತೀ ಎಂಬ ಮೂರು ದೇವತೆಗಳೂ ಸಹ ಈ ದರ್ಭಾಸನದ ಮೇಲೆಬಂದು ಕುಳಿತುಕೊಳ್ಳಲಿ.

English Translation.

May Bharathi, associated with the Bharatis ; Ila with gods and men ; and Agni and Saraswati with the Saraswatas ; may the three goddesses sit down before us upon this sacred grass.

॥ ಸಂಹಿತಾಪಾಠಃ ॥

ತನ್ನಸ್ತುರೀಪಮಧ ಪೋಷಯಿತ್ನು ದೇವ ತ್ವಷ್ಟರ್ವಿ ರರಾಣಃ ಸ್ಯಸ್ವ ।

ಯತೋ ವೀರಃ ಕರ್ಮಣ್ಯಃ ಸುದಕ್ಷೋ ಯುಕ್ತಗ್ರಾವಾ ಜಾಯತೇ ದೇವಕಾಮಃ ॥ ೯ ॥

॥ ಪದಪಾಠಃ ॥

ತತ್ । ನಃ । ತುರೀಪಂ । ಅಧ । ಪೋಷಯಿತ್ನು । ದೇವ । ತ್ವಷ್ಟಃ । ವಿ । ರರಾಣಃ । ಸ್ಯಸ್ವೇತಿ ಸ್ಯಸ್ವ ।

ಯತಃ । ವೀರಃ । ಕರ್ಮಣ್ಯಃ । ಸುಽದಕ್ಷಃ । ಯುಕ್ತಽಗ್ರಾವಾ । ಜಾಯತೇ । ದೇವಽಕಾಮಃ ॥ ೯ ॥

॥ ಸಾಯಣಭಾಷ್ಯಂ ॥

**ದೇವ ದ್ಯೋತಮಾನ ಹೇ ತ್ವಷ್ಟಾ ರರಾಣೋ ರಮಮಾಣಸ್ತ್ವಂ ನೋಽಸ್ಮಾಕಂ ತುರೀಪಂ ತ್ವರಿತಮಾಪ್ನುವತ್ ಪೋಷಯಿತ್ನು ಪೋಷಕರಂ ತದ್ರೇತೋ ವಿ ಸ್ಯಸ್ವ । ವಿಶೇಷೇಣಾವಸಾನಂ ಪ್ರಾಪಯ। ವಿಮೋಚಯೇತ್ಯರ್ಥಃ । ಯತೋ ರೇತಸಃ ಕರ್ಮಣ್ಯಃ ಕರ್ಮಸು ಸಾಧುಃ ಸುದಕ್ಷಃ ಸುಬಲೋ ಯುಕ್ತಗ್ರಾವಾ ಸೋಮಸುತ್ ದೇವಕಾಮೋ ವೀರಃ ಪುತ್ರೋ ಜಾಯತೇ ॥**

॥ ಪ್ರತಿಪದಾರ್ಥ ॥

**ಅಧ**—ಅನಂತರ । **ದೇವ**—ದೇವತಾತ್ಮನಾದ । **ತ್ವಷ್ಟಃ**—ಎಲೈ ತ್ವಷ್ಟೃವೇ । **ರರಾಣಃ—ಹರ್ಷ** ವನ್ನು ಪ್ರಕಾಶಪಡಿಸುತ್ತಾ । **(ತ್ವಂ**—ನೀನು) । **ಯತಃ**—ಯಾವ ರೇತಸ್ಸಿನ ಪ್ರಭಾವದಿಂದ । **ಕರ್ಮಣ್ಯಃ**—ಕರ್ಮಕುಶಲನೂ । **ಸುದಕ್ಷಃ**—ಉತ್ತಮವಾದ ಬಲವುಳ್ಳವನೂ । **ಯುಕ್ತಗ್ರಾವಾ**—ಕಲ್ಲುಗಳಿಂದ ಸೋಮ ರಸವನ್ನು ಹಿಂಡುವವನೂ । **ದೇವಕಾಮಃ**—ದೇವಪೂಜಾನಿರತನೂ । **ವೀರಃ**—ಪರಾಕ್ರಮಿಯೂ ಆದ ಪುತ್ರನು । **ಜಾಯತೇ**—ಉತ್ಪನ್ನನಾಗುತ್ತಾನೆಯೋ ಅಂತಹ । **ತುರೀಪಂ**—ವೇಗವಾಗಿ ಫಲದಾಯಕವಾಗು ವುದೂ । **ಪೋಷಯಿತ್ನು**—ಪೋಷಣ ಸಾಧನವಾದುದೂ ಆದ । **ತತ್**—ಆ ರೇತಸ್ಸನ್ನು । **ನಃ ವಿ ಸ್ಯಸ್ವ**—ನಮ್ಮಲ್ಲೇ ತುಂಬುವಂತೆ ಬಿಟ್ಟುಕೊಡು.

॥ ಭಾವಾರ್ಥ ॥

ದೇವತಾತ್ಮನಾದ ಎಲೈ ತ್ವಷ್ಟೃವೇ, ನೀನು ಹರ್ಷವನ್ನು ಪ್ರಕಾಶಪಡಿಸುವವನಾಗಿ, ಕರ್ಮಕುಶಲನೂ, ಉತ್ತಮವಾದ ಬಲವುಳ್ಳವನೂ, ಗ್ರಾವಗಳಿಂದ ಸೋಮರಸವನ್ನು ಹಿಂಡುವವನೂ, ದೇವಪೂಜಾನಿರತನೂ ಪರಾ ಕ್ರಮಿಯೂ ಆದ ಪುತ್ರನನ್ನು ಉತ್ಪಾದನಮಾಡತಕ್ಕ ಪ್ರಭಾವವುಳ್ಳದ್ದೂ, ವೇಗವಾಗಿ ಫಲದಾಯಕವಾಗತಕ್ಕದ್ದೂ, ಪೋಷಣಸಾಧನವಾದುದೂ ಆದ ರೇತಸ್ಸು ನಮ್ಮಲ್ಲೂ ತುಂಬುವಂತೆ ಬಿಟ್ಟುಕೊಡು.

## English Translation.

Divine Twashtri, being well pleased, give issue to our procreative vigour, whence (a son) manly, devout, vigorous, wielder of the Soma-bruising stone, and reverencing the gods, may be born.

॥ ಸಂಹಿತಾಪಾಠಃ ॥

ವನಸ್ಪತೇಽವ ಸೃಜೋಪ ದೇವಾನಗ್ನಿರ್ಹವಿಃ ಶಮಿತಾ ಸೂದಯಾತಿ।
ಸೇದು ಹೋತಾ ಸತ್ಯತರೋ ಯಜಾತಿ ಯಥಾ ದೇವಾನಾಂ ಜನಿಮಾನಿ
ವೇದ ॥ ೧೦ ॥

॥ ಪದಪಾಠಃ ॥

ವನಸ್ಪತೇ । ಅವ । ಸೃಜ । ಉಪ । ದೇವಾನ್ । ಅಗ್ನಿಃ । ಹವಿಃ । ಶಮಿತಾ । ಸೂದಯಾತಿ ।
ಸಃ । ಇತ್ । ಊಂ ಇತಿ । ಹೋತಾ । ಸತ್ಯಽತರಃ । ಯಜಾತಿ । ಯಥಾ । ದೇವಾನಾಂ । ಜನಿಮಾನಿ ।
ವೇದ ॥ ೧೦ ॥

॥ ಸಾಯಣಭಾಷ್ಯಂ ॥

ಹೇ ವನಸ್ಪತೇ ದೇವಾನುಪಾವ ಸೃಜ । ಅಥ ಪರೋಕ್ಷಸ್ತುತಿಃ । ಅಗ್ನಿರ್ವನಸ್ಪತಿಃ ಶಮಿತಾ ಶಾಮಿತ್ರರೂಪಃ ಸನ್ ಹವಿಃ ಸೂದಯಾತಿ । ಪ್ರೇರಯತು । ಸೇತ್ಸ ಏವ ವನಸ್ಪತಿರ್ಹೋತಾ ದೇವಾನಾ-ಮಾಹ್ವಾತಾ ಸತ್ಯತರೋಽಪಿ ಸನ್ ಯಜಾತಿ । ಯಜತು । ದೇವಾನಾಂ ಜನಿಮಾನಿ ಜನನಾನಿ ಯಥಾ ಸ್ವಯಂ ವೇದ ತಥಾ ॥

॥ ಪ್ರತಿಪದಾರ್ಥ ॥

**ವನಸ್ಪತೇ**—ಎಲೈ ವನಸ್ಪತಿಯೇ । **ದೇವಾನ್**—ದೇವತೆಗಳನ್ನು । **ಉಪ ಅವ ಸೃಜ**—ನಮ್ಮಲ್ಲಿಗೆ ಬರುವಂತೆ ಮಾಡು ! **ಅಗ್ನಿಃ**—ಅಗ್ನಿರೂಪನಾದ ವನಸ್ಪತಿಯು । **ಶಮಿತಾ**—ಶಮಿತೃರೂಪನಾಗಿ । **ಹವಿಃ**—ಪಶುರೂಪವಾದ ಹವಿಸ್ಸನ್ನು । **ಸೂದಯಾತಿ**—ಪ್ರೇರಿಸಲಿ । **ಸೇತ್**—ಅದೇ ವನಸ್ಪತಿಯು । **ಹೋತಾ**—ದೇವತೆಗಳನ್ನು ಕರೆಯುವವನಾಗಿಯೂ । **ಸತ್ಯತರಃ**—ಸತ್ಯಸ್ವರೂಪನಾಗಿಯೂ ಇದ್ದು । **ಯದಾ**—ಯಾವ ರೀತಿಯಲ್ಲಿ । **ದೇವಾನಾಂ**—ದೇವತೆಗಳ । **ಜನಿಮಾನಿ**—ಉತ್ಪತ್ತಿಕ್ರಮಗಳನ್ನು । **ವೇದ**—ತಿಳಿಯುವನೋ ಆ ರೀತಿ । **ಯಜಾತಿ** – ಪೂಜಿಸಲಿ.

॥ ಭಾವಾರ್ಥ ॥

ಎಲೈ ವನಸ್ಪತಿಯೇ, ದೇವತೆಗಳನ್ನು ನಮ್ಮಲ್ಲಿಗೆ ಬರುವಂತೆ ಮಾಡು. ಅಗ್ನಿರೂಪನಾದ ವನಸ್ಪತಿಯು ಶಮಿತೃರೂಪನಾಗಿ ಪಶುರೂಪವಾದ ಹವಿಸ್ಸನ್ನು ಪ್ರೇರಿಸಲಿ. ಅದೇ ವನಸ್ಪತಿಯು ದೇವತೆಗಳನ್ನು ಕರೆಯುವವನಾಗಿಯೂ, ಸತ್ಯಸ್ವರೂಪನಾಗಿಯೂ ಇದ್ದು ಯಾವ ರೀತಿಯಲ್ಲಿ ದೇವತೆಗಳ ಉತ್ಪತ್ತಿಕ್ರಮಗಳನ್ನು ತಿಳಿದಿರುವನೋ ಆ ರೀತಿ ಪೂಜಿಸಲಿ.

## English Translation.

Vanaspati, bring the gods nigh : may Agni, the immolater, prepare the victim : let him who is truth officiate as the ministering priest, for verily he knows the birth of the gods.

॥ ಸಂಹಿತಾಪಾಠಃ ॥

ಆ ಯಾಹ್ಯಗ್ನೇ ಸಮಿಧಾನೋ ಅರ್ವಾಙಿಂದ್ರೇಣ ದೇವೈಃ ಸರಥಂ ತುರೇಭಿಃ।
ಬರ್ಹಿರ್ನ ಆಸ್ತಾಮದಿತಿಃ ಸುಪುತ್ರಾ ಸ್ವಾಹಾ ದೇವಾ ಅಮೃತಾ ಮಾದ-
ಯಂತಾಂ ॥ ೧೧ ॥

॥ ಪದಪಾಠಃ ॥

ಆ । ಯಾಹಿ । ಅಗ್ನೇ । ಸಂಽಇಧಾನಃ । ಅರ್ವಾಙ್ । ಇಂದ್ರೇಣ । ದೇವೈಃ । ಸಽರಥಂ । ತುರೇಭಿಃ ।
ಬರ್ಹಿಃ । ನಃ । ಆಸ್ತಾಂ । ಅದಿತಿಃ । ಸುಽಪುತ್ರಾ । ಸ್ವಾಹಾ । ದೇವಾಃ । ಅಮೃತಾಃ । ಮಾದಯಂತಾಂ ॥೧೧॥

॥ ಸಾಯಣಭಾಷ್ಯಂ ॥

ಹೇ ಅಗ್ನೇ ಸಮಿಧಾನ ಅರ್ವಾಗಸ್ಮದಭಿಮುಖಸ್ತ್ವಮಿಂದ್ರೇಣ ತುರೇಭಿಸ್ತ್ವರಿತೈರ್ದೇವೈಶ್ಚ ಸರಥಂ ಸಮಾನರಥಂ ಯಥಾ ಭವತಿ ತಥಾ ಆ ಯಾಹಿ । ಆಗಚ್ಛ । ನೋಽಸ್ಮಾಕಂ ಬರ್ಹಿರಧ್ಯಾಸ್ತಾಮದಿತಿಶ್ಚ ಸುಪುತ್ರಾ ಕಲ್ಯಾಣಪುತ್ರಾ । ಸ್ವಾಹಾ ದೇವಾಶ್ಚ ಸರ್ವೇಽಮೃತಾಃ ಸಂತೋ ಮಾದಯಂತಾಮಿತಿ ॥

॥ ಪ್ರತಿಪದಾರ್ಥ ॥

**ಅಗ್ನೇ**—ಎಲೈ ಅಗ್ನಿಯೇ । **ಸಮಿಧಾನಃ**—ಪ್ರಜ್ವಲಿತನಾದ ನೀನು । **ಅರ್ವಾಕ್**—ನಮಗಭಿಮುಖನಾಗಿ । **ಇಂದ್ರೇಣ**—ಇಂದ್ರನೊಡನೆಯೂ । **ತುರೇಭಿಃ**—ತ್ವರಿತಗಾಮಿಗಳಾದ । **ದೇವೈಃ**—ದೇವತೆಗಳೊಡನೆಯೂ । **ಸರಥಂ**—ಒಂದೇ ರಥದಲ್ಲಿ ಕುಳಿತವನಾಗಿ । **ಆ ಯಾಹಿ**—ದಯಮಾಡು । **ಸುಪುತ್ರಾ**—ಕಲ್ಯಾಣಾತ್ಮಕರಾದ ಪುತ್ರರುಳ್ಳ । **ಅದಿತಿಃ**—ಅದಿತಿದೇವಿಯು । **ನಃ**—ನಮ್ಮ । **ಬರ್ಹಿಃ**—ದರ್ಭಾಸನದ ಮೇಲೆ । **ಆಸ್ತಾಂ**—ಕುಳಿತುಕೊಳ್ಳಲಿ । **ಅಮೃತಾಃ**—ಮರಣಧರ್ಮರಹಿತರಾದ । **ದೇವಾಃ**—ದೇವತೆಗಳು । **ಸ್ವಾಹಾ**—ಭಕ್ತಿಪೂರ್ವಕವಾಗಿ ಅರ್ಪಿಸಿದ ಆಹುತಿಗಳಿಂದ । **ಮಾದಯಂತಾಂ**—ತೃಪ್ತಿಗೊಳ್ಳಲಿ.

॥ ಭಾವಾರ್ಥ ॥

ಎಲೈ ಅಗ್ನಿಯೇ, ಪ್ರಜ್ವಲಿತನಾದ ನೀನು ನಮಗಭಿಮುಖನಾಗಿ ಇಂದ್ರನೊಡನೆಯೂ ತ್ವರಿತಗಾಮಿಗಳಾದ ದೇವತೆಗಳೊಡನೆಯೂ ಒಂದೇ ರಥದಲ್ಲಿ ಕುಳಿತವನಾಗಿ ದಯಮಾಡು. ಕಲ್ಯಾಣಾತ್ಮಕರಾದ ಪುತ್ರರುಳ್ಳ ಅದಿತಿಯು

ನಮ್ಮ ದರ್ಭಾಸನದ ಮೇಲೆ ಕುಳಿತುಕೊಳ್ಳಲಿ. ಮರಣಧರ್ಮರಹಿತರಾದ ದೇವತೆಗಳು ಭಕ್ತಿಪೂರ್ವಕವಾಗಿ ಅರ್ಪಿಸಿದ ಆಹುತಿಗಳಿಂದ ತೃಪ್ತಿಗೊಳ್ಳಲಿ.

### English Translation.

Agni, kindled (into flame), come to our presence in the same chariot with Indra, and with the swift-moving gods: may Aditi, the mother of excellent sons, sit down on the sacred grass, and may the immortal gods be satisfied with the reverentially-offered oblation.

## ಮೂರನೆಯ ಸೂಕ್ತವು

**। ಸಾಯಣಭಾಷ್ಯಂ ॥**

**ಅಗ್ನಿಂ ವೋ ದೇವಮಿತಿ ದಶರ್ಚಂ ತೃತೀಯಂ ಸೂಕ್ತಂ ವಸಿಷ್ಠಸ್ಯಾರ್ಷಂ ತ್ರೈಷ್ಟುಭಮಾಗ್ನೇಯಂ । ಅತ್ರೇಯಮನುಕ್ರಮಣಿಕಾ । ಅಗ್ನಿಂ ವೋ ದಶೇತಿ ॥ ಅಗ್ನಿಂ ವೋ ದೇವಮಿತ್ಯೇತದಾದೀನಿ ದಶ ಸೂಕ್ತಾನಿ ತೃತೀಯಚತುರ್ಥವರ್ಜಿತಾನಿ ಪ್ರಾತರನುವಾಕ ಆಗ್ನೇಯೇ ಕ್ರತೌ ತ್ರೈಷ್ಟುಭೇ ಛಂದಸ್ಯಾಶ್ವಿನಶಸ್ತ್ರೇ ಚ ವಿನಿಯುಕ್ತಾನಿ । ಸೂತ್ರಿತಂ ಚ । ಅಗ್ನಿಂ ವೋ ದೇವಮಿತಿ ದಶಾನಾಂ ತೃತೀಯಚತುರ್ಥೇ ಉದ್ಧರೇತ್ । ಆ. ೪-೧೩ । ಇತಿ ॥ ವ್ಯೂಳ್ಹೇ ದಶರಾತ್ರೇಽಷ್ಟಮೇಽಹನೀದಂ ಸೂಕ್ತಮಾಜ್ಯಶಸ್ತ್ರಂ । ಸೂತ್ರ್ಯತೇ ಹಿ । ದ್ವಿತೀಯಸ್ಯಾಗ್ನಿಂ ವೋ ದೇವಮಿತ್ಯಾಜ್ಯಂ । ಆ. ೮-೧೦ । ಇತಿ ॥**

ಅನುವಾದವು—**ಅಗ್ನಿಂ ವೋ ದೇವಂ** ಎಂಬ ಈ ಸೂಕ್ತವು ಮೊದಲನೆಯ ಅನುವಾಕದಲ್ಲಿ ಮೂರನೆಯ ಸೂಕ್ತವು. ಇದರಲ್ಲಿ ಹತ್ತು ಋಕ್ಕುಗಳಿರುವವು. ಈ ಸೂಕ್ತಕ್ಕೆ ವಸಿಷ್ಠನು ಋಷಿಯು; ಅಗ್ನಿಯು ದೇವತೆಯು; ತ್ರಿಷ್ಟುಪ್ ಛಂದಸ್ಸು. ಅನುಕ್ರಮಣಿಕೆಯಲ್ಲಿ—**ಅಗ್ನಿಂ ವೋ ದಶ** ಎಂದು ಹೇಳಿರುವುದು. **ಅಗ್ನಿಂ ವೋ ದೇವಂ** ಎಂಬ ಈ ಸೂಕ್ತದಿಂದ ಮುಂದಿನ ಹತ್ತು ಸೂಕ್ತಗಳು—ಆದರೆ ಮೂರು ಮತ್ತು ನಾಲ್ಕನೆಯ ಸೂಕ್ತಗಳನ್ನು ಬಿಟ್ಟು—ಪ್ರಾತರನುವಾಕಮಂತ್ರಪಠನಕಾಲದಲ್ಲಿ ಆಗ್ನೇಯಕ್ರತುಸಂಬಂಧವಾದ ತ್ರಿಷ್ಟುಪ್‌ಛಂದಸ್ಸಿನ ಋಕ್ಕುಗಳಿಗಾಗಿಯೂ ಆಶ್ವಿನಶಸ್ತ್ರಮಂತ್ರಗಳಿಗಾಗಿಯೂ ವಿನಿಯೋಗಿಸಲ್ಪಡುವುವೆಂದು ಆಶ್ವಲಾಯನ ಶ್ರೌತಸೂತ್ರದ—**ಅಗ್ನಿಂ ವೋ ದೇವಮಿತಿ ದಶಾನಾಂ ತೃತೀಯಚತುರ್ಥೇ ಉದ್ಧರೇತ್** ಎಂಬ ಸೂತ್ರದಿಂದ (ಆ. ೪-೧೩) ವಿವೃತವಾಗಿರುವುದು. ವ್ಯೂಳ್ಹವೆಂಬ ದಶರಾತ್ರಯಾಗದಲ್ಲಿ ಎಂಟನೆಯ ದಿವಸ ಈ ಸೂಕ್ತವನ್ನು ಆಜ್ಯಶಸ್ತ್ರಮಂತ್ರಗಳಾಗಿ ಪಠಿಸಬೇಕೆಂದು ಆಶ್ವಲಾಯನಶ್ರೌತಸೂತ್ರದ—**ದ್ವಿತೀಯಸ್ಯಾಗ್ನಿಂ ವೋ ದೇವಮಿತ್ಯಾಜ್ಯಂ** ಎಂಬ ಸೂತ್ರದಿಂದ (ಆ. ೮-೧೦) ವಿವೃತವಾಗಿರುವುದು.

## ಸೂಕ್ತ—೩

ಮಂಡಲ—೭ ॥ ಅನುವಾಕ—೧ ॥ ಸೂಕ್ತ—೩ ॥
ಅಷ್ಟಕ—೫ ॥ ಅಧ್ಯಾಯ—೨ ॥ ವರ್ಗ—೩, ೪ ॥
॥ ಸೂಕ್ತದಲ್ಲಿರುವ ಋಕ್ಸಂಖ್ಯೆ—೧೦ ॥
॥ ಋಷಿಃ—ವಸಿಷ್ಠಃ ॥
॥ ದೇವತಾ—ಅಗ್ನಿಃ ॥
॥ ಛಂದಃ—ತ್ರಿಷ್ಟುಪ್ ॥

॥ ಸಂಹಿತಾಪಾಠಃ ॥

ಅಗ್ನಿಂ ವೋ ದೇವಮಗ್ನಿಭಿಃ ಸಜೋಷಾ ಯಜಿಷ್ಠಂ ದೂತಮಧ್ವರೇ ಕೃಣುಧ್ವಂ ।
ಯೋ ಮರ್ತ್ಯೇಷು ನಿಧ್ರುವಿರ್ಋತಾವಾ ತಪುರ್ಮೂರ್ಧಾ ಘೃತಾನ್ನಃ ಪಾವಕಃ ॥ ೧ ॥

॥ ಪದಪಾಠಃ ॥

ಅಗ್ನಿಂ । ವಃ । ದೇವಂ । ಅಗ್ನಿಽಭಿಃ । ಸಽಜೋಷಾಃ । ಯಜಿಷ್ಠಂ । ದೂತಂ । ಅಧ್ವರೇ । ಕೃಣುಧ್ವಂ ॥
ಯಃ । ಮರ್ತ್ಯೇಷು । ನಿಽಧ್ರುವಿಃ । ಋತಽವಾ । ತಪುಃಽಮೂರ್ಧಾ । ಘೃತಽಅನ್ನಃ । ಪಾವಕಃ ॥ ೧ ॥

॥ ಸಾಯಣಭಾಷ್ಯಂ ॥

ಹೇ ದೇವಾ ವೋ ಯೂಯಂ ದೇವಂ ದ್ಯೋತಮಾನಮಗ್ನಿಭಿರನ್ಯೈರಗ್ನಿಭಿಃ ಸಜೋಷಾಃ ಸಜೋಷಸಂ ಸಹಿತಂ॥ ದ್ವಿತೀಯಾರ್ಥೇ ಪ್ರಥಮಾ॥ ಯಜಿಷ್ಠಂ ಯಷ್ಟೃತಮಮಗ್ನಿಮಧ್ವರೇ ಕೌಟಿಲ್ಯರಹಿತೇ ಯಜ್ಞೇ ದೂತಂ ಕೃಣುಧ್ವಂ। ಕುರುತ। ಯೋಽಗ್ನಿರ್ದೇವೋಽಪಿ ಸನ್ ಮರ್ತ್ಯೇಷು ನಿಧ್ರುವಿರ್ನಿತರಾಂ ಧ್ರುವಸ್ತಿಷ್ಠತಿ ಋತಾವಾ ಯಜ್ಞವಾನ್ ಸತ್ಯವಾನ್ವಾ ತಪುರ್ಮೂರ್ಧಾ ತಾಪಕತೇಜಾ ಘೃತಾನ್ನಃ ಪಾವಕಃ ಶೋಧಕಶ್ಚ ಭವತಿ॥

॥ ಪ್ರತಿಪದಾರ್ಥ ॥

(ಎಲೈ ದೇವತೆಗಳೇ) **ವಃ**—ನೀವು । **ಯಃ**—ಯಾವ ಅಗ್ನಿಯು । **ಮರ್ತ್ಯೇಷು**—ಮಾನವರಲ್ಲಿ। **ನಿಧ್ರುವಿಃ**—ಶಾಶ್ವತನಾಗಿ ನಿಲ್ಲುವನೋ ಅಂತಹವನೂ। **ಋತಾವಾ**—ಸತ್ಯವಂತನೂ। **ತಪುರ್ಮೂರ್ಧಾ**—ತೀಕ್ಷ್ಣವಾದ ತೇಜಸ್ಸುಳ್ಳವನೂ। **ಘೃತಾನ್ನಃ**—ಘೃತವೇ ಅನ್ನವಾಗಿ ಉಳ್ಳವನೂ। **ಪಾವಕಃ**—ಶುದ್ಧಿಕಾರಕನೂ ಆಗಿರುವನೋ ಅಂತಹ। **ದೇವಂ**—ಪ್ರಕಾಶಮಾನನೂ। **ಅಗ್ನಿಭಿಃ**—ಇತರ ಅಗ್ನಿಗಳೊಡನೆ। **ಸಜೋಷಾಃ**—

ಕೂಡಿಕೊಂಡಿರುವವನೂ । **ಯಜಿಷ್ಠಂ**—ಪೂಜ್ಯತಮನೂ ಆದ । **ಅಗ್ನಿಂ**—ಯಜ್ಞಾಗ್ನಿಯನ್ನು । **ಅಧ್ವರೇ**—ಯಜ್ಞದಲ್ಲಿ । **ದೂತಂ**—ಹವಿರ್ವಾಹಕನಾದ ದೂತನನ್ನಾಗಿ । **ಕೃಣುಧ್ವಂ**—ಮಾಡಿರಿ.

॥ ಭಾವಾರ್ಥ ॥

ಎಲೈ ದೇವತೆಗಳೇ, ಯಾವ ಅಗ್ನಿಯು ಮಾನವರಲ್ಲಿ ಶಾಶ್ವತನಾಗಿ ನಿಲ್ಲುವನೋ ಅಂತಹವನೂ, ಯಾವನು ಸತ್ಯವಂತನೂ, ತೀಕ್ಷ್ಣವಾದ ತೇಜಸ್ಸುಳ್ಳವನೂ, ಘೃತವೇ ಅನ್ನವಾಗಿ ಉಳ್ಳವನೂ, ಶುದ್ಧಿಕಾರಕನೂ ಆಗಿರುವನೋ ಅಂತಹ ಪ್ರಕಾಶಮಾನನೂ, ಇತರ ಅಗ್ನಿಗಳೊಡನೆ ಕೂಡಿಕೊಂಡಿರುವವನೂ ಪೂಜ್ಯತಮನೂ ಆದ ಯಜ್ಞಾಗ್ನಿಯನ್ನು ಯಜ್ಞದಲ್ಲಿ ಹವಿರ್ವಾಹಕನಾದ ದೂತನನ್ನಾಗಿ ಮಾಡಿರಿ.

English Translation.

Appoint (gods) the most adorable, divine Agni, consentient with (all other) fires, your messengar at the sacrifice : him who is permanently present amongst men, the observer of truth, who is crowned with flame, the purifier, whose food is butter.

॥ ಸಂಹಿತಾಪಾಠಃ ॥

ಪ್ರೋಥದಶ್ವೋ ನ ಯವಸೇಽವಿಷ್ಯನ್ಯದಾ ಮಹಃ ಸಂವರಣಾದ್ವ್ಯಸ್ಥಾತ್ ।
ಆದಸ್ಯ ವಾತೋ ಅನು ವಾತಿ ಶೋಚಿರಧ ಸ್ಮ ತೇ ವ್ರಜನಂ ಕೃಷ್ಣಮಸ್ತಿ ॥೨॥

॥ ಪದಪಾಠಃ ॥

ಪ್ರೋಥತ್ । ಅಶ್ವಃ । ನ । ಯವಸೇ । ಅವಿಷ್ಯನ್ । ಯದಾ । ಮಹಃ । ಸಂऽವರಣಾತ್ । ವಿ । ಅಸ್ಥಾತ್ ॥
ಆತ್ । ಅಸ್ಯ । ವಾತಃ । ಅನು । ವಾತಿ । ಶೋಚಿಃ । ಅಧ । ಸ್ಮ । ತೇ । ವ್ರಜನಂ । ಕೃಷ್ಣಂ । ಅಸ್ತಿ ॥ ೨ ॥

॥ ಸಾಯಣಭಾಷ್ಯಂ ॥

ಯವಸೇ ಘಾಸೇಽವಿಷ್ಯನ್ ಭಕ್ಷಯನ್ ಪ್ರೋಥತ್ ಶಬ್ದಂ ಕುರ್ವನ್ ಸಂಚರನ್ನಾಶ್ವೋ ನ ಅಶ್ವ ಇವ ಮಹೋ ಮಹತಃ ಸಂವರಣಾನ್ನಿರೋಧಾತ್ ದಾವರೂಪೋಽಗ್ನಿರ್ಯದಾ ವ್ಯಸ್ಥಾತ್ ಸತತೇಷು ವೃಕ್ಷೇಷು ವಿತಿಷ್ಠತೇ ಅತ್ತದಾಸ್ಯಾಗ್ನೇಃ ಶೋಚಿರರ್ಚಿರನು ವಾತೋ ವಾತಿ । ಅಥ ಪ್ರತ್ಯಕ್ಷಸ್ತುತಿಃ । ಅಥಾನಂತರಂ ಹೇ ಅಗ್ನೇ ತೇ ತವ ವ್ರಜನಂ ವರ್ತ್ಮ ಕೃಷ್ಣಮಸ್ತಿ । ಭವತಿ । ಸ್ಮೇತಿ ಪೂರಣಃ ॥

॥ ಪ್ರತಿಪದಾರ್ಥ ॥

**ಯವಸೇ**—ಸಿದ್ಧವಾಗಿರುವ ತೃಣವನ್ನು । **ಅವಿಷ್ಯನ್**—ತಿನ್ನುವಾಗ । **ಪ್ರೋಥತ್**—ಶಬ್ದವನ್ನು ಮಾಡುತ್ತಾ ಕುಪ್ಪಳಿಸುವ । **ಅಶ್ವೋ ನ**—ಅಶ್ವದಂತೆ । (ಅಗ್ನಿಃ—ಅಗ್ನಿಯು) । **ಮಹಃ**—ಮಹತ್ತಾದ ।

**ಸಂವರಣಾತ್**— ಆವಾರಕವಾದ ವನಮಧ್ಯದಿಂದ ಆವಿರ್ಭವಿಸಿ । **ಯದಾ**— ಯಾವಾಗ । **ವ್ಯಸ್ಥಾತ್**— ವೃಕ್ಷಾದಿಗಳನ್ನು ವ್ಯಾಪಿಸಿ ಸ್ಥಿತನಾಗುವನೋ । **ಆತ್**— ಆ ಒಡನೆಯೇ । **ಅಸ್ಯ**— ಈ ಅಗ್ನಿಯ । **ಶೋಚಿಃ**— ಜ್ವಾಲೆಯನ್ನು । **ವಾತಃ**— ವಾಯುವು । **ಅನು ವಾತಿ**— ಬೀಸುತ್ತಾನೆ (ಎಲೈ ಅಗ್ನಿಯೇ) । **ಅಧ**— ಅನಂತರ । **ತೇ**— ನಿನ್ನ । **ವ್ರಜನಂ**— ಮಾರ್ಗವು । **ಕೃಷ್ಣಂ**— ಕೃಷ್ಣರೂಪವುಳ್ಳದ್ದಾಗಿ । **ಅಸ್ತಿ ಸ್ಮ**— ಆಗುವುದಲ್ಲವೇ.

॥ ಭಾವಾರ್ಥ ॥

ಹುಲ್ಲುಗಾವಲಿನಲ್ಲಿ ಸಿದ್ಧವಾಗಿರುವ ಹುಲ್ಲನ್ನು ತಿನ್ನುವಾಗ ಹೇಷಾರವನ್ನು ಮಾಡುತ್ತಾ ಕುಪ್ಪಳಿಸುವ ಅಶ್ವದಂತೆ ಅಗ್ನಿಯು ಮಹತ್ತಾದುದೂ ಸುತ್ತಲೂ ಆವರಕವಾದುದೂ ಆದ ವನಮಧ್ಯದಿಂದ ಆವಿರ್ಭವಿಸಿ ಯಾವಾಗ ವೃಕ್ಷಾದಿಗಳನ್ನು ವ್ಯಾಪಿಸಿ ಸ್ಥಿತನಾಗುವನೋ ಆ ಒಡನೆಯೇ ಈ ಅಗ್ನಿಯ ಜ್ವಾಲೆಯನ್ನು ವಾಯುವು ಬೀಸುತ್ತಾನೆ. ಎಲೈ ಅಗ್ನಿಯೇ, ಆ ಒಡನೆಯೇ ನೀನು ದಹಿಸಿಹೋದ ಮಾರ್ಗವು ಕಪ್ಪುವರ್ಣವುಳ್ಳದ್ದಾಗುತ್ತದೆ.

English Translation.

When, like a neighing steed about to feed upon the forage, (Agni) springs up from the vast-enclosing (forest), then the wind fans his flame: and black, (Agni), is your course.

॥ ಸಂಹಿತಾಪಾಠಃ ॥

ಉದ್ಯಸ್ಯ ತೇ ನವಜಾತಸ್ಯ ವೃಷ್ಣೋಽಗ್ನೇ ಚರಂತ್ಯಜರಾ ಇಧಾನಾಃ ।
ಅಚ್ಛಾ ದ್ಯಾಮರುಷೋ ಧೂಮ ಏತಿ ಸಂ ದೂತೋ ಅಗ್ನ ಈಯಸೇ ಹಿ ದೇವಾನ್ ॥ ೩ ॥

॥ ಪದಪಾಠಃ ॥

ಉತ್ । ಯಸ್ಯ । ತೇ । ನವ್ಽಜಾತಸ್ಯ । ವೃಷ್ಣಃ । ಅಗ್ನೇ । ಚರಂತಿ । ಅಜರಾಃ । ಇಧಾನಾಃ ।
ಅಚ್ಛ । ದ್ಯಾಂ । ಅರುಷಃ । ಧೂಮಃ । ಏತಿ । ಸಂ । ದೂತಃ । ಅಗ್ನೇ । ಈಯಸೇ । ಹಿ । ದೇವಾನ್ । ೩॥

॥ ಸಾಯಣಭಾಷ್ಯಂ ॥

ಹೇ ಅಗ್ನೇ ನವಜಾತಸ್ಯ ನವಪ್ರಾದುರ್ಭಾವಸ್ಯ ವೃಷ್ಣೋ ವರ್ಷಿತುರ್ಯಸ್ಯ ತೇ ತವಾಜರಾ ಜರಾರಹಿತಾ ಜ್ವಾಲಾ ಇಧಾನಾ ಉಚ್ಚರಂತಿ ಉದ್ಗಚ್ಛಂತಿ ಅಸ್ಯಾರುಷ ಆರೋಚಮಾನೋ ಧೂಮೋ ದ್ಯಾಮಚ್ಛ ದಿವಮಭ್ಯೇತಿ । ಗಚ್ಛತಿ । ಹೇ ಅಗ್ನೇ ತ್ವಂ ದೂತಃ ಸನ್ ದೇವಾನ್ ಸಮೀಯಸೇ ಹಿ । ಸಂಪ್ರಾಪ್ನೋಷಿ ಚ ॥

॥ ಪ್ರತಿಪದಾರ್ಥ ॥

**ಅಗ್ನೇ**—ಎಲೈ ಅಗ್ನಿಯೇ । **ನವಜಾತಸ್ಯ**—ಆಗತಾನೇ ಉತ್ಪನ್ನನಾದವನೂ । **ವೃಷ್ಣಃ**—ಇಷ್ಟಾರ್ಥ ಪ್ರದನೂ ಆದ । **ಯಸ್ಯ ತೇ**—ಯಾವ ನಿನ್ನ । **ಅಜರಾಃ**—ಜರಾರಹಿತವೂ । **ಇಧಾನಾಃ**—ಪ್ರಜ್ವಲಿತವೂ ಆದ ಜ್ವಾಲೆಗಳು । **ಉಚ್ಚರಂತಿ**—ಆವಿರ್ಭವಿಸಿ ಮೇಲ್ಭಾಗಕ್ಕೆ ಪ್ರಸರಿಸುವುವೋ (ಅಂತಹ ನಿನ್ನ) । **ಅರುಷಃ**—ಆಕರ್ಷಕವಾದ ವರ್ಣವುಳ್ಳ । **ಧೂಮಃ**—ಧೂಮವು (ಹೊಗೆಯು) । **ದ್ಯಾಂ ಅಚ್ಛ**—ದ್ಯುಲೋಕಕ್ಕೆ ಅಭಿಮುಖವಾಗಿ । **ಏತಿ**—ವ್ಯಾಪಿಸಿ ಹರಡುತ್ತದೆ । **ಅಗ್ನೇ**—ಎಲೈ ಅಗ್ನಿಯೇ । **ದೂತಃ**—ದೂತನಾದ ನೀನು **ದೇವಾನ್**—ದೇವತೆಗಳನ್ನು । **ಸಂ ಈಯಸೇ ಹಿ**—ಹೋಗಿ ಸೇರುವೆಯಲ್ಲವೇ.

॥ ಭಾವಾರ್ಥ ॥

ಎಲೈ ಅಗ್ನಿಯೇ, ಆಗತಾನೇ ಉತ್ಪನ್ನನಾದವನೂ, ಇಷ್ಟಾರ್ಥಪ್ರದನೂ ಆದ ಯಾವ ನಿನ್ನ ಜರಾರಹಿತವೂ ಪ್ರಜ್ವಲಿತವೂ ಆದ ಜ್ವಾಲೆಗಳು ಆವಿರ್ಭವಿಸಿ ಮೇಲಕ್ಕೆ ಪ್ರಸರಿಸುವುವೋ ಅಂತಹ ನಿನ್ನ ಆಕರ್ಷಕವಾದ ವರ್ಣವುಳ್ಳ ಧೂಮವು (ಹೊಗೆಯು) ದ್ಯುಲೋಕಕ್ಕೆ ಅಭಿಮುಖವಾಗಿ ವ್ಯಾಪಿಸಿ ಹರಡುತ್ತದೆ. ಎಲೈ ಅಗ್ನಿಯೇ, ದೂತನಾದ ನೀನು ದೇವತೆಗಳನ್ನು ಹೋಗಿ ಸೇರುತ್ತೀಯಲ್ಲವೇ ?

English Translation.

The kindled undecaying flames of you, the newly-born, the showerer, rise up : the luminous smoke spreads along the sky : and you, Agni, proceed as their messenger to the gods.

॥ ಸಂಹಿತಾಪಾಠಃ ॥

ವಿ ಯಸ್ಯ ತೇ ಪೃಥಿವ್ಯಾಂ ಪಾಜೋ ಅಶ್ರೇತ್ತೃಷು ಯದನ್ನಾ ಸಮವೃಕ್ತ ಜಂಭೈಃ ।
ಸೇನೇವ ಸೃಷ್ಟಾ ಪ್ರಸಿತಿಷ್ಟ ಏತಿ ಯವಂ ನ ದಸ್ಮ ಜುಹ್ವಾ ವಿವೇಕ್ಷಿ ॥ ೪ ॥

॥ ಪದಪಾಠಃ ॥

ವಿ । ಯಸ್ಯ । ತೇ । ಪೃಥಿವ್ಯಾಂ । ಪಾಜಃ । ಅಶ್ರೇತ್ । ತೃಷು । ಯತ್ । ಅನ್ನಾ । ಸಂಽಅವೃಕ್ತ । ಜಂಭೈಃ ॥ ಸೇನಾಽಇವ । ಸೃಷ್ಟಾ । ಪ್ರಽಸಿತಿಃ । ತೇ । ಏತಿ । ಯವಂ । ನ । ದಸ್ಮ । ಜುಹ್ವಾ । ವಿವೇಕ್ಷಿ ॥ ೪ ॥

॥ ಸಾಯಣಭಾಷ್ಯಂ ॥

ಹೇ ಅಗ್ನೇ ಯಸ್ಯ ದಾವರೂಪಸ್ಯ ತೇ ತವ ಪಾಜಸ್ತೇಜಃ ಪೃಥಿವ್ಯಾಂ ಭೂಮ್ಯಾಂ ತೃಷು ಕ್ಷಿಪ್ರಂ ವ್ಯಶ್ರೇತ್ ವಿಶ್ರಯತಿ ಯದ್ಯದಾನ್ನಾನಿ ಕಾಷ್ಠಾದೀನಿ ಜಂಭೈರ್ದಂತೈಃ । ಜ್ವಾಲಾಭಿರಿತ್ಯರ್ಥಃ । ಸಮವೃಕ್ತ

ವೃಂಕ್ತೇ ಖಾದತಿ । ತಥಾ ಸೇನೇವ ಸೃಷ್ಟೋದ್ಯುಕ್ತಾ ತೇ ತವ ಪ್ರಸಿತಿರ್ಜ್ವಾಲೈತಿ । ಗಚ್ಛತಿ । ದಸ್ಮ ಹೇ ದರ್ಶನೀಯಾಗ್ನೇ ತ್ವಂ ಯವಂ ನ ಯವಮಿವ ಜುಹ್ವಾ ಜ್ವಾಲಯಾ ವಿವೇಕ್ಷಿ । ಕಾಷ್ಠಾದೀನಿ ಭಕ್ಷಯಸಿ ವ್ಯಾಪ್ನೋಷಿ ವಾ ॥

॥ ಪ್ರತಿಪದಾರ್ಥ ॥

(ಎಲೈ ಅಗ್ನಿಯೇ) **ಯಸ್ಯ ತೇ**—ಯಾವ ನಿನ್ನ । **ಪಾಜಃ**—ತೇಜಸ್ಸು । **ಪೃಥಿವ್ಯಾಂ**—ಭೂಮಿಯಲ್ಲೆಲ್ಲಾ । **ತೃಷು**—ಶೀಘ್ರವಾಗಿ । **ವಿ ಅಶ್ರೇತ್**—ವ್ಯಾಪಿಸಿ । **ಯತ್**—ಯಾವಾಗ । **ಅನ್ನಾ**—ಕಾಷ್ಠಾದಿರೂಪವಾದ ಅನ್ನಗಳನ್ನು । **ಜಂಭೈಃ**—ಜ್ವಾಲಾರೂಪವಾದ ದಂತಗಳಿಂದ । **ಸಮವೃಕ್ತ**—ಭಕ್ಷಿಸುವುದೋ (ಆಗ) । **ತೇ**—ನಿನ್ನ । **ಪ್ರಸಿತಿಃ**—ಜ್ವಾಲೆಯು । **ಸೃಷ್ಟಾ**—ಯುದ್ಧೋದ್ಯುಕ್ತವಾದ । **ಸೇನೇವ**—ಸೇನೆಯಂತೆ । **ಏತಿ**—ಮುನ್ನುಗ್ಗುತ್ತದೆ । **ದಸ್ಮ**—ಆಕರ್ಷಕವಾದ ರೂಪವುಳ್ಳ ಎಲೈ ಅಗ್ನಿಯೇ । **ಜುಹ್ವಾ**—ನಿನ್ನ ಜ್ವಾಲೆಯಿಂದ । **ಯವಂ ನ**—ಯವಧಾನ್ಯವನ್ನು ಭಕ್ಷಿಸುವಂತೆ । **ವಿವೇಕ್ಷಿ**—ಕಾಷ್ಠಾದಿಗಳನ್ನು ವ್ಯಾಪಿಸಿ ಭಕ್ಷಿಸುತ್ತೀಯೆ

॥ ಭಾವಾರ್ಥ ॥

ಎಲೈ ಅಗ್ನಿಯೇ, ಯಾವ ನಿನ್ನ ತೇಜಸ್ಸು. ಭೂಮಿಯಲ್ಲೆಲ್ಲಾ ಶೀಘ್ರವಾಗಿ ವ್ಯಾಪಿಸಿ ಯಾವಾಗ ಕಾಷ್ಠಾದಿರೂಪವಾದ ಅನ್ನಗಳನ್ನು ಜ್ವಾಲಾರೂಪವಾದ ದಂತಗಳಿಂದ ಭಕ್ಷಿಸುವುದೋ ಆಗ ನಿನ್ನ ಜ್ವಾಲೆಯು ಯುದ್ಧೋದ್ಯುಕ್ತವಾದ ಸೇನೆಯಂತೆ ಮುನ್ನುಗ್ಗುತ್ತದೆ. ಆಕರ್ಷಕವಾದ ರೂಪವುಳ್ಳ ಎಲೈ ಅಗ್ನಿಯೇ, ನಿನ್ನ ಜ್ವಾಲೆಯಿಂದ ಯವಧಾನ್ಯವನ್ನು ಭಕ್ಷಿಸುವಂತೆ ಕಾಷ್ಠಾದಿಗಳನ್ನು ವ್ಯಾಪಿಸಿ ಭಕ್ಷಿಸುತ್ತೀಯೆ.

English Translation.

The light of whom quickly spreads over the earth, when with his teeth (of flame) he devours his food : your blaze rushes along like a charging host, when Agni, of goodly aspect, you spread with your flame (amongst the trees) as if (they were) barley.

॥ ಸಂಹಿತಾಪಾಠಃ ॥

ತಮಿದ್ದೋಷಾ ತಮುಷಸಿ ಯವಿಷ್ಠಮಗ್ನಿಮತ್ಯಂ ನ ಮರ್ಜಯಂತ ನರಃ ।
ನಿಶಿಶಾನಾ ಅತಿಥಿಮಸ್ಯ ಯೋನೌ ದೀದಾಯ ಶೋಚಿರಾಹುತಸ್ಯ ವೃಷ್ಣಃ ॥೫॥

॥ ಪದಪಾಠಃ ॥

ತಂ । ಇತ್ । ದೋಷಾ । ತಂ । ಉಷಸಿ । ಯವಿಷ್ಠಂ । ಅಗ್ನಿಂ । ಅತ್ಯಂ । ನ । ಮರ್ಜಯಂತ । ನರಃ ।
ನಿऽಶಿಶಾನಾಃ । ಅತಿಥಿಂ । ಅಸ್ಯ । ಯೋನೌ । ದೀದಾಯ । ಶೋಚಿಃ । ಆऽಹುತಸ್ಯ । ವೃಷ್ಣಃ ॥ ೫ ॥

|| ಸಾಯಣಭಾಷ್ಯಂ ||

ಯುವಿಷ್ಠಂ ಯುವತಮಮತಿಥಿಮತಿಥಿವತ್ಪೂಜ್ಯಂ ತಮಿತ್ತಮೇವಾಗ್ನಿಂ ದೋಷಾ ದೋಷಾಯಾಂ ರಾತ್ರಾವುಷಸಿ ವಾಸರೇಽಪಿ ತಮೇವಾಸ್ಯಾಗ್ನೇರ್ಯೋನೌ ಸ್ಥಾನ ಆಹವನೀಯಾಯತನೇ ಧಿಷ್ಣ್ಯೇ ವಾ ನಿಶಿಶಾನಾ ದೀಪಯಂತೋ ನರೋ ಮನುಷ್ಯಾ ಅತ್ಯಂ ನ ಸತತಗಮನಯುಕ್ತಂ ವೋಢಾರಮಶ್ವಮಿವ ಮರ್ಜಯಂತ। ಪರಿಚರಂತಿ। ಆಹುತಸ್ಯ ಚ ವೃಷ್ಣಃ ಕಾಮಾನಾಂ ವರ್ಷಿತುರಗ್ನೇಸ್ತಸ್ಯ ಶೋಚಿರ್ಜ್ವಾಲಾ ದೀದಾಯ। ದೀಪ್ಯತೇ ॥

|| ಪ್ರತಿಪದಾರ್ಥ ||

**ಯುವಿಷ್ಠಂ**—ಅತ್ಯಂತ ಯುವಕನೂ। **ಅತಿಥಿಂ**—ಅತಿಥಿಯಂತೆ ಪೂಜ್ಯನೂ ಆದ। **ತಂ ಇತ್**—ಅದೇ ಅಗ್ನಿಯನ್ನು। **ದೋಷಾ**—ರಾತ್ರಿಕಾಲದಲ್ಲೂ। **ತಂ ಅಗ್ನಿಂ**—ಅದೇ ಅಗ್ನಿಯನ್ನು। **ಉಷಸಿ**—ಉಷಃಕಾಲದಲ್ಲಿಯೂ। **ಅಸ್ಯ**—ಅದೇ ಅಗ್ನಿಯ। **ಯೋನೌ**—ಉತ್ಪತ್ತಿಸ್ಥಾನವಾದ ವೇದಿಯಲ್ಲಿ। **ನಿಶಿಶಾನಾಃ**—ಪ್ರಜ್ವಲಿತನನ್ನಾಗಿ ಮಾಡುತ್ತಾ। **ನರಃ**—ಮಾನವರು। **ಅತ್ಯಂ ನ**—ಸತತಗಾಮಿಯಾದ ಅಶ್ವವನ್ನು ಪಚರಿಸುವಂತೆ। **ಮರ್ಜಯಂತ**—ಪೂಜಿಸುತ್ತಾರೆ। **ಆಹುತಸ್ಯ**—ಆಹುತಿಯನ್ನರ್ಪಿಸಲ್ಪಟ್ಟವನೂ। **ವೃಷ್ಣಃ**—ಕಾಮವರ್ಷಕನೂ ಆದ ಅಗ್ನಿಯ। **ಶೋಚಿಃ**—ಜ್ವಾಲೆಯು। **ದೀದಾಯ**—ಪ್ರಕಾಶಿಸುತ್ತದೆ.

|| ಭಾವಾರ್ಥ ||

ಅತ್ಯಂತ ಯುವಕನೂ, ಅತಿಥಿಯಂತೆ ಪೂಜ್ಯನೂ ಆದ ಅದೇ ಅಗ್ನಿಯನ್ನು ರಾತ್ರಿಕಾಲದಲ್ಲಿಯೂ ಉಷಃಕಾಲದಲ್ಲೂ ಅಗ್ನಿಯ ಉತ್ಪತ್ತಿಸ್ಥಾನವಾದ ಯಜ್ಞವೇದಿಯಲ್ಲಿ ಪ್ರಜ್ವಲಿತನನ್ನಾಗಿ ಮಾಡುತ್ತಾ ಮಾನವರು ಸತತಗಾಮಿಯಾದ ಅಶ್ವವನ್ನು ಪಚರಿಸುವಂತೆ ಪೂಜಿಸುತ್ತಾರೆ. ಆಹುತಿಯನ್ನರ್ಪಿಸಲ್ಪಟ್ಟವನೂ, ಕಾಮವರ್ಷಕನೂ ಆದ ಅಗ್ನಿಯ ಜ್ವಾಲೆಯು ಅಧಿಕವಾಗಿ ಪ್ರಕಾಶಿಸುತ್ತದೆ.

## English Translation.

Men cherish that youthful Agni at evening and at dawn, as (they tend) a horse : lighting him as a guest in his proper station : the radiance of the showerer (of benefits,) to whom the oblation is offered, shines brightly.

|| ಸಂಹಿತಾಪಾಠಃ ||

ಸುಸಂದೃಕ್ತೇ ಸ್ವನೀಕ ಪ್ರತೀಕಂ ವಿ ಯದ್ರುಕ್ಮೋ ನ ರೋಚಸ ಉಪಾಕೇ।
ದಿವೋ ನ ತೇ ತನ್ಯತುರೇತಿ ಶುಷ್ಮಶ್ಚಿತ್ರೋ ನ ಸೂರಃ ಪ್ರತಿ ಚಕ್ಷಿ ಭಾನುಂ॥

॥ ಪದಪಾಠಃ ॥

ಸು॒ऽಸಂ॒ದೃಕ್ । ತೇ॒ । ಸು॒ऽಅ॒ನೀ॒ಕ॒ । ಪ್ರತೀ॑ಕಂ । ವಿ । ಯತ್ । ರು॒ಕ್ಮಃ । ನ । ರೋಚ॑ಸೇ । ಉ॒ಪಾ॒ಕೇ । ದಿ॒ವಃ । ನ । ತೇ॒ । ತ॒ನ್ಯ॒ತುಃ । ಏ॒ತಿ॒ । ಶುಷ್ಮಃ॑ । ಚಿ॒ತ್ರಃ । ನ । ಸೂರಃ॑ । ಪ್ರತಿ॑ । ಚ॒ಕ್ಷಿ॒ । ಭಾ॒ನುಂ ॥ ೬ ॥

॥ ಸಾಯಣಭಾಷ್ಯಂ ॥

ಸ್ವನೀಕ ಹೇ ಸುತೇಜಸ್ಕಾಗ್ನೇ ತ್ವಂ ಯದ್ಯದಾ ರುಕ್ಮೋ ನ ಸೂರ್ಯ ಇವ । ಸುವರ್ಣಮಿವ ವಾ । ಉಪಾಕೇಽಂತಿಕೇ ವಿ ರೋಚಸೇ ವಿಶೇಷೇಣ ದೀಪ್ಯಸೇ ತದಾ ತೇ ತವ ಪ್ರತೀಕಂ ರೂಪಮಂಗಂ ವಾ ಸುಸಂದೃಕ್ ಸುಸಂದರ್ಶನಂ ಭವತಿ । ಕಿಂಚ ತೇ ತವ ಶುಷ್ಮೋ ದಿವೋಽಂತರಿಕ್ಷಾತ್ತನ್ಯತುರ್ನಾಶನಿರಿವೈತಿ । ನಿರ್ಗಚ್ಛತಿ । ಚಿತ್ರೋ ದರ್ಶನೀಯಃ ಸೂರೋ ನ ಸೂರ್ಯ ಇವ ಭಾನುಂ ಸ್ವಾಂ ದೀಪ್ತಿಂ ಪ್ರತಿ ಚಕ್ಷಿ । ಪ್ರದರ್ಶಯಸಿ ॥

॥ ಪ್ರತಿಪದಾರ್ಥ ॥

**ಸ್ವನೀಕ**—ಉತ್ಕೃಷ್ಟವಾದ ತೇಜಸ್ಸುಳ್ಳ ಎಲೈ ಅಗ್ನಿಯೇ । **ಯತ್**—ಯಾವಾಗ । **ರುಕ್ಮೋ ನ**—ಸುವರ್ಣದಂತೆ । **ಉಪಾಕೇ**—ಸಮೀಪದಲ್ಲಿ । **ವಿ ರೋಚಸೇ**—ಅಧಿಕವಾಗಿ ಪ್ರಕಾಶಿಸುತ್ತೀಯೋ (ಆಗ) । **ತೇ**—ನಿನ್ನ । **ಪ್ರತೀಕಂ**—ರೂಪವು । **ಸುಸಂದೃಕ್**—ಅತ್ಯಂತ ಆಕರ್ಷವಾಗಿರುತ್ತದೆ । **ತೇ**—ನಿನ್ನ । **ಶುಷ್ಮಃ**—ಶಕ್ತಿಯು । **ದಿವಃ**—ಅಂತರಿಕ್ಷದಿಂದ ಆವಿರ್ಭವಿಸುವ । **ತನ್ಯತುಃ ನ**—ವಜ್ರಾಯುಧದಂತೆ । **ಏತಿ**—ಹೊರಕ್ಕೆ ಕಾಣಿಸಿಕೊಳ್ಳುತ್ತದೆ । **ಸೂರಃ ನ**—ಸೂರ್ಯನಂತೆ । **ಚಿತ್ರಃ**—ಆಕರ್ಷಕನಾದ ನೀನು । **ಭಾನುಂ**—ನಿನ್ನ ಕಾಂತಿಯನ್ನು । **ಪ್ರತಿ ಚಕ್ಷಿ**—ಎಲ್ಲರಿಗೂ ಪ್ರಕಾಶಪಡಿಸುತ್ತೀಯೆ.

॥ ಭಾವಾರ್ಥ ॥

ಉತ್ಕೃಷ್ಟವಾದ ತೇಜಸ್ಸುಳ್ಳ ಎಲೈ ಅಗ್ನಿಯೇ, ಯಾವಾಗ ಸುವರ್ಣದಂತೆ ಪ್ರಕಾಶಿತನಾಗಿ ಸಮೀಪದಲ್ಲಿಯೇ ಕಂಗೊಳಿಸುವೆಯೋ, ಆಗ ನಿನ್ನ ರೂಪವು ಅತ್ಯಂತ ಆಕರ್ಷಕವಾಗಿರುತ್ತದೆ. ನಿನ್ನ ಶಕ್ತಿಯು ಅಂತರಿಕ್ಷದಿಂದ ಆವಿರ್ಭವಿಸುವ ವಜ್ರಾಯುಧದಂತೆ ಹೊರಕ್ಕೆ ಕಾಣಿಸಿಕೊಳ್ಳುತ್ತದೆ. ಸೂರ್ಯನಂತೆ ಆಕರ್ಷಕನಾದ ನೀನು ನಿನ್ನ ಕಾಂತಿಯನ್ನು ಎಲ್ಲರಿಗೂ ಪ್ರಕಾಶಪಡಿಸುತ್ತೀಯೆ.

## English Translation.

Resplendent Agni, when you shine nigh at hand like gold, your appearance is beautiful: your might issues like the thunderbolt from the firmament, and like the wonderful sun, you display your lustre.

॥ ಸಂಹಿತಾಪಾಠಃ ॥

ಯಥಾ ವಃ ಸ್ವಾಹಾಗ್ನಯೇ ದಾಶೇಮ ಪರೀಳಾಭಿರ್ಘೃತವದ್ಭಿಶ್ಚ ಹವ್ಯೈಃ ।

ತೇಭಿರ್ನೋ ಅಗ್ನೇ ಅಮಿತೈರ್ಮಹೋಭಿಃ ಶತಂ ಪೂರ್ಭಿರಾಯಸೀಭಿರ್ನಿ ಪಾಹಿ ॥ ೭ ॥

॥ ಪದಪಾಠಃ ॥

ಯಥಾ । ವಃ । ಸ್ವಾಹಾ । ಅಗ್ನಯೇ । ದಾಶೇಮ । ಪರಿ । ಇಳಾಭಿಃ । ಘೃತವತ್ಽಭಿಃ । ಚ । ಹವ್ಯೈಃ ।

ತೇಭಿಃ । ನಃ । ಅಗ್ನೇ । ಅಮಿತೈಃ । ಮಹಃಽಭಿಃ । ಶತಂ । ಪೂಃಽಭಿಃ । ಆಯಸೀಭಿಃ । ನಿ । ಪಾಹಿ ॥ ೭ ॥

॥ ಸಾಯಣಭಾಷ್ಯಂ ॥

ಹೇ ಅಗ್ನೇ ಅಗ್ನಯೇಽಗ್ರಸ್ಯ ನೇತ್ರೇ ವಸ್ತುಭ್ಯಂ ಸ್ವಾಹಾ ಸ್ವಾಹುತಂ ಹವಿಃ । ಕಿಂಚ ಯಥಾ ವಯಮಿಳಾಭಿರ್ಗೋಭಿರ್ಗೋವಿಕಾರೈಃ ಕ್ಷೀರಾದಿಭಿರ್ಘೃತವದ್ಭಿರ್ಘೃತಸಹಿತೈರ್ಹವ್ಯೈಃ ಪುರೋಡಾಶಾದಿಭಿಶ್ಚ ದಾಶೇಮ ಪರಿಚರೇಮ ತಥಾ ತ್ವಮಪಿ ತೇಭಿಃ ಪ್ರಸಿದ್ಧೈರಮಿತೈರಪರಿಮಿತೈರ್ಮಹೋಭಿಸ್ತೇಜೋಭಿಃ ಶತಮಪರಿಮಿತಾಭಿರಾಯಸೀಭಿರ್ಹಿರಣ್ಮಯೀಭಿಃ । ರುಕ್ಮಮಯಸ ಇತಿ ಹಿರಣ್ಯನಾಮಸು ಪಾಠಾತ್ । ಪೂರ್ಭಿರ್ನಗರೀಭಿರೇವ ನೋಽಸ್ಮಾನ್ ನಿ ಪಾಹಿ । ನಿತರಾಂ ರಕ್ಷ ॥

॥ ಪ್ರತಿಪದಾರ್ಥ ॥

**ಅಗ್ನೇ**—ಎಲೈ ಅಗ್ನಿಯೇ । **ಅಗ್ನಯೇ**—ನೇತೃವಾದ । **ವಃ**—ನಿನ್ನನ್ನುದ್ದೇಶಿಸಿ । **ಯಥಾ**—ಯಾವ ರೀತಿಯಲ್ಲಿ । (**ವಯಂ**—ನಾವು) । **ಇಳಾಭಿಃ**—ಕ್ಷೀರಾದಿಗಳಿಂದಲೂ । **ಘೃತವದ್ಭಿಃ**—ಘೃತಯುಕ್ತವಾದ । **ಹವ್ಯೈಃ ಚ**—ಪುರೋಡಾಶಾದಿಗಳಿಂದಲೂ ಕೂಡಿದ । **ಸ್ವಾಹಾ**—ಹವಿಸ್ಸಿನ ಆಹುತಿಗಳನ್ನು । **ಪರಿ ದಾಶೇಮ**—ಶ್ರದ್ಧೆಯಿಂದ ಅರ್ಪಿಸುವೆವೋ (ಅದೇ ರೀತಿಯಲ್ಲಿ) । **ತೇಭಿಃ**—ಪ್ರಸಿದ್ಧವಾದವೂ । **ಅಮಿತೈಃ**—ಅಪರಿಮಿತವಾದವೂ । **ಮಹೋಭಿಃ**—ತೇಜೋಮಯವಾದವೂ । **ಶತಂ**—ಅನೇಕಸಂಖ್ಯಾಕವೂ । **ಆಯಸೀಭಿಃ**—ಹಿರಣ್ಯನಿರ್ಮಿತವಾದವೂ ಆದ । **ಪೂರ್ಭಿಃ**—ನಗರಗಳ ದಾನದಿಂದ । **ನಃ**—ನಮ್ಮನ್ನು । **ನಿ ಪಾಹಿ**—ಪೂರ್ಣವಾಗಿ ರಕ್ಷಿಸು.

॥ ಭಾವಾರ್ಥ ॥

ಎಲೈ ಅಗ್ನಿಯೇ, ನೇತೃವಾದ ನಿನ್ನನ್ನುದ್ದೇಶಿಸಿ ಯಾವ ರೀತಿಯಲ್ಲಿ ನಾವು ಕ್ಷೀರಾದಿಗಳಿಂದಲೂ ಘೃತಯುಕ್ತವಾದ ಪುರೋಡಾಶಾದಿಗಳಿಂದಲೂ ಕೂಡಿದ ಹವಿಸ್ಸಿನ ಆಹುತಿಗಳನ್ನು ಶ್ರದ್ಧೆಯಿಂದ ಅರ್ಪಿಸುವೆವೋ ಅದೇ ರೀತಿಯಲ್ಲಿ

ಪ್ರಸಿದ್ಧವಾದವೂ, ಅಪರಿಮಿತವಾದವೂ, ತೇಜೋಯುತವಾದವೂ, ಅನೇಕ ಸಂಖ್ಯಾಕವಾದವೂ, ಹಿರಣ್ಯನಿರ್ಮಿತವೂ ಆದ ನಗರಗಳ ದಾನದಿಂದ ನಮ್ಮನ್ನು ಪೂರ್ಣವಾಗಿ ರಕ್ಷಿಸು.

English Translation.

When we present to you, Agni, the sacred offering along with oblations mixed with milk and butter, then protect us, Agni, with those vast unbounded, innumerable golden cities.

|| ಸಂಹಿತಾಪಾಠಃ ||

ಯಾ ವಾ ತೇ ಸಂತಿ ದಾಶುಷೇ ಅಧೃಷ್ಟಾ ಗಿರೋ ವಾ ಯಾಭಿರ್ನೃವತೀರು-
ರುಷ್ಯಾಃ ।

ತಾಭಿರ್ನಃ ಸೂನೋ ಸಹಸೋ ನಿ ಪಾಹಿ ಸ್ಮತ್ಸೂರೀಞ್ಜರಿತೄಞ್ಜಾತವೇದಃ ||

|| ಪದಪಾಠಃ ||

ಯಾಃ । ವಾ । ತೇ । ಸಂತಿ । ದಾಶುಷೇ । ಅಧೃಷ್ಟಾಃ । ಗಿರಃ । ವಾ । ಯಾಭಿಃ । ನೃऽವತೀಃ । ಉರುಷ್ಯಾಃ ।
ತಾಭಿಃ । ನಃ । ಸೂನೋ ಇತಿ । ಸಹಸಃ । ನಿ । ಪಾಹಿ । ಸ್ಮತ್ । ಸೂರೀನ್ । ಜರಿತೄನ್ । ಜಾತऽವೇದಃ ||

|| ಸಾಯಣಭಾಷ್ಯಂ ||

ಸಹಸಃ ಸೂನೋ ಹೇ ಬಲಸ್ಯ ಪುತ್ರ ಜಾತವೇದೋಽಗ್ನೇ ದಾಶುಷೇ ದಾಶುಷಸ್ತೇ ತವ ಯಾ ವಾ ಯಾಶ್ಚ ಜ್ವಾಲಾಃ ಸಂತಿ । ಅಧೃಷ್ಟಾ ರಕ್ಷೋಭಿರಪ್ರಧೃಷಿತಾ ಗಿರೋ ವಾ ಗಿರಶ್ಚ ಸಂತಿ । ಯಾಭಿ-ರ್ಗೀರ್ಭಿರ್ನೃವತೀಃ ಪುತ್ರವತೀಃ ಪ್ರಜಾ ಉರುಷ್ಯಾ ರಕ್ಷೇಃ ತಾಭಿರುಭಯೀಭಿರ್ನೋಽಸ್ಮಾನ್ । ಸ್ಮದಿತಿ ಪ್ರಶಸ್ತವಚನಃ । ಪ್ರಶಸ್ತಾನ್ ಸೂರೀನ್ ಹವಿಷಾಂ ಪ್ರೇರಕಾನ್ ಜರಿತೄನ್ ಸ್ತೋತೄಂಶ್ಚ ನಿ ಪಾಹಿ । ನಿತರಾಂ ರಕ್ಷ ||

|| ಪ್ರತಿಪದಾರ್ಥ ||

**ಸಹಸಃ ಸೂನೋ**—ಶಕ್ತಿಪುತ್ರನೂ। **ಜಾತವೇದಃ**—ಸಕಲಜ್ಞನೂ ಆದ ಎಲೈ ಅಗ್ನಿಯೇ। **ದಾಶುಷೇ**—ಉದಾರದಾನಿಯಾದ । **ತೇ**—ನಿನ್ನ । **ಯಾ ವಾ**—ಯಾವ ಜ್ವಾಲೆಗಳು । **ಸಂತಿ**—ಇರುವುವೋ । **ಅಧೃಷ್ಟಾಃ**—ಅಪ್ರತಿಹತವಾದ । **ಗಿರಃ ವಾ**—ಯಾವ ಸ್ತುತಿವಾಕ್ಕುಗಳಿವೆಯೋ । **ಯಾಭಿಃ**—ಯಾವ ಸ್ತುತಿವಾಕ್ಕುಗಳೊಡನೆ । **ನೃವತೀಃ**—ಪುತ್ರಯುಕ್ತರಾದ ನಿನ್ನ ಪ್ರಜೆಗಳನ್ನು । **ಉರುಷ್ಯಾಃ**—ರಕ್ಷಿಸುವೆಯೋ । **ತಾಭಿಃ**—ಅವುಗಳೊಡನೆ ಯೆಲ್ಲಾ । **ಸ್ಮತ್**—ಪ್ರಸಂಶನೀಯವಾದ ರೀತಿಯಲ್ಲಿ । **ಸೂರೀನ್**—ಹವಿಸ್ಸನ್ನರ್ಪಿಸುವವರೂ । **ಜರಿತೄನ್**—ಸ್ತೋತೃಗಳೂ ಆದ । **ನಃ**—ನಮ್ಮನ್ನು । **ನಿ ಪಾಹಿ**—ಪೂರ್ಣವಾಗಿ ರಕ್ಷಿಸು.

॥ ಭಾವಾರ್ಥ ॥

ಶಕ್ತಿಪುತ್ರನೂ, ಸರ್ವಜ್ಞನೂ ಆದ ಎಲೈ ಅಗ್ನಿಯೇ, ಉದಾರದಾನಿಯಾದ ನಿನ್ನ ಯಾವ ಜ್ವಾಲೆಗಳು ಇರುವುವೋ, ಅಪ್ರತಿಹತವಾದ ಯಾವ ಸ್ತುತಿವಾಕ್ಯಗಳಿವೆಯೋ, ಯಾವ ಸ್ತುತಿವಾಕ್ಯಗಳೊಡನೆ ಪುತ್ರಯುಕ್ತರಾದ ನಿನ್ನ ಪ್ರಜೆಗಳನ್ನು ರಕ್ಷಿಸುವೆಯೋ ಅವುಗಳೆಲ್ಲದರ ಸಹಾಯದೊಡನೆ ಪ್ರಶಂಸನೀಯವಾದ ರೀತಿಯಲ್ಲಿ ಹವಿಸ್ಸನ್ನರ್ಪಿಸುವವರೂ, ಸ್ತೋತೃಗಳೂ ಆದ ನಮ್ಮನ್ನು ಪೂರ್ಣವಾಗಿ ರಕ್ಷಿಸು.

## English Translation.

Son of strength, Jatavedas, with those unobstructed (splendours) which belong to you, a munificent donor, and with those praises wherewith you protect people with their posterity, protect us your worshippers and praisers.

॥ ಸಂಹಿತಾಪಾಠಃ ॥

ನಿರ್ಯತ್ಪೂತೇವ ಸ್ವಧಿತಿಃ ಶುಚಿರ್ಗಾತ್ಸ್ವಯಾ ಕೃಪಾ ತನ್ವಾ ರೋಚಮಾನಃ ।
ಆ ಯೋ ಮಾತ್ರೋರುಶೇನ್ಯೋ ಜನಿಷ್ಟ ದೇವಯಜ್ಯಾಯ ಸುಕ್ರತುಃ ಪಾವಕಃ ॥ ೯ ॥

॥ ಪದಪಾಠಃ ॥

ನಿಃ । ಯತ್ । ಪೂತಾಽಇವ । ಸ್ವಽಧಿತಿಃ । ಶುಚಿಃ । ಗಾತ್ । ಸ್ವಯಾ । ಕೃಪಾ । ತನ್ವಾ । ರೋಚಮಾನಃ ।
ಆ । ಯಃ । ಮಾತ್ರೋಃ । ಉಶೇನ್ಯಃ । ಜನಿಷ್ಟ । ದೇವಽಯಜ್ಯಾಯ । ಸುಽಕ್ರತುಃ । ಪಾವಕಃ ॥ ೯ ॥

॥ ಸಾಯಣಭಾಷ್ಯಂ ॥

ಯದ್ಯದಾ ಶುಚಿರಗ್ನಿಃ ಸ್ವಯಾ ಸ್ವಕೀಯಯಾ ತನ್ವಾ ತನುಯಾ ಕೃಪಾ ಕೃಪಯಾ ದೀಪ್ತ್ಯಾ ರೋಚಮಾನಃ ಪೂತೇವ ಸ್ವಧಿತಿಃ ಶಸ್ತ್ರೀ ತೀಕ್ಷ್ಣೀಕೃತಾ ಸ್ವಧಿತಿರಿವ ನಿರ್ಗಾತ್ ಕಾಷ್ಠಾನ್ನಿರ್ಗಚ್ಛತಿ ತದಾನೀಂ ದೇವಯಜ್ಯಾಯ ಭವತಿ । ತದೇವ ವಿಶದಯತಿ । ಯೋಽಗ್ನಿರುಶೇನ್ಯಃ ಕಮನೀಯಃ ಸುಕ್ರತುಃ ಸುಕರ್ಮಾ ಪಾವಕಃ ಶೋಧಕಶ್ಚ ಮಾತ್ರೋರರಣ್ಯೋರಾ ಜನಿಷ್ಟ ಆಜಾಯತೆ ಸ ದೇವಯಜ್ಯಾಯ ಭವತೀತಿ ॥

॥ ಪ್ರತಿಪದಾರ್ಥ ॥

**ಉಶೇನ್ಯಃ**—ಅತ್ಯಂತ ಅಪೇಕ್ಷಿತನೂ । **ಸುಕ್ರತುಃ**—ಉತ್ತಮವಾದ ಕರ್ಮಕರ್ತನೂ । **ಪಾವಕಃ**—ಶುದ್ಧಿಕಾರಕನೂ ಆದ । **ಯಃ**—ಯಾವ ಅಗ್ನಿಯು । **ಮಾತ್ರೋಃ**—ಮಾತೃರೂಪವಾದ ಅರಣಿಗಳಿಂದ ।

**ಆ ಅಜನಿಷ್ಟ**—ಉತ್ಪನ್ನನಾದನೋ ಅಂತಹವನೂ ಮತ್ತು । **ಸ್ವಯಾ**—ತನ್ನದೇ ಆದುದೂ । **ತನ್ವಾ**—ವಿಸ್ತೃತವಾದುದೂ ಆದ । **ಕೃಪಾ**—ತೇಜಸ್ಸಿನಿಂದ । **ರೋಚಮಾನಃ**—ಪ್ರಕಾಶಿಸುವವನೂ ಆದ । **ಶುಚಿಃ—**ಅಗ್ನಿಯು । **ಯತ್**—ಯಾವಾಗ । **ಪೂತಾ**—ತೀಕ್ಷ್ಣವಾಗಿ ಮಾಡಲ್ಪಟ್ಟ । **ಸ್ವಧಿತಿಃ ಇವ**—ಖಡ್ಗದಂತೆ । **ನಿಃ ಗಾತ್**—ಕಾಷ್ಠಾದಿಗಳಿಂದ ಹೊರಕ್ಕೆ ಆವಿರ್ಭವಿಸುವನೋ (ಆಗ) । **ದೇವಯಜ್ಯಾಯ**—ದೇವತೆಗಳ ಪೂಜಾಕಾರ್ಯಕ್ಕೆ ಸಿದ್ಧನಾಗುತ್ತಾನೆ.

॥ ಭಾವಾರ್ಥ ॥

ಸಕಲರಿಂದಲೂ ಅಪೇಕ್ಷಿತನೂ ಉತ್ತಮವಾದ ಕರ್ಮಕರ್ತನೂ, ಶುದ್ಧಿಕಾರಕನೂ ಆದ ಯಾವ ಅಗ್ನಿಯು ಮಾತೃರೂಪರಾದ ಅರಣಿಗಳಿಂದ ಉತ್ಪನ್ನನಾದನೋ, ಅಂತಹವನೂ ಮತ್ತು ತನ್ನದೇ ಆದುದೂ, ವಿಸ್ತೃತವಾದುದೂ ಆದ ತೇಜಸ್ಸಿನಿಂದ ಪ್ರಕಾಶಿಸುವವನೂ ಆದ ಅಗ್ನಿಯು ತೀಕ್ಷ್ಣವಾಗಿ ಮಾಡಲ್ಪಟ್ಟ ಖಡ್ಗದಂತೆ ಯಾವಾಗ ಕಾಷ್ಠಾದಿಗಳಿಂದ ಹೊರಕ್ಕೆ ಆವಿರ್ಭವಿಸುವನೋ ಆಗ ದೇವಪೂಜಾಕಾರ್ಯಗಳಿಗೆ ಸಿದ್ಧನಾಗುತ್ತಾನೆ.

## English Translation.

When the bright Agni, radiant with his own diffusive lustre, issues (from the touchwood)]like a sharpened axe ; and he who is desirable, the doer of great deeds, the purifier, is born of his two parents : (he appears) for the worship of the gods.

॥ ಸಂಹಿತಾಪಾಠಃ ॥

ಏತಾ ನೋ ಅಗ್ನೇ ಸೌಭಗಾ ದಿದೀಹ್ಯಪಿ ಕ್ರತುಂ ಸುಚೇತಸಂ ವತೇಮ ।
ವಿಶ್ವಾ ಸ್ತೋತೃಭ್ಯೋ ಗೃಣತೇ ಚ ಸಂತು ಯೂಯಂ ಪಾತ ಸ್ವಸ್ತಿಭಿಃ
ಸದಾ ನಃ ॥ ೧೦ ॥

॥ ಪದಪಾಠಃ ॥

ಏತಾ । ನಃ । ಅಗ್ನೇ । ಸೌಭಗಾ । ದಿದೀಹಿ । ಅಪಿ । ಕ್ರತುಂ । ಸುऽಚೇತಸಂ । ವತೇಮ ।
ವಿಶ್ವಾ । ಸ್ತೋತೃऽಭ್ಯಃ । ಗೃಣತೇ । ಚ । ಸಂತು । ಯೂಯಂ । ಪಾತ । ಸ್ವಸ್ತಿऽಭಿಃ । ಸದಾ । ನಃ ॥೧೦॥

॥ ಸಾಯಣಭಾಷ್ಯಂ ॥

ಹೇ ಅಗ್ನೇ ಏತೈತಾನಿ ಪರಿದೃಶ್ಯಮಾನಾನಿ ಸೌಭಗಾ ಸೌಭಗಾನಿ ಶೋಭನಾನಿ ಧನಾನಿ ನೋಽಸ್ಮಭ್ಯಂ ದಿದೀಹಿ । ದೀಪಯ ದೇಹಿ ವಾ । ಅಪ್ಯಪಿ ಚ ಕ್ರತುಂ ಕರ್ಮ ಯಜ್ಞಾನಾಂ ಕರ್ತಾರಂ ವಾ ಸುಚೇತಸಂ

ಶೋಭನಪ್ರಜ್ಞಾನಯುಕ್ತಂ ಸುಪ್ರಜ್ಞಾನಂ ಪುತ್ರಂ ವಾ ವತೇಮ । ಸಂಭಜೇಮಹಿ ॥ ವನತೇಃ ಸಂಭಜನಾರ್ಥಸ್ಯ ವರ್ಣಾಂತರಾಗಮೋ ಸತಿ ರೂಪಂ ॥ ವಿಶ್ವಾ ವಿಶ್ವಾನಿ ಧನಾನಿ ಸ್ತೋತೃಭ್ಯ ಉದ್ಗಾತೃಭ್ಯೋ ಗೃಣತೇ ಶಂಸತೇ ಚ ಸಂತು । ಯೂಯಂ ತ್ವತ್ಪರಿವಾರಾಶ್ಚ ಸರ್ವೇ ಯೂಯಂ ನೋಽಸ್ಮಾನ್ ಸ್ವಸ್ತಿಭಿಃ ಕ್ಷೇಮೈಃ ಸದಾ ಸರ್ವದಾ ಪಾತ । ರಕ್ಷತ ॥

॥ ಪ್ರತಿಪದಾರ್ಥ ॥

**ಅಗ್ನೇ**—ಎಲೈ ಅಗ್ನಿಯೇ । **ಏತಾ**—ಮೇಲೆ ವರ್ಣಿತವಾದ । **ಸೌಭಗಾ**—ಸಕಲ ಮಂಗಳಕರವಾದ ಸಂಪತ್ತುಗಳನ್ನೂ । **ನಃ**—ನಮಗೆ । **ದಿದೀಹಿ**—ಒದಗಿಸಿಕೊಡು । **ಅಪಿ**—ಮತ್ತು । **ಕ್ರತುಂ**—ಯಜ್ಞಕರ್ಮಗಳನ್ನು ಮಾಡುವವನೂ । **ಸುಚೇತಸಂ**—ಉತ್ತಮವಾದ ಪ್ರಜ್ಞೆಯಿಂದ ಕೂಡಿದವನೂ ಆದ ಪುತ್ರನನ್ನು । **ವತೇಮ**—ನಾವು ಹೊಂದುವಂತಾಗಲಿ । **ವಿಶ್ವಾ**—ಸಮಸ್ತವಾದ ಧನಗಳೂ । **ಸ್ತೋತೃಭ್ಯಃ**—ಸ್ತುತಿಕರ್ತರಿಗೂ । **ಗೃಣತೇ ಚ**—ಆ ಸ್ತುತಿಗಳನ್ನು ಪಠಿಸಿ ನಿನ್ನನ್ನು ಪ್ರಶಂಸಿಸುವವರಿಗೂ । **ಸಂತು**—ನಿರ್ದಿಷ್ಟವಾಗಿರಲಿ । **ಯೂಯಂ**—ನೀನು ಮತ್ತು ನಿನ್ನವರೆಲ್ಲರೂ । **ನಃ**—ನಮ್ಮನ್ನು । **ಸ್ವಸ್ತಿಭಿಃ**—ಕಲ್ಯಾಣಗಳಿಂದ । **ಸದಾ**—ಯಾವಾಗಲೂ । **ಪಾತ**—ರಕ್ಷಿಸಿರಿ.

॥ ಭಾವಾರ್ಥ ॥

ಎಲೈ ಅಗ್ನಿಯೇ, ಮೇಲೆ ವರ್ಣಿತವಾದ ಸಕಲ ಮಂಗಳಕರವಾದ ಸಂಪತ್ತುಗಳನ್ನೂ ನಮಗೆ ಒದಗಿಸಿ ಕೊಡು. ಮತ್ತು ಯಜ್ಞಕರ್ಮಗಳನ್ನು ಮಾಡುವವನೂ, ಉತ್ತಮವಾದ ಪ್ರಜ್ಞೆಯಿಂದ ಕೂಡಿದವನೂ ಆದ ಪುತ್ರನನ್ನು ನಾವು ಹೊಂದುವಂತಾಗಲಿ. ಸ್ತುತಿಕರ್ತರಿಗೂ ಆ ಸ್ತುತಿಗಳನ್ನು ಪಠಿಸಿ ನಿನ್ನನ್ನು ಪ್ರಶಂಸಿಸುವವರಿಗೂ ಸಹ ಸಮಸ್ತ ಸಂಪತ್ತುಗಳೂ ನಿರ್ದಿಷ್ಟವಾಗಿರಲಿ. ನೀನು ಮತ್ತು ನಿನ್ನವರೆಲ್ಲರೂ ಸಹ ನಮ್ಮನ್ನು ಕಲ್ಯಾಣಗಳಿಂದ ಯಾವಾಗಲೂ ರಕ್ಷಿಸಿರಿ.

### English Translation.

Illume for us, Agni, the auspicious (riches): may we possess (a son) intelligent, the celebrator of sacred rites: may all (good things) be to your praisers, and to him who eulogizes (you): and ever cherish us with blessings.



## ನಾಲ್ಕನೆಯ ಸೂಕ್ತವು

॥ ಸಾಯಣಭಾಷ್ಯಂ ॥

ಪ್ರ ವಃ ಶುಕ್ರಾಯೇತಿ ದಶರ್ಚಂ ಚತುರ್ಥಂ ಸೂಕ್ತಂ ವಸಿಷ್ಠಸ್ಯಾರ್ಷಂ ತ್ರೈಷ್ಟುಭಮಾಗ್ನೇಯಂ। ಪ್ರ ವ ಇತ್ಯನುಕ್ರಾಂತಂ ॥ ಪ್ರಾತರನುವಾಕಾಶ್ವಿನಶಸ್ತ್ರಯೋರ್ದಶಸೂಕ್ತಮಧ್ಯೇ ದ್ವಿತೀಯತ್ವೇನೋಕ್ತಃ

**ಸೂಕ್ತವಿನಿಯೋಗಃ ॥ ಏಕಾದಶಿನ ಆಗ್ನೇಯೇ ಪಶೌ ಪ್ರ ವಃ ಶುಕ್ರಾಯೇತ್ಯೇಷಾ ವಪಾಯಾ ಯಾಜ್ಯಾ । ಸೂತ್ರಿತಂ ಚ । ಪ್ರ ವಃ ಶುಕ್ರಾಯ ಭಾನವೇ ಭರಧ್ವಂ ಯಥಾ ವಿಪ್ರಸ್ಯ ಮನುಷೋ ಹವಿರ್ಭಿಃ । ಆ. ೩-೭ । ಇತಿ ॥**

ಅನುವಾದವು—**ಪ್ರ ವಃ ಶುಕ್ರಾಯ** ಎಂಬ ಈ ಸೂಕ್ತವು ಮೊದಲನೆಯ ಅನುವಾಕದಲ್ಲಿ ನಾಲ್ಕನೆಯ ಸೂಕ್ತವು. ಇದರಲ್ಲಿ ಹತ್ತು ಋಕ್ಕುಗಳಿರುವವು. ಈ ಸೂಕ್ತಕ್ಕೆ ವಸಿಷ್ಠನು ಋಷಿಯು ; ಅಗ್ನಿಯು ದೇವತೆಯು ; ತ್ರಿಷ್ಟುಪ್‌ಛಂದಸ್ಸು. ಅನುಕ್ರಮಣಿಕೆಯಲ್ಲಿ—**ಪ್ರ ವಃ** ಎಂದು ಮೊದಲಾಗಿ ಹೇಳಿರುವುದು. ಪ್ರಾತರನುವಾಕ ಮತ್ತು ಆಶ್ವಿನಶಸ್ತ್ರಮಂತ್ರಗಳಿಗಾಗಿ ಪಠಿಸುವ ಹತ್ತು ಸೂಕ್ತಗಳಲ್ಲಿ ಈ ಸೂಕ್ತವನ್ನು ಎರಡನೆಯ ಸೂಕ್ತವನ್ನಾಗಿ ಪಠಿಸ ಬೇಕೆಂದು ಈ ಸೂಕ್ತದ ವಿನಿಯೋಗವನ್ನು ಹಿಂದಿನ ವಿನಿಯೋಗವಲ್ಲಿಯೇ ಹೇಳಲಾಗಿದೆ. ಯಾಗದ **ಏಕಾದಶಿನ್** ಎಂಬ ದಿನದಲ್ಲಿ ಅಗ್ನಿದೇವತಾಕವಾದ ಪಶುಹೋಮದಲ್ಲಿ—**ಪ್ರ ವಃ ಶುಕ್ರಾಯ** ಎಂಬ ಋಕ್ಕನ್ನು ವಪಾಹೋಮದ ಯಾಜ್ಯಾಮಂತ್ರವನ್ನಾಗಿ ಪಠಿಸಬೇಕೆಂದು ಆಶ್ವಲಾಯನಶ್ರೌತಸೂತ್ರದ—**ಪ್ರ ವಃ ಶುಕ್ರಾಯ ಭಾನವೇ ಭರಧ್ವಂ ಯಥಾ ವಿಪ್ರಸ್ಯ ಮನುಷೋ ಹವಿರ್ಭಿಃ** ಎಂಬ ಸೂತ್ರದಿಂದ (ಆ. ೩ ೭) ವಿವೃತವಾಗಿರುವುದು.

## ಸೂಕ್ತ—೪

ಮಂಡಲ—೭ ॥ ಅನುವಾಕ—೧ ॥ ಸೂಕ್ತ—೪ ॥
ಅಷ್ಟಕ—೫ ॥ ಅಧ್ಯಾಯ—೨ ॥ ವರ್ಗ—೫, ೬ ॥
॥ ಸೂಕ್ತದಲ್ಲಿರುವ ಋಕ್ಸಂಖ್ಯೆ—೧೦ ॥
॥ ಋಷಿಃ—ವಸಿಷ್ಠಃ ॥
॥ ದೇವತಾ—ಅಗ್ನಿಃ ॥
॥ ಛಂದಃ—ತ್ರಿಷ್ಟುಪ್ ॥

॥ ಸಂಹಿತಾಪಾಠಃ ॥

ಪ್ರ ವಃ ಶುಕ್ರಾಯ ಭಾನವೇ ಭರಧ್ವಂ ಹವ್ಯಂ ಮತಿಂ ಚಾಗ್ನಯೇ ಸುಪೂತಂ ।
ಯೋ ದೈವ್ಯಾನಿ ಮಾನುಷಾ ಜನೂಂಷ್ಯಂತರ್ವಿಶ್ವಾನಿ ವಿದ್ಮನಾ ಜಿಗಾತಿ ॥ ೧ ॥

॥ ಪದಪಾಠಃ ॥

ಪ್ರ । ವಃ । ಶುಕ್ರಾಯ । ಭಾನವೇ । ಭರಧ್ವಂ । ಹವ್ಯಂ । ಮತಿಂ । ಚ । ಅಗ್ನಯೇ । ಸುऽಪೂತಂ ।
ಯಃ । ದೈವ್ಯಾನಿ । ಮಾನುಷಾ । ಜನೂಂಷಿ । ಅಂತಃ । ವಿಶ್ವಾನಿ । ವಿದ್ಮನಾ । ಜಿಗಾತಿ ॥ ೧ ॥

॥ ಸಾಯಣಭಾಷ್ಯಂ ॥

ಹೇ ಹವಿಷಾಂ ವೋಢಾರೋ ವೋ ಯೂಯಂ ಶುಕ್ರಾಯ ಶುಭ್ರಾಯ ಭಾನವೇ ದೀಪ್ತಾಯಾಗ್ನಯೇ ಸುಪೂತಂ ಸುಶುದ್ಧಂ ಹವ್ಯಂ ಮತಿಂ ಸ್ತುತಿಂ ಚ ಪ್ರ ಭರಧ್ವಂ। ಯೋಽಗ್ನಿರ್ದೈವ್ಯಾನಿ ಮಾನುಷಾ ಮಾನುಷಾಣಿ ಚ ವಿಶ್ವಾನಿ ಜನೂಂಷಿ ಜಾತಾನ್ಯಂತರಂತರಾ ವಿದ್ಮನಾ ಪ್ರಜ್ಞಾನೇನ ಮಾರ್ಗೇಣ ವಾ ಜಿಗಾತಿ ಗಚ್ಛತಿ। ದೇವಾನ್ಮನುಷ್ಯಾಂಶ್ಚಾಂತರಾ ಹವೀಂಷಿ ನೇತುಂ ವರ್ತತ ಇತ್ಯರ್ಥಃ ॥

॥ ಪ್ರತಿಪದಾರ್ಥ ॥

(ಎಲೈ ಹವಿರ್ವಾಹಕರೇ) **ವಃ**—ನೀವು। **ಯಃ**—ಯಾವ ಅಗ್ನಿಯು। **ದೈವ್ಯಾನಿ**—ದೇವತೆಗಳಲ್ಲಿಯೂ **ಮಾನುಷಾ**—ಮನುಷ್ಯರಲ್ಲಿಯೂ। **ವಿಶ್ವಾನಿ**—ಸಮಸ್ತವಾದ। **ಜನೂಂಷಿ**—ಭೂತಜಾತಗಳಿಗೂ। **ಅಂತಃ**—ನಡುವೆ (ದೇವಮಾನವಾದಿಗಳಿಗೆ ಪರಸ್ಪರವಾದ ಸಂಬಂಧವನ್ನು ಕಲ್ಪಿಸುತ್ತಾ)। **ವಿದ್ಮನಾ**—ತನ್ನ ಜ್ಞಾನಸಹಾಯದಿಂದ। **ಜಿಗಾತಿ**—ಸಂಚರಿಸುವನೋ ಅಂತಹ। **ಶುಕ್ರಾಯ**—ಶುಭ್ರನೂ। **ಭಾನವೇ**—ಪ್ರಕಾಶಮಾನನೂ ಆದ। **ಅಗ್ನಯೇ**—ಅಗ್ನಿಯನ್ನುದ್ದೇಶಿಸಿ। **ಸುಪೂತಂ**—ಪರಿಶುದ್ಧವಾದ। **ಹವ್ಯಂ**—ಹವಿಸ್ಸನ್ನೂ। **ಮತಿಂ ಚ**—ಸ್ತುತಿಯನ್ನೂ। **ಪ್ರ ಭರಧ್ವಂ**—ಸಂಪಾದಿಸಿ ಅರ್ಪಿಸಿರಿ.

॥ ಭಾವಾರ್ಥ ॥

ಎಲೈ ಹವಿರ್ವಾಹಕರೇ, ಯಾವ ಅಗ್ನಿಯು ದೇವಮಾನವಾದಿ ಸಕಲ ಭೂತಜಾತಗಳಿಗೂ ಸಂಬಂಧವನ್ನು ಕಲ್ಪಿಸುತ್ತಾ ಅವರ ನಡುವೆ ತನ್ನ ದಿವ್ಯಜ್ಞಾನದಿಂದ ಸಂಚರಿಸುವನೋ ಅಂತಹ ಶುಭ್ರನೂ, ಪ್ರಕಾಶಮಾನನೂ ಆದ ಅಗ್ನಿಯನ್ನುದ್ದೇಶಿಸಿ ಪರಿಶುದ್ಧವಾದ ಹವಿಸ್ಸನ್ನೂ, ಸ್ತುತಿಯನ್ನೂ ಸಂಪಾದಿಸಿ ಅರ್ಪಿಸಿರಿ.

## English Translation.

Offer your sacred oblation, and praise the bright and radiant Agni, who passes with wisdom between all divine and human beings.

॥ ಸಂಹಿತಾಪಾಠಃ ॥

ಸ ಗೃತ್ಸೋ᳚ ಅಗ್ನಿಸ್ತರು॑ಣಶ್ಚಿದ॒ಸ್ತು ಯತೋ॒ ಯವಿ॑ಷ್ಠೋ॒ ಅಜ॑ನಿಷ್ಟ ಮಾ॒ತುಃ।

ಸಂ ಯೋ ವನಾ॑ ಯು॒ವತೇ॒ ಶುಚಿ॑ದ॒ನ್ಭೂರಿ॑ ಚಿ॒ದನ್ನಾ॒ ಸಮಿದ॑ತ್ತಿ ಸ॒ದ್ಯಃ ॥ ೨ ॥

॥ ಪದಪಾಠಃ ॥

ಸಃ। ಗೃತ್ಸಃ। ಅ॒ಗ್ನಿಃ। ತರು॑ಣಃ। ಚಿ॒ತ್। ಅ॒ಸ್ತು। ಯತಃ॑। ಯವಿ॑ಷ್ಠಃ। ಅಜ॑ನಿಷ್ಟ। ಮಾ॒ತುಃ।

ಸಂ। ಯಃ। ವನಾ॑। ಯು॒ವತೇ॑। ಶುಚಿ॑ऽದನ್। ಭೂರಿ॑। ಚಿ॒ತ್। ಅನ್ನಾ॑। ಸಂ। ಇತ್। ಅ॒ತ್ತಿ। ಸ॒ದ್ಯಃ॥

॥ ಸಾಯಣಭಾಷ್ಯಂ ॥

ಸ ಚಿತ್ಸ ಏವ ಗೃತ್ಸೋ ಮೇಧಾವೀ। ತಥಾ ಚ ಯಾಸ್ಕಃ। ಗೃತ್ಸ ಇತಿ ಮೇಧಾವಿನಾಮ। ನಿ. ೯-೫। ಅಗ್ನಿಸ್ತರುಣಸ್ತಾರಕೋ ಭವತಿ। ತದಾ ಯತೋ ಯದಾ ಮಾತುರರಣ್ಯಾ ಯವಿಷ್ಠೋ ಯುವತಮಃ ಸನ್ ಅಜನಿಷ್ಟ। ಯೋಽಗ್ನಿಃ ಶುಚಿದನ್ ದೀಪ್ತದಂತೋ ವನಾ ವನಾನಿ ಸಂ ಯುವತೇ ಆತ್ಮನಾ ಸಂಯೋಜಯತಿ। ಕಿಂಚ ಭೂರಿ ಚಿತ್ ಭೂರೀಣ್ಯಪ್ಯನ್ನಾ ಸ್ವೀಯಾನ್ಯನ್ನಾನಿ ಸದ್ಯ ಇತ್ಸದ್ಯ ಏವ ಸಮತ್ತಿ ಸಮ್ಯಗ್ಭಕ್ಷಯತಿ॥

॥ ಪ್ರತಿಪದಾರ್ಥ ॥

**ಯಃ**—ಯಾವ ಅಗ್ನಿಯು। **ಶುಚಿದನ್**—ಪ್ರಕಾಶಮಾನವಾದುದೂ ಜ್ವಾಲಾರೂಪವುಳ್ಳದ್ದೂ ಆದ ದಂತವುಳ್ಳವನಾಗಿ। **ವನಾ**—ವನಗಳನ್ನೆಲ್ಲಾ। **ಸಂ ಯುವತೇ**—ತನ್ನಲ್ಲೇ ಐಕ್ಯಮಾಡಿಕೊಳ್ಳುವನೋ (ಮತ್ತು)। **ಭೂರಿಚಿತ್**—ಅತ್ಯಧಿಕವಾದರೂ। **ಅನ್ನಾ**—ಪ್ರಭೂತವಾದ ಕಾಷ್ಠಾದ್ಯನ್ನಗಳನ್ನೆಲ್ಲಾ। **ಸದ್ಯ ಇತ್**—ಒಡನೆಯೇ। **ಸಮತ್ತಿ**—ಭಕ್ಷಿಸುವನೋ। **ಸ ಚಿತ್ ಅಗ್ನಿಃ**—ಅದೇ ಅಗ್ನಿಯು। **ಯತಃ**—ಯಾವಾಗ। **ಮಾತುಃ**—ಮಾತೃರೂಪರಾದ ಅರಣಿಗಳಿಂದ। **ಯವಿಷ್ಠಃ**—ಅತ್ಯಂತ ಯುವಕನಾಗಿ। **ಅಜನಿಷ್ಟ**—ಉತ್ಪನ್ನನಾಗುವನೋ (ಆಗಲೇ)। **ಗೃತ್ಸಃ**—ಮೇಧಾವಿಯಾಗಿಯೂ। **ತರುಣಃ**—ನಮ್ಮ ರಕ್ಷಕನಾಗಿಯೂ। **ಅಸ್ತು**—ಆಗುತ್ತಾನೆ.

॥ ಭಾವಾರ್ಥ ॥

ಯಾವ ಅಗ್ನಿಯು ಪ್ರಕಾಶಮಾನವಾದುದೂ ಜ್ವಾಲಾರೂಪಿಯಾದುದೂ ಆದ ದಂತವುಳ್ಳವನಾಗಿ ವನಗಳನ್ನೆಲ್ಲಾ ತನ್ನಲ್ಲೇ ಐಕ್ಯಮಾಡಿಕೊಳ್ಳುವನೋ ಮತ್ತು ಅತ್ಯಧಿಕವಾದುದೂ ಸಹ ಪ್ರಭೂತವಾದ ಕಾಷ್ಠಾದ್ಯನ್ನಗಳನ್ನೆಲ್ಲಾ ಒಡನೆಯೇ ಭಕ್ಷಿಸುವನೋ ಅದೇ ಅಗ್ನಿಯು ಯಾವಾಗ ಮಾತೃರೂಪರಾದ ಅರಣಿಗಳಿಂದ ಅತ್ಯಂತ ಯುವಕನಾಗಿ ಉತ್ಪನ್ನನಾಗುವನೋ ಆಗಲೇ ಅತ್ಯಂತ ಮೇಧಾವಿಯಾಗಿ ನಮ್ಮ ರಕ್ಷಕನಾಗುತ್ತಾನೆ.

## English Translation.

May the sagcious Agni be our conductor from the time that he is born, most youthful, of his mother: he who, bright-toothed, attacks the forest, and quickly devours his abundant food.

॥ ಸಂಹಿತಾಪಾಠಃ ॥

ಅಸ್ಯ ದೇವಸ್ಯ ಸಂಸದ್ಯನೀಕೇ ಯಂ ಮರ್ತಾಸಃ ಶ್ಯೇತಂ ಜಗೃಭ್ರೇ।
ನಿ ಯೋ ಗೃಭಂ ಪೌರುಷೇಯೀಮುವೋಚ ದುರೋಕಮಗ್ನಿರಾಯವೇ ಶುಶೋಚ ॥ ೩ ॥

॥ ಪದಪಾಠಃ ॥

ಅಸ್ಯ । ದೇವಸ್ಯ । ಸಂಽಸದಿ । ಅನೀಕೇ । ಯಂ । ಮರ್ತಾಸಃ । ಶ್ಯೇತಂ । ಜಗೃಭ್ರೇ ।

ನಿ । ಯಃ । ಗೃಭಂ । ಪೌರುಷೇಯೀಂ । ಉವೋಚ । ದುಃಽಓಕಂ । ಅಗ್ನಿಃ । ಆಯವೇ । ಶುಶೋಚ॥೩॥

॥ ಸಾಯಣಭಾಷ್ಯಂ ॥

ಅಸ್ಯ ದೇವಸ್ಯಾಗ್ನೇರನೀಕೇ ಮುಖ್ಯೇ ಸಂಸದಿ ಸ್ಥಾನೇ ಶ್ಯೇತಂ ಶ್ವೇತಂ ಶುಭ್ರಂ ಯಮಗ್ನಿಂ ಮರ್ತಾಸೋ ಮನುಷ್ಯಾ ಜಗೃಭ್ರೇ ಪರಿಗೃಹ್ಣಂತಿ । ಯಶ್ಚಾಗ್ನಿಃ ಪೌರುಷೇಯೀಂ ಪುರುಷೈಃ ಕ್ರಿಯಮಾಣಾಂ ಗೃಭಂ ಗೃಭೀತಂ ನ್ಯುವೋಚ ॥ ಅತ್ರ ವಚಿಃ ಸೇವಾರ್ಥೇ ವರ್ತತೇ ॥ ನಿಷೇವತ ಇತ್ಯರ್ಥಃ । ಸೋಽಗ್ನಿರಾಯವೇ ಮನುಷ್ಯಾರ್ಥಂ । ದ್ರುಹ್ಯವ ಆಯುವ ಇತಿ ಮನುಷ್ಯನಾಮಸು ಪಾಠಾತ್ । ದುರೋಕಂ ಸಪತ್ನೈರ್ದುಃಸೇವಂ ಯಥಾ ಭವತಿ ತಥಾ ಶುಶೋಚ । ದೀಪ್ಯತೇ ॥

॥ ಪ್ರತಿಪದಾರ್ಥ ॥

**ದೇವಸ್ಯ**—ದೇವತಾತ್ಮನಾದ । **ಅಸ್ಯ**—ಈ ಅಗ್ನಿಯ । **ಅನೀಕೇ**—ಮುಖ್ಯವಾದ । **ಸಂಸದಿ**—ಸ್ಥಾನದಲ್ಲಿ । **ಯಂ**—ಯಾವ ಅಗ್ನಿಯನ್ನೇ । **ಮರ್ತಾಸಃ**—ಮಾನವರು । **ಶ್ಯೇತಂ**—ಶುಭ್ರವರ್ಣವುಳ್ಳವನೆಂದು । **ಜಗೃಭ್ರೇ**—ಗ್ರಹಿಸಿದರೋ । **ಯಃ**—ಯಾವ ಅಗ್ನಿಯು । **ಪೌರುಷೇಯೀಂ**—ಪುರುಷರಿಂದ ಆಚರಿಸಲ್ಪಟ್ಟ ಕರ್ಮಾದಿಗಳನ್ನು । **ಗೃಭಂ ನ್ಯುವೋಚ**—ಸ್ವೀಕಾರವಾಕ್ಕುಗಳಿಂದ ಅನುಗ್ರಹಿಸುವನೋ । **(ಸಃ) ಅಗ್ನಿಃ**—ಅದೇ ಅಗ್ನಿಯು । **ಆಯವೇ**—ಮಾನವನಿಗೆ ಉಪಕಾರಾರ್ಥವಾಗಿಯೂ । **ದುರೋಕಂ**—ಶತ್ರುವಿಗೆ ಅಲಭ್ಯನಾಗಿಯೂ । **ಶುಶೋಚ**—ಪ್ರಕಾಶಿಸುತ್ತಾನೆ.

॥ ಭಾವಾರ್ಥ ॥

ದೇವತಾತ್ಮನಾದ ಈ ಅಗ್ನಿಯ ಮುಖ್ಯವಾದ ಸ್ಥಾನದಲ್ಲಿ ಯಾವ ಅಗ್ನಿಯನ್ನೇ ಮಾನವರು ಶುಭ್ರ ವರ್ಣವುಳ್ಳವನೆಂದು ಗ್ರಹಿಸಿದರೋ, ಯಾವ ಅಗ್ನಿಯು ಪುರುಷರಿಂದ ಆಚರಿಸಲ್ಪಟ್ಟ ಕರ್ಮಾದಿಗಳನ್ನು ಸ್ವೀಕಾರ ವಾಕ್ಕುಗಳಿಂದ ಅನುಗ್ರಹಿಸುವನೋ, ಅದೇ ಅಗ್ನಿಯು ಮಾನವನಿಗೆ ಉಪಕಾರಾರ್ಥವಾಗಿಯೂ, ಶತ್ರುವಿಗೆ ಅಲಭ್ಯನಾಗಿಯೂ ಪ್ರಕಾಶಿಸುತ್ತಾನೆ.

## English Translation.

Whom mortals apprehend as white (shining) in the principal station of that divinity; he who assents to manly adoration, and blazes for the good of man, and discomfiture (of his foes).

॥ ಸಂಹಿತಾಪಾಠಃ ॥

ಅಯಂ ಕವಿರಕವಿಷು ಪ್ರಚೇತಾ ಮರ್ತೇಷ್ವಗ್ನಿರಮೃತೋ ನಿ ಧಾಯಿ ।
ಸ ಮಾ ನೋ ಅತ್ರ ಜುಹುರಃ ಸಹಸ್ವಃ ಸದಾ ತ್ವೇ ಸುಮನಸಃ ಸ್ಯಾಮ ॥೪॥

॥ ಪದಪಾಠಃ ॥

ಅಯಂ । ಕವಿಃ । ಅಕವಿಷು । ಪ್ರಽಚೇತಾಃ । ಮರ್ತೇಷು । ಅಗ್ನಿಃ । ಅಮೃತಃ । ನಿ । ಧಾಯಿ ।
ಸಃ । ಮಾ । ನಃ । ಅತ್ರ । ಜುಹುರಃ । ಸಹಸ್ವಃ । ಸದಾ । ತ್ವೇ ಇತಿ । ಸುಽಮನಸಃ । ಸ್ಯಾಮ ॥ ೪ ॥

॥ ಸಾಯಣಭಾಷ್ಯಂ ॥

ಕವಿಃ ಕ್ರಾಂತದೃಕ್ ಪ್ರಚೇತಾಃ ಪ್ರಕಾಶಕೋಽಮೃತೋ ಮರಣಧರ್ಮರಹಿತೋಽಯಮಗ್ನಿರಕವಿಷ್ವಕ್ರಾಂತದೃಕ್ಷು ಮರ್ತೇಷು ಮರಣಧರ್ಮಕೇಷು ನಿ ಧಾಯಿ । ನಿಹಿತಃ । ಅಥ ಪ್ರತ್ಯಕ್ಷಸ್ತುತಿಃ । ಸಹಸ್ವೋ ಬಲವನ್ನಗ್ನೇ ತ್ವೇ ಯುಷ್ಮಿನ್ ತ್ವಯಿ ಸದಾ ವಯಂ ಸುಮನಸಃ ಸುಮತಯಃ ಸ್ಯಾಮ ಸ ತ್ವಮತ್ರಾಸ್ಮಿಲ್ಲೋಕೇ ನೋಽಸ್ಮಾನ್ಮಾ ಜುಹುರಃ । ಮಾ ಹಿಂಸೀಃ ॥

॥ ಪ್ರತಿಪದಾರ್ಥ ॥

**ಕವಿಃ**—ಕ್ರಾಂತದರ್ಶಿಯೂ । **ಪ್ರಚೇತಾಃ**—ಉತ್ಕೃಷ್ಟವಾದ ಜ್ಞಾನದಾಯಕನೂ । **ಅಮೃತಃ**—ಮರಣಧರ್ಮರಹಿತನೂ ಆದ । **ಅಯಂ ಅಗ್ನಿಃ**—ಇದೇ ಅಗ್ನಿಯು । **ಅಕವಿಷು**—ಸಂಕುಚಿತವಾದ ದೃಷ್ಟಿಯುಳ್ಳದ್ದರಿಂದ ಕವಿಗಳಲ್ಲದ । **ಮರ್ತೇಷು**—ಮಾನವರಲ್ಲಿ । **ನಿ ಧಾಯಿ**— ಸ್ಥಾಪಿತನಾಗಿದ್ದಾನೆ । **ಸಹಸ್ವಃ**—ಶಕ್ತಿಯುತನಾದ ಎಲೈ ಅಗ್ನಿಯೇ । **ತ್ವೇ**—ಯಾವ ನಿನ್ನಲ್ಲಿ । **ಸದಾ**—ಯಾವಾಗಲೂ । **ಸುಮನಸಃ**—ಭಕ್ತಿಯುತವಾದ ಮನಸ್ಸುಳ್ಳವರಾಗಿ । **ಸ್ಯಾಮ**—ಇರುವೆವೋ । **ಸಃ** - ಅಂತಹ ನೀನು । **ಅತ್ರ**—ಈ ಮಾನವರ ಲೋಕದಲ್ಲಿ । **ನಃ** – ನಮ್ಮನ್ನು । **ಮಾ ಜುಹುರಃ**—ಹಿಂಸಿಸಬೇಡ.

॥ ಭಾವಾರ್ಥ ॥

ಕ್ರಾಂತದರ್ಶಿಯೂ, ಉತ್ಕೃಷ್ಟವಾದ ಜ್ಞಾನದಾಯಕನೂ, ಮರಣಧರ್ಮರಹಿತನೂ ಆದ ಇದೇ ಅಗ್ನಿಯು ಕವಿಗಳಲ್ಲದ ಮಾನವರಲ್ಲಿ ಸ್ಥಾಪಿತನಾಗಿದ್ದಾನೆ. ಶಕ್ತಿಯುತನಾದ ಎಲೈ ಅಗ್ನಿಯೇ, ಯಾವ ನಿನ್ನಲ್ಲಿ ಯಾವಾಗಲೂ ಭಕ್ತಿಯುತವಾದ ಮನಸ್ಸುಳ್ಳವರಾಗಿ ಇರುವೆವೋ ಅಂತಹ ನೀನು ಈ ಮಾನವರ ಲೋಕದಲ್ಲಿದ್ದು ನಮ್ಮನ್ನು ಹಿಂಸಿಸಬೇಡ.

## English Translation.

The far-seeing sagacious immortal Agni, has been stationed among short-sighted mortals: harm us not, vigorous Agni, in this world, that we may ever be devoted to you.

|| ಸಂಹಿತಾಪಾಠಃ ||

ಆ ಯೋ ಯೋನಿಂ ದೇವಕೃತಂ ಸಸಾದ ಕ್ರತ್ವಾ ಹ್ಯ೧ಗ್ನಿರಮೃತಾಁ ಅತಾರೀತ್ ।
ತಮೋಷಧೀಶ್ಚ ವನಿನಶ್ಚ ಗರ್ಭಂ ಭೂಮಿಶ್ಚ ವಿಶ್ವಧಾಯಸಂ ಬಿಭರ್ತಿ ॥ ೫ ॥

॥ ಪದಪಾಠಃ ॥

ಆ । ಯಃ । ಯೋನಿಂ । ದೇವಽಕೃತಂ । ಸಸಾದ । ಕ್ರತ್ವಾ । ಹಿ । ಅಗ್ನಿಃ । ಅಮೃತಾನ್ । ಅತಾರೀತ್ ।

ತಂ । ಓಷಧೀಃ । ಚ । ವನಿನಃ । ಚ । ಗರ್ಭಂ । ಭೂಮಿಃ । ಚ । ವಿಶ್ವಽಧಾಯಸಂ । ಬಿಭರ್ತಿ ॥ ೫ ॥

॥ ಸಾಯಣಭಾಷ್ಯಂ ॥

ಯೋಽಗ್ನಿರ್ದೇವಕೃತಂ ದೇವೈಃ ಕಲ್ಪಿತಂ ಯೋನಿಂ ಸ್ಥಾನಮಾ ಸಸಾದ ಅಧ್ಯಾಸ್ತೇ । ಕಿಮರ್ಥಂ ದೇವಾಃ ಸ್ಥಾನಂ ಕಲ್ಪಯಂತ್ಯೆಗ್ನೇರಿತ್ಯತ ಆಹ । ಹಿ ಯಸ್ಮಾತ್ಕಾರಣಾದಗ್ನಿಃ ಕ್ರತ್ವಾ ಪ್ರಜ್ಞಯಾಮೃತಾನ್ದೇವಾನತಾರೀತ್ । ವಿಶ್ವಧಾಯಸಂ ವಿಶ್ವಸ್ಯ ಧಾರಕಮೋಷಧೀರೋಷಧಯೋ ವನಿನಶ್ಚ ವೃಕ್ಷಾಶ್ಚ ಗರ್ಭಂ ಗರ್ಭಂ ಸಂತಂ ತಂ ಬಿಭ್ರತಿ । ಭೂಮಿಶ್ಚ ಬಿಭರ್ತಿ ॥ ಶ್ರುತಮೇವ ಬಿಭರ್ತೀತಿ ಪದಂ ಬಹುವಚನಾಂತತಯಾ ವಿಪರಿಣತಂ ಸದೋಷಧೀಭಿರ್ವನಿಭಿಶ್ಚ ಸಂಬಧ್ಯತೇ ॥

॥ ಪ್ರತಿಪದಾರ್ಥ ॥

**ಹಿ**—ಯಾವ ನಿಮಿತ್ತವಾಗಿ । **ಅಗ್ನಿಃ**—ಅಗ್ನಿಯು । **ಕ್ರತ್ವಾ**—ತನ್ನ ಪ್ರಜ್ಞೆಯಿಂದ । **ಅಮೃತಾನ್**—ಮರಣಧರ್ಮರಹಿತರಾದ ದೇವತೆಗಳನ್ನು । **ಅತಾರೀತ್**—ಕಷ್ಟಗಳಿಂದ ಬಿಡಿಸುವನೋ (ಅಲ್ಲದೇ) । **ಯಃ**—ಯಾವ ಅಗ್ನಿಯು । **ದೇವಕೃತಂ**—ದೇವತೆಗಳಿಂದ ನಿರ್ಮಿತವಾದ । **ಯೋನಿಂ**—ಸ್ಥಾನವನ್ನು । **ಆ ಸಸಾದ**—ಆಶ್ರಯಿಸಿ ಸ್ಥಿತನಾಗಿರುವನೋ ಅಂತಹ । **ವಿಶ್ವಧಾಯಸಂ**—ವಿಶ್ವಧಾರಕನಾದ । **ತಂ**—ಅದೇ ಅಗ್ನಿಯನ್ನು । **ಓಷಧೀಃ**—ಓಷಧಿಗಳೂ । **ವನಿನಶ್ಚ**—ವೃಕ್ಷಗಳೂ । **ಗರ್ಭಂ**—ಗರ್ಭರೂಪದಲ್ಲಿ ಧರಿಸುತ್ತವೆ । **ಭೂಮಿಶ್ಚ**—ಪೃಥ್ವಿಯೂ ಸಹ । **ಬಿಭರ್ತಿ**—ಧರಿಸಿರುತ್ತದೆ.

॥ ಭಾವಾರ್ಥ ॥

ಯಾವ ನಿಮಿತ್ತವಾಗಿ ಅಗ್ನಿಯು ತನ್ನ ಪ್ರಜ್ಞೆಯಿಂದ ಮರಣಧರ್ಮರಹಿತರಾದ ದೇವತೆಗಳನ್ನು ಕಷ್ಟಗಳಿಂದ ಬಿಡಿಸುವನೋ, ಅಲ್ಲದೇ, ಯಾವ ಅಗ್ನಿಯು ದೇವತೆಗಳಿಂದ ನಿರ್ಮಿತವಾದ ಸ್ಥಾನವನ್ನು ಆಶ್ರಯಿಸಿ ಸ್ಥಿತನಾಗಿರುವನೋ, ಅಂತಹ ವಿಶ್ವಧಾರಕನಾದ ಅದೇ ಅಗ್ನಿಯನ್ನು ಓಷಧಿಗಳೂ, ವೃಕ್ಷಗಳೂ ಗರ್ಭರೂಪದಲ್ಲಿ ಧರಿಸುತ್ತವೆ. ಪೃಥ್ವಿಯೂ ಸಹ ಧರಿಸಿರುತ್ತದೆ.

## English Translation.

The herbs, and the trees, and the earth, contain as a germ that all-supporting Agni, who occupies a place provided by the gods, that by his functions he may convey (the offerings) to the immortals.

॥ ಸಂಹಿತಾಪಾಠಃ ॥

ಈಶೇ ಹ್ಯಗ್ನಿರಮೃತಸ್ಯ ಭೂರೇರೀಶೇ ರಾಯಃ ಸುವೀರ್ಯಸ್ಯ ದಾತೋಃ।
ಮಾ ತ್ವಾ ವಯಂ ಸಹಸಾವನ್ನವೀರಾ ಮಾಪ್ಸವಃ ಪರಿ ಷದಾಮ
ಮಾದುವಃ ॥ ೬ ॥

॥ ಪದಪಾಠಃ ॥

ಈಶೇ । ಹಿ । ಅಗ್ನಿಃ । ಅಮೃತಸ್ಯ । ಭೂರೇಃ । ಈಶೇ । ರಾಯಃ । ಸುऽವೀರ್ಯಸ್ಯ । ದಾತೋಃ ।
ಮಾ । ತ್ವಾ । ವಯಂ । ಸಹಸಾऽವನ್ । ಅವೀರಾಃ । ಮಾ । ಅಪ್ಸವಃ । ಪರಿ । ಸದಾಮ । ಮಾ ।
ಅದುವಃ ॥ ೬ ॥

॥ ಸಾಯಣಭಾಷ್ಯಂ ॥

ಅಮೃತಸ್ಯಾನ್ನಮುದಕಂ ವಾ ॥ ದ್ವಿತೀಯಾರ್ಥೇ ಷಷ್ಠೀ ॥ ಭೂರೇರಧಿಕಂ ದಾತೋರ್ದಾತುಮಗ್ನಿರೀಶೇ । ಈಷ್ಟೇ ಹಿ । ಸುವೀರ್ಯಸ್ಯ ಶೋಭನವೀರ್ಯಯುಕ್ತಂ ರಾಯೋ ಧನಂ ದಾತುಮೀಶೇ । ಈಷ್ಟೇ। ಅಥ ಪ್ರತ್ಯಕ್ಷಸ್ತುತಿಃ। ಸಹಸಾವನ್ ಹೇ ಬಲವನ್ನಗ್ನೇ ವಯಂ ವಸಿಷ್ಠಾ ಅವೀರಾಃ ಪುತ್ರಾದಿರಹಿತಾಃ ಸಂತೋ ಮಾ ಪರಿ ಷದಾಮ । ಮಾ ಪರ್ಯುಪವಿಶಾಮ । ಅಪ್ಸವೋ ರೂಪರಹಿತಾಶ್ಚ ಸಂತೋ ಮಾ ಪರಿ ಷದಾಮ । ತಥಾ ಚ ಯಾಸ್ಕಃ। ಅಪ್ಸ ಇತಿ ರೂಪನಾಮ । ನಿ. ೫-೧೩ । ಇತಿ । ಅದುವಃ ಪರಿಚರಣಹೀನಾಶ್ಚ ಮಾ ಪರಿ ಷದಾಮ ॥

॥ ಪ್ರತಿಪದಾರ್ಥ ॥

**ಭೂರೇಃ**—ಪ್ರಭೂತವಾದುದೂ | **ಅಮೃತಸ್ಯ**—ಅನ್ನರೂಪವಾದುದೂ ಆದ ಅಮೃತವನ್ನು | **ದಾತೋಃ**—ದಾನಮಾಡಲು | **ಅಗ್ನಿಃ**—ಅಗ್ನಿಯು | **ಈಶೇ ಹಿ**—ಸಮರ್ಥನಾಗಿದ್ದಾನಲ್ಲವೇ | **ಸುವೀರ್ಯಸ್ಯ**—ಉತ್ತಮವಾದ ಶಕ್ತಿಯಿಂದೊಡಗೂಡಿದ | **ರಾಯಃ**—ಧನವನ್ನು ಕೊಡಲು | **ಈಶೇ**—ಸಮರ್ಥನಾಗಿದ್ದಾನೆ | **ಸಹಸಾವನ್**—ಶಕ್ತಿಯುತನಾದ ಎಲೈ ಅಗ್ನಿಯೇ | **ವಯಂ**—ವಸಿಷ್ಠವಂಶದವರಾದ ನಾವು | **ಅವೀರಾಃ**—ವೀರಪುತ್ರರಹಿತರಾಗಿ | **ಮಾ ಪರಿ ಷದಾಮ**—ಕುಳಿತಿರುವಂತೆ ಆಗದಿರಲಿ | **ಅಪ್ಸವಃ**—ರೂಪರಹಿತರಾಗಿ | **ಮಾ**—ಇರುವಂತಾಗದಿರಲಿ | **ತ್ವಾ ಅದುವಃ**—ನಿನ್ನ ಪೂಜಾಕರ್ಮರಹಿತರಾಗಿ | **ಮಾ**—ಇರುವಂತಾಗದಿರಲಿ.

॥ ಭಾವಾರ್ಥ ॥

ಪ್ರಭೂತವಾದ ಮತ್ತು ಅನ್ನರೂಪವಾದ ಅಮೃತವನ್ನು ದಾನಮಾಡಲು ಅಗ್ನಿಯು ಸಮರ್ಥನಾಗಿದ್ದಾನೆ. ಉತ್ತಮವಾದ ಶಕ್ತಿಯಿಂದೊಡಗೂಡಿದ ಧನವನ್ನು ಕೊಡಲು ಸಮರ್ಥನಾಗಿದ್ದಾನೆ. ಶಕ್ತಿಯುತನಾದ ಎಲೈ ಅಗ್ನಿಯೇ, ವಸಿಷ್ಠವಂಶದವರಾದ ನಾವು ವೀರಪುತ್ರರಹಿತರಾಗಿ ಕುಳಿತಿರುವಂತೆ ಆಗದಿರಲಿ. ರೂಪರಹಿತರಾಗಿರುವಂತಾಗದಿರಲಿ. ನಿನ್ನ ಪೂಜಾಕರ್ಮರಹಿತರಾಗಿರುವಂತಾಗದಿರಲಿ.

## English Translation.

Agni has power to grant abundant food: he has power to grant riches with male posterity: vigorous Agni, let us not sit down before you devoid of sons, of beauty, of devotion.

॥ ಸಂಹಿತಾಪಾಠಃ ॥

ಪರಿಷದ್ಯಂ ಹ್ಯರಣಸ್ಯ ರೇಕ್ಣೋ ನಿತ್ಯಸ್ಯ ರಾಯಃ ಪತಯಃ ಸ್ಯಾಮ |
ನ ಶೇಷೋ ಅಗ್ನೇ ಅನ್ಯಜಾತಮಸ್ತ್ಯಚೇತಾನಸ್ಯ ಮಾ ಪಥೋ ವಿ ದುಕ್ಷಃ ||

॥ ಪದಪಾಠಃ ॥

ಪರಿऽಸದ್ಯಂ | ಹಿ | ಅರಣಸ್ಯ | ರೇಕ್ಣಃ | ನಿತ್ಯಸ್ಯ | ರಾಯಃ | ಪತಯಃ | ಸ್ಯಾಮ |
ನ | ಶೇಷಃ | ಅಗ್ನೇ | ಅನ್ಯऽಜಾತಂ | ಅಸ್ತಿ | ಅಚೇತಾನಸ್ಯ | ಮಾ | ಪಥಃ | ವಿ | ದುಕ್ಷಃ || ೭ ||

॥ ಸಾಯಣಭಾಷ್ಯಂ ॥

ಅರಣಸ್ಯಾನೃಣಸ್ಯ ರೇಕ್ಣೋ ಧನಂ ಪರಿಷದ್ಯಂ ಪರ್ಯಾಪ್ತಂ ಭವತಿ ಹಿ | ಅತೋ ನಿತ್ಯಸ್ಯಾಪುನರ್ದೇಯಸ್ಯ ರಾಯೋ ಧನಸ್ಯ ಪತಯಃ ಸ್ಯಾಮ | ಯದ್ವಾ | ಅರಣಸ್ಯ ರೇಕ್ಣೋ ಧನಂ ಪರಿಷದ್ಯಂ

**ಪರಿಹರ್ತವ್ಯಂ ಭವತಿ । ಅತೋ ನಿತ್ಯಸ್ಯೌರಸಸ್ಯ ರಾಯಃ ಪುತ್ರಾಖ್ಯಸ್ಯ ಧನಸ್ಯ ಪತಯಃ ಸ್ಯಾಮ । ಹೇ ಅಗ್ನೇ ಅನ್ಯಜಾತಮನೌರಸಂ ಶೇಷೋಽಪತ್ಯಂ ನಾಸ್ತಿ । ನ ಭವತಿ । ಅಚೇತಾನಸ್ಯಾವಿದುಷಃ ಪಥೋ ಮಾರ್ಗಾನ್ ಪುತ್ರೋತ್ಪಾದನಪ್ರಮುಖಾನ್ಮಾರ್ಗಾನ್ ಮಾ ವಿ ದುಕ್ಷಃ । ಮಾ ವಿದೂದುಷಃ ॥ ದುಷ ವೈಕೃತ್ಯೇ ಇತಿ ಧಾತುಃ ॥ ತಥಾ ಚ ಯಾಸ್ಕಃ । ಪರಿಹರ್ತವ್ಯಂ ಹಿ ನೋಽಪಸರ್ತವ್ಯಮರಣಸ್ಯ ರೇಕ್ಣೋಽರಣೋಽಪಾರ್ಣೋ ಭವತಿ ರೇಕ್ಣ ಇತಿ ಧನನಾಮ ರಿಚ್ಯತೇ ಪ್ರಯತಃ । ನಿತ್ಯಸ್ಯ ರಾಯಃ ಪತಯಃ ಸ್ಯಾಮ । ನ ಶೇಷೋ ಅಗ್ನೇ ಅನ್ಯಜಾತಮಸ್ತಿ । ಶೇಷ ಇತ್ಯಪತ್ಯನಾಮ ಶಿಷ್ಯತೇ ಪ್ರಯತೋಽಚೇತಯಮಾನಸ್ಯ ತತ್ಪ್ರಮತ್ತಸ್ಯ ಭವತಿ ಮಾ ನಃ ಪಥೋ ವಿದೂದುಷಃ । ನಿ. ೩-೨ । ಇತಿ ॥**

॥ ಪ್ರತಿಪದಾರ್ಥ ॥

**ಅರಣಸ್ಯ**—ಋಣರಹಿತವಾದ ಸುಸ್ಥಿತಿಗೆ । **ರೇಕ್ಣಃ**—ಧನವು । **ಪರಿಷದ್ಯಂ ಹಿ**—ಶಕ್ತವಾದ ಸಾಧನವಾಗಿರುತ್ತದೆಯಲ್ಲವೇ (ಆದುದರಿಂದಲೇ) । **ನಿತ್ಯಸ್ಯ**—ನಾಶರಹಿತವಾದ । **ರಾಯಃ**—ಧನಕ್ಕೆ । **ಪತಯಃ**—ಒಡೆಯರಾಗಿ । **ಸ್ಯಾಮ**—ನಾವು ಇರುವಂತಾಗಲಿ । **ಅಗ್ನೇ**—ಎಲೈ ಅಗ್ನಿಯೇ । **ಅನ್ಯಜಾತಂ**—ಇನ್ನೊಬ್ಬರ ಹೊಟ್ಟೆಯಲ್ಲಿ ಹುಟ್ಟಿದ ಪುತ್ರನು । **ಶೇಷಃ**—ನಿಜವಾದ ಪುತ್ರನ ಅಭಿಮಾನದಿಂದ ಕೂಡಿದವನಾಗಿ । **ನ ಅಸ್ತಿ**—ಆಗಿರುವುದೇ ಇಲ್ಲ । **ಅಚೇತಾನಸ್ಯ**—ಪೂರ್ಣಪ್ರಜ್ಞಾರಹಿತನಾದ ನನ್ನ । **ಪಥಃ**—(ಪುತ್ರೋತ್ಪಾದನಸಾಧನವಾದ) ಮಾರ್ಗಗಳನ್ನು । **ಮಾ ವಿ ದುಕ್ಷಃ**—ತಡೆಯಬೇಡ.

॥ ಭಾವಾರ್ಥ ॥

ಋಣರಹಿತವಾದ ಸುಸ್ಥಿತಿಗೆ ಧನವು ಪೂರ್ಣವೂ, ಶಕ್ತವೂ ಆದ ಸಾಧನವಾಗಿರುತ್ತದೆಯಲ್ಲವೇ ? ಆದುದರಿಂದಲೇ ನಾವು ನಾಶರಹಿತವಾದ ಧನಕ್ಕೆ ಒಡೆಯರಾಗಿರುವಂತಾಗಲಿ. ಎಲೈ ಅಗ್ನಿಯೇ, ಇನ್ನೊಬ್ಬರ ಹೊಟ್ಟೆಯಲ್ಲಿ ಹುಟ್ಟಿದ ಪುತ್ರನು ನಿಜವಾದ ಪುತ್ರಾಭಿಮಾನವುಳ್ಳವನಾಗಿರುವುದಿಲ್ಲ. ಪೂರ್ಣಪ್ರಜ್ಞನಲ್ಲದ ನನ್ನ ಪುತ್ರೋತ್ಪಾದನ ಸಾಧಕವಾದ ಮಾರ್ಗಗಳನ್ನು ತಡೆಯಬೇಡ.

## English Translation.

Wealth is competent to the acquittance of debt : may we be masters of permanent riches : that is not offspring which is begotten by another : alter not the paths (of the generation) of a blockhead.

॥ ವಿಶೇಷವಿಷಯಗಳು ॥

ಅಪತ್ಯಶಬ್ದಾರ್ಥವನ್ನು ವಿವರಿಸುವುದಕ್ಕಾಗಿ ಯಾಸ್ಕರು ಈ ಋಕ್ಕಿಗೆ ನಿರ್ವಚನವನ್ನು ಹೇಳಿದಾರೆ—

> **ಅಪತ್ಯಂ ಕಸ್ಮಾತ್ । ಅಪತತಂ ಭವತಿ । ನಾನೇನ ಪತತೀತಿ ವಾ । ತದ್ಯಥಾ ಜನಯಿತುಃ ಪ್ರಜೈವಮರ್ಥೀಯೋ ಋಚಾ ಉದಾಹರಿಷ್ಯಾಮಃ ॥ ಪರಿಷದ್ಯಂ ಹ್ಯರಣಸ್ಯ ರೇಕ್ಣೋ ನಿತ್ಯಸ್ಯ ರಾಯಃ ಪತಯಃ ಸ್ಯಾಮ । ನ ಶೇಷೋ ಅಗ್ನೇ ಅನ್ಯಜಾತಮಸ್ತ್ಯಚೇತಾನಸ್ಯ**

**ಮಾ ಪಥೋ ವಿ ದುಕ್ಷಃ ॥ ಪರಿಹರ್ತವ್ಯಂ ಹಿ ನೋಪಸರ್ತವ್ಯಂ । ಅರಣಸ್ಯ ರೇಕ್ಣ ಅರಣೋಽಪಾರ್ಣೋ ಭವತಿ । ರೇಕ್ಣ ಇತಿ ಧನನಾಮ । ರಿಚ್ಯತೇ ಪ್ರಯತಃ ॥ ನಿತ್ಯಸ್ಯ ಪತಯಃ ಸ್ಯಾಮ । ಪಿತ್ರ್ಯಸ್ಯೇವ ಧನಸ್ಯ । ನ ಶೇಷೋ ಅಗ್ನೇ ಅನ್ಯಜಾತಮಸ್ತಿ ಶೇಷ ಇತ್ಯಪತ್ಯನಾಮ । ಶಿಷ್ಯತೇ ಪ್ರಯತಃ ॥ ಅಚೇತಯಮಾನಸ್ಯ ತತ್ಪ್ರಮತ್ತಸ್ಯ ಭವತಿ । ಮಾ ನಃ ಪಥೋ ವಿದೂದುಷ ಇತಿ ॥**

(ನಿ. ೩-೨)

ವಸಿಷ್ಠಋಷಿ ಮತ್ತು ಅಗ್ನಿ ಇವರುಗಳ ಸಂವಾದರೂಪವಾದ ಈ ಋಕ್ಕಿನಲ್ಲಿ ವಸಿಷ್ಠಋಷಿಯ ಪುತ್ರರು ಕಾರಣಾಂತರದಿಂದ ಹತರಾಗಲು ಪುನಃ ತನಗೆ ಪುತ್ರನಾಗಬೇಕೆಂಬ ಇಚ್ಛೆಯಿಂದ ಅಗ್ನಿಯನ್ನು ಪ್ರಾರ್ಥಿಸುವಾಗ ತನಗೆ **ಕ್ರೀತಕ-ಕೃತ್ರಿಮದತ್ತಕಾದೀನಾಂ ಪುತ್ರಾಣಾಮನ್ಯತಮಂ ಕುರುಷ್ವ ಪುತ್ರಮಿತಿ ।** ಔರಸಪುತ್ರನೇ ಆಗಬೇಕೆಂದು ಬಯಸುತ್ತಾನೆ. ಪುತ್ರರಲ್ಲಿ ಅನೇಕವಿಧವಿರುವುದು. ಮಕ್ಕಳಿಲ್ಲದಿರುವವರು ಮತ್ತೊಬ್ಬರ ಶಿಶುವನ್ನು ಕ್ರಯಕ್ಕೆ ತೆಗೆದುಕೊಂಡು ಅದನ್ನು ಪೋಷಿಸಿ, ತನ್ನ ಮಕ್ಕಳಂತೆಯೇ ಕಾಪಾಡಿ, ಅವನನ್ನು ಪುತ್ರನಂತೆ ಭಾವಿಸುವುದು ಒಂದು ವಿಧ. ಈ ವಿಧವಾದ ಪುತ್ರನಿಗೆ ಕ್ರೀತಕ ಪುತ್ರನೆಂದು ಹೆಸರು; ರೋಗಾದ್ಯನೇಕಕಾರಣಗಳಿಂದ ತನ್ನ ಪತ್ನಿಯಲ್ಲಿ ಪುತ್ರೋತ್ಪಾದನೆ ಮಾಡಲು ಸಾಮರ್ಥ್ಯವಿಲ್ಲದ ಪುರುಷನು ತನ್ನ ಪತ್ನಿಯಲ್ಲಿ ಮತ್ತೊಬ್ಬ ಪುರುಷನಿಂದ (ತನ್ನ ಬಂಧು ಅಥವಾ ಬೇರೆ ಪುರುಷ) ಪುತ್ರೋತ್ಪಾದನೆಯಾಗುವಂತೆ ಮಾಡಿ, ಆ ಪುತ್ರನನ್ನು ತನ್ನ ಪುತ್ರನೆಂದೇ ಭಾವಿಸುವುದು. ಈ ವಿಧವಾದ ಪುತ್ರನಿಗೆ ಕೃತ್ರಿಮ ಪುತ್ರನೆಂದು ಹೆಸರು; ತನಗೆ ಪುತ್ರರಿಲ್ಲದಿರುವಾಗ ಯೋಗ್ಯರಾದ ಮತ್ತೊಬ್ಬರ ಶಿಶುವನ್ನು ದತ್ತಸ್ವೀಕಾರವಾಗಿ ಪರಿಗ್ರಹಿಸಿ ಎಂದರೆ, ಶಾಸ್ತ್ರೋಕ್ತರೀತಿಯಿಂದ ಪರಿಗ್ರಹಿಸಿ, ಆ ಪುತ್ರನಿಗೆ ತಾನೇ ಉಪನಯನಾದಿ ಕರ್ಮಗಳನ್ನು ಮಾಡಿ ತನ್ನ ಪುತ್ರನಂತೆಯೂ ತನಗೆ ಉತ್ತರಾಧಿಕಾರಿಯಂತೆಯೂ ಪರಿಗಣಿಸುವುದು. ಈ ವಿಧವಾದ ಪುತ್ರನಿಗೆ ದತ್ತಪುತ್ರನೆಂದು ಹೆಸರು. ಈ ಮೂರುವಿಧವೂ ಸಾಮಾನ್ಯವಾಗಿ ಆಚರಣೆಯಲ್ಲಿರುವ ವಿಧಾನಗಳು. ಆದರೂ ಇವುಗಳೊಂದನ್ನೂ ಇಷ್ಟಪಡದೆ ವಸಿಷ್ಠಋಷಿಯು ತನ್ನ ಪತ್ನಿಯಲ್ಲಿ ತನ್ನ ಶರೀರಸಂಪರ್ಕದಿಂದಲೇ ಉತ್ಪನ್ನನಾಗುವ ಔರಸಪುತ್ರನೇ ಬೇಕೆಂದು ಅಪೇಕ್ಷಿಸಿ ಅಗ್ನಿಯನ್ನು ಪ್ರಾರ್ಥಿಸಿರುವನು. ಮೇಲೆ ಹೇಳಿದ ಅನೇಕವಿಧ ಪುತ್ರರಲ್ಲಿ ಔರಸಪುತ್ರನೇ ತನ್ನ ಶರೀರದಿಂದ ಉತ್ಪನ್ನನಾಗಿರುವಕಾರಣ ಶ್ರೇಷ್ಠನೆಂಬ ವಿಚಾರದಲ್ಲಿ ಯಾವ ಅನುಮಾನವೂ ಇಲ್ಲ. ಎಲ್ಲರೂ ಇದನ್ನು ಒಪ್ಪುವರು. ಮತ್ತು—

**ಅಂಗಾದಂಗಾತ್ಸಂಭವಸಿ ಹೃದಯಾದಧಿಜಾಯಸೇ ।**
**ಆತ್ಮಾ ವೈ ಪುತ್ರನಾಮಾಸಿ ಸ ಜೀವ ಶರದಃ ಶತಂ ॥** (ತೈ. ಏಕಾಗ್ನಿಕಾಂಡ ೨-೧೧)

ಎಂಬ ಶ್ರುತಿವಾಕ್ಯವೂ ಇದನ್ನು ಸಮರ್ಥಿಸುವುದು. ಈ ಮಂತ್ರದಲ್ಲಿ ತಂದೆಯು ಆಗತಾನೇ ಹುಟ್ಟಿರುವ ತನ್ನ ಪುತ್ರನನ್ನುದ್ದೇಶಿಸಿ (ಜಾತಕರ್ಮದಲ್ಲಿ ಪುತ್ರನ ಶಿರಸ್ಸನ್ನು ಆಘ್ರಾಣಿಸುವಾಗ) ಹೇಳುವ ವಾಕ್ಯವಿದು. ಎಲೈ ಪುತ್ರನೇ, ನೀನು ನನ್ನ ಸ್ವಂತ ಅಂಗದಿಂದಲೂ ಹೃದಯದಿಂದಲೂ ಉತ್ಪನ್ನನಾಗಿರುವೆ. ಆದ್ದರಿಂದ ನಾನೇ ಪುತ್ರರೂಪದಿಂದ ನಿನ್ನಲ್ಲಿರುವೆನು. ವಸ್ತುತಃ ನನಗೂ ನಿನಗೂ ವ್ಯತ್ಯಾಸವೇನೂ ಇಲ್ಲ. ನೀನು ನೂರುವರ್ಷಗಳವರೆಗೆ ಆಯುಸ್ಸನ್ನು ಪಡೆದು ಜೀವಿಸಿರು ಎಂದು ಈ ಆಶೀರ್ಮಂತ್ರದ ಅಭಿಪ್ರಾಯವು. ಆದ್ದರಿಂದ ಪುತ್ರರಲ್ಲೆಲ್ಲಾ ಔರಸಪುತ್ರನೇ ಶ್ರೇಷ್ಠನೆಂದೂ, ಅಂತಹ ಔರಸಪುತ್ರನನ್ನೇ ತನಗೆ ಅನುಗ್ರಹಿಸಬೇಕೆಂದೂ, ವಸಿಷ್ಠಋಷಿಯು ಈ ಋಕ್ಕಿನಲ್ಲಿಯೂ ಮುಂದಿನ ಋಕ್ಕಿನಲ್ಲಿಯೂ ಅಗ್ನಿಯನ್ನು ಪ್ರಾರ್ಥಿಸಿದ್ದಾನೆ.

ಪ್ರಕೃತಋುಕ್ಕಿನಲ್ಲಿ ಅಪತ್ಯಶಬ್ದ ಪ್ರಯೋಗವಿಲ್ಲ. ಶೇಷ ಶಬ್ದ ಪ್ರಯೋಗಮಾತ್ರವಿದೆ. ಆದರೆ, ಅಪತ್ಯ ಮತ್ತು ಶೇಷ ಶಬ್ದಗಳಿಗೆ ಒಂದೇ ಅರ್ಥವಿರುವುದೆಂದು ಯಾಸ್ಕರು ಈ ಶಬ್ದಗಳ ನಿರ್ವಚನವನ್ನು ಹೇಳಿದಾರೆ. ಅಪತ್ಯ ಶಬ್ದಕ್ಕೆ ವಿಸ್ತಾರಮಾಡುವುದು ಎಂದರೆ ಕುಲವನ್ನು ವಿಸ್ತರಿಸುವುದು, ಅಭಿವೃದ್ಧಿಮಾಡುವುದು ಎಂಬರ್ಥವಿರುವುದರಿಂದ, ಅಪತ್ಯವೆಂದರೆ ಪುತ್ರ ಅಥವಾ ಸಂತತಿ ಎಂದರ್ಥವು. ಪುತ್ರನು ತಂದೆಯ ವಂಶವನ್ನು ವಿಸ್ತಾರಮಾಡುವವನು ಎಂದರೆ ಬೆಳೆಯುವಂತೆ ಮಾಡುವವನು. ಆದ್ದರಿಂದ ಅಪತ್ಯನೆಂದರೆ ಪುತ್ರಸಂತತಿಯು; **ನ ಅನೇನ ಪತತೀತಿ ವಾ** ಈ ಪುತ್ರನಿಂದ ತಂದೆಯು ನರಕಾದಿಗಳಲ್ಲಿ ಬೀಳುವುದಿಲ್ಲವಾದ್ದರಿಂದ ಪುತ್ರನಿಗೆ ಅಪತ್ಯವೆಂದೂ ಹೆಸರು. ಪುತ್ರನು ಮಾಡುವ ಸತ್ಕರ್ಮಾಚರಣೆಯಿಂದ ತಂದೆಯಾದವನು ಮೃತನಾದಮೇಲೆ ನರಕದಲ್ಲಿ ಬೀಳದೆ ಸ್ವರ್ಗಲೋಕವನ್ನು ಪಡೆಯುವನು ಎಂದು ಪ್ರತೀತಿ ಇದೆ ಆದ್ದರಿಂದ ತಂದೆಯನ್ನು ನರಕದಲ್ಲಿ ಬೀಳದಂತೆ ಮಾಡುವವನಾದ್ದರಿಂದ ಪುತ್ರನಿಗೆ ಅಪತ್ಯವೆಂದು ಹೆಸರು. ಶೇಷ ಶಬ್ದಕ್ಕೂ ಅಪತ್ಯ ಅಥವಾ ಪುತ್ರನೆಂದೇ ಅರ್ಥವು. ಹೇಗೆಂದರೆ, ಶೇಷ ಎಂದರೆ ಉಳಿದಿರುವುದು ಎಂದರ್ಥ. ಇಲ್ಲಿ ಸಂಸಾರದಲ್ಲಿರುವ ತಂದೆ ಮಕ್ಕಳಲ್ಲಿ ತಂದೆಯ ವಯಸ್ಸು ಹೆಚ್ಚಾಗಿರುವುದರಿಂದ ಅವನು ಮೊದಲು ಮೃತನಾಗುವನು. ಆ ರೀತಿ ಮೃತನಾದಮೇಲೆ ಎಂದರೆ ಪರಲೋಕವನ್ನೈದಿದಮೇಲೆ ಈ ಲೋಕದಲ್ಲಿ ಉಳಿಯುವವನು ಪುತ್ರನೇ. ಆದ್ದರಿಂದ ಪುತ್ರನನ್ನು ಶೇಷ ಎಂದೂ ಹೇಳುವರು. ಪ್ರಕೃತ ಋುಕ್ಕಿನಲ್ಲಿ ಶೇಷ ಶಬ್ದಕ್ಕೆ ಇದೇ ಅರ್ಥವಿರುವುದು.

ಪರಕೀಯರ ಧನವನ್ನು ವರ್ಜಿಸಬೇಕು ಎಂದರೆ ಸ್ವೀಕರಿಸಬಾರದು. ಅದರಲ್ಲಿಯೂ ತನಗೆ ಸಂಬಂಧವಿಲ್ಲದ ಅಥವಾ ದೂರಸಂಬಂಧಿಯಾದವನ ಧನವನ್ನು ಮುಟ್ಟಲೇಬಾರದು. ರೇಕ್ಣ ಎಂದರೆ ಧನವು. ಈ ಶಬ್ದವು ಬಿಡು, ಬಿಟ್ಟುಹೋಗು ಎಂಬರ್ಥವುಳ್ಳ ರಿಚ್ ಧಾತುವಿನಿಂದ ನಿಷ್ಪನ್ನವಾಗಿದೆ. ಎಂದರೆ ಒಬ್ಬ ಪುರುಷನು ತಾನು ಮೃತನಾಗುವಾಗ ತನ್ನಲ್ಲಿರುವ ಧನವನ್ನು (ಪುತ್ರಾದಿಗಳಿಗಾಗಿ) ಬಿಟ್ಟುಹೋಗುವನಷ್ಟೆ. ಆ ರೀತಿ ಬಿಟ್ಟುಹೋಗುವ ಧನಕ್ಕೆ ರೇಕ್ಣಃ ಎಂದು ಹೆಸರು ಇಂತಹ ಧನವು ನಮಗೆ ಬೇಡ ಎಂದರೆ ನ್ಯಾಯವಾಗಿ ನಮಗೆ ಸೇರದಿರುವ ಎಂದರೆ ಶರೀರ ಸಂಬಂಧವಾಗಿ ಹಕ್ಕುಬಾಧ್ಯತೆ ಇಲ್ಲದಿರುವ ಇನ್ನೊಬ್ಬರ ಧನವು ನಮಗೆ ಬೇಡ. ನಮಗೆ ಶಾಶ್ವತವಾದುದೂ ಪಿತ್ರಾರ್ಜಿತವಾದುದೂ ಆದ ಧನವೇ ಬೇಕು. ಬೇರೊಬ್ಬ ಪುರುಷನಿಂದ ಉತ್ಪನ್ನನಾದ ಪುತ್ರನು (ನಮಗೆ) ಪುತ್ರನೇ ಅಲ್ಲ ಎಂದರೆ ದತ್ತಪುತ್ರ ಮೊದಲಾದ ಪುತ್ರರಲ್ಲಿ ಯಾವವಿಧವಾದ ಪುತ್ರನೂ ಬೇಡ. ಔರಸಪುತ್ರನೇ ಬೇಕು. ಶೇಷ ಎಂಬ ಶಬ್ದವು ಪುತ್ರನೆಂಬ ಅರ್ಥವನ್ನು ಸೂಚಿಸುವುದು. ತಂದೆಯ ಮರಣಾನಂತರ ಉಳಿಯುವ ಸ್ವಂತ ಪುತ್ರನಿಗೆ ಶೇಷನೆಂದು ಹೆಸರು. ಇತರವಿಧವಾದ ಪುತ್ರರನ್ನು ಬುದ್ಧಿಯಿಲ್ಲದ ಅವಿವೇಕಿಗಳು ಮಾತ್ರ ಅಪೇಕ್ಷಿಸುವರು. ನಮಗೆ ನಮ್ಮ ಸ್ವಶರೀರದಿಂದ ಉತ್ಪನ್ನನಾಗುವ ಔರಸಪುತ್ರನು ಮಾತ್ರ ಬೇಕು. ಆದ್ದರಿಂದ ಎಲೈ ಅಗ್ನಿಯೇ, ನಾವು ಕೆಟ್ಟಮಾರ್ಗವನ್ನು ಎಂದರೆ ನಮ್ಮ ಪಿತೃಪಿತಾಮಹ ಮೊದಲಾದ ಹಿರಿಯರು ಅನುಸರಿಸುತ್ತಿದ್ದ ಮಾರ್ಗವನ್ನು ಬಿಟ್ಟು ಬೇರೆ ಕೆಟ್ಟ ಮಾರ್ಗವನ್ನು ಅನುಸರಿಸದಂತಾಗಲಿ ಎಂದು ನಿರ್ವಚನದ ಮುಖ್ಯಾಭಿಪ್ರಾಯವು.

॥ ಸಂಹಿತಾಪಾಠಃ ॥

ನಹಿ ಗ್ರಭಾಯಾರಣಃ ಸುಶೇವೋಽನ್ಯೋದರ್ಯೋ ಮನಸಾ ಮಂತವಾ ಉ।

ಅಧಾ ಚಿದೋಕಃ ಪುನರಿತ್ಸ ಏತ್ಯಾ ನೋ ವಾಜ್ಯಭೀಷಾಳೇತು ನವ್ಯಃ ॥೮॥

॥ ಪದಪಾಠಃ ॥

ನಹಿ । ಗ್ರಭಾಯ । ಅರಣಃ । ಸುऽಶೇವಃ । ಅನ್ಯऽಉದರ್ಯಃ । ಮನಸಾ । ಮಂತವೈ । ಊಂ ಇತಿ ।
ಅಧ । ಚಿತ್ । ಓಕಃ । ಪುನಃ । ಇತ್ । ಸಃ । ಏತಿ । ಆ । ನಃ । ವಾಜೀ । ಅಭೀಷಾಟ್ । ಏತು । ನವ್ಯಃ ॥

॥ ಸಾಯಣಭಾಷ್ಯಂ ॥

ಪೂರ್ವಸ್ಯಾಮೃಚ್ಯುಕ್ತ ಏವಾರ್ಥೋऽತ್ರ ಪ್ರಪಂಚ್ಯತೇ । ಅರಣೋऽರಮಮಾಣೋऽನ್ಯೋ-ದರ್ಯಃ ಸುಶೇವಃ ಸುಖತಮಃ ಸನ್ ಗ್ರಭಾಯ ಪುತ್ರತ್ವೇನ ಗ್ರಹಣಾಯ ಮನಸಾ ಮಂತವಾ ಉ ಮನಸಾಪಿ ಮಂತವ್ಯೋ ನ ಭವತಿ ಹಿ । ಅಧ ಚಿದಪಿ ಚ ಸೋऽನ್ಯೋದರ್ಯ ಓಕ ಇತ್ ಸಂಸ್ಥಾನಮೇವ ಪುನರೇತಿ । ಪ್ರಾಪ್ನೋತಿ । ಅತೋ ವಾಜ್ಯನ್ನವಾನಭೀಷಾಟ್ ಶತ್ರೂಣಾಮಭಿಭವಿತಾ ನವ್ಯೋ ನವಜಾತಃ ಪುತ್ರೋ ನೋऽಸ್ಮಾನೈತು । ಆಗಚ್ಛತು ॥

। ಪ್ರತಿಪದಾರ್ಥ ।

**ಅರಣಃ**— ಪಿತೃಋಣವನ್ನು ಪರಿಹರಿಸಲಸಮರ್ಥನೂ ಅಥವಾ ಹರ್ಷಸಾಧಕನಾಗದಿರುವವನೂ । **ಅನ್ಯೋ-ದರ್ಯಃ**— ಬೇರೊಬ್ಬರ ಉದರದಲ್ಲಿ ಉತ್ಪನ್ನನಾದವನು । **ಸುಶೇವಃ**— ಉತ್ತಮವಾದ ಸ್ಥಿತಿಯಲ್ಲಿದ್ದರೂ । **ಗ್ರಭಾಯ**— ಪುತ್ರರೂಪವನ್ನು ಸ್ವೀಕರಿಸಲು । **ಮನಸಾ**— ಮನಸ್ಸಿನಿಂದಲೂ । **ಮಂತವಾ ಉ**— ಯೋಚನೆ ಮಾಡಲು ಕೂಡ । **ನ ಹಿ**— ಅರ್ಹನಾಗಿರುವುದಿಲ್ಲ । **ಅಧ ಚಿತ್**— ಅದಲ್ಲದೇ । **ಸಃ**— ಅನ್ಯಪುತ್ರನಾದ ಅವನು । **ಓಕ ಇತ್**— ತಾನು ಹುಟ್ಟಿದ ಮನೆಗೆ । **ಪುನಃ ಏತಿ**— ಹಿಂತಿರುಗಿ ಹೋಗುತ್ತಾನೆ (ಆದುದರಿಂದ) । **ವಾಜೀ**— ಅನ್ನವಂತನೂ । **ಅಭೀಷಾಟ್**— ಶತ್ರುಗಳನ್ನು ಎದುರಿಸಿ ಸೋಲಿಸುವವನೂ । **ನವ್ಯಃ**— ನೂತನನೂ ಆದ ಪುತ್ರನು । **ನಃ**— ನಮಗೆ (ಪ್ರೀತಿಕಾರಕನಾಗಿ) । **ಆ ಏತು**— ನಮಗೂ ಉತ್ಪನ್ನನಾಗಲಿ.

॥ ಭಾವಾರ್ಥ ॥

ಪಿತೃಋಣವನ್ನು ಪರಿಹರಿಸಲಸಮರ್ಥನೂ, ಹರ್ಷಸಾಧಕನಾಗದಿರುವವನೂ ಬೇರೊಬ್ಬರ ಉದರದಲ್ಲಿ ಉತ್ಪನ್ನನೂ ಆದವನು ಉತ್ತಮವಾದ ಸ್ಥಿತಿಯಲ್ಲಿದ್ದರೂ ಪುತ್ರರೂಪದಲ್ಲಿ ಸ್ವೀಕರಿಸಲು ಮನಸ್ಸಿನಿಂದಲೂ ಯೋಚನೆ ಮಾಡಲು ಕೂಡ ಅರ್ಹನಾಗಿರುವುದಿಲ್ಲ. ಅದಲ್ಲದೇ, ಅನ್ಯಪುತ್ರನಾದ ಅವನು ತಾನು ಹುಟ್ಟಿದ ಮನೆಗೇ ಹಿಂತಿರುಗಿ ಹೋಗುತ್ತಾನೆ. ಆದುದರಿಂದ ಅನ್ನವಂತನೂ, ಶತ್ರುಗಳನ್ನು ಎದುರಿಸಿ ಸೋಲಿಸುವವನೂ, ನೂತನನೂ ಆದ ಪುತ್ರನು ನಮಗೆ ಪ್ರೀತಿಕಾರಕನಾಗಿ ನಮಗೂ ಉತ್ಪನ್ನನಾಗಲಿ.

## English Translation.

One not acquitting debts, although worthy of regard, yet begotten to another, is not to be contemplated even in the mind (as fit) for acceptance : for verily he returns to his own house : therefore let there come to us (a son) new-born, possessed of food, victorious over foes.

|| ವಿಶೇಷವಿಷಯಗಳು ||

ಹಿಂದಿನ ಋಕ್ಕಿನಲ್ಲಿ ಹೇಳಿದ ವಿಷಯವನ್ನೇ ಸ್ಪಷ್ಟವಾಗಿ ಸಮರ್ಥನೆಮಾಡುವುದಕ್ಕಾಗಿ ಋಷಿಯು ತನಗೆ ಯಾವ ವಿಧವಾದ ಪುತ್ರನು ಬೇಕೆಂಬ ವಿಷಯದಲ್ಲಿ ತನ್ನ ಅಭಿಪ್ರಾಯವನ್ನು ಈ ಋಕ್ಕಿನಲ್ಲಿ ವಿಶದವಾಗಿ ವಿವರಿಸಿದ್ದಾನೆ. ಈ ಋಕ್ಕಿಗೂ ಯಾಸ್ಕರು ನಿರ್ವಚನವನ್ನು ಹೇಳಿದ್ದಾರೆ—

> **ತಸ್ಯೋತ್ತರಾ ಭೂಯಸೇ ನಿರ್ವಚನಾಯ । ನ ಹಿ ಗ್ರಭಾಯಾರಣಃ ಸುಶೇವೋಽನ್ಯೋದರ್ಯೋ ಮನಸಾ ಮನ್ತವಾ ಉ। ಅಧಾ ಚಿದೋಕಃ ಪುನರಿತ್ಸ ಏತ್ಯಾ ನೋ ವಾಜ್ಯಭೀಷಾಳೇತು ನವ್ಯಃ॥ ನಹಿ ಗ್ರಹೀತವ್ಯೋ ಅರಣಃ ಸುಸುಖತಮೋಽಪ್ಯನ್ಯೋದರ್ಯೋ ಮನಸಾಪಿ ನ ಮಂತ-ವ್ಯೋ ಮಮಾಯಂ ಪುತ್ರ ಇತಿ । ಅಥ ಸ ಓಕಃ ಪುನರೇವ ತದೇತಿ ಯತ ಆಗತೋ ಭವತಿ ॥ ಓಕ ಇತಿ ನಿವಾಸನಾಮೋಚ್ಯತೇ । ಏತು ನೋ ವಾಜೀ ವೇಜನವಾನ್ । ಅಭಿಷಹಮಾಣಃ ಸಪತ್ನಾನ್ । ನವಜಾತಃ ಸ ಏವ ಪುತ್ರ ಇತಿ ॥**
>
> (ನಿ. ೩-೩)

ಹಿಂದಿನ ಋಕ್ಕಿನಲ್ಲಿ ಹೇಳಿರುವ ನಾನಾವಿಧ ಪುತ್ರರ ವಿಷಯದಲ್ಲಿ ಔರಸಪುತ್ರನೇ ಶ್ರೇಷ್ಠನೆಂಬ ವಿಷಯವನ್ನು ಸಮರ್ಥಿಸುವುದಕ್ಕಾಗಿ ಯಾಸ್ಕರು ಈ ಋಕ್ಕನ್ನು ಉದಹರಿಸಿ ನಿರ್ವಚನವನ್ನು ಹೇಳಿದ್ದಾರೆ.

ಇನ್ನೊಬ್ಬರ ಪುತ್ರನು ಎಷ್ಟೇ ಚೆನ್ನಾಗಿರಲಿ ಅಥವಾ ಸಂತೋಷಪಡಿಸುವವನಾಗಲಿ ಅವನನ್ನು ಪುತ್ರನನ್ನಾಗಿ (ದತ್ತವಾಗಿ) ಎಂದಿಗೂ ಸ್ವೀಕರಿಸಲೇಬಾರದು. ಏಕೆಂದರೆ ಆ ಪುತ್ರನು ಅನ್ಯ ಪುರುಷನ ವೀರ್ಯದಿಂದ ಅನ್ಯ ಸ್ತ್ರೀಯ ಗರ್ಭದಲ್ಲಿ ಉತ್ಪನ್ನನಾದವನು. ಇಂತಹ ಅನ್ಯ ಪುರುಷನ ಪುತ್ರನನ್ನು —ಇವನು ನನ್ನ ಪುತ್ರನು—ಎಂದು ಮನಸ್ಸಿನಲ್ಲಿಯೂ ಸಹ ಚಿಂತಿಸಬಾರದು. ಏಕೆಂದರೆ—ದತ್ತಪುತ್ರನಿಗೆ ಪಿತೃಭಕ್ತಿ ಇರುವುದುಂಟೇ ಎಂಬ ನಾಣ್ನುಡಿಯಂತೆ ಈ ಪುತ್ರನಿಗೆ ತನ್ನನ್ನು ಸ್ವೀಕರಿಸಿದ ಪಿತೃವಿನಲ್ಲಿ ಯಾವ ವಿಧವಾದ ಪ್ರೀತಿಯಾಗಲಿ ಅಭಿಮಾನವಾಗಲಿ ಇರುವುದಿಲ್ಲ. ತನಗೆ ಸಿಕ್ಕುವ ಆಸ್ತಿಯ ವಿಷಯದಲ್ಲಿ ಮಾತ್ರ ಆಸಕ್ತಿ ಇರುವುದು. ಇದಲ್ಲದೆ ಇವನು ಎಂದಿದ್ದರೂ ತಾನು ಹುಟ್ಟಿದ ಮನೆಗೇ ಹಿಂದಕ್ಕೆ ಹೋಗುವನು ಎಂದರೆ ತನ್ನ ಸ್ವಂತ ಪಿತೃವಿನಲ್ಲಿಯೇ ಅಭಿಮಾನವಿರುವುದು. ದತ್ತ ಪಿತೃವಿನಲ್ಲಿ ಯಾವ ವಿಧವಾದ ಪ್ರೀತ್ಯಭಿಮಾನಗಳೂ ಇರುವುದಿಲ್ಲ. ಓಕಃ ಎಂಬ ಶಬ್ದಕ್ಕೆ ವಾಸಮಾಡುವ ಮನೆ ಎಂದರ್ಥವು. ಆದ್ದರಿಂದ ನಮಗೆ ಈ ವಿಧವಾದ ಎಂದರೆ ಅನ್ಯ ಕುಲಜನಾದ ಪುತ್ರನು ಬೇಡ. ನಮ್ಮ ಸ್ವಂತ ಪತ್ನಿಯಲ್ಲಿಯೇ, ಸ್ವಶರೀರ ಸಂಪರ್ಕದಿಂದ, ಶತ್ರುಗಳಿಗೆ ಭಯವನ್ನುಂಟುಮಾಡುವವನೂ, ಪರಾಕ್ರಮಶಾಲಿಯೂ ಆದ ಪುತ್ರನು ಹೊಸದಾಗಿ ಹುಟ್ಟಲಿ ಎಂದು ವಸಿಷ್ಠ ಋಷಿಯು ಅಗ್ನಿಯನ್ನು ಪ್ರಾರ್ಥಿಸಿರುವನು.

॥ ಸಂಹಿತಾಪಾಠಃ ॥

## ತ್ವಮಗ್ನೇ ವನುಷ್ಯತೋ ನಿ ಪಾಹಿ ತ್ವಮು ನಃ ಸಹಸಾವನ್ನವದ್ಯಾತ್ ।
## ಸಂ ತ್ವಾ ಧ್ವಸ್ಮನ್ವದಭ್ಯೇತು ಪಾಥಃ ಸಂ ರಯಿಃ ಸ್ಪೃಹಯಾಯ್ಯಃ ಸಹಸ್ರೀ॥

॥ ಪದಪಾಠಃ ॥

ತ್ವಂ । ಅಗ್ನೇ । ವನುಷ್ಯತಃ । ನಿ । ಪಾಹಿ । ತ್ವಂ । ಊಂ ಇತಿ । ನಃ । ಸಹಸಾಽವನ್ । ಅವದ್ಯಾತ್ ।
ಸಂ । ತ್ವಾ । ಧ್ವಸ್ಮನ್ಽವತ್ । ಅಭಿ । ಏತು । ಪಾಥಃ । ಸಂ । ರಯಿಃ । ಸ್ಪೃಹಯಾಯ್ಯಃ । ಸಹಸ್ರೀ । ೯ ॥

॥ ಸಾಯಣಭಾಷ್ಯಂ ॥

ಹೇ ಅಗ್ನೇ ತ್ವಂ ವನುಷ್ಯತೋ ಹಿಂಸಕಾನ್ನೋಽಸ್ಮಾನ್ನಿ ಪಾಹಿ । ತ್ವಮು ತ್ವಮೇವಾವದ್ಯಾತ್ ಪಾಪಾತ್ ನೋಽಸ್ಮಾನ್ನಿ ಪಾಹಿ । ತ್ವಾ ತ್ವಾಂ ಧ್ವಸ್ಮನ್ವತ್ ಧ್ವಸ್ತದೋಷಂ ಪಾಥೋಽನ್ನಂ ಹವಿಃ ಸಮಭ್ಯೇತು । ಸಮ್ಯಕ್ ಪ್ರಾಪ್ನೋತು । ಅಪಿ ಚಾಸ್ಮಾನ್ ಸ್ಪೃಹಯಾಯ್ಯಃ ಸ್ಪೃಹಣೀಯಃ ಸಹಸ್ರೀ ಸಹಸ್ರಸಂಖ್ಯಾಕೋ ರಯಿರಭ್ಯೇತು ॥

॥ ಪ್ರತಿಪದಾರ್ಥ ॥

**ಅಗ್ನೇ**—ಎಲೈ ಅಗ್ನಿಯೇ । **ತ್ವಂ**—ನೀನು । **ವನುಷ್ಯತಃ**—ಹಿಂಸಕನಾದ ಶತ್ರುವಿನಿಂದ । **ನಃ**—ನಮ್ಮನ್ನು । **ನಿ ಪಾಹಿ**—ಪೂರ್ಣವಾಗಿ ರಕ್ಷಿಸು । **ಸಹಸಾವನ್**—ಶಕ್ತಿಯುತನಾದ ಎಲೈ ಅಗ್ನಿಯೇ । **ತ್ವಂ ಉ**—ನೀನೇ । **ಅವದ್ಯಾತ್**—ಪಾಪಕೃತ್ಯಗಳಿಂದಲೂ ನಮ್ಮನ್ನು ರಕ್ಷಿಸು । **ಧ್ವಸ್ಮನ್ವತ್**—ದೋಷರಹಿತವಾದುದೂ । **ಪಾಥಃ**—ಹವಿಸ್ಸಿನ ರೂಪದ್ದೂ ಆದ ಅನ್ನವು । **ತ್ವಾ**–ನಿನ್ನನ್ನು । **ಸಮಭ್ಯೇತು**—ಬಂದು ಸೇರಿಕೊಳ್ಳಲಿ । **ಸ್ಪೃಹಯಾಯ್ಯಃ**—ಅತ್ಯಂತ ಆದರಣೆಗೆ ಪಾತ್ರವಾದುದೂ । **ಸಹಸ್ರೀ**—ಸಹಸ್ರಸಂಖ್ಯಾತವಾದುದೂ ಆದ । **ರಯಿಃ**—ಧನವು (ನಮ್ಮನ್ನು ಸೇರಲಿ).

॥ ಭಾವಾರ್ಥ ॥

ಎಲೈ ಅಗ್ನಿಯೇ, ನೀನು ಹಿಂಸಕನಾದ ಶತ್ರುವಿನಿಂದ ನಮ್ಮನ್ನು ಪೂರ್ಣವಾಗಿ ರಕ್ಷಿಸು. ಶಕ್ತಿಯುತನಾದ ಎಲೈ ಅಗ್ನಿಯೇ, ಪಾಪಕೃತ್ಯಗಳಿಂದಲೂ ನಮ್ಮನ್ನು ನೀನೇ ರಕ್ಷಿಸು. ದೋಷರಹಿವಾದುದೂ, ಹವಿಸ್ಸಿನ ರೂಪದ್ದೂ ಆದ ಅನ್ನವು ನಿನ್ನನ್ನು ಬಂದು ಸೇರಲಿ. ಅತ್ಯಂತ ಆದರಣೆಗೆ ಪಾತ್ರವಾದುದೂ ಬಹುಸಂಖ್ಯಾಕವಾದುದೂ ಆದ ಧನವು ನಮ್ಮನ್ನು ಬಂದು ಸೇರಲಿ.

## English Translation.

Agni, defend us against the malignant; you are endowed with strength; (preserve us) from sin: may the (sacrificial) food come to you free from defect: may the riches that we desire come to us by thousands.

॥ ಸಂಹಿತಾಪಾಠಃ ॥

ಏತಾ ನೋ ಅಗ್ನೇ ಸೌಭಗಾ ದಿದೀಹ್ಯಪಿ ಕ್ರತುಂ ಸುಚೇತಸಂ ವತೇಮ ।
ವಿಶ್ವಾ ಸ್ತೋತೃಭ್ಯೋ ಗೃಣತೇ ಚ ಸಂತು ಯೂಯಂ ಪಾತ ಸ್ವಸ್ತಿಭಿಃ
ಸದಾ ನಃ । ೧೦ ॥

॥ ಪದಪಾಠಃ ॥

ಏತಾ । ನಃ । ಅಗ್ನೇ । ಸೌಭಗಾ । ದಿದೀಹಿ । ಅಪಿ । ಕ್ರತುಂ । ಸುಽಚೇತಸಂ । ವತೇಮ ।

ವಿಶ್ವಾ । ಸ್ತೋತೃಽಭ್ಯಃ । ಗೃಣತೇ । ಚ । ಸಂತು । ಯೂಯಂ । ಪಾತ । ಸ್ವಸ್ತಿಽಭಿಃ । ಸದಾ । ನಃ ॥೧೦॥

॥ ಸಾಯಣಭಾಷ್ಯಂ ॥

ಹೇ ಅಗ್ನೇ ಏತ್ಯೈತಾನಿ ಪರಿದೃಶ್ಯಮಾನಾನಿ ಸೌಭಗಾ ಸೌಭಗಾನಿ ಶೋಭನಾನಿ ಧನಾನಿ ನೋಽಸ್ಮಭ್ಯಂ ದಿದೀಹಿ । ದೀಪಯ ದೇಹಿ ವಾ । ಅಪ್ಯಪಿ ಚ ಕ್ರತುಂ ಕರ್ಮ ಯಜ್ಞಾನಾಂ ಕರ್ತಾರಂ ವಾ ಸುಚೇತಸಂ ಶೋಭನಪ್ರಜ್ಞಾನಯುಕ್ತಂ ಸುಪ್ರಜ್ಞಾನಂ ಪುತ್ರಂ ವಾ ವತೇಮ । ಸಂಭಜೇಮಹಿ ॥ ವನತೇಃ ಸಂಭಜನಾರ್ಥಸ್ಯ ವರ್ಣಾಂತರಾಗಮೋ ಸತಿ ರೂಪಂ ॥ ವಿಶ್ವಾ ವಿಶ್ವಾನಿ ಧನಾನಿ ಸ್ತೋತೃಭ್ಯ ಉದ್ಗಾತೃಭ್ಯೋ ಗೃಣತೇ ಶಂಸತೇ ಚ ಸಂತು । ಯೂಯಂ ತ್ವತ್ಪರಿವಾರಾಶ್ಚ ಸರ್ವೇ ಯೂಯಂ ನೋಽಸ್ಮಾನ್ ಸ್ವಸ್ತಿಭಿಃ ಕ್ಷೇಮೈಃ ಸದಾ ಸರ್ವದಾ ಪಾತ । ರಕ್ಷತ ॥

॥ ಪ್ರತಿಪದಾರ್ಥ ॥

**ಅಗ್ನೇ**—ಎಲೈ ಅಗ್ನಿಯೇ । **ಏತಾ**—ಮೇಲೆ ವರ್ಣಿತವಾದ । **ಸೌಭಗಾ**—ಸಕಲ ಮಂಗಳಕರವಾದ ಸಂಪತ್ತುಗಳನ್ನೂ । **ನಃ**—ನಮಗೆ । **ದಿದೀಹಿ**—ಒದಗಿಸಿಕೊಡು । **ಅಪಿ**—ಮತ್ತು । **ಕ್ರತುಂ**—ಯಜ್ಞ ಕರ್ಮಗಳನ್ನು ಮಾಡುವವನೂ । **ಸುಚೇತಸಂ**—ಉತ್ತಮವಾದ ಪ್ರಜ್ಞೆಯಿಂದ ಕೂಡಿದವನೂ ಆದ ಪುತ್ರನನ್ನು । **ವತೇಮ**—ನಾವು ಹೊಂದುವಂತಾಗಲಿ । **ವಿಶ್ವಾ**—ಸಮಸ್ತವಾದ ಧನಗಳೂ । **ಸ್ತೋತೃಭ್ಯಃ**—ಸ್ತುತಿಕರ್ತರಿಗೂ । **ಗೃಣತೇ ಚ**—ಆ ಸ್ತುತಿಗಳನ್ನು ಪಠಿಸಿ ನಿನ್ನನ್ನು ಪ್ರಶಂಸಿಸುವವರಿಗೂ । **ಸಂತು**—ನಿರ್ದಿಷ್ಟವಾಗಿರಲಿ । **ಯೂಯಂ**—ನೀನು ಮತ್ತು ನಿನ್ನವರೆಲ್ಲರೂ । **ನಃ**—ನಮ್ಮನ್ನು । **ಸ್ವಸ್ತಿಭಿಃ**—ಕಲ್ಯಾಣಗಳಿಂದ । **ಸದಾ**—ಯಾವಾಗಲೂ । **ಪಾತ**—ರಕ್ಷಿಸಿರಿ.

॥ ಭಾವಾರ್ಥ ॥

ಎಲೈ ಅಗ್ನಿಯೇ, ಮೇಲೆ ವರ್ಣಿತವಾದ ಸಕಲ ಮಂಗಳಕರವಾದ ಸಂಪತ್ತುಗಳನ್ನೂ ನಮಗೆ ಒದಗಿಸಿ ಕೊಡು. ಮತ್ತು ಯಜ್ಞಕರ್ಮಗಳನ್ನು ಮಾಡುವವನೂ, ಉತ್ತಮವಾದ ಪ್ರಜ್ಞೆಯಿಂದ ಕೂಡಿದವನೂ ಆದ ಪುತ್ರನನ್ನು ನಾವು ಹೊಂದುವಂತಾಗಲಿ. ಸ್ತುತಿಕರ್ತರಿಗೂ, ಆ ಸ್ತುತಿಗಳನ್ನು ಪಠಿಸಿ ನಿನ್ನನ್ನು ಪ್ರಶಂಸಿಸುವವರಿಗೂ ಸಹ ಸಮಸ್ತ ಸಂಪತ್ತುಗಳೂ ನಿರ್ದಿಷ್ಟವಾಗಿರಲಿ. ನೀನು ಮತ್ತು ನಿನ್ನವರೆಲ್ಲರೂ ಸಹ ನಮ್ಮನ್ನು ಕಲ್ಯಾಣಗಳಿಂದ ಯಾವಾಗಲೂ ರಕ್ಷಿಸಿರಿ.

English Translation.

Illume for us, Agni, the auspicious (riches): may we possess (a son) intelligent, the celebrator of sacred rites: may all (good things) be to your praisers, and to him who eulogizes (you): and ever cherish us with blessings.

# ಐದನೆಯ ಸೂಕ್ತವು

॥ ಸಾಯಣಭಾಷ್ಯಂ ॥

ಪ್ರಾಗ್ನಯೇ ತವಸ ಇತಿ ನವರ್ಚಂ ಪಂಚಮಂ ಸೂಕ್ತಂ ವಸಿಷ್ಠಸ್ಯಾರ್ಷಂ ತ್ರೈಷ್ಟುಭಂ ವೈಶ್ವಾನರಾಗ್ನಿದೇವತಾಕಂ । ತಥಾಚಾನುಕ್ರಾಂತಂ । ಪ್ರಾಗ್ನಯೇ ನವ ವೈಶ್ವಾನರೀಯಂ ತ್ವಿತಿ ॥ ವಿನಿಯೋಗೋ ಲೈಂಗಿಕಃ ॥

ಅನುವಾದವು--ಪ್ರಾಗ್ನಯೇ ತವಸೇ ಎಂಬ ಈ ಸೂಕ್ತವು ಮೊದಲನೆಯ ಅನುವಾಕದಲ್ಲಿ ಐದನೆಯ ಸೂಕ್ತವು. ಇದರಲ್ಲಿ ಒಂಭತ್ತು ಋಕ್ಕುಗಳಿರುವವು. ಈ ಸೂಕ್ತಕ್ಕೆ ವಸಿಷ್ಠನು ಋಷಿಯು ; ವೈಶ್ವಾನರಾಗ್ನಿಯು ದೇವತೆಯು ; ತ್ರಿಷ್ಟುಪ್ ಛಂದಸ್ಸು. ಅನುಕ್ರಮಣಿಕೆಯಲ್ಲಿ—ಪ್ರಾಗ್ನಯೇ ನವ ವೈಶ್ವಾನರೀಯಂ ತು ಎಂದು ಹೇಳಿರುವುದು ವಿನಿಯೋಗವು ಲೈಂಗಿಕವು.

## ಸೂಕ್ತ—೫

ಮಂಡಲ—೭ ॥ ಅನುವಾಕ—೧ ॥ ಸೂಕ್ತ—೫ ॥
ಅಷ್ಟಕ—೫ ॥ ಅಧ್ಯಾಯ—೨ ॥ ವರ್ಗ—೭, ೮ ॥
॥ ಸೂಕ್ತದಲ್ಲಿರುವ ಋಕ್ಸಂಖ್ಯೆ—೯ ॥
॥ ಋಷಿಃ—ವಸಿಷ್ಠಃ ॥
॥ ದೇವತಾ—ವೈಶ್ವಾನರಃ ॥
॥ ಛಂದಃ—ತ್ರಿಷ್ಟುಪ್ ॥

॥ ಸಂಹಿತಾಪಾಠಃ ॥

ಪ್ರಾಗ್ನಯೇ ತವಸೇ ಭರಧ್ವಂ ಗಿರಂ ದಿವೋ ಅರತಯೇ ಪೃಥಿವ್ಯಾಃ ।
ಯೋ ವಿಶ್ವೇಷಾಮಮೃತಾನಾಮುಪಸ್ಥೇ ವೈಶ್ವಾನರೋ ವಾವೃಧೇ ಜಾಗೃವದ್ಭಿಃ ॥ ೧ ॥

॥ ಪದಪಾಠಃ ॥

ಪ್ರ । ಅಗ್ನಯೇ । ತವಸೇ । ಭರಧ್ವಂ । ಗಿರಂ । ದಿವಃ । ಅರತಯೇ । ಪೃಥಿವ್ಯಾಃ ।
ಯಃ । ವಿಶ್ವೇಷಾಂ । ಅಮೃತಾನಾಂ । ಉಪಽಸ್ಥೇ । ವೈಶ್ವಾನರಃ । ವವೃಧೇ । ಜಾಗೃವತ್ಽಭಿಃ ॥ ೧ ॥

॥ ಸಾಯಣಭಾಷ್ಯಂ ॥

ಹೇ ಸ್ತೋತಾರಸ್ತವಸೇ ಪ್ರವೃದ್ಧಾಯ ದಿವೋಽಂತರಿಕ್ಷಸ್ಯ ಪೃಥಿವ್ಯಾಶ್ಚಾರತಯೇ ಗಂತ್ರೇಽಗ್ನಯೇ ವೈಶ್ವಾನರಸಂಜ್ಞಕಾಯಾಗ್ನಯೇ ಗಿರಂ ಸ್ತುತಿಂ ಪ್ರ ಭರಧ್ವಂ । ಯೋ ವೈಶ್ವಾನರೋ ವಿಶ್ವನರಹಿತೋಽ-

ಗ್ನಿರ್ವಿಶ್ವೇಷಾಂ ಸರ್ವೇಷಾಮಮೃತಾನಾಂ ದೇವಾನಾಮುಪಸ್ಥ ಉಪಸ್ಥಾನೇ ಯಜ್ಞೇ ಜಾಗೃವದ್ಭಿಃ ಪ್ರಬುದ್ಧೈರ್ದೇವೈಃ ಸಹಿತಃ ಸನ್ ವವೃಧೇ ಸ್ತುತಿಭಿರ್ಹವಿರ್ಭಿಶ್ಚ ವರ್ಧತೇ ||

|| ಪ್ರತಿಪದಾರ್ಥ ||

(ಎಲೈ ಸ್ತೋತೃಗಳೇ) **ಯಃ**—ಯಾವ | **ವೈಶ್ವಾನರಃ**—ವೈಶ್ವಾನರರೂಪನಾದ ಅಗ್ನಿಯು | **ವಿಶ್ವೇಷಾಂ**—ಸಮಸ್ತರಾದ | **ಅಮೃತಾನಾಂ**—ದೇವತೆಗಳನ್ನೂ ಉದ್ದೇಶಿಸಿದ | **ಉಪಸ್ಥೇ**—ಯಜ್ಞದಲ್ಲಿ | **ಜಾಗೃವದ್ಭಿಃ**—ಪ್ರಬುದ್ಧರಾದ ದೇವತೆಗಳೊಡನೆ ಕೂಡಿ | **ವವೃಧೇ**—ವೃದ್ಧಿಯನ್ನು ಹೊಂದುವನೋ ಅಂತಹ | **ತವಸೇ**—ಶಕ್ತಿಯುತನೂ | **ದಿವಃ**—ಅಂತರಿಕ್ಷಕ್ಕೂ | **ಪೃಥಿವ್ಯಾಃ**— ಪೃಥ್ವಿಗೂ ನಡುವೆ | **ಅರತಯೇ**—ಸಂಚರಿಸತಕ್ಕವನೂ ಆದ | **ಅಗ್ನಯೇ**—ಅಗ್ನಿಯನ್ನು ನಿರ್ದೇಶಿಸಿ | **ಗಿರಂ**— ಸ್ತುತಿಯನ್ನು | **ಪ್ರ ಭರಧ್ವಂ**—ಸಂಪಾದಿಸಿರಿ.

|| ಭಾವಾರ್ಥ ||

ಎಲೈ ಸ್ತೋತೃಗಳೇ, ಯಾವ ವೈಶ್ವಾನರರೂಪನಾದ ಅಗ್ನಿಯು ಸಮಸ್ತವಾದ ದೇವತೆಗಳನ್ನೂ ಉದ್ದೇಶಿಸಿದ ಯಜ್ಞದಲ್ಲಿ ಪ್ರಬುದ್ಧರಾದ ದೇವತೆಗಳೊಡಗೂಡಿ ವೃದ್ಧಿಯನ್ನು ಹೊಂದುವನೋ ಅಂತಹ ಶಕ್ತಿಯುತನೂ ಅಂತರಿಕ್ಷಕ್ಕೂ ಪೃಥ್ವಿಗೂ ನಡುವೆ ಸಂಚರಿಸಕ್ಕವನೂ ಆದ ಅಗ್ನಿಯನ್ನು ನಿರ್ದೇಶಿಸಿ ಸ್ತುತಿಯನ್ನು ಸಂಪಾದಿಸಿರಿ.

## English Translation.

Offer praise to the strong Agni, traversing without hindrance heaven and earth : he who (as) Vaiswanara prospers at the sacrifices of all the immortals, being associated with the awaking divinities.

|| ಸಂಹಿತಾಪಾಠಃ ||

ಪೃಷ್ಟೋ ದಿವಿ ಧಾಯ್ಯಗ್ನಿಃ ಪೃಥಿವ್ಯಾಂ ನೇತಾ ಸಿಂಧೂನಾಂ ವೃಷಭಃ ಸ್ತಿಯಾನಾಂ |

ಸ ಮಾನುಷೀರಭಿ ವಿಶೋ ವಿ ಭಾತಿ ವೈಶ್ವಾನರೋ ವಾವೃಧಾನೋ ವರೇಣ ||

|| ಪದಪಾಠಃ ||

ಪೃಷ್ಟಃ | ದಿವಿ | ಧಾಯಿ | ಅಗ್ನಿಃ | ಪೃಥಿವ್ಯಾಂ | ನೇತಾ | ಸಿಂಧೂನಾಂ | ವೃಷಭಃ | ಸ್ತಿಯಾನಾಂ |

ಸಃ | ಮಾನುಷೀಃ | ಅಭಿ | ವಿಶಃ | ವಿ | ಭಾತಿ | ವೈಶ್ವಾನರಃ | ವವೃಧಾನಃ | ವರೇಣ || ೨ ||

|| ಸಾಯಣಭಾಷ್ಯಂ ||

**ಸಿಂಧೂನಾಂ ನದೀನಾಂ ನೇತಾ ಸ್ತಿಯಾನಾಮುಷಾಂ । ಸ್ತಿಯಾ ಆಪೋ ಭವಂತಿ ಸ್ತ್ಯಾಯನಾದಿತಿ ಯಾಸ್ಕವಚನಾತ್ । ನಿ. ೬-೧೭ । ವೃಷಭೋ ವರ್ಷಿತಾ ಪೃಷ್ಟೋಽರ್ಚಿತಸ್ತೇಜಸಾ ಸಂಪೃಕ್ತೋ ವಾ ಯೋಽಗ್ನಿರ್ದಿವ್ಯಂತರಿಕ್ಷೇ ಪೃಥಿವ್ಯಾಂ ಚ ಧಾಯಿ ನ್ಯಧಾಯಿ ಸ ವೈಶ್ವಾನರೋ ವಿಶ್ವನರಹಿತೋಽಗ್ನಿರ್ವರೇಣ ಶ್ರೇಷ್ಠೇನ ಹವಿಷಾ ತೇಜಸಾ ವಾ ವಾವೃಧಾನೋ ವರ್ಧಮಾನಃ ಸನ್ ಮಾನುಷೀರ್ವಿಶೋಽಭಿ ಮಾನುಷೀಃ ಪ್ರಜಾಃ ಪ್ರತಿ ವಿ ಭಾತಿ ||**

|| ಪ್ರತಿಪದಾರ್ಥ ||

**ಸಿಂಧೂನಾಂ**—ನದಿಗಳಿಗೆ । **ನೇತಾ**—ನೇತೃರೂಪನೂ । **ಸ್ತಿಯಾನಾಂ**—ಉದಕಗಳಿಗೆ । **ವೃಷಭಃ**—ವರ್ಷಕನೂ (ವೃಷ್ಟಿರೂಪದಲ್ಲಿ ಸುರಿಸುವವನೂ) । **ಪೃಷ್ಟಃ**—ತೇಜಸ್ಸಿನೊಡನೆ ಕೂಡಿರುವವನೂ ಆದ । **ಅಗ್ನಿಃ**—ಅಗ್ನಿಯು । **ದಿವಿ**—ದ್ಯುಲೋಕದಲ್ಲಿಯೂ । **ಪೃಥಿವ್ಯಾಂ**—ಪೃಥ್ವಿಯಲ್ಲಿಯೂ । **ಧಾಯಿ**—ಸ್ಥಾಪಿತನಾಗಿದ್ದಾನೆ । **ಸಃ ವೈಶ್ವಾನರಃ**—ಅದೇ ವೈಶ್ವಾನರಾಗ್ನಿಯು । **ವರೇಣ**—ಶ್ರೇಷ್ಠವಾದ ಹವಿಸ್ಸುಗಳಿಂದ । **ವಾವೃಧಾನಃ**—ವೃದ್ಧಿಯನ್ನು ಹೊಂದಿದವನಾಗಿ । **ಮಾನುಷೀಃ ವಿಶಃ ಅಭಿ**—ಮಾನವರೂಪರಾದ ಪ್ರಜೆಗಳಿಗೆ ಅಭಿಮುಖನಾಗಿ । **ವಿ ಭಾತಿ**—ಅತಿಶಯವಾಗಿ ಪ್ರಕಾಶಿಸುತ್ತಾನೆ.

|| ಭಾವಾರ್ಥ ||

ನದಿಗಳಿಗೆ ನೇತೃರೂಪನೂ ಉದಕಗಳನ್ನು ವೃಷ್ಟಿರೂಪದಲ್ಲಿ ಸುರಿಸುವವನೂ, ತೇಜಸ್ಸಿನೊಡನೆ ಕೂಡಿರುವವನೂ ಆದ ಅಗ್ನಿಯು ದ್ಯುಲೋಕದಲ್ಲಿಯೂ ಪೃಥ್ವಿಯಲ್ಲಿಯೂ ಸ್ಥಾಪಿತನಾಗಿದ್ದಾನೆ. ಅದೇ ವೈಶ್ವಾನರಾಗ್ನಿಯು ಶ್ರೇಷ್ಠವಾದ ಹವಿಸ್ಸುಗಳಿಂದ ವೃದ್ಧಿಯನ್ನು ಹೊಂದಿದವನಾಗಿ ಮಾನವರೂಪರಾದ ಪ್ರಜೆಗಳಿಗೆ ಅಭಿಮುಖನಾಗಿ ಅತಿಶಯವಾಗಿ ಪ್ರಕಾಶಿಸುತ್ತಾನೆ.

## English Translation.

Agni, the leader of the rivers, the showerer of the waters, the radiant, has been stationed in the firmament and upon earth: Vaiswanara augmenting with the most excellent (oblation) shines upon human beings.

। ಸಂಹಿತಾಪಾಠಃ ।

ತ್ವದ್ಭಿಯಾ ವಿಶ ಆಯನ್ನಸಿಕ್ನೀರಸಮನಾ ಜಹತೀರ್ಭೋಜನಾನಿ ।
ವೈಶ್ವಾನರ ಪೂರವೇ ಶೋಶುಚಾನಃ ಪುರೋ ಯದಗ್ನೇ ದರಯನ್ನದೀದೇಃ ||

|| ಪದಪಾಠಃ ||

ತ್ವತ್ । ಭಿಯಾ । ವಿಶಃ । ಆಯನ್ । ಅಸಿಕ್ನೀಃ । ಅಸಮನಾಃ । ಜಹತೀಃ । ಭೋಜನಾನಿ ।
ವೈಶ್ವಾನರ । ಪೂರವೇ । ಶೋಶುಚಾನಃ । ಪುರಃ । ಯತ್ । ಅಗ್ನೇ । ದರಯನ್ । ಅದೀದೇಃ || ೩ ||

॥ ಸಾಯಣಭಾಷ್ಯಂ ॥

ಹೇ ವೈಶ್ವಾನರ ವಿಶ್ವನರಹಿತಾಗ್ನೇ ತ್ವತ್ತ್ವತ್ತೋ ಭಿಯಾ ಭೀತ್ಯಾ ಸಿಕ್ನೀರಸಿತವರ್ಣಾ ರಾಜಸ್ಯಃ। ಪ್ರಥಮಾರ್ಥೇ ದ್ವಿತೀಯಾ॥ ವಿಶಃ ಪ್ರಜಾಃ ಅಸಮನಾಃ ಪರಸ್ಪರಮಸಮೇತಾ ಭೋಜನಾನಿ ಧನಾನಿ ಜಹತೀಸ್ತ್ಯಜಂತ್ಯ ಆಯನ್। ಆಗಚ್ಛನ್। ಕದೇತ್ಯತ ಆಹ। ಯದ್ಯದಾ ಪೂರವೇ ರಾಜ್ಞೇ ಶೋಶು- ಚಾನೋ ದೀಪ್ಯಮಾನಃ ಪುರಸ್ತಸ್ಯ ಶತ್ರೂಣಾಂ ಪುರೋ ದರಯನ್ ದಾರಯನದೀದೇಃ ಅಜ್ವಲಃ। ತಥಾ ಚ ನಿಗಮಃ। ಅಂಹೋ ರಾಜನ್ವರಿವಃ ಪೂರವೇ ಕಃ। ಋಗ್ವೇ. ೧-೬೩-೭। ಇತಿ॥

॥ ಪ್ರತಿಪದಾರ್ಥ ॥

**ವೈಶ್ವಾನರ**—ವೈಶ್ವಾನರರೂಪನಾದ। **ಅಗ್ನೇ**—ಎಲೈ ಅಗ್ನಿಯೇ। **ಯತ್**—ಯಾವಾಗ। **ಪೂರವೇ**—ಪೂರುವೆಂಬ ರಾಜನ ಹಿತಕ್ಕಾಗಿ। **ಶೋಶುಚಾನಃ**—ಬೆಳಗುತ್ತಲೂ। **ಪುರಃ**—ಅವನ ಶತ್ರುಗಳ ಪಟ್ಟಣಗಳನ್ನು। **ದರಯನ್**—ಸೀಳುತ್ತಲೂ। **ಅದೀದೇಃ**—ಪ್ರಕಾಶಿಸಿದೆಯೋ (ಆಗ)। **ತ್ವತ್**—ನಿನ್ನ। **ಭಿಯಾ**—ಭಯದಿಂದ। **ಅಸಿಕ್ನೀಃ**—ಕೃಷ್ಣವರ್ಣವುಳ್ಳ। **ವಿಶಃ**—ರಾಜಸರಾದ ಶತ್ರುಪ್ರಜೆಗಳು। **ಅಸಮನಾಃ**—ಗುಂಪು ಚದುರಿದವರಾಗಿ। **ಭೋಜನಾನಿ**—ತಮ್ಮ ತಮ್ಮ ಧನಗಳನ್ನು। **ಜಹತೀಃ**—ಇದ್ದಲ್ಲಿಯೇ ಬಿಟ್ಟು। **ಆಯನ್**—ಓಡಿಹೋದರು.

॥ ಭಾವಾರ್ಥ ॥

ವೈಶ್ವಾನರರೂಪನಾದ ಎಲೈ ಅಗ್ನಿಯೇ, ನೀನು ಪೂರುವೆಂಬ ರಾಜನ ಹಿತಕ್ಕಾಗಿ ಬೆಳಗುತ್ತಲೂ ಅವನ ಶತ್ರುಗಳ ಪಟ್ಟಣಗಳನ್ನು ಸೀಳುತ್ತಲೂ ಪ್ರಕಾಶಿಸಿದಾಗ ನಿನ್ನ ಭಯದಿಂದ ಕೃಷ್ಣವರ್ಣವುಳ್ಳ ರಾಜಸರಾದ ಶತ್ರು ಪ್ರಜೆಗಳು (ಕಪ್ಪುಜನರು) ಗುಂಪುಚದುರಿದವರಾಗಿ ತಮ್ಮ ತಮ್ಮ ಧನಗಳನ್ನು ಇದ್ದಲ್ಲಿಯೇ ಬಿಟ್ಟು ಓಡಿಹೋದರು.

## English Translation.

Through fear of you. Vaiswanara, the dark-complexioned races, although of many minds, arrived, abandoning their possessions, when, Agni, shining upon Puru, you have blazed, consuming the cities of his foe.

॥ ಸಂಹಿತಾಪಾಠಃ ॥

**ತವ ತ್ರಿಧಾತು ಪೃಥಿವೀ ಉತ ದ್ಯೌರ್ವೈಶ್ವಾನರ ವ್ರತಮಗ್ನೇ ಸಚಂತ।**

**ತ್ವಂ ಭಾಸಾ ರೋದಸೀ ಆ ತತಂಥಾಜಸ್ರೇಣ ಶೋಚಿಷಾ ಶೋಶುಚಾನಃ॥**

॥ ಪದಪಾಠಃ ॥

ತವ। ತ್ರಿಽಧಾತು। ಪೃಥಿವೀ। ಉತ। ದ್ಯೌಃ। ವೈಶ್ವಾನರ। ವ್ರತಂ। ಅಗ್ನೇ। ಸಚಂತ।

ತ್ವಂ। ಭಾಸಾ। ರೋದಸೀ ಇತಿ। ಆ। ತತಂಥ। ಅಜಸ್ರೇಣ। ಶೋಚಿಷಾ। ಶೋಶುಚಾನಃ॥ ೪॥

॥ ಸಾಯಣಭಾಷ್ಯಂ ॥

ಹೇ ವೈಶ್ವಾನರ ವಿಶ್ವೇಷಾಂ ನರಾಣಾಂ ನೇತರಗ್ನೇ । ತಥಾ ಚ ಯಾಸ್ಕಃ । ವೈಶ್ವಾನರಃ ಕಸ್ಮಾ-ದ್ವಿಶ್ವಾನ್ನರಾನ್ನಯತಿ ವಿಶ್ವ ಏನಂ ನರಾ ನಯಂತೀತಿ ವಾ । ನಿ. ೭-೨೧ । ಇತಿ ॥ ತವ ವ್ರತಂ ತ್ವತ್ಪ್ರೀತಿಕರಂ ಕರ್ಮ ತ್ರಿಧಾತ್ವಂತರಿಕ್ಷಂ ಪೃಥಿವೀ ಚ ಉತಾಪಿ ಚ ದ್ಯೌರಿತಿ ತ್ರಯೋ ಲೋಕಾಃ ಸಚಂತ । ಸೇವಂತೇ । ತ್ರೈಲೋಕ್ಯವರ್ತಿನ್ಯಃ ಪ್ರಜಾಸ್ತ್ವದರ್ಥಂ ಕರ್ಮ ಕುರ್ವಂತೀತ್ಯರ್ಥಃ । ಅಪಿ ಚ ತ್ವಮಜಸ್ರೇಣ ಶೋಚಿಷಾ ಪ್ರಕಾಶೇನ ಶೋಶುಚಾನೋ ದೀಪ್ಯಮಾನೋ ಭಾಸಾ ದೀಪ್ತ್ಯಾ ರೋದಸೀ ದ್ಯಾವಾಪೃಥಿವ್ಯೌ ಆ ತತಂಥ । ವಿಸ್ತಾರಯಸಿ ॥

॥ ಪ್ರತಿಪದಾರ್ಥ ॥

ವೈಶ್ವಾನರ—ವೈಶ್ವಾನರರೂಪನಾದ । ಅಗ್ನೇ—ಎಲೈ ಅಗ್ನಿಯೇ । ತವ—ನಿನ್ನ ಪ್ರೀತಿಕಾರಕವಾದ । ವ್ರತಂ—ಕರ್ಮವನ್ನು । ತ್ರಿಧಾತು—ಅಂತರಿಕ್ಷವೂ । ಪೃಥಿವೀ—ಪೃಥಿವಿಯೂ । ಉತ—ಮತ್ತು । ದ್ಯೌಃ—ದ್ಯುಲೋಕವೂ । ಸಚಂತ—ಆಚರಿಸಿ (ನಿನ್ನನ್ನು ಸೇವಿಸುತ್ತಾರೆ) । ತ್ವಂ—ನೀನು । ಅಜಸ್ರೇಣ—ಶಾಶ್ವತವಾಗಿರತಕ್ಕ । ಶೋಚಿಷಾ—ಪ್ರಭೆಯಿಂದ । ಶೋಶುಚಾನಃ—ಬೆಳಗುತ್ತಾ । ಭಾಸಾ—ನಿನ್ನ ಕಾಂತಿಯಿಂದ । ರೋದಸೀ—ದ್ಯಾವಾಪೃಥಿಗಳೆರಡನ್ನೂ । ಆ ತತಂಥ—ವಿಸ್ತೃತವಾದುದನ್ನಾಗಿ ಮಾಡುತ್ತೀಯೆ.

॥ ಭಾವಾರ್ಥ ॥

ವೈಶ್ವಾನರರೂಪನಾದ ಎಲೈ ಅಗ್ನಿಯೇ, ನಿನ್ನ ಪ್ರೀತಿಕಾರಕವಾದ ಕರ್ಮವನ್ನು ಅಂತರಿಕ್ಷವೂ, ಪೃಥಿವಿಯೂ ಮತ್ತು ದ್ಯುಲೋಕವೂ ಆಚರಿಸಿ ನಿನ್ನನ್ನು ಸೇವಿಸುತ್ತವೆ. ನೀನು ಶಾಶ್ವತವಾಗಿರತಕ್ಕ ಪ್ರಭೆಯಿಂದ ಬೆಳಗುತ್ತಾ ನಿನ್ನ ಕಾಂತಿಯಿಂದ ದ್ಯಾವಾಪೃಥಿವಿಗಳೆರಡನ್ನೂ ವಿಸ್ತೃತವಾದುದನ್ನಾಗಿ ಮಾಡುತ್ತೀಯೆ.

## English Translation.

Viswanara Agni, the firmament, the earth, the heaven, combine in your woship: shining with undecaying splendour, you overspread heaven and earth with light.

॥ ಸಂಹಿತಾಪಾಠಃ ॥

ತ್ವಾಮಗ್ನೇ ಹರಿತೋ ವಾವಶಾನಾ ಗಿರಃ ಸಚಂತೇ ಧುನಯೋ ಘೃತಾಚೀಃ ।
ಪತಿಂ ಕೃಷ್ಟೀನಾಂ ರಥ್ಯಂ ರಯೀಣಾಂ ವೈಶ್ವಾನರಮುಷಸಾಂ ಕೇತು-
ಮಹ್ನಾಂ ॥ ೫ ॥

॥ ಪದಪಾಠಃ ॥

ತ್ವಾಂ । ಅಗ್ನೇ । ಹರಿತಃ । ವಾವಶಾನಾಃ । ಗಿರಃ । ಸಚಂತೇ । ಧುನಯಃ । ಘೃತಾಚೀಃ ।

ಪತಿಂ । ಕೃಷ್ಟೀನಾಂ । ರಥ್ಯಂ । ರಯೀಣಾಂ । ವೈಶ್ವಾನರಂ । ಉಷಸಾಂ । ಕೇತುಂ । ಅಹ್ನಾಂ ॥ ೫ ॥

॥ ಸಾಯಣಭಾಷ್ಯಂ ॥

ಹೇ ಅಗ್ನೇ ಕೃಷ್ಟೀನಾಂ ಪ್ರಜಾನಾಂ । ಕ್ಷಿತಯಃ ಕೃಷ್ಟಯ ಇತಿ ಮನುಷ್ಯನಾಮಸು ಪಾಠಾತ್ । ಪತಿಂ ಸ್ವಾಮಿನಂ ರಯೀಣಾಂ ಧನಾನಾಂ ರಥ್ಯಂ ನೇತಾರಮುಷಸಾಮಹ್ನಾಂ ಕೇತುಂ ಪ್ರಜ್ಞಾಪಕಂ ವೈಶ್ವಾನರಂ ವಿಶ್ವನರಹಿತಂ ತ್ವಾಂ ಹರಿತೋಽಶ್ವಾ ವಾವಶಾನಾಃ ಕಾಮಯಮಾನಾಃ ಸಚಂತೇ। ಸೇವಂತೇ । ತಥಾ ಗಿರೋ ನೃಣಾಂ ಸ್ತುತಿರೂಪಾ ವಾಚೋ ಧುನಯಃ ಪಾಪಂ ಧುನ್ವಾನಾ ಘೃತಾಚೀರ್ಘೃತಮಂಚಂತ್ಯಃ । ಹವಿಷಾ ಸಹಿತಾ ಇತ್ಯರ್ಥಃ । ಸಚಂತೇ ॥

॥ ಪ್ರತಿಪದಾರ್ಥ ॥

**ಅಗ್ನೇ**—ಎಲೈ ಅಗ್ನಿಯೇ । **ಕೃಷ್ಟೀನಾಂ**—ಪ್ರಜೆಗಳಿಗೆ । **ಪತಿಂ**—ಒಡೆಯನೂ । **ರಯೀಣಾಂ**—ಧನಗಳಿಗೆ । **ರಥ್ಯಂ**—ನೇತೃವೂ । **ಉಷಸಾಂ**—ಉಷಸ್ಸುಗಳಿಗೂ । **ಅಹ್ನಾಂ**—ಅಹಸ್ಸುಗಳಿಗೂ । **ಕೇತುಂ**—ಪ್ರಜ್ಞಾಪಕನೂ । **ವೈಶ್ವಾನರಂ**—ಸಕಲ ಮಾನವರಿಗೆ ಹಿತಕಾರಿಯೂ ಆದ । **ತ್ವಾಂ**—ನಿನ್ನನ್ನು । **ಹರಿತಃ**—ಇಂದ್ರನ ಅಶ್ವಗಳು । **ವಾವಶಾನಾಃ**—ಪೂಜಿಸಲಪೇಕ್ಷಿಸಿದವುಗಳಾಗಿ । **ಸಚಂತೇ**—ಸೇವಿಸುತ್ತವೆ । **ಗಿರಃ**—ಮಾನವರ ಸ್ತುತಿವಾಕ್ಯಗಳು । **ಧುನಯಃ**—ಪಾಪವನ್ನು ನಾಶಪಡಿಸುತ್ತಲೂ । **ಘೃತಾಚೀಃ**—ಹವಿಸ್ಸಿನೊಡನೆ ಸೇರಿರುತ್ತಲೂ (ನಿನ್ನನ್ನು ಸೇವಿಸುತ್ತವೆ).

॥ ಭಾವಾರ್ಥ ॥

ಎಲೈ ಅಗ್ನಿಯೇ, ಪ್ರಜೆಗಳಿಗೆ ಒಡೆಯನೂ, ಧನಗಳಿಗೆ ನೇತೃವೂ ಉಷಸ್ಸುಗಳಿಗೂ, ಅಹಸ್ಸುಗಳಿಗೂ ಪ್ರಜ್ಞಾಪಕನೂ, ಸಕಲಮಾನವರಿಗೂ ಹಿತಕಾರಿಯೂ ಆದ ನಿನ್ನನ್ನು ಇಂದ್ರನ ಅಶ್ವಗಳು ಪೂಜಿಸಲಪೇಕ್ಷಿಸಿ ಸೇವಿಸುತ್ತವೆ. ಮಾನವರ ಸ್ತುತಿವಾಕ್ಯಗಳು ಪಾಪವನ್ನು ನಾಶಪಡಿಸುತ್ತಲೂ, ಹವಿಸ್ಸಿನೊಡನೆ ಸೇರಿಯೂ ನಿನ್ನನ್ನು ಸೇವಿಸುತ್ತವೆ.

## English Translation.

The horses (of Indra), full of ardour, worship you, Agni; the praises (of men), dispersers (of iniquity), accompanied by oblations, (honour you), the lord of men, the conveyer of riches, the Vaiswanara of dawns, the manifester of days.

॥ ಪ್ರತಿಪದಾರ್ಥ ॥

(ಎಲೈ ಅಗ್ನಿಯೇ) **ತ್ವಾ**—ನಿನ್ನನ್ನು । **ನರಃ**—ಯಜಮಾನರೂ । **ವಿಪ್ರಾಸಃ**—ಮೇಧಾವಿಗಳೂ ಸಹ । **ಧೀತಿಭಿಃ**—ಕರ್ಮಗಳಿಂದ । **ಸಾತಯೇ**—ಧನಲಾಭಾರ್ಥವಾಗಿ । **ಉಪ ಯಂತಿ**—ಸಮೀಪಿಸುತ್ತಾರೆ । **ಸಹಸ್ರಿಣೀಃ**—ಸಹಸ್ರಸಂಖ್ಯಾಕವಾದವೂ । **ಅಕ್ಷರಾ**—ಕ್ಷಯರಹಿತವಾದವೂ ಆದ ಸ್ತುತಿಗಳೂ । **ಉಪ (ಯಂತಿ)**—ಸಮೀಪಿಸುತ್ತವೆ.

॥ ಭಾವಾರ್ಥ ॥

ಎಲೈ ಅಗ್ನಿಯೇ, ನಿನ್ನನ್ನು ಯಜಮಾನರೂ, ಮೇಧಾವಿಗಳೂ, ಕರ್ಮಗಳಿಂದ ಧನಲಾಭಾರ್ಥವಾಗಿ ಸಮೀಪಿಸುತ್ತಾರೆ. ಸಹಸ್ರಸಂಖ್ಯಾಕವಾದವೂ ಕ್ಷಯರಹಿತವಾದವೂ ಆದ ಸ್ತುತಿಗಳೂ ಸಮೀಪಿಸುತ್ತವೆ.

English Translation.

Wise men approach you with sacred rites for the acquirement of riches : perpetual, infinite (praise is addressed to you).

। ಸಂಹಿತಾಪಾಠಃ ।

**ಅಗ್ನೀ ರಕ್ಷಾಂಸಿ ಸೇಧತಿ ಶುಕ್ರಶೋಚಿರಮರ್ತ್ಯಃ ।**
**ಶುಚಿಃ ಪಾವಕ ಈಡ್ಯಃ ॥ ೧೦ ॥**

॥ ಪದಪಾಠಃ ।

**ಅಗ್ನಿಃ । ರಕ್ಷಾಂಸಿ । ಸೇಧತಿ । ಶುಕ್ರऽಶೋಚಿಃ । ಅಮರ್ತ್ಯಃ ।**
**ಶುಚಿಃ । ಪಾವಕಃ । ಈಡ್ಯಃ ॥ ೧೦ ॥**

। ಸಾಯಣಭಾಷ್ಯಂ ।

ಶುಕ್ರಶೋಚಿಃ ಶುಭ್ರಜ್ವಾಲೋऽಮರ್ತ್ಯೋ ಮರಣರಹಿತೋ ದೇವತಾತ್ಮಾ ಶುಚಿಃ **ಸ್ವಯಂ** ಶುದ್ಧಃ ಪಾವಕೋऽನ್ಯೇಷಾಮಪಿ ಶೋಧಕ ಈಡ್ಯಃ ಸ್ತುತ್ಯೋऽಗ್ನೀ ರಕ್ಷಾಂಸಿ ರಾಕ್ಷಸಾನ್ **ಸೇಧತಿ ।** ಬಾಧತಾಂ ॥

॥ ಪ್ರತಿಪದಾರ್ಥ ॥

**ಶುಕ್ರಶೋಚಿಃ**—ಶುಭ್ರವಾದ ಜ್ವಾಲೆಯುಳ್ಳವನೂ । **ಅಮರ್ತ್ಯಃ**—ಮರಣರಹಿತನೂ । **ಶುಚಿಃ**—ಶುದ್ಧನೂ । **ಪಾವಕಃ**—ಶುದ್ಧಿಕಾರಕನೂ । **ಈಡ್ಯಃ**—ಸ್ತುತ್ಯನೂ ಆದ । **ಅಗ್ನಿಃ**—ಅಗ್ನಿಯು । **ರಕ್ಷಾಂಸಿ**—ರಾಕ್ಷಸರನ್ನು । **ಸೇಧತಿ**—ಹಿಂಸಿಸಲಿ.

॥ ಭಾವಾರ್ಥ ॥

ಶುಭ್ರವಾದ ಜ್ವಾಲೆಯುಳ್ಳವನೂ, ಮರಣರಹಿತನೂ, ಶುದ್ಧನೂ, ಶುದ್ಧಿಕಾರಕನೂ, ಸ್ತುತ್ಯನೂ ಆದ ಅಗ್ನಿಯು ರಾಕ್ಷಸರನ್ನು ಹಿಂಸಿಸಲಿ.

English Translation

May the bright, radiant, immortal, pure, purifying, adorable Agni, keep off the Rakshasas.

॥ ಸಂಹಿತಾಪಾಠಃ ॥

ಸ ನೋ॒ ರಾಧಾ॒ಂಸ್ಯಾ ಭ॒ರೇಶಾ॑ನಃ ಸಹಸೋ ಯಹೋ ।

ಭಗ॑ಶ್ಚ ದಾ॒ತು ವಾರ್ಯ॑ಂ ॥ ೧೧ ॥

॥ ಪದಪಾಠಃ ॥

ಸಃ । ನ॒ಃ । ರಾಧಾ॑ಂಸಿ । ಆ । ಭ॒ರ॒ । ಈಶಾ॑ನಃ । ಸ॒ಹ॒ಸಃ॒ । ಯ॒ಹೋ॒ ಇತಿ॑ ।

ಭಗ॑ಃ । ಚ॒ । ದಾ॒ತು॒ । ವಾರ್ಯ॑ಂ ॥ ೧೧ ॥

॥ ಸಾಯಣಭಾಷ್ಯಂ ॥

**ಹೇ ಸಹಸೋ ಯಹೋ ಬಲಸ್ಯ ಪುತ್ರಾಗ್ನೇ ಸ ಪ್ರಸಿದ್ಧಸ್ತ್ವಮೀಶಾನಃ ಸರ್ವಸ್ಯ ಜಗತ ಈಶ್ವರಃ ಸನ್ ನೋಽಸ್ಮಭ್ಯಂ ರಾಧಾಂಸಿ ಧನಾನಿ । ರಾಯೋ ರಾಧ ಇತಿ ಧನನಾಮಸು ಪಾಠಾತ್ । ಆ ಭರ । ಆಹರ । ಭಗಶ್ಚ ಭಗೋ ದೇವೋಽಪಿ ವಾರ್ಯಂ ಧನಂ ದಾತು । ಅಸ್ಮಭ್ಯಂ ದದಾತು ॥ ಅಭ್ಯಾಸಲೋಪಶ್ಛಾಂದಸಃ ॥ ಭಗೋಽತ್ರ ಸೂಕ್ತೇ ನಿಪಾತಭಾಗಿನೀ ದೇವತಾ ॥**

। ಪ್ರತಿಪದಾರ್ಥ ।

**ಸಹಸೋ ಯಹೋ**—ಶಕ್ತಿಪುತ್ರನಾದ ಎಲೈ ಅಗ್ನಿಯೇ । **ಸಃ**—ಪ್ರಸಿದ್ಧನಾದ ನೀನು । **ಈಶಾನಃ**—ಸಕಲ ಜಗತ್ತಿಗೂ ಒಡೆಯನಾಗಿ । **ನಃ**—ನಮಗೆ । **ರಾಧಾಂಸಿ**—ಧನಗಳನ್ನು । **ಆ ಭರ**—ತೆಗೆದುಕೊಂಡು ಬಾ । **ಭಗಶ್ಚ**—ಭಗಸಂಜ್ಞಕನಾದ ದೇವನೂ ಸಹ । **ವಾರ್ಯಂ**—ಅಪೇಕ್ಷಿತವಾದ ಧನವನ್ನು । **ದಾತು**—ನಮಗೆ ಕೊಡಲಿ.

। ಭಾವಾರ್ಥ ।

ಶಕ್ತಿಪುತ್ರನಾದ ಎಲೈ ಅಗ್ನಿಯೇ, ಪ್ರಸಿದ್ಧನಾದ ನೀನು ಸಕಲ ಜಗತ್ತಿಗೂ ಒಡೆಯನಾಗಿ ನಮಗೆ ಕೊಡುವುದಕ್ಕಾಗಿ ಧನಗಳನ್ನು ತೆಗೆದುಕೊಂಡು ಬಾ. ಭಗಸಂಜ್ಞಕನಾದ ದೇವನೂ ಸಹ ನಮಗೆ ಅಪೇಕ್ಷಿತವಾದ ಧನವನ್ನು ಕೊಡಲಿ.

English Translation.

Son of strength, you are the lord (of all); bestow riches upon us: and may Bhaga give us wealth.

॥ ಸಂಹಿತಾಪಾಠಃ ॥

ತ್ವಮಗ್ನೇ ವೀರವದ್ಯಶೋ ದೇವಶ್ಚ ಸವಿತಾ ಭಗಃ ।
ದಿತಿಶ್ಚ ದಾತಿ ವಾರ್ಯಂ ॥ ೧೨ ॥

॥ ಪದಪಾಠಃ ॥

ತ್ವಂ । ಅಗ್ನೇ । ವೀರಽವತ್ । ಯಶಃ । ದೇವಃ । ಚ । ಸವಿತಾ । ಭಗಃ ।
ದಿತಿಃ । ಚ । ದಾತಿ । ವಾರ್ಯಂ ॥ ೧೨ ॥

॥ ಸಾಯಣಭಾಷ್ಯಂ ॥

**ಹೇ ಅಗ್ನೇ ತ್ವಂ ವೀರವತ್ಪುತ್ರಪೌತ್ರೋಪೇತಂ ಯಶೋಽನ್ನಂ ದೇಹೀತಿ ಶೇಷಃ । ದೇವಶ್ಚ ಸವಿತಾ ಸವಿತಾ ದೇವೋಽಪಿ ವಾರ್ಯಂ ವರಣೀಯಂ ಧನಂ ದಾತಿ । ದದಾತು । ಭಗಶ್ಚ ದೇವೋಽಪಿ ದದಾತು । ದಿತಿಶ್ಚ ದಿತಿರಪಿ ದೇವೀ ದದಾತು । ಸವಿತ್ರಾದಿಃ ಸೂಕ್ತೇ ನಿಪಾತಭಾಗಿನೀ ದೇವತಾ ॥**

॥ ಪ್ರತಿಪದಾರ್ಥ ॥

**ಅಗ್ನೇ**—ಎಲೈ ಅಗ್ನಿಯೇ । **ತ್ವಂ**—ನೀನು । **ವೀರವತ್**—ವೀರಪುತ್ರಾದಿಗಳಿಂದ ಕೂಡಿದ । **ಯಶಃ**—ಅನ್ನವನ್ನು (ಕೊಡು) । **ದೇವಶ್ಚ**—ದೇವತಾತ್ಮನಾದ । **ಸವಿತಾ**—ಸವಿತೃವೂ ಸಹ । **ವಾರ್ಯಂ**—ಅಪೇಕ್ಷಿತವಾದ ಧನವನ್ನು । **ದಾತಿ**—ಕೊಡಲಿ । **ಭಗಃ**—ಭಗದೇವನೂ ಕೊಡಲಿ । **ದಿತಿಶ್ಚ**—ದಿತಿದೇವಿಯೂ ಕೊಡಲಿ.

॥ ಭಾವಾರ್ಥ ॥

ಎಲೈ ಅಗ್ನಿಯೇ, ನೀನು ವೀರಪುತ್ರಾದಿಗಳಿಂದ ಕೂಡಿದ ಅನ್ನವನ್ನು ಕೊಡು ದೇವತಾತ್ಮನಾದ ಸವಿತೃವೂ ಸಹ ಅಪೇಕ್ಷಿತವಾದ ಧನವನ್ನು ಕೊಡಲಿ. ಭಗದೇವನೂ, ಅದಿತಿಯೂ ಸಹ ಅವನ್ನು ತುಂಬಿಕೊಡಲಿ.

English Translation.

Agni, give us food along with male issue, and may the divine Savitri, Bhaga aud Diti, give us wealth

॥ ಸಂಹಿತಾಪಾಠಃ ॥

ಅಗ್ನೇ ರಕ್ಷಾ ಣೋ ಅಂಹಸಃ ಪ್ರತಿ ಷ್ಮ ದೇವ ರೀಷತಃ ।

ತಪಿಷ್ಠೈರಜರೋ ದಹ ॥ ೧೩ ॥

॥ ಪದಪಾಠಃ ॥

ಅಗ್ನೇ । ರಕ್ಷ । ನಃ । ಅಂಹಸಃ । ಪ್ರತಿ । ಸ್ಮ । ದೇವ । ರಿಷತಃ ।

ತಪಿಷ್ಠೈಃ । ಅಜರಃ । ದಹ ॥ ೧೩ ॥

॥ ಸಾಯಣಭಾಷ್ಯಂ ॥

ಹೇ ಅಗ್ನೇ ತ್ವಂ ನೋಽಸ್ಮಾನಂಹಸಃ ಪಾಪಾದ್ರಕ್ಷ । ಪಾಹಿ ॥ ಸಂಹಿತಾಯಾಂ ದೀರ್ಘಶ್ಛಾಂದಸಃ॥ ಅಪಿ ಚ ಹೇ ದೇವ ದ್ಯೋತಮಾನಾಗ್ನೇ ಅಜರೋ ಜರಾರಹಿತಸ್ತ್ವಂ ರಿಷತೋ ಹಿಂಸತಃ ಶತ್ರೂನ್ ತಪಿಷ್ಠೈರತಿಶಯೇನ ತಾಪಕೈಸ್ತೇಜೋಭಿರ್ದಹ । ಭಸ್ಮೀಕುರು ॥

॥ ಪ್ರತಿಪದಾರ್ಥ ॥

**ಅಗ್ನೇ**—ಎಲೈ ಅಗ್ನಿಯೇ । **ನಃ**—ನಮ್ಮನ್ನು । **ಅಂಹಸಃ**—ಪಾಪದಿಂದ । **ರಕ್ಷ**—ರಕ್ಷಿಸು । **ದೇವ**—ಪ್ರಕಾಶಮಾನನಾದ ಎಲೈ ಅಗ್ನಿಯೇ । **ಅಜರಃ**—ಕ್ಷಯವಿಲ್ಲದ ನೀನು । **ರಿಷತಃ**—ನಮ್ಮನ್ನು ಹಿಂಸಿಸುವ ಶತ್ರುಗಳನ್ನು । **ತಪಿಷ್ಠೈಃ**—ದಹಿಸುವ ನಿನ್ನ ತೇಜಸ್ಸುಗಳಿಂದ । **ದಹ**—ಭಸ್ಮವಾಗುವಂತೆ ಮಾಡು.

॥ ಭಾವಾರ್ಥ ॥

ಎಲೈ ಅಗ್ನಿಯೇ, ನಮ್ಮನ್ನು ಪಾಪದಿಂದ ರಕ್ಷಿಸು. ಪ್ರಕಾಶಮಾನನಾದ ಎಲೈ ಅಗ್ನಿಯೇ, ಕ್ಷಯರಹಿತನಾದ ನೀನು ನಮ್ಮನ್ನು ಹಿಂಸಿಸುವ ಶತ್ರುಗಳನ್ನು ದಹಿಸುವ ನಿನ್ನ ತೇಜಸ್ಸುಗಳಿಂದ ಭಸ್ಮವಾಗುವಂತೆ ಮಾಡು.

English Translation.

Preserve us, Agni, from sin: divine (Agni), you are exempt from decay; consume (our) foes with (your) hottest flames.

॥ ಸಂಹಿತಾಪಾಠಃ ॥

ಅಧಾ ಮಹೀ ನ ಆಯಸ್ಯನಾಧೃಷ್ಟೋ ನೃಪೀತಯೇ ।

ಪೂರ್ಭವಾ ಶತಭುಜಿಃ ॥ ೧೪ ॥

॥ ಪದಪಾಠಃ ॥

ಅಧ । ಮಹೀ । ನಃ । ಆಯಸೀ । ಅನಾಧೃಷ್ಟಃ । ನೃಽಪೀತಯೇ ।

ಪೂಃ । ಭವ । ಶತಽಭುಜಿಃ ॥ ೧೪ ॥

॥ ಸಾಯಣಭಾಷ್ಯಂ ॥

ಅಥಾಧುನಾ ಹೇ ಅಗ್ನೇ ಅನಾಧೃಷ್ಟೋಽಪ್ರತಿಧರ್ಷಣೀಯಸ್ತ್ವಂ ನೋಽಸ್ಮಾಕಂ ನೃಪೀತಯೇ ನೃಣಾಂ ರಕ್ಷಣಾರ್ಥಂ ಮಹೀ ಮಹತ್ಯಾಯಸ್ಯಯಸಾ ನಿರ್ಮಿತಾ ಶತಭುಜಿರತ್ಯಂತಂ ವಿಸ್ತೃತಾ ಶತಗುಣಾ ಪೂಃ ಪುರೀ । ತದ್ರಕ್ಷಾಸಾಧನಭೂತಪ್ರಾಕಾರಾದಿರ್ವಾ ಪೂರುಚ್ಯತೇ । ಭವ । ಯಥಾಯಸಾ ನಿರ್ಮಿತಾ ಪುರೀ ತದ್ರಕ್ಷಾಸಾಧನಭೂತಪ್ರಾಕಾರಾದಿರ್ವಾ ಶತ್ರುಭ್ಯೋ ಭೀತಾನ್ರಕ್ಷತಿ ತದ್ವದ್ರಾಕ್ಷಸೇಭ್ಯೋ ಭೀತಾನಸ್ಮಾನ್ ಪಾಹೀತ್ಯರ್ಥಃ ॥

॥ ಪ್ರತಿಪದಾರ್ಥ ॥

(ಎಲೈ ಅಗ್ನಿಯೇ) **ಅಧ**—ಈಗ । **ಅನಾಧೃಷ್ಟಃ**—ಅಪ್ರತಿಹತವಾದ ಬಲವುಳ್ಳವನಾಗಿ । **ನಃ**—ನಮಗೆ ಸೇರಿದ । **ನೃಪೀತಯೇ**—ಜನಗಳ ರಕ್ಷಣಾರ್ಥವಾಗಿ । **ಮಹೀ**—ಮಹತ್ತಾದುದೂ । **ಆಯಸೀ**—ಉಕ್ಕಿನಿಂದ ನಿರ್ಮಿತವಾದುದೂ । **ಶತಭುಜಿಃ**—ಅನೇಕ ಗುಣಗಳುಳ್ಳದ್ದೂ (ಅತ್ಯಂತ ವಿಸ್ತೃತವಾದದ್ದೂ) ಆದ । **ಪೂಃ**—(ರಕ್ಷಕವಾದ) ಪಟ್ಟಣದಂತೆ ಅಥವಾ ಕೋಟೆಯಂತೆ । **ಭವ**—ಆಗಿರು.

॥ ಭಾವಾರ್ಥ ॥

ಎಲೈ ಅಗ್ನಿಯೇ, ನೀನು ಅಪ್ರತಿಹತವಾದ ಬಲವುಳ್ಳವನಾಗಿ ನಮಗೆ ಸೇರಿದ ಜನಗಳ ರಕ್ಷಣಾರ್ಥವಾಗಿ ಮಹತ್ತಾದುದೂ ಉಕ್ಕಿನಿಂದ ನಿರ್ಮಿತವಾದುದೂ ಅನೇಕ ವಿಧವಾದ ಶಕ್ತಿಯುಳ್ಳದ್ದೂ ವಿಸ್ತಾರವಾದದ್ದೂ ಆದ ಪಟ್ಟಣದಂತೆ ಅಥವಾ ಕೋಟೆಯಂತೆ ನಮಗೆ ರಕ್ಷಕನಾಗಿರು.

English Translation.

Do you, who are irresistible, be to us, for the protection of our posterity, like the vast spacious, ironwalled cities (of the Rakshasas).

॥ ಸಂಹಿತಾಪಾಠಃ ॥

ತ್ವಂ ನಃ ಪಾಹ್ಯಂಹಸೋ ದೋಷಾವಸ್ತರಘಾಯತಃ ।

ದಿವಾ ನಕ್ತಮದಾಭ್ಯ ॥ ೧೫ ॥

॥ ಪದಪಾಠಃ ॥

ತ್ವಂ । ನಃ । ಪಾಹಿ । ಅಂಹಸಃ । ದೋಷಾಽವಸ್ತಃ । ಅಘಽಯತಃ ।

ದಿವಾ । ನಕ್ತಂ । ಅದಾಭ್ಯ ॥ ೧೫ ॥

॥ ಸಾಯಣಭಾಷ್ಯಂ ॥

**ಹೇ ಅದಾಭ್ಯಾಹಿಂಸ್ಯ ದೋಷಾವಸ್ತಾ ರಾತ್ರೇರಾಚ್ಛಾದಯಿತಃ। ತಮಸೋ ವಾರಯಿತರಿತ್ಯರ್ಥಃ। ಅಗ್ನೇ ತ್ವಂ ನೋಽಸ್ಮಾನಂಹಸಃ ಪಾಪಾದಘಾಯತಃ ಪಾಪಮಿಚ್ಛತಃ ಶತ್ರೋಶ್ಚ ದಿವಾ ನಕ್ತಮಹನಿ ರಾತ್ರೌ ಚ ಸರ್ವದಾ ಪಾಹಿ। ರಕ್ಷ॥**

॥ ಪ್ರತಿಪದಾರ್ಥ ॥

**ಅದಾಭ್ಯ**—ಅಹಿಂಸಿತನೂ। **ದೋಷಾವಸ್ತಃ**—ರಾತ್ರಿಯನ್ನು ಕತ್ತಲೆಯಿಂದ ಮುಚ್ಚುವವನೂ ಆದ ಎಲೈ ಅಗ್ನಿಯೇ। **ತ್ವಂ**—ನೀನು। **ನಃ**—ನಮ್ಮನ್ನು। **ಅಂಹಸಃ**—ಪಾಪದಿಂದಲೂ। **ಅಘಾಯತಃ**—ನಮಗೆ ಕೇಡನ್ನು ಬಯಸುವ ಶತ್ರುವಿನಿಂದಲೂ। **ದಿವಾ**—ಹಗಲೂ। **ನಕ್ತಂ**—ರಾತ್ರಿಯೂ। **ಪಾಹಿ**—ರಕ್ಷಿಸು.

॥ ಭಾವಾರ್ಥ ॥

ಅಹಿಂಸಿತನೂ, ರಾತ್ರಿಯನ್ನು ಕತ್ತಲೆಯಿಂದ ಮುಚ್ಚುವವನೂ ಆದ ಎಲೈ ಅಗ್ನಿಯೇ; ನೀನು ನಮ್ಮನ್ನು ಪಾಪದಿಂದಲೂ, ನಮಗೆ ಕೇಡನ್ನು ಬಯಸುವ ಶತ್ರುವಿನಿಂದಲೂ ಹಗಲೂ, ರಾತ್ರಿಯೂ ಎಲ್ಲಾ ಕಾಲಗಳಲ್ಲೂ ರಕ್ಷಿಸು.

English Translation.

Uninjurable Agni, dispeller of darkness, preserve us night and day fram sin, and from the malevolent.



# ಹದಿನಾರನೆಯ ಸೂಕ್ತವು

॥ ಸಾಯಣಭಾಷ್ಯಂ ॥

**ಏನಾ ವ ಇತಿ ದ್ವಾದಶರ್ಚಂ ಷೋಡಶಂ ಸೂಕ್ತಂ ವಸಿಷ್ಠಸ್ಯಾರ್ಷಮಗ್ನಿದೇವತಾಕಂ। ಅಯುಜೋ ಬೃಹತ್ಯೋ ಯುಜಃ ಸತೋಬೃಹತ್ಯಃ। ತಥಾ ಚಾನುಕ್ರಾಂತಂ। ಏನಾ ವೋ ದ್ವಾದಶ ಪ್ರಾಗಾಥಮಿತಿ॥ ಪ್ರಾತರನುವಾಕ ಆಗ್ನೇಯೇ ಕ್ರತೌ ಬಾರ್ಹತೇ ಛಂದಸ್ಯಾಶ್ವಿನಶಸ್ತ್ರೇ ಚೇದಂ ಸೂಕ್ತಂ। ಸೂತ್ರಿತಂ ಚ। ಏನಾ ವೋ ಅಗ್ನಿಂ ಪ್ರ ವೋ ಯಹ್ವಂ। ಆ. ೪–೧೩। ಇತಿ॥ ಆಗ್ನಿಮಾರುತ-ಶಸ್ತ್ರೇ ದೇವೋ ವೋ ದ್ರವಿಣೋದಾ ಇತಿ ಪ್ರಗಾಥೋಽನುರೂಪಃ। ಸೂತ್ರಿತಂ ಚ। ದೇವೋ ವೋ ದ್ರವಿಣೋದಾ ಇತಿ ಪ್ರಗಾಥೌ ಸ್ತೋತ್ರಿಯಾನುರೂಪೌ। ಆ. ೫–೨೦। ಇತಿ॥**

ಅನುವಾದವು—**ಏನಾ ವಃ** ಎಂಬ ಈ ಸೂಕ್ತವು ಮೊದಲನೆಯ ಅನುವಾಕದಲ್ಲಿ ಹದಿನಾರನೆಯ ಸೂಕ್ತವು. ಇದರಲ್ಲಿ ಹನ್ನೆರಡು ಋಕ್ಕುಗಳಿರುವವು. ಈ ಸೂಕ್ತಕ್ಕೆ ವಸಿಷ್ಠನು ಋಷಿಯು; ಅಗ್ನಿಯು ದೇವತೆಯು; ಈ ಸೂಕ್ತದಲ್ಲಿ ಅಸಮಸಂಖ್ಯೆಯ ಋಕ್ಕುಗಳು ಬೃಹತೀಛಂದಸ್ಕವು; ಸಮಸಂಖ್ಯೆಯ ಋಕ್ಕುಗಳು ಸತೋಬೃಹತೀಛಂದಸ್ಕವು. ಅನುಕ್ರಮಣಿಕೆಯಲ್ಲಿ—**ಏನಾ ವೋ ದ್ವಾದಶ ಪ್ರಾಗಾಥಂ** ಎಂದು ಹೇಳಿರುವುದು. ಪ್ರಾತರನುವಾಕಮಂತ್ರಪಠನ

ಕಾಲದಲ್ಲಿ ಆಗ್ನೇಯಕ್ರತುಸಂಬಂಧವಾದ ಬೃಹತೀಛಂದಸ್ಸಿನ ಋಕ್ಕುಗಳಿಗಾಗಿಯೂ, ಆಶ್ವಿನಶಸ್ತ್ರಮಂತ್ರಗಳಿಗಾಗಿಯೂ ಈ ಸೂಕ್ತದ ವಿನಿಯೋಗವಿರುವುದೆಂದು ಆಶ್ವಲಾಯನಶ್ರೌತಸೂತ್ರದ— **ಏನಾ ವೋ ಅಗ್ನಿಂ ಪ್ರ ವೋ ಯಹ್ವಂ** ಎಂಬ ಸೂತ್ರದಿಂದ (ಆ. ೪-೧೩) ವಿವೃತವಾಗಿರುವುದು. ಆಗ್ನಿಮಾರುತಶಸ್ತ್ರಮಂತ್ರಗಳಲ್ಲಿ **ದೇವೋ ವೋ ದ್ರವಿಣೋದಾಃ** ಎಂಬ ೧೧ನೆಯ ಋಕ್ಕನ್ನು ಅನುರೂಪಮಂತ್ರವನ್ನಾಗಿ ಪಠಿಸಬೇಕೆಂದು ಆಶ್ವಲಾಯನಶ್ರೌತ ಸೂತ್ರದ— **ದೇವೋ ವೋ ದ್ರವಿಣೋದಾ ಇತಿ ಪ್ರಗಾಥೌ ಸ್ತೋತ್ರಿಯಾನುರೂಪೌ** ಎಂಬ ಸೂತ್ರದಿಂದ (ಆ. ೫-೨೦) ವಿವೃತವಾಗಿರುವುದು.

## ಸೂಕ್ತ—೧೬

ಮಂಡಲ—೭ ॥ ಅನುವಾಕ—೧ ॥ ಸೂಕ್ತ—೧೬ ॥
ಅಷ್ಟಕ—೫ ॥ ಅಧ್ಯಾಯ—೨ ॥ ವರ್ಗ—೨೧, ೨೨ ॥
॥ ಸೂಕ್ತದಲ್ಲಿರುವ ಋಕ್ಸಂಖ್ಯೆ—೧೨ ॥
॥ ಋಷಿಃ—ವಸಿಷ್ಠಃ ॥
॥ ದೇವತಾ—ಅಗ್ನಿಃ ॥
॥ ಛಂದಃ—ಪ್ರಾಗಾಥಂ ॥ (ಅಯುಜೋ ಬೃಹತ್ಯಃ । ಯುಜಃ ಸತೋಬೃಹತ್ಯಃ) ॥

॥ ಸಂಹಿತಾಪಾಠಃ ॥

ಏನಾ ವೋ ಅಗ್ನಿಂ ನಮಸೋರ್ಜೋ ನಪಾತಮಾ ಹುವೇ ।
ಪ್ರಿಯಂ ಚೇತಿಷ್ಠಮರತಿಂ ಸ್ವಧ್ವರಂ ವಿಶ್ವಸ್ಯ ದೂತಮಮೃತಂ ॥ ೧ ॥

॥ ಪದಪಾಠಃ ॥

ಏನಾ । ವಃ । ಅಗ್ನಿಂ । ನಮಸಾ । ಊರ್ಜಃ । ನಪಾತಂ । ಆ । ಹುವೇ ।
ಪ್ರಿಯಂ । ಚೇತಿಷ್ಠಂ । ಅರತಿಂ । ಸುಽಅಧ್ವರಂ । ವಿಶ್ವಸ್ಯ । ದೂತಂ । ಅಮೃತಂ ॥ ೧ ॥

॥ ಸಾಯಣಭಾಷ್ಯಂ ॥

ಊರ್ಜೋ ಬಲಸ್ಯ ನಪಾತಂ ಪುತ್ರಂ । ಸೂನುರ್ನಪಾದಿತ್ಯಪತ್ಯನಾಮಸು ಪಾಠಾತ್ । ಪ್ರಿಯಂ ಪ್ರಿಯಮಸ್ಮಾಕಂ ಚೇತಿಷ್ಠಮತಿಶಯೇನ ಜ್ಞಾತಾರಂ ಪ್ರಜ್ಞಾಪಕಂ ವಾರತಿಂ ಗಂತಾರಂ ಸ್ವಾಮಿನಂ ವಾ ಸ್ವಧ್ವರಂ ಸುಯಜ್ಞಂ ವಿಶ್ವಸ್ಯ ಸರ್ವಸ್ಯ ಯಜಮಾನಸ್ಯ ದೂತಮಮೃತಂ ನಿತ್ಯಮಗ್ನಿಮೇನೈನೇನ ನಮಸಾ ಸ್ತೋತ್ರೇಣ ॥ ಯದ್ಯಪ್ಯತ್ರಾನ್ವಾದೇಶೋ ನಾಸ್ತಿ ತಥಾಪಿ ಛಾಂದಸತ್ವಾದಿದಂಶಬ್ದಸ್ಯೈನಾದೇಶಃ। ಯದ್ವಾ । ಏನೈನಮಿತ್ಯಗ್ನೇರ್ವಿಶೇಷಣಂ । ಸಮಾನಾರ್ಥತ್ವಾತ್ಪೂರ್ವೇಷು ಸೂಕ್ತೇಷ್ವಾದಿಷ್ಟತ್ವಾದ್ವಪಿ-ಷ್ಟೇನಾನ್ವಾದಿಶ್ಯತೇ ॥ ವೋ ಯುಷ್ಮದರ್ಥಮಾ ಹುವೇ । ಆಹ್ವಯಾಮಿ ॥

॥ ಪ್ರತಿಪದಾರ್ಥ ॥

**ಊರ್ಜಃ**—ಶಕ್ತಿಗೆ | **ನಪಾತಂ**—ಪುತ್ರನೂ | **ಪ್ರಿಯಂ**—ನಮಗೆ ಹಿತಕರನೂ | **ಚೇತಿಷ್ಠಂ**—ಚೈತನ್ಯದಾಯಕನೂ | **ಅರತಿಂ**—ಸ್ವಾಮಿಯೂ | **ಸ್ವಧ್ವರಂ**—ಉತ್ತಮವಾದ ಯಜ್ಞವುಳ್ಳವನೂ | **ವಿಶ್ವಸ್ಯ**—ಸಕಲ ಯಜಮಾನರಿಗೂ | **ದೂತಂ**—ದೂತನೂ | **ಅಮೃತಂ**—ಮೃತಿರಹಿತನೂ ಆದ | **ಅಗ್ನಿಂ**—ಅಗ್ನಿಯನ್ನು | **ಏನಾ ನಮಸಾ**—ಈ ಸ್ತೋತ್ರದಿಂದ | **ವಃ**—ನಿಮಗಾಗಿ | **ಆ ಹುವೇ**—ಪ್ರಾರ್ಥಿಸಿ ಕರೆಯುತ್ತೇನೆ.

॥ ಭಾವಾರ್ಥ ॥

ಶಕ್ತಿಪುತ್ರನೂ, ನಮಗೆ ಹಿತಕರನೂ, ಚೈತನ್ಯದಾಯಕನೂ, ಸ್ವಾಮಿಯೂ, ಉತ್ತಮವಾದ ಯಜ್ಞವುಳ್ಳವನೂ, ಸಕಲ ಯಜಮಾನರಿಗೂ ದೂತನೂ, ಮೃತಿರಹಿತನೂ ಆದ ಅಗ್ನಿಯನ್ನು ಈ ಸ್ತೋತ್ರದಿಂದ ನಿಮಗಾಗಿ ಪ್ರಾರ್ಥಿಸಿ ಕರೆಯುತ್ತೇನೆ.

## English Translation.

I Invoke for you with this hymn, Agni, the son of strength, the kind, the most knowing the unobstructed : the fit object of sacred rites, the messenger of all the immortals.

॥ ವಿಶೇಷವಿಷಯಗಳು ॥

ಏನಾ—ಈ ಶಬ್ದದ ಪ್ರಯೋಗವನ್ನು ವಿವರಿಸುತ್ತಾ ಯಾಸ್ಕರು—

**ಅಯೈನೇತ್ಯುಪದೇಶಸ್ಯ । ಅಯಾ ತೇ ಅಗ್ನೇ ಸಮಿಧಾ ವಿಧೇಮ ಇತಿ ಸ್ತ್ರಿಯಾಃ । ಏನಾ ವೋ ಅಗ್ನಿಂ ಇತಿ ನಪುಂಸಕಸ್ಯ । ಏನಾ ಪತ್ಯಾ ತನ್ವಂ೧ ಸಂಸೃಜಸ್ವ ಇತಿ ಪುಂಸಃ ॥**

(ನಿ. ೩-೨೧)

**ಅಯಾ**, ಏನಾ ಎಂಬ ಶಬ್ದಗಳಲ್ಲಿ ಅಯಾ ಎಂಬ ಶಬ್ದವನ್ನು ಸ್ತ್ರೀಲಿಂಗದಲ್ಲಿಯೂ, **ಏನಾ** ಎಂಬ ಶಬ್ದವನ್ನು ನಪುಂಸಕಲಿಂಗ ಮತ್ತು ಪುಲ್ಲಿಂಗಗಳಲ್ಲಿಯೂ ಉಪಯೋಗಿಸಲಾಗುವುದೆಂದು ಹೇಳಿ ಅವುಗಳಿಗೆ ಮೂರು ಉದಾಹರಣೆಗಳನ್ನು ಕೊಟ್ಟಿದಾರೆ. **ಅಯಾ ತೇ ಅಗ್ನೇ ಸಮಿಧಾ ವಿಧೇಮ** ಎಂಬ ವಾಕ್ಯದಲ್ಲಿ **ಅಯಾ** ಎಂಬುದು ಸ್ತ್ರೀಲಿಂಗ ಶಬ್ದವಾದ **ಸಮಿಧಾ** ಎಂಬ ಶಬ್ದಕ್ಕೆ ವಿಶೇಷಣವಾಗಿ ಸ್ತ್ರೀಲಿಂಗಾರ್ಥವನ್ನು ಸೂಚಿಸುವುದು. ಅದರಂತೆ **ಏನಾ** ಎಂಬ ಶಬ್ದವು **ಏನಾ ವೋ ಅಗ್ನಿಂ** ಎಂಬ ವಾಕ್ಯದಲ್ಲಿ ನಪುಂಸಕಲಿಂಗದಲ್ಲಿಯೂ, **ಏನಾ ಪತ್ಯಾ ತನ್ವಂ೧ ಸಂಸೃಜಸ್ವ** ಎಂಬ ವಾಕ್ಯದಲ್ಲಿ ಪುಲ್ಲಿಂಗದಲ್ಲಿಯೂ ಪ್ರಯೋಗಿಸಲ್ಪಟ್ಟಿರುವುದು.

॥ ಸಂಹಿತಾಪಾಠಃ ॥

**ಸ ಯೋಜತೇ ಅರುಷಾ ವಿಶ್ವಭೋಜಸಾ ಸ ದುದ್ರವತ್ಸ್ವಾಹುತಃ ।**

**ಸುಬ್ರಹ್ಮಾ ಯಜ್ಞಃ ಸುಶಮೀ ವಸೂನಾಂ ದೇವಂ ರಾಧೋ ಜನಾನಾಂ ॥೨॥**

॥ ಪದಪಾಠಃ ॥

ಸಃ । ಯೋಜತೇ । ಅರುಷಾ । ವಿಶ್ವಭೋಜಸಾ । ಸಃ । ದುದ್ರವತ್ । ಸುಽಆಹುತಃ ।

ಸುಽಬ್ರಹ್ಮಾ । ಯಜ್ಞಃ । ಸುಽಶಮೀ । ವಸೂನಾಂ । ದೇವಂ । ರಾಧಃ । ಜನಾನಾಂ ॥ ೨ ॥

॥ ಸಾಯಣಭಾಷ್ಯಂ ॥

**ಸೋಽಗ್ನಿರರುಷಾರೋಚಮಾನೌ ವಿಶ್ವಭೋಜಸಾ ವಿಶ್ವಸ್ಯ ಪಾಲಯಿತಾರಾವಶ್ವೌ ಯೋಜತೇ । ರಥೇ ಯುನಕ್ತಿ । ಯದ್ವಾ । ಸೋಽರುಷಾರೋಚಮಾನೇನ ತೇಜಸಾ ವಿಶ್ವಭೋಜಸಾ ವಿಶ್ವಸ್ಯ ರಕ್ಷಕೇಣ ಯೋಜತೇ । ಅಯುಜ್ಯತ । ಕಿಂ ಚ ಸೋಽಗ್ನಿರ್ದುದ್ರವತ್ । ಆನೇತುಂ ದೇವಾನ್ ಪ್ರತಿ ಭೃಶಂ ದ್ರವತು ದ್ರವತಿ ವಾ । ಸ್ವಾಹುತಃ ಸುಷ್ಠ್ವಾಹುತಃ ಸುಬ್ರಹ್ಮಾ ಸುಸ್ತುತಿಃ ಶೋಭನಾನ್ನೋ ವಾ ಯಜ್ಞೋ ಯಷ್ಟವ್ಯಃ ಸುಶಮೀ ಸುಕರ್ಮಾ ಚ ಭವತಿ । ತಮಿಮಂ ದೇವಂ ದ್ಯೋತಮಾನಂ ವಸೂನಾಂ ವಾಸಕಾನಾಂ ಜನಾನಾಂ ವಸಿಷ್ಠಾನಾಂ ರಾಧೋ ಹವಿರಭಿಗಚ್ಛತ್ವಿತಿ ಶೇಷಃ । ಯದ್ವಾ । ಏವಂಗುಣವಿಶಿಷ್ಟೋಽಗ್ನಿರ್ವಸೂನಾಂ ಧನಾನಾಂ ಮಧ್ಯೇ ದೇವಮತ್ಯಂತಪ್ರಕಾಶಮಾನಂ ರಾಧೋ ಧನಂ ಜನಾನಾಂ ಯಜಮಾನಾನಾಂ ಧನವತ್ ಪ್ರಿಯತಮ ಇತ್ಯರ್ಥಃ ॥**

॥ ಪ್ರತಿಪದಾರ್ಥ ॥

**ಸಃ**—ಅದೇ ಅಗ್ನಿಯು । **ಅರುಷಾ**—ಆಕರ್ಷಕವಾದವೂ । **ವಿಶ್ವಭೋಜಸಾ**—ವಿಶ್ವವನ್ನೆಲ್ಲಾ ಪಾಲಿಸ ತಕ್ಕವೂ ಆದ ಅಶ್ವಗಳನ್ನು । **ಯೋಜತೇ**—ರಥಕ್ಕೆ ಸೇರಿಸಿ ಕಟ್ಟುತ್ತಾನೆ । **ಸಃ**—ಅದೇ ಅಗ್ನಿಯು । **ದುದ್ರವತ್**—ದೇವತೆಗಳನ್ನು ಕರೆತರಲು ಓಡುತ್ತಾನೆ । **ಸ್ವಾಹುತಃ**—ಶ್ರೇಷ್ಠವಾಗಿ ಆಹುತನಾಗಿಯೂ (ಹವಿಸ್ಸನ್ನರ್ಪಿಸಲ್ಪಟ್ಟವನಾಗಿ) । **ಸುಬ್ರಹ್ಮಾ**—ಉತ್ತಮವಾದ ಸ್ತುತಿಯುಳ್ಳವನಾಗಿಯೂ । **ಯಜ್ಞಃ**—ಪೂಜ್ಯನಾಗಿಯೂ । **ಸುಶಮೀ**—ಉತ್ತಮವಾದ ಕರ್ಮಯುಕ್ತನಾಗಿಯೂ ಆಗುತ್ತಾನೆ । **ವಸೂನಾಂ**—ವಸತಿದಾಯಕರಾದ **ಜನಾನಾಂ**—ವಸಿಷ್ಠ ಗೋತ್ರೋತ್ಪನ್ನರ । **ದೇವಂ**—ಪ್ರಕಾಶಮಾನವಾದ । **ರಾಧಃ**—ಹವಿಸ್ಸಿನ ರೂಪವಾದ ಧನವನ್ನು (ಸ್ವೀಕರಿಸುತ್ತಾನೆ).

॥ ಭಾವಾರ್ಥ ॥

ಪ್ರಸಿದ್ಧನಾದ ಅದೇ ಅಗ್ನಿಯು ಆಕರ್ಷಕವಾದವೂ, ವಿಶ್ವವನ್ನೆಲ್ಲಾ ಪಾಲಿಸತಕ್ಕವೂ ಆದ ತನ್ನ ಅಶ್ವಗಳನ್ನು ರಥಕ್ಕೆ ಸೇರಿಸಿ ಕಟ್ಟುತ್ತಾನೆ. ಅದೇ ಅಗ್ನಿಯು ದೇವತೆಗಳನ್ನು ಕರೆತರಲು ಓಡುತ್ತಾನೆ. ಶ್ರೇಷ್ಠವಾಗಿ ಆಹುತನಾಗಿಯೂ, ಉತ್ತಮವಾದ ಸ್ತುತಿಗೆ ಪಾತ್ರನಾಗಿಯೂ, ಪೂಜ್ಯನಾಗಿಯೂ, ಉತ್ತಮವಾದ ಕರ್ಮಯುಕ್ತನಾಗಿಯೂ ಆಗುತ್ತಾನೆ. ವಸತಿದಾಯಕರಾದ ವಸಿಷ್ಠ ಗೋತ್ರೋತ್ಪನ್ನರ ಪ್ರಕಾಶಮಾನವಾದ ಹವಿಸ್ಸಿನ ರೂಪವಾದ ಧನವನ್ನು ಸ್ವೀಕರಿಸುತ್ತಾನೆ.

## English Translation.

May he harness his brilliant protecting (steeds to his car), when earnestly invoked : may he hasten (to bring the gods): may the sacrificial wealth of the worshippers (proceed to) that deity who is the giver of abundant food, the adorable, the doer of great deeds.

॥ ಸಂಹಿತಾಪಾಠಃ ॥

ಉದಸ್ಯ ಶೋಚಿರಸ್ಥಾದಾಜುಹ್ವಾನಸ್ಯ ಮೀಳ್ಹುಷಃ ।

ಉದ್ಧೂಮಾಸೋ ಅರುಷಾಸೋ ದಿವಿಸ್ಪೃಶಃ ಸಮಗ್ನಿಮಿಂಧತೇ ನರಃ ॥ ೩॥

॥ ಪದಪಾಠಃ ॥

**ಉತ್ । ಅಸ್ಯ । ಶೋಚಿಃ । ಅಸ್ಥಾತ್ । ಆऽಜುಹ್ವಾನಸ್ಯ । ಮೀಳ್ಹುಷಃ ।**

**ಉತ್ । ಧೂಮಾಸಃ । ಅರುಷಾಸಃ । ದಿವಿऽಸ್ಪೃಶಃ । ಸಂ । ಅಗ್ನಿಂ । ಇಂಧತೇ । ನರಃ ॥ ೩ ॥**

॥ ಸಾಯಣಭಾಷ್ಯಂ ॥

**ಮೀಳ್ಹುಷಃ ಕಾಮಾನಾಂ ವರ್ಷಿತುರಾಜುಹ್ವಾನಸ್ಯಾಭಿಹೂಯಮಾನಸ್ಯಾಗ್ನೇಃ ಶೋಚಿಸ್ತೇಜ ಉದಸ್ಥಾತ್ । ಉತ್ತಿಷ್ಠತಿ । ಅರುಷಾಸ ಆರೋಚಮಾನಾ ದಿವಿಸ್ಪೃಶೋऽಂತರಿಕ್ಷಸ್ಪೃಶೋ ಧೂಮಾಸೋ ಧೂಮಾಶ್ಚೋದಸ್ಥುಃ । ಅಸ್ಥಾದಿತ್ಯೇಕವಚನಾಂತಂ ಬಹುವಚನಾಂತತಯಾ ವಿಪರಿಣತಂ ಸದತ್ರಾನ್ವೇತಿ । ತಮಿಮಮಗ್ನಿಂ ನರಃ ಕರ್ಮಣಾಂ ನೇತಾರ ಋತ್ವಿಜಃ ಸಮಿಂಧತೇ । ಸಮ್ಯಕ್ ದೀಪಯಂತಿ ॥**

॥ ಪ್ರತಿಪದಾರ್ಥ ॥

**ಮೀಳ್ಹುಷಃ**—ಕಾಮವರ್ಷಕನೂ । **ಆಜುಹ್ವಾನಸ್ಯ**—ಪದೇಪದೇ ಕರೆಯಲ್ಪಡತಕ್ಕವನೂ ಆದ । **ಅಸ್ಯ**—ಅಗ್ನಿಯ । **ಶೋಚಿಃ**—ತೇಜಸ್ಸು । **ಉತ್ ಅಸ್ಥಾತ್**—ಮೇಲೆದ್ದು ವ್ಯಾಪಿಸಿದೆ । **ಅರುಷಾಸಃ**—ಆಕರ್ಷಕವರ್ಣವುಳ್ಳವೂ । **ದಿವಿಸ್ಪೃಶಃ**—ಅಂತರಿಕ್ಷವನ್ನು ಮುಟ್ಟುವುವೂ ಆದ । **ಧೂಮಾಸಃ**—ಧೂಮಪಂಕ್ತಿಗಳು (ಹೊಗೆಯು) । **ಉತ್**—ಮೇಲೆದ್ದು ಪ್ರಸರಿಸಿವೆ । **ಅಗ್ನಿಂ**—ಅದೇ ಅಗ್ನಿಯನ್ನು । **ನರಃ**—ಕರ್ಮಕ್ಕೆ ನೇತೃಗಳಾದ ಋತ್ವಿಕ್ಕುಗಳು । **ಸಂ ಇಂಧತೇ**—ಪ್ರಜ್ವಲಿತನನ್ನಾಗಿ ಮಾಡುತ್ತಾರೆ.

॥ ಭಾವಾರ್ಥ ॥

ಕಾಮವರ್ಷಕನೂ ಪದೇಪದೇ ಕರೆಯಲ್ಪಡುವವನೂ ಆದ ಅಗ್ನಿಯ ತೇಜಸ್ಸು ಮೇಲೆದ್ದು ವ್ಯಾಪಿಸಿದೆ. ಆಕರ್ಷಕ ವರ್ಣವುಳ್ಳವೂ, ಅಂತರಿಕ್ಷವನ್ನು ಮುಟ್ಟುವುವೂ ಆದ ಧೂಮಪಂಕ್ತಿಗಳು (ಹೊಗೆಗಳು) ಮೇಲೆದ್ದು ಪ್ರಸರಿಸಿವೆ. ಅದೇ ಅಗ್ನಿಯನ್ನು ಕರ್ಮಕ್ಕೆ ನೇತೃಗಳಾದ ಋತ್ವಿಕ್ಕುಗಳು ಪ್ರಜ್ವಲಿತನನ್ನಾಗಿ ಮಾಡುತ್ತಾರೆ.

## English Translation.

The radiance of that showerer (of benefits), repeatedly invoked, rises up, as does the fiery sky-lambent smoke when men kindle Agni.

॥ ಸಂಹಿತಾಪಾಠಃ ॥

ತಂ ತ್ವಾ ದೂತಂ ಕೃಣ್ಮಹೇ ಯಶಸ್ತಮಂ ದೇವಾಁ ಆ ವೀತಯೇ ವಹ ।
ವಿಶ್ವಾ ಸೂನೋ ಸಹಸೋ ಮರ್ತಭೋಜನಾ ರಾಸ್ವ ತದ್ಯತ್ತ್ವೇಮಹೇ ॥ ೪॥

॥ ಪದಪಾಠಃ ॥

ತಂ । ತ್ವಾ । ದೂತಂ । ಕೃಣ್ಮಹೇ । ಯಶಃऽತಮಂ । ದೇವಾನ್ । ಆ । ವೀತಯೇ । ವಹ ।
ವಿಶ್ವಾ । ಸೂನೋ ಇತಿ । ಸಹಸಃ । ಮರ್ತऽಭೋಜನಾ । ರಾಸ್ವ । ತತ್ । ಯತ್ । ತ್ವಾ । ಈಮಹೇ ॥೪॥

॥ ಸಾಯಣಭಾಷ್ಯಂ ॥

ಹೇ ಸಹಸಃ ಸೂನೋ ಬಲಸ್ಯ ಪುತ್ರಾಗ್ನೇ ಯಶಸ್ತಮಮತಿಶಯೇನ ಯಶಸ್ವಿನಂ ತಂ ಪ್ರಸಿದ್ಧಂ ಯಂ ತ್ವಾ ತ್ವಾಂ ದೂತಂ ಕೃಣ್ಮಹೇ ಕುರ್ಮಃ ಸ ತ್ವಂ ದೇವಾನ್ವೀತಯೇ ಹವಿಷಾಂ ಭಕ್ಷಣಾಯಾ ವಹ । ಕಿಂಚ ಯದ್ಯದಾ ತ್ವಾ ತ್ವಾಮೀಮಹೇ ಯಾಚಾಮಹೇ ತದೈವ ವಿಶ್ವಾ ವಿಶ್ವಾನಿ ಮರ್ತಭೋಜನಾನಿ ಮನುಷ್ಯಾಣಾಂ ಭೋಗ್ಯಾನಿ ಕಲ್ಯಾಣಾನಿ ಧನಾನಿ ರಾಸ್ವ । ಅಸ್ಮಭ್ಯಂ ದೇಹಿ ॥

॥ ಪ್ರತಿಪದಾರ್ಥ ॥

**ಸಹಸಃ ಸೂನೋ**—ಶಕ್ತಿಪುತ್ರನಾದ ಎಲೈ ಅಗ್ನಿಯೇ । **ಯಶಸ್ತಮಂ**—ಅತ್ಯಂತ ಯಶಸ್ವಿಯೂ । **ತಂ**—ಪ್ರಸಿದ್ಧನೂ ಆದ । **ತ್ವಾ**—ನಿನ್ನನ್ನು । **ದೂತಂ**—ದೂತನನ್ನಾಗಿ । **ಕೃಣ್ಮಹೇ**—ಮಾಡುತ್ತೇವೆ । **ದೇವಾನ್**—ದೇವತೆಗಳನ್ನು । **ವೀತಯೇ**—ಹವಿಸ್ಸನ್ನು ಭಕ್ಷಿಸುವುದಕ್ಕಾಗಿ । **ಆ ವಹ**—ಕರೆದುಕೊಂಡು ಬಾ । **ಯತ್**—ಯಾವಾಗ । **ತ್ವಾ**—ನಿನ್ನನ್ನು । **ಈ ಮಹೇ**—ಯಾಚಿಸುತ್ತೇವೆಯೋ । **ತತ್**—ಆಗ । **ವಿಶ್ವಾ**—ಸಮಸ್ತವಾದ । **ಮರ್ತಭೋಜನಾ**—ಮಾನವರ ಭೋಗಸಾಧನಗಳನ್ನು । **ರಾಸ್ವ**—ಕೊಡು.

॥ ಭಾವಾರ್ಥ ॥

ಶಕ್ತಿಪುತ್ರನಾದ ಎಲೈ ಅಗ್ನಿಯೇ, ಅತ್ಯಂತ ಯಶಸ್ವಿಯೂ, ಪ್ರಸಿದ್ಧನೂ ಆದ ನಿನ್ನನ್ನು ದೂತನನ್ನಾಗಿ ಮಾಡುತ್ತೇವೆ. ದೇವತೆಗಳನ್ನು ಹವಿರ್ಭಕ್ಷಣಕ್ಕಾಗಿ ಕರೆದುಕೊಂಡು ಬಾ. ನಾವು ನಿನ್ನನ್ನು ಯಾಚಿಸಿದಾಗ ನಮಗೆ ಸಮಸ್ತ ಭೋಗಸಾಧನಗಳನ್ನೂ ಕೊಡು.

## English Translation.

We constitute you our most renowned messenger : bring the gods to partake (of the oblation) : bestow upon us, son of strength, all human blessings : whatsoever we solicit of you.

|| ಸಂಹಿತಾಪಾಠಃ ||

ತ್ವಮಗ್ನೇ ಗೃಹಪತಿಸ್ತ್ವಂ ಹೋತಾ ನೋ ಅಧ್ವರೇ ।
ತ್ವಂ ಪೋತಾ ವಿಶ್ವವಾರ ಪ್ರಚೇತಾ ಯಕ್ಷಿ ವೇಷಿ ಚ ವಾರ್ಯಂ || ೫ ||

|| ಪದಪಾಠಃ ||

ತ್ವಂ । ಅಗ್ನೇ । ಗೃಹऽಪತಿಃ । ತ್ವಂ । ಹೋತಾ । ನಃ । ಅಧ್ವರೇ ।
ತ್ವಂ । ಪೋತಾ । ವಿಶ್ವऽವಾರ । ಪ್ರऽಚೇತಾಃ । ಯಕ್ಷಿ । ವೇಷಿ । ಚ । ವಾರ್ಯಂ || ೫ ||

|| ಸಾಯಣಭಾಷ್ಯಂ ||

**ಹೇ ವಿಶ್ವವಾರ ವಿಶ್ವೈರ್ವರಣೀಯಾಗ್ನೇ ತ್ವಂ ನೋऽಸ್ಮಾಕಮಧ್ವರೇ ಯಾಗೇ ಗೃಹಪತಿರಸಿ । ಯಜಮಾನೋऽಸಿ । ತ್ವಂ ಹೋತಾ ದೇವಾನಾಮಾಹ್ವಾತಾ । ತ್ವಂ ತ್ವಮೇವ ಪೋತಾಸಿ । ಅತಃ ಪ್ರಚೇತಾಃ ಪ್ರಕೃಷ್ಟಮತಿಸ್ತ್ವಂ । ವಾರ್ಯಂ ವರಣೀಯಂ ಹವಿರ್ಯಕ್ಷಿ । ಯಜ । ವೇಷಿ ಚ । ಕಾಮಯಸ್ವ । ಭಕ್ಷಯ ವಾ ||**

|| ಪ್ರತಿಪದಾರ್ಥ ||

**ವಿಶ್ವವಾರ**—ಎಲ್ಲರಿಂದಲೂ ಆದೃತನಾದ । **ಅಗ್ನೇ**—ಎಲೈ ಅಗ್ನಿಯೇ । **ತ್ವಂ**—ನೀನು । **ನಃ**—ನಮ್ಮ । **ಅಧ್ವರೇ**—ಯಾಗದಲ್ಲಿ । **ಗೃಹಪತಿಃ**—ಯಜಮಾನನಾಗಿದ್ದೀಯೇ । **ತ್ವಂ**—ನೀನೇ । **ಹೋತಾ**—ದೇವತೆಗಳನ್ನು ಕರೆಯುವವನು । **ತ್ವಂ**—ನೀನೇ । **ಪೋತಾ**—ಪೋತೃರೂಪನಾದ ಋತ್ವಿಜನು । **ಪ್ರಚೇತಾಃ**—ಉತ್ಕೃಷ್ಟವಾದ ಪ್ರಜ್ಞೆಯುಳ್ಳ ನೀನು । **ವಾರ್ಯಂ**—ಅಪೇಕ್ಷಿತವಾದ ಹವಿಸ್ಸನ್ನು । **ಯಕ್ಷಿ**—(ದೇವತೆಗಳಿಗೆ) ಅರ್ಪಿಸು । **ವೇಷಿ ಚ**—ನೀನೂ ಭಕ್ಷಿಸು.

|| ಭಾವಾರ್ಥ ||

ಎಲ್ಲರಿಂದಲೂ ಆದೃತನಾದ ಎಲೈ ಅಗ್ನಿಯೇ, ನೀನು ನಮ್ಮ ಯಾಗದಲ್ಲಿ ಯಜಮಾನನಾಗಿದ್ದೀಯೆ. ನೀನೇ ಹೋತೃವೂ ಪೋತೃವೂ ಆಗಿದ್ದೀಯೆ. ಉತ್ಕೃಷ್ಟವಾದ ಪ್ರಜ್ಞೆಯುಳ್ಳ ನೀನು ಅಪೇಕ್ಷಿತವಾದ ಹವಿಸ್ಸನ್ನು ದೇವತೆಗಳಿಗೆ ಅರ್ಪಿಸು. ಅದನ್ನು ನೀನೂ ಭಕ್ಷಿಸು.

## English Translation.

All-desired Agni, you are the lord of the mansion : you are the invoker of the gods : you are the assistant priest : do you, who are wise, present (the oblation to the gods), and partake (of it yourself).

॥ ಸಂಹಿತಾಪಾಠಃ ॥

ಕೃಧಿ ರತ್ನಂ ಯಜಮಾನಾಯ ಸುಕ್ರತೋ ತ್ವಂ ಹಿ ರತ್ನಧಾ ಅಸಿ ।
ಆ ನ ಋತೇ ಶಿಶೀಹಿ ವಿಶ್ವಮೃತ್ವಿಜಂ ಸುಶಂಸೋ ಯಶ್ಚ ದಕ್ಷತೇ ॥ ೬ ॥

॥ ಪದಪಾಠಃ ॥

ಕೃಧಿ । ರತ್ನಂ । ಯಜಮಾನಾಯ । ಸುಕ್ರತೋ ಇತಿ ಸುऽಕ್ರತೋ । ತ್ವಂ । ಹಿ । ರತ್ನऽಧಾಃ । ಅಸಿ ।
ಆ । ನಃ । ಋತೇ । ಶಿಶೀಹಿ । ವಿಶ್ವಂ । ಋತ್ವಿಜಂ । ಸುऽಶಂಸಃ । ಯಃ । ಚ । ದಕ್ಷತೇ ॥ ೬ ॥

॥ ಸಾಯಣಭಾಷ್ಯಂ ॥

ಹೇ ಸುಕ್ರತೋ ಶೋಭನಕರ್ಮನ್ನಗ್ನೇ ಯಜಮಾನಾಯ ಮಹ್ಯಂ ರತ್ನಂ ಧನಂ । ಶ್ವಾತ್ರಂ ರತ್ನಮಿತಿ ಧನನಾಮಸು ಪಾಠಾತ್ । ಕೃಧಿ । ಕುರು । ದೇಹೀತ್ಯರ್ಥಃ । ಹಿ ಯಸ್ಮಾತ್ತ್ವಂ ರತ್ನಧಾ ರತ್ನಸ್ಯ ದಾತಾಸಿ । ಸೋऽಸ್ಮಾಕಮೃತೇ ಯಜ್ಞೇ ವಿಶ್ವಂ ಸರ್ವಮೃತ್ವಿಜಮಾ ಶಿಶೀಹಿ । ತೀಕ್ಷ್ಣೀಕುರು । ಕಿಂ ಚ ಯಃ ಸುಶಂಸಃ ಸುಸ್ತುತಿರಸ್ಮತ್ಪ್ರಶ್ರೋ ದಕ್ಷತೇ ವರ್ಧತೇ ತಂ ವರ್ಧಯ । ಯದ್ವಾ । ಯಃ ಸುಶಂಸೋ ಹೋತಾ ವರ್ಧತೇ ತಂ ವರ್ಧಯೇತ್ಯರ್ಥಃ । ಹೋತುಃ ಪೃಥಗುಪಾದಾನಮಾದರಾರ್ಥಂ ॥

॥ ಪ್ರತಿಪದಾರ್ಥ ॥

**ಸುಕ್ರತೋ**—ಉತ್ತಮವಾದ ಕರ್ಮಕರ್ತನಾದ ಎಲೈ ಅಗ್ನಿಯೇ । **ಯಜಮಾನಾಯ**—ಯಜಮಾನನಾದ ನನಗೆ । **ರತ್ನಂ**—ರಮಣೀಯವಾದ ಧನವನ್ನು । **ಕೃಧಿ**—ಕೊಡು । **ಹಿ**—ಏತಕ್ಕೆಂದರೆ । **ತ್ವಂ**—ನೀನು । **ರತ್ನಧಾಃ**—ಧನದಾತನಾಗಿ । **ಅಸಿ**—ಆಗಿದ್ದೀಯೆ । **ನಃ**—ನಮ್ಮ । **ಋತೇ**—ಯಜ್ಞದಲ್ಲಿ । **ವಿಶ್ವಂ**—ಸಮಸ್ತವಾದ । **ಋತ್ವಿಜಂ**—ಋತ್ವಿಕ್ಕುಗಳನ್ನೂ । **ಆ ಶಿಶೀಹಿ**—ಉತ್ತೇಜಿತರನ್ನಾಗಿ ಮಾಡು । **ಯಃ ಚ**—ಯಾವನು । **ಸುಶಂಸಃ**—ಉತ್ತಮ ಸ್ತುತಿಕರ್ತನಾಗಿ । **ದಕ್ಷತೇ**—ನಿನ್ನನ್ನು ಪೂಜಿಸುವ ಸಾಮರ್ಥ್ಯವನ್ನು ಹೊಂದುವನೋ (ಅವನನ್ನು ಸಂಪದ್ಯುಕ್ತನನ್ನಾಗಿ ಮಾಡು).

॥ ಭಾವಾರ್ಥ ॥

ಉತ್ತಮವಾದ ಕರ್ಮಕರ್ತನಾದ ಎಲೈ ಅಗ್ನಿಯೇ, ಯಜಮಾನನಾದ ನನಗೆ ರಮಣೀಯವಾದ ಧನವನ್ನು ಕೊಡು. ನೀನು ಅತ್ಯಂತ ಉತ್ತಮವಾದ ಧನದಾತೃವಾಗಿದ್ದೀಯೇ. ನಮ್ಮ ಯಜ್ಞದಲ್ಲಿ ಸಮಸ್ತವಾದ ಋತ್ವಿಕ್ಕುಗಳನ್ನೂ ಉತ್ತೇಜಿತರನ್ನಾಗಿ ಮಾಡು. ಯಾವನು ಉತ್ತಮವಾದ ಸ್ತುತಿಕರ್ತನಾಗಿ ನಿನ್ನನ್ನು ಪೂಜಿಸುವ ಸಾಮರ್ಥ್ಯವನ್ನು ಹೊಂದುವನೋ ಅವನನ್ನು ಸಂಪದ್ಯುಕ್ತನನ್ನಾಗಿ ಮಾಡು.

## English Translation.

Doer of good deeds, bestow treasure upon the institutor of the solemnity, for you are the bestower of treasure : inspire all the priests at our sacrifice : (prosper him) who, offering worthy praise, is prosperous.

॥ ಸಂಹಿತಾಪಾಠಃ ॥

ತ್ವೇ ಅಗ್ನೇ ಸ್ವಾಹುತ ಪ್ರಿಯಾಸಃ ಸಂತು ಸೂರಯಃ ।
ಯಂತಾರೋ ಯೇ ಮಘವಾನೋ ಜನಾನಾಮೂರ್ವಾನ್ದಯಂತ
ಗೋನಾಂ ॥ ೭ ॥

॥ ಪದಪಾಠಃ ॥

ತ್ವೇ ಇತಿ । ಅಗ್ನೇ । ಸುऽಆಹುತ । ಪ್ರಿಯಾಸಃ । ಸಂತು । ಸೂರಯಃ ।
ಯಂತಾರಃ । ಯೇ । ಮಘऽವಾನಃ । ಜನಾನಾಂ । ಊರ್ವಾನ್ । ದಯಂತ । ಗೋನಾಂ ॥ ೭ ॥

॥ ಸಾಯಣಭಾಷ್ಯಂ ॥

ಹೇ ಅಗ್ನೇ ಸ್ವಾಹುತ ಯಜಮಾನೈಃ ಸುಷ್ಠ್ವಾಹುತ ತ್ವೇ ತವ ಸೂರಯಃ ಪ್ರೇರಕಾಃ ಸ್ತೋತಾರೋ ವಾ ಪ್ರಿಯಾಸಃ ಪ್ರಿಯಾಃ ಸಂತು । ಭವಂತು । ಕಿಂಚ ಯೇ ಮಘವಾನೋ ಧನವಂತೋ ಯಂತಾರಃ ಪ್ರದಾತಾರೋ ಜನಾನಾಮಸ್ಮದೀಯಾನಾಮೂರ್ವಾನ್ ಸಮೂಹಾನ್ ಗೋನಾಂ ಗವಾಂ ಚೋರ್ವಾನ್ದಯಂತೆ ಪ್ರಯಚ್ಛಂತಿ ತೇ ಚ ತವ ಪ್ರಿಯಾಸಃ ಸಂತ್ವಿತಿ ಪೂರ್ವೇಣಾನ್ವಯಃ ॥

॥ ಪ್ರತಿಪದಾರ್ಥ ॥

**ಸ್ವಾಹುತ**—ಉತ್ತಮವಾದ ಆಹುತಿಯನ್ನರ್ಪಿಸಲ್ಪಡುವ । **ಅಗ್ನೇ**—ಎಲೈ ಅಗ್ನಿಯೇ । **ಯೇ**—ಯಾವ ಸ್ತುತಿಕರ್ತರು । **ಮಘವಾನಃ**— ಧನವಂತರಾಗಿಯೂ । **ಯಂತಾರಃ**—ಹವಿಪ್ರದಾತರಾಗಿಯೂ । **ಜನಾನಾಂ**—ನಮ್ಮಂತಹ ಜನರಿಗೆ । **ಊರ್ವಾನ್**—ಗುಂಪುಗಳಿಂದ ಕೂಡಿದ । **ಗೋನಾಂ**—ಗೋವುಗಳನ್ನು ।

**ದಯಂತೆ**—ಕೊಡುವರೋ ಅಂತಹ | **ತ್ವೇ ಸೂರಯಃ**—ನಿನ್ನ ಸ್ತುತಿಕರ್ತರು | **ಪ್ರಿಯಾಸಃ**—ನಮಗೆ ಹಿತಕಾರಕರಾಗಿ | **ಸಂತು**—ಆಗಿರಲಿ.

|| ಭಾವಾರ್ಥ ||

ಉತ್ತಮವಾದ ಆಹುತಿಯನ್ನರ್ಪಿಸಲ್ಪಡುವ ಎಲೈ ಅಗ್ನಿಯೇ, ಯಾವ ಸ್ತುತಿಕರ್ತರು ಧನವಂತರಾಗಿಯೂ ಹವಿಪ್ಪ್ರದಾತರಾಗಿಯೂ ನಮ್ಮಂತಹ ಜನರಿಗೆ ಗೋವುಗಳ ಸಮೂಹವನ್ನು ಕೊಡಬಲ್ಲರೋ ಅಂತಹ ನಿನ್ನ ಸ್ತುತಿ ಕರ್ತರು ನಮಗೆ ಹಿತಕಾರಕರಾಗಿ ಆಗಿರಲಿ.

## English Translation.

Agni, piously invoked, may those devout worshippers be dear to you, who are liberal, opulent, and the bestowers upon man of herds of cattle.

| ಸಂಹಿತಾಪಾಠಃ |

ಯೇಷಾಮಿಳಾ ಘೃತಹಸ್ತಾ ದುರೋಣ ಆಁ ಅಪಿ ಪ್ರಾತಾ ನಿಷೀದತಿ |
ತಾಂಸ್ತ್ರಾಯಸ್ವ ಸಹಸ್ಯ ದ್ರುಹೋ ನಿದೋ ಯಚ್ಛಾ ನಃ ಶರ್ಮ ದೀರ್ಘಶ್ರುತ್ || ೮ ||

| ಪದಪಾಠಃ |

ಯೇಷಾಂ | ಇಳಾ | ಘೃತಽಹಸ್ತಾ | ದುರೋಣೇ | ಆ | ಅಪಿ | ಪ್ರಾತಾ | ನಿಽಸೀದತಿ |
ತಾನ್ | ತ್ರಾಯಸ್ವ | ಸಹಸ್ಯ | ದ್ರುಹಃ | ನಿದಃ | ಯಚ್ಛ | ನಃ | ಶರ್ಮ | ದೀರ್ಘಽಶ್ರುತ್ || ೮ ||

|| ಸಾಯಣಭಾಷ್ಯಂ ||

ಯೇಷಾಂ ದುರೋಣೇ ಗೃಹೇ ಘೃತಹಸ್ತಾ | ಘೃತಯುಕ್ತೋ ಹಸ್ತೋ ಯಸ್ಯಾ ಅಸೌ ಘೃತಹಸ್ತಾ | ಘೃತೇನಾಭಿಘಾರಿತೇತ್ಯರ್ಥಃ | ಇಳಾನ್ನರೂಪಾ ಹವಿರ್ಲಕ್ಷಣಾ ದೇವೀ | ಇರೇಳೇತ್ಯನ್ನನಾಮಸು ಪಾಠಾತ್ | ಪ್ರಾತಾ ಪೂರ್ಣಾ ಆ ನಿಷೀದತಿ ಆಸೀದತಿ | ಅಪೀತಿ ಪೂರಣಃ | ತಾನ್ಸ್ವವಿಷ್ಮತೋ ಯಜಮಾನಾನ್ ಹೇ ಸಹಸ್ಯ ಸಹಸೇ ಬಲಾಯ ಹಿತಾಗ್ನೇ ದ್ರುಹೋ ದ್ರೋಗ್ಧುರ್ನಿದೋ ನಿಂದಕಾಚ ಶತ್ರೋರ್ಸ್ತ್ರಾಯಸ್ವ | ನೋಽಸ್ಮಭ್ಯಂ ದೀರ್ಘಶ್ರುತ್ ದೀರ್ಘಕಾಲಂ ಶ್ರೋತವ್ಯಂ ಶರ್ಮ ಸುಖಂ ಗೃಹಂ ವಾ ಯಚ್ಛ ಚ | ದೇಹಿ ||

|| ಪ್ರತಿಪದಾರ್ಥ ||

**ಸಹಸ್ಯ**—ಶಕ್ತಿಯುತನಾದ ಎಲೈ ಅಗ್ನಿಯೇ | **ಯೇಷಾಂ**—ಯಾವ ಯಜಮಾನರ | **ದುರೋಣೇ**—ಗೃಹದಲ್ಲಿ | **ಘೃತಹಸ್ತಾ**—ಘೃತಯುಕ್ತವಾದ ಹಸ್ತವುಳ್ಳವಳೂ | **ಇಳಾ**— ಹವಿಸ್ಸಿನರೂಪದ ಅನ್ನಸ್ವರೂಪಳೂ

ಆದ ದೇವಿಯು । **ಪ್ರಾತಾ**—ಪೂರ್ಣವಾಗಿ । **ಆ ನಿಷೀದತಿ**—ಕುಳಿತುಕೊಳ್ಳುವಳೋ । **ತಾನ್**—ಅಂತಹ ಯಜಮಾನರನ್ನು । **ದ್ರುಹಃ**—ದ್ರೋಹಿಗಳಿಂದಲೂ । **ನಿದಃ**—ನಿಂದಕರಿಂದಲೂ । **ತ್ರಾಯಸ್ವ**—ರಕ್ಷಿಸು । **ನಃ**—ನಮಗೆ । **ದೀರ್ಘಶ್ರುತ್**—ದೀರ್ಘಕಾಲ ಪ್ರಸಿದ್ಧವಾಗಿರತಕ್ಕ । **ಶರ್ಮ**—ಸುಖವನ್ನು । **ಯಚ್ಛ**—ಕೊಡು.

॥ ಭಾವಾರ್ಥ ॥

ಶಕ್ತಿಯುತನಾದ ಎಲೈ ಅಗ್ನಿಯೇ, ಯಾವ ಯಜಮಾನರ ಗೃಹದಲ್ಲಿ ಘೃತಯುಕ್ತವಾದ ಹಸ್ತವುಳ್ಳವಳೂ, ಹವಿಸ್ಸಿನ ರೂಪದ ಅನ್ನಸ್ವರೂಪಳೂ ಆದ ದೇವಿಯು ಪೂರ್ಣವಾಗಿ ಕುಳಿತುಕೊಳ್ಳುವಳೋ ಅಂತಹ ಯಜಮಾನರನ್ನು ದ್ರೋಹಿಗಳಿಂದಲೂ, ನಿಂದಕರಿಂದಲೂ ರಕ್ಷಿಸು. ದೀರ್ಘಕಾಲ ಪ್ರಸಿದ್ಧವಾಗಿರತಕ್ಕ ಸುಖವನ್ನು ಕೊಡು.

English Translation.

Strength-bestowing Agni, protect from the oppressor and the revilers those in whose dwelling Ila, butter-handed, sits down satisfied, and grant to us felicity long renowned.

॥ ಸಂಹಿತಾಪಾಠಃ ॥

ಸ ಮಂದ್ರಯಾ ಚ ಜಿಹ್ವಯಾ ವಹ್ನಿರಾಸಾ ವಿದುಷ್ಟರಃ ।
ಅಗ್ನೇ ರಯಿಂ ಮಘವದ್ಭ್ಯೋ ನ ಆ ವಹ ಹವ್ಯದಾತಿಂ ಚ ಸೂದಯ ॥೯॥

॥ ಪದಪಾಠಃ ॥

ಸಃ । ಮಂದ್ರಯಾ । ಚ । ಜಿಹ್ವಯಾ । ವಹ್ನಿಃ । ಆಸಾ । ವಿದುಃऽತರಃ ।
ಅಗ್ನೇ । ರಯಿಂ । ಮಘವತ್ऽಭ್ಯಃ । ನಃ । ಆ । ವಹ । ಹವ್ಯऽದಾತಿಂ । ಚ । ಸೂದಯ ॥ ೯ ॥

॥ ಸಾಯಣಭಾಷ್ಯಂ ॥

ಹೇ ಅಗ್ನೇ ಮಂದ್ರಯಾ ಚ ಮೋದಯಿತ್ರ್ಯಾ ದೇವಾನಾಮಾಸಾಸ್ಯಸ್ಥಾನೀಯಯಾ ಜಿಹ್ವಯಾ ಜ್ವಾಲಯಾ ವಹ್ನಿರ್ಹವಿಷಾಂ ವೋಢಾ ವಿದುಷ್ಟರೋ ವಿದ್ವತ್ತರಃ ಸ ಪ್ರಸಿದ್ಧಸ್ತ್ವಂ ಮಘವದ್ಭ್ಯೋ ಹವಿಷ್ಮದ್ಭ್ಯೋ ನೋऽಸ್ಮಭ್ಯಂ ರಯಿಂ ಧನಮಾ ವಹ ಚ । ಹವ್ಯದಾತಿಂ । ಹವ್ಯಾನಿ ದದಾತೀತಿ ಹವ್ಯದಾತಿರ್ಯಜಮಾನಃ । ತಂ । ತಥಾ ಚ ವಾಜಸನೇಯಿನ ಆಮನಂತಿ । ಯಜಮಾನೋ ವೈ ಹವ್ಯ-ದಾತಿಃ । ಶತ. ಬ್ರಾ. ೧-೪-೧-೨೪ । ಇತಿ । ಸೂದಯ ಚ । ಕರ್ಮಸು ಪ್ರೇರಯ ಚ ॥

। ಪ್ರತಿಪದಾರ್ಥ ।

**ಅಗ್ನೇ**—ಎಲೈ ಅಗ್ನಿಯೇ । **ಮಂದ್ರಯಾ**—ದೇವತೆಗಳನ್ನು ತೃಪ್ತಿಪಡಿಸತಕ್ಕದ್ದೂ । **ಜಿಹ್ವಯಾ**—ಜ್ವಾಲಾರೂಪವಾದುದೂ ಆದ । **ಆಸಾ**—ಮುಖದಿಂದ । **ವಹ್ನಿಃ**—ಹವಿಸ್ಸನ್ನು ವಹಿಸುವವನೂ । **ವಿದುಷ್ಟರಃ**—

ಅತಿಶಯವಾದ ಜ್ಞಾನಿಯೂ ಆದ । **ಸಃ**—ನೀನು । **ಮಘವದ್ಭ್ಯಃ**—ಹವಿಸ್ಸಿನ ರೂಪದ ಧನವಂತರಾದ । **ನಃ**—ನಮಗೆ । **ರಯಿಂ**—ಧನವನ್ನು । **ಆ ವಹ**—ತಂದುಕೊಡು । **ಹವ್ಯದಾತಿಂ ಚ**—ಹವಿಸ್ಸನ್ನರ್ಪಿಸುವ ಯಜಮಾನನನ್ನೂ । **ಸೂದಯ**—ಕರ್ಮಕ್ಕಾಗಿ ಪ್ರೇರಿಸು.

॥ ಭಾವಾರ್ಥ ॥

ಎಲೈ ಅಗ್ನಿಯೇ, ದೇವತೆಗಳನ್ನು ತೃಪ್ತಿಪಡಿಸತಕ್ಕದ್ದೂ, ಜ್ವಾಲಾರೂಪವುಳ್ಳದ್ದೂ ಆದ ಮುಖದಿಂದ ಹವಿಸ್ಸನ್ನು ವಹಿಸುವವನೂ ಅತಿಶಯವಾದ ಜ್ಞಾನಿಯೂ ಆದ ನೀನು ಹವಿಸ್ಸಿನ ರೂಪದ ಧನವನ್ನು ಹೊಂದಿರುವ ನಮಗೆ ಸಂಪತ್ತನ್ನು ಕೊಡು. ಹವಿಪ್ರದನಾದ ಯಜಮಾನನನ್ನು ಕರ್ಮಕ್ಕಾಗಿ ಪ್ರೇರಿಸು.

## English Translation.

The most wise Agni is the bearer (of oblations), as the mouth of the gods with his graceful tongue (of flame): bring riches, Agni, to the affluent (in sacrifices) : encourage the donor of the oblation.

॥ ಸಂಹಿತಾಪಾಠಃ ॥

ಯೇ ರಾಧಾಂಸಿ ದದತ್ಯಶ್ವ್ಯಾ ಮಘಾ ಕಾಮೇನ ಶ್ರವಸೋ ಮಹಃ ।
ತಾꣳ ಅಂಹಸಃ ಪಿಪೃಹಿ ಪರ್ತೃಭಿಷ್ಟ್ವಂ ಶತಂ ಪೂರ್ಭಿರ್ಯವಿಷ್ಠ್ಯ ॥ ೧೦ ॥

॥ ಪದಪಾಠಃ ॥

ಯೇ । ರಾಧಾಂಸಿ । ದದತಿ । ಅಶ್ವ್ಯಾ । ಮಘಾ । ಕಾಮೇನ । ಶ್ರವಸಃ । ಮಹಃ ।
ತಾನ್ । ಅಂಹಸಃ । ಪಿಪೃಹಿ । ಪರ್ತೃಽಭಿಃ । ತ್ವಂ । ಶತಂ । ಪೂಃಽಭಿಃ । ಯವಿಷ್ಠ್ಯ ॥ ೧೦ ॥

॥ ಸಾಯಣಭಾಷ್ಯಂ ॥

ಹೇ ಯವಿಷ್ಠ್ಯ ಯುವತಮಾಗ್ನೇ ತ್ವಂ ಯಜಮಾನಾ ಮಹೋ ಮಹತಃ ಶ್ರವಸೋ ಯಶಸಃ ಕಾಮೇನೇಚ್ಛಯಾ । ಯಶಸ್ಕಾಮಾಃ ಸಂತ ಇತ್ಯರ್ಥಃ । ರಾಧಾಂಸಿ ಸಾಧಕಾನ್ಯಶ್ವ್ಯಾಶ್ವಾತ್ಮಕಾನಿ ಮಘಾ ಮಘಾನಿ ದದತಿ ತಾನ್ಯಾತ್ಯಾನಂಹಸಃ ಪಾಪಾತ್ ಶತ್ರೋರ್ವಾ ಪರ್ತೃಭೀ ರಕ್ಷಾಸಾಧನಭೂತೈಃ ಶತಮಪರಿಮಿತಾಭಿಃ ಪೂರ್ಭಿರ್ನಗರೀಭಿಶ್ಚ ಪಿಪೃಹಿ । ಪಾಲಯ ॥

॥ ಪ್ರತಿಪದಾರ್ಥ ॥

**ಯವಿಷ್ಠ್ಯ**—ಅತ್ಯಂತ ಯುವಕನಾದ ಎಲೈ ಅಗ್ನಿಯೇ । **ಯೇ**—ಯಾವ ಯಜಮಾನರು । **ಮಹಃ**—ಮಹತ್ತಾದ । **ಶ್ರವಸಃ**—ಯಶಸ್ಸಿಗೆ ಪಾತ್ರರಾಗಬೇಕೆಂದು । **ಕಾಮೇನ**—ಅಪೇಕ್ಷಿಸಿ । **ರಾಧಾಂಸಿ**—

ಧನಗಳನ್ನೂ । **ಅಶ್ವ್ಯಂ**—ಅಶ್ವಗಳನ್ನೂ । **ಮಘಂ**—ಅನರ್ಘವಾದ ವಸ್ತುಗಳನ್ನೂ । **ದದತಿ**—ಕೊಡುವರೋ । **ತಾನ್**—ಅಂತಹ ದಾತೃಗಳನ್ನು । **ಅಂಹಸಃ**—ಪಾಪರೂಪಿಯಾದ ಶತ್ರುವಿನ ದೆಸೆಯಿಂದ । **ಪರ್ತೃಭಿಃ**—ರಕ್ಷಣಾಯೋಗ್ಯವಾದವೂ । **ಶತಂ**—ಅಧಿಕ ಸಂಖ್ಯೆಯುಳ್ಳವೂ ಆದ । **ಪೂರ್ಭಿಃ**—ನಗರ (ಗಳಿಂದ) ಗಳ ಪ್ರದಾನ ದಿಂದ । **ತ್ವಂ**—ನೀನು । **ಪಿಪೃಹಿ**—ಪಾಲಿಸು.

॥ ಭಾವಾರ್ಥ ॥

ಅತ್ಯಂತ ಯುವಕನಾದ ಎಲೈ ಅಗ್ನಿಯೇ, ಯಾವ ಯಜಮಾನರು ಮಹತ್ತಾದ ಯಶಸ್ಸಿಗೆ ಪಾತ್ರರಾಗಬೇಕೆಂದು ಅಪೇಕ್ಷಿಸಿ ಧನಗಳನ್ನೂ, ಅಶ್ವಗಳನ್ನೂ ಅನರ್ಘವಾದ ವಸ್ತುಗಳನ್ನೂ ದಾನಮಾಡುವರೋ, ಅಂತಹ ದಾತೃಗಳನ್ನು ಪಾಪರೂಪಿಯಾದ ಶತ್ರುವಿನ ದೆಸೆಯಿಂದ ರಕ್ಷಣಾಯೋಗ್ಯವಾದವೂ, ಅಧಿಕಸಂಖ್ಯೆಯುಳ್ಳವೂ ಆದ ನಗರಗಳ ಪ್ರದಾನದಿಂದ ಪಾಲಿಸು.

## English Translation.

Youngest (of the gods), protect with your protections from inquity, (and reward) with numerous cities those who, through the desire of extended fame, bestow riches, comprehending horses and treasure.

॥ ಸಂಹಿತಾಪಾಠಃ ॥

ದೇವೋ ವೋ ದ್ರವಿಣೋದಾಃ ಪೂರ್ಣಾಂ ವಿವಷ್ಟ್ಯಾಸಿಚಂ ।
ಉದ್ವಾ ಸಿಂಚಧ್ವಮುಪ ವಾ ಪೃಣಧ್ವಮಾದಿದ್ವೋ ದೇವ ಓಹತೇ ॥ ೧೧ ॥

॥ ಪದಪಾಠಃ ॥

ದೇವಃ । ವಃ । ದ್ರವಿಣಃಽದಾಃ । ಪೂರ್ಣಾಂ । ವಿವಷ್ಟಿ । ಆಽಸಿಚಂ ।
ಉತ್ । ವಾ । ಸಿಂಚಧ್ವಂ । ಉಪ । ವಾ । ಪೃಣಧ್ವಂ । ಆತ್ । ಇತ್ । ವಃ । ದೇವಃ । ಓಹತೇ ॥ ೧೧ ॥

॥ ಸಾಯಣಭಾಷ್ಯಂ ॥

ದ್ರವಿಣೋದಾ ಧನಾನಾಂ ದಾತಾ ದೇವೋಽಗ್ನಿರ್ವೋ ಯುಷ್ಮದೀಯಾಂ ಪೂರ್ಣಾಂ ಹವಿಷಾ-ಸಿಚಮಾಸಿಕ್ತಾಂ ಸ್ರುಚಂ ವಿವಷ್ಟಿ । ಕಾಮಯತೇ । ಅತ ಉತ್ಸಿಂಚಧ್ವಂ ವಾ ಸೋಮೇನ ಪಾತ್ರಂ । ಉಪ ಪೃಣಧ್ವಂ ವಾ ಸೋಮಂ ॥ ವಾಶಬ್ದೌ ಸಮುಚ್ಚಯಾರ್ಥೌ ॥ ಧ್ರುವಗ್ರಹೇಣ ಹೋತೃಚಮಸಂ ಪೂರಯತ ಚಾಗ್ನಯೇ ಸೋಮಂ ಯಚ್ಛತ ಚೇತ್ಯರ್ಥಃ । ಆದಿದನಂತರಮೇವ ದೇವೋಽಗ್ನಿರ್ವೋ ಯುಷ್ಮಾನೋಹತೇ । ವಹತಿ ॥

॥ ಪ್ರತಿಪದಾರ್ಥ ॥

**ದ್ರವಿಣೋದಾಃ**—ಧನಪ್ರದಾತನಾದ । **ದೇವಃ**—ಅಗ್ನಿಯು । **ವಃ**—ನಿಮ್ಮ । **ಪೂರ್ಣಾಂ**—ಹವಿಸ್ಸಿನಿಂದ ಪೂರ್ಣವಾದುದೂ । **ಆಸಿಚಂ**—ಘೃತಸಿಕ್ತವಾದುದೂ ಆದ ಸ್ರುಕ್ಪಾತ್ರೆಯನ್ನು । **ವಿವಷ್ಟಿ**—ಇಚ್ಛಿಸುತ್ತಾನೆ (ಆದುದರಿಂದ) । **ವಾ ಉತ್ ಸಿಂಚಧ್ವಂ**—ಪಾತ್ರೆಯನ್ನು ಸೋಮದಿಂದ ತುಂಬಿರಿ । **ಉಪ ಪೃಣಧ್ವಂ ವಾ**—ಆ ಸೋಮವನ್ನು ಅವನಿಗೆ ಅರ್ಪಿಸಿರಿ । **ಆದಿತ್**—ಆ ಒಡನೆಯೇ । **ದೇವಃ**—ಅಗ್ನಿಯು । **ವಃ**—ನಿಮ್ಮ ಹವಿಸ್ಸುಗಳನ್ನು । **ಓಹತೇ**—ವಹಿಸುತ್ತಾನೆ.

॥ ಭಾವಾರ್ಥ ॥

ಧನಪ್ರದನಾದ ಅಗ್ನಿಯು, ನಿಮ್ಮ ಹವಿಸ್ಸಿನಿಂದ ಪೂರ್ಣವಾದುದೂ, ಘೃತಸಿಕ್ತವಾದುದೂ ಆದ ಸುಕ್ಪಾತ್ರೆಯನ್ನು ಇಚ್ಛಿಸುತ್ತಾನೆ. ಆದುದರಿಂದ ಪಾತ್ರೆಯನ್ನು ಸೋಮದಿಂದ ತುಂಬಿರಿ. ಆ ಸೋಮವನ್ನು ಅವನಿಗೆ ಅರ್ಪಿಸಿರಿ. ಆ ಒಡನೆಯೇ, ಅಗ್ನಿಯು ನಿಮ್ಮ ಹವಿಸ್ಸುಗಳನ್ನು ವಹಿಸುತ್ತಾನೆ.

## English Translation.

The divine Agni, the giver of wealth, desires the ladle filled full. Pour out (the contents), and replenish (the vessel), and then the deity bears (your oblations to the gods).

॥ ಸಂಹಿತಾಪಾಠಃ ॥

ತಂ ಹೋತಾರಮಧ್ವರಸ್ಯ ಪ್ರಚೇತಸಂ ವಹ್ನಿಂ ದೇವಾ ಅಕೃಣ್ವತ ।
ದಧಾತಿ ರತ್ನಂ ವಿಧತೇ ಸುವೀರ್ಯಮಗ್ನಿರ್ಜನಾಯ ದಾಶುಷೇ ॥ ೧೨ ॥

॥ ಪದಪಾಠಃ ॥

ತಂ । ಹೋತಾರಂ । ಅಧ್ವರಸ್ಯ । ಪ್ರಽಚೇತಸಂ । ವಹ್ನಿಂ । ದೇವಾಃ । ಅಕೃಣ್ವತ ।
ದಧಾತಿ । ರತ್ನಂ । ವಿಧತೇ । ಸುಽವೀರ್ಯಂ । ಅಗ್ನಿಃ । ಜನಾಯ । ದಾಶುಷೇ ॥ ೧೨ ॥

॥ ಸಾಯಣಭಾಷ್ಯಂ ॥

ದೇವಾಃ ಪ್ರಚೇತಸಂ ಪ್ರಕೃಷ್ಟಮತಿಮಗ್ನಿಮಧ್ವರಸ್ಯ ಯಜ್ಞಸ್ಯ ವಹ್ನಿಂ ವೋಢಾರಂ ಹೋತಾರಂ ಚಾಕೃಣ್ವತ । ಅಕುರ್ವನ್ । ಕಿಮರ್ಥಮಿತ್ಯತ ಆಹ । ಸ ಚಾಗ್ನಿರ್ವಿಧತೇ ಪರಿಚರತೇ ದಾಶುಷೇ ಹವಿಷಾಂ ಪ್ರದಾತ್ರೇ ಜನಾಯ ಸುವೀರ್ಯಂ ಶೋಭನವೀರ್ಯೋಪೇತಂ ರತ್ನಂ ರಮಣೀಯಂ ಧನಂ ದಧಾತಿ । ದದಾತೀತ್ಯರ್ಥಃ ॥

॥ ಪ್ರತಿಪದಾರ್ಥ ॥

**ದೇವಾಃ**—ದೇವತೆಗಳು । **ಪ್ರಚೇತಸಂ ತಂ**—ಉತ್ಕೃಷ್ಟವಾದ ಜ್ಞಾನವುಳ್ಳ ಅಗ್ನಿಯನ್ನು । **ಅಧ್ವರಸ್ಯ**—ಯಜ್ಞದ । **ವಹ್ನಿಂ**—ವಾಹಕನನ್ನಾಗಿಯೂ । **ಹೋತಾರಂ**—ಹೋತೃವನ್ನಾಗಿಯೂ । **ಅಕೃಣ್ವತ**—ಮಾಡಿದ್ದಾರೆ । **ಅಗ್ನಿಃ**—ಅದೇ ಅಗ್ನಿಯು । **ವಿಧತೇ**—ಅವನನ್ನು ಪೂಜಿಸತಕ್ಕವನೂ । **ದಾಶುಷೇ**—ಹವಿಸ್ಸನ್ನರ್ಪಿಸುವವನೂ ಆದ । **ಜನಾಯ**—ಯಜಮಾನನಿಗೆ । **ಸುವೀರ್ಯಂ**—ಉತ್ತಮವಾದ ಶಕ್ತಿಯಿಂದ ಕೂಡಿದ । **ರತ್ನಂ**—ಧನವನ್ನು । **ದಧಾತಿ**—ಕೊಡುತ್ತಾನೆ.

॥ ಭಾವಾರ್ಥ ॥

ದೇವತೆಗಳು ಉತ್ಕೃಷ್ಟವಾದ ಜ್ಞಾನವುಳ್ಳ ಅಗ್ನಿಯನ್ನು ಯಜ್ಞವಾಹಕನನ್ನಾಗಿಯೂ ಹೋತೃವನ್ನಾಗಿಯೂ ಮಾಡಿದ್ದಾರೆ. ಅದೇ ಅಗ್ನಿಯು ತನ್ನನ್ನು ಪೂಜಿಸತಕ್ಕವನೂ ಹವಿಸ್ಸನ್ನರ್ಪಿಸುವವನೂ ಆದ ಯಜಮಾನನಿಗೆ ಉತ್ತಮವಾದ ಶಕ್ತಿಯಿಂದ ಕೂಡಿದ ಧನವನ್ನು ಕೊಡುತ್ತಾನೆ.

## English Translation.

The gods have made the wise (Agni) the ministrant priest, and bearer of the sacrifice. Agni gives to the man who performs the prescribed rite and presents (the offering), wealth, virtuous male posterity.



# ಹದಿನೇಳನೆಯ ಸೂಕ್ತವು

॥ ಸಾಯಣಭಾಷ್ಯಂ ॥

**ಅಗ್ನೇ ಭವ ಸುಷಮಿಧೇತಿ ಸಪ್ತರ್ಚಂ ಸಪ್ತದಶಂ ಸೂಕ್ತಂ ವಸಿಷ್ಠಸ್ಯಾರ್ಷಮಗ್ನಿದೇವತಾಕಂ । ಸಪ್ತಾಪಿ ದ್ವಿಪದಾಸ್ತ್ರಿಷ್ಟುಭಃ । ತಥೈವಾನುಕ್ರಮ್ಯತೇ । ಅಗ್ನೇ ಭವ ಸಪ್ತ ದ್ವೈಪದಂ ತ್ರೈಷ್ಟುಭಮಿತಿ ॥ ಅತಿರಾತ್ರೇ ಷಷ್ಠೇಽಹನಿ ತೃತೀಯಸವನೇ ಮೈತ್ರಾವರುಣಶಸ್ತ್ರೇಽಗ್ನೇ ಭವೇತಿ ತೃಚೋಽನುರೂಪಃ । ಸೂತ್ರ್ಯತೇ ಹಿ । ಅಗ್ನೇ ತ್ವಂ ನೋಽನ್ತಮೋಽಗ್ನೇ ಭವ ಸುಷಮಿಧಾ ಸಮಿದ್ಧ ಇತಿ ಸ್ತೋತ್ರಿಯಾನುರೂಪೌ । ಆ. ೮-೨ । ಇತಿ ॥**

ಅನುವಾದವು—**ಅಗ್ನೇ ಭವ ಸುಷಮಿಧಾ** ಎಂಬ ಈ ಸೂಕ್ತವು ಮೊದಲನೆಯ ಅನುವಾಕದಲ್ಲಿ ಹದಿನೇಳನೆಯ ಸೂಕ್ತವು. ಇದರಲ್ಲಿ ಏಳು ಋಕ್ಕುಗಳಿರುವವು. ಈ ಸೂಕ್ತಕ್ಕೆ ವಸಿಷ್ಠನು ಋಷಿಯು ; ಅಗ್ನಿಯು ದೇವತೆಯು ; ಈ ಸೂಕ್ತದ ಏಳು ಋಕ್ಕುಗಳೂ ದ್ವಿಪದಾತ್ರಿಷ್ಟುಪ್ ಎಂಬ ಛಂದಸ್ಸಿನವು. ಅನುಕ್ರಮಣಿಕೆಯಲ್ಲಿ—**ಅಗ್ನೇ ಭವ ಸಪ್ತ ದ್ವೈಪದಂ ತ್ರೈಷ್ಟುಭಂ** ಎಂದು ಹೇಳಿರುವುದು. ಅತಿರಾತ್ರವೆಂಬ ಯಾಗದ ಆರನೆಯ ದಿವಸ ತೃತೀಯಸವನ

ಕಾಲದಲ್ಲಿ ಮೈತ್ರಾವರುಣನೆಂಬ ಋತ್ವಿಜನು ಪಠಿಸುವ ಶಸ್ತ್ರಮಂತ್ರಗಳಲ್ಲಿ—**ಅಗ್ನೇ ಭವ** ಎಂಬ ಋಕ್ಕನ್ನು ಅನುರೂಪ ಮಂತ್ರವನ್ನಾಗಿ ಪಠಿಸಬೇಕೆಂದು ಆಶ್ವಲಾಯನಶ್ರೌತಸೂತ್ರದ—**ಅಗ್ನೇ ತ್ವಂ ನೋಽನ್ತಮೋಽಗ್ನೇ ಭವ ಸುಷಮಿಧಾ ಸಮಿದ್ಧ ಇತಿ ಸ್ತೋತ್ರಿಯಾನುರೂಪೌ** ಎಂಬ ಸೂತ್ರದಿಂದ (ಆ. ೮–೨) ವಿವೃತವಾಗಿರುವುದು.

## ಸೂಕ್ತ—೭

ಮಂಡಲ—೭ ॥ ಅನುವಾಕ—೧ ॥ ಸೂಕ್ತ—೧೮ ॥
ಅಷ್ಟಕ—೫ ॥ ಅಧ್ಯಾಯ—೨ ॥ ವರ್ಗ—೨೩ ॥

॥ ಸೂಕ್ತದಲ್ಲಿರುವ ಋಕ್ಸಂಖ್ಯೆ—೭ ॥
॥ ಋಷಿಃ—ವಸಿಷ್ಠಃ ॥
॥ ದೇವತಾ—ಅಗ್ನಿಃ ॥
॥ ಛಂದಃ—ದ್ವಿಪದಾ ತ್ರಿಷ್ಟುಪ್ ॥

॥ ಸಂಹಿತಾಪಾಠಃ ॥

ಅಗ್ನೇ ಭವ ಸುಷಮಿಧಾ ಸಮಿದ್ಧ ಉತ ಬರ್ಹಿರುರ್ವಿಯಾ ವಿ ಸ್ತೃಣೀತಾಂ॥

॥ ಪದಪಾಠಃ ॥

ಅಗ್ನೇ । ಭವ । ಸುಽಸಮಿಧಾ । ಸಂಽಇದ್ಧಃ । ಉತ । ಬರ್ಹಿಃ । ಉರ್ವಿಯಾ । ವಿ । ಸ್ತೃಣೀತಾಂ ॥ ೧ ॥

॥ ಸಾಯಣಭಾಷ್ಯಂ ॥

**ಹೇ ಅಗ್ನೇ ಸುಷಮಿಧಾ ಶೋಭನಯಾ ಸಮಿಧಾ ಸಮಿದ್ಧೋ ಭವ । ಸಮ್ಯಕ್ ದೀಪ್ತೋ ಭವ । ಉತಾಪಿ ಚ ಬರ್ಹಿರುರ್ವಿಯಾ ವಿಸ್ತೀರ್ಣಮುಪಸ್ತೃಣೀತಾಮಧ್ವರ್ಯುಃ ॥**

॥ ಪ್ರತಿಪದಾರ್ಥ ॥

**ಅಗ್ನೇ**—ಎಲೈ ಅಗ್ನಿಯೇ । **ಸುಷಮಿಧಾ**—ಉತ್ತಮವಾದ ಸಮಿತ್ತುಗಳಿಂದ । **ಸಮಿದ್ಧಃ**—ಪ್ರಜ್ವಲಿತನಾಗಿ । **ಭವ**—ಆಗು । **ಉತ**—ಮತ್ತು । **ಬರ್ಹಿಃ**—ದರ್ಭಾಸನವನ್ನು । **ಉರ್ವಿಯಾ**—ವಿಸ್ತೃತವಾಗಿ । **ವಿ ಸ್ತೃಣೀತಾಂ**—ಹರಡಿ ಸಿದ್ಧಮಾಡಿರಿ.

॥ ಭಾವಾರ್ಥ ॥

ಎಲೈ ಅಗ್ನಿಯೇ, ಉತ್ತಮವಾದ ಸಮಿತ್ತುಗಳಿಂದ ಪ್ರಜ್ವಲಿತನಾಗು. ಎಲೈ ಅಧ್ವರ್ಯುವೇ, ದರ್ಭಾಸನವನ್ನು ವಿಸ್ತೃತವಾಗಿ ಹರಡಿ ಸಿದ್ಧಮಾಡು.

### English Translation.

Be kindled, Agni, with suitable fuel: let the (priest) strew the plentiful sacred grass.

|| ಸಂಹಿತಾಪಾಠಃ ||

ಉತ ದ್ವಾರ ಉಶತೀರ್ವಿ ಶ್ರಯಂತಾಮುತ ದೇವಾँ ಉಶತ ಆ ವಹೇಹ||೨||

|| ಪದಪಾಠಃ ||

ಉತ | ದ್ವಾರಃ | ಉಶತೀಃ | ವಿ | ಶ್ರಯಂತಾಂ | ಉತ | ದೇವಾನ್ | ಉಶತಃ | ಆ | ವಹ | ಇಹ || ೨ ||

|| ಸಾಯಣಭಾಷ್ಯಂ ||

ಉತಾಪಿ ಚೋಶತೀರ್ದೇವಾನ್ ಕಾಮಯಮಾನಾ ದ್ವಾರೋ ಯಜ್ಞಗೃಹಸ್ಯ ದೇವ್ಯೋ ವಾ | ತಥಾ ಚ ಯಾಸ್ಕಃ | ದ್ವಾರೋ ಜವತೇರ್ವಾ ದ್ರವತೇರ್ವಾ ವಾರಯತೇರ್ವಾ | ನಿ. ೮-೯ | ಇತಿ | ವಿ ಶ್ರಯಂತಾಂ | ಉತಾಪಿ ಚೋಶತೋ ಯಜ್ಞಂ ಕಾಮಯಮಾನಾನ್ದೇವಾನಿಹ ಯಜ್ಞ ಆ ವಹ ||

|| ಪ್ರತಿಪದಾರ್ಥ ||

**ಉತ**—ಮತ್ತು | **ಉಶತೀಃ**—ದೇವತೆಗಳನ್ನು ಅಪೇಕ್ಷಿಸುವ | **ದ್ವಾರಃ**—ಯಜ್ಞಗೃಹದ್ವಾರಗಳು | **ವಿ ಶ್ರಯಂತಾಂ**—ತೆರೆಯಲಿ | **ಉತ**—ಮತ್ತು | **ಉಶತಃ**—ಯಜ್ಞಾಪೇಕ್ಷಿಗಳಾದ | **ದೇವಾನ್**—ದೇವತೆಗಳನ್ನು | **ಇಹ**—ಈ ಯಜ್ಞಕ್ಕೆ | **ಆ ವಹ**—ಕರೆದುಕೊಂಡು ಬಾ.

|| ಭಾವಾರ್ಥ ||

ದೇವತೆಗಳನ್ನು ಪೂಜೆಗಾಗಿ ಅಪೇಕ್ಷಿಸುವ ಯಜ್ಞಗೃಹ ದ್ವಾರಗಳು ಪೂರ್ಣವಾಗಿ ತೆರೆಯಲ್ಪಡಲಿ. ಮತ್ತು ಎಲೈ ಅಗ್ನಿಯೇ ಯಜ್ಞಾಪೇಕ್ಷಿಗಳಾದ ದೇವತೆಗಳನ್ನು ಈ ಯಜ್ಞಕ್ಕೆ ಕರೆದುಕೊಂಡು ಬಾ.

English Translation.

Let the willing doors (of the chamber of sacrifice) be thrown open ; bring hither the willing gods.

|| ಸಂಹಿತಾಪಾಠಃ ||

ಅಗ್ನೇ ವೀಹಿ ಹವಿಷಾ ಯಕ್ಷಿ ದೇವಾನ್ತ್ಸ್ವಧ್ವರಾ ಕೃಣುಹಿ ಜಾತವೇದಃ ||

|| ಪದಪಾಠಃ ||

ಅಗ್ನೇ | ವೀಹಿ | ಹವಿಷಾ | ಯಕ್ಷಿ | ದೇವಾನ್ | ಸುऽಅಧ್ವರಾ | ಕೃಣುಹಿ | ಜಾತऽವೇದಃ || ೩ ||

|| ಸಾಯಣಭಾಷ್ಯಂ ||

ಹೇ ಜಾತವೇದೋ ಜಾತಧನಾಗ್ನೇ ವೀಹಿ | ದೇವಾನಭಿಗಚ್ಛ | ಹವಿಷಾ ದೇವಾನ್ಯಕ್ಷಿ | ಯಜ ಚ | ಸ್ವಧ್ವರಾ ಸ್ವಧ್ವರಾನ್ ಶೋಭನಯಜ್ಞಾಂಶ್ಚ ಕೃಣುಹಿ | ಕುರು ||

॥ ಪ್ರತಿಪದಾರ್ಥ ॥

**ಜಾತವೇದಃ**—ಜಾತಪ್ರಜ್ಞನಾದ। **ಅಗ್ನೇ**—ಎಲೈ ಅಗ್ನಿಯೇ। **ವೀಹಿ**—ದೇವತೆಗಳನ್ನು ಸಮೀಪಿಸು। **ಹವಿಷಾ**—ಹವಿಸ್ಸಿನಿಂದ। **ದೇವಾನ್**—ದೇವತೆಗಳನ್ನು। **ಯಕ್ಷಿ**—ಪೂಜಿಸು। **ಸ್ವಧ್ವರಾ**—ಉತ್ತಮವಾದ ಯಜ್ಞವುಳ್ಳವರನ್ನಾಗಿ। **ಕೃಣುಹಿ**—ಮಾಡು

॥ ಭಾವಾರ್ಥ ॥

ಜಾತಪ್ರಜ್ಞನಾದ ಎಲೈ ಅಗ್ನಿಯೇ, ದೇವತೆಗಳನ್ನು ಸಮೀಪಿಸು. ಹವಿಸ್ಸಿನಿಂದ ದೇವತೆಗಳನ್ನು ಪೂಜಿಸು. ಅವರನ್ನು ಉತ್ತಮವಾದ ಯಜ್ಞವುಳ್ಳವರನ್ನಾಗಿ ಮಾಡು.

English Translation.

Agni Jatavedas, repair to the gods, worship them with the oblation, render them pleased by the sacrifice.

॥ ಸಂಹಿತಾಪಾಠಃ ॥

ಸ್ವಧ್ವರಾ ಕರತಿ ಜಾತವೇದಾ ಯಕ್ಷದ್ದೇವಾँ ಅಮೃತಾನ್ಪಿಪ್ರಯಚ್ಚ ॥ ೪ ॥

॥ ಪದಪಾಠಃ ॥

ಸುऽಅಧ್ವರಾ । ಕರತಿ । ಜಾತऽವೇದಾಃ । ಯಕ್ಷತ್ । ದೇವಾನ್ । ಅಮೃತಾನ್ । ಪಿಪ್ರಯತ್ । ಚ ॥೪॥

॥ ಸಾಯಣಭಾಷ್ಯಂ ॥

**ಜಾತವೇದಾ ಜಾತಧನೋಽಗ್ನಿರಮೃತಾನ್ಮರಣರಹಿತಾನ್ದೇವಾನ್ ಸ್ವಧ್ವರಾ ಸ್ವಧ್ವರಾನ್ ಶೋಭನಯಜ್ಞಾನ್ ಕರತಿ । ಕರೋತು । ಯಕ್ಷತ್ । ಹವಿಷಾ ಯಜತು ಚ । ಪಿಪ್ರಯತ್ । ಸ್ತೋತ್ರೈಃ ಪ್ರೀಣಯತು ಚ ॥**

॥ ಪ್ರತಿಪದಾರ್ಥ ॥

**ಜಾತವೇದಾಃ**—ಜಾತಪ್ರಜ್ಞನಾದ ಅಗ್ನಿಯು। **ಅಮೃತಾನ್**—ಮರಣಧರ್ಮರಹಿತರಾದ। **ದೇವಾನ್**—ದೇವತೆಗಳನ್ನು। **ಸ್ವಧ್ವರಾ**—ಉತ್ತಮವಾದ ಯಜ್ಞವುಳ್ಳವರನ್ನಾಗಿ। **ಕರತಿ**—ಮಾಡಲಿ। **ಯಕ್ಷತ್**—ಹವಿಸ್ಸಿನಿಂದ ಅವರನ್ನು ಪೂಜಿಸಲಿ। **ಪಿಪ್ರಯತ್ ಚ**—ಸ್ತೋತ್ರಗಳಿಂದ ಅವರನ್ನು ತೃಪ್ತಿಪಡಿಸಲಿ.

॥ ಭಾವಾರ್ಥ ॥

ಜಾತಪ್ರಜ್ಞನಾದ ಅಗ್ನಿಯು ಮರಣಧರ್ಮರಹಿತರಾದ ದೇವತೆಗಳನ್ನು ಉತ್ತಮವಾದ ಯಜ್ಞವುಳ್ಳವರನ್ನಾಗಿ ಮಾಡಲಿ. ಹವಿಸ್ಸಿನಿಂದ ಅವರನ್ನು ಪೂಜಿಸಲಿ. ಸ್ತೋತ್ರಗಳಿಂದ ಅವರನ್ನು ತೃಪ್ತಿಪಡಿಸಲಿ.

English Translation.

May Jatavedas render the immortal gods pleased by the sacrifice: let him sacrifice (to them), and gratify them (with praise).

॥ ಸಂಹಿತಾಪಾಠಃ ॥

ವಂಸ್ವ ವಿಶ್ವಾ ವಾರ್ಯಾಣಿ ಪ್ರಚೇತಃ ಸತ್ಯಾ ಭವಂತ್ವಾಶಿಷೋ ನೋ ಅದ್ಯ॥

॥ ಪದಪಾಠಃ ॥

ವಂಸ್ವ । ವಿಶ್ವಾ । ವಾರ್ಯಾಣಿ । ಪ್ರಚೇತ ಇತಿ ಪ್ರಽಚೇತಃ । ಸತ್ಯಾಃ । ಭವಂತು । ಆಽಶಿಷಃ । ನಃ । ಅದ್ಯ॥

॥ ಸಾಯಣಭಾಷ್ಯಂ ॥

ಹೇ ಪ್ರಚೇತಃ ಪ್ರಕೃಷ್ಟಮತಿಮನ್ನಗ್ನೇ ವಿಶ್ವಾ ವಿಶ್ವಾನಿ ವಾರ್ಯಾಣಿ ವರಣೀಯಾನಿ ಧನಾನಿ ವಂಸ್ವ । ಅಸ್ಮಭ್ಯಂ ದೇಹಿ । ನೋಽಸ್ಮಾಕಮಾಶಿಷೋಽದ್ಯ ಸತ್ಯಾ ಯಾಥಾರ್ಥಾ ಭವಂತು ॥

॥ ಪ್ರತಿಪದಾರ್ಥ ॥

ಪ್ರಚೇತಃ—ಉತ್ತಮವಾದ ಜ್ಞಾನವುಳ್ಳ ಎಲೈ ಅಗ್ನಿಯೇ । ವಾರ್ಯಾಣಿ—ಎಲ್ಲರಿಂದಲೂ ಅಪೇಕ್ಷಿತವಾದ । ವಿಶ್ವಾ—ಸಮಸ್ತ ಧನಗಳನ್ನೂ । ವಂಸ್ವ—ನಮಗೆ ಕೊಡು । ನಃ—ನಮ್ಮ ವಿಷಯದಲ್ಲಿ ಉಕ್ತವಾದ । ಆಶಿಷಃ—ಆಶೀರ್ವಚನಗಳು । ಅದ್ಯ—ಈಗ । ಸತ್ಯಾಃ—ಯಥಾರ್ಥವಾಗಿ । ಭವಂತು—ಆಗಿರಲಿ.

॥ ಭಾವಾರ್ಥ ॥

ಉತ್ತಮವಾದ ಜ್ಞಾನವುಳ್ಳ ಎಲೈ ಅಗ್ನಿಯೇ, ಎಲ್ಲರಿಂದಲೂ ಅಪೇಕ್ಷಿತವಾದ ಸಮಸ್ತ ಧನಗಳನ್ನೂ ನಮಗೆ ಕೊಡು. ನಮ್ಮ ವಿಷಯದಲ್ಲಿ ಉಕ್ತವಾದ ಉತ್ತಮವಾದ ಆಶೀರ್ವಚನಗಳು ಈಗ ಯಥಾರ್ಥವಾಗಿ ಆಗಿರಲಿ.

English Translation.

Bestow upon us, sage Agni, all desirable (ricbes): may the blessings (vouchsafed) to us this day be sacrificed.

॥ ಸಂಹಿತಾಪಾಠಃ ॥

ತ್ವಾಮು ತೇ ದಧಿರೇ ಹವ್ಯವಾಹಂ ದೇವಾಸೋ ಅಗ್ನ ಊರ್ಜ ಆ

ನಪಾತಂ ॥ ೬ ॥

॥ ಪದಪಾಠಃ ॥

ತ್ವಾಂ । ಊಂ ಇತಿ । ತೇ । ದಧಿರೇ । ಹವ್ಯಽವಾಹಂ । ದೇವಾಸಃ । ಅಗ್ನೇ । ಊರ್ಜಃ । ಆ । ನಪಾತಂ॥

॥ ಸಾಯಣಭಾಷ್ಯಂ ॥

ಹೇ ಅಗ್ನೇ ಊರ್ಜೋ ಬಲಸ್ಯ ನಪಾತಂ ಪುತ್ರಂ । ಸೂನುರ್ನಪಾದಿತ್ಯಪತ್ಯನಾಮಸು ಪಾಠಾತ್ । ತ್ವಾಮು ತ್ವಾಮೇವ ತೇ ಪ್ರಸಿದ್ಧಾ ದೇವಾಸೋ ದೇವಾ ಹವ್ಯವಾಹಂ ಹವಿಷೋ ವೋಢಾರಮಾ ದಧಿರೇ । ಅಕುರ್ವನ್ನಿತ್ಯರ್ಥಃ ॥

॥ ಪ್ರತಿಪದಾರ್ಥ ॥

**ಅಗ್ನೇ**—ಎಲೈ ಅಗ್ನಿಯೇ । **ಊರ್ಜಃ**—ಶಕ್ತಿಗೆ । **ನಪಾತಂ**—ಪುತ್ರನಾದ । **ತ್ವಾಮು**—ನಿನ್ನನ್ನೇ **ತೇ**—ಪ್ರಸಿದ್ಧರಾದ । **ದೇವಾಸಃ**—ದೇವತೆಗಳು । **ಹವ್ಯವಾಹಂ**—ಹವಿಸ್ಸನ್ನು ವಹಿಸುವವನನ್ನಾಗಿ । ಆ **ದಧಿರೇ**—ಹೊಂದಿದ್ದಾರೆ. (ನಿಯಮಿಸಿದ್ದಾರೆ)

॥ ಭಾವಾರ್ಥ ॥

ಎಲೈ ಅಗ್ನಿಯೇ, ಪ್ರಸಿದ್ಧರಾದ ದೇವತೆಗಳು ಶಕ್ತಿಪುತ್ರನಾದ ನಿನ್ನನ್ನೇ ಹವಿರ್ವಾಹಕನನ್ನಾಗಿ ನಿಯಮಿಸಿದ್ದಾರೆ.

English Translation.

The gods have made you, Agni, who are the son of strength, the bearer of the oblation.

॥ ಸಂಹಿತಾಪಾಠಃ ॥

ತೇ ತೇ ದೇವಾಯ ದಾಶತಃ ಸ್ಯಾಮ ಮಹೋ ನೋ ರತ್ನಾ ವಿ ದಧ ಇಯಾನಃ ॥ ೭ ॥

॥ ಪದಪಾಠಃ ॥

ತೇ । ತೇ । ದೇವಾಯ । ದಾಶತಃ । ಸ್ಯಾಮ । ಮಹಃ । ನಃ । ರತ್ನಾ । ವಿ । ದಧಃ । ಇಯಾನಃ ॥ ೭ ॥

॥ ಸಾಯಣಭಾಷ್ಯಂ ॥

ಹೇ ಅಗ್ನೇ ದೇವಾಯ ದ್ಯೋತಮಾನಾಯ ತೇ ತುಭ್ಯಂ ತೇ ಪ್ರಸಿದ್ಧಾ ವಸಿಷ್ಠಾ ವಯಂ ದಾಶತೋ ಹವೀಂಷಿ ದದತಃ ಸ್ಯಾಮ । ಭವೇಮ । ಅತೋ ಮಹೋ ಮಹಾಂಸ್ತ್ವಮಿಯಾನ ಉಪಗಮ್ಯಮಾನೋ ಯಾಚ್ಯಮಾನೋ ವಾ ನೋಽಸ್ಮಭ್ಯಂ ರತ್ನಾ ರತ್ನಾನಿ ರಮಣೀಯಾನಿ ಧನಾನಿ ವಿ ದಧಃ । ವಿಧತ್ಸ್ವ ॥

॥ ಪ್ರತಿಪದಾರ್ಥ ॥

(ಎಲೈ ಅಗ್ನಿಯೇ) **ದೇವಾಯ**—ಪ್ರಕಾಶಮಾನನಾದ। **ತೇ**—ನಿನ್ನನ್ನುದ್ದೇಶಿಸಿ। **ತೇ**—ಪ್ರಸಿದ್ಧರಾದ ವಸಿಷ್ಠವಂಶಸ್ಥರು (ನಾವು)। **ದಾಶತಃ**—ಹವಿಸ್ಸನ್ನು ಅರ್ಪಿಸುವವರಾಗಿ। **ಸ್ಯಾಮ**—ಇರುವಂತಾಗಲಿ। **ಮಹಃ**—ಮಹಾತ್ಮನಾದ ನೀನು। **ಇಯಾನಃ**—ನಮ್ಮಿಂದ ಯಾಚಿಸಲ್ಪಟ್ಟವನಾಗಿ। **ನಃ**—ನಮಗೆ। **ರತ್ನಾ**—ರಮಣೀಯವಾದ ಧನಗಳನ್ನು। **ವಿ ದಧಃ**—ಒದಗಿಸು.

॥ ಭಾವಾರ್ಥ ॥

ಎಲೈ ಅಗ್ನಿಯೇ, ಪ್ರಕಾಶಮಾನನಾದ ನಿನ್ನನ್ನುದ್ದೇಶಿಸಿ ಪ್ರಸಿದ್ಧರೂ ವಸಿಷ್ಠವಂಶೋತ್ಪನ್ನರೂ ಆದ ನಾವು ಹವಿಸ್ಸನ್ನು ಅರ್ಪಿಸುವಂತಾಗಲಿ. ಮಹಾತ್ಮನಾದ ನೀನು ನಮ್ಮಿಂದ ಯಾಚಿಸಲ್ಪಟ್ಟವನಾಗಿ ನಮಗೆ ರಮಣೀಯವಾದ ಧನಗಳನ್ನು ಒದಗಿಸು.

English Translation.

May we be the presenters (of offerings) to you who are divine: and you, the mighty one, being solicited, bestow upon us treasures.



# ಹದಿನೆಂಟನೆಯ ಸೂಕ್ತವು

॥ ಸಾಯಣಭಾಷ್ಯಂ ॥

**ದ್ವಿತೀಯೇಽನುವಾಕೇ ಷೋಡಶ ಸೂಕ್ತಾನಿ। ತತ್ರ ತ್ವೇ ಹ ಯತ್ಪಿತರ ಇತಿ ಪಂಚವಿಂಶತ್ಯೃಚಂ ಪ್ರಥಮಂ ಸೂಕ್ತಂ ವಸಿಷ್ಠಸ್ಯಾರ್ಷಂ ತ್ರೈಷ್ಟುಭಮಿಂದ್ರದೇವತಾಕಂ। ದ್ವಾವಿಂಶಾದಿಭಿಶ್ಚತಸೃಭಿಃ ಸುದಾಸನಾಮ್ನೋ ರಾಜ್ಞೋ ದಾನಂ ಸ್ತೂಯತೇ। ಅತಸ್ತಾಸ್ತದ್ದೇವತಾಕಾಃ। ಅನುಕ್ರಮ್ಯತೇ ಹಿ। ತ್ವೇ ಹ ಯತ್ಪಂಚಾಧಿಕೈಂದ್ರಂ ಸುದಾಸಃ ಪೈಜವನಸ್ಯ ಚತಸ್ರೋಽಂತ್ಯಾ ದಾನಸ್ತುತಿರಿತಿ॥ ಮಹಾವ್ರತ ಆದಿತಃ ಪಂಚದಶರ್ಚಃ ಶಂಸನೀಯಾಃ। ತಥೈವ ಪಂಚಮಾರಣ್ಯಕೇ ಸೂತ್ರಿತಂ। ತ್ವೇ ಹ ಯತ್ಪಿತರಶ್ಚಿನ್ನ ಇಂದ್ರೇತಿ ಪಂಚದಶ। ಐ. ಆ. ೫-೨-೨। ಇತಿ॥**

ಅನುವಾದವು—ಏಳನೆಯ ಮಂಡಲದ ಎರಡನೆಯ ಅನುವಾಕದಲ್ಲಿ ಹದಿನಾರು ಸೂಕ್ತಗಳಿರುವವು. ಅವುಗಳಲ್ಲಿ—**ತ್ವೇ ಹ ಯತ್ಪಿತರಃ** ಎಂಬ ಸೂಕ್ತವು ಮೊದಲನೆಯದು. ಇದರಲ್ಲಿ ಇಪ್ಪತ್ತೈದು ಋಕ್ಕುಗಳಿರುವವು. ಈ ಸೂಕ್ತಕ್ಕೆ ವಸಿಷ್ಠನು ಋಷಿಯು; ಇಂದ್ರನು ದೇವತೆಯು; ತ್ರಿಷ್ಟುಪ್‌ಛಂದಸ್ಸು. ಈ ಸೂಕ್ತದಲ್ಲಿ ಇಪ್ಪತ್ತೆರಡನೆಯ ಋಕ್ಕಿನಿಂದ ಇಪ್ಪತ್ತೈದನೆಯ ಋಕ್ಕಿನವರೆಗೆ ಇರುವ ನಾಲ್ಕು ಋಕ್ಕುಗಳಲ್ಲಿ ಸುದಾಸ ಎಂಬ ರಾಜನ ದಾನಪ್ರಶಂಸೆಯು ಉಕ್ತವಾಗಿದೆ. ಆದುದರಿಂದ ಆ ನಾಲ್ಕು ಋಕ್ಕುಗಳಿಗೆ ಆ ರಾಜನ ದಾನಸ್ತುತಿಯೇ ದೇವತೆಯು. ಅನುಕ್ರಮಣಿಕೆಯಲ್ಲಿ **ತ್ವೇ ಹ ಯತ್ಪಂಚಾಧಿಕೈಂದ್ರಂ ಸುದಾಸಃ ಪೈಜವನಸ್ಯ ಚತಸ್ರೋಽನ್ತ್ಯಾ ದಾನಸ್ತುತಿಃ** ಎಂದು

ಹೇಳಿರುವುದು. ಮಹಾವ್ರತೇಷ್ಟಿಯಲ್ಲಿ ಈ ಸೂಕ್ತದ ಮೊದಲಿನ ಹದಿನೈದು ಋಕ್ಕುಗಳನ್ನು ಪಠಿಸಬೇಕೆಂದು ಐತರೇಯಾರಣ್ಯಕದ ಪಂಚಮಾರಣ್ಯಕದಲ್ಲಿ—**ತ್ವೇ ಹ ಯತ್ಪಿತರಶ್ಚಿನ್ನ ಇಂದ್ರೇತಿ ಪಂಚದಶ** ಎಂಬ ವಾಕ್ಯದಿಂದ (ಐ. ಆ. ೫-೨-೨) ನಿರ್ದಿಷ್ಟವಾಗಿರುವುದು.

## ಸೂಕ್ತ—೧೮

ಮಂಡಲ—೭ ॥ ಅನುವಾಕ—೨ ॥ ಸೂಕ್ತ—೧೮ ॥
ಅಷ್ಟಕ—೫ ॥ ಅಧ್ಯಾಯ—೨ ॥ ವರ್ಗ—೨೪, ೨೫, ೨೬, ೨೭, ೨೮ ॥
॥ ಸೂಕ್ತದಲ್ಲಿರುವ ಋಕ್ಸಂಖ್ಯೆ—೨೫ ॥
॥ ಋಷಿಃ—ವಸಿಷ್ಠಃ ॥
॥ ದೇವತಾ—೧-೨೧. ಇಂದ್ರಃ ॥ ೨೨-೨೫. ಸುದಾಸಃ ಪೈಜವನಸ್ಯ ದಾನಸ್ತುತಿಃ ॥
॥ ಛಂದಃ— ತ್ರಿಷ್ಟುಪ್ ॥

॥ ಸಂಹಿತಾಪಾಠಃ ॥

**ತ್ವೇ ಹ ಯತ್ಪಿತರಶ್ಚಿನ್ನ ಇಂದ್ರ ವಿಶ್ವಾ ವಾಮಾ ಜರಿತಾರೋ ಅಸನ್ವನ್ ।**
**ತ್ವೇ ಗಾವಃ ಸುದುಘಾಸ್ತ್ವೇ ಹ್ಯಶ್ವಾಸ್ತ್ವಂ ವಸು ದೇವಯತೇ ವನಿಷ್ಠಃ ॥೧॥**

॥ ಪದಪಾಠಃ ॥

**ತ್ವೇ ಇತಿ । ಹ । ಯತ್ । ಪಿತರಃ । ಚಿತ್ । ನಃ । ಇಂದ್ರ । ವಿಶ್ವಾ । ವಾಮಾ । ಜರಿತಾರಃ । ಅಸನ್ವನ್ ।**
**ತ್ವೇ ಇತಿ । ಗಾವಃ । ಸುಽದುಘಾಃ । ತ್ವೇ ಇತಿ । ಹಿ । ಅಶ್ವಾಃ । ತ್ವಂ । ವಸು । ದೇವಽಯತೇ । ವನಿಷ್ಠಃ ॥**

॥ ಸಾಯಣಭಾಷ್ಯಂ ॥

**ಹೇ ಇಂದ್ರ ತ್ವೇ ಹ ತ್ವಯ್ಯೇವ ನೋಽಸ್ಮಾಕಂ ಪಿತರಶ್ಚಿತ್ ಪಿತರೋಽಪಿ ಜರಿತಾರಃ ಸ್ತೋತಾರಃ ಸಂತೋ ಯದ್ಯಸ್ಮಾತ್ಕಾರಣಾದ್ವಿಶ್ವಾ ವಿಶ್ವಾನಿ ವಾಮಾ ವಾಮಾನಿ ವನನೀಯಾನಿ ಧನಾನಿ । ತಥಾ ಚ ಯಾಸ್ಕಃ । ವಾಮಂ ವನನೀಯಂ ಭವತಿ । ನಿ. ೬-೩೧ । ಇತಿ । ಅಸನ್ವನ್ ಅಲಭಂತ ತಸ್ಮಾದ್ವಯಮಪಿ ಧನಕಾಮಾಸ್ತ್ವಾಂ ಸ್ತುಮಃ । ತದುಚ್ಯತೇ । ಹಿ ಯಸ್ಮಾತ್ಕಾರಣಾತ್ತ್ವೇ ತ್ವಯಿ ಗಾವಃ ಸುದುಘಾ ದೋಗ್ಧುಂ ಸುಶಕಾಃ ಸಂತಿ ತ್ವೇ ತ್ವಯ್ಯಶ್ವಾಃ ಸಂತಿ ತ್ವಂ ವಸು ಧನಂ ದೇವಯತೇ ದೇವಂ ತ್ವಾಮಿಚ್ಛತೇ ಯಜಮಾನಾಯ ವನಿಷ್ಠೋ ದಾತೃತಮೋ ಭವಸಿ ॥**

॥ ಪ್ರತಿಪದಾರ್ಥ ॥

**ಇಂದ್ರ**—ಎಲೈ ಇಂದ್ರನೇ । **ತ್ವೇ ಹ**—ನಿನ್ನ ಅನುಗ್ರಹದಿಂದಲೇ । **ನಃ**—ನಮ್ಮ । **ಪಿತರಶ್ಚಿತ್**—ಪಿತೃಗಳೂ ಕೂಡ । **ಜರಿತಾರಃ**—ನಿನ್ನನ್ನು ಸ್ತುತಿಸುವವರಾಗಿ । **ಯತ್**—ಯಾವ ನಿನ್ನ ಮಹಿಮೆಯಿಂದ । **ವಿಶ್ವಾ**—ಸಮಸ್ತವಾದವೂ । **ವಾಮಾ**—ಅಪೇಕ್ಷಿತವಾದವೂ ಆದ ಧನಗಳನ್ನು । **ಅಸನ್ವನ್**—ಹೊಂದಿದರೋ

(ಅದೇ ಮಹಿಮೆಯಿಂದ ನಮಗೂ ಲಭಿಸುವಂತೆ ಮಾಡು) | **ತ್ವೇ ಹಿ**—ನಿನ್ನಲ್ಲೇ | **ಸುದುಘಾಃ**—ಉತ್ತಮವಾಗಿ ಕರೆಯತಕ್ಕ | **ಗಾವಃ**—ಗೋವುಗಳಿವೆ | **ತ್ವೇ**—ನಿನ್ನಲ್ಲೇ | **ಅಶ್ವಾಃ**—ಅಶ್ವಗಳೂ ಇವೆ | **ದೇವಯತೇ**—ದೇವಪೂಜೆಯನ್ನಿಚ್ಛಿಸುವ ಯಜಮಾನನಿಗೆ | **ತ್ವಂ**—ನೀನು | **ವಸು**—ಧನವನ್ನು | **ವನಿಷ್ಠಃ**—ಅತಿಶಯವಾಗಿ ಕೊಡುವವನಾಗಿದ್ದೀಯೆ.

॥ ಭಾವಾರ್ಥ ॥

ಎಲೈ ಇಂದ್ರನೇ, ನಿನ್ನ ಅನುಗ್ರಹದಿಂದಲೇ, ನಮ್ಮ ಪಿತೃಗಳೂ ಕೂಡ ನಿನ್ನನ್ನು ಸ್ತುತಿಸುವವರಾಗಿ ಯಾವ ನಿನ್ನ ಮಹಿಮೆಯಿಂದ ಸಮಸ್ತವಾದವೂ ಅದ್ಭುತವಾದವೂ ಆದ ಧನಗಳನ್ನು ಹೊಂದಿದರೋ ಅದೇ ಮಹಿಮೆಯಿಂದ ನಮಗೂ ಲಭಿಸುವಂತೆ ಮಾಡು. ಎಲೈ ಇಂದ್ರನೇ, ಅಶ್ವಗಳೂ, ಉತ್ತಮವಾಗಿ ಕರೆಯತಕ್ಕ ಗೋವುಗಳೂ ನಿನ್ನಲ್ಲೇ ಇವೆ. ದೇವಪೂಜೆಯನ್ನಿಚ್ಛಿಸುವ ಯಜಮಾನನಿಗೆ ನೀನು ಧನವನ್ನು ಅತಿಶಯವಾಗಿ ಕೊಡುವವನಾಗಿದ್ದೀಯೆ.

## English Translation.

Our forefathers, Indra, glorifying you, have obtained all desirable (riches); in your gift are cows easy to be milked, and horses, and you are the liberal donor of wealth to the devout.

॥ ಸಂಹಿತಾಪಾಠಃ ॥

ರಾಜೇವ ಹಿ ಜನಿಭಿಃ ಕ್ಷೇಷ್ಯೇವಾವ ದ್ಯುಭಿರಭಿ ವಿದುಷ್ಕವಿಃ ಸನ್ ।
ಪಿಶಾ ಗಿರೋ ಮಘವನ್ಗೋಭಿರಶ್ವೈಸ್ತ್ವಾಯತಃ ಶಿಶೀಹಿ ರಾಯೇ ಅಸ್ಮಾನ್ ॥ ೨ ॥

॥ ಪದಪಾಠಃ ॥

ರಾಜಾಽಇವ । ಹಿ । ಜನಿಽಭಿಃ । ಕ್ಷೇಷಿ । ಏವ । ಅವ । ದ್ಯುಽಭಿಃ । ಅಭಿ । ವಿದುಃ । ಕವಿಃ । ಸನ್ ॥
ಪಿಶಾ । ಗಿರಃ । ಮಘಽವನ್ । ಗೋಭಿಃ । ಅಶ್ವೈಃ । ತ್ವಾಽಯತಃ । ಶಿಶೀಹಿ । ರಾಯೇ । ಅಸ್ಮಾನ್ ॥ ೨ ॥

॥ ಸಾಯಣಭಾಷ್ಯಂ ॥

ಹೇ ಇಂದ್ರ ತ್ವಂ ಜನಿಭಿರ್ಜಾಯಾಭೀ ರಾಜೇವ ದ್ಯುಭಿರ್ದೀಪ್ತಿಭಿಃ ಸಹ ಕ್ಷೇಷ್ಯೇವ । ನಿವಸಸ್ಯೇವ । ಹೀತಿ ಪೂರಣಃ । ಕಿಂ ಚ ಹೇ ಮಘವನ್ ಧನವನ್ನಿಂದ್ರ ವಿದುರ್ವಿದ್ವಾನ್ ಕವಿಃ ಕ್ರಾಂತಕರ್ಮಾ ಕ್ರಾಂತಪ್ರಜ್ಞೋ ವಾ ಸನ್ ಗಿರಃ ಸ್ತೋತೄನಸ್ಮಾನ್ ಪಿಶಾ ರೂಪೇಣ ಹಿರಣ್ಯಾದಿನಾ ವಾ ಗೋಭಿಶ್ಚಾಶ್ವೈಶ್ಚಾಭಿ ಅಭಿತೋ ರಕ್ಷ । ತ್ವಾಯತಸ್ತ್ವತ್ಕಾಮಾನಸ್ಮಾನ್ ರಾಯೇ ಶಿಶೀಹಿ । ಧನಾರ್ಥಂ ಚ ಸಂಸ್ಕುರು॥

॥ ಪ್ರತಿಪದಾರ್ಥ ॥

(ಎಲೈ ಇಂದ್ರನೇ) **ಜನಿಭಿಃ**—ಪತ್ನಿಯೊಡಗೂಡಿದ । **ರಾಜೇವ**—ದೊರೆಯಂತೆ । **ದ್ಯುಭಿಃ**—ನಿನ್ನ ಕಾಂತಿಗಳಿಂದ ಕೂಡಿ । **ಕ್ಷೇಷ್ಯೇವ ಹಿ**—ನೀನು ವಾಸಿಸುತ್ತಿದ್ದೀಯೆ । **ಮಘವನ್**—ಧನವಂತನಾದ ಎಲೈ ಇಂದ್ರನೇ । **ವಿದುಃ**—ಸಕಲವನ್ನೂ ತಿಳಿದವನೂ । **ಕವಿಃ ಸನ್**—ಕ್ರಾಂತಪ್ರಜ್ಞನೂ ಆಗಿ । **ಗಿರಃ**—ಸ್ತುತಿಕರ್ತರಾದ ನಮ್ಮನ್ನು । **ಪಿಶಾ**—ಆಕರ್ಷಕವಾದ ರೂಪವುಳ್ಳ ಹಿರಣ್ಯದಿಂದಲೂ । **ಗೋಭಿಃ**—ಗೋವುಗಳಿಂದಲೂ । **ಅಶ್ವೈಃ**—ಅಶ್ವಗಳಿಂದಲೂ । **ಅಭಿ ಅವ**—ತುಂಬಿಸಿ ರಕ್ಷಿಸು । **ತ್ವಾಯತಃ**—ನಿನ್ನ ಸಹಾಯವನ್ನಪೇಕ್ಷಿಸುವ । **ಅಸ್ಮಾನ್**—ನಮ್ಮನ್ನು । **ರಾಯೇ**—ಧನಾರ್ಥವಾಗಿ । **ಶಿಶೀಹಿ** ಸಂಸ್ಕೃತರನ್ನಾಗಿ ಮಾಡು.

॥ ಭಾವಾರ್ಥ ॥

ಎಲೈ ಇಂದ್ರನೇ, ಪತ್ನಿಯರೊಡಗೂಡಿದ ದೊರೆಯಂತೆ ನಿನ್ನ ಕಾಂತಿಗಳಿಂದ ಕೂಡಿ ನೀನು ವಾಸಿಸುತ್ತಿದ್ದೀಯೆ. ಧನವಂತನಾದ ಎಲೈ ಇಂದ್ರನೇ, ಸಕಲವನ್ನೂ ತಿಳಿದವನೂ, ಕ್ರಾಂತಪ್ರಜ್ಞನೂ ಆಗಿ ನೀನು ಸ್ತುತಿಕರ್ತರಾದ ನಮ್ಮನ್ನು ಆಕರ್ಷಕವಾದ ರೂಪವುಳ್ಳ ಹಿರಣ್ಯದಿಂದಲೂ, ಗೋವುಗಳಿಂದಲೂ, ಅಶ್ವಗಳಿಂದಲೂ ತುಂಬಿಸಿ ರಕ್ಷಿಸು. ನಿನ್ನ ಸಹಾಯವನ್ನಪೇಕ್ಷಿಸುವ ನಮ್ಮನ್ನು ಧನಾರ್ಥವಾಗಿ ಸುಸಂಸ್ಕೃತರನ್ನಾಗಿ ಮಾಡು.

## English Translation.

You dwell with your glories like a Raja with his wives; Maghavan, you are wise and experienced ; (reward our) praises with the precious metals, with cows, with horses : conduct us who are dependent on you for riches.

॥ ಸಂಹಿತಾಪಾಠಃ ॥

ಇಮಾ ಉ ತ್ವಾ ಪಸ್ಪೃಧಾನಾಸೋ ಅತ್ರ ಮಂದ್ರಾ ಗಿರೋ ದೇವಯಂ-
ತೀರುಪ ಸ್ಥುಃ ।
ಅರ್ವಾಚೀ ತೇ ಪಥ್ಯಾ ರಾಯ ಏತು ಸ್ಯಾಮ ತೇ ಸುಮತಾವಿಂದ್ರ ಶರ್ಮನ್॥

॥ ಪದಪಾಠಃ ॥

ಇಮಾಃ । ಊಂ ಇತಿ । ತ್ವಾ । ಪಸ್ಪೃಧಾನಾಸಃ । ಅತ್ರ । ಮಂದ್ರಾಃ । ಗಿರಃ । ದೇವಽಯಂತೀಃ ।
ಉಪ । ಸ್ಥುಃ ॥
ಅರ್ವಾಚೀ । ತೇ । ಪಥ್ಯಾ । ರಾಯಃ । ಏತು । ಸ್ಯಾಮ । ತೇ । ಸುಽಮತೌ । ಇಂದ್ರ । ಶರ್ಮನ್ ॥ ೩ ॥

॥ ಸಾಯಣಭಾಷ್ಯಂ ॥

ಹೇ ಇಂದ್ರ ತ್ವಾ ತ್ವಾಮತ್ರ ಯಜ್ಞೇ ಸ್ತೋತರಿ ವಾ ಪ್ರವರ್ತಮಾನಾಃ ಪಸ್ಪೃಧಾನಾಸಃ ಸ್ಪರ್ಧಮಾನಾ ಮಂದ್ರಾ ಮೋದಮಾನಾ ಇಮಾ ಗಿರಃ ಸ್ತುತಯಃ ಉಪ ಸ್ಥುಃ । ಉಪತಿಷ್ಠಂತಿ । ಅತಸ್ತೇ ತವ ರಾಯೋ ಧನಸ್ಯ ಪಥ್ಯಾ ಸೃತಿರರ್ವಾಚ್ಯಸ್ಮದಭಿಮುಖ್ಯೇತು । ಗಚ್ಛತು । ಹೇ ಇಂದ್ರ ವಯಂ ಚ ತೇ ಸುಮತೌ ಸುಷ್ಟುತೌ ವರ್ತಮಾನಾಃ ಶರ್ಮನ್ ಶರ್ಮಣಿ ಸುಖೇ ಸ್ಯಾಮ । ಭೂಯಾಸ್ಮ ॥

॥ ಪ್ರತಿಪದಾರ್ಥ ॥

ಇಂದ್ರ—ಎಲೈ ಇಂದ್ರನೇ । ತ್ವಾ—ನಿನ್ನನ್ನು । ಅತ್ರ—ಈ ಯಜ್ಞದಲ್ಲಿ ಪ್ರಯುಕ್ತವಾದವೂ । ಪಸ್ಪೃಧಾನಾಸಃ—ಪರಸ್ಪರ ಸ್ಪರ್ಧಿಸತಕ್ಕವೂ । ದೇವಯಂತೀಃ—ದೇವತೆಗಳನ್ನು ಪೂಜಿಸಲಿಚ್ಛಿಸುವುವೂ । ಮಂದ್ರಾಃ—ಹರ್ಷಿಸತಕ್ಕವೂ (ಅಥವಾ ಹರ್ಷಸಾಧಕವೂ) ಆದ । ಇಮಾ ಗಿರಃ—ಈ ಸ್ತುತಿವಾಕ್ಯಗಳು । ಉಪ ಸ್ಥುಃ—ಸಮೀಪಿಸುತ್ತವೆ । ತೇ—ನಿನ್ನ । ರಾಯಃ—ಧನದ । ಪಥ್ಯಾ—ಮಾರ್ಗವು । ಅರ್ವಾಚೀ—ಕೆಳಭಾಗದಲ್ಲಿರುವ ನಮಗಭಿಮುಖವಾಗಿ । ಏತು—ಸರಿದುಬರಲಿ । (ಎಲೈ ಇಂದ್ರನೇ) । ತೇ—ನಿನ್ನ । ಸುಮತೌ—ಅನುಗ್ರಹಾತ್ಮಕವಾದ ಬುದ್ಧಿಯಲ್ಲಿರುವ ನಾವು । ಶರ್ಮನ್—ಸುಖದಲ್ಲಿ । ಸ್ಯಾಮ—ಇರುವಂತಾಗಲಿ.

॥ ಭಾವಾರ್ಥ ॥

ಎಲೈ ಇಂದ್ರನೇ, ಈ ಯಜ್ಞದಲ್ಲಿ ಪ್ರಯುಕ್ತವಾದವೂ, ಪರಸ್ಪರ ಸ್ಪರ್ಧಿಸತಕ್ಕವೂ, ಹರ್ಷಸಾಧಕವೂ ಆದ ಈ ಸ್ತುತಿವಾಕ್ಯಗಳು ನಿನ್ನನ್ನು ಸಮೀಪಿಸುತ್ತವೆ. ನಿನ್ನ ಧನದ ಮಾರ್ಗವು ನಿನಗಿಂತ ಕೆಳಭಾಗದಲ್ಲಿರುವ ನಮಗಭಿಮುಖವಾಗಿ ಸರಿದುಬರಲಿ. ಎಲೈ ಇಂದ್ರನೇ, ನಿನ್ನ ಅನುಗ್ರಹಾತ್ಮಕವಾದ ಬುದ್ಧಿಯಲ್ಲಿರುವ ನಾವು ಸರ್ವದಾ ಸುಖವಾಗಿರುವಂತಾಗಲಿ.

## English Translation.

These gratifying and pious hymns, emulous (in earnestness), are addressed on this occasion to you: may the path of your riches lead downwards: may we, Indra, (deligent) in your praise, enjoy felicity.

॥ ಸಂಹಿತಾಪಾಠಃ ॥

ಧೇನುಂ ನ ತ್ವಾ ಸೂಯವಸೇ ದುದುಕ್ಷನ್ನುಪ ಬ್ರಹ್ಮಾಣಿ ಸಸೃಜೇ ವಸಿಷ್ಠಃ ।
ತ್ವಾಮಿನ್ಮೇ ಗೋಪತಿಂ ವಿಶ್ವ ಆಹಾ ನ ಇಂದ್ರಃ ಸುಮತಿಂ ಗಂತ್ವಚ್ಛ ॥ ೪ ॥

॥ ಪದಪಾಠಃ ॥

ಧೇನುಂ । ನ । ತ್ವಾ । ಸುಽಯವಸೇ । ದುಧುಕ್ಷನ್ । ಉಪ । ಬ್ರಹ್ಮಾಣಿ । ಸಸೃಜೇ । ವಸಿಷ್ಠಃ ।
ತ್ವಾಂ । ಇತ್ । ಮೇ । ಗೋಽಪತಿಂ । ವಿಶ್ವಃ । ಆಹ । ಆ । ನಃ । ಇಂದ್ರಃ । ಸುಽಮತಿಂ । ಗಂತು । ಅಚ್ಛ ॥

॥ ಸಾಯಣಭಾಷ್ಯಂ ॥

**ಹೇ ಇಂದ್ರ ಸುಯವಸೇ ಸುತೃಣೇ ಗೋಷ್ಠೇ ವರ್ತಮಾನಾಂ ಧೇನುಂ ನ ಧೇನುಮಿವ ಸುಹವಿಷ್ಕೇ ಯಜ್ಞಗೃಹೇ । ದೃಷ್ಟಾಂತಸಾಮರ್ಥ್ಯಾದ್ದಾರ್ಷ್ಟಾಂತಿಕಲಾಭಃ । ವರ್ತಮಾನಂ ತ್ವಾಂ ದುಧುಕ್ಷನ್ ॥ ಸಂಹಿತಾಯಾಂ ವ್ಯತ್ಯಯೇನ ದಕಾರಃ ॥ ಕಾಮಾನ್ ದೋಗ್ಧುಮಿಚ್ಛನ್ವಸಿಷ್ಠೋ ಬ್ರಹ್ಮಾಣಿ ವತ್ಸಸ್ಥಾನೀ-ಯಾನಿ ಸ್ತೋತ್ರಾಣ್ಯುಪ ಸಸೃಜೇ । ಉಪಸೃಜತೇ । ಮೇ ಮಮ ವಿಶ್ವಃ ಸರ್ವೋ ಜನಸ್ತ್ವಾಮಿತ್ತ್ವಾಮೇವ ಗೋಪತಿಂ ಗವಾಂ ಸ್ವಾಮಿನಮಾಹ । ಬ್ರವೀತಿ । ಅಥ ಪರೋಕ್ಷಸ್ತುತಿಃ । ನೋಽಸ್ಮಾಕಂ ಸುಮತಿಂ ಸುಷ್ಟುತಿಮಚ್ಛಾಭಿ ಇಂದ್ರ ಆ ಗಂತು । ಆಗಚ್ಛತು ॥**

॥ ಪ್ರತಿಪದಾರ್ಥ ॥

(ಎಲೈ ಇಂದ್ರನೇ) **ಸುಯವಸೇ**—ಉತ್ತಮವಾದ ಹುಲ್ಲಿರುವ ಕೊಟ್ಟಿಗೆಯಲ್ಲಿರುವ । **ಧೇನುಂ ನ**—ಪುಷ್ಕಲವಾದ ಕ್ಷೀರವುಳ್ಳ ಧೇನುವಿನಂತಿರುವವನಾದ । **ತ್ವಾ**—ನಿನ್ನನ್ನು । **ದುಧುಕ್ಷನ್**—ಇಷ್ಟಾರ್ಥಗಳನ್ನು ಕರೆಯಬೇಕೆಂಬ ಇಚ್ಛೆಯಿಂದ । **ವಸಿಷ್ಠಃ**—ವಸಿಷ್ಠನು । **ಬ್ರಹ್ಮಾಣಿ**—ಸ್ತೋತ್ರಗಳನ್ನು । **ಉಪ ಸಸೃಜೇ**—ಅರ್ಪಿಸಿದ್ದಾನೆ । **ಮೇ**—ನನ್ನ ಸಂಬಂಧಿಗಳಾದ । **ವಿಶ್ವಃ**—ಸಮಸ್ತ ಜನವೂ । **ತ್ವಾ ಇತ್**—ನಿನ್ನನ್ನೇ । **ಗೋಪತಿಂ**—ಗೋಸ್ವಾಮಿಯನ್ನಾಗಿ । **ಆಹ**—ಹೇಳುತ್ತಿದ್ದಾರೆ । **ನಃ**—ನಮ್ಮ । **ಸುಮತಿಂ ಅಚ್ಛ**—ಉತ್ತಮವಾದ ಸ್ತುತಿಗಭಿಮುಖವಾಗಿ । **ಇಂದ್ರಃ**—ಇಂದ್ರನು । **ಆ ಗಂತು**—ಬರಲಿ.

॥ ಭಾವಾರ್ಥ ॥

ಎಲೈ ಇಂದ್ರನೇ, ಉತ್ತಮವಾದ ಹುಲ್ಲಿರುವ ಕೊಟ್ಟಿಗೆಯಲ್ಲಿರುವ ಪುಷ್ಕಲವಾದ ಕ್ಷೀರವುಳ್ಳ ಧೇನುವಿನಂತಿರುವವನಾದ ನಿನ್ನನ್ನು ಇಷ್ಟಾರ್ಥಗಳನ್ನೂ ಕರೆಯಬೇಕೆಂಬ ಇಚ್ಛೆಯುಳ್ಳ ವಸಿಷ್ಠನು ಸ್ತುತಿಗಳನ್ನರ್ಪಿಸಿದ್ದಾನೆ. ಎಲೈ ಇಂದ್ರನೇ, ನನ್ನ ಸಂಬಂಧಿಗಳಾದ ಸಮಸ್ತ ಜನವೂ ಸಹ ನೀನೇ ಗೋವುಗಳಿಗೆಲ್ಲಾ ಪತಿಯೆಂದು ಹೇಳುತ್ತಿದ್ದಾರೆ. ನಮ್ಮ ಉತ್ತಮವಾದ ಸ್ತುತಿಗಭಿಮುಖವಾಗಿ ಇಂದ್ರನು ಬರಲಿ.

## English Translation.

Desirous of milking you like a milch cow at pasture, Vasishtha has let loose his prayers to you : every one of my people proclaims you the lord of cattle : may Indra be present at our praises.

॥ ಸಂಹಿತಾಪಾಠಃ ॥

ಅರ್ಣಾಂಸಿ ಚಿತ್ಪಪ್ರಥಾನಾ ಸುದಾಸ ಇಂದ್ರೋ ಗಾಧಾನ್ಯಕೃಣೋತ್ಸುಪಾರಾ ।
ಶರ್ಧಂತಂ ಶಿಮ್ಯುಮುಚಥಸ್ಯ ನವ್ಯಃ ಶಾಪಂ ಸಿಂಧೂನಾಮಕೃಣೋದ-
ಶಸ್ತೀಃ ॥ ೫ ॥

‖ ಪದಪಾಠಃ ‖

ಅರ್ಣಾಂಸಿ । ಚಿತ್ । ಪಪ್ರಥಾನಾ । ಸುऽದಾಸೇ । ಇಂದ್ರಃ । ಗಾಧಾನಿ । ಅಕೃಣೋತ್ । ಸುऽಪಾರಾ ॥

ಶರ್ಧಂತಂ । ಶಿಮ್ಯುಂ । ಉಚಥಸ್ಯ । ನವ್ಯಃ । ಶಾಪಂ । ಸಿಂಧೂನಾಂ । ಅಕೃಣೋತ್ । ಅಶಸ್ತೀಃ ॥ ೫ ॥

‖ ಸಾಯಣಭಾಷ್ಯಂ ‖

ನವ್ಯಃ ಸ್ತುತ್ಯ ಇಂದ್ರೋऽರ್ಣಾಂಸಿ ಶತ್ರುಭಿರ್ವಿದಾರಿತಾಯೋಃ ಪರುಷ್ಣ್ಯಾ ಉದಕಾನಿ ಪಪ್ರಥಾನಾ ಚಿತ್ ಪ್ರಥಮಾನಾನ್ಯಪಿ ಸುದಾಸೇ ರಾಜ್ಞೇ ಗಾಧಾನಿ ಸುಪಾರಾ ಸುಪಾರಾಣಿ ಪಾರಯಿತುಂ ತರ್ತುಂ ಯೋಗ್ಯಾನಿ ಚಾಕೃಣೋತ್ । ಅಕರೋತ್ । ಅಪಿ ಚ ಶರ್ಧಂತಮುತ್ಸಾಹಮಾನಂ ಶಿಮ್ಯುಂ ಬೋಧಮಾನಂ ಶಾಪಂ ವಿಶ್ವರೂಪೋದ್ಭವಮಾತ್ಮನೋऽಭಿಶಾಪಮುಶಸ್ತೀ ರಭಿಶಸ್ತೀ ಶ್ಚೋಚಥಸ್ಯ ಸ್ತೋತುಃ ಸಿಂಧೂನಾಂ ನದೀನಾಮಕೃಣೋತ್ । ಅಕರೋತ್ ॥

‖ ಪ್ರತಿಪದಾರ್ಥ ‖

**ನವ್ಯಃ**—ಸ್ತುತ್ಯನಾದ । **ಇಂದ್ರಃ**—ಇಂದ್ರನು । **ಪಪ್ರಥಾನಾ**—ಪ್ರಸಿದ್ಧವಾದುದೂ । **ಗಾಧಾನಿ**—ಅತ್ಯಂತ ಆಳವಾದುದೂ ಆದ । **ಅರ್ಣಾಂಸಿ ಚಿತ್**—ಪರುಷ್ಣೀನದಿಯ ನೀರನ್ನೂ ಕೂಡ । **ಸುದಾಸೇ**—ಸುದಾಸನೆಂಬ ರಾಜನಿಗೆ । **ಸುಪಾರಾ**—ಸುಲಭವಾಗಿ ದಾಟಲು ಆಗುವಂತೆ । **ಅಕೃಣೋತ್**—ಮಾಡಿದನು । **ಶರ್ಧಂತಂ**—ಶಕ್ತಿಯುತವಾದುದೂ । **ಶಿಮ್ಯುಂ**—ಹಿಂಸಕವಾದುದೂ ಆದ । **ಶಾಪಂ**—ಶಾಪವನ್ನೂ । **ಅಶಸ್ತೀಃ**—ಅಸಮಾಧಾನದ ಪ್ರಕಟನವನ್ನೂ । **ಉಚಥಸ್ಯ**—ಸ್ತೋತೃವಿನ ಭಾಗಕ್ಕೆ । **ಸಿಂಧೂನಾಂ**—ನದಿಗಳಾಗಿ ಪರಿವರ್ತಿತವಾಗುವಂತೆ । **ಅಕೃಣೋತ್**—ಮಾಡಿದನು.

‖ ಭಾವಾರ್ಥ ‖

ಸ್ತುತ್ಯನಾದ ಇಂದ್ರನು ಪ್ರಸಿದ್ಧವಾದುದೂ, ಅತ್ಯಂತ ಆಳವಾದುದೂ ಆದ ಪರುಷ್ಣೀನದಿಯ ನೀರನ್ನೂ ಸಹ ಸುಲಭವಾಗಿ ದಾಟಲು ಅನುಕೂಲವಾಗುವಂತೆ ಮಾಡಿದನು. ಶಕ್ತಿಯುತವಾದುದೂ, ಹಿಂಸಕವಾದುದೂ ಆದ ಶಾಪವನ್ನೂ ಅಸಮಾಧಾನದ ಪ್ರಕಟನವನ್ನೂ ಸ್ತೋತೃವಿನ ಭಾಗಕ್ಕೆ ನದಿಗಳಾಗಿ ಪರಿವರ್ತಿತವಾಗುವಂತೆ ಮಾಡಿದನು.

English Translation.

The adorable Indra made the well-known deep waters (of the Parushni) fordable for Sudas, and converted the vehement awakening imprecation of the sacrificer into the calumniation of the rivers.

॥ ಸಂಹಿತಾಪಾಠಃ ॥

ಪುರೋಳಾ ಇತ್ತುರ್ವಶೋ ಯಕ್ಷುರಾಸೀದ್ರಾಯೇ ಮತ್ಸ್ಯಾಸೋ ನಿಶಿತಾ ಅಪೀವ ।

ಶ್ರುಷ್ಟಿಂ ಚಕ್ರುರ್ಭೃಗವೋ ದ್ರುಹ್ಯವಶ್ಚ ಸಖಾ ಸಖಾಯಮತರದ್ವಿಷೂಚೋಃ ॥ ೬ ॥

॥ ಪದಪಾಠಃ ॥

ಪುರೋಳಾಃ । ಇತ್ । ತುರ್ವಶಃ । ಯಕ್ಷುಃ । ಆಸೀತ್ । ರಾಯೇ । ಮತ್ಸ್ಯಾಸಃ । ನಿऽಶಿತಾಃ । ಅಪಿऽಇವ ॥

ಶ್ರುಷ್ಟಿಂ । ಚಕ್ರುಃ । ಭೃಗವಃ । ದ್ರುಹ್ಯವಃ । ಚ । ಸಖಾ । ಸಖಾಯಂ । ಅತರತ್ । ವಿಷೂಚೋಃ ॥ ೬ ॥

॥ ಸಾಯಣಭಾಷ್ಯಂ ॥

ಯಕ್ಷುರ್ಯಜ್ಞಕುಶಲಃ ॥ ಯಜೇಃ ಸನ್ಪ್ರತ್ಯಯೋ ನ ತು ಸನಂತಃ । ಅತೋ ನ ದ್ವಿರ್ಭಾವಃ ॥ ಪುರೋಳಾಃ ಪುರೋಗಾಮೀ ಪುರೋದಾತಾ ವಾ । ಇದಿತಿ ಪೂರಣಃ । ತುರ್ವಶೋ ನಾಮ ರಾಜಾಸೀತ್ । ಸ ತುರ್ವಶೋ ರಾಯೇ ಧನಪ್ರಾಪ್ತ್ಯೈ ಇಂದ್ರಸ್ಯ ಸಖಾಯಂ ಸುದಾಸಂ ಜಗಾಮ । ಮತ್ಸ್ಯಾಸ ಇವ ಜಲೇ ನಿಹಿತಾ ಮತ್ಸ್ಯಾ ಇವ ನಿಶಿತಾ ನಿಯಂತ್ರಿತಾ ಅಪಿ ಭೃಗವೋ ದ್ರುಹ್ಯವಶ್ಚ ಯೋಧಾಶ್ಚ ಸುದಾಸಸ್ತುರ್ವಶಸ್ಯ ಚ ಶ್ರುಷ್ಟಿಮಾಶುಪ್ರಾಪ್ತಿಂ ಚಕ್ರುಃ । ವಿಷೂಚೋರ್ವಿಷ್ವಗಂಚತೋರುಭಯೋರ್ಮಧ್ಯೇ ಸಖಾ ಸುದಾಸಶ್ಚೇಂದ್ರಃ ಸಖಾಯಂ ಸುದಾಸಮತರತ್ । ಅತಾರಯತ್ । ತುರ್ವಶಂ ಚಾವಧೀದಿತ್ಯರ್ಥಃ । ಯದ್ವಾ । ಯಕ್ಷುರ್ಯಜ್ಞಶೀಲಃ ಪುರೋಳಾಃ ಪುರೋದಾತಾ ತುರ್ವಶೋ ನಾಮ ರಾಜಾಸೀತ್ । ತೇನ ಮತ್ಸ್ಯಾಸೋ ಮತ್ಸ್ಯಜನಪದಾ ನಿಶಿತಾ ಬಾಧಿತಾ ಆಸನ್ । ಅಪಿ ಚ ಭೃಗವೋ ದ್ರುಹ್ಯವಶ್ಚ ಶ್ರುಷ್ಟಿಂ ಸುಖಂ ತುರ್ವಶಸ್ಯ ಚಕ್ರುಃ । ವಿಷೂಚೋರ್ವಿಷ್ವಗಂಚತೋರುಭಯೋರ್ಮಧ್ಯೇ ಸಖಾ ತುರ್ವಶಸ್ಯ ಸಖೇಂದ್ರಃ ಸಖಾಯಂ ರಾಜಾನಮತರತ್ । ಅತಾರಯತ್ ॥

॥ ಪ್ರತಿಪದಾರ್ಥ ॥

**ಯಕ್ಷುಃ**—ಯಜ್ಞಕರ್ಮದಲ್ಲಿ ಕುಶಲನೂ । **ಪುರೋಳಾಃ ಇತ್**—ಪುರೋಗಾಮಿಯೂ ಆದ **ತುರ್ವಶಃ ಆಸೀತ್**—ತುರ್ವಶನೆಂಬ ರಾಜನು ಇದ್ದನು । **ರಾಯೇ**—(ಅವನು) ಧನಪ್ರಾಪ್ತಿಗಾಗಿ (ಧನಾಪಹರಣಕ್ಕಾಗಿ) (ಸುದಾಸನಲ್ಲಿಗೆ ಹೋದನು) । **ಮತ್ಸ್ಯಾಸ ಇವ**—ಜಲನಿಹಿತವಾದ ಮತ್ಸ್ಯಗಳಂತೆ । **ನಿಶಿತಾ ಅಪಿ**—ತಡೆಯಲ್ಪಟ್ಟರೂ ಸಹ । **ಭೃಗವಃ**—ಭೃಗುಗಳೂ । **ದ್ರುಹ್ಯವಶ್ಚ**—ದ್ರುಹ್ಯುಗಳೂ ಸಹ । **ಶ್ರುಷ್ಟಿಂ**—

ಪರಸ್ಪರ ಹೋರಾಟವನ್ನು | **ಚಕ್ರುಃ**—ಮಾಡಿದರು | **ವಿಷೂಚೋಃ**—ಸುತ್ತಲೂ ಪರಿಭ್ರಮಿಸುತ್ತಿದ್ದ ತುರ್ವಶ ಮತ್ತು ಸುದಾಸರ ನಡುವೆ | **ಸಖಾ**—ಸುದಾಸನ ಮಿತ್ರನಾದ ಇಂದ್ರನು | **ಸಖಾಯಂ**—ಸಖನಾದ ಸುದಾಸನನ್ನು | **ಅತರತ್**—ಆ ಹೋರಾಟದಿಂದ ದಾಟಿಸಿದನು.

|| ಭಾವಾರ್ಥ ||

ಯಜ್ಞಕರ್ಮದಲ್ಲಿ ಕುಶಲನೂ, ಪುರೋಗಾಮಿಯೂ ಆದ ತುರ್ವಶನೆಂಬ ರಾಜನಿದ್ದನು. ಅವನು ಧನಾಪಹರಣಕ್ಕಾಗಿ ಸುದಾಸನೆಂಬ ರಾಜನನ್ನು ಎದುರಿಸಿ ಹೋದನು. ಆಗ ಭೃಗುಗಳೂ, ದ್ರುಹ್ಯುಗಳೂ ನೀರಿನ ಮತ್ಸ್ಯಗಳಂತೆ ಪರಸ್ಪರ ಹೋರಾಡತೊಡಗಿದರು. ಆಗ ಸೈನ್ಯದ ಸುತ್ತಲೂ ಪರಿಭ್ರಮಿಸುತ್ತಿದ್ದ ತುರ್ವಶ ಮತ್ತು ಸುದಾಸರ ನಡುವೆ ಸಖನಾದ ಸುದಾಸನನ್ನು ಆ ಹೋರಾಟದಿಂದ ಇಂದ್ರನು ದಾಟುವಂತೆ ಮಾಡಿದನು (ರಕ್ಷಿಸಿದನು).

English Translation.

Turvasha, who was preceding (at solemn rites), deligent in sacrifice (went to Sudas) for wealth ; but like fishes restricted (to the element of water), the Bhrigus and Druhyus quickly assailed them : of these two everywhere going, the friend (of Sudas. Indra) rescued his friend.

|| ಸಂಹಿತಾಪಾಠಃ ||

ಆ ಪಕ್ಥಾಸೋ ಭಲಾನಸೋ ಭನಂತಾಲಿನಾಸೋ ವಿಷಾಣಿನಃ ಶಿವಾಸಃ |
ಆ ಯೋಽನಯತ್ಸಧಮಾ ಆರ್ಯಸ್ಯ ಗವ್ಯಾ ತೃತ್ಸುಭ್ಯೋ ಅಜಗನ್ಯುಧಾ ನೃನ್ || ೭ ||

|| ಪದಪಾಠಃ ||

ಆ | ಪಕ್ಥಾಸಃ | ಭಲಾನಸಃ | ಭನಂತ | ಆ | ಅಲಿನಾಸಃ | ವಿಷಾಣಿನಃ | ಶಿವಾಸಃ ||
ಆ | ಯಃ | ಅನಯತ್ | ಸಧಽಮಾಃ | ಆರ್ಯಸ್ಯ | ಗವ್ಯಾ | ತೃತ್ಸುಽಭ್ಯಃ | ಅಜಗನ್ | ಯುಧಾ | ನೄನ್ || ೭ ||

| ಸಾಯಣಭಾಷ್ಯಂ |

ಪಕ್ಥಾಸಃ ಪಕ್ಥಾ ಹವಿಷಾಂ ಪಾಚಕಾ ಭಲಾನಸೋ ಭದ್ರಮುಖಾಃ | ಭಲೇತಿ ಭದ್ರವಾಚೀ | ಅಲಿನಾಸೋಽಲಿನಾಃ | ತಪೋಭಿರಪ್ರವೃದ್ಧಾ ಇತ್ಯರ್ಥಃ | ವಿಷಾಣಿನಃ ಕಂಡೂಯನಾರ್ಥಂ ಕೃಷ್ಣವಿಷಾಣಹಸ್ತಾಃ | ದೀಕ್ಷಿತಾ ಇತ್ಯರ್ಥಃ | ಶಿವಾಸಃ ಶಿವಾ ಯೋಗಾದಿನಾ ಸರ್ವಸ್ಯ ಲೋಕಸ್ಯ ಶಿವಕರಾಃ | ಯೋಗೇನ ಹಿ ಶಿವಂ ಭವತಿ ಲೋಕಸ್ಯ | ಆ ಭನಂತ | ಅಭಿಷ್ಟುವಂತಿ ತಮಿಂದ್ರಂ | ಭನತಿಃ ಶಬ್ದಕರ್ಮಾ ನೌತಿ

**ಭನತೀತಿ ಶಬ್ದಕರ್ಮಸು ಪಾಠಾತ್ । ಯ ಇಂದ್ರಃ ಸಧಮಾಃ । ಸೋಮಪಾನೇನ ಸಹ ಮಾದ್ಯತೀತಿ ಸಧಮಾದಃ । ಸಧಮಾದ ಏವ ಸಧಮಾಃ । ಆರ್ಯಸ್ಯ ಕರ್ಮಶೀಲಸ್ಯ ಗವ್ಯಾ ಗೋಸಂಘಾನ್ ತೃತ್ಸುಭ್ಯೋ ಹಿಂಸಕೇಭ್ಯ ಆನಯತ್ । ಅಜಗನ್ ಅಜಗತ್ ಸ್ವಯಂ ಚ ಗೋಸಂಘಾನ್ ಲೇಭೇ । ಯುಧಾ ಯುದ್ಧೇನ ತಾನ್ನೄನ್ ಶತ್ರೂನ್ ಜಘಾನ ಚೇತಿ ಶೇಷಃ ॥**

॥ ಪ್ರತಿಪದಾರ್ಥ ॥

**ಯಃ**—ಯಾವ ಇಂದ್ರನು । **ಸಧಮಾಃ**—ಸೋಮಪಾನದಿಂದ ತೃಪ್ತಿಪಡುವವನಾಗಿ । **ಆರ್ಯಸ್ಯ**—ಕರ್ಮಶೀಲನಾದ ಆರ್ಯನಿಗೆ । **ಗವ್ಯಾ**—ಗೋಸಂಘಗಳನ್ನು । **ತೃತ್ಸುಭ್ಯಃ**—ಹಿಂಸಕರಾದ ಶತ್ರುಗಳಿಂದ । **ಆ ಅನಯತ್**—ಬಿಡಿಸಿ ತಂದನೋ । (**ಯಃ**—ಯಾರು) । **ಅಜಗನ್**—ಗೋಸಂಘವನ್ನು ತಾನೇ ಪಡೆದನೋ ಮತ್ತು । **ಯುಧಾ**—ಯುದ್ಧದಲ್ಲಿ । **ನೄನ್**—ಶತ್ರುಗಳನ್ನು ಕೊಂದನೋ ಅಂತಹ (ಇಂದ್ರನನ್ನು) । **ಪಕ್ತಾಸಃ**—ಹವಿಸ್ಸನ್ನು ಪಕ್ವಮಾಡುವವರೂ । **ಭಲಾನಸಃ**—ಕಲ್ಯಾಣಕರವಾದ ಅಧ್ಯಯನಶಬ್ದಮಾಡುವವರೂ । **ಅಲಿನಾಸಃ**—ತಪಸ್ಸಿನಲ್ಲಿ ಅಧಿಕವಾದ ಶ್ರದ್ಧೆಯಿಲ್ಲದಿರುವವರೂ । **ವಿಷಾಣಿನಃ**—ದೀಕ್ಷಾಸೂಚಕವಾದ ಜಿಂಕೆಯ ಕೊಂಬುಗಳನ್ನು ಕೈಯಲ್ಲಿ ಡಿಹಿದಿರುವವರೂ । **ಶಿವಾಸಃ**—ಯಜ್ಞಾದಿಗಳಿಂದ ಲೋಕಕ್ಕೆ ಮಂಗಳವನ್ನುಂಟುಮಾಡುವವರೂ ಆದ ಯಜಮಾನಾದಿಗಳು । **ಆ ಭವಂತ**—ಪೂಜಿಸುತ್ತಾರೆ.

॥ ಭಾವಾರ್ಥ ॥

ಸೋಮಪಾನದಿಂದ ತೃಪ್ತಿಪಟ್ಟವನಾಗಿ ಕರ್ಮಶೀಲನಾದ ಆರ್ಯನಿಗೆ ಗೋಸಂಘಗಳನ್ನು ಹಿಂಸಕರಾದ ಶತ್ರುಗಳಿಂದ ಬಿಡಿಸಿ ತಂದವನೂ, ಗೋಸಂಘವನ್ನು ತಾನೇ ಪಡೆದವನೂ, ಯುದ್ಧದಲ್ಲಿ ಶತ್ರುಗಳನ್ನು ಕೊಂದವನೂ ಆದ ಇಂದ್ರನನ್ನು, ಹವಿಸ್ಸನ್ನು ಪಕ್ವಮಾಡುವವರೂ, ಕಲ್ಯಾಣಕರವಾದ ಅಧ್ಯಯನದ ಶಬ್ದಮಾಡುವ ಮುಖವುಳ್ಳವರೂ, ತಪಸ್ಸಿನಿಂದ ಹಿಂಜರಿಯುವವರೂ, ದೀಕ್ಷಾಸೂಚಕವಾದ ಜಿಂಕೆಯ ಕೊಂಬನ್ನು ಕೈಯ್ಯಲ್ಲಿ ಹಿಡಿದಿರುವವರೂ, ಯಜ್ಞಾದಿಗಳಿಂದ ಲೋಕಕ್ಕೆ ಮಂಗಳವನ್ನುಂಟುಮಾಡುವವರೂ ಆದ ಯಜಮಾನಾದಿಗಳು ಪೂಜಿಸುತ್ತಾರೆ.

## English Translation.

Those who dress the oblation, those who pronounce auspicious words, those who abstain from penance, those who bear horns (in their hands), those who bestow happiness (on the world by sacrifice), glorify that Indra, who recovered the cattle of the Arya from the plunderers, who slew the enemies in battle.

॥ ಸಂಹಿತಾಪಾಠಃ ॥

ದುರಾಧ್ಯೋ೩ ಅದಿತಿಂ ಸ್ರೇವಯಂತೋಽಚೇತಸೋ ವಿ ಜಗೃಭ್ರೇ ಪರುಷ್ಣೀಂ।
ಮಹ್ನಾ ವಿವ್ಯಕ್ಪೃಥಿವೀಂ ಪತ್ಯಮಾನಃ ಪಶುಷ್ಕವಿರಶಯಚ್ಚಾಯಮಾನಃ ॥

॥ ಪದಪಾಠಃ ॥

ದುಃಽಅಧ್ಯಃ । ಅದಿತಿಂ । ಸ್ರೇವಯಂತಃ । ಅಚೇತಸಃ । ವಿ । ಜಗೃಭ್ರೇ । ಪರುಷ್ಣೀಂ ।

ಮಹ್ನಾ । ಅವಿವ್ಯಕ್ । ಪೃಥಿವೀಂ । ಪತ್ಯಮಾನಃ । ಪಶುಃ । ಕವಿಃ । ಅಶಯತ್ । ಚಾಯಮಾನಃ ॥ ೮ ॥

॥ ಸಾಯಣಭಾಷ್ಯಂ ॥

ದುರಾಧ್ಯೋ ದುಷ್ಟಾಭಿಸಂಧಯೋಽಚೇತಸೋ ಮಂದಮತಯಃ ಸುದಾಸಃ ಶತ್ರವೋಽದಿತಿಮದೀನಾಂ ಪರುಷ್ಣೀಂ ನದೀಂ ಸ್ರೇವಯಂತೋ ವಿ ಜಗೃಭೇ । ವಿಗ್ರಹಃ ಕೂಲಭೇದಃ । ತಮಕುರ್ವನ್ । ಪರುಷ್ಣ್ಯಾಃ ಕೂಲಂ ಬಿಭಿದುರಿತ್ಯರ್ಥಃ । ಸ ಸುದಾಸೋ ಮಹೇಂದ್ರಪ್ರಸಾದಲಬ್ಧೇನ ಮಹಿಮ್ನಾ ಪೃಥಿವೀಮವಿವ್ಯಕ್ । ತದ್ವೈವ ನಾಪ್ನೋತ್ । ನ ಪುನರುದಕೇನಾಬಾಧ್ಯತ । ತತಃ ಸುದಾಸಃ ಶತ್ರುಶ್ಚಾಯಮಾನಶ್ಚಯಮಾನಸ್ಯ ಪುತ್ರಃ ಕವಿಃ ಕವಿನಾಮಾ ಪತ್ಯಮಾನಃ ಪಲಾಯಮಾನಃ ಪಶುರ್ಯಾಗೇ ಸಂಜ್ಞಪ್ತಃ ಪಶುರಿವಾಶಯತ್ । ಅಶೇತ । ಸುದಾಸಾ ನಿಹತ ಇತ್ಯರ್ಥಃ ॥

॥ ಪ್ರತಿಪದಾರ್ಥ ॥

**ದುರಾಧ್ಯಃ**—ದುಷ್ಟಬುದ್ಧಿಯುಳ್ಳವರೂ । **ಅಚೇತಸಃ**—ಪ್ರಜ್ಞಾರಹಿತರೂ ಆದ ಸುದಾಸನ ಶತ್ರುಗಳು । **ಅದಿತಿಂ**—ಪೂರ್ಣಪ್ರವಾಹವುಳ್ಳ । **ಪರುಷ್ಣೀಂ**—ಪರುಷ್ಣೀನದಿಯನ್ನು । **ಸ್ರೇವಯಂತಃ**—ದಾಟುತ್ತಾ । **ವಿ ಜಗೃಭ್ರೇ**—ಅದರ ದಡಗಳನ್ನೆಲ್ಲಾ ಒಡೆದುಹಾಕಿದರು । (**ಸಃ**—ಆಗ ಸುದಾಸನು) । **ಮಹ್ನಾ**—ಇಂದ್ರನ ಅನುಗ್ರಹದಿಂದ ಲಬ್ಧವಾದ ಮಹಿಮೆಯಿಂದ । **ಪೃಥಿವೀಂ**—ಪೃಥಿವಿಯನ್ನೆಲ್ಲಾ । **ಅವಿವ್ಯಕ್**—ಆವರಿಸಿ ನಿಂತನು । **ಚಾಯಮಾನಃ**—ಸುದಾಸಶತ್ರುವೂ, ಚಯಮಾನಪುತ್ರನೂ ಆದ । **ಕವಿಃ**—ಕವಿಯೆಂಬುವನು । **ಪತ್ಯಮಾನಃ**—ಪಲಾಯನಮಾಡುತ್ತಾ । **ಪಶುಃ**—ಯಜ್ಞಪಶುವಿನಂತೆ । **ಅಶಯತ್**—ಮಡಿದು ಮಲಗಿದನು.

॥ ಭಾವಾರ್ಥ ॥

ದುಷ್ಟಬುದ್ಧಿಯುಳ್ಳವರೂ, ಪ್ರಜ್ಞಾರಹಿತರೂ ಆದ ಸುದಾಸನ ಶತ್ರುಗಳು ಪೂರ್ಣಪ್ರವಾಹವುಳ್ಳ ಪರುಷ್ಣೀ ನದಿಯನ್ನು ದಾಟುತ್ತಾ ಅದರ ದಡಗಳನ್ನೆಲ್ಲಾ ಒಡೆದುಹಾಕಿದರು. ಆಗ ಸುದಾಸನು ಇಂದ್ರನ ಅನುಗ್ರಹದಿಂದ ಲಬ್ಧವಾದ ಮಹಿಮೆಯಿಂದ ಪೃಥ್ವಿಯನ್ನೆಲ್ಲಾ ಆವರಿಸಿ ನಿಂತನು ಸುದಾಸನಶತ್ರುವೂ, ಚಯಮಾನಪುತ್ರನೂ ಆದ ಕವಿಯೆಂಬುವನು ಪಲಾಯನಮಾಡುತ್ತಾ ಯಜ್ಞಪಶುವಿನಂತೆ ಯುದ್ಧದಲ್ಲಿ ಮಡಿದು ಮಲಗಿದನು.

## English Translation.

The evil-disposed and stupid (enemies of Sudas), crossing the flooded Parushni river, have broken down its banks; but he by his greatness pervades the earth, and Kavi, the son of Chayamana, like a falling victim, sleeps (in death).

॥ ಸಂಹಿತಾಪಾಠಃ ॥

ಈಯುರರ್ಥಂ ನ ನ್ಯರ್ಥಂ ಪರುಷ್ಣೀಮಾಶುಶ್ಚನೇದಭಿಪಿತ್ವಂ ಜಗಾಮ ।
ಸುದಾಸ ಇಂದ್ರಃ ಸುತುಕಾಁ ಅಮಿತ್ರಾನರಂಧಯನ್ಮಾನುಷೇ ವಧ್ರಿವಾಚಃ ॥

॥ ಪದಪಾಠಃ ॥

ಈಯುಃ । ಅರ್ಥಂ । ನ । ನಿಽಅರ್ಥಂ । ಪರುಷ್ಣೀಂ । ಆಶುಃ । ಚನ । ಇತ್ । ಅಭಿಽಪಿತ್ವಂ । ಜಗಾಮ ।
ಸುಽದಾಸೇ । ಇಂದ್ರಃ । ಸುಽತುಕಾನ್ । ಅಮಿತ್ರಾನ್, । ಅರಂಧಯತ್ । ಮಾನುಷೇ । ವಧ್ರಿಽವಾಚಃ ॥೯॥

॥ ಸಾಯಣಭಾಷ್ಯಂ ॥

ಅಥೇಂದ್ರಃ ಪರುಷ್ಣ್ಯಾ ವಿಚ್ಛಿನ್ನಾನಿ ಪರ್ವಾಣಿ ಸಂದಧೇ । ತತಃ ಪರುಷ್ಣ್ಯಾ ಆಪೋ ಯಥಾಪೂರ್ವಮರ್ಥಂ ಗಂತವ್ಯಮೇವ ಪ್ರವಣದೇಶಂ ಪ್ರತಿ ಪರುಷ್ಣೀಮಿಯುಃ । ಆಯಯೌ ಚಕ್ರುಃ ॥ ಇಣ್ ಗತಾವಿತಿ ಧಾತೋರಂತರ್ಭಾವಿತಣ್ಯರ್ಥಾತ್ ಲಿಟೇಯುರಿತಿ । ಅತೋ ದ್ವಿಕರ್ಮಕಮಾಖ್ಯಾತಂ ॥ ನ್ಯರ್ಥಮಗಂತವ್ಯಂ ಪರುಷ್ಣ್ಯಾಃ ಪಾರ್ಶ್ವಯೋಃ ಸ್ಥಿತಂ ನಿಮ್ನಂ ದೇಶಂ ಪ್ರತಿ ಪರುಷ್ಣೀಂ ನೇಯುಃ । ಆಶುಶ್ಚನ ರಾಜ್ಞಃ ಸುದಾಸೋಽಶ್ವೋಽಪ್ಯಭಿಪಿತ್ವಮಭಿಪ್ರಾಪ್ತವ್ಯಮೇವ ಜಗಾಮ । ಇಂದ್ರಶ್ಚ ಸುದಾಸೇ ರಾಜ್ಞೇ ಮಾನುಷೇ ಲೋಕೇ ವಧ್ರಿವಾಚೋ ಜಲ್ಪಕಾನಮಿತ್ರಾನ್ ಶತ್ರೂನ್ ಸುತುಕಾನ್ ಸುತೋಕಾನ್ । ತುಕ್ ತೋಕಮಿತ್ಯಪತ್ಯನಾಮಸು ಪಾಠಾತ್ । ಅರಂಧಯತ್ । ವಶಮಾನಯತ್ ॥

॥ ಪ್ರತಿಪದಾರ್ಥ ॥

(ಆಪಃ—ಉದಕಗಳು) । **ಪರುಷ್ಣೀಂ**—ಪರುಷ್ಣೀನದಿಯಲ್ಲಿ । **ಅರ್ಥಂ**—ಗಂತವ್ಯಪ್ರದೇಶವನ್ನು ಮಾತ್ರ । **ಈಯುಃ**—ಹೋಗಿ ಸೇರಿವೆ । **ನ್ಯರ್ಥಂ**—ಅಗಂತವ್ಯಪ್ರದೇಶಗಳಿಗೆ । **ನ**—ಹೋಗಿ ತೊಂದರೆ ಪಡಿಸಲಿಲ್ಲ । **ಆಶುಶ್ಚನ**—ಸುದಾಸನ ಅಶ್ವವೂ ಸಹ । **ಅಭಿಪಿತ್ವಂ**—ಗಂತವ್ಯಪ್ರದೇಶವನ್ನೇ । **ಜಗಾಮ**—ಹೋಗಿ ಸೇರಿದೆ । **ಇಂದ್ರಃ**—ಇಂದ್ರನು । **ಮಾನುಷೇ**—ಮನುಷ್ಯಲೋಕದಲ್ಲಿ । **ವಧ್ರಿವಾಚಃ**—ಅಪ್ರಯೋಜಕವಾದ ವಾಕ್ಕುಳ್ಳ । **ಅಮಿತ್ರಾನ್**—ಶತ್ರುಗಳನ್ನು । **ಸುತುಕಾನ್**—ಪುತ್ರಪೌತ್ರಾದಿಗಳೊಡನೆ । **ಸುದಾಸೇ**—ಸುದಾಸನೆಂಬ ರಾಜನಿಗೆ । **ಅರಂಧಯತ್**—ವಶವಾಗುವಂತೆ ಮಾಡಿದನು.

॥ ಭಾವಾರ್ಥ ॥

ಇಂದ್ರನ ಅನುಗ್ರಹದಿಂದ ಉದಕಗಳು ಪರುಷ್ಣೀನದಿಯಲ್ಲಿ ಗಂತವ್ಯಪ್ರದೇಶಗಳನ್ನು ಮಾತ್ರ ಹೋಗಿ ಸೇರಿವೆ. ಅಗಂತವ್ಯಪ್ರದೇಶಗಳಿಗೆ ನುಗ್ಗಿ ತೊಂದರೆಪಡಿಸಿಲ್ಲ. ಸುದಾಸನ ಅಶ್ವವೂ ಸಹ ಗಂತವ್ಯಪ್ರದೇಶವನ್ನೇ ಹೋಗಿ ಸೇರಿದೆ. ಇಂದ್ರನು ಮನುಷ್ಯಲೋಕದಲ್ಲಿ ಅಪ್ರಯೋಜಕವಾದ ವಾಕ್ಕುಳ್ಳ ಶತ್ರುಗಳನ್ನು ಪುತ್ರಪೌತ್ರಾದಿಗಳೊಡನೆ ಸುದಾಸನೆಂಬ ರಾಜನಿಗೆ ವಶವಾಗುವಂತೆ ಮಾಡಿದನು.

## English Translation.

The waters followed their regular course to the Parushni, nor (wandered) beyond it : the quick courser (of the king) came to the accessible places, and Indra made the idly-talking enemies, with their numerous progeny, subject among men (to Sudas)

॥ ಸಂಹಿತಾಪಾಠಃ ॥

ಈಯುರ್ಗಾವೋ ನ ಯವಸಾದಗೋಪಾ ಯಥಾಕೃತಮಭಿ ಮಿತ್ರಂ
ಚಿತಾಸಃ ।
ಪೃಶ್ನಿಗಾವಃ ಪೃಶ್ನಿನಿಪ್ರೇಷಿತಾಸಃ ಶ್ರುಷ್ಟಿಂ ಚಕ್ರುರ್ನಿಯುತೋ ರಂತ-
ಯಶ್ಚ ॥ ೧೦ ॥

॥ ಪದಪಾಠಃ ॥

ಈಯುಃ । ಗಾವಃ । ನ । ಯವಸಾತ್ । ಅಗೋಪಾಃ । ಯಥಾಽಕೃತಂ । ಅಭಿ । ಮಿತ್ರಂ । ಚಿತಾಸಃ ।
ಪೃಶ್ನಿಽಗಾವಃ । ಪೃಶ್ನಿಽ ನಿಪ್ರೇಷಿತಾಸಃ । ಶ್ರುಷ್ಟಿಂ । ಚಕ್ರುಃ । ನಿಽಯುತಃ । ರಂತಯಃ । ಚ ॥ ೧೦ ॥

॥ ಸಾಯಣಭಾಷ್ಯಂ ॥

ಯದೇಂದ್ರಃ ಸುದಾಸೋ ರಕ್ಷಣಾರ್ಥಮಾಗಚ್ಛತಿ ತದಾ ಪೃಶ್ನಿನಿಪ್ರೇಷಿತಾಸಃ ಪೃಶ್ನಿನಿಪ್ರೇಷಿತಾಃ ಪೃಶ್ನ್ಯಾ ಮಾತ್ರಾ ನಿತರಾಂ ಪ್ರಹಿತಾಶ್ಚಿತಾಸಃ ಸಂಹತಾ ಜಾನಂತೋ ವಾ ಪೃಶ್ನಿಗಾವಃ । ಪೃಶ್ನಿವರ್ಣಾ ಗಾವೋಽಶ್ವಾ ಯೇಷಾಂ ತೇ ಪೃಶ್ನಿಗಾವೋ ಮರುತೋ ಯಥಾಕೃತಮಿಂದ್ರಸ್ಯ ಸಾಹಾಯ್ಯಂ ಕರವಾಮೇತಿ ಯಥಾ ಪೂರ್ವಂ ಸಮಯಃ ಕೃತಸ್ತಂ ಸಮಯಮನತಿಕ್ರಮ್ಯ ಮಿತ್ರಮಿಂದ್ರಂ ಯವಸಾತ್ ॥ ನಿಮಿತ್ತಾರ್ಥೇ ಪಂಚಮೀ ॥ ಯವಸಂ ನಿಮಿತ್ತೀಕೃತ್ಯಾಗೋಪಾ ಗೋಪಾಲೇನಾರಕ್ಷಿತಾ ಗಾವೋ ನ ಗಾವ ಇವಾಭೀಯುಃ । ಅಭಿಜಗ್ಮುಃ । ರಂತಯೋ ರಮಮಾಣಾ ನಿಯುತೋ ಮರುತಾಮಶ್ವಾಶ್ಚ ಶ್ರುಷ್ಟಿಂ ಶೀಘ್ರಪ್ರಾಪ್ತಿಂ ಚಕ್ರುಃ । ತಸ್ಮಿನ್ಯುದ್ಧೇ ಮರುತ ಇಂದ್ರಂ ಸಾಹಾಯ್ಯಾರ್ಥಮಭ್ಯಗಚ್ಛನ್ನಿತ್ಯರ್ಥಃ ॥

॥ ಪ್ರತಿಪದಾರ್ಥ ॥

**ಯವಸಾತ್**—ಪುಷ್ಕಲವಾದ ಹುಲ್ಲಿನ ನಿಮಿತ್ತವಾಗಿ । **ಅಗೋಪಾಃ**—ಗೋಪಾಲರಹಿತವಾದ । **ಗಾವಃ ನ**—ಗೋವುಗಳು ತಡೆಯಿಲ್ಲದೇ ವೇಗವಾಗಿ ಓಡಿಬರುವಂತೆ । **ಪೃಶ್ನಿನಿಪ್ರೇಷಿತಾಸಃ**—ಪೃಶ್ನಿಯಿಂದ ಕಳುಹಲ್ಪಟ್ಟವರೂ । **ಚಿತಾಸಃ**—ಪ್ರಜ್ಞಾಯುತರೂ । **ಪೃಶ್ನಿಗಾವಃ**—ವರ್ಣವೈವಿಧ್ಯವುಳ್ಳ ಅಶ್ವಯುಕ್ತರೂ ಆದ ಮರುತ್ತುಗಳು । **ಯಥಾಕೃತಂ**—ಇಂದ್ರನಿಗೆ ಸಹಾಯಮಾಡುವರೆಂದು ಮಾಡಿದ ಸಮಯಕ್ಕೆ ಅನುಗುಣವಾಗಿ ।

**ಮಿತ್ರಂ**—ಮಿತ್ರನಾದ ಇಂದ್ರನನ್ನು । **ಅಭಿ ಈಯುಃ**—ಸಹಾಯಾರ್ಥವಾಗಿ ಓಡಿಬಂದು ಸೇರಿಕೊಂಡಿದ್ದಾರೆ । **ರಂತಯಃ**—ಕ್ರೀಡಾಯುತವಾದ । **ನಿಯುತಃ ಚ**—ಅವರ ಅಶ್ವಗಳೂ ಕೂಡ । **ಶ್ರುಷ್ಟಿಂ ಚಕ್ರುಃ**—ಅವರನ್ನು ಬೇಗ ಬರುವಂತೆ ಮಾಡಿದವು.

|| ಭಾವಾರ್ಥ ||

ಪುಷ್ಕಲವಾದ ಹುಲ್ಲಿನ ನಿಮಿತ್ತವಾಗಿ ಪಾಲಕನಿಲ್ಲದ ಗೋವುಗಳು ತಡೆಯಿಲ್ಲದೇ ವೇಗವಾಗಿ ಓಡಿಬರುವಂತೆ, ಪೃಶ್ನಿಯಿಂದ ಕಳುಹಲ್ಪಟ್ಟವರೂ, ಪ್ರಜ್ಞಾಯುತರೂ, ವರ್ಣವೈವಿಧ್ಯವುಳ್ಳ ಅಶ್ವಯುಕ್ತರೂ ಆದ ಮರುತ್ತುಗಳು ಇಂದ್ರನಿಗೆ ಸಹಾಯಮಾಡುವಂತೆ ಕೊಟ್ಟ ಭರವಸೆಯ ಮೇರೆಗೆ ಓಡಿಬಂದು ಇಂದ್ರನನ್ನು ಸೇರಿದ್ದಾರೆ. ಕ್ರೀಡಾಯುತವಾದ ಮರುತ್ತುಗಳ ಅಶ್ವಗಳೂ ಸಹ ಅವರನ್ನು ಬೇಗಬರುವಂತೆ ಮಾಡಿದವು.

## English Translation.

They who ride on parti-coloured cattle, (the Maruts), despatched by Prisni, and recalling the engagement made by them with their friend (Indra), came like cattle from the pasturage, when left without a herdsman: the exulting Niyut steeds brought them quickly (against the foe).

॥ ಸಂಹಿತಾಪಾಠಃ ॥

ಏಕಂ ಚ ಯೋ ವಿಂಶತಿಂ ಚ ಶ್ರವಸ್ಯಾ ವೈಕರ್ಣಯೋರ್ಜನಾನ್ರಾಜಾ
ನ್ಯಸ್ತಃ ।
ದಸ್ಮೋ ನ ಸದ್ಮನ್ನಿ ಶಿಶಾತಿ ಬರ್ಹಿಃ ಶೂರಃ ಸರ್ಗಮಕೃಣೋದಿಂದ್ರ
ಏಷಾಂ ॥ ೧೧ ॥

॥ ಪದಪಾಠಃ ॥

ಏಕಂ । ಚ । ಯಃ । ವಿಂಶತಿಂ । ಚ । ಶ್ರವಸ್ಯಾ । ವೈಕರ್ಣಯೋಃ । ಜನಾನ್ । ರಾಜಾ । ನಿ । ಅಸ್ತರಿತ್ಯಸ್ತಃ । ದಸ್ಮಃ । ನ । ಸದ್ಮನ್ । ನಿ । ಶಿಶಾತಿ । ಬರ್ಹಿ । ಶೂರಃ । ಸರ್ಗಂ । ಅಕೃಣೋತ್ । ಇಂದ್ರಃ । ಏಷಾಂ ॥೧೧॥

॥ ಸಾಯಣಭಾಷ್ಯಂ ॥

ಯೋ ಸುದಾಸೋ ರಾಜಾ ಶ್ರವಸ್ಯಾ ಯಶಸ ಇಚ್ಛಯಾನ್ನೇಚ್ಛಯಾ ವಾ ಪರುಷ್ಣ್ಯಾಃ ಪಾರ್ಶ್ವಸ್ಥಯೋರ್ವೈಕರ್ಣಯೋರ್ಜನಪದಯೋರ್ವಿದ್ಯಮಾನಾನೇಕಂ ಚ ವಿಂಶತಿಂ ಚ ಜನಾನ್ ನ್ಯಸ್ತಃ ಆತ್ಮನಾಹನ್ ಸ ರಾಜಾ ದಸ್ಮೋ ನ ದರ್ಶನೀಯೋ ಯುವಾಧ್ವರ್ಯುರಿವ ಸದ್ಮನ್ಯಜ್ಞಗೃಹೇ

ಬರ್ಹಿರ್ಯಸ್ಮಿನ್ಯುದ್ಧೇ ಸಪತ್ನಾನ್ನಿ ಶಿಶಾತಿ ನಿತರಾಂ ಲುನಾತಿ ತಸ್ಮಿನ್ಯುದ್ಧೇ ಶೂರ ಇಂದ್ರ ಏಷಾಂ ಮರುತಾಂ ಸರ್ಗಂ ಪ್ರಸವಮಕೃಣೋತ್ ಸುದಾಸಃ ಸಾಹಾಯ್ಯಾರ್ಥಮಕರೋತ್ ॥

। ಪ್ರತಿಪದಾರ್ಥ ।

**ಸದ್ಮನ್**—ಯಜ್ಞಗೃಹದಲ್ಲಿ। **ದಸ್ಮಃ**—ಯುವಕನಾದ ಅಧ್ವರ್ಯುವು। **ಬರ್ಹಿಃ**—ದರ್ಭಾಗ್ರವನ್ನು **ನಿ ಶಿಶಾತಿ ನ**—ಸುಲಭವಾಗಿ ಕತ್ತರಿಸಿ ಹಾಕುವಂತೆ। **ಯಃ ರಾಜಾ**—ಯಾವ ಸುದಾಸನು। **ಶ್ರವಸ್ಯಾ**—ಕೀರ್ತಿಯನ್ನು ಪಡೆಯಬೇಕೆಂಬಿಚ್ಛೆಯಿಂದ। **ವೈಕರ್ಣಯೋಃ**—ಪರುಷ್ಣೀನದಿಯ ಎರಡು ದಡಗಳಲ್ಲೂ। **ಏಕಂ ಚ ವಿಂಶತಿಂ ಚ**—ಇಪ್ಪತ್ತೊಂದು ಸಂಖ್ಯೆಯುಳ್ಳ। **ಜನಾನ್**—ಶತ್ರುಜನರನ್ನು। **ನ್ಯಸ್ತಃ**—ಸುಲಭವಾಗಿ ಕೆಳಗುರಿಳಿಸಿದನೋ (ಅಂತಹ ಸುದಾಸನಿಗಾಗಿ)। **ಶೂರಃ**—ಪರಾಕ್ರಮಿಯಾದ। **ಇಂದ್ರಃ**—ಇಂದ್ರನು। **ಏಷಾಂ**—ಮರುತ್ತುಗಳ। **ಸರ್ಗಂ**—ಉತ್ಪತ್ತಿಯನ್ನು। **ಅಕೃಣೋತ್**—ಉಂಟುಮಾಡಿದನು.

॥ ಭಾವಾರ್ಥ ॥

ಯಜ್ಞಗೃಹದಲ್ಲಿ ಯುವಕನಾವ ಅಧ್ವರ್ಯುವು ದರ್ಭಾಗ್ರವನ್ನು ಸುಲಭವಾಗಿ ಕತ್ತರಿಸಿ ಹಾಕುವಂತೆ ಯಾವ ಸುದಾಸನು ಕೀರ್ತಿಯನ್ನು ಪಡೆಯಬೇಕೆಂಬಿಚ್ಛೆಯಿಂದ ಪರುಷ್ಣೀನದಿಯ ಎರಡು ದಡಗಳಲ್ಲೂ ಇಪ್ಪತ್ತೊಂದು ಸಂಖ್ಯೆಯುಳ್ಳ ಶತ್ರುಜನರನ್ನು ಸುಲಭವಾಗಿ ಕೆಳಗುರುಳಿಸಿದನೋ ಅಂತಹ ಸುದಾಸನಿಗಾಗಿ ಪರಾಕ್ರಮಿಯಾದ ಇಂದ್ರನು ಈ ಮರುತ್ತುಗ ಉತ್ಪತ್ತಿಯನ್ನುಂಟುಮಾಡಿದನು.

## English Translation

The hero Indra created the Maruts (for the assistance of the Raja), who. ambitious of fame, slew one-and-twenty of the men on the two banks (of the Parushni), as a well-looking priest lops the sacred grass in the chamber of sacrifice.

। ಸಂಹಿತಾಪಾಠಃ ।

ಅಧ ಶ್ರುತಂ ಕವಷಂ ವೃದ್ಧಮಪ್ಸ್ವನು ದ್ರುಹ್ಯುಂ ನಿ ವೃಣಗ್ವಜ್ರಬಾಹುಃ ।
ವೃಣಾನಾ ಅತ್ರ ಸಖ್ಯಾಯ ಸಖ್ಯಂ ತ್ವಾಯಂತೋ ಯೇ ಅಮದನ್ನನು
ತ್ವಾ ॥ ೧೨ ॥

॥ ಪದಪಾಠಃ ॥

ಅಧ । ಶ್ರುತಂ । ಕವಷಂ । ವೃದ್ಧಂ । ಅಪ್ಽಸು । ಅನು । ದ್ರುಹ್ಯುಂ । ನಿ । ವೃಣಕ್ । ವಜ್ರಽಬಾಹುಃ ।
ವೃಣಾನಾಃ । ಅತ್ರ । ಸಖ್ಯಾಯ । ಸಖ್ಯಂ । ತ್ವಾಽಯಂತಃ । ಯೇ । ಅಮದನ್ । ಅನು । ತ್ವಾ ॥ ೧೨ ॥

॥ ಸಾಯಣಭಾಷ್ಯಂ ॥

**ಅಥಾಪಿ ಚ ವಜ್ರಬಾಹುರಿಂದ್ರಃ ಶ್ರುತಂ ಕವಷಂ ಚ ವೃದ್ಧಂ ಚ ತ್ರೀನ್ ತಥಾ ದ್ರುಹ್ಯುಮನು ಆನುಪೂರ್ವ್ಯೇಣಾಪ್ಸೂದಕೇಷು ನಿ ವೃಣಕ್ । ನ್ಯಮಜ್ಜಯದಿತ್ಯರ್ಥಃ । ಅತ್ರಾಸ್ಮಿನ್ನವಸರೇ ಯೇ ತ್ವಾಯಂತಸ್ತ್ವತ್ಕಾಮಾಸ್ತ್ವಾ ತ್ವಾಮನ್ವಮದನ್ ಅಸ್ತುವನ್ ತೇ ಸಖಾಯಃ ಸಖ್ಯಾಯ ಸಖ್ಯಾರ್ಥಂ ತ್ವಾಂ ವೃಣಾನಾಃ ಸಖ್ಯಂ ಲೇಭಿರ ಇತಿ ಶೇಷಃ ॥**

॥ ಪ್ರತಿಪದಾರ್ಥ ॥

**ಅಥ**—ಅನಂತರ | **ವಜ್ರಬಾಹುಃ**—ವಜ್ರಾಯುಧವನ್ನು ಬಾಹುಗಳಲ್ಲಿ ಹಿಡಿದಿರುವ ಇಂದ್ರನು | **ಶ್ರುತಂ**—ಶ್ರುತನನ್ನೂ | **ಕವಷಂ**—ಕವಷನನ್ನೂ | **ವೃದ್ಧಂ**—ವೃದ್ಧನನ್ನೂ | **ಅನು**—ತದನಂತರ | **ದ್ರುಹ್ಯುಂ**—ದ್ರುಹ್ಯುವನ್ನೂ | **ಅಪ್ಸು**—ಉದಕಗಳಲ್ಲಿ | **ನಿ ವೃಣಕ್**—ಮುಳುಗಿಸಿದನು | (ಎಲೈ ಇಂದ್ರನೇ) | **ಅತ್ರ**—ಈ ಸಂದರ್ಭದಲ್ಲಿ | **ತ್ವಾಯಂತಃ**—ನಿನ್ನ ಸಹಾಯಾಪೇಕ್ಷಿಗಳಾದ | **ಯೇ**—ಯಾರು ಯಾರು | **ತ್ವಾ**—ನಿನ್ನನ್ನು **ಅನ್ವಮದನ್**—ಸ್ತುತಿಸಿ ಹರ್ಷಗೊಳಿಸಿದರೋ (ಅವರೆಲ್ಲರೂ) | **ಸಖ್ಯಾಯ**—ನಿನ್ನೊಡನೆ ಸಖಿತ್ವಕ್ಕಾಗಿ | **ವೃಣಾನಾಃ**—ನಿನ್ನನ್ನು ಆರಿಸಿ | **ಸಖ್ಯಂ**—ಸಖಿತ್ವವನ್ನು ಹೊಂದಿದರು.

॥ ಭಾವಾರ್ಥ ॥

ವಜ್ರಬಾಹುವಾದ ಇಂದ್ರನು ಶ್ರುತ, ಕವಷ, ವೃದ್ಧ ಮತ್ತು ದ್ರುಹ್ಯು ಇವರೆಲ್ಲರನ್ನೂ ನೀರಿನಲ್ಲಿ ಮುಳುಗಿಸಿದನು. ಎಲೈ ಇಂದ್ರನೇ, ಈ ಸಂದರ್ಭಗಳಲ್ಲಿ ನಿನ್ನ ಸಹಾಯಾಪೇಕ್ಷಿಗಳಾದ ಯಾರು ಯಾರು ನಿನ್ನನ್ನು ಸ್ತುತಿಸಿ ಹರ್ಷಗೊಳಿಸಿದರೋ ಅವರೆಲ್ಲರೂ ನಿನ್ನೊಡನೆ ಸಖಿತ್ವಕ್ಕಾಗಿ ನಿನ್ನನ್ನು ಆರಿಸಿ ನಿನ್ನ ಸಖಿತ್ವವನ್ನು ಹೊಂದಿದರು.

English Translation.

You, the bearer of the thunderbolt, drowned Sruta, Kawasha, Vriddha, and afterwards Druhyu, in the waters: for they, Indra, who are devoted to you, and glorify you, preferring your friendship, enjoy it.

॥ ಸಂಹಿತಾಪಾಠಃ ॥

ವಿ ಸದ್ಯೋ ವಿಶ್ವಾ ದೃಂಹಿತಾನ್ಯೇಷಾಮಿಂದ್ರಃ ಪುರಃ ಸಹಸಾ ಸಪ್ತ ದರ್ದಃ ।
ವ್ಯಾನವಸ್ಯ ತೃತ್ಸವೇ ಗಯಂ ಭಾಗ್ಜೇಷ್ಮ ಪೂರುಂ ವಿದಥೇ ಮೃಧ್ರವಾಚಂ ॥

॥ ಪದಪಾಠಃ ॥

ವಿ । ಸದ್ಯಃ । ವಿಶ್ವಾ । ದೃಂಹಿತಾನಿ । ಏಷಾಂ । ಇಂದ್ರಃ । ಪುರಃ । ಸಹಸಾ । ಸಪ್ತ । ದರ್ದರಿತಿ ದರ್ದಃ ।
ವಿ । ಆನವಸ್ಯ । ತೃತ್ಸವೇ । ಗಯಂ । ಭಾಕ್ । ಜೇಷ್ಮ । ಪೂರುಂ । ವಿದಥೇ । ಮೃಧ್ರऽವಾಚಂ ॥ ೧೩ ॥

॥ ಸಾಯಣಭಾಷ್ಯಂ ॥

**ಏಷಾಂ ಕವಷಾದೀನಾಂ ವಿಶ್ವಾ ವಿಶ್ವಾನಿ ದೃಂಹಿತಾನಿ ದೃಢಾನಿ ದುರ್ಗಾಣಿ ಪುರೋ ನಗರೀಃ ತದ್ರಕ್ಷಾಸಾಧನಭೂತಾನ್ ಸಪ್ತ ಪ್ರಾಕಾರಾಂಶ್ಚೇಂದ್ರಃ ಸಹಸಾ ಬಲೇನ ಸದ್ಯ ಏವ ವಿ ದರ್ದಃ । ವಿದಾರಯಾಮಾಸ । ಅಪಿ ಚಾನವಸ್ಯಾನೋಃ ಸಂಬಂಧಿನೋ ಬಲಸ್ಯಾನೋಃ ಪುತ್ರಸ್ಯ ವಾ ಗಯಂ ಗೃಹಂ ಧನಂ ವಾ ತೃತ್ಸವೇ ತೃತ್ಸುನಾಮಕಾಯ ರಾಜ್ಞೇ ತೃತ್ಸೂನಾಂ ಗಣಾಯ ವಾ ವಿ ಭಾಕ್ । ವ್ಯಭಜತ್ । ಅದಾದಿತ್ಯರ್ಥಃ । ಇತ್ಥಮಿಂದ್ರಂ ಸ್ತುವಂತೋ ವಯಂ ವಿದಥೇ ಯುದ್ಧೇ ಮೃಧ್ರವಾಚಂ ಬಾಧವಾಚಂ ಪೂರುಂ ಮನುಷ್ಯಂ ಜೇಷ್ಮ । ಜಯೇಮ ॥**

॥ ಪ್ರತಿಪದಾರ್ಥ ॥

**ಏಷಾಂ**— ಈ ಕವಷಾದಿಗಳ | **ವಿಶ್ವಾ**—ಸಮಸ್ತವಾದವೂ | **ದೃಂಹಿತಾನಿ**—ದೃಢವಾದವೂ ಆದ | **ಪುರಃ**—ಪಟ್ಟಣಗಳನ್ನೂ | **ಸಪ್ತ**—ಅವುಗಳ ಸಪ್ತಪ್ರಾಕಾರ (ಕೋಟೆ) ಗಳನ್ನೂ | **ಇಂದ್ರಃ**—ಇಂದ್ರನು | **ಸಹಸಾ**—ತನ್ನ ಬಲದಿಂದ | **ಸದ್ಯಃ**—ಒಡನೆಯೇ | **ವಿ ದರ್ದಃ**—ಸೀಳಿಹಾಕಿದನು | **ಆನವಸ್ಯ**—ಅನುಪುತ್ರನಾದ ಬಲನ| **ಗಯಂ** - ಗೃಹವನ್ನು | **ತೃತ್ಸವೇ** - ತೃತ್ಸುವಿಗೆ | **ವಿ ಭಾಕ್**—ಕೊಡಿಸಿಕೊಟ್ಟನು | (**ವಯಂ**—ನಾವೂ ಸಹ) | **ವಿದಥೇ**—ಯುದ್ಧದಲ್ಲಿ | **ಮೃಧ್ರವಾಚಂ**—ಹಿಂಸಾಕಾರಕವಾದ ಮಾತನ್ನಾಡುವ | **ಪೂರುಂ**—ಶತ್ರುಜನರನ್ನು | **ಜೇಷ್ಮ**—ಜಯಿಸುವಂತಾಗಲಿ.

॥ ಭಾವಾರ್ಥ ॥

ಮೇಲೆ ಹೇಳಿದ ಕವಷಾದಿಗಳ ದೃಢವಾದ ಸಮಸ್ತ ಪಟ್ಟಣಗಳನ್ನೂ, ಅವುಗಳ ಸಪ್ತಪ್ರಾಕಾರಗಳನ್ನೂ (ಕೋಟೆಗಳನ್ನೂ) ಇಂದ್ರನು ತನ್ನ ಬಲದಿಂದ ಒಡನೆಯೇ ಸೀಳಿಹಾಕಿದನು. ಅನುಪುತ್ರನಾದ ಬಲನ ಗೃಹವನ್ನು ತೃತ್ಸುವಿಗೆ ಕೊಡಿಸಿ ಕೊಟ್ಟನು. ನಾವೂ ಸಹ ಯುದ್ಧದಲ್ಲಿ ಹಿಂಸಾಕಾರಕವಾದ ಮಾತುಗಳನ್ನಾಡುವ ಶತ್ರುಜನರನ್ನು ಜಯಿಸುವಂತಾಗಲಿ.

English Translation.

Indra, in his might, quickly demolished all their strongholds, and their seven (kinds of) cities : he has given the dwelling of the son of Anu to Tritsu : may we, (by propitiating Indra), conquer in battle the ill-speaking man

॥ ಸಂಹಿತಾಪಾಠಃ ॥

ನಿ ಗವ್ಯವೋಽನವೋ ದ್ರುಹ್ಯವಶ್ಚ ಷಷ್ಟಿಃ ಶತಾ ಸುಷುಪುಃ ಷಟ್ ಸಹಸ್ರಾ ।
ಷಷ್ಟಿರ್ವೀರಾಸೋ ಅಧಿ ಷಡ್ದುವೋಯು ವಿಶ್ವೇದಿಂದ್ರಸ್ಯ ವೀರ್ಯಾ
ಕೃತಾನಿ ॥ ೧೪ ॥

॥ ಪದಪಾಠಃ ॥

ನಿ । ಗವ್ಯವಃ । ಅನವಃ । ದ್ರುಹ್ಯವಃ । ಚ । ಷಷ್ಟಿಃ । ಶತಾ । ಸುಸುಪುಃ । ಷಟ್ । ಸಹಸ್ರಾ ।

ಷಷ್ಟಿಃ । ವೀರಾಸಃ । ಅಧಿ । ಷಟ್ । ದುವಃऽಯು । ವಿಶ್ವಾ । ಇತ್ । ಇಂದ್ರಸ್ಯ । ವೀರ್ಯಾ । ಕೃತಾನಿ ॥ ೪॥

॥ ಸಾಯಣಭಾಷ್ಯಂ ॥

ಗವ್ಯವೋ ಗೋಕಾಮಾ ಅನವೋಽನೋಃ ಸಂಬಂಧಿನೋ ದ್ರುಹ್ಯವೋ ದ್ರುಹ್ಯೋಃ ಸಂಬಂಧಿನಶ್ಚ ವೀರಾಸೋ ವೀರಾಃ ಷಷ್ಟಿಃ ಶತಾ ಶತಾನಿ । ಸಹಸ್ರಾಣೀತ್ಯರ್ಥಃ । ಷಟ್ ಸಹಸ್ರಾ ಸಹಸ್ರಾಣಿ ಚ ಷಷ್ಟಿಶ್ಚಾಧಿ ಷಡಧಿಕಾಃ ಷಟ್ಚ ದುವೋಯು ದುವೋಯುವೇ ॥ ಚತುರ್ಥೀ ಲುಕ್ ॥ ಪರಿಚರಣಕಾಮಾಯ ಸುದಾಸೇ । ನಮಸ್ಯತಿ ದುವಸ್ಯತೀತಿ ಪರಿಚರಣಕರ್ಮಸು ಪಾಠಾತ್ । ನಿ ಸುಸುಪುಃ । ನಿತರಾಂ ಶೇರತೇ । ನಿಹತಾ ಇತ್ಯರ್ಥಃ । ತಾನ್ಯೇತಾನಿ ವಿಶ್ವಾ ವಿಶ್ವಾನಿ ಕೃತಾನಿ ಕಾರ್ಯಾಣೀಂದ್ರಸ್ಯೇತ್ ಇಂದ್ರಸ್ಯೈವ ವೀರ್ಯಾ ವೀರ್ಯಾಣೀತಿ ॥

॥ ಪ್ರತಿಪದಾರ್ಥ ॥

**ಗವ್ಯವಃ**—ಗೋವುಗಳನ್ನು ಅಪಹರಿಸಲಿಚ್ಛೆಯುಳ್ಳ । **ಅನವಃ**—ಅನುವಿನ ಗುಂಪಿಗೆ ಸೇರಿದವರೂ । **ದ್ರುಹ್ಯವಃ**—ದ್ರುಹ್ಯುವಿನ ಗುಂಪಿಗೆ ಸೇರಿದವರೂ ಆದ । **ವೀರಾಸಃ**—ವೀರಯೋಧರು । **ಷಷ್ಟಿಃ ಶತಾ ಷಟ್ ಸಹಸ್ರಾ ಷಷ್ಟಿಶ್ಚಾಧಿ ಷಟ್**—ಅರವತ್ತಾರು ಸಾವಿರದ ಆರನೂರ ಅರವತ್ತು ಸಂಖ್ಯೆಗಳ ಬಲವುಳ್ಳವರಾದರೂ । **ದುವೋಯು**—ಪರಿಚರಣಕರ್ಮಕುಶಲನಾದ ಸುದಾಸನಿಗಾಗಿ । **ನಿ ಸುಷುಪುಃ**—ಹತರಾಗಿ ಮಲಗಿಸಲ್ಪಟ್ಟರು । **ವಿಶ್ವಾಕೃತಾನಿ**—ಈ ರೀತಿಯಾದ ಸಮಸ್ತ ಕರ್ಮಗಳೂ ಸಹ । **ಇಂದ್ರಸ್ಯ ವೀರ್ಯಾ ಇತ್**—ಇಂದ್ರನ ವೀರ್ಯಗಳಲ್ಲದೇ ಬೇರೆ ಯಾರಿಂದಲೂ ಸಾಧ್ಯವಿಲ್ಲ.

॥ ಭಾವಾರ್ಥ ॥

ಸುದಾಸನ ಗೋವುಗಳನ್ನಪಹರಿಸಲಿಚ್ಛಿಸಿದ ಅನುವಿನ ಗುಂಪಿಗೆ ಸೇರಿದವರೂ, ದ್ರುಹ್ಯುವಿನ ಗುಂಪಿಗೆ ಸೇರಿದವರೂ ಆದ ವೀರಯೋಧರು ಅರವತ್ತಾರುಸಾವಿರದ ಆರನೂರ ಅರವತ್ತು ಸಂಖ್ಯೆಗಳ ಬಲವುಳ್ಳವರಾದರೂ ಪರಿಚರಣಕರ್ಮಕುಶಲನಾದ ಸುದಾಸನಿಗಾಗಿ ಇಂದ್ರನಿಂದ ಹತರಾಗಿ ಮಲಗಿಸಲ್ಪಟ್ಟರು. ಈರೀತಿಯಾದ ಸಮಸ್ತ ಕರ್ಮಗಳೂಸಹ ಇಂದ್ರನ ವೀರ್ಯಗಳಲ್ಲದೇ ಬೇರೆ ಯಾರಿಂದಲೂ ಸಾಧ್ಯವಿಲ್ಲ.

## English Translation.

The warriors of the Anus and Druhyus, intending (to carry off the) cattle, (hostile) to the pious (Sudas), perished to the number of sixty-six thousand six hundred and sixty: such are all the glorious acts of Indra.

॥ ಸಂಹಿತಾಪಾಠಃ ॥

ಇಂದ್ರೇಣೈತೇ ತೃತ್ಸವೋ ವೇವಿಷಾಣಾ ಆಪೋ ನ ಸೃಷ್ಟಾ ಅಧವಂತ ನೀಚೀಃ।
ದುರ್ಮಿತ್ರಾಸಃ ಪ್ರಕಲವಿನ್ಮಿಮಾನಾ ಜಹುರ್ವಿಶ್ವಾನಿ ಭೋಜನಾ ಸುದಾಸೇ ॥

॥ ಪದಪಾಠಃ ॥

ಇಂದ್ರೇಣ । ಏತೇ । ತೃತ್ಸವಃ । ವೇವಿಷಾಣಾಃ । ಆಪಃ । ನ । ಸೃಷ್ಟಾಃ । ಅಧವಂತ । ನೀಚೀಃ ।
ದುಃऽಮಿತ್ರಾಸಃ । ಪ್ರಕಲऽವಿತ್ । ಮಿಮಾನಾಃ । ಜಹುಃ । ವಿಶ್ವಾನಿ । ಭೋಜನಾ । ಸುऽದಾಸೇ ॥ ೧೫ ॥

॥ ಸಾಯಣಭಾಷ್ಯಂ ॥

**ಕದಾಚಿದಿಂದ್ರೇಣ ರಕ್ಷಿತಾ ಅಪ್ಯನ್ಯದಾ ತೇನೈವ ಬಾಧ್ಯಂತೇ। ಏತೇ ತೃತ್ಸವೋ ದುರ್ಮಿತ್ರಾಸೋ ದುಷ್ಟಮಿತ್ರಾಃ ಪ್ರಕಲವಿದಜಾನಂತ ಇಂದ್ರೇಣ ವೇವಿಷಾಣಾ ಯುದ್ಧಾರ್ಥಂ ಸಂಗತಾಃ ಸೃಷ್ಟಾಃ ಪಲಾಯನಾರ್ಥಮುದ್ಯುಕ್ತಾ ನೀಚೀಃ ನೀಚೀನಾ ಆಪೋ ನ ಅಪ ಇವಾಧವಂತ। ಅಧಾವಂತ। ತತೋ ಮಿಮಾನಾಃ ಸುದಾಸಾ ಬಾಧ್ಯಮಾನಾ ವಿಶ್ವಾನಿ ಭೋಜನಾ ಭೋಗ್ಯಾನಿ ಧನಾನಿ ಸುದಾಸೇ ರಾಜ್ಞೇ ಜಹುಃ ॥**

॥ ಪ್ರತಿಪದಾರ್ಥ ॥

**ದುರ್ಮಿತ್ರಾಸಃ**—ನಂಬಿಕೆಗೆ ಅರ್ಹರಲ್ಲದ ದುಷ್ಟರೂ । **ಪ್ರಕಲವಿತ್**—ವಣಿಗ್ಜನರಂತೆ ದ್ರೋಹ ಬುದ್ಧಿಯುಳ್ಳವರೂ ಆದ । **ಏತೇ ತೃತ್ಸವಃ**—ಈ ತೃತ್ಸುಗಳು । **ಇಂದ್ರೇಣ**—ಇಂದ್ರನೊಡನೆ । **ವೇವಿಷಾಣಾಃ**—ಯುದ್ಧಮಾಡಬೇಕೆಂಬ ಹಠದಿಂದ ಪ್ರಯತ್ನಿಸಿ । **ಸೃಷ್ಟಾಃ**—(ಕೈಲಾಗದೇ) ಪಲಾಯನಕ್ಕೆ ಉದ್ಯುಕ್ತರಾಗಿ । **ನೀಚೀ**—ಅಧೋಭಾಗಕ್ಕೆ ಪ್ರವಹಿಸುವ । **ಆಪೋ ನ**—ನೀರಿನ ಪ್ರವಾಹದಂತೆ । **ಅಧವಂತ**—ವೇಗವಾಗಿ ಓಡಿಹೋದರು । (**ತತಃ**—ಅನಂತರ) । **ಮಿಮಾನಾಃ**—ಸುದಾಸನಿಂದ ಹಿಂಸಿತರಾದ ಶತ್ರುಗಳು । **ವಿಶ್ವಾನಿ**—ಸಮಸ್ತವಾದ । **ಭೋಜನಾ**—ಭೋಗಸಾಮಗ್ರಿಗಳನ್ನೂ ಸಹ । **ಸುದಾಸೇ**—ಸುದಾಸನ ವಶಕ್ಕೆ । **ಜಹುಃ**—ಬಿಟ್ಟುಕೊಟ್ಟರು.

॥ ಭಾವಾರ್ಥ ॥

ನಂಬಿಕೆಗೆ ಅನರ್ಹರೂ, ಶತ್ರುರೂಪರೂ, ಅವಿವೇಕಿಗಳೂ ಆದ ಈ ತೃತ್ಸುಗಳು ಇಂದ್ರನೊಡನೆ ಯುದ್ಧ ಮಾಡಬೇಕೆಂಬ ಹಠದಿಂದ ಪ್ರಯತ್ನಿಸಿ ಕೈಲಾಗದೇ ಪಲಾಯನಕ್ಕೆ ಉದ್ಯುಕ್ತರಾಗಿ ಅಧೋಭಾಗಕ್ಕೆ ಪ್ರವಹಿಸುವ ನೀರಿನ ಪ್ರವಾಹದಂತೆ ವೇಗವಾಗಿ ಓಡಿಹೋದರು. ಅನಂತರ ಸುದಾಸನಿಂದ ಹಿಂಸಿತರಾದ ಶತ್ರುಗಳು ಸಮಸ್ತ ಭೋಗಸಾಮಗ್ರಿಗಳನ್ನೂ ಸಹ ಸುದಾಸನ ವಶಕ್ಕೆ ಬಿಟ್ಟುಕೊಟ್ಟರು.

English Translation.

These hostile Tritsus, ignorantly contending with Indra, fled routed as rapidly as rivers on a downward course, and being discomfited, abandoned all their possessions to Sudas.

|| ವಿಶೇಷವಿಷಯಗಳು ||

**ಪ್ರಕಲವಿತ್**—ಈ ಶಬ್ದದ ಅರ್ಥವನ್ನು ವಿವರಿಸುವುದಕ್ಕಾಗಿ ಯಾಸ್ಕರು ಈ ಋಕ್ಕನ್ನೇ ಉದಾಹರಣೆಯಾಗಿ ತೆಗೆದುಕೊಂಡು ನಿರ್ವಚನವನ್ನು ಹೇಳಿದಾರೆ—

**ಪ್ರಕಲವಿತ್ । ಪ್ರಕಲವಿದ್ವಣಿಗ್ಭವತಿ । ಕಲಾಶ್ಚ ವೇದ ಪ್ರಕಲಾಶ್ಚ । ದುರ್ಮಿತ್ರಾಸಃ ಪ್ರಕಲವಿನ್ಮಿ-ಮಾನಾಃ ಇತ್ಯಪಿ ನಿಗಮೋ ಭವತಿ ॥**

(ನಿ. ೬-೬)

**ಪ್ರಕಲವಿತ್**—ಎಂದರೆ ವ್ಯಾಪಾರಮಾಡುವ ವಣಿಗ್ಜನ, ವರ್ತಕ, ಎಂದರ್ಥವು. ಇವನು ತನ್ನ ವ್ಯಾಪಾರದಲ್ಲಿ ಲಾಭ ಬರಬೇಕೆಂಬ ಉದ್ದೇಶದಿಂದ ವ್ಯಾಪಾರಾದಿ ವಿಷಯಗಳಲ್ಲಿ ಸಣ್ಣದು, ದೊಡ್ಡದು ಎಂದು ಭೇದವಿಲ್ಲದೆ ಸಣ್ಣ ಸಣ್ಣ ವಿಷಯಗಳನ್ನು ಸಹ ಚೆನ್ನಾಗಿ ತಿಳಿದುಕೊಂಡಿರುವನು. ಮತ್ತು ವ್ಯಾಪಾರಮಾಡುವಾಗ ನ್ಯಾಯಾನ್ಯಾಯವನ್ನು ಗಮನಿಸದೆ ತನ್ನ ಲಾಭದ ಮೇಲೆಯೇ ದೃಷ್ಟಿಯಿಟ್ಟು ಕೆಟ್ಟಬುದ್ಧಿಯಿಂದ ಪ್ರವರ್ತಿಸುವನು ಎಂದರೆ ವ್ಯಾಪಾರದಲ್ಲಿ ಮೋಸಮಾಡಲು ಹಿಂಜರಿಯುವುದಿಲ್ಲ. ಆದ್ದರಿಂದ ಅಧರ್ಮಪ್ರವರ್ತಕರು ಅಥವಾ ದುಷ್ಟಜನರು, ಮೋಸಗಾರರು ಮೊದಲಾದ ದುಷ್ಟಜನರನ್ನು ನಿರ್ದೇಶಿಸುವಾಗ ವಣಿಗ್ಜನರನ್ನು ದೃಷ್ಟಾಂತವಾಗಿ ಹೇಳುವುದು ರೂಢಿಯಲ್ಲಿದೆ.

॥ ಸಂಹಿತಾಪಾಠಃ ॥

**ಅರ್ಧಂ ವೀರಸ್ಯ ಶೃತಪಾಮನಿಂದ್ರಂ ಪರಾ ಶರ್ಧಂತಂ ನುನುದೇ ಅಭಿ ಕ್ಷಾಂ।**
**ಇಂದ್ರೋ ಮನ್ಯುಂ ಮನ್ಯುಮ್ಯೋ ಮಿಮಾಯ ಭೇಜೇ ಪಥೋ ವರ್ತನಿಂ**
**ಪತ್ಯಮಾನಃ ॥ ೧೬ ॥**

॥ ಪದಪಾಠಃ ॥

ಅರ್ಧಂ । ವೀರಸ್ಯ । ಶೃತಽಪಾಂ । ಅನಿಂದ್ರಂ । ಪರಾ । ಶರ್ಧಂತಂ । ನುನುದೇ । ಅಭಿ । ಕ್ಷಾಂ ।
ಇಂದ್ರಃ । ಮನ್ಯುಂ । ಮನ್ಯುಽಮ್ಯಃ । ಮಿಮಾಯ । ಭೇಜೇ । ಪಥಃ । ವರ್ತನಿಂ । ಪತ್ಯಮಾನಃ ॥ ೧೬ ॥

॥ ಸಾಯಣಭಾಷ್ಯಂ ॥

ಇಂದ್ರೋಽಭಿ ಕ್ಷಾಂ ಭೂಮಿಮಭಿ । ಭೂಮ್ಯಾಮಿತ್ಯರ್ಥಃ । ವೀರಸ್ಯ ವೀರ್ಯಯುಕ್ತಸ್ಯ ಸುದಾಸೋಽರ್ಧಂ ಹಿಂಸಕಂ ॥ ಅರ್ಧೇರ್ಹಿಂಸಾಕರ್ಮಣೋಽರ್ಧಶಬ್ದಸ್ಯ ನಿಷ್ಪತ್ತಿಃ ॥ ಅನಿಂದ್ರಂ । ಯಸ್ಯ ಬುದ್ಧಾವಿಂದ್ರೋ ನಾಸ್ತ್ಯಸಾವನಿಂದ್ರಃ । ತಂ । ಇಂದ್ರಮಗಣಯಂತಮಿತ್ಯರ್ಥಃ । ಶೃತಪಾಂ ಶೃತಸ್ಯ ಕ್ಷೀರಾದೇರ್ಹವಿಷಃ ಪಾತಾರಂ ಶರ್ಧಂತಮುತ್ಸಹಮಾನಂ ಪರಾ ನುನುದೇ । ಕಿಂಚ ಮನ್ಯುಮ್ಯೋ ಮನ್ಯುಕರ್ತುರ್ಮನ್ಯುನಾ ಮಿನತೋ ಹಿಂಸತೋ ವಾ ಶತ್ರೋರ್ಮನ್ಯುಂ ಕ್ರೋಧಂ ಮಿಮಾಯ । ಬಬಾಧೇ । ಅಥ ಸುದಾಸಃ ಶತ್ರುಃ ಪಥೋ ಮಾರ್ಗಾನ್ ಪತ್ಯಮಾನೋ ಗಚ್ಛನ್ ವರ್ತನಿಂ ಪಲಾಯನ-ಮಾರ್ಗಂ ಭೇಜೇ । ಪ್ರಾಪ ॥

। ಪ್ರತಿಪದಾರ್ಥ ।

**ವೀರಸ್ಯ**—ವೀರ್ಯಯುಕ್ತನಾದ ಸುದಾಸನಿಗೆ । **ಅರ್ಧಂ**—ಹಿಂಸಕನೂ । **ಅನಿಂದ್ರಂ**—ಇಂದ್ರನನ್ನು ಆರಾಧಿಸದವನೂ । **ಶೃತಪಾಂ**—ಕ್ಷೀರಾದಿ ಹವಿಸ್ಸುಗಳನ್ನಪಹರಿಸುವವನೂ । **ಶರ್ಧಂತಂ**—ಮೇಲೆ ಬೀಳು ವವನೂ ಆದ ಶತ್ರುವನ್ನು । **ಇಂದ್ರಃ**— ಇಂದ್ರನು । **ಕ್ಷಾಂ ಅಭಿ**— ಪೃಥ್ವಿಯ ಮೇಲೆಲ್ಲಾ । **ಪರಾ ನುನುದೇ**—ಸುತ್ತಲೂ ಹೊರಳಾಡುವಂತೆ ಉರುಳಿಸಿದನು । **ಮನ್ಯುಮ್ಯಃ**—ಕ್ರೋಧದಿಂದ ಎದುರಿಸುವ ಶತ್ರುವಿನ । **ಮನ್ಯುಂ**— ಕ್ರೋಧವನ್ನು । **ಮಿಮಾಯ**—ಹಾಳುಮಾಡಿದನು । (ಅನಂತರ ಶತ್ರುವು) । **ಪಥಃ**—ತನ್ನ ಮಾರ್ಗ ಗಳನ್ನು । **ಪತ್ಯಮಾನಃ**—ಅನುಸರಿಸಿ । **ವರ್ತನಿಂ**—ಪಲಾಯನಮಾರ್ಗವನ್ನು । **ಭೇಜೇ**—ಹೊಂದಿದನು.

॥ ಭಾವಾರ್ಥ ॥

ವೀರ್ಯಯುಕ್ತನಾದ ಸುದಾಸನಿಗೆ ಹಿಂಸಕನೂ, ಇಂದ್ರನನ್ನು ಆರಾಧಿಸದವನೂ, ಕ್ಷೀರಾದಿ ಹವಿಸ್ಸುಗಳನ್ನಪ ಹರಿಸುವವನೂ, ಮೇಲೆ ಬೀಳುವವನೂ ಆದ ಶತ್ರುವನ್ನು ಇಂದ್ರನು ಪೃಥ್ವಿಯ ಮೇಲೆಲ್ಲಾ ಬಿದ್ದು ಸುತ್ತಲೂ ಹೊರಳಾಡುವಂತೆ ಮಾಡಿದನು. ಅನಂತರ ಶತ್ರುವು ತನ್ನ ದಾರಿಯನ್ನು ಬಿಟ್ಟು ಪಲಾಯನಮಾರ್ಗವನ್ನು ಹಿಡಿದನು.

## English Translation.

Indra has scattered over the earth the hostile rival of the hero (Sudas) the senior of Indra, the appropriator of the oblation : Indra has baffled the wrath of the wrathful enemy, and the (foe) advancing on the way (against Sudas) has taken the path of flight.

॥ ಸಂಹಿತಾಪಾಠಃ ॥

ಆಧ್ರೇಣ ಚಿತ್ತದ್ವೇಕಂ ಚಕಾರ ಸಿಂಹ್ಯಂ ಚಿತ್ಪೇತ್ವೇನಾ ಜಘಾನ ।
ಅವ ಸ್ರಕ್ತೀರ್ವೇಶ್ಯಾವೃಶ್ಚದಿಂದ್ರಃ ಪ್ರಾಯಚ್ಛದ್ವಿಶ್ವಾ ಭೋಜನಾ ಸುದಾಸೇ ॥

॥ ಪದಪಾಠಃ ॥

ಆಧ್ರೇಣ । ಚಿತ್ । ತತ್ । ಊಂ ಇತಿ । ಏಕಂ । ಚಕಾರ । ಸಿಂಹ್ಯಂ । ಚಿತ್ । ಪೇತ್ವೇನ । ಜಘಾನ ।
ಅವ । ಸ್ರಕ್ತೀಃ । ವೇಶ್ಯಾ । ಅವೃಶ್ಚತ್ । ಇಂದ್ರಃ । ಪ್ರ । ಅಯಚ್ಛತ್ । ವಿಶ್ವಾ । ಭೋಜನಾ । ಸುಽದಾಸೇ ॥

। ಸಾಯಣಭಾಷ್ಯಂ ।

ಇಂದ್ರಸ್ತತ್ತದಾಧ್ರೇಣ ಚಿತ್ ದರಿದ್ರೇಣಾಪಿ ಸುದಾಸ್ಯೈಕಂ ಮುಖ್ಯಂ ದಾನಕರ್ಮ ಚಕಾರ । ಕಾರಯಾಮಾಸ । ಸಿಂಹ್ಯಂ ಚಿತ್ । ಪ್ರವಯಾಃ ಸಿಂಹಃ ಸಿಂಹ್ಯಃ । ತಮಪಿ ಪೇತ್ವೇನ ಚ್ಛಾಗೇನ ಜಘಾನ ।

ಘಾತಯಾಮಾಸ । ವೇಶ್ಯಾ । ವೇಶೀ ಸೂಚೀ । ತಯಾ ಸ್ರಕ್ತೀರ್ಯೂಪಾದೇರಶ್ರೀನವಾವೃಕ್ಷತ್ । ಅವವೃಕ್ತವಾನ್ । ವೇಶ್ಯಾದೇಃ ಕೃತ್ಯಂ ಸೂಚ್ಯೈವಾಕರೋದಿತ್ಯರ್ಥಃ । ತಾನ್ಯೇತಾನಿ ತ್ರೀಣಿ ಕರ್ಮಾಣ್ಯಸಂಭಾವಿತಾನೀತಿ ನಾಶಂಕನೀಯಾನೀಂದ್ರಸ್ಯ ಮಹಿಮ್ನೋಽಧಿಕತ್ವಾತ್ । ವಿಶ್ವಾ ವಿಶ್ವಾನಿ ಭೋಜನಾ ಭೋಜನಾನಿ ಭೋಗ್ಯಾನಿ ಧನಾನಿ ಸುದಾಸೇ ರಾಜ್ಞೇ ಪ್ರಾಯಚ್ಛತ್ । ಅದಾಚ್ಛ ॥

॥ ಪ್ರತಿಪದಾರ್ಥ ॥

ಇಂದ್ರಃ—ಇಂದ್ರನು । **ತತ್**—ಅದೇ ಕಾಲದಲ್ಲಿ । **ಅಧ್ರೇಣ ಚಿತ್**—ದರಿದ್ರನಿಂದಲೂ ಸಹ । **ಏಕಂ**—ಮುಖ್ಯವಾದ ದಾನಕರ್ಮವನ್ನು । **ಚಕಾರ**—ಮಾಡಿಸಿದನು । **ಸಿಂಹ್ಯಂ ಚಿತ್**—ಶಕ್ತಿಯುತವಾದ ಸಿಂಹವನ್ನೂ ಸಹ । **ಪೇತ್ವೇನ**—ಆಡಿನ ಮರಿಯಿಂದಲೇ । **ಜಘಾನ**—ಕೊಲ್ಲಿಸಿದನು । **ವೇಶ್ಯಾ**—ಸೂಜಿಯಿಂದಲೇ । **ಸ್ರಕ್ತೀಃ**—ಯೂಪಸ್ತಂಭಗಳನ್ನು । **ಅವಾವೃಶ್ಚತ್**—ಸಂಸ್ಕರಿಸಿ(ಕತ್ತರಿಸಿ) ಸರಿಪಡಿಸಿದನು । **ವಿಶ್ವಾ**—ಸಮಸ್ತವಾದ । **ಭೋಜನಾ**—ಭೋಗ ಸಾಮಗ್ರಿಗಳನ್ನೂ । **ಸುದಾಸೇ**—ಸುದಾಸನೆಂಬ ರಾಜನಿಗೆ । **ಪ್ರಾಯಚ್ಛತ್**—ಕೊಟ್ಟನು.

॥ ಭಾವಾರ್ಥ ॥

ಮೇಲೆ ಹೇಳಿದ ವೀರ್ಯಕರ್ಮಕಾಲದಲ್ಲೇ ಇಂದ್ರನು ದರಿದ್ರನಿಂದಲೂ ಮುಖ್ಯವಾದ ದಾನಕರ್ಮಗಳನ್ನು ಮಾಡಿಸಿದನು. ಶಕ್ತಿಯುತವಾದ ಸಿಂಹವನ್ನೂ ಸಹ ಆಡಿನ ಮರಿಯಿಂದಲೇ ಕೊಲ್ಲಿಸಿದನು. ಸೂಜಿಯಿಂದಲೇ ಯೂಪಸ್ತಂಭಗಳನ್ನು ಸಂಸ್ಕರಿಸಿ ಸರಿಪಡಿಸಿದನು. ಸಮಸ್ತವಾದ ಭೋಗಸಾಮಗ್ರಿಗಳನ್ನೂ ಸುದಾಸನೆಂಬ ರಾಜನಿಗೆ ಕೊಟ್ಟನು.

English Translation.

Indra has effected a valuable (donation) by a pauper : he has slain an old lion by a goat : he has cut the angles of the sacrificial post with a needle : he has given all the spoils (of the enemy) to Sudas.

॥ ಸಂಹಿತಾಪಾಠಃ ॥

ಶಶ್ವಂತೋ ಹಿ ಶತ್ರವೋ ರಾರಧುಷ್ಟೇ ಭೇದಸ್ಯ ಚಿಚ್ಛರ್ಧತೋ ವಿಂದ ರಂಧಿಂ ।
ಮರ್ತಾಁ ಏನಃ ಸ್ತುವತೋ ಯಃ ಕೃಣೋತಿ ತಿಗ್ಮಂ ತಸ್ಮಿನ್ನಿ ಜಹಿ ವಜ್ರಮಿಂದ್ರ ॥ ೧೮ ॥

॥ ಪದಪಾಠಃ ॥

ಶಶ್ವಂತಃ । ಹಿ । ಶತ್ರವಃ । ರರಧುಃ । ತೇ । ಭೇದಸ್ಯ । ಚಿತ್ । ಶರ್ಧತಃ । ವಿಂದ । ರಂಧಿಂ ।
ಮರ್ತಾನ್ । ಏನಃ । ಸ್ತುವತಃ । ಯಃ । ಕೃಣೋತಿ । ತಿಗ್ಮಂ । ತಸ್ಮಿನ್ । ನಿ । ಜಹಿ । ವಜ್ರಂ । ಇಂದ್ರ ॥

॥ ಸಾಯಣಭಾಷ್ಯಂ ॥

**ಹೇ ಇಂದ್ರ ತೇ ತವ ಶತ್ರವೋಽರಯಃ ಶಶ್ವಂತೋ ಬಹವೋ ರರಧುಃ । ವಶಮಿನಾಯುಃ । ಚಿದಪಿ ಚ ಶರ್ಧತ ಉತ್ಸಹಮಾನಸ್ಯ ಭೇದಸ್ಯ । ಭಿನತ್ತಿ ಮರ್ಯಾದಾ ಇತಿ ಭೇದೋ ನಾಸ್ತಿಕಃ । ತಸ್ಯ । ಯದ್ವಾ । ಭೇದೋ ನಾಮ ಸುದಾಸಃ ಶತ್ರುಃ ಕಶ್ಚಿತ್ । ತಸ್ಯೇತ್ಯರ್ಥಃ । ರಂಧಿಂ ವಶೀಕರಂ ವಿಂದ । ಲಭಸ್ವ । ಯೋ ಭೇದಃ ಸ್ತುವತಸ್ತ್ವಾಂ ಸ್ತುವತೋ ಮರ್ತಾನ್ಮರ್ತ್ಯಾನ್ ಪ್ರತ್ಯೇನಃ ಪಾಪಂ ಕೃಣೋತಿ ಕರೋತಿ ತಸ್ಮಿನ್ ಭೇದೇ ತಿಗ್ಮಂ ನಿಶಿತಂ ಯೋದ್ಧಾರಮುತ್ಸಾಹಯಂತಂ । ತಥಾ ಚ ಯಾಸ್ಕಃ । ತಿಗ್ಮಂ ತೇಜತೇರುತ್ಸಾಹಕರ್ಮಣಃ । ನಿ. ೧೦-೬ । ಇತಿ । ವಜ್ರಂ । ವಜತಿ ಗಚ್ಛತ್ಯೇವ ಶತ್ರುಂ ನ ಪ್ರತಿಹನ್ಯತ ಇತಿ ವಜ್ರಃ । ತಂ ॥ ವಜ್ರಶಬ್ದೋ ವಜೇರ್ಋಜ್ರೇಂದ್ರಾಗ್ರವಜ್ರವಿಪ್ರೇತ್ಯಾದಿನಾ ರನ್ಪ್ರತ್ಯಯಾಂತೋ ನಿಪಾತಿತಃ ॥ ತಂ ಜಹಿ । ವಜ್ರೇಣ ಭೇದಂ ಪ್ರಹರೇತ್ಯರ್ಥಃ ॥**

॥ ಪ್ರತಿಪದಾರ್ಥ ॥

**ಇಂದ್ರ**—ಎಲೈ ಇಂದ್ರನೇ । **ತೇ**—ನಿನ್ನ । **ಶತ್ರವಃ**—ಶತ್ರುಗಳು । **ಶಶ್ವಂತಃ**—ಪೂರ್ಣವಾಗಿ । **ರರಧುಃ**—ನಿನ್ನ ವಶರಾಗಿದ್ದಾರೆ । **ಚಿತ್**—ಅದರ ಜೊತೆಯಲ್ಲಿ । **ಶರ್ಧತಃ**—ನಮ್ಮ ಮೇಲೆ ಬೀಳಲು ಪ್ರಯತ್ನಿಸುವ ! **ಭೇದಸ್ಯ**—ಭೇದನ । **ರಂಧಿಂ**—ವಶೀಕರಣವನ್ನೂ । **ವಿಂದ**—ಹೊಂದು । **ಯಃ**—ಯಾವ ಭೇದನು । **ಸ್ತುವತಃ**—ನಿನ್ನನ್ನು ಸ್ತುತಿಸುವ । **ಮರ್ತಾನ್**—ಮಾನವರ ವಿಷಯದಲ್ಲಿ । **ಏನಃ**—ಪಾಪಕಾರ್ಯವನ್ನು । **ಕೃಣೋತಿ**—ಆಚರಿಸುವನೋ । **ತಸ್ಮಿನ್**—ಅದೇ ಭೇದನಮೇಲೆ । **ತಿಗ್ಮಂ**—ತೀಕ್ಷ್ಣವಾದ । **ವಜ್ರಂ**—ವಜ್ರಾಯುಧವನ್ನು । **ನಿ ಜಹಿ**—ಪ್ರಯೋಗಿಸು.

॥ ಭಾವಾರ್ಥ ॥

ಎಲೈ ಇಂದ್ರನೇ, ನಿನ್ನ ಶತ್ರುಗಳು ಪೂರ್ಣವಾಗಿ ನಿನ್ನ ವಶರಾಗಿದ್ದಾರೆ. ಅದರೊಂದಿಗೆ ನಮ್ಮ ಮೇಲೆ ಬೀಳಲು ಪ್ರಯತ್ನಿಸುವ ಭೇದನನ್ನು ನಿನ್ನ ವಶಕ್ಕೆ ತೆಗೆದುಕೊ, ಯಾವ ಭೇದನು ನಿನ್ನನ್ನು ಸ್ತುತಿಸುವ ಮಾನವರ ವಿಷಯದಲ್ಲಿ ಪಾಪಕಾರ್ಯವನ್ನು ಆಚರಿಸುವನೋ ಅದೇ ಭೇದನಮೇಲೆ ತೀಕ್ಷ್ಣವಾದ ವಜ್ರಾಯುಧವನ್ನು ಪ್ರಯೋಗಿಸು.

## English Translation.

Your numerous enemies, Indra, have been reduced to subjection : effect at some time or other the subjugation of the turbulent Bheda, who holds men praising you as guilty of wickedness : hurl, Indra, your sharp thunderbolt against him.

॥ ಸಂಹಿತಾಪಾಠಃ ॥

ಆವದಿಂದ್ರಂ ಯಮುನಾ ತೃತ್ಸವಶ್ಚ ಪ್ರಾತ್ರ ಭೇದಂ ಸರ್ವತಾತಾ ಮುಷಾಯತ್ ।

ಅಜಾಸಶ್ಚ ಶಿಗ್ರವೋ ಯಕ್ಷವಶ್ಚ ಬಲಿಂ ಶೀರ್ಷಾಣಿ ಜಭ್ರುರಶ್ವ್ಯಾನಿ ॥ ೧೯ ॥

॥ ಪದಪಾಠಃ ॥

ಆವತ್ । ಇಂದ್ರಂ । ಯಮುನಾ । ತೃತ್ಸವಃ । ಚ । ಪ್ರ । ಅತ್ರ । ಭೇದಂ । ಸರ್ವಽತಾತಾ । ಮುಷಾಯತ್ ।
ಅಜಾಸಃ । ಚ । ಶಿಗ್ರವಃ । ಯಕ್ಷವಃ । ಚ । ಬಲಿಂ । ಶೀರ್ಷಾಣಿ । ಜಭ್ರುಃ । ಅಶ್ವ್ಯಾನಿ ॥ ೧೯ ॥

॥ ಸಾಯಣಭಾಷ್ಯಂ ॥

ಅತ್ರಾಸ್ಮಿನ್ ಸರ್ವತಾತಾ ಸರ್ವತಾತೌ ಯುದ್ಧೇ ಯ ಇಂದ್ರೋ ಭೇದಂ ನಾಸ್ತಿಕಂ ಭೇದನಾಮಕಂ ವಾ ಸುದಾಸಃ ಶತ್ರುಂ ಪ್ರ ಮುಷಾಯತ್ ಪ್ರಾಮುಷ್ಣಾತ್ । ಅವಧೀದಿತ್ಯರ್ಥಃ । ತಮಿಂದ್ರಂ ಯಮುನಾವತ್ । ಅತೋಷಯತ್ । ತತ್ತೀರವಾಸೀ ಜನಃ ಸರ್ವೋಽಪ್ಯತೋಷಯದಿತ್ಯರ್ಥಃ । ತೃತ್ಸವಸ್ತೃತ್ಸೋಃ ಪುರುಷಾಶ್ಚಾವನ್ । ಆವದಿತ್ಯೇಕವಚನಂ ಬಹುವಚನಾಂತತಯಾ ವಿಪರಿಣತಂ ಸದತ್ರ ಸಂಬಧ್ಯತೇ । ಕಿಂಚಾಜಾಸೋಽಜಾಜನಪದಾಃ ಶಿಗ್ರವೋ ಜನಪದಾ ಯಕ್ಷವಶ್ಚ ಜನಪದಾ ಅಶ್ವ್ಯಾನ್ಯಶ್ವಸಂಬಂಧೀನಿ ಶೀರ್ಷಾಣಿ ಶಿರಾಂಸಿ । ಯುದ್ಧೇ ಹತಾನಾಮಶ್ವಾನಾಂ ಶಿರಾಂಸೀತ್ಯರ್ಥಃ । ಬಲಿಮುಪಹಾರಂ ತಸ್ಮಾ ಇಂದ್ರಾಯೋಪ ಜಭ್ರುಃ । ಉಪಜಹ್ರುಃ । ಯದ್ವಾ । ಅಶ್ವ್ಯಾನಿ ಶೀರ್ಷಾಣಿ ಯುದ್ಧೇ ಗೃಹೀತಾನ್ಮುಖ್ಯಾನಶ್ವಾನಿಂದ್ರಾಯೋಪಹಾರಂ ಜಹ್ರುರಿತ್ಯರ್ಥಃ ॥

॥ ಪ್ರತಿಪದಾರ್ಥ ॥

**ಅತ್ರ ಸರ್ವತಾತಾ**—ಈ ಯುದ್ಧದಲ್ಲಿ । (**ಯಃ**—ಯಾವ ಇಂದ್ರನು) । **ಭೇದಂ**—ಕರ್ಮಭ್ರಷ್ಟನಾದ ಭೇದನನ್ನು । **ಪ್ರ ಮುಷಾಯತ್**—ಪೂರ್ಣವಾಗಿ ಕೊಂದನೋ । (**ತಂ**) **ಇಂದ್ರಂ**—ಅದೇ ಇಂದ್ರನನ್ನು । **ಯಮುನಾ**—ಯಮುನೆಯು । **ಆವತ್**—ಸಂತೋಷಗೊಳಿಸಿತು । **ತೃತ್ಸವಃ ಚ**—ತೃತ್ಸುಗಳೂ ಸಂತೋಷಗೊಳಿಸಿದರು । **ಅಜಾಸಃ ಚ**—ಅಜಾಸಂಜ್ಞಕರಾದ ಪ್ರಜೆಗಳೂ । **ಶಿಗ್ರವಃ**—ಶಿಗ್ರುಗಳೂ । **ಯಕ್ಷವಶ್ಚ**—ಯಕ್ಷುಗಳೂ । **ಅಶ್ವ್ಯಾನಿ**—ಯುದ್ಧದಲ್ಲಿ ಮೃತವಾದ ಅಶ್ವಗಳ । **ಶೀರ್ಷಾಣಿ**—ತಲೆಗಳನ್ನು । **ಬಲಿಂ**—ಉಪಹಾರವಾಗಿ । **ಜಭ್ರುಃ**—ಅರ್ಪಿಸಿದರು.

॥ ಭಾವಾರ್ಥ ॥

ಯಾವ ಇಂದ್ರನು ಈ ಯುದ್ಧದಲ್ಲಿ ಸುದಾಸನ ಶತ್ರುವೂ ಕರ್ಮಭ್ರಷ್ಟನೂ ಆದ ಭೇದನನ್ನು ಪೂರ್ಣವಾಗಿ ನಾಶಮಾಡಿದನೋ ಅದೇ ಇಂದ್ರನನ್ನು ಯಮುನೆಯೂ ತೃತ್ಸುಗಳೂ ಸಂತೋಷಗೊಳಿಸಿದರು. ಅಜಾಸಂಜ್ಞಕರಾದ ಪ್ರಜೆಗಳೂ, ಶಿಗ್ರುಗಳೂ, ಯಕ್ಷುಗಳೂ ಯುದ್ಧದಲ್ಲಿ ಮೃತವಾದ ಅಶ್ವಗಳ ತಲೆಗಳನ್ನು ಉಪಹಾರವಾಗಿ (ಬಲಿಯಾಗಿ) ಅರ್ಪಿಸಿದರು.

## English Translation.

The dwellers on the Yamuna and the Tritsus glorified Indra when he killed Bheda in battle : the Ajas, the Shigrus, the Yakshas, offered to him as a sacrifice the heads of the horses (killed in the cambat).

॥ ಸಂಹಿತಾಪಾಠಃ ॥

ನ ತ ಇಂದ್ರ ಸುಮತಯೋ ನ ರಾಯಃ ಸಂಚಕ್ಷೇ ಪೂರ್ವಾ ಉಷಸೋ
ನ ನೂತ್ನಾಃ ।
ದೇವಕಂ ಚಿನ್ಮಾನ್ಯಮಾನಂ ಜಘಂಥಾವ ತ್ಮನಾ ಬೃಹತಃ ಶಂಬರಂ ಭೇತ್ ॥

॥ ಪದಪಾಠಃ ॥

ನ । ತೇ । ಇಂದ್ರ । ಸುಽಮತಯಃ । ನ । ರಾಯಃ । ಸಂಽಚಕ್ಷೇ । ಪೂರ್ವಾಃ । ಉಷಸಃ । ನ । ನೂತ್ನಾಃ ।
ದೇವಕಂ । ಚಿತ್ । ಮಾನ್ಯಮಾನಂ । ಜಘಂಥ । ಅವ । ತ್ಮನಾ । ಬೃಹತಃ । ಶಂಬರಂ । ಭೇತ್ ॥ ೨೦ ॥

॥ ಸಾಯಣಭಾಷ್ಯಂ ॥

**ಹೇ ಇಂದ್ರ ತೇ ತವ ಪೂರ್ವಾಃ ಪುರಾತನಾಃ ಸುಮತಯಃ ಶೋಭನಮತಯೋ ರಾಯೋ ಧನಾನಿ ಚೋಷಸೋ ನ ಉಷಸ ಇವ ನ ಸಂಚಕ್ಷೇ ಸಂಖ್ಯಾತುಂ ನ ಶಕ್ಯಾಃ । ನ ನೂತ್ನಾ ನೂತನಾಶ್ಚ ಸುಮತಯೋ ರಾಯಶ್ಚ ನ ಸಂಚಕ್ಷೇ । ಕಿಂಚ ತ್ವಂ ಮಾನ್ಯಮಾನಂ ಮನ್ಯಮಾನಸ್ಯ ಪುತ್ರಂ ದೇವಕಂ ದೇವಕನಾಮಾನಂ ಶತ್ರುಂ ಜಘಂಥ । ಅವಧೀಃ । ತ್ಮನಾ ಸ್ವಯಮೇವ ಬೃಹತೋ ಮಹತಃ ಶೈಲಾತ್ ಶಂಬರಂ ಚಾವ ಭೇತ್ । ಅವಾಭೈತ್ಸೀರಿತಿ ॥**

। ಪ್ರತಿಪದಾರ್ಥ ।

**ಇಂದ್ರ**—ಎಲೈ ಇಂದ್ರನೇ । **ತೇ**—ನಿನ್ನ । **ಪೂರ್ವಾಃ**—ಪುರಾತನಗಳಾದ । **ಸುಮತಯಃ**—ಅನುಗ್ರಹಬುದ್ಧಿಗಳೂ । **ರಾಯಃ**—ಧನಗಳೂ । **ಉಷಸೋ ನ**—ಪುನಃಪುನರಾವರ್ತವಾಗುವ ಉಷಸ್ಸುಗಳನ್ನು ಎಣಿಸಲು ಸಾಧ್ಯವಿಲ್ಲದಿರುವಂತೆ । **ನ ಸಂಚಕ್ಷೇ**—ಗುಣಿಸಿ ಎಣಿಸಲು ಸಾಧ್ಯವೇ ಇಲ್ಲ । **ನ ನೂತ್ನಾಃ**—ಈಗ ಅನುಗ್ರಹಿಸುವ ಧನಗಳನ್ನೂ ಎಣಿಸಲು ಸಾಧ್ಯವಿಲ್ಲ । (**ತ್ವಂ**—ನೀನು) । **ಮಾನ್ಯಮಾನಂ**—ಮನ್ಯಮಾನನ ಪುತ್ರನಾದ । **ದೇವಕಂ**—ದೇವಕನನ್ನೂ । **ಜಘಂಥ**—ಕೊಂದಿದ್ದೀಯೆ । **ತ್ಮನಾ**—ಸ್ವಯಂಪ್ರೇರಿತನಾಗಿಯೇ । **ಬೃಹತಃ**—ಮಹತ್ತಾದ ಪರ್ವತದಿಂದ । **ಶಂಬರಂ ಚ**—ಶಂಬರನನ್ನೂ । **ಅವ ಭೇತ್**—ಸೀಳಿಹಾಕಿದ್ದೀಯೆ.

। ಭಾವಾರ್ಥ ॥

ಎಲೈ ಇಂದ್ರನೇ, ಪುನಃ ಪುನರಾವರ್ತವಾಗುವ ಉಷಸ್ಸುಗಳನ್ನು ಎಣಿಸಲು ಹೇಗೆ ಸಾಧ್ಯವಿಲ್ಲವೋ ಹಾಗೆಯೇ ನಿನ್ನ ಪುರಾತನಗಳಾದ ಅನುಗ್ರಹ ಬುದ್ಧಿಗಳನ್ನೂ ಮತ್ತು ಧನಗಳನ್ನೂ ಎಣಿಸಲು ಸಾಧ್ಯವಿಲ್ಲ. ನಿನ್ನ ಈಗಿನ ಧನಗಳನ್ನೂ ಎಣಿಸಲು ಸಾಧ್ಯವಿಲ್ಲ. ನೀನು ಮನ್ಯಮಾನನ ಪುತ್ರನಾದ ದೇವಕನನ್ನು ಕೊಂದಿದ್ದೀಯೆ. ಸ್ವಯಂಪ್ರೇರಿತನಾಗಿಯೇ ಮಹತ್ತಾದ ಪರ್ವತದಿಂದ ಶಂಬರನನ್ನು ಸೀಳಿಹಾಕಿದ್ದೀಯೆ.

## English Translation.

Your favours, Indra, and your bounties, whether old or new, cannot be counted like the (recurring) dawns ; you have slain Devaka, the son of Manyamana, and of your own will have cast down Sambara from the vast (mountain).

॥ ಸಂಹಿತಾಪಾಠಃ ॥

ಪ್ರ ಯೇ ಗೃಹಾದಮಮದುಸ್ತ್ವಾಯಾ ಪರಾಶರಃ ಶತಯಾತುರ್ವಸಿಷ್ಠಃ ।
ನ ತೇ ಭೋಜಸ್ಯ ಸಖ್ಯಂ ಮೃಷಂತಾಧಾ ಸೂರಿಭ್ಯಃ ಸುದಿನಾ ವ್ಯುಚ್ಛಾನ್ ॥

॥ ಪದಪಾಠಃ ॥

ಪ್ರ । ಯೇ । ಗೃಹಾತ್ । ಅಮಮದುಃ । ತ್ವಾಽಯಾ । ಪರಾಽಶರಃ । ಶತಽಯಾತುಃ । ವಸಿಷ್ಠಃ ।
ನ । ತೇ । ಭೋಜಸ್ಯ । ಸಖ್ಯಂ । ಮೃಷಂತ । ಅಧ । ಸೂರಿಽಭ್ಯಃ । ಸುಽದಿನಾ । ವಿ । ಉಚ್ಛಾನ್ ॥ ೨೧॥

॥ ಸಾಯಣಭಾಷ್ಯಂ ॥

ಹೇ ಇಂದ್ರ ಪರಾಶರಃ ಶತಯಾತುರ್ಬಹುರಕ್ಷಾಃ । ಬಹೂನಿ ರಕ್ಷಾಂಸಿ ಬಾಧಿತುಂ ಯಂ ಕಾಮಯಂತೇ ಸ ಶತಯಾತುರ್ಬಹೂನಾಂ ರಕ್ಷಸಾಂ ಶಾತಯಿತಾ ವಾ । ಶಕ್ತಿರ್ವಸಿಷ್ಠಶ್ಚೈವಮಾದಯೋ ಯೇ ಋಷಯಸ್ತ್ವಾಯಾ ತ್ವದಿಚ್ಛಯಾ ಗೃಹಾದ್ಗೃಹಂ ಪ್ರಾಪ್ಯ ॥ ಲ್ಯಬ್ಲೋಪೇ ದ್ವಿತೀಯಾರ್ಥೇ ಪಂಚಮೀ । ಪಾ. ೨-೩-೨೮-೧ ॥ ಯದ್ವಾ । ಗೃಹಾತ್ ಗೃಹೇ ॥ ಸಪ್ತಮ್ಯರ್ಥೇ ಪಂಚಮೀ ॥ ಪ್ರಾಮಮದುಃ ತ್ವಾಂ ಪ್ರತುಷ್ಟುವುಃ ಪ್ರಕರ್ಷೇಣ ತರ್ಪಿತವಂತೋ ವಾ ತೇ ಪರಾಶರಪ್ರಭೃತಯೋ ಭೋಜಸ್ಯ ಭೋಜಕಸ್ಯ ಪಾಲಸ್ಯ ತೇ ತವ ಸಖ್ಯಂ ಸಖ್ಯುಃ ಕರ್ಮ ಸ್ತೋತ್ರಂ ಯಜನಂ ವಾ ನ ಮೃಷಂತಿ । ನ ವಿಸ್ಮರಂತಿ । ಮೃಷ ಮರ್ಷೇ । ಮರ್ಷೋ ಮರ್ಷಣಂ । ತನ್ನ ಕುರ್ವಂತೀತ್ಯರ್ಥಃ । ಯತೋ ನ ವಿಸ್ಮರಂತ್ಯಥಾತೋ ಹೇತೋಃ ಸೂರಿಭ್ಯಃ ಸೂರೀಣಾಂ ಸ್ತೋತೄಣಾಮೇಷಾಂ ॥ ಅತ್ರ ವಿಭಕ್ತಿವ್ಯತ್ಯಯಃ ॥ ಸುದಿನಾ ಸುದಿನಾನಿ ವ್ಯುಚ್ಛಾನ್ । ವ್ಯುಚ್ಛಂತಿ । ನಿವಸಂತಿ । ಉಪಗಚ್ಛಂತೀತ್ಯರ್ಥಃ ॥

॥ ಪ್ರತಿಪದಾರ್ಥ ॥

(ಎಲೈ ಇಂದ್ರನೇ) **ಶತಯಾತುಃ**—ಅನೇಕ ರಾಕ್ಷಸರ ನಾಶಕನಾದ । **ಪರಾಶರಃ**—ಪರಾಶರನೂ । **ವಸಿಷ್ಠಃ**—ವಸಿಷ್ಠನೂ (ಮತ್ತು) । **ಯೇ**—ಯಾವ ಋಷಿಗಳು । **ತ್ವಾಯಾ**—ನಿನ್ನನ್ನು ಪೂಜಿಸಲಪೇಕ್ಷೆಯಿಂದ । **ಗೃಹಾತ್**—ಗೃಹವನ್ನು ಪ್ರವೇಶಿಸಿ । **ಪ್ರ ಅಮಮದುಃ**—ನಿನ್ನನ್ನು ತುಷ್ಟಿಗೊಳಿಸಿದರೋ । (ಆ ಋಷಿಗಳು) **ಭೋಜಸ್ಯ**—ಸರ್ವಪಾಲಕನಾದ । **ತೇ**—ನಿನ್ನ । **ಸಖ್ಯಂ**—ಸಖಿತ್ವವನ್ನು । **ನ ಮೃಷಂತ**—

ಮರೆಯಲಾರರು | **ಅಧ**—ಆದುದರಿಂದ | **ಸೂರಿಭ್ಯಃ**—ಸ್ತುತಿಕರ್ತರಿಗೆ | **ಸುದಿನಾ**—ಒಳ್ಳೆಯ ದಿನಗಳು | **ವ್ಯುಚ್ಛಾನ್**—ಬೆಳಗಿ ಬರುತ್ತವೆ.

॥ ಭಾವಾರ್ಥ ॥

ಎಲೈ ಇಂದ್ರನೇ, ಅನೇಕ ರಾಕ್ಷಸರ ನಾಶಕನಾದ ಪರಾಶರನೂ, ವಸಿಷ್ಠನೂ ಮುಂತಾದ ಯಾವ ಋಷಿಗಳು ನಿನ್ನನ್ನು ಪೂಜಿಸಲಪೇಕ್ಷೆಯಿಂದ ಗೃಹವನ್ನು ಪ್ರವೇಶಿಸಿ ನಿನ್ನನ್ನು ತುಷ್ಟಿಗೊಳಿಸಿದರೋ ಆ ಋಷಿಗಳು ಸರ್ವಪಾಲಕನಾದ ನಿನ್ನ ಸಖಿತ್ವವನ್ನು ಮರೆಯಲಾರರು. ಆದುದರಿಂದ ಸ್ತುತಿಕರ್ತರಿಗೆ ಖಂಡಿತ ಒಳ್ಳೆಯ ದಿನಗಳು ಬೆಳಗಿ ಬರುತ್ತವೆ.

## English Translation.

Parasara, the destroyer of hundreds (of Raksbasas), and Vasishtha, they who. devoted to you, have glorified you in every dwelling, neglect not the friendship of you (their) benefactor : therefore :prosperous days dawn upon the pious.

॥ ವಿಶೇಷವಿಷಯಗಳು ॥

**ಪರಾಶರಃ**—ಈ ಋಕ್ಕಿಗೆ ಯಾಸ್ಕರು ನಿರ್ವಚನವನ್ನು ಹೇಳಿದಾರೆ—

> **ಪರಾಶರಃ ಪರಾಶೀರ್ಣಸ್ಯ ವಸಿಷ್ಠಸ್ಯ ಸ್ಥವಿರಸ್ಯ ಜಜ್ಞೇ | ಪರಾಶರಃ ಶತಯಾತುರ್ವಸಿಷ್ಠಃ | ಇತ್ಯಪಿ ನಿಗಮೋ ಭವತಿ | ಇಂದ್ರೋಽಪಿ ಪರಾಶರ ಉಚ್ಯತೇ | ಪರಾ ಶಾತಯಿತಾ ಯಾತೂನಾಂ | ಇಂದ್ರೋ ಯಾತೂನಾಮುಭವತ್ಪರಾಶರಃ ಇತ್ಯಪಿ ನಿಗಮೋ ಭವತಿ ||**
>
> (ನಿ. ೬-೩೦)

ಪರಾಶರ ಎಂಬುವನು ಒಬ್ಬ ಋಷಿಯು ; ಜೀರ್ಣವಾದುದೂ, ಶಿಥಿಲವಾದುದೂ ಆದ ಶರೀರವುಳ್ಳ ವಸಿಷ್ಠಋಷಿಯಿಂದ ಉತ್ಪನ್ನನಾದವನು. ವಸಿಷ್ಠನಿಗೆ ಶಕ್ತಿ ಎಂಬ ಪುತ್ರನಿದ್ದನು. ಅವನ ಪುತ್ರನೇ ಪರಾಶರನು ಎಂದರೆ ವಸಿಷ್ಠಋಷಿಗೆ ಈ ಪರಾಶರನು ಮೊಮ್ಮಗನೆಂದಾಯಿತು. ಈ ವಿಷಯವು ಪುರಾಣಾದಿಗಳಲ್ಲಿಯೂ ಹೇಳಿದೆ. **ಪರಾಶರಃ** ಎಂದರೆ ಇಂದ್ರನಿಗೂ ಹೆಸರು ಏತಕ್ಕೆಂದರೆ—**ಪರಾ ಶಾತಯಿತಾ ಯಾತೂನಾಂ** | ರಾಕ್ಷಸರನ್ನು ಸದೆಬಡಿದು ನಾಶಮಾಡುವವನಾದ್ದರಿಂದ ಇಂದ್ರನಿಗೆ ಪರಾಶರನೆಂದೂ ಹೆಸರು. **ಇಂದ್ರೋ ಯಾತೂನಾಮುಭವತ್ಪರಾಶರಃ** ಎಂಬ ಶ್ರುತಿವಾಕ್ಯವು ಈ ಅರ್ಥವನ್ನು ಸಮರ್ಥಿಸುವುದು.

। ಸಂಹಿತಾಪಾಠಃ ॥

**ದ್ವೇ ನಪ್ತುರ್ದೇವವತಃ ಶತೇ ಗೋರ್ದ್ವಾ ರಥಾ ವಧೂಮಂತಾ ಸುದಾಸಃ |**
**ಅರ್ಹನ್ನಗ್ನೇ ಪೈಜವನಸ್ಯ ದಾನಂ ಹೋತೇವ ಸದ್ಮ ಪರ್ಯೇಮಿ ರೇಭನ್ ||**

॥ ಪದಪಾಠಃ ॥

ದ್ವೇ ಇತಿ । ನಪ್ತುಃ । ದೇವऽವತಃ । ಶತೇ ಇತಿ । ಗೋಃ । ದ್ವಾ । ರಥಾ । ವಧೂಮಂತಾ । ಸುऽದಾಸಃ ।
ಅರ್ಹನ್ । ಅಗ್ನೇ । ಪೈಜऽವನಸ್ಯ । ದಾನಂ । ಹೋತಾऽಇವ । ಸದ್ಮ । ಪರಿ । ಏಮಿ । ರೇಭನ್ ॥ ೨೨ ॥

॥ ಸಾಯಣಭಾಷ್ಯಂ ॥

ದೇವವತೋ ರಾಜ್ಞೋ ನಪ್ತುಃ ಪೌತ್ರಸ್ಯ ಪೈಜವನಸ್ಯ ಪಿಜವನಪುತ್ರಸ್ಯ ಸುದಾಸೋ ರಾಜ್ಞೋ ಗೋರ್ಗವಾಂ ದ್ವೇ ಶತೇ ವಧೂಮಂತಾ ವಧೂಸಂಯುಕ್ತೌ ದ್ವಾ ದ್ವೌ ರಥಾ ರಥೌ ಚ ದೇಯಂ ದಾನಂ ದಾನಭೂತಾನ್ ರೇಭನ್ ಇಂದ್ರಂ ಸ್ತುವನ್ ಅತ ಏವಾರ್ಹನ್ಯೋಗ್ಯೋऽಹಂ ವಸಿಷ್ಠೋ ಹೇ ಅಗ್ನೇ ಸದ್ಮ ಯಜ್ಞಗೃಹಂ ಹೋತೇವ ವಷಟ್ಕರ್ತೇವ ಪರ್ಯೇಮಿ । ಅತ್ರಾಗ್ನೇಃ ಸಂಬೋಧನಂ ಸರ್ವದೇವಮುಖ್ಯತ್ವಪ್ರತಿಪಾದನಾರ್ಥಂ ನ ತು ದೇವತಾತ್ವಜ್ಞಾಪನಾರ್ಥಮುತದ್ದೇವತಾಕತ್ವಾದಸ್ಯ ಸೂಕ್ತಸ್ಯ ॥

। ಪ್ರತಿಪದಾರ್ಥ ।

**ಅಗ್ನೇ**—ಎಲೈ ಅಗ್ನಿಯೇ । **ದೇವವತಃ**—ದೇವವಂತನೆಂಬ ರಾಜನ । **ನಪ್ತುಃ**—ಪೌತ್ರನೂ । **ಪೈಜವನಸ್ಯ**—ಪಿಜವನನ ಪುತ್ರನೂ ಆದ । **ಸುದಾಸಃ**—ಸುದಾಸನಿಂದ । **ದಾನಂ**—ದಾನವಾಗಿ ಕೊಡಲ್ಪಟ್ಟ । **ಗೋಃ**—ಗೋವುಗಳ । **ದ್ವೇ ಶತೇ**—ಇನ್ನೂರು ಸಂಖ್ಯೆಗಳನ್ನೂ । **ವಧೂಮಂತಾ**—ವಧುಗಳೊಂದಿಗೆ ಕೂಡಿದ । **ದ್ವಾ ರಥಾ**—ಎರಡು ರಥಗಳನ್ನೂ । **ರೇಭನ್**—ಪ್ರಶಂಸಿಸುತ್ತಲೂ । **ಅರ್ಹನ್**—ನಾನು ಆ ದಾನಕ್ಕೆ ಯೋಗ್ಯನಾಗಿಯೂ । **ಸದ್ಮ**—ಯಜ್ಞಗೃಹವನ್ನು । **ಹೋತಾ ಇವ**—ವಷಟ್ಕರ್ತನಂತೆ । **ಪರ್ಯೇಮಿ**—ಪ್ರದಕ್ಷಿಣವಾಡಿ ಪೂಜಿಸುತ್ತೇನೆ.

॥ ಭಾವಾರ್ಥ ॥

ಎಲೈ ಅಗ್ನಿಯೇ, ದೇವವಂತನೆಂಬ ರಾಜನ ಪೌತ್ರನೂ ಪಿಜವನನ ಪುತ್ರನೂ ಆದ ಸುದಾಸನಿಂದ ದಾನವಾಗಿ ಕೊಡಲ್ಪಟ್ಟ ಇನ್ನೂರು ಗೋವುಗಳನ್ನೂ, ವಧುಯುಕ್ತವಾದ ಎರಡು ರಥಗಳನ್ನು ಪ್ರಶಂಸಿಸುತ್ತಲೂ, ಆ ದಾನಕ್ಕೆ ಯೋಗ್ಯನಾಗಿಯೂ ಇದ್ದು ಯಜ್ಞಗೃಹವನ್ನು ವಷಟ್ಕರ್ತನಂತೆ ಪ್ರದಕ್ಷಿಣೆಮಾಡಿ ಪೂಜಿಸುತ್ತೇನೆ.

## English Translation.

Praising the liberality of Sudas, the grandson of Devavat, the son of Paijavana, the donor of two hundred cows, and of two chariots with two wives, I, worthy (of the gift), circumambulate you Agni, like the ministrant priest in th chamber (of sacrifice).

॥ ಸಂಹಿತಾಪಾಠಃ ॥

ಚತ್ವಾರೋ ಮಾ ಪೈಜವನಸ್ಯ ದಾನಾಃ ಸ್ಮದ್ದಿಷ್ಟಯಃ ಕೃಶನಿನೋ ನಿರೇಕೇ ।
ಋಜ್ರಾಸೋ ಮಾ ಪೃಥಿವಿಷ್ಠಾಃ ಸುದಾಸಸ್ತೋಕಂ ತೋಕಾಯ ಶ್ರವಸೇ ವಹಂತಿ ॥ ೨೩ ॥

॥ ಪದಪಾಠಃ ॥

ಚತ್ವಾರಃ । ಮಾ । ಪೈಜಽವನಸ್ಯ । ದಾನಾಃ । ಸ್ಮತ್ಽದಿಷ್ಟಯಃ । ಕೃಶನಿನಃ । ನಿಽರೇಕೇ ।
ಋಜ್ರಾಸಃ । ಮಾ । ಪೃಥಿವಿಽಸ್ಥಾಃ । ಸುಽದಾಸಃ । ತೋಕಂ । ತೋಕಾಯ । ಶ್ರವಸೇ । ವಹಂತಿ ॥ ೨೩॥

॥ ಸಾಯಣಭಾಷ್ಯಂ ॥

ಪೈಜವನಸ್ಯ ಪಿಜವನಪುತ್ರಸ್ಯ ಸುದಾಸೋ ರಾಜ್ಞಃ ಸ್ಮದ್ದಿಷ್ಟಯಃ ಪ್ರಶಸ್ತಾತಿಸರ್ಜನಾಃ ಶ್ರದ್ಧಾದಿದಾನಾಂಗಯುಕ್ತಾಃ ಕೃಶನಿನೋ ಹಿರಣ್ಯಾಲಂಕಾರವಂತೋ ನಿರೇಕೇ ದುರ್ಗತೌ ಸತ್ಯಾಮೃಜ್ರಾಸ ಋಜುಗಾಮಿನಃ ಪೃಥಿವಿಷ್ಠಾಃ ಪೃಥಿವ್ಯಾಂ ಸುಪ್ರತಿಷ್ಠಿತಾ ದಾನಾ ದೇಯಭೂತಾಶ್ಚತ್ವಾರೋಽಶ್ವಾಸ್ತೋಕಂ ಪುತ್ರವತ್ಪಾಲನೀಯಂ ಮಾಂ ವಸಿಷ್ಠಂ ರಥೇ ಸ್ಥಿತಂ ತೋಕಾಯ ತೋಕಸ್ಯ ಪುತ್ರಸ್ಯ ॥ ಷಷ್ಠ್ಯರ್ಥೇ ಚತುರ್ಥೀ ॥ ಶ್ರವಸೇಽನ್ನಾಯ ಯಶಸೇ ವಾ ವಹಂತಿ । ಪುನರ್ಮೇತಿ ಪೂರಣಃ ॥

॥ ಪ್ರತಿಪದಾರ್ಥ ॥

**ಪೈಜವನಸ್ಯ**—ಪಿಜವನನ ಪುತ್ರನಾದ । **ಸುದಾಸಃ**—ಸುದಾಸನಿಂದ ಕೊಡಲ್ಪಟ್ಟವೂ । **ಸ್ಮದ್ದಿಷ್ಟಯಃ**—ಉತ್ತಮವಾದ ದಾನಕ್ಕೆ ಯೋಗ್ಯವೂ । **ಕೃಶನಿನಃ**—ಸುವರ್ಣಾಲಂಕಾರಪೂರಿತವೂ । **ನಿರೇಕೇ**—ದುರ್ಗಪ್ರದೇಶಗಳಲ್ಲಿ । **ಋಜ್ರಾಸಃ**—ನೇರವಾಗಿ ಸಂಚರಿಸಬಲ್ಲವೂ । **ಪೃಥಿವಿಷ್ಠಾಃ**—ಪೃಥ್ವಿಯಲ್ಲಿ ಸ್ಥಾಪಿತವಾದವೂ । **ದಾನಾಃ**—ದಾನಾರ್ಹವೂ ಆದ । **ಚತ್ವಾರಃ**—ನಾಲ್ಕು ಅಶ್ವಗಳೂ । **ತೋಕಂ**—ನಮ್ಮ ಪುತ್ರನಿಗೂ । **ತೋಕಾಯ**—ತತ್ಪುತ್ರನಿಗೂ । **ಶ್ರವಸೇ**—ಅನ್ನಲಾಭಕ್ಕಾಗಿ । **ವಹಂತಿ**—ನಮ್ಮನ್ನು ವಹಿಸುತ್ತವೆ.

॥ ಭಾವಾರ್ಥ ॥

ಪಿಜವನನ ಪುತ್ರನಾದ ಸುದಾಸನಿಂದ ಕೊಡಲ್ಪಟ್ಟವೂ ಉತ್ತಮವಾದ ದಾನಕ್ಕೆ ಯೋಗ್ಯವೂ, ಸುವರ್ಣಾಲಂಕಾರಪೂರಿತವೂ, ದುರ್ಗಪ್ರದೇಶಗಳಲ್ಲಿಯೂ ನೇರವಾಗಿ ಸಂಚರಿಸಬಲ್ಲವೂ, ಪೃಥ್ವಿಯಲ್ಲಿ ಸ್ಥಾಪಿತವಾದವೂ, ದಾನಾರ್ಹವೂ ಆದ ನಾಲ್ಕು ಅಶ್ವಗಳೂ ಸಹ ನಮ್ಮ ಪುತ್ರಪೌತ್ರಾದಿವಂಶಪಾರಂಪರ್ಯಕ್ಕೂ ಅನ್ನಲಾಭಕ್ಕಾಗಿ ನಮ್ಮನ್ನು ವಹಿಸುತ್ತವೆ.

## English Translation.

Four (horses), having golden trappings, going steadily on a difficult road, celebrated on the earth, the excellent and acceptabe gifts (made) to me by Sudas, the son of the Poijavana, bear me as a son (to obtain) food and progeny.

॥ ಸಂಹಿತಾಪಾಠಃ ॥

ಯಸ್ಯ ಶ್ರವೋ ರೋದಸೀ ಅಂತರುರ್ವೀ ಶೀರ್ಷ್ಣೇಶೀರ್ಷ್ಣೇ ವಿಬಭಾಜಾ ವಿಭಕ್ತಾ ।
ಸಪ್ತೇದಿಂದ್ರಂ ನ ಸ್ರವತೋ ಗೃಣಂತಿ ನಿ ಯುಧ್ಯಾಮಧಿಮಶಿಶಾದಭೀಕೇ ॥

॥ ಪದಪಾಠಃ ॥

ಯಸ್ಯ । ಶ್ರವಃ । ರೋದಸೀ ಇತಿ । ಅಂತಃ । ಉರ್ವೀ ಇತಿ । ಶೀರ್ಷ್ಣೇಽಶೀರ್ಷ್ಣೇ । ವಿಽಬಭಾಜ । ವಿಽಭಕ್ತಾ ।
ಸಪ್ತ । ಇತ್ । ಇಂದ್ರಂ । ನ । ಸ್ರವತಃ । ಗೃಣಂತಿ । ನಿ । ಯುಧ್ಯಾಮಧಿಂ । ಅಶಿಶಾತ್ । ಅಭೀಕೇ ॥೨೪॥

॥ ಸಾಯಣಭಾಷ್ಯಂ ॥

ಯಸ್ಯ ಸುದಾಸಃ ಶ್ರವೋ ಯಶ ಉರ್ವೀ ವಿಸ್ತೀರ್ಣೇ ರೋದಸೀ ದ್ಯಾವಾಪೃಥಿವ್ಯಾವಂತಃ । ವಿಸ್ತೀರ್ಣಯೋರ್ದ್ಯಾವಾಪೃಥಿವ್ಯೋರ್ಮಧ್ಯೇ ವರ್ತತ ಇತ್ಯರ್ಥಃ । ಯಶ್ಚ ಸುದಾ ವಿಭಕ್ತಾ ಧನಸ್ಯ ಪ್ರದಾತಾ ಶೀರ್ಷ್ಣೇಶೀರ್ಷ್ಣೇ ಶ್ರೇಷ್ಠಾಯ ಶ್ರೇಷ್ಠಾಯ ಧನಂ ಪ್ರದದೌ ತಂ ಸುದಾಸಂ ಸಪ್ತೇತ್ ಸಪ್ತೈವ ಲೋಕಾ ಇಂದ್ರಂ ನ ಇಂದ್ರಮಿವ ಗೃಣಂತಿ । ಸ್ತುವಂತಿ । ಕಿಂಚ ಸ್ರವತೋ ನದ್ಯೋಽಭೀಕೇ ಯುದ್ಧೇ ಯುಧ್ಯಾಮಧಿಂ ಯುಧ್ಯಾಮಧಿನಾಮಕಂ ಸಪತ್ನಂ ನ್ಯಶಿಶಾತ್ । ನ್ಯಹನ್ ॥

॥ ಪ್ರತಿಪದಾರ್ಥ ॥

**ಯಸ್ಯ**— ಯಾವ ಸುದಾಸನ । **ಶ್ರವಃ** – ಕೀರ್ತಿಯು । **ಉರ್ವೀ**— ವಿಸ್ತೃತವಾದ । **ರೋದಸೀ**— ದ್ಯಾವಾಪೃಥಿವಿಗಳೆರಡರ । **ಅಂತಃ**— ಮಧ್ಯದಲ್ಲೆಲ್ಲಾ ಪ್ರಸಿದ್ಧವಾಗಿದೆಯೋ । (**ಯಃ**— ಯಾರು) । **ವಿಭಕ್ತಾ**— ಧನಪ್ರದಾತನಾಗಿದ್ದುಕೊಂಡು । **ಶೀರ್ಷ್ಣೇಶಿರ್ಷ್ಣೇ**— ಸಕಲ ಸಜ್ಜನರಿಗೂ ವೈಯಕ್ತಿಕವಾಗಿ । **ವಿ ಬಭಾಜ**— ಧನವನ್ನು ಕೊಟ್ಟನೋ । (**ತಂ**— ಅವನನ್ನು) । **ಸಪ್ತೇತ್**— ಸಪ್ತಲೋಕಗಳೂ । **ಇಂದ್ರಂ ನ**— ಇಂದ್ರನನ್ನು ಯಾವರೀತಿ ಸ್ತುತಿಸುವುವೋ ಹಾಗೆ । **ಗೃಣಂತಿ**— ಪ್ರಶಂಸಿಸುತ್ತವೆ । **ಸ್ರವತಃ**— ಪ್ರವಹಿಸುವ ನದಿಗಳೂ ; **ಅಭೀಕೇ**— ಯುದ್ಧದಲ್ಲಿ । **ಯುಧ್ಯಾಮಧಿಂ**— ಯುಧ್ಯಾಮಧಿಯೆಂಬ ಶತ್ರುವನ್ನು । **ನಿ ಅಶಿಶಾತ್**— ನಾಶಮಾಡಿವೆ.

|| ಭಾವಾರ್ಥ ||

ಯಾವ ಸುದಾಸನ ಕೀರ್ತಿಯು ವಿಸ್ತೃತವಾದ ದ್ಯಾವಾಪೃಥಿವಿಗಳೆರಡರ ಮಧ್ಯದಲ್ಲೆಲ್ಲಾ ಪ್ರಸಿದ್ಧವಾಗಿದೆಯೋ ಯಾರು ಧನದಾತೃವಾಗಿದ್ದುಕೊಂಡು ಸಕಲ ಸಜ್ಜನರಿಗೂ ವೈಯಕ್ತಿಕವಾಗಿ ಧನವನ್ನು ಕೊಟ್ಟನೋ ಅವನನ್ನು ಸಪ್ತಲೋಕಗಳೂ ಸಹ ಇಂದ್ರನನ್ನು ಸ್ತುತಿಸುವಂತೆ ಪ್ರಶಂಸಿಸುತ್ತವೆ. ಪ್ರವಹಿಸುವ ನದಿಗಳೂ, ಯುದ್ಧದಲ್ಲಿ ಯುಧ್ಯಾಮಧಿಯೆಂಬ ಅವನ ಶತ್ರುವನ್ನು ನಾಶಮಾಡಿವೆ.

English Translation.

The seven worlds praise (Sudas) as if he he were Indra : him whose fame (spreads) through the spacious heaven and earth : who, munificent, has distributed (wealth) on every eminent person, and (for whom) the flowing (rivers) have destroyed Yudhyamadhi in war.

|| ಸಂಹಿತಾಪಾಠಃ ||

ಇಮಂ ನರೋ ಮರುತಃ ಸಶ್ಚತಾನು ದಿವೋದಾಸಂ ನ ಪಿತರಂ ಸುದಾಸಃ ।
ಅವಿಷ್ಟನಾ ಪೈಜವನಸ್ಯ ಕೇತಂ ದೂಣಾಶಂ ಕ್ಷತ್ರಮಜರಂ ದುವೋಯು ॥

|| ಪದಪಾಠಃ ||

ಇಮಂ । ನರಃ । ಮರುತಃ । ಸಶ್ಚತ । ಅನು । ದಿವಃऽದಾಸಂ । ನ । ಪಿತರಂ । ಸುऽದಾಸಃ ।
ಅವಿಷ್ಟನ । ಪೈಜऽವನಸ್ಯ । ಕೇತಂ । ದುಃऽನಶಂ । ಕ್ಷತ್ರಂ । ಅಜರಂ । ದುವಃऽಯು ॥ ೨೫ ॥

|| ಸಾಯಣಭಾಷ್ಯಂ ||

ಹೇ ನರೋ ನೇತಾರೋ ಮರುತ ಇಮಂ ಸುದಾಸಂ ರಾಜಾನಂ ಸುದಾಸೋ ರಾಜ್ಞಃ ಪಿತರಂ ದಿವೋದಾಸಂ ನ ದಿವೋದಾಸಮಿವ । ದಿವೋದಾಸ ಇತಿ ಪಿಜವನಸ್ಯೈವ ನಾಮಾಂತರಂ । ಅನು ಸಶ್ಚತ । ಅನುಸೇವಧ್ವಂ । ಕಿಂಚ ದುವೋಯು ಪರಿಚರಣಕಾಮಸ್ಯ ॥ ಷಷ್ಠ್ಯಾ ಲುಕ್ ॥ ಪೈಜವನಸ್ಯ ಪಿಜವನಪುತ್ರಸ್ಯ ಸುದಾಸಃ ಕೇತಂ ಮಂತ್ರಂ ಗೃಹಂ ವಾವಿಷ್ಟನ । ರಕ್ಷತ । ಅಪಿ ಚಾಸ್ಯ ಸುದಾಸಃ ಕ್ಷತ್ರಂ ಬಲಂ ದೂಣಾಶಂ ದುರ್ನಶಮವಿನಾಶ್ಯಜರಮಶಿಥಿಲಂ ಚಾಸ್ತು ॥

|| ಪ್ರತಿಪದಾರ್ಥ ||

ನರಃ—ನೇತೃಗಳಾದ । ಮರುತಃ—ಎಲೈ ಮರುತ್ತುಗಳೇ । ಸುದಾಸಃ—ಸುದಾಸನ । ಪಿತರಂ—ತಂದೆಯಾದ । ದಿವೋದಾಸಂ ನ—ದಿವೋದಾಸನನ್ನು ಸೇವಿಸಿದಂತೆಯೇ । ಇಮಂ—ಈ ಸುದಾಸನನ್ನೂ ।

**ಅನು ಸಕ್ಷತ**—ಸೇವಿಸಿರಿ | **ದುವೋಯು**—ಪೂಜಾನಿರತನಾದವನೂ | **ಪೈಜವನಸ್ಯ**—ಪಿಜವನನ ಪುತ್ರನೂ ಆದ ಸುದಾಸನ | **ಕೇತಂ**—ಗೃಹವನ್ನು | **ಅವಿಷ್ಟನ**—ರಕ್ಷಿಸಿರಿ | **ಕ್ಷತ್ರಂ**—ಅವನ ಬಲವು | **ದೂಣಾಶಂ**—ನಾಶರಹಿತವಾಗಿಯೂ | **ಅಜರಂ**—ಸ್ಥಿರವಾಗಿಯೂ ಇರಲಿ.

|| ಭಾವಾರ್ಥ ||

ನೇತೃಗಳಾದ ಎಲೈ ಮರುತ್ತುಗಳೇ. ಸುದಾಸನ ತಂದೆಯಾದ ದಿವೋದಾಸನನ್ನು ಸೇವಿಸಿದಂತೆಯೇ ಈ ಸುದಾಸನನ್ನೂ ಸೇವಿಸಿರಿ. ಪೂಜಾನಿರತನೂ ಪಿಜವನನ ಪುತ್ರನೂ ಆದ ಈ ಸುದಾಸನ ಗೃಹವನ್ನು ರಕ್ಷಿಸಿರಿ. ಅವನ ಬಲವು ನಾಶರಹಿತವಾಗಿಯೂ ಸ್ಥಿರವಾಗಿಯೂ ಇರಲಿ.

English Translation.

Maruts, leaders (of rites), attend upon this (prince) as you did upon Divodasa, the father of Sudas : favour the prayers of the devout son of Pijavana, and may his strength be unimpaired, undecaying.



# ಹತ್ತೊಂಭತ್ತನೆಯ ಸೂಕ್ತವು

|| ಸಾಯಣಭಾಷ್ಯಂ ||

**ಯಸ್ತಿಗ್ಮಶೃಂಗ ಇತ್ಯೇಕಾದಶರ್ಚಂ ದ್ವಿತೀಯಂ ಸೂಕ್ತಂ ವಸಿಷ್ಠಸ್ಯಾರ್ಷಂ ತ್ರೈಷ್ಟುಭಮೈಂದ್ರಂ ತಥಾ ಚಾನುಕ್ರಾಂತಂ | ಯಸ್ತಿಗ್ಮಶೃಂಗ ಏಕಾದಶೇತಿ || ಅಭಿಪ್ಲವಿಕೇ ಪಂಚಮೇಽಹನ್ಯೇತನ್ನಿವಿದ್ಧಾನಂ | ಸೂತ್ರಿತಂ ಚ | ಕಯಾ ಶುಭಾ ಯಸ್ತಿಗ್ಮಶೃಂಗ ಇತಿ ಮಧ್ಯಂದಿನಃ | ಆ. ೭-೭ | ಇತಿ || ವಿಷುವತಿ ನಿಷ್ಕೇವಲ್ಯಶಸ್ತ್ರೇಽಪ್ಯೇತತ್ಸೂಕ್ತಂ | ಸೂತ್ರಿತಂ ಚ | ಯಸ್ತಿಗ್ಮಶೃಂಗೋಽಭಿ ತ್ಯಂ ಮೇಷಂ | ಆ. ೮-೬ | ಇತಿ || ಮಹಾವ್ರತೇ ನಿಷ್ಕೇವಲ್ಯೇಽಪ್ಯೇತತ್ಸೂಕ್ತಂ | ಸೂತ್ರಿತಂ ಚ | ಯಸ್ತಿಗ್ಮಶೃಂಗೋ ವೃಷಭೋ ನ ಭೀಮ ಉಗ್ರೋ ಜಜ್ಞೇ ವೀರ್ಯಾಯ ಸ್ವಧಾವಾನ್ | ಐ. ಆ. ೫-೨-೨ | ಇತಿ || ಅಯುಷ್ಕಾಮೇಷ್ಟ್ಯಾಂ ಮಾ ತೇ ಅಸ್ಯಾಮಿತೀಂದ್ರಸ್ಯ ತ್ರಾತುರ್ಯಾಜ್ಯಾ | ಸೂತ್ರಿತಂ ಚ | ಮಾ ತೇ ಅಸ್ಯಾಂ ಸಹಸಾವನ್ಪರಿಷ್ಟಾ ಪಾಹಿ ನೋ ಅಗ್ನೇ ಪಾಯುಭಿಃ | ಆ. ೨-೧೦ | ಇತಿ ||**

ಅನುವಾದವು—**ಯಸ್ತಿಗ್ಮಶೃಂಗಃ** ಎಂಬ ಈ ಸೂಕ್ತವು ಎರಡನೆಯ ಅನುವಾಕದಲ್ಲಿ ಎರಡನೆಯ ಸೂಕ್ತವು. ಇದರಲ್ಲಿ ಹನ್ನೊಂದು ಋಕ್ಕುಗಳಿರುವವು. ಈ ಸೂಕ್ತಕ್ಕೆ ವಸಿಷ್ಠನು ಋಷಿಯು ; ಇಂದ್ರನು ದೇವತೆಯು ; ತ್ರಿಷ್ಟುಪ್ ಛಂದಸ್ಸು. ಅನುಕ್ರಮಣಿಕೆಯಲ್ಲಿ—**ಯಸ್ತಿಗ್ಮಶೃಂಗ ಏಕಾದಶ** ಎಂದು ಹೇಳಿರುವುದು. ಅಭಿಪ್ಲವವೆಂಬ ಯಾಗದ ಐದನೆಯ ದಿವಸ ಈ ಸೂಕ್ತವನ್ನು ನಿವಿದ್ಧಾನಸೂಕ್ತವನ್ನಾಗಿ ಪಠಿಸಬೇಕೆಂದು ಆಶ್ವಲಾಯನಶ್ರೌತಸೂತ್ರದ—**ಕಯಾ ಶುಭಾ ಯಸ್ತಿಗ್ಮಶೃಂಗ ಇತಿ ಮಧ್ಯಂದಿನಃ** ಎಂಬ ಸೂತ್ರದಿಂದ (ಆ. ೭-೭) ವಿವೃತವಾಗಿರುವುದು.

ವಿಷುವದ್ಯಾಗದಲ್ಲಿಯೂ ನಿಷ್ಕೇವಲ್ಯಶಸ್ತ್ರಮಂತ್ರಗಳಿಗಾಗಿ ಈ ಸೂಕ್ತದ ವಿನಿಯೋಗವಿರುವುದೆಂದು ಆಶ್ವಲಾಯನ ಶ್ರೌತಸೂತ್ರದ— **ಯಸ್ತಿಗ್ಮಶೃಂಗೋಽಭಿ ತ್ಯಂ ಮೇಷಂ** ಎಂಬ ಸೂತ್ರದಿಂದ (ಆ. ೮-೬) ವಿವೃತವಾಗಿರುವುದು. ಮಹಾವ್ರತೇಷ್ಟಿಯಲ್ಲಿಯೂ ನಿಷ್ಕೇವಲ್ಯಶಸ್ತ್ರಮಂತ್ರಗಳಿಗಾಗಿ ಈ ಸೂಕ್ತದ ವಿನಿಯೋಗವಿರುವುದೆಂದು ಐತರೇಯಾರಣ್ಯಕದ ಪಂಚಮಾರಣ್ಯಕದಲ್ಲಿ **ಯಸ್ತಿಗ್ಮಶೃಂಗೋ ವೃಷಭೋ ನ ಭೀಮ ಉಗ್ರೋ ಜಜ್ಞೇ ವೀರ್ಯಾಯ ಸ್ವಧಾವಾನ್** ಎಂಬ ವಾಕ್ಯದಿಂದ (ಐ. ಆ. ೫-೨-೨) ನಿರ್ದಿಷ್ಟವಾಗಿರುವುದು. ಆಯುಷ್ಕಾಮೇಷ್ಟಿಯಲ್ಲಿ **ಇಂದ್ರಃ ತ್ರಾತಾ** ಎಂಬ ದೇವತೆಯನ್ನುದ್ದೇಶಿಸಿ ಮಾಡುವ ಹೋಮದಲ್ಲಿ—**ಮಾ ತೇ ಅಸ್ಯಾಂ** ಎಂಬ ೭ನೆಯ ಋಕ್ಕನ್ನು ಯಾಜ್ಯಾಮಂತ್ರವನ್ನಾಗಿ ಪಠಿಸಬೇಕೆಂದು ಆಶ್ವಲಾಯನಶ್ರೌತಸೂತ್ರದ— **ಮಾ ತೇ ಅಸ್ಯಾಂ ಸಹಸಾವನ್ಪರಿಷ್ಟೌ ಪಾಹಿ ನೋ ಅಗ್ನೇ ಪಾಯುಭಿಃ** ಎಂಬ ಸೂತ್ರದಿಂದ (ಆ. ೨-೧೦) ವಿವೃತವಾಗಿರುವುದು.

## ಸೂಕ್ತ—೧೯

ಮಂಡಲ—೭ ॥ ಅನುವಾಕ—೨ ॥ ಸೂಕ್ತ—೧೯ ॥
ಅಷ್ಟಕ—೫ ॥ ಅಧ್ಯಾಯ—೨ ॥ ವರ್ಗ—೨೯, ೩೦ ॥
॥ ಸೂಕ್ತದಲ್ಲಿರುವ ಋಕ್ಸಂಖ್ಯೆ—೧೧ ॥
॥ ಋಷಿಃ—ವಸಿಷ್ಠಃ ॥
॥ ದೇವತಾ—ಅಗ್ನಿಃ ॥
॥ ಛಂದಃ—ತ್ರಿಷ್ಟುಪ್ ॥

। ಸಂಹಿತಾಪಾಠಃ ।

ಯಸ್ತಿಗ್ಮಶೃಂಗೋ ವೃಷಭೋ ನ ಭೀಮ ಏಕಃ ಕೃಷ್ಟೀಶ್ಚ್ಯಾವಯತಿ ಪ್ರ ವಿಶ್ವಾಃ ।
ಯಃ ಶಶ್ವತೋ ಅದಾಶುಷೋ ಗಯಸ್ಯ ಪ್ರಯಂತಾಸಿ ಸುಷ್ವಿತರಾಯ ವೇದಃ ॥ ೧ ॥

। ಪದಪಾಠಃ ।

ಯಃ । ತಿಗ್ಮಽಶೃಂಗಃ । ವೃಷಭಃ । ನ । ಭೀಮಃ । ಏಕಃ । ಕೃಷ್ಟೀಃ । ಚ್ಯವಯತಿ । ಪ್ರ । ವಿಶ್ವಾಃ ।
ಯಃ । ಶಶ್ವತಃ । ಅದಾಶುಷಃ । ಗಯಸ್ಯ । ಪ್ರಽಯಂತಾ । ಅಸಿ । ಸುಸ್ವಿಽತರಾಯ । ವೇದಃ ॥ ೧ ॥

॥ ಸಾಯಣಭಾಷ್ಯಂ ॥

ಯ ಇಂದ್ರಸ್ತಿಗ್ಮಶೃಂಗಸ್ತೀಕ್ಷ್ಣಶೃಂಗೋ ವೃಷಭೋ ನ ವೃಷಭ ಇವ ಭೀಮೋ ಭಯಂಕರಃ ಸನ್ ಏಕೋಽಸಹಾಯ ಏವ ವಿಶ್ವಾಃ ಸರ್ವಾನ್ ಕೃಷ್ಟೀಃ ಶತ್ರುಜನಾನ್ ಸ್ಥಾನಾತ್ ಪ್ರ ಚ್ಯಾವಯತಿ । ಯಶ್ಚೇಂದ್ರೋಽದಾಶುಷೋಽಯಜಮಾನಸ್ಯ ಶಶ್ವತೋ ಬಹೋರ್ಗಯಸ್ಯ ಗೃಹಸ್ಯ ಧನಸ್ಯ ಪಾಪಹರ್ತಾ ಭವತೀತಿ ಶೇಷಃ । ಹೇ ಇಂದ್ರ ಸ ತ್ವಂ ಸುಷ್ವಿತರಾಯಾತಿಶಯೇನ ಸೋಮಾಭಿಷವಂ ಕುರ್ವತೇ

**ಜನಾಯ ವೇದೋ ಧನಂ ಪ್ರಯಂತಾ ಪ್ರದಾತಾಸಿ ॥ ತೃನಂತತ್ವಾದತ್ರ ಷಷ್ಠ್ಯಾ ಅಭಾವಃ । ಅಸೀತ್ಯಸ್ಯಾಖ್ಯಾತಸ್ಯಾನುದಾತ್ತತ್ವಾದ್ಯದ್ವೃತ್ತಯೋಗಾಚ್ಚಾನುದಾತ್ತತ್ವಾಸಂಭವಾತ್ ಯದ್ವೃತ್ತಯುಕ್ತಮಾಖ್ಯಾತಾಂತರಮಧ್ಯಾಹೃತ್ಯ ಯೋಜನಾ ಕೃತಾ ॥**

॥ ಪ್ರತಿಪದಾರ್ಥ ॥

(ಎಲೈ ಇಂದ್ರನೇ) **ಯಃ**—ಯಾವ ನೀನು । **ತಿಗ್ಮಶೃಂಗಃ**—ತೀಕ್ಷ್ಣವಾದ ಕೊಂಬುಳ್ಳ । **ವೃಷಭೋನ**—ವೃಷಭದಂತೆ । **ಭೀಮಃ**—ಭಯಂಕರನಾಗಿದ್ದು । **ಏಕಃ**—ಇತರರ ಸಹಾಯವಿಲ್ಲದೇ । **ವಿಶ್ವಾಃ**—ಸಮಸ್ತವಾದ । **ಕೃಷ್ಟೀಃ**—ಶತ್ರುಜನಗಳನ್ನು । **ಪ್ರ ಚ್ಯಾವಯತಿ**—ಉರುಳಿಸುವೆಯೋ । **ಯಃ**—ಯಾವ ನೀನು । **ಅದಾಶುಷಃ**—ಹವಿಸ್ಸನ್ನರ್ಪಿಸದಿರುವವನ । **ಶಶ್ವತಃ**—ಅನೇಕ ವಿಧವಾದ । **ಗಯಸ್ಯ**—ಧನದ ಅಪಹರ್ತೃವಾಗಿರುವೆಯೋ (ಅಂತಹ ನೀನು) । **ಸುಷ್ವಿತರಾಯ**—ಅತ್ಯತಿಶಯವಾಗಿ ಸೋಮವನ್ನು ಹಿಂಡಿ ಅರ್ಪಿಸುವ ಯಜಮಾನನಿಗೆ । **ವೇದಃ**—ಧನವನ್ನು । **ಪ್ರಯಂತಾ ಅಸಿ**—ಕೊಡುವವನಾಗಿದ್ದೀಯೆ.

॥ ಭಾವಾರ್ಥ ॥

ಎಲೈ ಇಂದ್ರನೇ, ಯಾವ ನೀನು ತೀಕ್ಷ್ಣವಾದ ಕೊಂಬಗಳುಳ್ಳ ವೃಷಭದಂತೆ ಭಯಂಕರನಾಗಿದ್ದು ಇತರ ಸಹಾಯವಿಲ್ಲದೇ ಸಮಸ್ತಶತ್ರುಜನಗಳನ್ನೂ ಉರುಳಿಸುವೆಯೋ ಯಾವ ನೀನು ಹವಿಸ್ಸನ್ನರ್ಪಿಸದಿರುವವನ ಅನೇಕ ವಿಧವಾದ ಧನದ ಅಪಹರ್ತೃವಾಗಿರುವೆಯೋ ಅಂತಹ ನೀನು ಅತ್ಯತಿಶಯವಾಗಿ ಸೋಮವನ್ನು ಹಿಂಡಿ ಅರ್ಪಿಸುವ ಯಜಮಾನನಿಗೆ ಧನಪ್ರದನಾಗಿದ್ದೀಯೆ.

English Translation

Indra, who is formidable as a sharp-horned bull, singly expels all men (from their stations) : you who are the despoiler of the ample wealth of him who makes no offerings, are the giver of riches to the presenter of frequeut oblations.

॥ ಸಂಹಿತಾಪಾಠಃ ॥

ತ್ವಂ ಹ ತ್ಯದಿಂದ್ರ ಕುತ್ಸಮಾವಃ ಶುಶ್ರೂಷಮಾಣಸ್ತನ್ವಾ ಸಮರ್ಯೇ ।
ದಾಸಂ ಯಚ್ಛುಷ್ಣಂ ಕುಯವಂ ನ್ಯಸ್ಮಾ ಅರಂಧಯ ಆರ್ಜುನೇಯಾಯ ಶಿಕ್ಷನ್ ॥ ೨ ॥

॥ ಪದಪಾಠಃ ॥

ತ್ವಂ । ಹ । ತ್ಯತ್ । ಇಂದ್ರ । ಕುತ್ಸಂ । ಆವಃ । ಶುಶ್ರೂಷಮಾಣಃ । ತನ್ವಾ । ಸ್ಸಮರ್ಯೇ ।
ದಾಸಂ । ಯತ್ । ಶುಷ್ಣಂ । ಕುಯವಂ । ನಿ । ಅಸ್ಮೈ । ಅರಂಧಯಃ । ಆರ್ಜುನೇಯಾಯ । ಶಿಕ್ಷನ್ ॥

॥ ಸಾಯಣಭಾಷ್ಯಂ ॥

ಹೇ ಇಂದ್ರ ತ್ವಂ ಹ ತ್ವಂ ಖಲು ತ್ಯತ್ತದಾ ತನ್ವಾ ಶರೀರೇಣ ಶುಶ್ರೂಷಮಾಣ ಉಪಚರನ್ ಸಮರ್ಯೇ ಮರ್ಯೈರ್ಮರ್ತ್ಯೈರ್ಯೋದ್ಧೃಭಿಃ ಸಹಿತೇ ಯುದ್ಧೇ ಕುತ್ಸಮಾವಃ । ಅರಕ್ಷಃ । ಕದೇತ್ಯತ್ರಾಹ । ಯದ್ಯದಾರ್ಜುನೇಯಾಯಾರ್ಜುನ್ಯಾಃ ಪುತ್ರಾಯಾಸ್ಮೈ ಕುತ್ಸಾಯ ಶಿಕ್ಷನ್ ಧನಂ ಪ್ರಯಚ್ಛನ್ ದಾಸಂ ದಾಸನಾಮಕಮಸುರಂ ಶುಷ್ಣಂ ಚ ಕುವಯಂ ಚ ನ್ಯರಂಧಯಃ ನಿತರಾಂ ವಶಮಾನಯಃ ॥

॥ ಪ್ರತಿಪದಾರ್ಥ ॥

**ಇಂದ್ರ**—ಎಲೈ ಇಂದ್ರನೇ । **ಯತ್**—ಯಾವಾಗ । **ಆರ್ಜುನೇಯಾಯ**—ಅರ್ಜುನೀಪುತ್ರನಾದ । **ಅಸ್ಮೈ**—ಈ ಕುತ್ಸನಿಗೆ । **ಶಿಕ್ಷನ್**—ಧನವನ್ನು ಕೊಡುತ್ತಾ । **ದಾಸಂ**—(ಅಸುರರಾದ) ದಾಸನನ್ನೂ । **ಶುಷ್ಣಂ**—ಶುಷ್ಣನನ್ನೂ । **ಕುಯವಂ**—ಕುಯವನನ್ನೂ । **ನಿ ಅರಂಧಯಃ**—ಪೂರ್ಣವಾಗಿ ಅವನ ವಶವಾಗುವಂತೆ ಮಾಡಿದೆಯೋ । **ತ್ಯತ್**—ಆ ಕಾಲದಲ್ಲೇ । **ತ್ವಂ ಹ**—ನೀನೇ । **ತನ್ವಾ**—ನಿನ್ನ ಶರೀರಕ್ರಿಯೆಯಿಂದ । **ಶುಶ್ರೂಷಮಾಣಃ**—ಉಪಚರಿಸುತ್ತಾ । **ಸಮರ್ಯೇ**—ಯುದ್ಧದಲ್ಲಿ । **ಕುತ್ಸಂ**—ಆ ಕುತ್ಸನನ್ನು । **ಆವಃ**—ರಕ್ಷಿಸಿರುವೆ.

॥ ಭಾವಾರ್ಥ ॥

ಎಲೈ ಇಂದ್ರನೇ, ಯಾವಾಗ ಅರ್ಜುನೀಪುತ್ರನಾದ ಈ ಕುತ್ಸನಿಗೆ ಧನವನ್ನು ಕೊಡುತ್ತಾ ಅಸುರರಾದ ದಾಸ, ಶುಷ್ಣ ಮತ್ತು ಕುಯವ ಇವರೆಲ್ಲರನ್ನೂ ಪೂರ್ಣವಾಗಿ ಅವನ ವಶವಾಗುವಂತೆ ಮಾಡಿದೆಯೋ ಆ ಕಾಲದಲ್ಲೇ ನೀನೇ ನಿನ್ನ ಶರೀರಕ್ರಿಯೆಯ ಮೂಲಕ ಅವನನ್ನು ಉಪಚರಿಸುತ್ತಾ ಯುದ್ಧದಲ್ಲಿ ಕುತ್ಸನನ್ನು ರಕ್ಷಿಸಿರುವೆ.

English Translation.

Aiding him with your person, Indra, you have defended Kutsa in is combat when you had subjugated Dasa, Sushna and Kuyava, giving (their spoil) to that son of Arjuni.

॥ ಸಂಹಿತಾಪಾಠಃ ॥

ತ್ವಂ ಧೃಷ್ಣೋ ಧೃಷತಾ ವೀತಹವ್ಯಂ ಪ್ರಾವೋ ವಿಶ್ವಾಭಿರೂತಿಭಿಃ ಸುದಾಸಂ।
ಪ್ರ ಪೌರುಕುತ್ಸಿಂ ತ್ರಸದಸ್ಯುಮಾವಃ ಕ್ಷೇತ್ರಸಾತಾ ವೃತ್ರಹತ್ಯೇಷು ಪೂರುಂ॥

॥ ಪದಪಾಠಃ ॥

ತ್ವಂ । ಧೃಷ್ಣೋ ಇತಿ । ಧೃಷತಾ । ವೀತಽಹವ್ಯಂ । ಪ್ರ । ಆವಃ । ವಿಶ್ವಾಭಿಃ । ಊತಿಽಭಿಃ । ಸುಽದಾಸಂ ।
ಪ್ರ । ಪೌರುಽಕುತ್ಸಿಂ । ತ್ರಸದಸ್ಯುಂ । ಆವಃ । ಕ್ಷೇತ್ರಽಸಾತಾ । ವೃತ್ರಽಹತ್ಯೇಷು । ಪೂರುಂ ॥ ೩ ॥

॥ ಸಾಯಣಭಾಷ್ಯಂ ॥

ಹೇ ಧೃಷ್ಣೋ ಶತ್ರೂಣಾಂ ಧರ್ಷಕೇಂದ್ರ ಧೃಷತಾ ಧರ್ಷಕೇಣ ವಜ್ರೇಣ ಬಲೇನ ವಾ ವೀತಹವ್ಯಂ ದತ್ತಹವಿಷ್ಕಂ ಪ್ರಜನಿತಹವಿಷ್ಕಂ ವಾ ಸುದಾಸಂ ರಾಜಾನಂ ವಿಶ್ವಾಭಿಃ ಸರ್ವಾಭಿರೂತಿಭೀ ರಕ್ಷಾಭಿಃ ಪ್ರಾವಃ । ಪ್ರಕರ್ಷೇಣಾರಕ್ಷಃ । ಕಿಂಚ ವೃತ್ರಹತ್ಯೇಷು ಯುದ್ಧೇಷು ಕ್ಷೇತ್ರಸಾತಾ ಕ್ಷೇತ್ರಸಾತೌ ಕ್ಷೇತ್ರಸ್ಯ ಭೂಮೇರ್ಭಜನೇ ನಿಮಿತ್ತೇ ಪೌರುಕುತ್ಸಿಂ ಪುರುಕುತ್ಸಸ್ಯಾಪತ್ಯಂ ತ್ರಸದಸ್ಯುಂ ಪೂರುಂ ಚ ಪ್ರಾವಃ ॥

॥ ಪ್ರತಿಪದಾರ್ಥ ॥

**ಧೃಷ್ಣೋ**—ಶತ್ರುಧರ್ಷಕನಾದ ಎಲೈ ಇಂದ್ರನೇ । **ಧೃಷತಾ**—ಶತ್ರುಗಳನ್ನು ನಾಶಪಡಿಸುವ ಬಲದಿಂದ । **ವೀತಹವ್ಯಂ**—ಹವಿಸ್ಸನ್ನು ಅರ್ಪಿಸತಕ್ಕ । **ಸುದಾಸಂ**—ಸುದಾಸನೆಂಬ ರಾಜನನ್ನು । **ವಿಶ್ವಾಭಿಃ**—ಸಮಸ್ತವಾದ । **ಊತಿಭಿಃ**—ರಕ್ಷಣೆಗಳೊಡನೆ । **ಪ್ರಾವಃ**—ರಕ್ಷಿಸಿರುವೆ । **ವೃತ್ರಹತ್ಯೇಷು**— ವೃತ್ರಹನನ ಸಾಧಕವಾದ ಯುದ್ಧಗಳಲ್ಲಿ। **ಕ್ಷೇತ್ರಸಾತಾ**—ಕ್ಷೇತ್ರಲಾಭಕ್ಕಾಗಿ । **ಪೌರುಕುತ್ಸಂ**—ಪುರುಕುತ್ಸನ ಪುತ್ರನಾದ । **ತ್ರಸದಸ್ಯುಂ**—ತ್ರಸದಸ್ಯುವನ್ನೂ । **ಪೂರುಂ ಚ**—ಪೂರುವನ್ನೂ । **ಪ್ರ ಆವಃ**—ಪೂರ್ಣವಾಗಿ ರಕ್ಷಿಸಿರುವೆ.

॥ ಭಾವಾರ್ಥ ॥

ಶತ್ರುಧರ್ಷಕನಾದ ಎಲೈ ಇಂದ್ರನೇ, ನೀನು ಶತ್ರುನಾಶಕವಾದ ಬಲದಿಂದ ಕೂಡಿಕೊಂಡು ಹವಿಸ್ಸನ್ನು ಅರ್ಪಿಸುವ ಸುದಾಸನೆಂಬ ರಾಜನನ್ನು ಸಕಲ ರಕ್ಷಣೆಗಳೊಡನೆಯೂ ಕಾಪಾಡಿರುವೆ. ವೃತ್ರಹನನಸಾಧಕವಾದ ಯುದ್ಧಗಳಲ್ಲಿ ಕ್ಷೇತ್ರಲಾಭಾರ್ಥವಾಗಿ ಯುದ್ಧಮಾಡುತ್ತಿರುವಾಗ ತ್ರಸದಸ್ಯುವನ್ನೂ ಪೂರುವನ್ನೂ ಪೂರ್ಣವಾಗಿ ರಕ್ಷಿಸಿರುವೆ.

English Translation.

Undaunted (Indra), you have protected with all your protections Sudas, the offerer of oblations : you have protected in battles with enemies for the possession of the earth, Trasadasyu, the son of Purukusta, and Puru.

॥ ಸಂಹಿತಾಪಾಠಃ ॥

ತ್ವಂ ನೃಭಿರ್ನೃಮಣೋ ದೇವವೀತೌ ಭೂರೀಣಿ ವೃತ್ರಾ ಹರ್ಯಶ್ವ ಹಂಸಿ ।
ತ್ವಂ ನಿ ದಸ್ಯುಂ ಚುಮುರಿಂ ಧುನಿಂ ಚಾಸ್ವಾಪಯೋ ದಭೀತಯೇ ಸುಹಂತು॥

॥ ಪದಪಾಠಃ ॥

ತ್ವಂ । ನೃಽಭಿಃ । ನೃಽಮನಃ । ದೇವಽವೀತೌ । ಭೂರೀಣಿ । ವೃತ್ರಾ । ಹರಿಽಅಶ್ವ । ಹಂಸಿ ।
ತ್ವಂ । ನಿ । ದಸ್ಯುಂ । ಚುಮುರಿಂ । ಧುನಿಂ । ಚ । ಅಸ್ವಾಪಯಃ । ದಭೀತಯೇ । ಸುಽಹಂತು ॥ ೪ ॥

। ಸಾಯಣಭಾಷ್ಯಂ ।

ಹೇ ನೃಮಣೋ ನೃಭಿರ್ಯಜ್ಞಾನಾಂ ನೇತೃಭಿಃ ಸ್ತೋತೃಭಿರ್ಮನನೀಯ ಸ್ತೋತವ್ಯೇಂದ್ರ । ನೃಷು ಮನೋ ಯಸ್ಯೇತಿ ಬಹುವ್ರೀಹಿರ್ವಾ । ದೇವವೀತೌ ಯಜ್ಞೇ ಕ್ರಿಯಮಾಣೇ ಸತಿ ಸಂಗ್ರಾಮೇ ವಾ । ದೇವಾ ವಿಜಿಗೀಷವೋ ಯಸ್ಮಿನ್ ವಿಯಂತಿ ಗಚ್ಛಂತೀತಿ ಸಂಗ್ರಾಮೋ ದೇವವೀತಿಃ । ನೃಭಿರ್ಮರುದ್ಭಿಃ ಸಹ ಭೂರೀಣಿ ಬಹೂನಿ ವೃತ್ರಾ ವೃತ್ರಾಣಿ ಶತ್ರೂನ್ ಹಂಸಿ । ಮಾರಿತವಾನಸಿ । ಕಿಂಚ ಹೇ ಹರ್ಯಶ್ವೇಂದ್ರ ತ್ವಂ ದಭೀತಯೇ ದಭೀತಿನಾಮಕಾಯ ರಾಜರ್ಷಯೇ । ತದರ್ಥಮಿತ್ಯರ್ಥಃ । ದಸ್ಯುಂ ಚುಮುರಿಂ ಚ ಧುನಿಂ ಚ ಸುಹಂತು ಸುಹಂತುನಾ ವಜ್ರೇಣ ನಿ ನಿತರಾಮಸ್ವಾಪಯಃ । ಮಾರಿತವಾನಸೀತ್ಯರ್ಥಃ ॥

॥ ಪ್ರತಿಪದಾರ್ಥ ॥

**ನೃಮಣಃ**—ಯಜಮಾನರಿಂದ ಪೂಜಿಸಲ್ಪಡತಕ್ಕ ಎಲೈ ಇಂದ್ರನೇ । **ತ್ವಂ**—ನೀನು । **ದೇವವೀತೌ**—ದೇವಜಯಸಾಧಕವಾದ ಸಂಗ್ರಾಮದಲ್ಲಿ । **ನೃಭಿಃ**—ಮರುತ್ತುಗಳೊಡಗೂಡಿ । **ಭೂರೀಣಿ**—ಅತ್ಯಧಿಕವಾದ ಸಂಖ್ಯೆಯುಳ್ಳ । **ವೃತ್ರಾ**—ಶತ್ರುಗಳನ್ನು । **ಹಂಸಿ**—ಕೊಂದಿದ್ದೀಯೆ । **ಹರ್ಯಶ್ವ**—ಎಲೈ ಇಂದ್ರನೇ । **ತ್ವಂ**—ನೀನು । **ದಭೀತಯೇ**—ದಭೀತಿಯೆಂಬ ರಾಜರ್ಷಿಗೋಸ್ಕರ । **ದಸ್ಯುಂ**—ದಸ್ಯುವನ್ನು । **ಚುಮುರಿಂ**—ಚುಮುರಿಯನ್ನೂ । **ಧುನಿಂ ಚ**—ಧುನಿಯನ್ನೂ ಕೂಡ । **ಸುಹಂತು**—ನಾಶಕವಾದ ವಜ್ರಾಯುಧದಿಂದ । **ನಿ ಅಸ್ವಾಪಯಃ**—ಪೂರ್ಣವಾಗಿ ಹೊಡೆದು ಉರುಳಿಸಿದೆ

॥ ಭಾವಾರ್ಥ ॥

ಯಜಮಾನರಿಂದ ಪೂಜಿಸಲ್ಪಡತಕ್ಕ ಎಲೈ ಇಂದ್ರನೇ, ನೀನು ದೇವಜಯಸಾಧಕವಾದ ಸಂಗ್ರಾಮದಲ್ಲಿ ಮರುತ್ತುಗಳೊಡಗೂಡಿ ಅತ್ಯಧಿಕವಾದ ಸಂಖ್ಯೆಯುಳ್ಳ ಶತ್ರುಗಳನ್ನು ಕೊಂದಿದ್ದೀಯೆ. ಎಲೈ ಇಂದ್ರನೇ, ನೀನು ದಭೀತಿಯೆಂಬ ರಾಜರ್ಷಿಗೋಸ್ಕರವಾಗಿ ದಸ್ಯುವನ್ನೂ ಚುಮುರಿಯನ್ನೂ ಧುನಿಯನ್ನೂ ಕೂಡ ನಾಶಕರವಾದ ವಜ್ರಾಯುಧದಿಂದ ಪೂರ್ಣವಾಗಿ ಹೊಡೆದು ಉರುಳಿಸಿರುವೆ.

## English Translation.

You, the lord of houses, who are honoured by men, have destroyed, along with the Maruts, numerous enemies at the sacrifice to the gods, you have put to sleep with the thunderbolt the Dasyus, Chamuri, and Dhuni, on behalf of Dabhiti.

। ಸಂಹಿತಾಪಾಠಃ ।

ತವ ಚ್ಯೌತ್ನಾನಿ ವಜ್ರಹಸ್ತ ತಾನಿ ನವ ಯತ್ಪುರೋ ನವತಿಂ ಚ ಸದ್ಯಃ ।

ನಿವೇಶನೇ ಶತತಮಾವಿವೇಷೀರಹಂಚ ವೃತ್ರಂ ನಮುಚಿಮುತಾಹನ್ ॥ ೫ ॥

|| ಪದಪಾಠಃ ||

ತವ । ಚ್ಯೌತ್ನಾನಿ । ವಜ್ರ೨ಹಸ್ತ । ತಾನಿ । ನವ । ಯತ್ । ಪುರಃ । ನವತಿಂ । ಚ । ಸದ್ಯಃ ।

ನಿ೨ವೇಶನೇ । ಶತ೨ತಮಾ । ಅವಿವೇಷೀಃ । ಅಹನ್ । ಚ । ವೃತ್ರಂ । ನಮುಚಿಂ । ಉತ । ಅಹನ್ ॥ ೫ ॥

॥ ಸಾಯಣಭಾಷ್ಯಂ ॥

ಹೇ ವಜ್ರಹಸ್ತ ತವ ಚ್ಯೌತ್ನಾನಿ ಬಲಾನಿ ತಾನಿ ತಾದೃಶಾನಿ । ಯದ್ಯದಾ ತ್ವಂ ಶಂಬರಸ್ಯ ನವ ನವತಿಂ ಚ ಪುರಃ ಸದ್ಯೋಽಯುಗಪದೇವ ವಿದಾರಿತವಾನಸೀತಿ ಶೇಷಃ। ತದಾ ನಿವೇಶನೇ ನಿವೇಶನಾರ್ಥಂ ಶತತಮಾ ಶತತಮೀಂ ಪುರಮವಿವೇಷೀಃ । ವ್ಯಾಪ್ನೋಃ । ವೃತ್ರಂ ಚಾಹನ್ । ಉತಾಪಿ ಚ ನಮುಚಿಮಹನ್ ॥

॥ ಪ್ರತಿಪದಾರ್ಥ ॥

**ವಜ್ರಹಸ್ತ**—ವಜ್ರಾಯುಧಧಾರಿಯಾದ ಎಲೈ ಇಂದ್ರನೇ । **ಯತ್**—ಯಾವಾಗ । (**ತ್ವಂ**—ನೀನು) । **ನವ ನವಂತಿ ಚ**—ತೊಂಭತ್ತೊಂಭತ್ತು ಸಂಖ್ಯೆಯುಳ್ಳ । **ಪುರಃ**— ಶತ್ರುಪಟ್ಟಣಗಳನ್ನೂ । **ಸದ್ಯಃ**—ಒಡನೆಯೇ (ನಾಶಮಾಡಿದೆಯೋ) ಮತ್ತು । **ನಿವೇಶನೇ**—ನಿನ್ನ ವಾಸಕ್ಕಾಗಿ । **ಶತತಮಾ**—ನೂರನೆಯ ಪಟ್ಟಣವನ್ನು । **ಅವಿವೇಷೀಃ**—ಪ್ರವೇಶಿಸಿದೆಯೋ (ಅಲ್ಲದೇ) । **ವೃತ್ರಂ ಚ**—ವೃತ್ರನನ್ನೂ । **ಅಹನ್**—ಕೊಂದೆಯೋ । **ಉತ**—ಮತ್ತು । **ನಮುಚಿಂ**—ನಮುಚಿಯನ್ನೂ । **ಅಹನ್**—ಕೊಂದೆಯೋ (ಆಗ) । **ತವ**—ನಿನ್ನ । **ಚ್ಯೌತ್ನಾನಿ**—ಶಕ್ತಿಗಳು । **ತಾನಿ**—ಇವೇ ಎಂದು ಪ್ರಸಿದ್ಧವಾದವು.

|| ಭಾವಾರ್ಥ ॥

ವಜ್ರಾಯುಧಧಾರಿಯಾದ ಎಲೈ ಇಂದ್ರನೇ, ಯಾವಾಗ ನೀನು ತೊಂಭತ್ತೊಂಭತ್ತು ಸಂಖ್ಯೆಯುಳ್ಳ ಶತ್ರುಪಟ್ಟಣಗಳನ್ನು ಒಡನೆಯೇ ನಾಶಮಾಡಿದೆಯೋ, ಮತ್ತು ನಿನ್ನ ವಾಸಕ್ಕಾಗಿ ನೂರನೆಯ ಪಟ್ಟಣವನ್ನು ಪ್ರವೇಶಿಸಿದೆಯೋ ಅಲ್ಲದೇ, ವೃತ್ರನನ್ನೂ, ನಮುಚಿಯನ್ನೂ ನಾಶಮಾಡಿದೆಯೋ, ಆಗಲೇ ನಿನ್ನ ಪರಾಕ್ರಮವು ಇಂತಹವುಗಳು ಎಂದು ಪ್ರಸಿದ್ಧವಾಯಿತು.

## English Translation.

Such, wielder of the thunderbolt, are your mighty powers, that when you had quickly destroyed ninety and nine cities, you have occupied the hundredth as a place of abode : you have slain Vritra : you have also slain Namuchi.

॥ ಸಂಹಿತಾಪಾಠಃ ॥

ಸನಾ ತಾ ತ ಇಂದ್ರ ಭೋಜನಾನಿ ರಾತಹವ್ಯಾಯ ದಾಶುಷೇ ಸುದಾಸೇ ।
ವೃಷ್ಣೇ ತೇ ಹರೀ ವೃಷಣಾ ಯುನಜ್ಮಿ ವ್ಯಂತು ಬ್ರಹ್ಮಾಣಿ ಪುರುಶಾಕ ವಾಜಂ ॥ ೬ ॥

॥ ಪದಪಾಠಃ ॥

ಸನಾ । ತಾ । ತೇ । ಇಂದ್ರ । ಭೋಜನಾನಿ । ರಾತಽಹವ್ಯಾಯ । ದಾಶುಷೇ । ಸುಽದಾಸೇ ।
ವೃಷ್ಣೇ । ತೇ । ಹರೀ ಇತಿ । ವೃಷಣಾ । ಯುನಜ್ಮಿ । ವ್ಯಂತು । ಬ್ರಹ್ಮಾಣಿ । ಪುರುಽಶಾಕ । ವಾಜಂ ॥ ೬ ॥

॥ ಸಾಯಣಭಾಷ್ಯಂ ॥

ಹೇ ಇಂದ್ರ ತೇ ತವ ರಾತಹವ್ಯಾಯ ದತ್ತಹವ್ಯಾಯ ದಾಶುಷೇ ಯಜಮಾನಾಯ ಸುದಾಸೇ ತಾ ತಾನಿ ತ್ವಯಾ ದತ್ತಾನಿ ಭೋಜನಾನಿ ಭೋಗ್ಯಾನಿ ಧನಾನಿ ಸನಾ ಸನಾನಿ ಸನಾತನಾನಿ ಬಭೂವುರಿತಿ ಶೇಷಃ । ಹೇ ಪುರುಶಾಕ ಬಹುಕರ್ಮನ್ನಿಂದ್ರ ವೃಷ್ಣೇ ಕಾಮಾನಾಂ ವರ್ಷಿತ್ರೇ ತೇ ತುಭ್ಯಂ । ತ್ವಾಮಾನೇತುಮಿತ್ಯರ್ಥಃ । ವೃಷಣಾ ವೃಷಣೌ ಹರೀ ಅಶ್ವೌ ಯುನಜ್ಮಿ । ರಥೇ ಯೋಜಯಾಮಿ । ಬ್ರಹ್ಮಾಣ್ಯಸ್ಮದೀಯಾನಿ ಸ್ತೋತ್ರಾಣಿ ವಾಜಂ ಬಲಿನಂ ತ್ವಾಂ ವ್ಯಂತು । ಗಚ್ಛಂತು ॥

॥ ಪ್ರತಿಪದಾರ್ಥ ॥

ಇಂದ್ರ—ಎಲೈ ಇಂದ್ರನೇ । ತೇ—ನಿನಗೆ । ರಾತಹವ್ಯಾಯ—ಹವಿಸ್ಸನ್ನ ರ್ಪಿಸುವವನೂ । ದಾಶುಷೇ—ಯಜಮಾನನೂ ಆದ । ಸುದಾಸೇ—ಸುದಾಸನಿಗೆ । ತಾ—ನಿನ್ನಿಂದ ದತ್ತವಾದ ಅನಂತವಾದ ಭೋಜನಾನಿ—ಭೋಗಸಾಮುಗ್ರಿಗಳು । ಸನಾ—ಶಾಶ್ವತವಾಗಿರತಕ್ಕವಾಗಿವೆ । ಪುರುಶಾಕ—ಅನೇಕ ಕರ್ಮ ಕರ್ತನಾದ ಎಲೈ ಇಂದ್ರನೇ । ವೃಷ್ಣೇ—ಕಾಮವರ್ಷಕನಾದ । ತೇ—ನಿನಗಾಗಿ । ವೃಷಣಾ—ವೀರ್ಯಸೇಚಕಗಳಾದ । ಹರೀ—ಅಶ್ವಗಳನ್ನು । ಯುನಜ್ಮಿ—ರಥಕ್ಕೆ ಸೇರಿಸಿ ಕಟ್ಟುತ್ತೇನೆ । ಬ್ರಹ್ಮಾಣಿ—ನಮ್ಮ ಸ್ತೋತ್ರಗಳು । ವಾಜಂ—ಶಕ್ತಿಯುತನಾದ ನಿನ್ನನ್ನು । ವ್ಯಂತು—ಬಂದು ಸೇರಿಕೊಳ್ಳಲಿ.

॥ ಭಾವಾರ್ಥ ॥

ಎಲೈ ಇಂದ್ರನೇ, ನಿನಗೆ ಹವಿಸ್ಸನ್ನರ್ಪಿಸುವವನೂ, ಯಜಮಾನನೂ ಆದ ಸುದಾಸನಿಗೆ ನಿನ್ನಿಂದ ದತ್ತವಾದ ಭೋಗಸಾಮುಗ್ರಿಗಳು ಅನಂತವೂ ಶಾಶ್ವತವೂ ಆಗಿವೆ. ಅನೇಕ ಕರ್ಮಕರ್ತನಾದ ಎಲೈ ಇಂದ್ರನೇ, ಕಾಮವರ್ಷಕನಾದ ನಿನಗಾಗಿ ವೀರ್ಯಸೇಚಕಗಳಾದ ಅಶ್ವಗಳನ್ನು ರಥಕ್ಕೆ ಸೇರಿಸಿ ಕಟ್ಟುತ್ತೇನೆ. ನಮ್ಮ ಸ್ತೋತ್ರಗಳು ಶಕ್ತಿಯುತನಾದ ನಿನ್ನನ್ನು ಬಂದು ಸೇರಿಕೊಳ್ಳಲಿ.

## English Translation.

Your favours, Indra, to Sudas, the donor (of offerings), the presenter of oblations, infinite : showerer (of benefits), I yoke for you (your vigorous) steeds : may our prayers reach you who are mighty, to whom many rites are addressed.

|| ಸಂಹಿತಾಪಾಠಃ ||

ಮಾ ತೇ ಅಸ್ಯಾಂ ಸಹಸಾವನ್ಪರಿಷ್ಟಾವಘಾಯ ಭೂಮ ಹರಿವಃ ಪರಾದೈ ।
ತ್ರಾಯಸ್ವ ನೋಽವೃಕೇಭಿರ್ವರೂಥೈಸ್ತವ ಪ್ರಿಯಾಸಃ ಸೂರಿಷು ಸ್ಯಾಮ ॥೭॥

|| ಪದಪಾಠಃ ||

ಮಾ । ತೇ । ಅಸ್ಯಾಂ । ಸಹಸ್ಽವನ್ । ಪರಿಷ್ಟೌ । ಅಘಾಯ । ಭೂಮ । ಹರಿಽವಃ । ಪರಾಽದೈ ।
ತ್ರಾಯಸ್ವ । ನಃ । ಅವೃಕೇಭಿಃ । ವರೂಥೈಃ । ತವ । ಪ್ರಿಯಾಸಃ । ಸೂರಿಷು । ಸ್ಯಾಮ ॥ ೭ ॥

|| ಸಾಯಣಭಾಷ್ಯಂ ||

ಹೇ ಸಹಸಾವನ್ ಬಲವನ್ ಹರಿವೋ ಹರಿವನ್ನಿಂದ್ರ ತೇ ತವಾಸ್ಯಾಂ ಸ್ತೋತ್ರೇಣಾಸ್ಮಾಭಿಃ ಕ್ರಿಯಮಾಣಾಯಾಂ ಪರಿಷ್ಟಾವನ್ವೇಷಣಾಯಾಂ ಪರಾದೈ ಪರಾದಾನಾಯಾಘಾಯಾಹಂತ್ರೇ ವಯಂ ಮಾ ಭೂಮ । ಕಿಂಚ ನೋಽಸ್ಮಾನವೃಕೇಭಿರಬಾಧೈರ್ವರೂಥೈಃ । ವಾರಯಂತ್ಯುಪದ್ರವೇಭ್ಯ ಇತಿ ವರೂಥಾನಿ ರಕ್ಷಣಾನಿ । ತೈಸ್ತ್ರಾಯಸ್ವ । ಪಾಹಿ । ತವ ಸೂರಿಷು ಸ್ತೋತೃಷು ಮಧ್ಯೇ ವಯಂ ಪ್ರಿಯಾಸಃ ಪ್ರಿಯಾಃ ಸ್ಯಾಮ । ಭೂಯಾಸ್ಮ ॥

|| ಪ್ರತಿಪದಾರ್ಥ ||

**ಸಹಸಾವನ್**—ಶಕ್ತಿಯುತನಾದವನೂ । **ಹರಿವಃ**—ಹರಿನಾಮಕಗಳಾದ ಅಶ್ವಗಳುಳ್ಳವನೂ ಆದ ಎಲೆ ಇಂದ್ರನೇ । **ತೇ**—ನಿನಗೆ । **ಅಸ್ಯಾಂ ಪರಿಷ್ಟೌ**—ಸ್ತುತಿಗಳನ್ನರ್ಪಿಸಿ ನಿನ್ನನ್ನು ಯಾಚಿಸುವ ಈ ಕ್ರಿಯೆಯಲ್ಲಿ । **ಅಘಾಯ**—ಪಾಪಿಷ್ಠನೂ । **ಪರಾದೈ**—ಇತರರನ್ನು ಕೊಳ್ಳೆಹೊಡೆದು ತಿನ್ನುವವನೂ ಆದ ಶತ್ರುವಿಗೆ । **ಮಾ ಭೂಮ**—ನಾವು ವಶರಾಗದಿರುವಂತಾಗಲಿ । **ನಃ**—ನಮ್ಮನ್ನು । **ಅವೃಕೇಭಿಃ**—ಹಿಂಸಕಗಳಲ್ಲದಿರುವ । **ವರೂಥೈಃ**—ರಕ್ಷಣೆಗಳಿಂದ । **ತ್ರಾಯಸ್ವ**— ರಕ್ಷಿಸು । **ತವ**—ನಿನ್ನ । **ಸೂರಿಷು**—ಸ್ತೋತೃಗಳ ಮಧ್ಯದಲ್ಲಿ । **ಪ್ರಿಯಾಸಃ**—ನಿನಗೆ ಪ್ರೀತಿಪಾತ್ರರಾಗಿ । **ಸ್ಯಾಮ**—ಇರುವಂತಾಗಲಿ.

|| ಭಾವಾರ್ಥ ||

ಶಕ್ತಿಯುತವಾದವನೂ, ಹರಿನಾಮಕಗಳಾದ ಅಶ್ವಗಳ್ಳವನೂ ಆದ ಎಲೈ ಇಂದ್ರನೇ, ನಿನಗೆ ಸ್ತುತಿಗಳನ್ನರ್ಪಿಸಿ ನಿನ್ನನ್ನು ಯಾಚಿಸುವ ಈ ಯಜ್ಞಕ್ರಿಯೆಯಲ್ಲಿ ಪಾಪಿಷ್ಠನೂ, ಇತರರನ್ನು ಕೊಳ್ಳೆಹೊಡೆದು ತಿನ್ನುವವನೂ ಆದ ಶತ್ರುವಿಗೆ ನಾವು ವಶರಾಗದಿರುವಂತಾಗಲಿ. ನಮ್ಮನ್ನು ಹಿಂಸಕಗಳಲ್ಲದಿರುವ ರಕ್ಷಣೆಗಳಿಂದ ರಕ್ಷಿಸು. ನಿನ್ನ ಸ್ತೋತೃಗಳ ಮಧ್ಯದಲ್ಲಿ ನಾವು ನಿನಗೆ ಪ್ರೀತಿಪಾತ್ರರಾಗಿರುವಂತಾಗಲಿ.

## English Translation.

Powerful Indra, lord of horses, let us not be exposed at this ceremony, addressed to you, to the murderous despoiler : protect us with impregnable defences : many we be held dear among your worshippers.

॥ ಸಂಹಿತಾಪಾಠಃ ॥

ಪ್ರಿಯಾಸ ಇತ್ತೇ ಮಘವನ್ನಭಿಷ್ಟೌ ನರೋ ಮದೇಮ ಶರಣೇ ಸಖಾಯಃ ।
ನಿ ತುರ್ವಶಂ ನಿ ಯಾದ್ವಂ ಶಿಶೀಹ್ಯತಿಥಿಗ್ವಾಯ ಶಂಸ್ಯಂ ಕರಿಷ್ಯನ್ ॥ ೮ ॥

॥ ಪದಪಾಠಃ ॥

ಪ್ರಿಯಾಸಃ । ಇತ್ । ತೇ । ಮಘ್ವವನ್ । ಅಭಿಷ್ಟೌ । ನರಃ । ಮದೇಮ । ಶರಣೇ । ಸಖಾಯಃ ।
ನಿ । ತುರ್ವಶಂ । ನಿ । ಯಾದ್ವಂ । ಶಿಶೀಹಿ । ಅತಿಥಿಽಗ್ವಾಯ । ಶಂಸ್ಯಂ । ಕರಿಷ್ಯನ್ ॥ ೮ ॥

॥ ಸಾಯಣಭಾಷ್ಯಂ ॥

**ಹೇ ಮಘವನ್ ಧನವನ್ನಿಂದ್ರ ತೇ ತವಾಭಿಷ್ಟಾವಭ್ಯೇಷಣೇ ನರಃ ಸ್ತೋತ್ರಾಣಾಂ ನೇತಾರೋ ವಯಂ ಸಖಾಯಃ ಸಮಾನಖ್ಯಾತಯಃ ಪ್ರಿಯಾಸಃ ಪ್ರಿಯಾಶ್ಚ ಸಂತಃ ಶರಣ ಇತ್ ಗೃಹ ಏವ ಮದೇಮ। ಮೋದೇಮ । ಕಿಂಚಾತಿಥಿಗ್ವಾಯ । ಪೂಜಯಾತಿಥೀನ್ ಗಚ್ಛತೀತ್ಯತಿಥಿಗ್ವಃ । ತಸ್ಮೈ ಸುದಾಸೇ ದಿವೋದಾಸಾಯ ವಾಸ್ಮದೀಯಾಯ ರಾಜ್ಞೇ ಶಂಸ್ಯಂ ಶಂಸನೀಯಂ ಸುಖಂ ಕರಿಷ್ಯನ್ ಕುರ್ವನ್ ತುರ್ವಶಂ ರಾಜಾನಂ ನಿ ಶಿಶೀಹಿ । ವಶಂ ಕುರು। ಯಾದ್ವಂ ಚ ರಾಜಾನಂ ನಿ ಶಿಶೀಹೀತ್ಯರ್ಥಃ ॥**

॥ ಪ್ರತಿಪದಾರ್ಥ ॥

**ಮಘವನ್**—ಧನವಂತನಾದ ಎಲೈ ಇಂದ್ರನೇ । **ತೇ**—ನಿನ್ನನ್ನು । **ಅಭಿಷ್ಟೌ**—ಪೂಜಿಸುವ ಈ ಯಜ್ಞಕಾಲದಲ್ಲಿ । **ನರಃ**—ಯಜಮಾನರಾದ ನಾವು । **ಸಖಾಯಃ**—ನಿನಗೆ ಮಿತ್ರರಾಗಿಯೂ । **ಪ್ರಿಯಾಸಃ**—ಪ್ರೀತಿಪಾತ್ರರಾಗಿಯೂ । **ಶರಣೇ ಇತ್**—ನಮ್ಮ ಯಜ್ಞಗೃಹದಲ್ಲಿಯೇ । **ಮದೇಮ**—ಸಂತುಷ್ಟರಾಗಿರುವಂತಾಗಲಿ । **ಅತಿಥಿಗ್ವಾಯ**—ಅತಿಥಿಯನ್ನು ಎದುರುಗೊಳ್ಳುವ ಸುದಾಸನಿಗೆ । **ಶಂಸ್ಯಂ**—ಪ್ರಶಸ್ಯವಾದ ಸುಖವನ್ನು **ಕರಿಷ್ಯನ್**—ಉಂಟುಮಾಡುತ್ತಾ । **ತುರ್ವಶಂ**—ತುರ್ವಶನೆಂಬ ರಾಜನನ್ನು । **ನಿ ಶಿಶೀಹಿ**—ಅವನಿಗೆ ವಶನಾಗುವಂತೆ ಮಾಡು । **ಯಾದ್ವಂ**—ಯದುಪುತ್ರನನ್ನೂ । **ನಿ (ಶಿಶೀಹಿ)**—ವಶನಾಗುವಂತೆ ಮಾಡು.

॥ ಭಾವಾರ್ಥ ॥

ಧನವಂತನಾದ ಎಲೈ ಇಂದ್ರನೇ, ನಿನ್ನನ್ನು ಪೂಜಿಸುವ ಈ ಯಜ್ಞಕಾಲದಲ್ಲಿ ಯಜಮಾನರಾದ ನಾವು ನಿನಗೆ ಮಿತ್ರರಾಗಿಯೂ ಪ್ರೀತಿಪಾತ್ರರಾಗಿಯೂ ನಮ್ಮ ಯಜ್ಞಗೃಹದಲ್ಲಿಯೇ ಸಂತುಷ್ಟರಾಗುವಂತಾಗಲಿ. ಅತಿಥಿಯನ್ನು

ಎದುರುಗೊಳ್ಳುವ ಸುದಾಸನಿಗೆ ಪ್ರಶಸ್ಯವಾದ ಸುಖವನ್ನುಂಟುಮಾಡುತ್ತಾ ತುರ್ವಶನೆಂಬ ರಾಜನನ್ನು ಅವನಿಗೆ ವಶನಾಗುವಂತೆ ಮಾಡು. ಯದುಪುತ್ರನನ್ನೂ ವಶನಾಗುವಂತೆ ಮಾಡು.

English Translation.

May we, Maghavan, leaders in your adoration, regarded as dear friends, be happy in our homes : about to bestow felicity upon Atithigwan, humiliate Turvasa ; (humiliate) the son of Yadu.

॥ ಸಂಹಿತಾಪಾಠಃ ॥

ಸದ್ಯಶ್ಚಿನ್ನು ತೇ ಮಘವನ್ನಭಿಷ್ಟೌ ನರಃ ಶಂಸಂತ್ಯುಕ್ಥಶಾಸ ಉಕ್ಥಾ ।
ಯೇ ತೇ ಹವೇಭಿರ್ವಿ ಪಣೀರದಾಶನ್ನಸ್ಮಾನ್ವೃಣೀಷ್ವ ಯುಜ್ಯಾಯ ತಸ್ಮೈ ॥

॥ ಪದಪಾಠಃ ॥

ಸದ್ಯಃ । ಚಿತ್ । ನು । ತೇ । ಮಘಽವನ್ । ಅಭಿಷ್ಟೌ । ನರಃ । ಶಂಸಂತಿ । ಉಕ್ಥಽಶಾಸಃ । ಉಕ್ಥಾ ।
ಯೇ । ತೇ । ಹವೇಭಿಃ । ವಿ । ಪಣೀನ್ । ಅದಾಶನ್ । ಅಸ್ಮಾನ್ । ವೃಣೀಷ್ವ । ಯುಜ್ಯಾಯ । ತಸ್ಮೈ ॥

॥ ಸಾಯಣಭಾಷ್ಯಂ ॥

ಹೇ ಮಘವನ್ ಧನವನ್ನಿಂದ್ರ ತೇ ತವ ನು ಅದ್ಯಾಭಿಷ್ಟಾವಭ್ಯೇಷಣೇ ಯೇ ನರ ಉಕ್ಥಶಾಸ ಉಕ್ಥಾನಾಂ ಶಂಸಿತಾರ ಉಕ್ಥೋಕ್ಥಾನಿ ಶಸ್ತ್ರಾಣಿ ಸದ್ಯಶ್ಚಿತ್ ಸದ್ಯ ಏವ ಶಂಸಂತಿ । ಕಿಂಚ ತೇ ತವ ಹವೇಭಿಃ ಸ್ತೋತ್ರೈಃ ಪಣೀನಪ್ರದಾನಶೀಲಾನ್ ವಣಿಜೋಽಪಿ ವ್ಯದಾಶನ್ । ಧನಾನಿ ವಿಶೇಷೇಣಾದಾಪಯನ್ನಿತ್ಯರ್ಥಃ । ತಾನಸ್ಮಾನ್ ತಸ್ಮೈ ಯುಜ್ಯಾಯ ಸಖ್ಯಾಯ ತತ್ಸಖ್ಯಮನುವರ್ತಯಿತುಂ ವೃಣೀಷ್ವ। ಪರಿಗೃಹಾಣ ॥

॥ ಪ್ರತಿಪದಾರ್ಥ ॥

**ಮಘವನ್**—ಧನವಂತನಾದ ಎಲೈ ಇಂದ್ರನೇ । **ನು**—ಈಗ । **ಅಭಿಷ್ಟೌ**—ನಿನ್ನ ಪೂಜಾಕಾಲದಲ್ಲಿ । **ಉಕ್ಥಶಾಸಃ**—ಉಕ್ಥಮಂತ್ರಪಾಠಕರಾದ । **ಯೇ ನರಃ**—ಯಾವ ಯಜಮಾನರು । **ತೇ**—ನಿನ್ನನ್ನುದ್ದೇಶಿಸಿ । **ಉಕ್ಥಾ**—ಶಸ್ತ್ರರೂಪವಾದ ಸ್ತುತಿಗಳನ್ನು । **ಸದ್ಯಶ್ಚಿತ್**—ಈ ಒಡನೆಯೇ । **ಶಂಸಂತಿ**—ಪಠಿಸುವರೋ (ಅಲ್ಲದೇ)! **ತೇ**—ನಿನ್ನ । **ಹವೇಭಿಃ**—ಸ್ತೋತ್ರಗಳ ಸಹಾಯದಿಂದ । **ಪಣೀನ್**—ಜಿಪುಣರಾದ ಪಣಿಗಳನ್ನೂ । **ವಿ ಅದಾಶನ್**—ಧನದಾತರಾಗುವಂತೆ ಮಾಡಿದರೋ । **ಅಸ್ಮಾನ್**—ಅಂತಹ ನಮ್ಮನ್ನೂ । **ತಸ್ಮೈ ಯುಜ್ಯಾಯ**-ಪ್ರಸಿದ್ಧವಾದ ನಿನ್ನ ಸಖಿತ್ವಕ್ಕೆ । **ವೃಣೀಷ್ವ**—ಆರಿಸಿಕೊ.

|| ಭಾವಾರ್ಥ ||

ಧನವಂತನಾದ ಎಲೈ ಇಂದ್ರನೇ, ಈಗ ನಿನ್ನ ಪೂಜಾಕಾಲದಲ್ಲಿ ಉಕ್ಥಪಾಠಕರಾದ ಯಾವ ಯಜಮಾನರು ನಿನ್ನನ್ನು ಉದ್ದೇಶಿಸಿ ಶಸ್ತ್ರರೂಪವಾದ ಸ್ತುತಿಗಳನ್ನು ಈ ಒಡನೆಯೇ ಪಠಿಸುವರೋ, ಅಲ್ಲದೇ, ನಿನ್ನ ಸ್ತೋತ್ರಗಳ ಸಹಾಯದಿಂದ ಜಿಪುಣರಾದ ಪಣಿಗಳನ್ನೂ ಧನದಾತರಾಗುವಂತೆ ಮಾಡಿದರೋ ಅಂತಹ ನಮ್ಮನ್ನೂ ಸಹ ಪ್ರಸಿದ್ಧ ವಾದ ನಿನ್ನ ಮಿತ್ರರ ಗುಂಪಿಗೆ ಸೇರಿಸಿಕೊ.

English Translation.

The leaders (of rites), raciters oi prayers, offer, Maghavan, prayers devoutly for your adoration : they by their praises have appropriated the wealth of the niggards : select us (as the objects) of your friendship.

|| ಸಂಹಿತಾಪಾಠಃ ||

ಏತೇ ಸ್ತೋಮಾ ನರಾಂ ನೃತಮ ತುಭ್ಯಮಸ್ಮದ್ರ್ಯಂಚೋ ದದತೋ ಮಘಾನಿ ।
ತೇಷಾಮಿಂದ್ರ ವೃತ್ರಹತ್ಯೇ ಶಿವೋ ಭೂಃ ಸಖಾ ಚ ಶೂರೋಽವಿತಾ ಚ ನೃಣಾಂ ॥ ೧೦ ॥

|| ಪದಪಾಠಃ ||

ಏತೇ । ಸ್ತೋಮಾಃ । ನರಾಂ । ನೃಽತಮ । ತುಭ್ಯಂ । ಅಸ್ಮದ್ರ್ಯಂಚಃ । ದದತಃ । ಮಘಾನಿ ।
ತೇಷಾಂ । ಇಂದ್ರ । ವೃತ್ರಽಹತ್ಯೇ । ಶಿವಃ । ಭೂಃ । ಸಖಾ । ಚ । ಶೂರಃ । ಅವಿತಾ । ಚ । ನೃಣಾಂ ॥ ೧೦ ॥

॥ ಸಾಯಣಭಾಷ್ಯಂ ॥

ಹೇ ನೃತಮ ನೇತೃತಮೇಂದ್ರ ತುಭ್ಯಂ ನರಾಂ ನೇತೄಣಾಂ ಯೇ ಏತೇ ಸ್ತೋಮಾಃ ಸಂಘಾ ಮಘಾನಿ ಮಂಹನೀಯಾನಿ ಹವೀಂಷಿ ದದತೋ ದದಂತೋಽಸ್ಮದ್ರ್ಯಂಚೋಽಸ್ಮದಭಿಮುಖಾ ಅಭೂವನ್ನಿತಿ ಶೇಷಃ । ತೇಷಾಂ ನೃಣಾಂ ವೃತ್ರಹತ್ಯೇ ಸಂಗ್ರಾಮೇ ಶಿವಃ ಕಲ್ಯಾಣಕೃತ್ ಭೂಃ । ಭವ । ಸಖಾ ಚ ಭೂಃ । ಅವಿತಾ ರಕ್ಷಿತಾ ಚ ಭೂಃ ॥

|| ಪ್ರತಿಪದಾರ್ಥ ||

ನೃತಮ—ನಾಯಕರಿಗೆಲ್ಲಾ ನೇತೃವಾದ । ಇಂದ್ರ—ಎಲೈ ಇಂದ್ರನೇ । ತುಭ್ಯಂ—ನಿನ್ನನ್ನುದ್ದೇಶಿಸಿ ಅರ್ಪಿಸಿದ । ನರಾಂ—ಮಾನವರ । ಏತೇ ಸ್ತೋಮಾಃ—ಈ ಸ್ತೋತ್ರಗಳು । ಮಘಾನಿ—ಪೂಜ್ಯವಾದ

ಹವಿಸ್ಸುಗಳನ್ನು । **ದದತಃ**—ಅರ್ಪಿಸತಕ್ಕ । **ಅಸ್ಮದ್ರ್ಯಂಚಃ**—ನಮಗಭಿಮುಖವಾಗಿಯೇ ಆಗಿರುತ್ತವೆ । **ತೇಷಾಂ**—ಅಂತಹ । **ನೃಣಾಂ**—ನಿನ್ನ ಪೂಜಕರಾದ ಮಾನವರಿಗೆ । **ವೃತ್ರಹತ್ಯೇ**— ವೃತ್ರಹನನಸಾಧಕವಾದ ಯುದ್ಧದಲ್ಲಿ । **ಶಿವಃ**—ಮಂಗಳಕರನಾಗಿ । **ಭೂಃ**—ಆಗಿರು । **ಸಖಾ ಚ**—ಮಿತ್ರನೂ ಆಗಿರು । **ಶೂರಃ ಅವಿತಾ ಚ**—ಪರಾಕ್ರಮಿಯಾದ ರಕ್ಷಕನೂ ಆಗಿರು.

॥ ಭಾವಾರ್ಥ ॥

ಮಾನವರಿಗೆಲ್ಲಾ ನೇತೃವಾದ ಎಲೈ ಇಂದ್ರನೇ, ನಿನ್ನನ್ನುದ್ದೇಶಿಸಿ ಅರ್ಪಿಸಿದ ಮಾನವರ ಈ ಸ್ತೋತ್ರಗಳು ಪೂಜ್ಯವಾದ ಹವಿಸ್ಸುಗಳನ್ನರ್ಪಿಸತಕ್ಕ ನಮಗಭಿಮುಖವಾಗಿಯೇ ಆಗಿರುತ್ತವೆ. ಅಂತಹ ನಿನ್ನ ಪೂಜಕರಾದ ಮಾನವರಿಗೆ ವೃತ್ರಹನನಸಾಧಕವಾದ ಯುದ್ಧದಲ್ಲಿ ಮಂಗಳಕರನಾಗಿ ಆಗಿರು ಮತ್ತು ಮಿತ್ರನೂ, ಪರಾಕ್ರಮಿಯಾದ ರಕ್ಷಕನೂ ಆಗಿರು.

## English Translation.

Chief leader (of rites), these praises of men addressed to you revert to us, who are the offerers of (sacrificial) riches: be propitious to such men, (Indra), in conflicts with enemies: be their friend, their hero and protector.

॥ ಸಂಹಿತಾಪಾಠಃ ॥

ನೂ ಇಂದ್ರ ಶೂರ ಸ್ತವಮಾನ ಊತೀ ಬ್ರಹ್ಮಜೂತಸ್ತನ್ವಾ ವಾವೃಧಸ್ವ ।
ಉಪ ನೋ ವಾಜಾನ್ಮಿಮೀಹ್ಯುಪ ಸ್ತೀನ್ಯೂಯಂ ಪಾತ ಸ್ವಸ್ತಿಭಿಃ ಸದಾ ನಃ ॥

॥ ಪದಪಾಠಃ ॥

ನು । ಇಂದ್ರ । ಶೂರ । ಸ್ತವಮಾನಃ । ಊತೀ । ಬ್ರಹ್ಮऽಜೂತಃ । ತನ್ವಾ । ವವೃಧಸ್ವ ।
ಉಪ । ನಃ । ವಾಜಾನ್ । ಮಿಮೀಹಿ । ಉಪ । ಸ್ತೀನ್ । ಯೂಯಂ । ಪಾತ । ಸ್ವಸ್ತಿಭಿಃ । ಸದಾ । ನಃ ॥

॥ ಸಾಯಣಭಾಷ್ಯಂ ॥

ಹೇ ಶೂರೇಂದ್ರ ನು ಅದ್ಯ ಸ್ತವಮಾನೋಽಸ್ಮಾಭಿಃ ಸ್ತೂಯಮಾನೋ ಬ್ರಹ್ಮಜೂತೋ ಬ್ರಹ್ಮಣಾ ಸ್ತೋತ್ರೇಣ ಪ್ರೇರಿತಸ್ತನ್ವಾ ಶರೀರೇಣ ಊತ್ಯಾ ರಕ್ಷಣೇನ ವವೃಧಸ್ವ । ಅಪಿ ಚ ನೋಽಸ್ಮಭ್ಯಂ ವಾಜಾನನ್ನಾನ್ಯುಪ ಮಿಮೀಹಿ । ಪ್ರಯಚ್ಛೇತ್ಯರ್ಥಃ । ಸ್ತೀನ್ ಗೃಹಾಂಶ್ಚೋಪ ಮಿಮೀಹಿ ಸ್ಪಷ್ಟಮನ್ಯತ್ ॥

‖ ಪ್ರತಿಪದಾರ್ಥ ‖

**ಶೂರ**— ಪರಾಕ್ರಮಿಯಾದ । **ಇಂದ್ರ**—ಎಲೈ ಇಂದ್ರನೇ । **ನು** – ಈಗ । **ಸ್ತವಮಾನಃ**— ನಮ್ಮಿಂದ ಸ್ತುತಿಸಲ್ಪಟ್ಟವನಾಗಿಯೂ । **ಬ್ರಹ್ಮಜೂತಃ**— ಸ್ತುತಿಯಿಂದ ಪ್ರೇರೇಪಿಸಲ್ಪಟ್ಟವನಾಗಿಯೂ । **ಊತೀ ತನ್ವಾ**— ರಕ್ಷಕವಾದ ನಿನ್ನ ಶರೀರದಿಂದ । **ವವೃಧಸ್ವ**—ವೃದ್ಧಿಯನ್ನು ಹೊಂದು । **ನಃ—**ನಮಗೆ । **ವಾಜಾನ್**‘--ಅನ್ನಗಳನ್ನು **ಉಪ ಮಿಮೀಹಿ**—ಒದಗಿಸಿಕೊಂಡು । **ಸ್ತೀನ್**‘—ಗೃಹಗಳನ್ನೂ । **ಉಪ (ಮಿಮೀಹಿ)**—ಒದಗಿಸು । **ಯೂಯಂ—** ನೀವೆಲ್ಲರೂ । **ಸದಾ**— ಯಾವಾಗಲೂ । **ನಃ**—ನಮ್ಮನ್ನು । **ಸ್ವಸ್ತಿಭಿಃ**— ಕಲ್ಯಾಣಗಳಿಂದ । **ಪಾತ**—ರಕ್ಷಿಸಿರಿ.

‖ ಭಾವಾರ್ಥ ‖

ಪರಾಕ್ರಮಿಯಾದ ಎಲೈ ಇಂದ್ರನೇ, ನಮ್ಮಿಂದ ಈಗ ಸ್ತುತಿಸಲ್ಪಟ್ಟವನಾಗಿಯೂ, ಸ್ತುತಿಯಿಂದ ಪ್ರೇರಿತ ನಾಗಿಯೂ, ರಕ್ಷಕವಾದ ನಿನ್ನ ಶರೀರದಿಂದ ವೃದ್ಧಿಯನ್ನು ಹೊಂದು. ನಮಗೆ ಅನ್ನಗಳನ್ನೂ, ಗೃಹಗಳನ್ನೂ ಒದಗಿಸು. ನೀವೆಲ್ಲರೂ ಯಾವಾಗಲೂ ನಮ್ಮನ್ನು ಕಲ್ಯಾಣಗಳಿಂದ ರಕ್ಷಿಸಿರಿ.

English Translation.

Hero, Indra, glorified on the present occasion, and propitiated by praise, be amplified in your person for our protection : bestow upon us food and habitations : and ever cherish us with blessings.

**ವೇದಾರ್ಥಸ್ಯ ಪ್ರಕಾಶೇನ ತಮೋ ಹಾರ್ದಂ ನಿವಾರಯನ್ ।**
**ಪುಮರ್ಥಾಂಶ್ಚತುರೋ ದೇಯಾದ್ವಿದ್ಯಾತೀರ್ಥಮಹೇಶ್ವರಃ ॥**

**ಇತಿ ಶ್ರೀಮದ್ರಾಜಾಧಿರಾಜ ಪರಮೇಶ್ವರ ವೈದಿಕಮಾರ್ಗಪ್ರವರ್ತಕ ಶ್ರೀ ವೀರಬುಕ್ಕಭೂಪಾಲಸಾಮ್ರಾಜ್ಯ-ಧುರಂಧರೇಣ ಸಾಯಣಾಚಾರ್ಯೇಣ ವಿರಚಿತೇ ಮಾಧವೀಯೇ ವೇದಾರ್ಥಪ್ರಕಾಶೇ ಋಕ್ಸಂಹಿತಾಭಾಷ್ಯೇ ಪಂಚಮಾಷ್ಟಕೇ ದ್ವಿತೀಯೋಽಧ್ಯಾಯಃ ಸಮಾಪ್ತಃ**

‖ ಓಂ ತತ್ಸತ್ ‖

ಇಲ್ಲಿಗೆ ಶ್ರೀಸಾಯಣಭಾಷ್ಯಸಹಿತವೂ ಕರ್ನಾಟಕ ಭಾಷಾನುವಾದಯುತವೂ ಆದ ಋಗ್ವೇದಸಂಹಿತೆಯಲ್ಲಿ ಐದನೆಯ ಅಷ್ಟಕದಲ್ಲಿ ಎರಡನೆಯ ಅಧ್ಯಾಯವು ಸಮಾಪ್ತವಾದುದು.

ಯದಕ್ಷರಪದಭ್ರಷ್ಟಂ ಮಾತ್ರಾಹೀನಂ ತು ಯದ್ಭವೇತ್ ।
ತತ್ಸರ್ವಂ ಕ್ಷಮ್ಯತಾಂ ದೇವ ವಾಗೀಶ್ವರ ನಮೋಽಸ್ತು ತೇ ॥

‖ ಶುಭಂ ಭೂಯಾತ್ ‖

‖ ಮಂಗಳಂ ‖